

ಬೆಂಗಳೂರು ಬಳ್ಳಾಪುರ ತುಪ್ಪದಾಂಜನೇಯ ಸ್ವಾಮಿ ದೇವಸ್ಥಾನದ ಕೃಪೆ

# ಶ್ರೀ ರಾ ಮ ಕ ಥಾ ಸಾ ರ

## ಶ್ರೀರಂಗಂ ಶ್ರೀಮತ್ ಆಂಡವನ್ ಸ್ವಾಮಿಗಳ

## ರಾಮಾಯಣ ಉಪನ್ಯಾಸಗಳು

ಕನ್ನಡ ರೂಪಾಂತರ

ಮತ್ತೂರು ಕೃಷ್ಣಮೂರ್ತಿ

ಗುರುಗುಹ ಗಾನ ನಿಲಯ

ಶ್ರೀರಾಮಪುರ, ಬೆಂಗಳೂರು 560021

SRI RAMAKATHASĀRA ·

Kannada Version of Lectures on Ramayana
by SRIRANGAM SRIMAD ANDAVAN SWAMIGAL

Kannada translation
by MATHUR KRISHNAMURTHY

Published by
Shankara Murthy
Guruguha Gana Nilaya
1367, VII Main, Sriramapuram,
Bangalore 560 021



ಮೊದಲ ಮುದ್ರಣ 1967
ಎರಡನೆಯ ಮುದ್ರಣ 1980

ಬೆಲೆ : ರೂ. 30-00

ಮುದ್ರಕರು :

ಅಕ್ಷರ, ಬೆಂಗಳೂರು 560 027

# ಕೃತಜ್ಞತೆ

ಶ್ರೀರಾಮಚಂದ್ರನ ಕಥೆಯನ್ನು ಮೇಲಿಂದ ಮೇಲೆ ಕೇಳುವುದಕ್ಕೆ, ಓದುವುದಕ್ಕೆ ಬರೆಯುವುದಕ್ಕೆ ಅವಕಾಶ ಮಾಡಿಕೊಟ್ಟ ಶ್ರೀರಂಗಂ ಶ್ರೀಮದ್ ಆಂಡವನ್ ಸ್ವಾಮಿಗಳಿಗೆ ಸಾಷ್ಟಾಂಗ ಪ್ರಣಾಮಗಳು, ಸ್ವಾಮಿಗಳು ತಮಿಳಿನಲ್ಲಿ ಮಾಡಿದ ಉಪನ್ಯಾಸಗಳನ್ನು ಕನ್ನಡಕ್ಕೆ ಅನುವಾದ ಮಾಡಲು ಹೇಳಿ ತನ್ಮೂಲಕ ರಾಮಾಯಣಕ್ಕೂ, ಕನ್ನಡ ಜನಕ್ಕೂ ಸೇವೆ ಸಲ್ಲಿಸಲು ಅವಕಾಶ ಮಾಡಿಕೊಟ್ಟ ಟಿ. ವಿ. ಎಸ್., ಸಂಸ್ಥೆಯ ಬೆಂಗಳೂರು ಶಾಖೆಯ ಸುಂದರಂ ಮೋಟಾರ್ಸ್ ಕಂಪೆನಿಯ ಅಧ್ಯಕ್ಷರಾದ ಶ್ರೀಮಾನ್ ಟಿ. ಎಸ್. ರಾಜಂ ಅವರಿಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು

ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದ ಮಾಡುವುದು ಸುಲಭ ಕಾರ್ಯವಲ್ಲ ಅದರಲ್ಲಿಯೂ ವೇದಾಂತ ತತ್ವಗಳನ್ನು ಮೂಲಕ್ಕೆ ಚಾಚೂ ಭಂಗ ಬಾರದಂತೆ ಮತ್ತೊಂದು ಭಾಷೆಯಲ್ಲಿ ನಿರೂಪಿಸುವುದಂತೂ ಮತ್ತೂ ಕಠಿನ. ಮೂಲ ಕೃತಿಯು ಗ್ರಂಥರೂಪದಲ್ಲಿದ್ದರೆ ಹತ್ತಾರು ಸಲ ಓದಿ ಮನನ ಮಾಡಿಕೊಂಡು ಅನುವಾದಿಸಬಹುದು. ಪ್ರಕೃತ ಈ ರಾಮಾಯಣವು ಹಾಗಿರಲಿಲ್ಲ. ಸ್ವಾಮಿಗಳ ಉಪನ್ಯಾಸಗಳ ರೂಪದಲ್ಲಿದ್ದಿತು. ಟೇಪ್ ರಿಕಾರ್ಡ್ ಮಾಡಿಕೊಳ್ಳಲಾಗಿದ್ದಿತು. ಟೇಪಿನಲ್ಲಿದ್ದುದನ್ನು ಮೇಲಿಂದ ಮೇಲೆ ಕೇಳಿ ಬರೆದುಕೊಳ್ಳಬೇಕಾಯಿತು.

ಅನೇಕ ಸಲ ರಿಕಾರ್ಡಿಂಗ್ ಸರಿಯಾಗಿ ಸ್ಪಷ್ಟವಾಗಿರುವುದಿಲ್ಲ. ಸಂದೇಹ ಬಂದ ಕಡೆಗಳಲ್ಲಿ ಸ್ವಾಮಿಗಳನ್ನೇ ಕೇಳಿ ತಿಳಿದುಕೊಳ್ಳಬೇಕಾಯಿತು. ಉಪನ್ಯಾಸಗಳು ನಡೆಯುತ್ತಿದ್ದಾಗ ಅವುಗಳ ಸಾರವನ್ನು ದಿನವೂ ಬರೆದಿಟ್ಟುಕೊಂಡಿದ್ದ ಶ್ರೀಮತಿ ಆರ್. ವೇದವಲ್ಲಿ ಎಂ. ಎ. ಇವರ ಸಹಾಯ ಸಿಗದೆ ಇದ್ದಿದ್ದರೆ ಈ ಅನುವಾದ ಕಾರ್ಯ ಕಷ್ಟಸಾಧ್ಯವೇ ಆಗುತ್ತಿತ್ತು. ಇವರ ಉಪಕಾರಕ್ಕೆ ನಾನು ಚಿರಋಣಿ,

ವಿದ್ವಾನ್ ಸಂಪತ್ಕುಮಾರಯ್ಯಂಗಾರ್ಯರು, ಎಂ. ಎ., ವಿದ್ವಾನ್ ರಾಮಸ್ವಾಮಿ ಐಯ್ಯಂಗಾರ್ಯರು. ಎಂ. ಎ,, ಪಂಡಿತ ಚಕ್ರವರ್ತಿ ಐಯ್ಯಂಗಾರ್ಯರು – ಇವರು ಅನುವಾದವನ್ನು ಓದಿ, ಕೆಲವು ಉಪಯುಕ್ತ ಸಲಹೆ ನೀಡಿ ಉಪಕರಿಸಿದ್ದಾರೆ. ನನ್ನ ಗುರುಗಳಾದ ಪೂಜ್ಯಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ಅನುವಾದದ ಕೆಲಭಾಗಗಳನ್ನು ನಮ್ಮ ಗಾಂಧೀ ಸಾಹಿತ್ಯ ಸಂಘದಲ್ಲಿ ವಿದ್ವಜ್ಜನರನ್ನು ಸೇರಿಸಿ, ಓದಿಸಿ ಕೇಳಿ ಹರಸಿದರು. ಇವರ ಆಶೀರ್ವಾದ ನನಗೆ ರಕ್ಷೆ.

ಇಷ್ಟಾದರೂ, ಮಾಡಿರುವ ಕಾರ್ಯ ಸಮರ್ಪಕವಾಗಿದೆಯೋ ಇಲ್ಲವೋ ಎಂಬ ಸಂದೇಹ ಇದ್ದೇ ಇದ್ದಿತು. ಶ್ರೀಮದ್ ಆಂಡವನ್ ಸ್ವಾಮಿಗಳ ಸನ್ನಿಧಿಗೇ ಹೋಗಿ ಮೊದಲಿನಿಂದ ಕೊನೆತನಕ ಅವರಿಗೆ ಓದಿ ಹೇಳಿದೆ. ಕರ್ನಾಟಕದಲ್ಲಿ ಸುಮಾರು ಒಂದು ವರ್ಷಕಾಲ ಸಂಚರಿಸಿದ ಸ್ವಾಮಿಗಳಿಗೆ ಕನ್ನಡ ಭಾಷೆಯ ಪರಿಚಯ ಸಾಕಷ್ಟು

ಆಗಿತ್ತು. ಅಲ್ಲದೆ ತಮಿಳು ಮತ್ತು ಸಂಸ್ಕೃತ ಪಂಡಿತರು ಅವರು. ಈ ಎರಡು ಭಾಷೆಗಳನ್ನೂ ಬಲ್ಲವರಿಗೆ ಕನ್ನಡ ಅರ್ಥಮಾಡಿಕೊಳ್ಳುವುದು ಕಷ್ಟವಲ್ಲ. ಬಿಡುವು ಮಾಡಿಕೊಂಡು, ಕೇಳಿ ಅಲ್ಲಲ್ಲಿ ಬಿಟ್ಟುಹೋಗಿದ್ದುದನ್ನು ತಿಳಿಸಿ, ಕೃಪೆ ಮಾಡಿದರು. ಅನ್ತು ಎಂದರು, ಅನುಗ್ರಹಿಸಿದರು.

ಅಂತೂ ಆಂಡವನ್ ಸ್ವಾಮಿಗಳ ರಾಮಾಯಣ ಉಪನ್ಯಾಸಗಳು ಗ್ರಂಥರೂಪ ದಲ್ಲಿ ಬರುವಂತಾಯಿತು. ಶ್ರೀ ಟಿ. ಎಸ್. ರಾಜಂ ಅವರ ಪ್ರೇರಣೆ ಇರದಿದ್ದರೆ, ಕನ್ನಡ ಸೋದರರ ಒತ್ತಾಯ ಇರದಿದ್ದರೆ, ಶ್ರೀ ಆಂಡವನ್ ಸ್ವಾಮಿಗಳ ಆಶೀರ್ವಾದ ಇರದಿದ್ದರೆ, ಮುಖ್ಯವಾಗಿ ಶ್ರೀರಾಮಚಂದ್ರನ ಕೃಪೆ ಇರದಿದ್ದರೆ ಈ ಕಾರ್ಯ ಖಂಡಿತ ಆಗುತ್ತಿರಲಿಲ್ಲ.

ಎಲ್ಲಕ್ಕಿಂತ ಹೆಚ್ಚಾಗಿ ಈ ಗ್ರಂಥವನ್ನು ಮೊದಲು ಮುದ್ರಿಸಿಕೊಟ್ಟವರು ನವ ಭಾರತ್ ಪ್ರೆಸ್ಸಿನ ಮಾಲೀಕರಾದ ಶ್ರೀಮಾನ್ ಸುದರ್ಶನಂ ಅವರು. ಈ ಕೃತಿಯ ಮರು ಮುದ್ರಣವನ್ನು ಆಗು ಮಾಡಿಕೊಟ್ಟಿರುವವರು 'ಅಕ್ಷರ'ದ ಶ್ರೀ ದಿಗಂಬರ ಪ್ರಭು ಅವರು. ಪುಸ್ತಕದ ಪ್ರಕಟಣೆಯಲ್ಲಿ ಶ್ರೀ ಜಿ. ಕೆ. ಶ್ರೀನಿವಾಸಯ್ಯ ಹಾಗೂ ಇತರರು ವಿಶೇಷ ಆಸ್ಥೆ ವಹಿಸಿ ನೆರವಾಗಿದ್ದಾರೆ. ಇವರುಗಳ ಸಹಕಾರ ಚಿರ-ಸ್ಮರಣೀಯ.

ಕಡೆಯದಾಗಿ ಕನ್ನಡ ಜನತೆಗೆ ಒಂದು ಬಿನ್ನಹ. ಶ್ರೀಮದ್ರಾಮಾಯಣದ ಸಾರಸರ್ವಸ್ವವಾಗಿರುವ ಶರಣಾಗತಿ ತತ್ವವನ್ನು ಸರಳ ಶೈಲಿಯಲ್ಲಿ ಸುಲಭವಾಗಿ ನಿರೂಪಿಸಿದ್ದಾರೆ, ಶ್ರೀಮದ್ ಆಂಡವನ್ ಸ್ವಾಮಿಗಳು. ಆಬಾಲವೃದ್ಧರಾದಿಯಾಗಿ ಎಲ್ಲರೂ ಅರ್ಥಮಾಡಿಕೊಳ್ಳುವಷ್ಟು ಸುಲಭವಾಗಿ ರಾಮಾಯಣದ ಅಂತರಾರ್ಥ ವನ್ನು ತಿಳಿಸಿದಾರೆ. ತಮ್ಮೆಲ್ಲರ ಅಭಿಮಾನದಿಂದ ಅನುವಾದ ಕಾರ್ಯ ಆಗಿದೆ, ಓದಬೇಕು, ನನ್ನನ್ನು ಆಶೀರ್ವದಿಸಬೇಕು ಎಂದು ವಿನಯದಿಂದ ಪ್ರಾರ್ಥಿಸುತ್ತೇನೆ,

**ಮತ್ತೂರು ಕೃಷ್ಣಮೂರ್ತಿ**





श्रीमते वेदान्तरामानुजमहादेशिकाय नमः॥
श्रीमते श्रीरङ्गनाथमहादेशिकाय नमः। श्रीमते श्रीनिवास महादेशिकाय नमः।
श्रीमते वेदान्तरामानुज महादेशिकाय नमः। श्रीमते पादुकासेवक रामानुज महादेशिकाय नमः।
श्रीमते श्रीनिवास महादेशिकाय नमः। श्रीरङ्गनाथ दिव्यमणिपादुकाभ्यां नमः।

श्रीमत्
श्रीरङ्गम् आण्डवन् सन्निधि

(तत्कालवासस्थानं)

ಎಂ. ಆರ್. ಶಂಕರಮೂರ್ತಿಯವರಿಗೆ ಆಶೀರ್ವಾದಗಳು.

ನೀವು ಶ್ರೀ ಶ್ರೀ ಶ್ರೀರಂಗಂ ಶ್ರೀಮದಾಂಡವನ್ ಸ್ವಾಮಿಗಳಿಗೆ ಬರೆದ ಪತ್ರ ತಲುಪಿತು. ಶ್ರೀ ಮತ್ತೂರು ಕೃಷ್ಣಮೂರ್ತಿಯವರು ಕನ್ನಡಕ್ಕೆ ರೂಪಾಂತರಿಸಿದ "ರಾಮಕಥಾಸಾರ"ವನ್ನು ಮರು ಮುದ್ರಿಸುತ್ತಿರುವುದು ಸ್ತುತ್ಯಾರ್ಹವಾದುದು. ಮೊದಲ ಮುದ್ರಣದ ಪ್ರತಿಗಳು ಇಲ್ಲದೆ ಭಕ್ತಾದಿಗಳು ಮರು ಮುದ್ರಣದ ಅವಶ್ಯಕತೆಯನ್ನು ವ್ಯಕ್ತಪಡಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ.

"ರಾಮಕಥಾಸಾರ"ದಲ್ಲಿ ಪೂರ್ವಾಚಾರ್ಯರ ಗ್ರಂಥಗಳ ಮತ್ತು ಆಳ್ವಾರುಗಳ, ಪಾಶುರಗಳ ಅರ್ಥಗಳೂ ಅಡಗಿವೆಯಾದ್ದರಿಂದ ಈ ಕೃತಿ ಭಕ್ತಾದಿಗಳಿಗೆ ಅವಶ್ಯಕವಾದದ್ದೇ.

ಈ ಗ್ರಂಥ ಪ್ರಕಟಣೆಗೆ ನಗರದ ಪ್ರಮುಖ ವರ್ತಕರೂ, ಭಕ್ತರೂ ಆಗಿದ್ದ ದಿ|| ಜಿ. ಕೆ. ಚಿಕ್ಕನರಸಿಂಹಯ್ಯನವರ ಕುಟುಂಬದವರು ಹಾಗೂ ಇತರ ಅನೇಕ ಉದಾರಿಗಳು ದ್ರವ್ಯಸಹಾಯ ಮಾಡಿದ್ದಾರೆಂದು ತಿಳಿಸಿದ್ದೀರಿ. ಈ ಪ್ರಯತ್ನವನ್ನು ಕೈಗೊಂಡ ತಮಗೂ. ನೆರವು ನೀಡಿರುವ ಎಲ್ಲರಿಗೂ ಆಯುರಾರೋಗ್ಯ ಐಶ್ವರ್ಯಾದಿಗಳು ಲಭಿಸಲೆಂದು ಶ್ರೀ ರಂಗನಾಥನಲ್ಲೂ, ಪೂರ್ವಾಚಾರ್ಯರಲ್ಲೂ ಶ್ರೀ ಆಂಡವನ್ ಸ್ವಾಮಿಗಳು ಪ್ರಾರ್ಥಿಸಿರುತ್ತಾರೆ.

ಇಂತಿ
ಶ್ರೀಮದಾಂಡವನ್ ಸ್ವಾಮಿಗಳ
ನಿಯಮನ

Sd. H. ಗೋಪಾಲಾಚಾರ್
ಶ್ರೀಕಾರ್ಯಂ

# ಪ್ರಕಾಶಕರ ಮಾತು

1967ರ ಪ್ರಾರಂಭದಲ್ಲಿ ಮಲ್ಲೇಶ್ವರದ ವೇಣುಗೋಪಾಲಸ್ವಾಮಿ ದೇವಸ್ಥಾನದಲ್ಲಿ ಶ್ರೀ ಶ್ರೀ ಶ್ರೀರಂಗಂ ಆಂಡವನ್ ಸ್ವಾಮಿಗಳು ತಮಿಳಿನಲ್ಲಿ ವಾಲ್ಮೀಕಿ ರಾಮಾಯಣದ ಪ್ರವಚನಮಾಡಿದರು. ಈ ಉಪನ್ಯಾಸವನ್ನು ಈಗ ಲಂಡನ್ನಿನ ಭಾರತೀಯ ವಿದ್ಯಾಭವನದ ಕುಲ ಸಚಿವನಾಗಿರುವ ನನ್ನ ಸಹೋದರ ಚಿ॥ ಮತ್ತೂರು ಕೃಷ್ಣ ಮೂರ್ತಿ ಕನ್ನಡಕ್ಕೆ ಅನುವಾದಿಸಿದ.

ಟಿ. ವಿ. ಸುಂದರಂ ಅಯ್ಯಂಗಾರ್ ಸಂಸ್ಥೆಯ ಯಜಮಾನರಾದ ಟಿ. ಎಸ್. ರಾಜಂ ಅವರ ನೇತೃತ್ವದಲ್ಲಿ ಈ ಉಪನ್ಯಾಸಗಳು "ರಾಮಕಥಾಸಾರ" ನಾಮಾಂಕಿತದಲ್ಲಿ ಎರಡು ಸಂಪುಟಗಳಾಗಿ ಪ್ರಕಟವಾದವು. ಕೃತಿ ಎಲ್ಲರ ಮೆಚ್ಚುಗೆಗೆ ಪಾತ್ರ ವಾಯಿತು. ಪ್ರತಿಗಳು ಬೇಗ ಮುಗಿದವು. ಪುಸ್ತಕದ ಆವಶ್ಯಕತೆ ಹೆಚ್ಚಾಯಿತು. ಹೀಗಾಗಿ ಮರುಮುದ್ರಣದ ಅವಶ್ಯಕತೆ ಕಂಡುಬಂತು.

ನಗರದ ವರ್ತಕರೂ, ಭಕ್ತರೂ ಆದ ದಿ॥ ಜ. ಕೆ. ಚಿಕ್ಕನರಸಿಂಹಯ್ಯನವರ ಸಹೋದರ ಶ್ರೀ ಜಿ. ಕೆ. ಶ್ರೀನಿವಾಸಯ್ಯನವರು ಈ ಕೃತಿಯ ಪ್ರಕಟಣೆಗೆ ನೆರವಾಗಲು ಮುಂದೆ ಬಂದಿದ್ದಾರೆ. ಮುದ್ರಣವೆಚ್ಚದ ಬಹುಪಾಲನ್ನು ತಾವೇ ವಹಿಸಿಕೊಂಡಿದ್ದಾರೆ. ಅಂತೆಯೇ ಇನ್ನೂ ಕೆಲವು ಭಕ್ತರ ಸಹಕಾರದಿಂದಾಗಿ ಈ ಪುಸ್ತಕ ಪ್ರಕಟವಾಗುತ್ತಿದೆ. ಕೃತಿ ಪ್ರಕಟಣೆಗೆ ನೆರವಾಗಿರುವವರಲ್ಲಿ ಪ್ರಮುಖರಾದ ಇತರರೆಂದರೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬೆಂಗಳೂರು ಶಾಖೆಯವರು, ಟಿ.ವಿ. ಸುಂದರಂ ಅಯ್ಯಂಗಾರ್, ಅಂಡ್ ಸನ್ಸ್, ಶ್ರೀ ಶ್ರೀಪಾದಭಟ್, ಶ್ರೀ ನಾಗೇಂದ್ರ ಕುಮಾರ್, ಶ್ರೀ ರಾಜ ಶೇಖರಯ್ಯ, ಮಾರುತಿಕಾಂಪ್ಲೆಕ್ಸ್, ಮಾರುತಿ ಥಿಯೇಟರ್, ಅಂಜನ್ ಟಾಕೀಸ್, T.V. ಮಾರುತಿ ಸಹೋದರರು, ಶ್ರೀ ಚಾಮುಂಡಿರಾಜು, ಶ್ರೀ ಎಲ್. ಕೃಷ್ಣ ಮೂರ್ತಿ, ಶ್ರೀ S.R.R:K ಶರ್ಮ ಶ್ರೀ ರಂಗಣ್ಣ, ಶ್ರೀ ಸುರೇಶ್ ಶ್ರೀ ಶಿವಲಿಂಗಯ್ಯ ಮತ್ತು ಶ್ರೀ ತಿರುಮಲಾಚಾರ್ ಇವರೆಲ್ಲರಿಗೂ ನಾವು ಆಭಾರಿ.

ಕೃತಿಯನ್ನು ಅಚ್ಚುಮಾಡಿಕೊಟ್ಟ 'ಅಕ್ಷರದ' ಅಧಿಕಾರವರ್ಗ ಹಾಗೂ ಕಾರ್ಮಿಕ ವರ್ಗಕ್ಕೂ ನಮ್ಮ ಕೃತಜ್ಞತೆಗಳು.

1980ರ ಮಕರಸಂಕ್ರಾಂತಿಯ ಶುಭದಿನದಂದು ಈ ಪುಸ್ತಕ ಶ್ರೀ॥ ಶ್ರೀ॥ ಶ್ರೀ॥ ಆಂಡವನ್ ಸ್ವಾಮಿಗಳ ಅಮೃತ ಹಸ್ತದಿಂದ ಬಿಡುಗಡೆಯಾಗುತ್ತಿರುವುದು ಹರ್ಷದ ಸಂಗತಿ. ಈ ಪುಸ್ತಕಕ್ಕೆ ಆಶೀರ್ವಚನ ನೀಡಿರುವ ಶ್ರೀ ಶ್ರೀ ಶ್ರೀ ಆಂಡವನ್ ಸ್ವಾಮಿ ಗಳಿಗೂ ನಾವು ಅತ್ಯಂತ ಋಣಿಗಳಾಗಿದ್ದೇವೆ. ಈ ಕೃತಿ ಓದುಗರಿಗೆ ರುಚಿಸಿದರೆ ಲೇಖಕ ಹಾಗೂ ಪ್ರಕಾಶಕರ ಶ್ರಮ ಸಾರ್ಥಕ.

— ಶಂಕರಮೂರ್ತಿ

# ಶ್ರೀರಂಗಂ ಶ್ರೀಮತ್ ಆಂಡವನ್ ಶ್ರೀ ವೇದಾಂತ ರಾಮಾನುಜ ಮಹಾದೇಶಿಕನ್ ಸ್ವಾಮಿಗಳು

ಮೂಲದಲ್ಲಿ ಬರುವಾಗ "ಶ್ರೀಮದ್ ಆಂಡವನ್" ಎಂದು ಪ್ರಸಿದ್ಧವಾಗಿರುವ ಹೆಸರು, ಶ್ರೀಮದ್ ಆಂಡವನ್ ವಂಶ ಪರಂಪರೆಯಲ್ಲಿ ಬಂದ ಅತ್ಯಂತ ಪ್ರಭಾವ ಸಂಪನ್ನರಾದ ಶ್ರೀಮದಾಚಾರ್ಯರೊಬ್ಬರ ಹೆಸರು. ಆದರೆ ಆ ಹೆಸರು ಆ ಆಚಾರ್ಯರೊಬ್ಬರ ನಾಮ ಮಾತ್ರವಾಗಿ ಉಳಿಯದೆ ಪರ್ಯಾಯವಾಗಿ ಒಂದು ವಂಶ ಪರಂಪರೆಯನ್ನೇ ಸೃಷ್ಟಿಸಿತು. ಈಗ "ಶ್ರೀಮದ್ ಆಂಡವರ್" ಎಂಬ ಹೆಸರು ಬರೀ ಹೆಸರಾಗಿ ಉಳಿದಿಲ್ಲ ಒಂದು ಸಂಸ್ಥೆಯೇ ಆಗಿಬಿಟ್ಟಿದೆ. "ಶ್ರೀಮದಾಂಡವರ್" ಪರಂಪರೆಯ ವೈಶಿಷ್ಟ್ಯವೇನೆಂದರೆ ಸತ್ಸಂಪ್ರದಾಯ ಮತ್ತು ಮುನಿತ್ರಯ ದರ್ಶನದ ಜೀವಾಳವನ್ನು ಜೀವನದಿಯನ್ನಾಗಿಸಿ ಶಿಷ್ಯಕೋಟಿಯ ಮನಮಂದಿರದಲ್ಲಿ ಪ್ರವಹಿಸಿ ಪ್ರಶಾಂತವೆನಿಸಿ ಅಮರ ಶಾಂತಿಯ ನೆಲೆಯನ್ನು ಪಡೆಯಲು ಆಧಾರವಾಗುವಂತಹ ಸಜೀವ ಪಾತ್ರಪೋಷಣೆಯ ಹೊರೆಯನ್ನು ಹೊತ್ತಿರುವುದು. ಸತ್ಸಂಪ್ರದಾಯ ಮತ್ತು ಮುನಿತ್ರಯ ತತ್ವ ಪ್ರತಿಪಾದಕರಾದ ಶ್ರೀ ವೇದಾಂತ ದೇಶಿಕರು ಶ್ರೀ ವೆಂಕಟೇಶ ಸ್ವಾಮಿಯ ಅವತಾರವೆಂದೇ ಪರಿಗಣಿಸಲಾಗಿದೆ. ಈ ಮಹಾನ್ ಆಚಾರ್ಯರು ಶ್ರೀಮದ್ ನಾಥಮುನಿ, ಯಾಮುನಮುನಿ ಮತ್ತು ಶ್ರೀಮದ್ರಾಮಾನುಜರು ಪ್ರತಿಪಾದಿಸಿರುವಂತಹ ತತ್ವತ್ರಯಗಳ ವಿಶ್ಲೇಷಣೆಯನ್ನು ಮಾಡಿ ತತ್ವತ್ರಯ ಪ್ರತಿಪಾದಕರೆನಿಸಿದರು. ಶ್ರೀ ಮಹಾದೇಶಿಕರ ಅಮೋಘವಾದ ಮುನಿತತ್ವತ್ರಯ ಪ್ರತಿಪಾದಕರೆನಿಸಿದರು. "ಮುನಿತ್ರಯ ಸಿದ್ಧಾಂತ ಸ್ಥಾಪನಾಚಾರ್ಯ" ಎಂಬ ಮಹಾ ಬಿರುದು ಅವರಿಗೆ ಒಪ್ಪತಕ್ಕದ್ದಾಗಿದೆ.

ಮುನಿತ್ರಯ ಸಂಪ್ರದಾಯ ಚಿರಂತನ ತಥ್ಯ ಹಾಗೂ ಸರ್ವ ಪಥ್ಯ. ಈ ಮುನಿತ್ರಯ ಸಂಪ್ರದಾಯ ಮಹಾ ಬೋಧನೆಯ ಆಣಿ ಮುತ್ತನ್ನು ಕರಗದಂತೆ ಉಳಿಸಿಕೊಂಡು ಬರುವ ಹೊಣೆ ಶ್ರೀಮದ್ ಆಂಡವನ್‌ರವರದಾಯಿತು. ಪರಮಾತ್ಮನು ನಾನಾ ರೂಪಗಳಲ್ಲಿ ಮೈದೋರುವುದು ಸತ್ಯ ಎಂಬುದನ್ನು ಶ್ರೀಮದ್ ಆಂಡವನ್ ಪರಂಪರೆ ಪುಷ್ಟೀಕರಿಸುತ್ತದೆ. ಘನತೆಯುಳ್ಳ ಮಹಾನ್ ವ್ಯಕ್ತಿಗಳೆಲ್ಲರ ಬದುಕು ನಾವು ನಮ್ಮ ಬಾಳುವೆಯನ್ನು ಹಸನಾಗಿಸಿಕೊಳ್ಳಲು ದಿಕ್ಸೂಚಿ.

ಶ್ರೀಮದ್ ಆಂಡವನ್ ಪರಂಪರೆಯ ಉಗಮಸ್ಥಾನ ತಿರುಕ್ಕುಡಂದ್ಯೆ. (ಕುಂಭಕೋಣಂ) ತಿರುಕ್ಕುಡಂದ್ಯೆ ಈಗಿನ ನಮ್ಮ ಶ್ರೀಮದಾಂಡವನ್ ಅವರ ಜನ್ಮಸ್ಥಾನವೂ ಆಗಿದೆ. ಇವರ ಪೂರ್ವಾಶ್ರಮದ ಹೆಸರು "ಶ್ರೀನಿವಾಸ ರಾಘವಾಚಾರ್ಯ" ಎಂದಾದರೂ ಎಲ್ಲರಿಗೂ ಚಿರಪರಿಚಿತವಾಗಿದ್ದ ಹೆಸರು "ಕಣ್ಣನ್ ಸ್ವಾಮಿ ಎಂಬುದು. ಶ್ರೀಮದ್ ಆಂಡವನ್ ಪರಂಪರೆಯ ಸಂಸ್ಥಾಪಕರು ಗೋಪಾಲಾರ್ಯ ಮಹಾ ದೇಶಿಕನ್. ಶ್ರೀ ತಿರುಕ್ಕುಂಡದ್ಯೆ ದೇಶಿಕನ್ – ಹದಿನೆಂಟನೇ ಶತಮಾನದ ಮಧ್ಯಭಾಗದಲ್ಲಿ ಶ್ರೀಮದ್ ಆಂಡವನ್ ಪರಂಪರೆ ಉಗಮವಾಯಿತು. ಈ ಪರಂಪರೆಯಲ್ಲಿ ಬಂದ ವಳತ್ತೂರ್ (Vazuthur) ಆಂಡವನ್ (ವೇದಾಂತ ರಾಮಾನುಜ ಮಹಾದೇಶಿಕನ್) ಅವರು ಅತ್ಯಂತ ಪ್ರತಿಭಾವಂತರು. ಓಜಸ್ವಿ, ಶ್ರೀ ರಂಗನಾಥಸ್ವಾಮಿಯವರ ಶಿಷ್ಯರು ಶ್ರೀನಿವಾಸ ರಾಮಾನುಜ ಮಹಾದೇಶಿಕನ್ ತಿರುತ್ತುರೈ ಪೂಂಡಿ ಆಂಡವನ್. ಅವರ ಶಿಷ್ಯರು ಶ್ರೀನಿವಾಸ ಮಹಾ ದೇಶಿಕನ್. (ಇವರ ಪೂರ್ವಾಶ್ರಮದ ಹೆಸರು ಶ್ರೀನಿವಾಸ ರಾಘವಾ

ಚಾರ್ಯಸ್ವಾಮಿ) ಈ ಪವಿತ್ರ ಪರಂಪರೆಯಲ್ಲಿ ಬಂದವರು ಈ ಮಹಾ ಆಚಾರ್ಯರು. ಪುಷ್ಯ ನಕ್ಷತ್ರ, ಮಾಘಮಾಸ 4900ರ ಕಲಿಯಲ್ಲಿ ಹುಟ್ಟಿದರು. ಈ ಆಂಡವನ್ ಸ್ವಾಮಿಗಳು ವೇದ, ಶಾಸ್ತ್ರ ಪಾರಂಗತರಾದ ಶ್ರೀಮಾನ್ ಕೃಷ್ಣಮಾಚಾರ್ಯರ ಪುತ್ರರು, ಮತ್ತು ಸುದರ್ಶನ ವಿದ್ಯೋಪಾಸಕರು.

ಶ್ರೀಮದಾಂಡವನ್ ಅವರ ನೆತ್ತಿಯಲ್ಲಿ ಶಂಖ ರೇಖೆಯಿದ್ದು "ಅದು ಅವರ ಭಾವೀ ವೈರಾಗ್ಯ ಜೀವನದ ಪ್ರತೀಕ'' ಎಂದು ಅವರು ಹುಟ್ಟಿದಾಗಲೇ ಹೇಳಲಾಗಿತ್ತು. ಇವರ ತಪಶ್ಚರ್ಯೆ ನಿಷ್ಠೆಯ ಜೀವನ, ವೈರಾಗ್ಯ ವಿಶಿಷ್ಟರೀತಿಯದಾಗಿತ್ತು. ತಮ್ಮ ದೈನಂದಿನ ಭಿಕ್ಷೆಯನ್ನು ಪವಿತ್ರ ಕಾವೇರಿ ಜಲದಲ್ಲಿ ಶುದ್ಧ ಮಾಡಿ ಸ್ವೀಕರಿಸುತ್ತಿದ್ದು ಅಷ್ಟರಿಂದಲೇ ಪ್ರಾಣಧಾರಣೆ ಆಗುತ್ತಿತ್ತು. ಅತಿಯಾದ ಉಪವಾಸ ವ್ರತಗಳಿಂದಾಗಿ ಇವರ ದೇಹ ಬಹಳ ದುರ್ಬಲವಾಗಿತ್ತು. ಇವರ ಧರ್ಮ ಭೀತಿಯ ನೆಲೆ ಬಹಳ ಉನ್ನತವಾಗಿದ್ದು ಇವರ ಶಿಷ್ಯಕೋಟಿಯಲ್ಲಿ ಒಬ್ಬರಾಗಿ ಸಂಸ್ಕಾರ ಹೊಂದು ವುದು ಬಹಳ ಕಠಿಣವಾಗಿದ್ದಿತು. ಈ ಆಚಾರ್ಯರು ಜಿಜ್ಞಾಸುವನ್ನು ಕಠಿಣ ಪರೀಕ್ಷೆಗೆ ಗುರಿಪಡಿಸು ತ್ತಿದ್ದರು. ಕಾರಣ ದೀಕ್ಷೆ ಕೊಡುವ ಅಥವಾ ಸಂಸ್ಕಾರ ಕೊಡುವ ಮುನ್ನ ಶಿಷ್ಯನ ಓಜಸ್ಸು, ಪ್ರಾಮಾಣಿಕತೆ ಮತ್ತು ಆಸಕ್ತಿ ಇವುಗಳನ್ನು ಸ್ವತಃ ಪರೀಕ್ಷಿಸುವುದೇ ಆಗಿದ್ದಿತು. ಆ ನಂತರ ಬಂದ ವರು ಪೆರಿಯಾಂಡವನ್. ಇವರು ತಮ್ಮ ಪತಾಕೆಯನ್ನು "ಚಿನ್ನ ಆಂಡವನ್" ಅವರಿಗಿತ್ತರು.

ಇವರ ನಂತರ ಸ್ವಲ್ಪಕಾಲ ಸಂಧಿಕಾಲವಾಗಿ ಉಳಿಯಿತು. ಈ ಅಂತರವನ್ನು ತುಂಬಿದವರೇ "ಕಡಂಥಿರುತಿ ವೇದಾಂತಾಚಾರ್ಯಾರ್" ತೇರಳಂದೂರ್ ಆಂಡವನ್ ಇವರ ಉತ್ತರಾಧಿಕಾರಿ ಯಾದರು. ಇವರು ವೇದಾಂತ ರಾಮಾನುಜ ಮಹಾ ದೇಶಿಕನ್ ಎಂತಲೂ–ನಮ್ಮಾಂಡವನ್ ಎಂತಲ ಚಿರಪರಿಚಿತರು. ಈ ಮಹಾ ಆಚಾರ್ಯರು ಶ್ರೀ ನಿಗಮಾಂತ ದೇಶಿಕರ ಪಾದುಕಾಸಹಸ್ರ ಮತ್ತು ರಹಸ್ಯತ್ರಯ ಸಾರಗಳಿಗೆ ತಮಿಳಿನಲ್ಲಿ ಭಾಷ್ಯವನ್ನು ಬರೆದಿರುತ್ತಾರೆ, ಈ ಮಹದಾಚಾರ್ಯ. ಶಿಷ್ಯಕೋಟಿಯಲ್ಲಿ ಜೀವಂತರಾಗಿ ಇಂದಿಗೂ ಇರುವವರು ಈ ವಿಷಯವನ್ನು ಬಲ್ಲವರಾಗಿದ್ದಾರೆ. ಈ ಮಹದಾಚಾರ್ಯರ ಉತ್ತರಾಧಿಕಾರಿಯಾಗಿ "ಅಕ್ಕೂರ್ ಆಂಡವನ್" (ಎಂಗಳಾಂಡವನ್ ಬಂದರು. ಇವರ ಕಾಲದಲ್ಲೇ ಶ್ರೀರಂಗದಲ್ಲಿರುವ "ಚಿನ್ನ ಆಶ್ರಮ" ಕಟ್ಟಲ್ಪಟ್ಟಿತು. ಇವರ ಉತ್ತ ರಾಧಿಕಾರಿ "ತೆಂಪರೈಸ್ವಾಮಿ"- ಶ್ರೀ ರಂಗನಾಥ ಮಹಾದೇಶಿಕನ್ ಎಂದು ಪ್ರಸಿದ್ಧರು. ವಯೋಧಿ ಕ್ಯದಿಂದ ಈ ಆಚಾರ್ಯರು ಪಾದಯಾತ್ರೆ ಕೈಗೊಳ್ಳಲಿಲ್ಲ. ಸ್ವಸ್ಥಾನದಲ್ಲಿದ್ದುಕೊಂಡೇ ಶಿಷ್ಯಕೊ ಟಿಯ ಮೇಲೆ ಕೃಪಾದೃಷ್ಟಿ ಸುರಿಸಿದರು.

ನಮ್ಮ ಈಗಿನ ಆಂಡವನ್ (ವೇದಾಂತ ರಾಮಾನುಜ ಮಹಾದೇಶಿಕ) ಏಪ್ರಿಲ್ 1963 ನೇ ಇಸವಿಯಲ್ಲಿ ಈ ಪವಿತ್ರ ಪರಂಪರೆಯಲ್ಲಿ ಪೀಠಕ್ಕೆ ಬಂದರು. ಸಂಸಾರದ ಆಕರ್ಷಣೆ ಬಿಡದೆ ಕಟ್ಟಿ ಹಾಕುತ್ತಿರುವಾಗ, ಆ ಆಕರ್ಷಣೆಯ ನೆನಪು ಇನ್ನೂ ಅನೇಕರಿಗೆ ಆ ವಯಸ್ಸಿನಲ್ಲಿ ಮರೆಯಲು ಅಸಾಧ್ಯ ಎನಿಸಿದರೂ, ಆಂಡವನ್ ಅವರಿಗೆ ಅದು ಆ ವಯಸ್ಸಿನಲ್ಲೇ ಸಾಧ್ಯವಾಯಿತು. ನಮ್ಮ ಈಗಿನ ಆಂಡವನ್ ಸ್ವಾಮಿಯ ವೈಶಿಷ್ಟ್ಯ-ಪರಮತ ಸಹಿಷ್ಣುತೆ. ದಕ್ಷಿಣ ಭಾರತದಾದ್ಯಂತ ಚಿರಪರಿ ಚಿತರು ಇವರು. ಕೇವಲ ಶ್ರೀ ವೈಷ್ಣವ ಮತಾನುಯಾಯಿಗಳಿಗೆ ಮಾತ್ರವೇ ಅಲ್ಲದೆ ಅನ್ಯಮತೀ ಯರಿಗೂ ಇವರ ಮೇಲೆ ಅಪಾರ ಗೌರವ. ಶ್ರೀ ಶ್ರೀಗಳು ನ್ಯಾಯ, ವ್ಯಾಕರಣ, ದಿವ್ಯ ಪ್ರಬಂಧ ಗಳ ಬಗೆಗೆ ಆಳವಾದ ಅಧ್ಯಯನ ಮಾಡಿದಾರೆ. ಇವರ ಶ್ರೀಮದ್ರಾಮಾಯಣ, ಶ್ರೀಮದ್ಭಾಗವತ ಉಪನ್ಯಾಸಗಳನ್ನು ಕೇಳಿದವರಿಗೆಲ್ಲ ಈ ವಿಷಯ ಅನುಭವ ವೇದ್ಯ. ವಿರಾಗಿಯ ಪದವನ್ನು ಅಧಿಷ್ಠಿ

ಸಿದ ಶ್ರೀಮದಾಚಾರ್ಯರ ಉಗ್ರತಪಶ್ಚರ್ಯೆ, ಸಂಯಮನ, ನಿಯಮಾನುಸಂಧಾನ ಚಕಿತಗೊಳಿಸು ವಂಥದು. ಇವುಗಳನ್ನು ಕಠಿಣವಾಗಿ ಪಾಲಿಸುವ ಧೋರಣೆ, ನಿಯಮಶಕ್ತಿ–ಈ ವೈರಾಗ್ಯದ ವೈಖರಿಗಳನ್ನು ಕಾಣುವಾಗ ಎಂಥವರಿಗೂ ಅಚ್ಚರಿಯಾಗದಿರದು.

ಈಗಿನ ಆಂಡವನ್ ಸ್ವಾಮಿಯ ವ್ಯಕ್ತಿತ್ವದ ಮತ್ತೊಂದು ವೈಶಿಷ್ಟ್ಯ ಎಂದರೆ ಅವರಿಗೆ ಶಿಷ್ಯ ಕೋಟಿಯ ಮೇಲಿರುವ ಅನುಕಂಪ. ಇದಕ್ಕಾಗಿ ತಮ್ಮ ಕಾಯ ಕ್ಲೇಶವನ್ನೂ ಲೆಕ್ಕಿಸದೆ ಪಾದಯಾತ್ರೆಯ ವ್ರತವನ್ನೇ ತೊಟ್ಟಿದ್ದಾರೆ. ಹಳ್ಳಿಹಳ್ಳಿಗೆ ಹೋಗಿ ಕುಗ್ರಾಮದಲ್ಲಿ ವಾಸಿಸುತ್ತಿರುವ ಶಿಷ್ಯನಿಗೂ ಅನುಕಂಪೆಯಿಂದ ಕೃಪಾ ವರ್ಷವನ್ನು ಸುರಿಸುತ್ತಿದ್ದಾರೆ. ತಾವು ಸನ್ಯಾಸ ಸ್ವೀಕರಿಸಿದ ತಿಂಗಳಲ್ಲೇ ಶಿಷ್ಯರನ್ನು ಅನುಗ್ರಹಿಸಲು ತೊಡಗಿ ಪಾದಯಾತ್ರೆ ಕೈಗೊಂಡರು.

ದಕ್ಷಿಣ ಭಾರತದಲ್ಲಿ ಇವರ ವೀಕ್ಷಣೆಗೆ ನಿಲುಕದ ಸ್ಥಾನವೊಂದಿಲ್ಲ. ಇವರು ಮಂಗಳಾಶಾಸನ ಮಾಡದ ದೈವ ಒಂದಿಲ್ಲ. ದಕ್ಷಿಣದಲ್ಲಿ ಪಾದಯಾತ್ರೆ ಪೂರೈಸಿದ ನಂತರ 1965 ರ ಫೆಬ್ರವರಿ ವೇಳೆಗೆ ಮೈಸೂರು ರಾಜ್ಯಕ್ಕೆ ಬಂದರು. ಆಗ ಅವರ ಉದ್ದೇಶ ಮೇಲುಕೋಟೆಯ ವೈರಮುಡಿ ಸೇವೆಯಂದೇ ದೇವರ ಸೇವೆ ಮಾಡಬೇಕು ಎಂಬುದಾಗಿತ್ತು. ದೈವ ಸಂದರ್ಶನ ಮಾಡಿ ಮೈಸೂರ ರಾಜ್ಯದಲ್ಲಿರುವ ಶಿಷ್ಯರನ್ನೆಲ್ಲಿ ಅನುಗ್ರಹಿಸಿ ಬೆಂಗಳೂರಿಗೆ ಪುನಃ ಬಂದರು. ಇಲ್ಲಿಯ ಆಸ್ತಿಕ ಮಹಾಶಯರ ಅಪೇಕ್ಷೆಯ ಮೇರೆಗೆ ಶ್ರೀಮದ್ರಾಮಾಯಣ, ಭಾಗವತ. ತಿರುಪ್ಪಾವೈ ಪ್ರವಚನಗಳನ್ನು ಮಾಡಿ ಸಹಸ್ರಾರು ಜನಕ್ಕೆ ಧರ್ಮೋಪದೇಶ ಮಾಡಿದರು. ಕನ್ನಡ ಜನತೆಯ ಆದರ ಅಭಿಮಾನಗಳ ಹೊರೆಯನ್ನು ಹೊರಲಾರದೆ ತಮ್ಮ ಪಾದಯಾತ್ರೆಯನ್ನು ಮುಂದುವರೆಸಿದರು. ಮೊನ್ನೆ ಮೊನ್ನೆ ತಾನೆ ಶ್ರೀಮದ್ ಆಂಡವನ್ ಸ್ವಾಮಿಗಳ ಷಷ್ಠ್ಯಬ್ದ ಪೂರ್ತಿ ಸಮಾರಂಭವನ್ನು ಶ್ರೀರಂಗದಲ್ಲಿ ಅವರ ಶಿಷ್ಯಕೋಟಿ ವಿಜೃಂಭಣೆಯಿಂದ ನೆರವೇರಿಸಿತು. (1907 ನೇ ಇಸವಿ, ಪರಾಭವ ಸಂವತ್ಸರದಲ್ಲಿ ಇವರು ಜನ್ಮವೆತ್ತಿದರು.)

ಶ್ರೀರಂಗದಲ್ಲಿ ವಿಶಿಷ್ಟ ರೀತಿಯ ಸಂಸ್ಕೃತ ಕಾಲೇಜೊಂದನ್ನು ನಡೆಸಿ ವೇದ, ಸಂಸ್ಕೃತ ಕಲಿಸಿ ನಮ್ಮ ಸಂಸ್ಕೃತಿಗೆ ಸೇವೆ ಸಲ್ಲಿಸಲು ಕಂಕಣ ತೊಟ್ಟಿದ್ದಾರೆ ಇದಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದಾರೆ

"ಶ್ರೀ ರಂಗನಾಥ ಪಾದುಕಾ" ಎಂಬ ಮಾಸಪತ್ರಿಕೆಯ ಮೂಲಕವೂ ಧರ್ಮ ಪ್ರಚಾರ ಕಾರ್ಯ ಮಾಡುತ್ತಿದ್ದಾರೆ.

ವಿಶೇಷವಾದ ಪಾಂಡಿತ್ಯ, ವೇದ ವೇದಾಂತ, ಇತಿಹಾಸ ಪುರಾಣಗಳಲ್ಲಿ, ದಿವ್ಯ ಪ್ರಬಂಧಗಳಲ್ಲಿ, ತತ್ವ ವ್ಯಾಖ್ಯಾನಗಳಲ್ಲಿ ವಿಶೇಷ ಪರಿಶ್ರಮ ಹೊಂದಿ ವಿದ್ಯೆಯನ್ನೇ ಕಲಿಯದವರಿಗೂ ವಿಶೇಷಾರ್ಥಗಳನ್ನು ಸುಲಭವಾಗಿ ಸರಳ ಶೈಲಿಯಲ್ಲಿ ಹೇಳುವ ಕಲೆಗಾರಿಕೆ ಭಗವಂತನ ಕಟಾಕ್ಷದಿಂದ ಇವರಿಗೆ ಸಿದ್ಧಿಸಿದೆ. ಇವರ ಶ್ರೀಮದ್ರಾಮಾಯಣ ಉಪನ್ಯಾಸಗಳಂತೂ ವಿಶಿಷ್ಟ ಮಾದರಿಯವು. ಬೆಂಗಳೂರಿನಲ್ಲಿ ಮಲ್ಲೇಶ್ವರದ ವೇಣುಗೋಪಾಲಸ್ವಾಮಿ ದೇವಸ್ಥಾನದಲ್ಲಿ ನಡೆದ ಉಪನ್ಯಾಸಗಳಿಗೆ ಬರುತ್ತಿದ್ದ ಶ್ರೋತೃವೃಂದವೇ ಇದಕ್ಕೆ ಸಾಕ್ಷಿ.

ಶ್ರೀಮದ್ ಆಂಡವನ್ ಸ್ವಾಮಿಗಳವರ ಮನಸ್ಸು ಮಗುವಿನ ಮನಸ್ಸಿನಂತೆ ಪರಿಶುದ್ಧ. "ಮಠಾಧಿಪತಿ"ಗಳಿಗೆ ಇರಬೇಕಾದ ಠೀವಿಯಾಗಲಿ, ದರ್ಪವಾಗಲಿ ಇವರ ಸಮೀಪವೂ ಸುಳಿಯುವುದಿಲ್ಲ. ಇವರ ಜ್ಞಾಪಕ ಶಕ್ತಿಯೋ ಇವರ ಉಪನ್ಯಾಸ ಕೇಳುವವರನ್ನು ಬೆರಗುಗೊಳಿಸುತ್ತದೆ. ಎಂತಹ ಕ್ಲಿಷ್ಟವಾದ ವೇದಾಂತ ವಿಷಯವನ್ನೂ ಸರಳವಾಗಿ ಜನ ಸಾಮಾನ್ಯಕ್ಕೂ ಅರ್ಥವಾಗು

ವಂತೆ ತಿಳಿಸುವ ಕಲೆಯಲ್ಲಿ ಸಿದ್ಧಹಸ್ತರಿವರು. ಪಾದಯಾತ್ರೆಯನ್ನು ವ್ರತವನ್ನಾಗಿ ಕೈಗೊಂಡಿದ್ದಾರೆ. ಹೆಚ್ಚು ಹೆಚ್ಚು ಜನರನ್ನು ಕಂಡು ಭಗವದ್ವಿಷಯವನ್ನು ತಿಳಿಸಲು ಪಾದಯಾತ್ರೆಯೇ ಸರಿಯಾದ ಸಂಚಾರ ಸಾಧನ ಎನ್ನುತ್ತಾರೆ. ಜನಕೋಟಿಯ ಮೇಲೆ ಇವರಿಗೆ ಇರುವ ಈ ಅನುಕಂಪ, ಇವರಿಗೆ ಇರುವ ವಿದ್ವತ್ತು, ಶಾಸ್ತ್ರಜ್ಞಾನ, ಪ್ರತಿಭಾ ಶಕ್ತಿ ಇವುಗಳನ್ನು ನೋಡುವಾಗ ರಾಮಾನುಜಾಚಾರ್ಯರ ವಿಶಾಲ ಹೃದಯ ಮತ್ತು ವೇದಾಂತ ದೇಶಿಕರ ಅಮೋಘ ಪಾಂಡಿತ್ಯ ಎರಡರ ಸಂಗಮವಾಗಿ ಅವತರಿಸಿರುವರೋ ಎಂದನಿಸುತ್ತದೆ.

# ಪ್ರಸ್ತಾವನೆ

## ಶ್ರೀಮದ್ರಾಮಾಯಣದ ಅವತಾರಿಕೆ

ಭಾರತೀಯ ಸಂಸ್ಕೃತಿಯ ದ್ಯೋತಕವಾಗಿ ಬೆಳಗುತ್ತಿದೆ ಮಹರ್ಷಿವಾಲ್ಮೀಕಿಯ ರಾಮಾಯಣ ಕಾವ್ಯ. ಇಪ್ಪತ್ನಾಲ್ಕು ಸಹಸ್ರ ಶ್ಲೋಕಗಳಿಂದ ಕೂಡಿರುವ ಈ ಕೃತಿ ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ಸರಳವಾದ, ಸುಮನೋಹರವಾದ ಶೈಲಿಯಲ್ಲಿ ಹೃದಯಂಮವಾಗಿ ವಿರಚಿಸಲ್ಪಟ್ಟಿದೆ. ಜನಸಾಮಾನ್ಯರಿಗೂ ಅರ್ಥವಾಗುವಂತಹ ಶೈಲಿಯಲ್ಲಿ ಸರ್ವ ಶ್ರುತಿ ಮನೋಹರವಾದ ಮಹೋನ್ನತ ಕಾವ್ಯವನ್ನು ವಿರಚಿಸಿ ಅಜರಾಮರರಾಗಿದ್ದಾರೆ ಮಹರ್ಷಿ ವಾಲ್ಮೀಕಿ. ಸಹಸ್ರಾರು ವರ್ಷಗಳಿಂದ ಶ್ರೀಮದ್ರಾಮಾಯಣವನ್ನು ಹೇಳುತ್ತ, ಕೇಳುತ್ತ, ಹಾಡುತ್ತ, ಅಭಿನಯಿಸುತ್ತ ಬಂದಿದ್ದಾರೆ, ಜನ. ಆದರೆ ಹೇಳಿದಷ್ಟೂ ಮತ್ತೆ ಮತ್ತೆ ಹೇಳಬೇಕು, ಕೇಳಬೇಕು ಎನಿಸುವಂತಿದೆ ಈ ಕಾವ್ಯ. ಆದಿಕಾವ್ಯವೂ ಪುರಾತನವೂ ಆದ ರಾಮಾಯಣ ನಿತ್ಯನೂತನವಾಗಿದೆ.

ಮರ್ಯಾದಾ ಪುರುಷೋತ್ತಮನೆನಿಸಿದ ಶ್ರೀರಾಮಭದ್ರನ ದಿವ್ಯಚರಿತೆಯನ್ನು ಬಣ್ಣಿಸಲು, ವಾಲ್ಮೀಕಿಮುನಿ ಶ್ರೀಮದ್ರಾಮಾಯಣ ಕಾವ್ಯವನ್ನು ವಿರಚಿಸಿ ವಿಶ್ವವಿಖ್ಯಾತರಾಗಿದ್ದಾರೆ. ಇದಕ್ಕೆ ಕಾರಣ ಇದು ಉತ್ತಮ ಕಾವ್ಯವಾಗಿರುವುದರ ಜತೆಗೆ ಮೋಕ್ಷ ಶಾಸ್ತ್ರವೂ ಆಗಿ ಬೆಳಗುತ್ತಿರುವುದು.

## ರಾಮಾಯಣದ ವೈಶಿಷ್ಟ್ಯ

ರಾಮಾಯಣವು ಕೇವಲ ರಾಮಚಂದ್ರನ ಕಥೆ ಅಲ್ಲ. ಮಹಾಸಾಧ್ವಿಶಿರೋಮಣಿಯಾದ ಸೀತೆಯ ಭವ್ಯ ಚಾರಿತ್ರ್ಯವೂ ಹೌದು. ಲವಕುಶರು ಆಸ್ಥಾನದಲ್ಲಿ ಶ್ರೀರಾಮನ ಮುಂದೆ ರಾಮಾಯಣವನ್ನು ಹಾಡಿದಾಗ, ಅವನು ಸಿಂಹಾಸನದಿಂದ ಎದ್ದುಬಂದು ಮಕ್ಕಳ ಮುಂದೆ ಕುಳಿತು ಕುತೂಹಲದಿಂದ ಕೇಳಲಾರಂಭಿಸಿದ. ವಸಿಷ್ಠರಾದಿಯಾಗಿ ನೆರೆದಿದ್ದವರಿಗೆಲ್ಲ ಅಚ್ಚರಿಯಾಯಿತು. ತನ್ನ ಕಥೆಯನ್ನೇ ಮತ್ತೊಬ್ಬರಿಂದ ಕೇಳಲು ಇಷ್ಟು ಕುತೂಹಲವೆ ? ಎನಿಸಿತು. "ಏನಿದು ರಾಮ ?" ಎಂದು ಕೇಳಿಯೂ ಕೇಳಿದರು. ಅದಕ್ಕೆ ಶ್ರೀರಾಮಚಂದ್ರ, "ಗುರುಗಳೇ, ಇದು ನನ್ನ ಕಥೆಯಲ್ಲ. ಸಾಧ್ವೀಮಣಿಯಾದ ಸೀತೆಯ ಕಥೆ" ಎಂದ. **ರಾಮಾಯಣ ಮಿದಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್** ಎಂದು ವಾಲ್ಮೀಕಿ ಮಹರ್ಷಿಗಳೇ ನುಡಿದಿದ್ದಾರೆ.

ಮೇಲುನೋಟಕ್ಕೆ ರಾಮಾಯಣವು ರಾಮ–ಸೀತೆಯರ ಕಥೆ. ಆದರೆ ಇದರಲ್ಲಿ ಗೂಢವಾದ ತತ್ವಗಳು ಬಹಳ ಅಡಗಿವೆ. ಪರಬ್ರಹ್ಮನ ದಿವ್ಯ ಮುಖದಿಂದ ಹೊರಬಂದ ನಾಲ್ಕು ವೇದಗಳೇ ಶ್ರೀಮದ್ರಾಮಾಯಣದ ರೂಪವನ್ನು ತಳೆದು "ವಾಲ್ಮೀಕಿ ಕೃತಿ" ಎನಿಸಿವೆ.

## ಆಚಾರ್ಯನ ಹಾಗೂ ಶಿಷ್ಯನ ಲಕ್ಷಣ

ಶ್ರೀಮದ್ರಾಯಣದ ಪ್ರಪ್ರಥಮ ಶ್ಲೋಕವೇ ಆಚಾರ್ಯನ ಲಕ್ಷಣವನ್ನು ತಿಳಿಸುತ್ತದೆ. ಆಚಾರ್ಯ ಎಂದರೆ ಯಾರು ? ಅವನು ಹೇಗಿರಬೇಕು ? ಅವನ ನಡೆನುಡಿ ಎಂತಹುದಿರಬೇಕು ?

ಎಂತಹ ಆಚಾರ್ಯನನ್ನು ಆಶ್ರಯಿಸಿದರೆ ಶಿಷ್ಯ ಉದ್ಧಾರವಾಗುತ್ತಾನೆ? ಇವೆಲ್ಲ ಪ್ರಶ್ನೆಗಳ ವ್ಯಾಖ್ಯೆಯೋ ಯೆಂಬಂತೆಯೇ "ಹೊರಹೊಮ್ಮಿದೆ" ಪ್ರಥಮ ಶ್ಲೋಕ.

**ತಪಸ್ಸ್ವಾಧ್ಯಾಯ ನಿರತಂ ತಪಸ್ವೀ ವಾಗ್ವಿದಾಂ ವರಂ।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ ॥**

ಆಚರಿಸಿ ತೋರುವವನು ಆಚಾರ್ಯ. ನುಡಿಯುವುದು ಮಾತ್ರವಲ್ಲ, ನುಡಿದಂತೆ ನಡೆದು ತೋರುವಂಥವನೇ ಸದಾಚಾರ್ಯ. ಪಕ್ಷಿಗಳಿಗೆ ಎರಡು ರೆಕ್ಕೆಗಳು ಹೇಗೆ ಅತ್ಯಾವಶ್ಯಕವೋ ಹಾಗೇ ಸದಾಚಾರ್ಯನಿಗೆ ಎರಡು ರೆಕ್ಕೆಗಳ. ಆ ರೆಕ್ಕೆಗಳೇ ಜ್ಞಾನ, ಅನುಷ್ಠಾನ ಎಂಬವು. ಸದಾಚಾರ್ಯ ನಾದವನಿಗೆ ಸುಜ್ಞಾನವೂ ಇರಬೇಕು, ಜತೆಗೆ ನಡೆಯೂ ಪರಿಶುದ್ಧವಾಗಿರಬೇಕು. ಶಿಷ್ಯರಿಗೆಲ್ಲ ತನ್ನ ಆಚರಣೆಯಿಂದಲೇ ಮಾರ್ಗದರ್ಶನ ನೀಡುವಂಥ ಉತ್ತಮ ಆಚರಣೆಯುಳ್ಳವನಾಗಿರಬೇಕು ಅವನು.

ಶ್ರೀಮದ್ರಾಮಾಯಣವನ್ನು ಉಪದೇಶಮಾಡಿದಂಥ ನಾರದ ಎಂಥವನು? "ತಪಸ್ಸ್ವಾ ಧ್ಯಾಯ ನಿರತ." ತಪಸ್ಸನ್ನೇ ಜೀವಿತವನ್ನಾಗಿ ಉಳ್ಳವ. ತಪೋರತ, ತಪೋಧನ ಅವನು. ನಿರಂತರ ತಪಸ್ವಿಯಾಗಿರುವಂಥವ. ಜತೆಗೆ ಪರತತ್ವವನ್ನು ಸುಲಲಿತವಾಗಿ ಹೃದಯಂಗಮವಾಗು ವಂತೆ ಶಿಷ್ಯರಿಗೆ ಬೋಧಿಸುವುದರಲ್ಲಿ ನಿಷ್ಣಾತ. ವಾಕ್‌ಶ್ರೀಯನ್ನು ಉಳ್ಳವ. ಅಂತಹ ಶ್ರೇಷ್ಠ ನಾದ ಆಚಾರ್ಯನನ್ನೇ ವಾಲ್ಮೀಕಿ ಆಶ್ರಯಿಸಿದ. ಅಂತಹ ಆಚಾರ್ಯನನ್ನು ಹುಡುಕುವುದು ಹೇಗೆ? ಇದಕ್ಕೂ ಉತ್ತರ ಹೇಳುತ್ತದೆ ಶ್ರೀಮದ್ರಾಮಾಯಣ.

ಸದಾಚಾರ್ಯನನ್ನು ಅರಸುವ ಕಲೆ ಕಷ್ಟಸಾಧ್ಯ. ಆದರೆ, ಶಿಷ್ಯನು ವಾಸ್ತವದಲ್ಲಿ ಜಿಜ್ಞಾಸು. ಜ್ಞಾನ ಪಿಪಾಸೆ ಅವನಲ್ಲಿದೆ. ಸತತವಾಗಿ ಪರತತ್ವ ಚಿಂತನೆಯಲ್ಲೇ ಮುಳುಗಿದವನು, ಅದರ ಸಾಕ್ಷಾತ್ಕಾರವನ್ನು ದೃಢವಾಗಿ ಬಯಸುವವನು ಎಂಬ ನೆಲೆ ಆಚಾರ್ಯನಿಗೆ ತಾನಾಗಿಯೇ ಅರಿ ವಾಗುವುದು. ಆಗ ತಾನಾಗಿಯೇ ಸದಾಚಾರ್ಯನು ಶಿಷ್ಯನನ್ನೇ ಹುಡುಕಿಕೊಂಡು ಶಿಷ್ಯನಿರುವ ಸ್ಥಳಕ್ಕೆ ಬರುತ್ತಾನೆ. ವಾಲ್ಮೀಕಿಯ ಆಶ್ರಮಕ್ಕೇ ನಾರದರು ಬಂದುದು ಈ ತತ್ವವನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ. ಹಸು ತನ್ನ ಕರುವನ್ನು ನೆನೆದು ತಾನಾಗಿಯೇ ಅದರತ್ತ ಧಾವಿಸಿ ಅಮೃತಪಾನ ಮಾಡಿಸಿ ತುಷ್ಟಿಗೊಳಿಸುವಂತೆ ಸದಾಚಾರ್ಯ ಸಚ್ಛಿಷ್ಯನ ಬಳಿಗೆ ತಾನಾಗಿಯೇ ಬಂದು ಭಗವತ್ಸಾ ಕ್ಷಾತ್ಕಾರವೆಂಬ ಅಮೃತವನ್ನು ಅನುಗ್ರಹಿಸುತ್ತಾನೆ.

ಆಚಾರ್ಯನ ಲಕ್ಷಣವನ್ನೂ ಹೇಳಿದೆ ಅದೇ ಶ್ಲೋಕ. ಆಚಾರ್ಯ ತಾನಾಗಿಯೇ ಬರ ಬೇಕಾದರೆ ಆ ಶಿಷ್ಯ ಎಂತಹವನಾಗಿರಬೇಕು. ಅವನಚಿತ್ತಭೂಮಿ ಎಷ್ಟು ಉನ್ನತಮಟ್ಟದಲ್ಲಿರ ಬೇಕು–ಇವೆಲ್ಲ ಒಂದೇ ಪದದಲ್ಲಿ ಅಡಗಿದೆ. "ತಪಸ್ವೀ" ಎಂಬ ಆ ಪದ ಶಿಷ್ಯತನದ ನೆಲೆಯನ್ನೇ ವಿವರಿಸುತ್ತದೆ. ವಾಲ್ಮೀಕಿ ಸಾಮಾನ್ಯರಲ್ಲ. ತಪಸ್ವಿ. ಪರತತ್ವವನ್ನು ಅನಂತರ ತನ್ನ ಹೃದಯ ದೇಗುಲವನ್ನು ಮೌನವಾಗಿ ಚಿಂದಿಸುತ್ತಿದ್ದರು. ಶಿಷ್ಯನೋ ಶ್ರೇಷ್ಠ ತಪಸ್ವಿ; ಆಚಾರ್ಯನೋ ಮುನಿಪುಂಗವ.

ಹೀಗೆ ವಾಲ್ಮೀಕಿ ತಪಸ್ಸು ಮತ್ತು ಸ್ವಾಧ್ಯಾಯ ನಿರತರಾದ ನಾರದರನ್ನು ಆಚಾರ್ಯರನ್ನಾಗಿ ವರಿಸಿದ್ದರಿಂದ ತಿಳಿಯಬೇಕಾದ ಅಂಶ ಒಂದು ಇದೆ.

ಜೀವಿಯಾದ ಭಗವತ್‌ಸ್ವರೂಪವನ್ನು ಅರಿಯಲು ಜ್ಞಾನ ಅನುಷ್ಠಾನಗಳಿಂದ ಕೂಡಿದ ಸದಾಚಾರ್ಯನನ್ನೇ ಆಶ್ರಯಿಸಬೇಕು.

"ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಃ ತತ್ವದರ್ಶಿನಃ" ಎಂದು ಶ್ರೀಕೃಷ್ಣ ಹೇಳಿದಂತೆ ಪರತತ್ವವನ್ನು ಅನುಭವಿಸುವ ಜ್ಞಾನಾನುಷ್ಠಾನಗಳಿಂದ ಕೂಡಿರುವ ಆಚಾರ್ಯನನ್ನೇ ಶಿಷ್ಯ ಆಶ್ರಯಿಸಬೇಕು. ಆಗಲೇ ಜೀವಿಗೆ ಭಗವಲ್ಲಾಭಸಾಧ್ಯ. ರಾಮಾಯಣವು ಸ್ಮೃತಿಯಾದರೂ ಮತ್ತಾವ ಸ್ಮೃತಿಯೂ ತೋರಿಕೊಡದ ರೀತಿಯಲ್ಲಿ ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸಿದೆ. ಸ್ಮೃತಿಶಾಸ್ತ್ರದ ಮಹತ್ವವನ್ನು ಅರಿಯಬೇಕಾದರೆ, ಅದರ ಕರ್ತೃ, ಪ್ರತಿಪಾದ್ಯ ವಿಷಯ ಮತ್ತು ಶಬ್ದಸೌಷ್ಠವ ಇವನ್ನು ನೋಡಬೇಕು. ಯಾವಸ್ಮೃತಿಯಲ್ಲಿ ವೇದದ ಕ್ರಮವೂ, ಬ್ರಹ್ಮಸೂತ್ರದಲ್ಲಿ ತೋರಿಕೊಟ್ಟ ಹಾದಿಯೂ ಪರಿಶುದ್ಧವಾಗಿರುವುದೋ ಅದು ಪ್ರಥಮಗ್ರಾಹ್ಯ. ಎಂದರೆ ಅಂಥದು ರಾಮಾಯಣ ಒಂದೆ.

ಶ್ರೀಮದ್ರಾಮಾಯಣದಲ್ಲಿ ಪ್ರೋಕ್ತವಾಗಿರುವ ವಿಶಾಲವಾದ ಸಾಗರವೇ ಸಂಸಾರ. ಸೆರೆಮನೆ ವಾಸಕ್ಕಿಂತಲೂ ಕಷ್ಟವಾದ ಈ ಸಂಸಾರದಲ್ಲಿ ದೇಹವೆಂಬುದೇ ಲಂಕಾಪಟ್ಟಣ. ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳೆಂಬ ಹತ್ತು ತಲೆಗಳಿಂದ ಕೂಡಿದ ಮನಸ್ಸೇ ರಾವಣ. ಮನಸ್ಸು ದುರ್ದಮನೀಯವಾದದು. ಅನವರತ ವಿಷಯಾದಿ ಭೋಗಗಳ ಕಡೆಗೆ ಜೀವಿಯನ್ನು ಎಳೆಯುವಂತಹುದು. ಅಂತಹ ಮನಸ್ಸನ್ನು ಹತೋಟಿಯಲ್ಲಿಡುವುದು ಬಹಳಕಷ್ಟ. ಹೃದಯವೆಂಬುದೇ ಅಶೋಕವನ. ಜೀವವೇ ಸೀತೆಯಂತೆ ಅಲ್ಲಿ ಬದ್ಧನಾಗಿದಾನೆ. ಆ ಬದ್ಧ ಜೀವಿಯು ಮುಕ್ತನಾಗಬೇಕಾದರೆ ಇರುವ ಉಪಾಯ ಒಂದೇ. ಅನವರತ ಪರಮಾತ್ಮನ ಚಿಂತನ. ಸೀತೆ ಹಾಗೆ ಇದ್ದಳು. ಹೀಗೆ ಬದ್ಧಜೀವಿ ನಿರಂತರ ಭಗವದ್ಧ್ಯಾನದಲ್ಲೇ ನಿರತನಾಗಿ ನಿಯತವ್ರತನಾಗಿದ್ದರೆ ಪರಮಾತ್ಮ ತಾನಾಗಿಯೇ ಆ ಜೀವವನ್ನು ಮುಕ್ತನನ್ನಾಗಿನಲು ಆಚಾರ್ಯನನ್ನು ಕಳುಹಿಸುತ್ತಾರೆ, ಹನುಮಂತನನ್ನು ಕಳುಹಿಸಿದಂತೆ. ಈ ಅರ್ಥವನ್ನೆಲ್ಲಾ ಕೂಡಿಸಿಕೊಂಡು ನಿಗಮಾಂತ ದೇಶಿಕರು ದರ್ಪೋದರ್ಕ ಎನ್ನುವ ಶ್ಲೋಕದಲ್ಲಿ ತಿಳಿಸಿದ್ದಾರೆ.

ರಾಮನಾಮಾಂಕಿತ ಉಂಗುರವನ್ನು ಹನುಮಂತ ಸೀತೆಗೆ ಕೊಟ್ಟಂತೆ ಆಚಾರ್ಯನು ಪವಿತ್ರವಾದ ಮಂತ್ರವನ್ನು ಉಪದೇಶಿಸುತ್ತಾನೆ. ಪರಮಾತ್ಮನು ತನ್ನ ಕೃಪಾವಿಶೇಷವೆಂಬ ಸೇತುವೆಯನ್ನು ಸಂಸಾರ ಸಾಗರಕ್ಕೆ ಕಟ್ಟುತ್ತಾನೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೇ ಮುಂತಾದ ರಾಕ್ಷಸರನ್ನು ನಿಗ್ರಹಿಸಿ ಅಹಂಕಾರವೆಂಬ ರಾವಣನನ್ನು ಸಂಹರಿಸಿ. ಜೀವಿಯನ್ನು ಮುಕ್ತನನ್ನಾಗಿಸುತ್ತಾನೆ. ಮುಕ್ತನಾದ ಜೀವನನ್ನು ಅಪ್ರಾಕೃತವಾದ ವಿಮಾನದಲ್ಲಿ ಕರೆದುಕೊಂಡು ವೈಕುಂಠವೆಂಬ ಅಯೋಧ್ಯಾನಗರಿಯನ್ನು ಸೇರಿ ಪಟ್ಟಾಭಿಷೇಕ ಅಂದರೆ ಮೋಕ್ಷಾನಂದವನ್ನು ಅನುಗ್ರಹಿಸುತ್ತಾನೆ. ಯಾರಿಂದಲೂ ಜಯಿಸಲು ಅಶಕ್ಯವಾದುದು ಅಯೋಧ್ಯೆ, ಹಾಗೆಯೇ ಕಳಂಕರಹಿತವಾದ ಅಯೋಧ್ಯೆಯಲ್ಲಿ ಜೀವಾತ್ಮನು ಪರಮಾತ್ಮನನ್ನು ಸೇರಿ ಶಾಶ್ವತ ಬ್ರಹ್ಮಾನಂದವನ್ನು ಅನುಭವಿಸುತ್ತಾನೆ. ಇದು ರಾಮಾಯಣದ ಅಂತರಾರ್ಥ.

## ಭ್ರಮರ ಕೀಟನ್ಯಾಯ

ಅದ್ವೈತಸಿದ್ಧಾಂತದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ಉಕ್ತಿಗೆ ಅನುಗುಣವಾಗಿ "ನಾನೇ ಬ್ರಹ್ಮ" ಎಂದು ಚಿಂತಿಸುವುದರಿಂದ ಬ್ರಹ್ಮನೇ ಆಗುತ್ತಾನೆ ಎಂದಿದೆ. ಅದು ಭ್ರಮರ ಕೀಟ ನ್ಯಾಯದಂತೆ. ಕೀಟವೊಂದು ಭ್ರಮರವನ್ನೇ ಚಿಂತಿಸುತ್ತಿದ್ದು ಕಾಲಾನಂತರದಲ್ಲಿ ತಾನೇ ಭ್ರಮರವಾಗುತ್ತದೆ. ಹಾಗೆಯೇ ಜೀವಾತ್ಮನು ಪರಮಾತ್ಮನನ್ನೇ ಚಿಂತಿಸುವುದರಿಂದ ಪರಮಾತ್ಮನೇ ಆಗುತ್ತಾನೆ ಎನ್ನುತ್ತದೆ ಅದ್ವೈತಸಿದ್ಧಾಂತ.

ವಿಶಿಷ್ಟಾದ್ವೈತವೂ ಒಂದು ರೀತಿಯಲ್ಲಿ ಈ ಭ್ರಮರಕೀಟನ್ಯಾಯವನ್ನು ಅನುಮೋದಿಸುತ್ತದೆ. ಆದರೆ ಅದ್ವೈತ ಹೇಳುವಂತಲ್ಲ. ಜೀವಾತ್ಮನು ಪರಮಾತ್ಮನನ್ನು ಚಿಂತಿಸಿ ಚಿಂತಿಸಿ ಪರಮಾತ್ಮನಂತೆಯೇ ಆಗುತ್ತಾನೆ. ಕೀಟ ಭ್ರಮರವನ್ನು ಚಿಂತಿಸಿ ಭ್ರಮರವೇ ಆಗುತದೆ; ನಿಜ. ಆದರೆ ಅದು ಯಾವ ಭ್ರಮರವನ್ನು ಕುರಿತು ಧ್ಯಾನಿಸಿತೋ ಅದೇ ಭ್ರಮರ ಆಗಲಿಲ್ಲ. ಆ ಭ್ರಮರದಂತೆ ಆಯಿತು ಅಷ್ಟೆ. ಹಾಗೆಯೇ ವಿಶಿಷ್ಟಾದ್ವೈತ ಸಿದ್ಧಾಂತದ ರೀತ್ಯಾ ಪರಮಾತ್ಮನಂತೆಯೇ ರೂಪ ಗುಣ ಎಲ್ಲವೂ ಜೀವಾತ್ಮನಿಗಿರುತ್ತದೆ. ಇದನ್ನು ಲಕ್ಷ್ಮಣನ ಚಿತ್ರದಲ್ಲಿ ವಾಲ್ಮೀಕಿ ಕೊಟ್ಟಿದಾರೆ. ಲಕ್ಷ್ಮಣನು ರಾಮನಂತಿದ್ದರೂ ಅವನು ರಾಮನಲ್ಲ. ಪಂಚವಟೀ ಪ್ರದೇಶದಲ್ಲಿ ಶ್ರೀರಾಮಚಂದ್ರನು "ನಿನಗಿಷ್ಟವಾದ ಪ್ರದೇಶದಲ್ಲಿ ಆಶ್ರಮವನ್ನು ನಿರ್ಮಿಸು." ಲಕ್ಷ್ಮಣ ಹೇಳುತ್ತಾನೆ, "ಸ್ವಾಮಿ ನೀನು ನನಗೆ ಒಡೆಯ, ನಾನು ನಿನ್ನ ಅನುಚರ, ದಾಸ. ನನ್ನದು ಎಂಬ "ಅಹಂ" ನನ್ನಲ್ಲಿ ಇರುವುದು ಬೇಡ ಪ್ರಭು. ನೀನು ಇಂತಹ ಸ್ಥಳದಲಿ ಆಶ್ರಮವನ್ನು ನಿರ್ಮಿಸು ಎಂದು ಆಜ್ಞಾಪಿಸು. ಅದನ್ನು ಶಿರಸಾವಹಿಸಿ ನಡಸುತ್ತೇನೆ" ಎಂದ.

## ಕೈಂಕರ್ಯ

ಭಗವಲ್ಲಾಭದಿಂದ ದೊರೆಯುವ ಫಲ ಎಂದರೆ "ಕೈಂಕರ್ಯ." ಅಂದರೆ ನಿರಂತರವಾಗಿ ಪರಮಾತ್ಮನ ಸೇವೆ. ಅದಕ್ಕೇ ಲಕ್ಷ್ಮಣ "ಅಹಂ ಸರ್ವಂ ಕರಿಷ್ಯಾಮಿ" ಎಂದು ಹೇಳಿ ರಾಮನನ್ನು ಅನುಸರಿಸಿ ಶ್ರೀರಾಮಸೇವೆಯೇ ಪರಮಪುರುಷಾರ್ಥ ಎಂದು ಭಾವಿಸಿದ. ಎಂದೇ ವಾಲ್ಮೀಕಿ ಲಕ್ಷಣೋ ಲಕ್ಷ್ಮೀಸಂಪನ್ನಃ" ಎಂದಿದಾರೆ. ಇಲ್ಲಿ "ಲಕ್ಷ್ಮೀ" ಎಂದರೆ "ಕೈಂಕರ್ಯ ಶ್ರೀ" ಎಂದು ಅರ್ಥ. ಲಕ್ಷ್ಮಣ ''ಕೈಂಕರ್ಯ ಶ್ರೀ" ಯಲ್ಲಿ ಬಹಳ ಅನುರಕ್ತನಾಗಿಬಿಟ್ಟ. ಅದಕ್ಕೆ ವನವಾಸ ಮುಗಿಯುತ್ತ ಬಂದಂತೆ "ಈ ಕೈಕೇಯಿಯು ರಾಮನನ್ನು ಇನ್ನೂ ಕೆಲವು ವರ್ಷಗಳು ಕಾಡಿನಲ್ಲಿರು ಎಂದು ಕೇಳಬಾರದಿತ್ತೆ" ಎಂದು ಹೇಳುತ್ತಾನೆ! ರಾಮನಿಗೆ ವನವಾಸವಾದದ್ದನ್ನು ಕಂಡು ಮೊದಲು ಕೈಕೇಯಿಯನ್ನು ತೆಗಳಿದ ಲಕ್ಷ್ಮಣ ವನವಾಸಕಾಲದಲ್ಲಿ ಶ್ರೀರಾಮಕೈಂಕರ್ಯದ ಸವಿಯನ್ನು ಆಸ್ವಾದಿಸಿದವನಾದಕಾರಣ ಆ ಸವಿಯನ್ನು ಮತ್ತೂ ಸವಿಯಬೇಕೆಂದು ಬಯಸುತ್ತಾನೆ. ಈ ಕೈಂಕರ್ಯವೇ ಶ್ರೀ. ಅದೇ ಆನಂದ. ಅದನ್ನೇ ಎಲ್ಲ ಆಳ್ವಾರುಗಳೂ ಆಚಾರ್ಯರೂ ಬಯಸಿದರು. ಅದನ್ನೇ ಶ್ರೀ ಆಂಡಾಳ್ "ಉನಕ್ಕೇ ನಾಮ್ ಆಳ್ ಚ್ಚೆಯ್ವೋಂ" ಎಂದು ಹೇಳುತ್ತಾ ಜನ್ಮಜನ್ಮಾಂತರಗಳಲ್ಲೂ ಹಾಗೂ ಜನ್ಮಮುಕ್ತಿಯುಂತರವೂ ನಮಗೆ ಬೇಕಾದ ಫಲ ಎಂದರೆ ''ಕೈಂಕರ್ಯ" 'ಭಗವತ್‌ಸೇವೆ.'' ಅದೇ ಭಗವಂತನನ್ನು ಪಡೆದದ್ದಕ್ಕೆ ಪುರುಷಾರ್ಥ ಎನ್ನುತ್ತಾಳೆ.

## 'ಧರ್ಮಗ್ರಂಥ ಶ್ರೀಮದ್ರಾಮಾಯಣ

"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂಬುದು ಗೀತಾಚಾರ್ಯನ ವಾಣಿ. ಧರ್ಮವನ್ನು ಪುನರುತ್ಥಾನಗೊಳಿಸುವ ಸಲುವಾಗಿ ಧರ್ಮವನ್ನು ಮೂಲೋತ್ಪಾಟನಗೊಳಿಸುವುದಕ್ಕಾಗಿ ಆಗಾಗ್ಗೆ ಭಗವದವತಾರ ಆಗುತ್ತದೆ. ಈ ಅವತಾರಗಳ ರಹಸ್ಯ ಧರ್ಮಮಾರ್ಗದಲ್ಲಿ ನಡೆದು ಉಳಿದವರಿಗೆ ಮೇಲ್ಪಂಕ್ತಿ ಹಾಕಿಕೊಡಬೇಕು ಎಂಬುದು.

**ಯದ್ಯದಾ ಚರತಿ ಶ್ರೇಷ್ಠಃ ತತ್ತದೇವೇತರೋ ಜನಃ** ಎಂಬತೆ,

**ಮಹಾಜನೋ ಯೇನ ಗತಸ್ಸ ಪಂಥಾಃ** ಎಂಬ ಆರ್ಯೋಕ್ತಿಯಂತೆ ಮಾನವ ಸಮಾಜ

ವನ್ನು ಧರ್ಮದ ಹಾದಿಯಲ್ಲಿ ಪುನರುಜ್ಜೀವನ ಗೊಳಿಸುವ ಸಲುವಾಗಿಯೇ ಶ್ರೀರಾಮಾವತಾರ ವಾಯಿತು.

ನುಡಿದು ತೋರಿಸುವುದಕ್ಕಿಂತ ನಡೆದು ತೋರಿಸುವುದು ಒಳಿತು ಎಂದು ಶ್ರೀರಾಮ ಲಕ್ಷ್ಮಣಾದಿಗಳು ಮಾನವರೂಪಿನಲ್ಲಿ ಬಂದು ಮಾನವ ತನ್ನ ನಡೆಯನ್ನು ಹೇಗೆ ಸಾಗಿಸಬೇಕು ಎಂದು ಮಾರ್ಗದರ್ಶನ ಮಾಡಿದರು. "ಧರ್ಮವೇ ಸಕಲ ಶ್ರೇಯಸ್ಸಿಗೂ ಮೂಲ, ಧರ್ಮವೇ ಸತ್ಯ ಹಾಗೂ ಶಾಶ್ವತ" ಎಂದು ಪ್ರತಿಪಾದಿಸಿದ, ರಾಮಚಂದ್ರ. "ರಾಮೋ ವಿಗ್ರಹವಾನ್ ಧರ್ಮಃ" ಎಂಬುವ ರೀತಿಯಲ್ಲಿ ಧರ್ಮ ಸ್ವರೂಪವೇ ಮೈದೋರಿ ಇಳೆಯಲ್ಲಿ ಧರ್ಮವನ್ನು ಹೇಗೆ ಅನುಷ್ಠಿಸಬೇಕು ಎಂದು ಆಚರಿಸಿ ತೋರಿಸಿದ.

ಸೀತೆಯೂ ಧರ್ಮಪ್ರವರ್ತನೆಯ ಕಾರ್ಯದಲ್ಲಿ ಶ್ರೀರಾಮನಿಗೆ ಸಹಚರಿಯಾಗಿನಡೆದಳು.

**ರಾಘವತ್ವೇಽ ಭವತ್ ಸೀತಾ ರುಕ್ಮಿಣೀ ಕೃಷ್ಣಜನ್ಮನಿ ।**
**ಅನ್ಯೇಷು ಚ ಅವತಾರೇಷು ವಿಷ್ಣೋರೇಷಾನಪಾಯಿನಿ ॥**

ಎಂಬುದಾಗಿ ಅನಪಾಯಿನಿಯೆನಿಸಿ, ಅನವರತ ಶ್ರೀ ಮಹಾವಿಷ್ಣುವಿನ ಅನುವರ್ತಿನಿಯಾದ ಸಾಕ್ಷಾತ್ ಶ್ರೀದೇವಿಯೇ ಸೀತಾರೂಪವಳಾಗಿ ಮೂಡಿ ಬಂದಳು.

ತನ್ನ ನಡೆಯಲ್ಲಿ ಸೀತೆ "ಭಗವದ್ಭಾಗವತ" ಅಪಚಾರ ಎಷ್ಟು ಕ್ರೂರತರವಾದದು ಎಂಬುದನ್ನು ಪ್ರತಿಪಾದಿಸಿದಳು.

ರಾಮಾಯಣದಲ್ಲಿ ಸೀತೆಮಾಡಿದ ತಪ್ಪುಗಳು ಎರಡು. ಒಂದುದೊಡ್ಡದು, ಮತ್ತೊಂದು ಚಿಕ್ಕದು.

ಪರಮಾತ್ಮ ಸ್ವರೂಪನಾದ ಶ್ರೀರಾಮ ಪಕ್ಕದಲ್ಲಿರುವಾಗ ಅವನನ್ನು ಬಿಟ್ಟು, ಕ್ಷುದ್ರವಾದ ಮಾಯಾ ಜಿಂಕೆಗೆ ಆಶೆಪಟ್ಟದ್ದು ಒಂದು ತಪ್ಪು. ಅದನ್ನು ಸಣ್ಣದು ಎನ್ನಬಹುದು. ಆದರೆ ಇದರ ಪರಿಣಾಮ ಎಷ್ಟು ಘೋರ ಎಂದು ಸೀತೆಯೇ ಹೇಳುತ್ತಾಳೆ.

**ನೂನಂ ಸಕಾಲೋ ಮೃಗರೂಪಧಾರೀ**
**ಮಾಮಲ್ಪಭಾಗ್ಯಾಂ ಲುಲುಭೇ ತದಾನೀಂ ।**
**ಯತ್ರಾರ್ಯಪುತ್ರಂ ವಿಸಸರ್ಜ ಮೂಢಾ**
**ರಾಮಾನುಜಂ ಲಕ್ಷ್ಮಣಪೂರ್ವಜಂ ಚ॥**

"ಅಲ್ಪ ಭಾಗ್ಯಳಾಗಬೇಕಾದುದರಿಂದಲೇ ನಾನು ರಾಮಾನುಜನನ್ನು, ಆರ್ಯಪುತ್ರನನ್ನು ಬಿಟ್ಟು ಮಾಯಾಜಿಂಕೆಗೆ ಆಸೆಪಟ್ಟೆ. ನಾನು ಎಂಥ ಮೂಢೆ ಎನ್ನುವುದು ಇದೀಗ ಸ್ಪಷ್ಟವಾಗುತ್ತಿದೆ" ಎಂದು ಸೀತೆ ಹಲುಬುತ್ತಾಳೆ-ಸಾಮಾನ್ಯ ಮಾನವ ಸ್ತ್ರೀಯಂತೆ. ನಿಜವಾಗಿಯೂ ಭಗವದಪರಾಧವೇ ಘೋರ. ಅದಕ್ಕಿಂತ ಘೋರತರವಾದುದು ಭಾಗವದಪರಾಧ. ಸೀತೆ ಅರಣ್ಯದಲ್ಲಿ ಲಕ್ಷ್ಮಣನನ್ನೂ ಜತೆಗೆ ಭ್ರಾತೃವತ್ಸಲನಾದ ಭರತನನ್ನೂ ನಿಂದಿಸಿದಳು. ಈ ಭಾಗವದಪಚಾರಕ್ಕಿಂತ ಘೋರ ಪಾತಕ ಮತ್ತೊಂದಿಲ್ಲ. ಇದು ಎಷ್ಟು ಘೋರ ಎನ್ನುವುದನ್ನು ಒಂದು ಉದಾಹರಣೆ ಸ್ಪಷ್ಟಪಡಿಸುತ್ತದೆ. ಸಮುದ್ರದಲ್ಲಿ ವಾಸಿಸುವ ಅತಿ ದೊಡ್ಡ ಮೀನಿಗೆ "ತಿಮಿ" ಎಂದು ಹೆಸರು. ಆ ಅತಿ ದೊಡ್ಡ ಮೀನನ್ನು ನುಂಗುತ್ತದೆ "ತಿಮಿಂಗಿಲ"ವೆಂಬ ಮೀನು. ಆ ತಿಮಿಂಗಿಲವನ್ನು ನುಂಗುವ ಮೀನು

"ತಿಮಿಂಗಿಲಗಿಲ" ನುಂಗುತ್ತದೆ. ಆ "ತಿಮಿಂಗಿಲಗಿಲ"ವನ್ನೂ "ತಿಮಿಂಗಿಲಗಿಲಗಿಲ" ನುಂಗುತ್ತದೆ. ಹಾಗೆಯೇ ಅನೇಕ ಜನ್ಮಾರ್ಜಿತವಾದ ಪುಣ್ಯವೂ ಅದರ ಫಲ ಸ್ವರೂಪವಾಗಿ ಉಂಟಾಗಿರುವ ಭಗವದ್ಭಕ್ತಿಯನ್ನೂ ಭಾಗವದಪಚಾರವೆಂಬ "ತಿಮಿಂಗಿಲಗಿಲ" ನುಂಗಿ ಹಾಕುತ್ತದೆ.

ಸೀತೆ ಲಕ್ಷ್ಮೀ ಸ್ವರೂಪಿಣಿ. ಅವಳು ಇಂತಹ ಅಪಚಾರ ಮಾಡುತ್ತಾಳೆಯೇ ಎಂಬ ಸಂಶಯ ಸಹಜವಾಗಿ ಇಲ್ಲಿ ಮೂಡುತ್ತದೆ. ಇಲ್ಲಿ ಸೀತೆ ಭಾಗವದಪಚಾರ ಎಂತಹ ಘೋರಪಾತಕ ಎಂಬುದನ್ನು ಜಗತ್ತಿಗೆ ಪ್ರದರ್ಶಿಸಿದಳು ಎಂದು ತಿಳಿಯಬೇಕು. ರಾಮಾಯಣದಲ್ಲಿನ ಎಲ್ಲಾ ಪಾತ್ರಗಳೂ ತಮ್ಮ ತಮ್ಮ ಧರ್ಮವನ್ನು ಯಶಸ್ವಿಯಾಗಿ ನಿರೂಪಿಸಿ ಮಾನವಕೋಟಿಗೆ ಮಾರ್ಗದರ್ಶನ ನೀಡಿವೆ. ಬೆಳಕನ್ನು ತೋರಿವೆ. ಧರ್ಮವೇ ಸತ್ಯ, ಅದು ನಿತ್ಯ. ಅದು ಆಧಾರವುಳ್ಳದು. ಧರ್ಮದ ಹಾದಿಯೇ ಶ್ರೇಯಸ್ಸಿಗೆ ಪೂರಕ ಎಂದು ಧರ್ಮದ ತಾರಕ ಮಂತ್ರವನ್ನು ಘೋಷಿಸುತ್ತದೆ.

### ಮೋಕ್ಷಶಾಸ್ತ್ರ ಶ್ರೀಮದ್ರಾಮಾಯಣ

ನಾಲ್ಕು ಪುರುಷಾರ್ಥಗಳಲ್ಲಿ ಧರ್ಮಕ್ಕೇ ಅಗ್ರಸ್ಥಾನ. ಧರ್ಮದಿಂದ ಅರ್ಥ, ಧರ್ಮದಿಂದ ಕಾಮ, ಧರ್ಮದಿಂದಲೇ ಮೋಕ್ಷ. ಈ ತತ್ವವನ್ನೇ ಪ್ರತಿಪಾದಿಸುತ್ತದೆ ಶ್ರೀಮದ್ರಾಮಾಯಣ.

### ಶರಣಾಗತಿಯ ವೈಭವ

ಮೋಕ್ಷವನ್ನು ಪಡೆಯಲು ಶರಣಾಗತಿ–ಅಂದರೆ ಪ್ರಪತ್ತಿಯೇ ಉಪಾಯ. ರಾಮಾಯಣದ ಪ್ರತಿಯೊಂದು ಕಾಂಡದಲ್ಲೂ ಶರಣಾಗತಿಯ ವೈಭವ ಎದ್ದು ಕಾಣುತ್ತಿದೆ. ಬಾಲಕಾಂಡದಲ್ಲಿ ದೇವತೆಗಳು ಶ್ರೀ ಮಹಾವಿಷ್ಣುವನ್ನು ಮೊರೆ ಹೊಕ್ಕು "ರಾವಣನ ಹಿಂಸೆಯನ್ನು ಸಹಿಸಲು ಸಾಧ್ಯವಿಲ್ಲ, ಕಾಪಾಡು" ಎಂದು ಶರಣಾಗತರಾಗುತ್ತಾರೆ. ಶರಣಾಗತರ ಇಷ್ಟಾರ್ಥವನ್ನು ಸಲ್ಲಿಸುವ ಸಲುವಾಗಿ ಸಾಕ್ಷಾದ್ವಿಷ್ಣುವೇ ತಾನು ರಾಮನಾಗಿ ಅವತರಿಸಿ ನಿಮ್ಮೆಲ್ಲರ ಆರ್ತಿಯನ್ನು ಪರಿಹರಿಸುತ್ತೇನೆ ಎಂದು ಅಭಯ ಕೊಡುತ್ತಾನೆ,

ಬಾಲಕಾಂಡದಲ್ಲಿ ಹೀಗೆ ದೇವತೆಗಳು ಶರಣಾಗತಿಯಾದರೆ, ಅಯೋಧ್ಯಾಕಾಂಡದಲ್ಲಿ ಭರತ ರಾಮನಲ್ಲಿ ಶರಣಾಗತಿ ಮಾಡುತ್ತಾನೆ. ಭರತನ ಶರಣಾಗತಿಗೆ ಫಲವಾಗಿ ರಾಮ ತತ್ಕ್ಷಣದಲ್ಲಿ ಪಾದುಕೆಗಳನ್ನು ಅನುಗ್ರಹಿಸಿ ಹದಿನಾಲ್ಕು ವರ್ಷಗಳು ಕಳೆದ ನಂತರ ಅಯೋಧ್ಯೆಗೆ ಬರುವುದಾಗಿ ಆಶ್ವಾಸನವನ್ನೀಯುತ್ತಾನೆ. ಅರಣ್ಯ ಕಾಂಡದಲ್ಲಿ ದಂಡಕಾರಣ್ಯದ ಋಷಿ ಶ್ರೇಷ್ಠರೆಲ್ಲ ಶ್ರೀ ರಾಮನಲ್ಲಿ ಶರಣಾಗತಿ ಮಾಡುತ್ತಾರೆ, ರಾಕ್ಷಸರ ಬಾಧೆಯಿಂದ ತಮ್ಮನ್ನು ರಕ್ಷಿಸಬೇಕು ಎಂದು ಬೇಡಿಕೊಳ್ಳುತ್ತಾರೆ. ಅವರನ್ನು ರಾಮ ಸಮಾಧಾನಪಡಿಸಿ ಅವರಿಗೆ ಅಭಯವನ್ನು ಕೊಡುತ್ತಾನೆ.

ಕಿಷ್ಕಿಂಧಾ ಕಾಂಡದಲ್ಲಿ ಸುಗ್ರೀವ ರಾಮನಲ್ಲಿ ಶರಣಾಗತಿ ಮಾಡುತ್ತಾನೆ. ಸುಗ್ರೀವನಿಗೆ ಅಭಯವನ್ನಿತ್ತು ಅದರಂತೆಯೇ ವಾಲಿಯನ್ನು ನಿಗ್ರಹಿಸಿ ಸುಗ್ರೀವನಿಗೆ ರಾಜ್ಯವನ್ನೂ ಕಳೆದುಕೊಂಡ ಪತ್ನಿಯನ್ನೂ ಅನುಗ್ರಹಿಸುತ್ತಾನೆ.

ಸುಂದರ ಕಾಂಡದಲ್ಲಿ ಕಾಕಾಸುರನು ರಾಮನಲ್ಲಿ ಶರಣಾಗತಿ ಮಾಡಿದ ಪ್ರಸಂಗವನ್ನು ಸೀತೆ ಹನುಮಂತನಿಗೆ ಹೇಳುತ್ತಾಳೆ. ಇಂದ್ರನ ಮಗನಾದ ಜಯಂತ ಕಾಕರೂಪದಲ್ಲಿ ಬಂದು ಸೀತೆಯಲ್ಲಿ ಮಹದಪಚಾರ ಮಾಡುತ್ತಾನೆ. ಇದನ್ನು ಕಂಡ ಶ್ರೀ ರಾಮ ತೃಣವನ್ನೇ ಬ್ರಹ್ಮಾಸ್ತ್ರವನ್ನಾಗಿ ಅಭಿಮಂತ್ರಿಸಿ ಬಿಟ್ಟಾಗ ಕಾಕಾಸುರ ಮೂರು ಲೋಕಗಳಲ್ಲೂ ಆಶ್ರಯವನ್ನು ಪಡೆಯಲು ಸಾಧ್ಯವಾಗದೆ

ಕೊನೆಗೆ ಶ್ರೀ ರಾಮನಲ್ಲೇ ಶರಣಾಗುತ್ತಾನೆ. ವಧಾರ್ಹನಾಗಿದ್ದರೂ ಸಹ ಶರಣಾಗತರನ್ನು ರಕ್ಷಿಸಬೇಕು ಎಂಬ ವ್ರತವುಳ್ಳ ದೃಢವ್ರತನಾದ ಶ್ರೀ ರಾಮ ಆ ಕಾಗೆಯ ಬಲಗಣ್ಣನ್ನು ಮಾತ್ರ ಬ್ರಹ್ಮಾಸ್ತ್ರಕ್ಕೆ ತುತ್ತಾಗಿಸಿ, ಆ ಕಾಕಾಸುರನನ್ನು ಕಾಪಾಡುತ್ತಾನೆ.

ತ್ರಿಜಟೆ ತನಗಾದ ಸ್ವಪ್ನವನ್ನು ರಾಕ್ಷಸಿಯರಿಗೆ ಹೇಳಿದಾಗ, ಅವರು ಬೆದರಿ ಸುಮ್ಮನಿರುತ್ತಾರೆ ಆಗ ತ್ರಿಜಟೆ ಸೀತೆಯನ್ನು ಹಿಂಸೆ ಮಾಡದೆ ಆವಳಲ್ಲಿ ಶರಣಾಗತರಾಗುವಂತೆ ರಾಕ್ಷಸಿಯರಿಗೆ ಹೇಳುತ್ತಾಳೆ.

ಯುದ್ಧಕಾಂಡದಲ್ಲಿ ರಾಕ್ಷಸೇಶ್ವರನ ಅನುಜನಾದ ವಿಭೀಷಣ ಶ್ರೀ ರಾಮನಲ್ಲಿ ಶರಣಾಗತನಾಗುತ್ತಾನೆ.

ಹೀಗೆ ರಾಮಾಯಣದ ಪ್ರತಿಯೊಂದು ಕಾಂಡದಲ್ಲೂ ಶರಣಾಗತಿಯು ಪೃಥಕ್ ವಿವರಿಸಲ್ಪಟ್ಟಿದೆ. ದೋಷಯುಕ್ತರಾದರೂ ಭಗವಂತನಲ್ಲಿ ಶರಣು ಹೋಗುವುದರಿಂದ ಮೋಕ್ಷವು ಸಿದ್ಧ ಎಂದು ವಾಲ್ಮೀಕಿ ನಿರೂಪಿಸುತ್ತಾರೆ. ಸರ್ವ ಪಾಪಗಳಿಂದ ಬಿಡುಗಡೆ ಹೊಂದಿ ಮೋಕ್ಷ ಸಾಮ್ರಾಜ್ಯವನ್ನು ಪಡೆಯಲು ಸಾಧನೋಪಾಯವೇ ಶರಣಾಗತಿ. ಇದನ್ನು ನಿರೂಪಿಸುವ ಶ್ರೀಮದ್ರಾಮಾಯಣಕ್ಕೆ ಮೋಕ್ಷಶಾಸ್ತ್ರ, ಶರಣಾಗತಶಾಸ್ತ್ರ ಎಂಬ ಘನತೆ ಏರ್ಪಟ್ಟಿದೆ.

## ಧರ್ಮಶಾಸ್ತ್ರ ಶ್ರೀಮದ್ರಾಮಾಯಣ

ಮಾನವ ರೂಪದಲ್ಲಿ ಅವತರಿಸಿದ ಶ್ರೀ ರಾಮಚಂದ್ರ ತನ್ನ ನಡೆಯಿಂದ ಸಾಮಾನ್ಯ ಮತ್ತು ವಿಶೇಷ ಧರ್ಮಗಳನ್ನು ಹೇಗೆ ಆಚರಿಸಬೇಕು ಎಂದು ಸ್ವತಃ ನಡೆದು ತೋರಿದ್ದಾನೆ. ಕೌಸಲ್ಯೆ ರಾಮನನ್ನು ಕುರಿತು "ಮಾತೃವಾಕ್ಯ ಪರಿಪಾಲನೆ ಮಾಡುವುದು ಧರ್ಮವೇ ಅಲ್ಲವೇ ? ಅದರಂತೆ ನಾನು ಹೇಳುತ್ತೇನೆ. ನೀನು ಅಯೋಧ್ಯೆಯಲ್ಲೇ ಇರು" ಎನ್ನುತ್ತಾಳೆ.

ಆಗ ರಾಮ, "ತಾಯೆ ! ನೀ ಹೇಳುವುದು ಸರಿ. ಅದರಂತೆಯೇ ಆಗಲಿ. ಮೊದಲು ತಂದೆ ಹೇಳುವ ಮಾತನ್ನು ನಡೆಸಿ ಆಮೇಲೆ ನೀ ಹೇಳುವ ಮಾತನ್ನೂ ನಡೆಸುತ್ತೇನೆ" ಎನ್ನುತ್ತಾನೆ, ಒಂದೊಂದು ಸಂದರ್ಭದಲ್ಲೂ ಔಚಿತ್ಯವನ್ನರಿತು ಧರ್ಮಕ್ಕೆ ಲೋಪ ಬಾರದಂತೆ ಸಾಮಾನ್ಯ-ವಿಶೇಷ ಧರ್ಮಗಳನ್ನು ಆಚರಿಸಿ ತೋರಿದನಾದ್ದರಿಂದಲೇ ವಾಲ್ಮೀಕಿ ಮುಕ್ತಕಂಠದಿಂದ "ರಾಮೋ ವಿಗ್ರಹವಾನ್ ಧರ್ಮಃ" ಎಂದು ಅನೇಕ ಸಾರಿ ಹೇಳಿರುತ್ತಾರೆ,

ಶೇಷಾವತಾರಿಯೆನಿಸಿದ ಲಕ್ಷ್ಮಣ ಶೇಷಿಯಾದ ಪರಮಾತ್ಮನಿಗೆ "ಶೇಷಭೂತ ತಾನು" ಎಂದು ತೋರಿದ. "ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ" ಎಂದು ಶ್ರೀ ಕೃಷ್ಣ ಹೇಳಿದ. ಅಂತಹ ದುರ್ಲಭನಾದ ಮಹಾತ್ಮನಾದ ಲಕ್ಷ್ಮಣ ಸರ್ವಸ್ವವೂ ಶ್ರೀ ರಾಮನೇ ಎಂಬ ಮನೋಭಾವದಿಂದ ತನ್ನ ಸೇವಾ ನಿಷ್ಠೆಯನ್ನು ತೋರಿಸಿದ.

ಭರತನದೋ ಪಾರತಂತ್ರ್ಯವೇ ಮೂರ್ತಿವೆತ್ತಂತಿರುವ ಪಾತ್ರ. ಪರಮಾತ್ಮನೊಬ್ಬನೇ ಸರ್ವಸ್ವತಂತ್ರ ಉಳಿದ ಜೀವರಾಶಿಗಳೆಲ್ಲ ಅವನಿಗೆ ಅಧೀನರು. . . . ಈ ಪಾರತಂತ್ರ್ಯ ತತ್ವವನ್ನು ಭರತ ತನ್ನ ನಡೆಯಲ್ಲಿ ತೋರಿದ್ದಾನೆ. ಇನ್ನು ಶತ್ರುಘ್ನ ಭಾಗವತ ಭಕ್ತ. ಭಗವದ್ಭಕ್ತಿಗಿಂತ ಭಾಗವತ ಭಕ್ತಿ ಅತ್ಯಂತ ಶ್ರೇಷ್ಠವಾದುದು ಎಂಬ ತತ್ವವನ್ನು ನಿರೂಪಿಸಿದ, ಈ ಮಹಾನುಭಾವ ಭಗವದ್ಭಕ್ತರಾದರೋ ಭಗವಂತನನ್ನು ಸೇವಿಸುವುದರಲ್ಲೇ ಮಗ್ನರಾಗಿ ಭಾಗವತರನ್ನು ನಿರ್ಲಕ್ಷಿಸಿದ

ಪಾಪಕ್ಕೆ ಗುರಿಯಾಗಬಹುದು, ಭಾಗವತರ ನಿರ್ಲಕ್ಷ್ಯವೆಂಬ ಪಾಪವನ್ನೇ ಕಂಡರಿಯದವ ಶತ್ರುಘ್ನ, ಅವನಾದರೋ ಸಾಮಾನ್ಯನಲ್ಲ. ಅಂದರೆ ಬಾಹ್ಯ ಶತ್ರುಗಳನ್ನು ಮಾತ್ರವಲ್ಲದೆ ಕಾಮ, ಕ್ರೋಧ, ಲೋಭ ಮೋಹ, ಮದ, ಮಾತ್ಸರ್ಯಗಳೆಂಬ ಅಂತಶ್ಶತ್ರುಗಳನ್ನೂ ನಿಗ್ರಹಿಸಿ ಶತ್ರುಘ್ನ ನಾಮವನ್ನು ಅನ್ವರ್ಥವಾಗಿಸಿದ ಮಹಾನುಭಾವ. ರಾಮನ ತನಕ ಹೋದವನೇ ಅಲ್ಲ ಅವನು. ರಾಮಭಕ್ತನಾದ ಭಾಗವತ, ಭರತನ ಅಡಿಯಾಳಾಗಿಯೇ ಅವನ ನೆರಳಿನಲ್ಲೇ ಇದ್ದು ಭಾಗವತ ಭಕ್ತನೆನಿಸಿ ಭಗವದನುಗ್ರಹಕ್ಕೆ ವಿಶೇಷ ರೀತಿಯಲ್ಲಿ ಪಾತ್ರನಾದವ ಶತ್ರುಘ್ನ.

**ಅನಾದೃತ ಸುತಂ ಗೇಹೀ ಪುರುಷಂ ನಾಭಿನಂದತೀ**
**ತಥಾನರ್ಚಿತಸದ್ಭಕ್ತಂ ಭಗವಾನ್ ನಾಭಿನಂದತಿ**

ಭಾಗವತರನ್ನು ಆಶ್ರಯಿಸಿದವರಿಗೆ ಭಗವದನುಗ್ರಹ ಸಿದ್ಧ ಎಂಬುದನ್ನು ಒಂದು ಉದಾಹರಣೆಯಿಂದ ಚೆನ್ನಾಗಿ ನಿರೂಪಿಸಬಹುದು.

ಒಮ್ಮೆ ಒಬ್ಬ ಬ್ರಾಹ್ಮಣ ಒಬ್ಬ ಶ್ರೀಮಂತನ ಮನೆಯ ಹೊರ ಅಂಗಳದಲ್ಲಿ ಕುಳಿತಿದ್ದ. ಆಗ ಅಲ್ಲೇ ಆಟ ಆಡುತ್ತಿದ್ದ ಆ ಶ್ರೀಮಂತನ ಮಗು ಬಂದು ಆ ಬ್ರಾಹ್ಮಣನನ್ನು ಮುಟ್ಟಿತು. ಮಗು ತನ್ನನ್ನು ಮುಟ್ಟಿದ್ದರಿಂದ ಮೈಲಿಗೆಯಾಯಿತು ಎಂದು ಆ ಬ್ರಾಹ್ಮಣ ಮಗುವನ್ನು ಚೆನ್ನಾಗಿ ಥಳಿಸಿದ. ಆ ಮಗು ಅಳುತ್ತಾ ತನ್ನ ತಂದೆಯ ಹತ್ತಿರ ಹೋಗಿ ದೂರಿಟ್ಟಿತು. ಮಗುವಿನ ಸಂಕಟ ತಂದೆಗೆ ತಟ್ಟಿತು. ಆ ತಂದೆ ಹೊರಬಂದು ಆ ಮಗುವನ್ನು ಮುದ್ದಾಡಿ ಆ ಬ್ರಾಹ್ಮಣನನ್ನು ಗದರಿಸಿ ಹೊರಗಟ್ಟಿದ.

ಅದೇ ಅಂಗಳದಲ್ಲೇ ಮತ್ತೊಬ್ಬ ಬ್ರಾಹ್ಮಣ ಬಂದು ಕುಳಿತ. ಮಗು ಆ ಬ್ರಾಹ್ಮಣನನ್ನೂ ಮುಟ್ಟಿತು. ಮಗು ತನ್ನ ಹತ್ತಿರ ಬಂದದ್ದನ್ನು ಕಂಡ ಅವನು ಅದನ್ನು ಮುದ್ದಾಡಿ ಅದರ ಕೈಯಲ್ಲಿ ಮಿಠಾಯಿಯನ್ನು ಕೊಟ್ಟ. ಇದನ್ನೂ ಮಗು ಹೋಗಿ ಸಂತೋಷದಿಂದ ಅಪ್ಪನಿಗೆ ಹೇಳಿತು. ಆಗ ಶ್ರೀಮಂತ ಹೊರಗಿದ್ದ ಬ್ರಾಹ್ಮಣನನ್ನು ಮರ್ಯಾದೆಯಿಂದ ಒಳಗೆ ಕರೆದು ಅವನಿಗೆ ಸತ್ಕಾರ ಮಾಡಿ ಬೇಕಾದಷ್ಟು ದಕ್ಷಿಣೆಯನ್ನು ಕೊಟ್ಟು ಅವನನ್ನು ತುಷ್ಟಿಪಡಿಸಿದ.

ಭಾಗವತರೆಲ್ಲ ಭಗವಂತನಿಗೆ ಮಕ್ಕಳು. ಭಾಗವತರನ್ನು ತುಷ್ಟಿಪಡಿಸಿದರೆ ಭಗವಂತನೂ ತುಷ್ಟನಾಗುತ್ತಾನೆ. ಕೇವಲ ಭಗವದ್ಭಕ್ತಿಯಿದ್ದು ಭಾಗವತ ನಿಷ್ಠೆಯಿಲ್ಲದಿದ್ದರೆ ಅದರಿಂದ ಲಾಭವಿಲ್ಲ. ಈ ಅಂಶವನ್ನು ಶತ್ರುಘ್ನ ತನ್ನ ಪಾತ್ರದಲ್ಲಿ ಘನವಾಗಿ ನಿರ್ವಹಿಸಿದ್ದಾನೆ,

ಸುಗ್ರೀವ ಸನ್ಮಿತ್ರನ ಲಕ್ಷಣಗಳನ್ನು ತೋರಿದ್ದಾನೆ. ಮಿತ್ರನ ದುಃಖದಲ್ಲಿ ಪಾಲ್ಗೊಂಡು ಅವನ ದುಃಖವನ್ನು ಪರಿಹರಿಸುವುದರಲ್ಲೇ ನಿರತನಾಗಿರುವವನೇ ನಿಜವಾದ ಮಿತ್ರ. ಮಿತ್ರನ ಮಿತ್ರತ್ವದ ಒರೆಗಲ್ಲು ಮಿತ್ರನಿಗೆ ಕಷ್ಟಕಾಲದಲ್ಲಿ ನೆರವಾಗುವುದೇ ಆಗಿದೆ.

ವಿಭೀಷಣ ವಿಶೇಷ ಧರ್ಮವನ್ನು ಆಚರಿಸಿ ತೋರಿದ್ದಾನೆ. ಜೀವನದಲ್ಲಿ ವ್ಯಕ್ತಿಗೆ ಹಲವು ಬಾರಿ ಧರ್ಮಸಂಕಟವೇರ್ಪಡುತ್ತದೆ. ಸಾಮಾನ್ಯ ಧರ್ಮಕ್ಕೂ, ವಿಶೇಷ ಧರ್ಮಕ್ಕೂ ಘರ್ಷಣೆ ಒದಗುತ್ತದೆ. ಅಂತಹ ಘರ್ಷಣೆ ಒದಗಿದಾಗ ವ್ಯಕ್ತಿ ಸಾಮಾನ್ಯ ಧರ್ಮವನ್ನು ಬಿಟ್ಟು ವಿಶೇಷ ಧರ್ಮವನ್ನೇ ಪರಿಗ್ರಹಿಸಬೇಕು ಎಂಬ ಅಂಶವನ್ನು ವಿಭೀಷಣ ತನ್ನ ನಡೆಯಿಂದ ತಿಳಿಸಿದ್ದಾನೆ.

ರಾವಣ ಜ್ಯೇಷ್ಠಭ್ರಾತೃ ನಿಜ. ಕಷ್ಟಕಾಲದಲ್ಲಿ ಪಿತೃಸಮಾನನಾದ ಹಿರಿಯಣ್ಣನನ್ನು ಬಿಡಬಾರದು. ಇದು ಸಾಮಾನ್ಯ ಧರ್ಮ.

ತಂದೆ, ತಾಯಿ, ಗುರು, ಬಂಧು, ಸಹೋದರ, ಸಖ, ಸರ್ವಸ್ವವೂ ಆಗಿ ಒಪ್ಪುವ ಸಾಕ್ಷಾತ್ ಪರತತ್ವಸ್ವರೂಪವೆನಿಸಿ ಮೈದೋರಿರುವ ಶ್ರೀರಾಮ. ಅವನನ್ನು ಸೇರುವುದು ವಿಶೇಷಧರ್ಮ.

ಗೀತಾಚಾರ್ಯ ಹೇಳಿದ "ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ" ಎಂದು. ತಂದೆ, ತಾಯಿ, ಗುರು, ದೈವ, ಸಖ, ಗತಿ, ಪ್ರಭು, ಸಾಕ್ಷಿ ಎಲ್ಲ ನಾನೇ ಎಂದು. ಪರಮಾಪದ್ಗತ ಸ್ಯಾಪಿ ಧರ್ಮೇಮಮ ಮತಿರ್ಭವೇತ್.

ಜ್ಞಾನಿಯಾದ ವಿಭೀಷಣ ಎಲ್ಲವನ್ನೂ ಅರಿತವ. ಆದ್ದರಿಂದಲೇ ರಾವಣನನ್ನು ಬಿಟ್ಟ. ದುರ್ವೃತ್ತನಾದ ರಾವಣನನ್ನು ಬಿಟ್ಟು ಸರ್ವಲೋಕಶರಣ್ಯನೆನಿಸಿದ ಶ್ರೀ ರಾಮನನ್ನು ಸೇರಿದ. ಸಾಮಾನ್ಯ ಧರ್ಮಕ್ಕೂ ವಿಶೇಷ ಧರ್ಮಕ್ಕೂ ತಿಕ್ಕಾಟ ಉಂಟಾದಾಗ ಸಾಮಾನ್ಯ ಧರ್ಮವನ್ನು ಬಿಟ್ಟು ವಿಶೇಷ ಧರ್ಮವನ್ನೇ ಪರಿಗ್ರಹಿಸಬೇಕು ಎಂಬ ಅಂಶವನ್ನು ವಿದಿತವಾಗಿಸಿದೆ.

ಹನುಮಂತನು ಉತ್ತಮ ಸೇವಕನ ಲಕ್ಷಣವನ್ನೂ, ದಶರಥನು ತಂದೆಯಾದವ ಹೇಗಿರ ಬೇಕು ಎಂಬುದನ್ನು ನಿರೂಪಿಸಿದ್ದಾರೆ.

ಇನ್ನು ಸೀತೆ ಪತಿವ್ರತಾ ಶಿರೋಮಣಿಯೆನಿಸಿ ಸ್ತ್ರೀ ಕುಲಕ್ಕೆ ತಿಲಕಪ್ರಾಯಳಾಗಿ ಬೆಳಗಿದವಳು.

ಹೀಗೆ ರಾಮಾಯಣದಲ್ಲಿ ಪ್ರತಿಯೊಂದು ಪಾತ್ರವೂ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಕಡೆ ಯಲ್ಪಟ್ಟಿದೆ. ವಾಲ್ಮೀಕಿ ರಾಮಾಯದಲ್ಲಿ ವರ್ಣಿಸಲ್ಪಟ್ಟಿರುವ ಆ ರಾಮರಾಜ್ಯ ಅನುಪಮವಾ ದುದು. ಅದು ಅಸದೃಶ. ಅಂಥ ರಾಜ್ಯದ ಕಲ್ಪನೆಯಾಗಬೇಕಾದರೆ ಪ್ರತಿಯೊಬ್ಬರು ಹೇಗೆ ನಡೆದು ಕೊಳ್ಳಬೇಕೆಂಬುದನ್ನು ಚಿತ್ರಿಸಿದ್ದಾರೆ ವಾಲ್ಮೀಕಿ. ಕಲ್ಯಾಣರಾಜ್ಯ ಅಸ್ತಿತ್ವಕ್ಕೆ ಬರಬೇಕಾದರೆ ಎಂತಹ ಆದರ್ಶವನ್ನು ಪ್ರಜೆಗಳೆಲ್ಲ ಅನುಸರಿಸಬೇಕು ಎಂಬುದನ್ನೂ ಹೇಳಿದ್ದಾರೆ ವಾಲ್ಮೀಕಿ.

## ವಾಲ್ಮೀಕಿ ರಾಮಾಯಣದ ಔಚಿತ್ಯ

ಭಾರತದಲ್ಲಿ ಮಹಾಕವಿಗಳು ಎಷ್ಟು ಜನರಿದ್ದಾರೋ ಅಷ್ಟೇ ಸಂಖ್ಯೆಯಲ್ಲಿ ರಾಮಾಯಣ ಗಳೂ ಬೆಳೆದಿವೆ. ಕಂಬರಾಮಾಯಣ, ತುಲಸೀ ರಾಮಾಯಣ, ಆನಂದ ರಾಮಾಯಣ, ಅಧ್ಯಾತ್ಮ ರಾಮಾಯಣ ಮುಂತಾಗಿ ಹಲವಾರು ರಾಮಾಯಣಗಳುಂಟು, ಇವೆಲ್ಲ ಇದ್ದಾಗ್ಯೂ ವಾಲ್ಮೀಕಿ ರಾಮಾಯಣಕ್ಕೆ ಒಂದು ವಿಶಿಷ್ಟವಾದ ಸ್ಥಾನವುಂಟು. ಇದಕ್ಕೆ ಅನೇಕ ಕಾರಣಗಳುಂಟು.

ಮೊದಲನೆಯದಾಗಿ ವಾಲ್ಮೀಕಿ ರಾಮಾಯಣ ಆದಿಕಾವ್ಯವೆನಿಸಿದೆ. ಉಳಿದ ಎಲ್ಲ ರಾಮಾಯ ಣಗಳು ಕಾಲಾನುಕ್ರಮದಲ್ಲಿ ವಾಲ್ಮೀಕಿ ರಾಮಾಯಣವನ್ನು ಅನುಸರಿಸಿ ಬಂದವು. ಯಾವುದೇ ಕವಿ ರಾಮಾಯಣವನ್ನು ಬರೆಯುವಾಗಲೂ ವಾಲ್ಮೀಕಿಯನ್ನು ಅನುಸರಿಸದೆ ಇಲ್ಲ.

ಎರಡನೆಯದಾಗಿ ಉಳಿದೆಲ್ಲ ರಾಮಾಯಣಗಳೂ ವಾಲ್ಮೀಕಿ ರಾಮಾಯಣದಿಂದ ಆಯ್ದುವು ಗಳು. ಎಂದರೆ ಕೆಲಕೆಲ ಕಥಾ ಭಾಗಗಳು ಕಲ್ಪಿತವೂ ಆಗಿವೆ; ಆದರೆ ವಾಲ್ಮೀಕಿಯಾದರೋ ಬ್ರಹ್ಮನ ಅನುಗ್ರಹದಿಂದ ರಾಮಾಯಣವನ್ನು ರಚಿಸಿದರು. ಬ್ರಹ್ಮನ ಮಡದಿಯಾದ ವಾಗ್ದೇವಿ ತಾನಾಗಿಯೆ ವಾಲ್ಮೀಕಿಯ ನಾಲಿಗೆಯಲ್ಲಿದ್ದು ರಾಮಾಯಣವನ್ನು ಹೊರಹೊಮ್ಮಿಸಿದಳು,

**ರಹಸ್ಯಂ ಚ ಪ್ರಕಾಶಂಚ ಯದ್ವೃತ್ತಂ ತಸ್ಯ ಧೀಮತಃ ।**

ಎಂಬುದಾಗಿ ಬ್ರಹ್ಮ ವಾಲ್ಮೀಕಿಯನ್ನು ಅನುಗ್ರಹಿಸಿದ.

"ನಿನಗೆ ರಾಮಾಯಣದಲ್ಲಿನ ಸೂಕ್ಷ್ಮಾತಿ ಸೂಕ್ಷ್ಮ ದೃಶ್ಯಗಳು- ಅವು ರಹಸ್ಯವೇ ಆದರೂ ವೇದ್ಯವಾಗಲಿ" ಎಂದು ಹರಸಿದ ಬ್ರಹ್ಮ, ವಾಲ್ಮೀಕಿಯನ್ನು. ಬ್ರಹ್ಮನ ಅನುಗ್ರಹದಂತೆಯೇ ವಾಲ್ಮೀಕಿ ಧರ್ಮವರ್ಯೇಣ ರಾಮಾಯಣವನ್ನು ಸಂಪೂರ್ಣವಾಗಿ ಸಾಕ್ಷಾತ್ಕರಿಸಿಕೊಂಡರು. ವಾಲ್ಮೀಕಿಯ ಮನಃಪಟಲದ ಮೇಲೆ ರಾಮಾಯಣದಲ್ಲಿನ ಒಂದೊಂದು ದೃಶ್ಯವೂ ಕಾಣಿಸಿಕೊಳ್ಳ ತೊಡಗಿತು: ಚಿತ್ರಮಂದಿರದಲ್ಲಿ ರಜತ ಪರದೆಯ ಮೇಲೆ ದೃಶ್ಯಗಳು ಮೂಡುವಂತೆ.

ಹೀಗೆ ತಾನು ಕಂಡದ್ದನ್ನು, ಅಸ್ವಾದಿಸಿದ್ದನ್ನು, ಅನುಭವಿಸಿದ್ದನ್ನು ಕಾವ್ಯರೂಪಕ್ಕಿಳಿಸಿದರು ವಾಲ್ಮೀಕಿ. ವಾಲ್ಮೀಕಿಯ ಈ ಮಹಾಕಾವ್ಯ ಸಮಸ್ತ ಋಷಿಗಳ, ಬ್ರಹ್ಮಜ್ಞರ ವಿದ್ವಜ್ಜನರ ಮನ್ನಣೆ ಗಳಿಸಿತು.

ಇನ್ನು ರಾಮಾಯಣವಾದರೂ ಎಂತಹ ಕಾವ್ಯ ? ಏನೋ ಕಾಲ ಕಳೆಯಲು ಒಮ್ಮೆ ಓದಿ ಬಿಸಡುವಂತಹ ಕಥೆಯೇ ? ಸಕಲ ಶಾಸ್ತ್ರಗಳ, ವೇದಗಳ ಸಾರ. ಲೌಕಿಕ-ಪಾರಲೌಕಿಕಕ್ಕೆ ಧರ್ಮಗಳೆರಡೂ ಅದರಲ್ಲಿ ನಿರೂಪಿತವಾಗಿವೆ.

ಇಂತಹ ಶ್ರೇಷ್ಠ ಕೃತಿಯನ್ನು ದೇವರ್ಷಿ ನಾರದರು ಬ್ರಹ್ಮರ್ಷಿ ವಾಲ್ಮೀಕಿಗೆ ಉಪದೇಶಿಸಿ ಬೆಳಕಿಗೆ ತಂದರು.

# ನಾರದರ ಆಗಮನ

ಒಮ್ಮೆ ವೀಣಾಪಾಣಿಯಾದ ಸುರಋಷಿ ನಾರದರು ವಾಲ್ಮೀಕಿಯ ಆಶ್ರಮಕ್ಕೆ ಬಂದರು. ಬಂದ ದೇವಋಷಿಯನ್ನು ಯಥೋಚಿತವಾಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು ವಾಲ್ಮೀಕಿ. ಸತ್ಕಾರವಾದ ಮೇಲೆ ತಪೋನಿರತರಾದ ನಾರದರನ್ನು ಮುನಿಶ್ರೇಷ್ಠರಾದ ವಾಲ್ಮೀಕಿ ಪ್ರಶ್ನಿಸಿದರು:

"ಈ ಲೋಕದಲ್ಲಿ ಈಗ ಸಕಲ ಸದ್ಗುಣ ಸಂಪನ್ನ, ಪರಾಕ್ರಮಶಾಲಿ, ಧರ್ಮಜ್ಞ, ಸತ್ಯದ ವ್ರತ ಹಿಡಿದವನು, ಮಾಡಿದ ಸಂಕಲ್ಪವನ್ನು ಬಿಡದವನು, ಪರಂಪರೆಯಾಗಿ ಬಂದ ಸದಾಚಾರ ಸಂಪನ್ನ. ಎಲ್ಲ ಭೂತಗಳ ಹಿತದಲ್ಲಿ ನಿರತ, ಸರ್ವಶಾಸ್ತ್ರಗಳನ್ನು ಬಲ್ಲವನು, ಸರ್ವಕಾರ್ಯ ದುರಂಧರ, ಪ್ರಿಯದರ್ಶನ, ಧೈರ್ಯಶಾಲಿ, ಕಾಂತಿಮಂತ, ಕೋಪವನ್ನು ಜಯಿಸಿದವನು, ಅಹಂಕಾರ ರಹಿತ, ಅಸೂಯೆ ಇಲ್ಲದವನು, ಯುದ್ಧಕ್ಕೆ ನಿಂತರೆ ದೇವತೆಗಳನ್ನೇ ಗೆಲ್ಲಬಲ್ಲ ವನು ಇದ್ದಾನೆಯೆ ? — ಈ ಹದಿನಾರು ಗುಣಗಳಿಂದ ಕೂಡಿದಂಥವ ಈಗ ಈ ಲೋಕದಲ್ಲಿ ಇದ್ದರೆ ದಯೆಯಿಟ್ಟು ತಿಳಿಸಿ. ನನಗೆ ಬಹಳ ಕುತೂಹಲವಾಗಿದೆ. ಸ್ವಾಮಿ, ನೀವು ಇದನ್ನು ತಿಳಿಸಲು ಸಮರ್ಥರು. —ಅದಕ್ಕೇ ನಾನು ಕೇಳುತ್ತಿದೇನೆ; ದಯೆಯಿಟ್ಟು ತಿಳಿಸಿ."

ಈ ಪ್ರಶ್ನೆಯನ್ನು ಕೇಳಿದ ನಾರದ ಸಂತೋಷದಿಂದ ವಾಲ್ಮೀಕಿಗೆ "ನೀ ಕೇಳುವಂತೆ ಸಕಲ ಗುಣಗಳಿಂದ ಕೂಡಿದವನು ಇದಾನೆ. ಅವನೇ ಇಕ್ಷ್ವಾಕು ವಂಶದಲ್ಲಿ ಅವತರಿಸಿದ ಶ್ರೀರಾಮ" ಎಂದು ಸಂಕ್ಷೇಪವಾಗಿ ಶ್ರೀರಾಮಾವತಾರದಿಂದ ಪ್ರಾರಂಭಿಸಿ, ಸೀತಾಕಲ್ಯಾಣ, ಅರಣ್ಯಗಮನ, ಪಾದುಕಾ ಪ್ರದಾನ, ಸೀತಾಪಹರಣ, ಸುಗ್ರೀವ ಸಖ್ಯ, ಸೇತು ಬಂಧ, ರಾವಣಾದಿಗಳ ನಿಗ್ರಹ, ಅಯೋಧ್ಯೆಯಲ್ಲಿ ಪಟ್ಟಾಭಿಷೇಕದವರೆಗೆ ಶ್ರೀರಾಮಕಥೆಯನ್ನು ಹೇಳಿದರು.

ಇಲ್ಲಿ ವಾಲ್ಮೀಕಿ ನಾರದರನ್ನು ಕೇಳುವಾಗ ಮೊದಲಿಗೆ "ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್" ಎಂದು ಕೇಳಿ ಗುಣಕ್ಕೆ ಪ್ರಾಶಸ್ತ್ಯ ಕೊಟ್ಟಿದಾರೆ. ವಾಲ್ಮೀಕಿಯೂ ಜ್ಞಾನಿ. ಮುನಿಶ್ರೇಷ್ಠ. ಅವರಿಗೂ ಗೊತ್ತು ಶ್ರೀರಾಮನ ಕಥೆ. ತನಗೆ ತಿಳಿದಿರುವುದನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳುವ ಸಲುವಾಗಿಯೇ ನಾರದರನ್ನು ಕೇಳಿದ್ದು.

ವಾಲ್ಮೀಕಿ ಕೇಳಿದ ಶ್ಲೋಕದಲ್ಲೇ ಇಡೀ ರಾಮಾಯಣದ ಕಥೆ ಅಡಗಿದೆ. ಅದರ ಒಂದೊಂದು ಪದಕ್ಕೂ ಪೂರ್ವಾಚಾರ್ಯರು ವಿಶೇಷರೀತಿಯಲ್ಲಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

ಮೊದಮೊದಲು "ಗುಣವಾನ್" ಎಂದು ಏಕೆ ಕೇಳಿದರು ? —"ಗುಣ" ಅಂದರೆ ಏನು ಎಂಬುದಕ್ಕೆ ವ್ಯಾಖ್ಯಾನ ಮಾಡುತ್ತಾ ಆಚಾರ್ಯರು "ಗುಣವಾನ್" ಎಂಬ ಶಬ್ದಕ್ಕೆ "ಸೌಶೀಲ್ಯ ಗುಣ ವಿಶಿಷ್ಟ" ಎಂದಿರುತ್ತಾರೆ. ಪರಮಪದದಲ್ಲಿ ಭಗವಂತನ ಸೌಶೀಲ್ಯಾ (ಸೌಜನ್ಯಾ)ದಿ ಗುಣಗಳು ಪ್ರಕಾಶಿ ಸಲು ಅವಕಾಶವಿಲ್ಲ. ಆದ್ದರಿಂದಲೇ ತನ್ನ ಪರತತ್ವದ ನೆಲೆಯಿಂದ ಕೆಳಗಿಳಿದು ಬಂದು ಸಾಮಾನ್ಯರೊಡನೆ ವ್ಯವಹರಿಸಿ, ಜನಸಾಮಾನ್ಯರ ಮೇಲ್ಮೆಯನ್ನು ಮಾಡಿದವನಾದ ಕಾರಣವೇ "ಗುಣವಾನ್" ಎಂದು ವಾಲ್ಮೀಕಿ ಹೇಳಿದರು. ಭಗವಂತನ ಅವತಾರಗಳೆಲ್ಲ ಸೌಶೀಲ್ಯ (ಸೌಜನ್ಯ) ಸೌಲಭ್ಯಾದಿ ಗುಣಗಳನ್ನು ಪ್ರಕಾಶಪಡಿಸುವ ಸಲುವಾಗಿಯೇ ಆಗಿವೆ. ಅದರಲ್ಲಿ ಶ್ರೀರಾಮ ಶ್ರೀಕೃಷ್ಣ ಅವತಾರಗಳಲ್ಲಂತೂ ಈ ಸೌಲಭ್ಯಾತಿಶಯ ಪರಾಕಾಷ್ಠೆಯನ್ನೇ

ಮುಟ್ಟಿದೆ ಎನ್ನಬಹುದು.

ರಾಮಾವತಾರದಲ್ಲಿ ತಾನು ಚಕ್ರವರ್ತಿ ಕುಮಾರನಾದಾಗ್ಯೂ ಶ್ರೀರಾಮನು ಬೇಡನಾದ ಗುಹನೊಂದಿಗೆ ಸಖ್ಯ ಬೆಳಸಿದ; ಗುಹನನ್ನು "ನನಗೆ ಸಹೋದರ ನೀನು" ಎಂದ. ಮನುಷ್ಯ ಜಾತಿಗೇ ಸೇರದ ವಾನರರಾಜ ಸುಗ್ರೀವನೊಂದಿಗೆ ಸ್ನೇಹ ಬೆಳೆಸಿದ. ಅದನ್ನೇ ಸೀತೆ ಆಂಜನೇಯನನ್ನು "ವಾನರಾಣಾಂ ನರಾಣಾಂಚ ಕಥ ಮಾಸೀತ್ಸಮಾಗಮಃ" ಎಂದು ಕೇಳುತ್ತಾಳೆ. ಕಪಿಗಳಿಗೂ ಮನುಷ್ಯರಿಗೂ ಸ್ನೇಹ ಹೇಗೆ ಬೆಳೆಯಿತು ಎಂದು ಅಚ್ಚರಿಯಿಂದ ಕೇಳುತ್ತಾಳೆ. ಇಲ್ಲಿ ವಾನರರಿಗೂ—ನರರಿಗೂ ಹೇಗೆ ಸಮಾಗಮ ಉಂಟಾಯಿತು ಎಂಬುವಲ್ಲ ಪ್ರಶ್ನೆ. ಚಕ್ರವರ್ತಿ ಕುಮಾರನಾಗಿ ಮರೆಯುವ ಶ್ರೀರಾಮ ಮನುಷ್ಯ ಜಾತಿಗೇ ಸೇರದ ಕೋತಿಗಳೊಡನೆ ಸರಿಸಮ ಭಾವವನ್ನು ಸ್ನೇಹಮಾಡಿಕೊಳ್ಳುವಷ್ಟು ಕೆಳಗಿಳಿದು ತನ್ನ ಸೌಶೀಲ್ಯವನ್ನು ಪ್ರಕಟಿಸಿದನೇ ಎಂಬ ಪ್ರಶ್ನೆ.

ಎಲ್ಲೋ ಕಾಡಿನಲ್ಲಿ ವಾಸವಾಗಿದ್ದ ಶಬರ ಜಾತಿಯ ಶಬರಿಗೆ ಮೋಕ್ಷವನ್ನಿತ್ತ. ಇದನ್ನೇ ಹೇಳುತ್ತಾ ಶ್ರೀ ವೇದಾಂತ ದೇಶಿಕರು "ನಿಷಾದಾನಾಂ ನೇತಾಕಪಿಕುಲಪತಿಃ, ಕಾಪಿ ಶಬರೀ, ಕುಚೇಲಃ" ಎಂಬ ಶ್ಲೋಕದಲ್ಲಿ ಭಗವಂತನ ಸೌಲಭ್ಯಾದಿ ಗುಣವಿಶೇಷಗಳನ್ನು ಕೊಂಡಾಡಿರುತ್ತಾರೆ.

ಆದಕ್ಕೆ ವಾಲ್ಮೀಕಿ ಮೊಟ್ಟಮೊದಲು "ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್" ಎಂದು ಕೇಳುವುದರ ಮೂಲಕ ಗುಣಕ್ಕೆ ಅಂದರೆ ಸೌಶೀಲ್ಯಕ್ಕೇ ಹೆಚ್ಚು ಪ್ರಾಧಾನ್ಯತೆ ಕೊಟ್ಟಿದಾರೆ.

**"ವೀರ್ಯವಾನ್"** ಎಂದರೆ ಯಾರು ಶತ್ರುಗಳನ್ನು ಸ್ವಲ್ಪವೂ ಶ್ರಮವಿಲ್ಲದೆ ನಿಗ್ರಹಿಸಬಲ್ಲರೊ ಅವರು ಎಂದು. ಮುಹೂರ್ತಾರ್ಧಕಾಲದಲ್ಲಿ ಹದಿನಾಲ್ಕುಸಾವಿರ ರಾಕ್ಷಸರನ್ನೂ ಏಕಾಕಿಯಾಗಿ ನಿಗ್ರಹಿಸಿದವ ಶ್ರೀರಾಮ ಎಂದು ನಾರದರು ಹೇಳುತ್ತಾರೆ.

"ಧರ್ಮಜ್ಞ" ಜಗತ್ತಿನಲ್ಲಿ ಧರ್ಮವನ್ನು ಸಂಸ್ಥಾಪಿಸಲು ಅವತಾರವೆತ್ತಿದ ಶ್ರೀರಾಮ. ಕೈಕೇಯಿಗೆ ಹೇಳುವಾಗ ಶ್ರೀರಾಮ "ವಿದ್ಧಿಮಾಂ ಋಷಭಿಸ್ತುಲ್ಯಂ ಕೇವಲಂ ಧರ್ಮಚಾರಿಣಂ" ಎನ್ನುತ್ತಾನೆ. ನನಗೆ ಹಣ, ರಾಜ್ಯ, ಭೋಗಭಾಗ್ಯ ಇವೆಲ್ಲವರ ಚಿಂತೆ ಇಲ್ಲ. ಧರ್ಮಾಚರಣೆಯೇ ನನ್ನ ವ್ರತ ಎನ್ನುತ್ತಾನೆ.

"ಕೃತಜ್ಞ" ಎಂದರೆ ಮಾಡಿದ ಉಪಕಾರವನ್ನು ಮರೆಯದೆ ಇರುವವ. ಶ್ರೀರಾಮ ಯಾರಾದರೂ ತನಗೆ ಉಪಕಾರ ಮಾಡುವುದಿರಲಿ, ಉಪಕಾರಮಾಡಬೇಕು "ಕಥಂಚಿತ್ ಉಪಕಾರೇಣ ಕೃತೇನ ಏಕೇನ ತುಷ್ಯತಿ"—ಯಾರಾದರೂ ಒಂದೇ ಒಂದು ಸಣ್ಣ ಉಪಕಾರವನ್ನು ಮಾಡಿದರೂ ಅದನ್ನು ಮರೆಯದವ. ಹಾಗೆಯೇ ತನಗೆ ಯಾರಾದರೂ ನೂರು ಅಪರಾಧಗಳನ್ನೇ ಮಾಡಿದರೂ ಅದನ್ನೂ ಗಣನೆಗೆ ತರದವ. ಕಿಂಚಿತ್ ಉಪಕಾರವನ್ನೇ ಮಹತ್ತನ್ನಾಗಿ ಭಾವಿಸಿ ಸರ್ವದಾ ಅದನ್ನು ಸ್ಮರಿಸುವವ ಕೃತಜ್ಞ. ಅಂಥ ಕೃತಜ್ಞ ಶ್ರೀರಾಮ. ಸತ್ಯ ಮಾರ್ಗದಲ್ಲೇ ನಡೆಯುವವ. ದೃಢವ್ರತ ಉಳ್ಳವ.

"ಶುದ್ಧಚಾರಿತ್ರ್ಯ" ಅಂದರೆ ಬ್ರಹ್ಮಚರ್ಯ ನಿಷ್ಠೆಯಿಂದ ಕೂಡಿದವ. ಸರ್ವ ಭೂತಗಳಿಗೂ ಸದಾ ಹಿತವನ್ನೇ ಬಯಸತಕ್ಕವ. ವಿದ್ವಾಂಸನಾಗಿರುವವ. ಸರ್ವ ಶಾಸ್ತ್ರಗಳನ್ನೂ ತಿಳಿದವನು ಮಾತ್ರವಲ್ಲ ಅವೆಲ್ಲವನ್ನೂ ಯಥಾವತ್ತಾಗಿ ಅನುಷ್ಠಾನಕ್ಕೆ ತರುವಂಥವ. ತಂದಿರುವಂಥವ. ಎಂಥ ಕಷ್ಟ ಕಾರ್ಯವನ್ನಾದರೂ ಸಾಧಿಸುವಂಥ ಧೃತಿಯುಳ್ಳವ. ಮೇಲಾಗಿ ಪ್ರಿಯದರ್ಶನ. ನೋಡಲು ಬಲು ಸುಂದರ.

"ಪ್ರಿಯದರ್ಶನ" ಎಂಬ ಗುಣಕ್ಕೆ ವ್ಯಾಖ್ಯಾನ ಮಾಡುತ್ತಾ ಜ್ಞಾನಿಗಳು ಹೇಳುತ್ತಾರೆ: "ಪ್ರಿಯ ದರ್ಶನ" ಎಂದರೆ ಯಾರು ನೋಡಿದರೂ ಯಾವಾಗ ನೋಡಿದರೂ ಆಹ್ಲಾದಕರನಾಗಿ ಒಪ್ಪುವಂಥವ ಎಂದು. ಇದಕ್ಕೆ ರಾಮಾಯಣದಲ್ಲಿ ಅನೇಕ ನಿದರ್ಶನಗಳಿವೆ.

ಶ್ರೀರಾಮನ ದರ್ಶನ ಹಿತರಿಗೆ ಮಾತ್ರ ಹಿತ ಎಂದಿಲ್ಲ. ಅಹಿತರಿಗೂ ಹಿತವಾಗುವಂಥದು. ಶೂರ್ಪನಖಿ ಶ್ರೀರಾಮಲಕ್ಷ್ಮಣರಿಂದ ಪರಾಭವವನ್ನು ಹೊಂದಿ ಅಣ್ಣನಾದ ಖರನ ಹತ್ತಿರ ಹೋಗುತ್ತಾಳೆ. ತನ್ನ ಪರಿಭವಕ್ಕೆ ಕಾರಣರಾದವರನ್ನು ಅವಳು ವಿವರಿಸುವುದು ಶ್ಲಾಘ ನೀಯವಾಗಿದೆ. "ತರುಣೌ ರೂಪಸಂಪನ್ನೌ ಸುಕುಮಾರೌ ಮಹಾಬಲೌ" ಎಂದು ಶ್ರೀರಾಮನ ರೂಪವನ್ನು ವರ್ಣಿಸುತ್ತಾಳೆ.

ಮಾರೀಚ "ವೃಕ್ಷೇ ವೃಕ್ಷೇಚ ಪಶ್ಯಾಮಿ" ಎನ್ನುತ್ತಾ "ಮರಮರದಲ್ಲೂ ಸುಕುಮಾರನಾದ, ಅತಿ ಶಯವಾಗಿ ಪ್ರಿಯದರ್ಶನನಾದ ರಾಮನನ್ನು ಕಾಣುತ್ತೇನೆ" ಎಂದು ಹೇಳುತ್ತಾನೆ. ಹೀಗೆ ಶತ್ರುಗಳಿಂದಲೂ ಪ್ರಶಂಸಿಸಲ್ಪಡತಕ್ಕಂಥ ದರ್ಶನೀಯ ರೂಪವುಳ್ಳವ ಶ್ರೀರಾಮ.

ರಾಮನ ರೂಪ ಎಂಥದು ?

"ಚಂದ್ರ ಕಾಂತಾನನಂ ರಾಮಂ ಅತೀವಪ್ರಿಯದರ್ಶನಂ ।
ರೂಪೌದಾರ್ಯ ಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಂ"

ತನ್ನ ರೂಪದಿಂದ, ಔದಾರ್ಯಗುಣದಿಂದ ಎಲ್ಲರ ಕಣ್ಮನಗಳನ್ನೂ ಅಪಹರಿಸುವಂಥ ದಿವ್ಯ ರಮಣೀಯ ರೂಪ. ಕೇವಲ ರೂಪವೊಂದೇ ಇದ್ದರೆ ಅದು ದರ್ಶನೀಯ ಮಾತ್ರವಾಗುತ್ತದೆ. ಆ ರೂಪ ಪ್ರಿಯದರ್ಶನವಾಗಬೇಕಾದರೆ ರೂಪದೊಂದಿಗೆ ಅಹಂಕಾರವಿಲ್ಲದ ಔದಾರ್ಯ ಗುಣವೂ ಇರಬೇಕು. ಆಗಲೇ ಸುವರ್ಣದಲ್ಲಿ ಸೌರಭ ಸೇರಿದಂತಾಗಿ ಅದು ಪ್ರಿಯದರ್ಶನವಾಗುತ್ತದೆ.

ರಾಮ ರೂಪಸ ನಿಜ, ಜೊತೆಗೆ ಔದಾರ್ಯಾದಿ ಗುಣಗಳಿಂದ ವಿಶಿಷ್ಟನಾದವ. ಅವನ ರೂಪದ ಸೆಳೆತಕ್ಕೆ ಸಿಗದವರೇ ಇಲ್ಲ. ಪುರುಷೋತ್ತಮನಾದ ಶ್ರೀರಾಮನ ದಿವ್ಯರೂಪ ಪುರುಷ ಶ್ರೇಷ್ಠರ ಕಣ್ಮನಗಳನ್ನೇ ಸೆಳೆಯುವಂಥದು. ಹೀಗೆ, ವಾಲ್ಮೀಕಿಗೆ ನಾರದರು ಹದಿನಾರು ಗುಣಗಳಿಂದ ಕೂಡಿದ ದಿವ್ಯ ಚರಿತೆಯನ್ನು ಹೇಳಿ ತೆರಳುತ್ತಾರೆ.

ನಾರದರು ಹೊರಟುಹೋದ ಮೇಲೆ ವಾಲ್ಮೀಕಿ ಮಹರ್ಷಿಗಳು ಸ್ನಾನಮಾಡಲು ಶಿಷ್ಯ ಭರದ್ವಾಜ ನೊಡನೆ ತಮಸಾನದೀ ತೀರಕ್ಕೆ ಬರುತ್ತಾರೆ. ನದೀತೀರದ ದೃಶ್ಯ ಸುಮನೋಹರವಾಗಿದೆ. ನದಿಯ ನೀರು ಸತ್ಪುರುಷರ ಮನಸ್ಸಿನಂತೆ ತಿಳಿಯಾಗಿದೆ. ಸತ್ಪುರುಷರ ಮನಸ್ಸು ಯಾವಾ ಗಲೂ ತಿಳಿಯಾಗಿರುತ್ತದೆ. ಅಂತೆಯೇ ಸರೋವರದ ಜಲವೂ ಸ್ಫಟಿಕದಂತೆ ಶುಭ್ರವಾಗಿ ತಿಳಿಯಾಗಿರುವುದನ್ನು ಕಂಡು ವಾಲ್ಮೀಕಿ ಸಂತೋಷಪಡುತ್ತಾರೆ. ಸುತ್ತಲೂ ತಿರುಗಿ ಪ್ರಕೃತಿ ಸೌಂದರ್ಯವನ್ನು ನೋಡತೊಡಗುತ್ತಾರೆ.

ಆ ಸಮಯದಲ್ಲಿ ಯಾವನೋ ಒಬ್ಬ ಬೇಡ ಮರದ ಮೇಲೆ ಸಂತೋಷದಿಂದ ಕುಳಿತಿದ್ದ ಎರಡು ಕ್ರೌಂಚಪಕ್ಷಿಗಳಲ್ಲಿ ಗಂಡು ಹಕ್ಕಿಯನ್ನು ತನ್ನ ಬಾಣದಿಂದ ಹೊಡೆದು ಹಾಕುತ್ತಾನೆ. ಗಂಡು ಹಕ್ಕಿ ಕೆಳಗುರುಳಿದಾಗ ಅದನ್ನು ಕಂಡು ಹೆಣ್ಣು ಹಕ್ಕಿ ವಿಲಪಿಸುತ್ತದೆ. ಈ ದೃಶ್ಯವನ್ನು ಕಂಡು ವಾಲ್ಮೀಕಿಗೆ ಸಂಕಟವಾಗಿ ಕೋಪಬರುತ್ತದೆ. ಕೋಪದ ಭರದಲ್ಲಿ "ಹೇ ನಿಷಾದ ! ಕಾಮಮೋಹಿತವಾಗಿರುವ ಈ ಪಕ್ಷಿದ್ವಯದಲ್ಲಿ ಗಂಡು ಹಕ್ಕಿಯನ್ನು ಕೊಂದೆಯಾದ ಕಾರಣ ನೀನು ಬಹುಕಾಲ ಬದುಕುವುದು ಬೇಡ" ಎಂದು ಶಪಿಸುತ್ತಾರೆ.

ಶಪಿಸಿದ ನಂತರ ಜಿತಕ್ರೋಧರಾಗಿರಬೇಕಾದ ತಮ್ಮಿಂದ ಶಾಪ ಹೊರಹೊಮ್ಮಿತಲ್ಲಾ ಎಂದು ಕಳವಳ ಪಡುತ್ತಾರೆ. ಸ್ನಾನ–ಆಹ್ನೀಕಗಳನ್ನು ಮುಗಿಸಿಕೊಂಡು ಆಶ್ರಮಕ್ಕೆ ಬಂದು ತಾವು ಹೇಳಿದ ಶ್ಲೋಕವನ್ನೇ ಮತ್ತೆ ಮತ್ತೆ ಧ್ಯಾನಿಸ ತೊಡಗುತ್ತಾರೆ. ಅದೇ ಸಮಯಕ್ಕೆ ಬ್ರಹ್ಮ ವಾಲ್ಮೀಕಿಯ ಬಳಿ ಬರುತ್ತಾನೆ.

ಚಿಂತಾಕ್ರಾಂತರಾಗಿರುವ ಋಷಿಗಳನ್ನು ಕಂಡು "ಚಿಂತಿಸುವ ಕಾರಣವಿಲ್ಲ. ನಿಮ್ಮ ಬಾಯಿಂದ ಸಾಕ್ಷಾತ್ ವಾಣಿಯೇ ಆ ಶ್ಲೋಕವನ್ನು ನುಡಿಸಿರುತ್ತಾಳೆ. ಇದು ನೀವು ರಚಿಸುವ 24000 ಶ್ಲೋಕವುಳ್ಳ ರಾಮಾಯಣ ಕಾವ್ಯಕ್ಕೆ ನಾಂದೀ ಶ್ಲೋಕವಾಗಿ, ಮಂಗಳಶ್ಲೋಕವಾಗಿ ಪರಿಣಮಿಸುತ್ತದೆ. ನೀವು 24000 ಶ್ಲೋಕವುಳ್ಳ ರಾಮಾಯಣವನ್ನು ರಚಿಸಿ. ನಿಮ್ಮಿಂದ ರಚಿತವಾದ ರಾಮಾಯಣ ಸೂರ್ಯಚಂದ್ರರಿರುವವರೆಗೂ ಪ್ರಕಾಶದಲ್ಲಿರುತ್ತದೆ. ಅದು ಆದಿಕಾವ್ಯವಾಗುತ್ತದೆ" ಎಂದು ಹರಸಿ ಬ್ರಹ್ಮನು ಸ್ವಸ್ಥಾನಕ್ಕೆ ತೆರಳುತ್ತಾನೆ.

## ನಾಂದೀ ಶ್ಲೋಕದ ಅರ್ಥ ವಿವರಣೆ

ನಾರದರ ಬಾಯಿಂದ ರಾಮಾಯಣವನ್ನು ಕೇಳಿದ ವಾಲ್ಮೀಕಿ ರಾಮಕಥೆಯನ್ನೇ ಮನನ ಮಾಡುತ್ತಾ ಸ್ನಾನಕ್ಕೆ ತೆರಳಿದರು. ಅಲ್ಲಿ ಅವರ ಬಾಯಿಂದ ಹೊರಟ ಪ್ರಥಮ ಶ್ಲೋಕ "ಮಾ ನಿಷಾದ ಪ್ರತಿಷ್ಠಾಂ ತ್ವಂ ಅಗಮ ಶಾಶ್ವತೀ ಸಮಃ । ಯತ್ಕ್ರೌಂಚಮಿಥುನಾದೇಕಂ ಅವಧೀ : ಕಾಮ ಮೋಹಿತಂ"—

"ಎಲೈ ನಿಷಾದನೇ, ಕಾಮಮೋಹಿತವಾಗಿರುವ ಈ ಕ್ರೌಂಚದಂಪತಿಗಳಲ್ಲಿ ಒಂದನ್ನು ನೀನು ಅಸಮಯದಲ್ಲಿ ಕೊಂದೆಯಾದ್ದರಿಂದ ನೀನು ಬಹಳ ಕಾಲ ಬದುಕದಂಥ ಸ್ಥಿತಿಯನ್ನು ಪಡೆ." ಮೇಲ್ನೋಟಕ್ಕೆ ತೋರಿಬರುವ ಅರ್ಥ ಇದು.

ಈ ಶ್ಲೋಕ ಶಾಪರೂಪವಾಗಿ ಹೊರಬಂದಿತು. ಆದರೆ ಅದು ಶಾಪವಾಗಿರದೆ ತಂತ್ರೀ ಲಯ ಗಳಿಂದ ಒಡಗೂಡಿ ಪ್ರಾಸಬದ್ಧ, ಛಂದೋಬದ್ಧವಾದ ಶ್ಲೋಕವಾಗಿ ಹೊರಹೊಮ್ಮಿದ್ದನ್ನು ಕಂಡು ವಾಲ್ಮೀಕಿಗೇ ಅಚ್ಚರಿಯಾಗುತ್ತದೆ.

ಅದನ್ನೇ ಬ್ರಹ್ಮ ವಾಲ್ಮೀಕಿಗೆ ಸಮಾಧಾನ ಮಾಡುತ್ತಾ "ಇದು ಮಂಗಳಶ್ಲೋಕ" ಎಂದು ಹೇಳಿದ. ಈ ಶ್ಲೋಕಕ್ಕೆ ಅನೇಕ ಜ್ಞಾನಿಗಳು ವ್ಯಾಖ್ಯಾನ ಮಾಡಿದಾರೆ. "ಮಾ" ಶಬ್ದ ಲಕ್ಷ್ಮಿಗೆ ಅನ್ವಯಿಸುತ್ತದೆ. ಲಕ್ಷ್ಮೀ ಸಮೇತ ನಾರಾಯಣಸ್ವರೂಪ ಶ್ರೀರಾಮ ! ಕಾಮಮೋಹಿತ ವಾಗಿದ್ದ ಕ್ರೌಂಚಪಕ್ಷಿಯನ್ನು ಕೊಂದೆಯಾದ್ದರಿಂದ ನೀನು "ಶಾಶ್ವತೀ ಸಮಾಃ" ಅಂದರೆ "ಶಾಶ್ವತವಾಗಿ ಬಾಳುವವನಾಗು" ಎಂದು. ಅದುವರೆಗೆ ತಾವು ಕೇಳಿದ ರಾಮಾಯಣ ಕಥಾನಾಯಕ ಶ್ರೀರಾಮನನ್ನು ಕುರಿತು, ಮಂಗಳಾಶೀರ್ವಾದ ಮಾಡಿರುವ ಶ್ಲೋಕವಾಗಿದೆ ಇದು.

ಕ್ರೌಂಚಪಕ್ಷಿಗಳೇ ರಾವಣ ಮಂಡೋದರಿಯ ಪ್ರತೀಕಗಳು. ಬೇಡನೇ ಶ್ರೀರಾಮ. ಕಾಮಮೋಹಿತ ವಾದ ಕ್ರೌಂಚಪಕ್ಷಿ ಅಂದರೆ ಕಾಮಿಯಾದ ರಾವಣ ಎಂದರ್ಥ. ಅಂಥ ಕ್ರೌಂಚಪಕ್ಷಿಯನ್ನು ಹೊಡೆದ ಬೇಡನೇ ಶ್ರೀರಾಮ. "ರಾವಣನಿಗ್ರಹ ಮಾಡಿದ ರಾಮ ! ನೀನು ಶಾಶ್ವತವಾಗಿ ಬಾಳುವಂಥವನಾಗು" ಎಂದು ರಾಮನಿಗೆ ಮಂಗಳಾಶಾಸನ ಮಾಡುವ ಶ್ಲೋಕ ಇದು.

## ರಾಮಾಯಣದ ರಚನೆ

ಬ್ರಹ್ಮ ಹೊರಟುಹೋದಮೇಲೆ ದರ್ಭೆಯ ಆಸನದಲ್ಲಿ ಕುಳಿತು ವಾಲ್ಮೀಕಿ ಧ್ಯಾನಾಸಕ್ತರಾದರು. ಬ್ರಹ್ಮದೇವನ ಅನುಗ್ರಹದಿಂದ ವಾಗ್ದೇವಿಯಿಂದ ಪ್ರೇರಿತವಾಗಿ ತಮಗೆ ತಾವೇ ಎಲ್ಲ ದೃಶ್ಯಗಳೂ ಒಂದಾದಮೇಲೊಂದು ಮನಃಪಟಲದಲ್ಲಿ ಕಾಣಬರುತ್ತಿರುವಂತೆ ವಾಲ್ಮೀಕಿ 24000 ಶ್ಲೋಕಗಳುಳ್ಳ ಶ್ರೀಮದ್ರಾಮಾಯಣವನ್ನು ಸಂಸ್ಕೃತದಲ್ಲಿ ರಚಿಸಿದರು. ಇದು ಇತಿಹಾಸ – ಅಂದರೆ ನಡೆದದ್ದನ್ನು ನಡೆದಂತೆ ಹೇಳುವಂಥ ಕಾವ್ಯ — ಎನಿಸಿಕೊಂಡಿತು.

## ರಾಮಾಯಣದ ಪ್ರಚಾರ

ರಾಮಾಯಣದ ರಚನೆಯೇನೊ ಆಯಿತು. ಆದರೆ ಅದರ ಪ್ರಚಾರ ಹೇಗಾಗುವುದೋ ಎಂಬ ಚಿಂತೆ ಅವರನ್ನು ಕಾಡುತ್ತಿತ್ತು. ಆ ವೇಳೆಗೆ ಸರಿಯಾಗಿ ಚಂದ್ರಸೂರ್ಯರಂತೆ ಅಲ್ಲಿಗೆ ಕುಶಲವರು ಬಂದು ವಾಲ್ಮೀಕಿಯ ಚರಣಗಳಿಗೆ ನಮಿಸಿದರು. ರಾಮಾಯಣವನ್ನು ರಾಮನ ಕುವರರಾದ ಕುಶಲವರಿಗೆ ಉಪದೇಶಿಸಿದರು. ಅವರು ಮೊದಲು ಋಷಿಗಳ ಸಮೂಹದಲ್ಲಿ ರಾಮಾಯಣವನ್ನು ಗಾನ ಮಾಡಿದರು. ರಸಿಕರಾದ ಋಷಿಗಳೆಲ್ಲ ಮಧುಪಾನ ಮಾಡಿದವರಂತೆ ರಾಮಾಯಣದ ಮಧುವನ್ನು ಆಸ್ವಾದಿಸಿದರು. ತುಷ್ಟರಾದರು. ಒಬ್ಬ ಋಷಿ ಕುಶಲವರಿಗೆ ಸಂತೋಷದಿಂದ ತಮ್ಮಲ್ಲಿದ್ದ ಕಮಂಡಲುವನ್ನು ಕೊಟ್ಟರು. ಇನ್ನೊಬ್ಬರು ವಲ್ಕಲವನ್ನು ಕೊಟ್ಟರು. ಮತ್ತೊಬ್ಬರು ಕಟಿಸೂತ್ರವನ್ನಿತ್ತರು. ಎಲ್ಲ ಋಷಿಗಳೂ ಮುದದಿಂದ ಕುಮಾರರಿಬ್ಬರನ್ನೂ "ಚಿರಾಯುಗಳಾಗಿ" ಎಂದು ಹರಸಿದರು.

ಅಷ್ಟರಲ್ಲಿ ವಾಲ್ಮೀಕಿಗೆ ಶ್ರೀರಾಮನಿಂದ ಅಶ್ವಮೇಧಯಾಗಕ್ಕೆ ದಯಮಾಡಿಸುವಂತೆ ಕರೆ ಬಂದಿತು ಆಗ ಅವರು ತಮ್ಮೊಂದಿಗೆ ಕುಶಲವರನ್ನು ಕರೆದೊಯ್ದರು. ರಾಮಾಯಣದ ಗಾನ ರೂಪಕ ಶ್ರೀರಾಮನ ಅಶ್ವಮೇಧ ಮಹಾಮಂಟಪದಲ್ಲಿ ಕಿಕ್ಕಿರಿದ ಜನಸ್ತೋಮದ ಇದಿರು ನಡೆಯಿತು. ಇಂದ್ರ ಅಗ್ನಿಯರಂತೆ ಶೋಭಿಸುತ್ತಿರುವ ಕುಶಲವರು ಸುಶ್ರಾವ್ಯವಾದ ಕಂಠದೊಡನೆ ಮಧುರವಾದ ವೀಣಾನಾದ ಜೊತೆಗೂಡುತ್ತಿದ್ದಂತೆ ರಾಮಾಯಣವನ್ನು ಗಾನಮಾಡಿದರು. ಎಲ್ಲರೂ ಕೇಳಿ ಮೆಚ್ಚಿದರು. ಸಿಂಹಾಸನದಲ್ಲಿ ಕುಳಿತಿದ್ದ ರಾಮ ರಾಮಾಯಣದ ಮಾಧುರ್ಯಕ್ಕೆ ಮನಸೋತವನಾಗಿ ಮೆಲ್ಲಮೆಲ್ಲಗೆ ತೆವಳುತ್ತಾ ಕುಶಲವರ ಸಮೀಪದಲ್ಲಿ ಜನಗಳ ನಡುವೆಯೇ ಬಂದು ಕುಳಿತ. ವಶಿಷ್ಠರು "ಇದೇನು ರಾಮ ? ನಿನ್ನ ಕಥೆಯನ್ನು ಕೇಳಲು ನೀನು ಇಷ್ಟು ಉತ್ಸುಕನಾಗಿರುವೆ" ಎನ್ನಲು ರಾಮ "ಇದನ್ನು ನಾನು ಮೆಚ್ಚುಗೆಯಿಂದ ಕೇಳುತ್ತಿರುವುದು ನನ್ನ ಕಥೆ ಎಂದಲ್ಲ, ಸೀತೆಯ ಕಥೆ ಎಂದು" ಎಂದ.

ಹೀಗೆ ರಾಮಾಯಣದ ಪ್ರಚಾರ ನಡೆಯಿತು. ಕುಶಲವರು ಶ್ರೀರಾಮನ ಸಮ್ಮುಖದಲ್ಲಿ ರಾಮಾಯಣವನ್ನು ಗಾನಮಾಡತೊಡಗಿದರು.

# ಬಾಲಕಾಂಡ

## ಕಥೆಯ ಪ್ರಾರಂಭ

### ಕೋಸಲ ದೇಶದ ವರ್ಣನೆ

ಸರಯೂ ನದೀ ತೀರದಲ್ಲಿ ಕೋಸಲದೇಶ. ಧನಧಾನ್ಯ ಸಮೃದ್ಧಿಯಿಂದ ಕೂಡಿದೆ. ಶತ್ರುಗಳಿಂದಲೂ ಜಯಿಸಲು ಅಶಕ್ಯವಾದ ಅಯೋಧ್ಯೆಯೇ ಅದರ ರಾಜಧಾನಿ. ಅದನ್ನು ಕಟ್ಟಿಸಿದವನು ವೈವಸ್ವತ ಮನು. ಅಯೋಧ್ಯಾನಗರ ಯಾವಾಗಲೂ ಸರ್ವಾಲಂಕಾರಗಳಿಂದ ಶೋಭಿತಳಾದ ರಮಣಿಯಂತೆ ಕಂಗೊಳಿಸುತ್ತಿದೆ. ದೇವೇಂದ್ರನ ಅಮರಾವತಿಯಂತೆ, ಕುಬೇರನ ಅಲಕಾಪುರಿಯಂತೆ, ಶ್ರೀಮಹಾವಿಷ್ಣುವಿನ ಆವಾಸವೆನಿಸಿದ ವೈಕುಂಠಪುರಿಯಂತೆ ಶೋಭಿಸುತ್ತಿದೆ.

ಅಯೋಧ್ಯೆಯನ್ನು ಆಳುತ್ತಿದ್ದವ ಶ್ರೇಷ್ಠನಾದ ದಶರಥ. ಉತ್ತಮನಾದ ಇಕ್ಷ್ವಾಕು ವಂಶದಲ್ಲಿ ಬಂದವ. ಅವನ ಹೆಸರು ಅನ್ವರ್ಥ. ದಶದಿಕ್ಕುಗಳಲ್ಲೂ ತಡೆಯಿಲ್ಲದಂತೆ ರಥವನ್ನು ನಡೆಸಿ ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯ ಅವನದು.

ಅವನಿಂದ ಪಾಲಿತವಾದ ಅಯೋಧ್ಯೆ ಕಲ್ಯಾಣಪುರಿಯಾಗಿ ವಿಜೃಂಭಿಸುತ್ತಿತ್ತು. ಅಯೋಧ್ಯೆಯ ಜನ ಇಂಗಿತಜ್ಞರು, ಕುಶಲರು, ಬುದ್ಧಿವಂತರು, ಸರಸಿಗಳು, ಉದಾರಿಗಳು, ಸುಖಿಗಳು, ಮೇಲಾಗಿ ಧರ್ಮಪರರು.

ಅಯೋಧ್ಯೆಯಲ್ಲಿ ಕಳ್ಳಕಾಕರರಿಲ್ಲ, ಸುಳ್ಳಾಡುವವರಿಲ್ಲ, ಜಂಭಗಾರರಿಲ್ಲ, ಲೋಭಿಗಳಿಲ್ಲ, ಕೆಟ್ಟಕೆಲಸ ಮಾಡುವವರಿಲ್ಲ, ಜೂಜಾಡುವವರಿಲ್ಲ.

ಎಲ್ಲರೂ ತಮ್ಮ ತಮ್ಮ ಕರ್ಮಗಳಲ್ಲಿ ನಿರತರು, ಸಂಯಮಿಗಳು, ದಾನಿಗಳು, ಪರಸ್ತ್ರೀಯರನ್ನು ತಾಯಿಯಂತೆ ಕಾಣುವವರು. ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಈ ಆರನ್ನೂ ಕಲಿತವರು ಅಯೋಧ್ಯೆಯ ಬ್ರಾಹ್ಮಣರೆಲ್ಲ.

ಅಯೋಧ್ಯೆಯ ಜನರೆಲ್ಲ ಅತಿಥಿಸತ್ಕಾರವನ್ನು ಮನಃಪೂರ್ವಕವಾಗಿ ಮಾಡುವಂಥವರು. ಜನರೆಲ್ಲ ತೇಜೋವಂತರು. ಧಾರ್ಮಿಕರು.

ಅಯೋಧ್ಯೆಯ ಚತುರಂಗಸೇನೆ ಅಸದೃಶವಾದ ಬಲವುಳ್ಳದ್ದು. ಉಚ್ಚೈಶ್ರವಸ್ಸಿನಂಥ ಉನ್ನತ ಕುದುರೆಗಳ ದಂಡು, ಐರಾವತವನ್ನು ಮೀರಿಸುವ ಆನೆಗಳ ಹಿಂಡು ಕೆಚ್ಚೆದೆಯ ಕಲಿಗಳ ಪದಾತಿವ್ರಾತ. ಸೈನ್ಯಸಂಪತ್ತಿಯನ್ನು ನೆನೆಯಲುಸಹ–ವೈರಿ ಅದೆಷ್ಟೇ ಪರಾಕ್ರಮಿಯಾಗಿರಲಿ–ಎದೆ ನಡುಗುತ್ತದೆ. ಇಂಥ ಮಹಾನಗರ; ಇದಕ್ಕೆ ರಾಜನಾಗಿ ಮೆರೆಯುತ್ತಿದ್ದ ದಶರಥಮಹಾರಾಜ. ನಕ್ಷತ್ರಗಳ ನಡುವಿನ ಚಂದ್ರನಂತೆ.

ದಶರಥ ಮಹಾರಾಜನಿಗೆ ಇಬ್ಬರು ಪುರೋಹಿತರು; ವಶಿಷ್ಠ, ವಾಮದೇವ. ಪುರದ ಹಿತವನ್ನೇ ಬಯಸಿ ಅದಕ್ಕಾಗಿಯೇ ದುಡಿಯುವಂಥವರು.

ಇವರಲ್ಲದೆ, ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧಕ, ಅಶೋಕ, ಮಂತ್ರ

ಪಾಲ, ಸುಮಂತ್ರ ಎಂಬ ಎಂಟು ಜನ ಮಂತ್ರಿಗಳು ಇದ್ದರು. ಇವರಲ್ಲಿ ಸುಮಂತ್ರ ದಶರಥನಿಗೆ ಅಂತರಂಗದವನು. ಅಂತಃಪುರದ ಪ್ರವೇಶಕ್ಕೂ ಇತ್ತು ಅವನಿಗೆ ಅಧಿಕಾರ.

ಮಂತ್ರಿಗಳು ಅಸಾಮಾನ್ಯರು, ನೀತಿಕುಶಲರು, ಸಮರ್ಥರು, ಕಾರ್ಯಧುರಂಧರರು. ಮುಂದೆ ಒದಗಬಹುದಾದುದನ್ನು ಮುಂಚಿತವಾಗಿಯೇ ಊಹಿಸುವಂಥ ಜಾಣ್ಮೆ ಉಳ್ಳವರು. ರಾಜ್ಯಶಾಸ್ತ್ರ ವಿಶಾರದರು, ಪರಾಕ್ರಮಿಗಳು ಇಷ್ಟಾದರೂ ಸದಾ ತಾಳ್ಮೆಯಿಂದ ಇರುವವರು. ಯಾವಾಗಲೂ ಮುಗುಳುನಗೆ. ಲೇಶವಾದರೂ ದರ್ಪವಿಲ್ಲ, ಪ್ರತಿಷ್ಠೆಯಿಲ್ಲ, ಜಂಭವಿಲ್ಲ. ಸದಾ ಪ್ರಜೆಗಳ ಹಿತ ವನ್ನೇ ಬಯಸಿ ಪ್ರಜೆಗಳಿಗಾಗಿಯೇ ದುಡಿಯತಕ್ಕಂಥವರು.

ಇಂಥ ಮಂತ್ರಿಗಳಿಂದಲೂ ಪುರೋಹಿತರಿಂದಲೂ ಕೂಡಿ ದಶರಥ ಮಹಾರಾಜ ರಾಜ್ಯವನ್ನು ಪಾಲಿಸುತ್ತಿದ್ದ. ಅವನಿಗೆ ಮೂವರು ಪಟ್ಟಮಹಿಷಿಯರು; ಕೌಸಲ್ಯಾ, ಸುಮಿತ್ರಾ, ಕೈಕೇಯಿ. ಇವರೇ ಅವನ ಮೂವರು ರಾಣಿಯರು. ಸರಸ್ವತೀ, ಸಾವಿತ್ರೀ, ಗಾಯಿತ್ರೀ ದೇವಿಯರಂತೆ ಅವರು ಶೋಭಿಸುತ್ತಿದ್ದರು.

ದಶರಥನಿಗೆ ಎಲ್ಲ ಅನುಕೂಲ ಇತ್ತು. ಯಾವುದಕ್ಕೂ ಕೊರತೆಯಿಲ್ಲ. ಹಾಗೆಂದರೆ ಕಥೆ ಅಲ್ಲಿಗೇ ನಿಂತು ಬಿಡುತ್ತದೆ ಅಲ್ಲವೆ ? ಯಾವುದಾದರೂ ಕೊರತೆ ಇದ್ದರೆ ತಾನೇ ಮುಂದೆ ಕಥೆ ಬೆಳೆಯಲು ಸಾಧ್ಯ !

ದಶರಥನಿಗೆ ಎಲ್ಲ ಸುಖಸೌಭಾಗ್ಯಗಳೂ ಇದ್ದವು. ಆದರೆ ಅವನನ್ನೂ ಒಂದು ಕೊರತೆ ಬಾಧಿಸುತ್ತಿತ್ತು. 60,000 ವರ್ಷಗಳು ರಾಜ್ಯಪರಿಪಾಲನೆ ಮಾಡಿದ್ದಾಯಿತು. ಆದರೂ ವಂಶೋದ್ಧಾರಕ್ಕೆ ಪುತ್ರಭಾಗ್ಯ ಇಲ್ಲದಂತಾಯಿತು. ಇದೇ ಆ ಕೊರತೆ.

ಮಕ್ಕಳಿಲ್ಲದ ಮನೆ ಮಸಣದಂತೆ ಎಂದು ಅನಿಸಿತು ದಶರಥನಿಗೆ. ತನ್ನ ನಂತರ ತನ್ನಂತೆಯೇ ಪ್ರಜೆಗಳನ್ನು ರಕ್ಷಿಸಲು, ತನ್ನ ವಂಶದ ಕೀರ್ತಿಯನ್ನು ಬೆಳೆಸಲು ಒಬ್ಬ ಪುತ್ರ ಇಲ್ಲವಲ್ಲ ಎಂಬ ಚಿಂತೆ ಪ್ರಬಲವಾಯಿತು ಮಹಾರಾಜನಿಗೆ.

ಮಹಾರಾಜ ಮಂತ್ರಿಗಳನ್ನೂ, ಪುರೋಹಿತರನ್ನೂ ಮತ್ತು ಬ್ರಾಹ್ಮಣೋತ್ತಮರನ್ನೂ ಸಭೆಗೆ ಕರೆಯಿಸಿದ. ಅವರೆದುರಿಗೆ ತನ್ನ ದುಃಖವನ್ನು ತೋಡಿಕೊಂಡ. "ಸ್ವಾಮಿ ! ಮಕ್ಕಳಾಗು ವಂತೆ ಅನುಗ್ರಹ ಸಂಪಾದಿಸಬೇಕು. ಅದಕ್ಕಾಗಿ ಅಶ್ವಮೇಧ ಯಾಗವನ್ನೂ ಮಾಡಿದರೆ ಆಗದೆ"? ಎಂದು ಕೇಳಿದ.

ರಾಜನ ಮಾತನ್ನು ಕೇಳಿ ಸಂತೋಷಿಸಿದ ಪುರೋಹಿತ ವಶಿಷ್ಠರು, "ದೊರೆ ! ನೀನು ಹೇಳು ವುದು ಸರಿ. ಸಮಸ್ತ ಪಾಪವನ್ನೂ ಪರಿಹರಿಸತಕ್ಕುದಾಗಿಯೂ, ಸಕಲ ಪುಣ್ಯಪ್ರದವಾಗಿಯೂ ಇರುವ ಅಶ್ವಮೇಧವನ್ನು ನೀನು ನಡೆಸು. ಅದಕ್ಕಾಗಿ ಸಕಲ ಸಂಭಾರಗಳೂ ಸಿದ್ಧವಾಗಲಿ. ಆಮೇಲೆ ಶ್ರೇಷ್ಠವಾದ ಕುದುರೆಯನ್ನು ಬಿಡುವೆಯಂತೆ" ಎಂದರು.

ಅದರಂತೆಯೇ ಯಾಗಕ್ಕೆ ಸಕಲ ಸಿದ್ಧತೆಗಳನ್ನೂ ಮಾಡುವಂತೆ ಮಹಾರಾಜ ಮಂತ್ರಿಗಳಿಗೆ ಆಜ್ಞಾಪಿಸಿದ.

ದಶರಥನ ಅಂತರಂಗ ಸಚಿವ ಸುಮಂತ್ರ ರಾಜನನ್ನು ಕಂಡ. "ಮಹಾರಾಜ, ಹಿಂದೆ ಸನತ್ಕುಮಾರ ಮಹರ್ಷಿಗಳು ಮುನಿವರರ-ಸಭೆಯಲ್ಲಿ ಹೇಳಿದರು. ಆ ಮಾತು ನನಗೆ ಈಗ ನೆನಪಿಗೆ ಬರುತ್ತಿದೆ. ಅದನ್ನು ಹೇಳುತ್ತೇನೆ ಕೇಳು" ಎಂದು ಋಷ್ಯಶೃಂಗರ ವೃತ್ತಾಂತವನ್ನು ಹೇಳುತ್ತಾನೆ.

ವಿಭಾಂಡಕ ಮಹರ್ಷಿಗಳಿಗೆ ಋಷ್ಯಶೃಂಗ ಎಂಬ ಒಬ್ಬ ಪುತ್ರ. ಋಷ್ಯಶೃಂಗನಿಗೆ ತಲೆಯಲ್ಲಿ ಜಿಂಕೆ ಗಿರುವಂತೆ ಎರಡು ಕೊಂಬು. ಆ ಋಷ್ಯಶೃಂಗ ಬ್ರಹ್ಮಚಾರಿ. ಪ್ರಕೃತಿಯ ವೈವಿಧ್ಯತೆಯನ್ನೆ ಪ್ರಕೃತಿ ಭೇದವನ್ನೇ ಕಂಡರಿಯದವನ. ಸದಾ ತಪಸ್ಸಿನಲ್ಲೇ ನಿರತನಾಗಿರುವವನ. ಅಂಗದೇಶದಲ್ಲಿ ರೋಮಪಾದ ರಾಜ ರಾಜ್ಯಭಾರ ಮಾಡುತ್ತಿರುವ ವೇಳೆ. ಅವನು ನಡೆಸಿದ ಬ್ರಾಹ್ಮಣ ಅಪರಾಧ ದಿಂದ ಮಳೆಯಾಗದೆ ಹೋಯಿತು. ಕ್ಷಾಮ ತಲೆದೋರಿತು. ರಾಜ ಅದಕ್ಕೆ ಉಪಾಯವನ್ನು ಕೇಳಿದ. ಆಗ ಬ್ರಾಹ್ಮಣರು ವಿಭಾಂಡಕ ಪುತ್ರ ಋಷ್ಯಶೃಂಗರನ್ನು ಅಂಗದೇಶಕ್ಕೆ ಕರೆತಂದರೆ ಅವರ ಯೋಗಬಲದಿಂದ ಮಳೆಯಾಗುವುದು ಎಂದರು. ಹಾಗೆಯೇ ಋಷ್ಯಶೃಂಗರನ್ನು ರೋಮಪಾದನಿಂದ ಕಳುಹಿಸಲ್ಪಟ್ಟ ವೇಶ್ಯೆಯರು ವಿಭಾಂಡಕರಿಲ್ಲದ ವೇಳೆ ಮೋಹಗೊಳಿಸಿ ಅಂಗದೇಶಕ್ಕೆ ಕರೆದುತಂದರು ಋಷ್ಯಶೃಂಗ ಅಂಗದೇಶಕ್ಕೆ ಕಾಲಿಡುತ್ತಲೇ ಮಳೆ ಸುರಿಯಿತು. ಸುಪ್ರೀತನಾದ ರಾಜ ತನ್ನ ಮಗಳಾದ ಶಾಂತೆಯನ್ನು ಋಷ್ಯಶೃಂಗರಿಗಿತ್ತು ವಿವಾಹಮಾಡಿ ಅವರನ್ನು ತನ್ನ ಬಳಿಯೇ ಇರಿಸಿಕೊಂಡ.

ಪೆರಿಯಾಳ್ವಾರರ ಮಗಳಾದ ಆಂಡಾಳ್ ಶ್ರೀರಂಗನಾಥನನ್ನು ವರಿಸಿದಳು. ಶ್ರೀವಿಲ್ಲಿ ಪುತ್ತೂರು ಆಳ್ವಾರರ ಊರು. ರಂಗನಾಥನಿಗೆ ಆಂಡಾಳನ್ನು ಕೊಟ್ಟಮೇಲೆ ಮಗಳನ್ನು ಕಳುಹಿಸಿ ಬಿಡಬೇಕಾಗುತ್ತದೆ ಎಂಬ ಚಿಂತೆ ಆಳ್ವಾರರಿಗೆ. ಮಗಳನ್ನು ಬಿಟ್ಟಿರಲು ಆಗಲಿಲ್ಲ. ಅದಕ್ಕೆ ರಂಗನಾಥ ನನ್ನೇ ಶ್ರೀವಿಲ್ಲಿಪುತ್ತೂರಿಗೇ ಬಂದು ಇರುವಂತೆ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆಯೇ ಶ್ರೀರಂಗದಂತೆ ಶ್ರೀವಿಲ್ಲಿ ಪುತ್ತೂರಿನಲ್ಲೂ ರಂಗನಾಥ ಆವಿರ್ಭವಿಸಿದ. ಅಳಿಯನನ್ನೂ ಮಗಳನ್ನೂ ಪೆರಿಯಾಳ್ವಾರ್ ತಮ್ಮೊಡನೆಯೇ ಇರಿಸಿಕೊಂಡಂತೆ ರೋಮಪಾದ ಮಹಾರಾಜ ಶಾಂತೆಯನ್ನೂ ಋಷ್ಯಶೃಂಗರನ್ನೂ ತನ್ನ ಮನೆಯಲ್ಲೇ ಇರಿಸಿಕೊಂಡ.

ಆ ಋಷ್ಯಶೃಂಗರನ್ನು ಕರೆದು ತಂದು ಅವರಿಂದ ಅಶ್ವಮೇಧಯಾಗ ಮಾಡಿಸಿದರೆ ಮಕ್ಕಳಾ ಗುತ್ತದೆ ಎಂದು ಸನತ್ಕುಮಾರರು ಹೇಳಿದ್ದರು. ಅದನ್ನೇ ಈಗ ನಾನು ಹೇಳುತ್ತಿದೇನೆ ಎಂದು ಸುಮಂತ್ರ ದಶರಥನಿಗೆ ಹೇಳಿದ.

ಸುಮಂತ್ರ ಹೇಳಿದ್ದನ್ನು ದಶರಥ ಕುಲಪುರೋಹಿತರಾದ ವಶಿಷ್ಠರಲ್ಲಿ ವಿಜ್ಞಾಪಿಸಿಕೊಂಡ. ಇದನ್ನು ಕೇಳಿದ ವಶಿಷ್ಠರು ಸಂತುಷ್ಟರಾಗಿ "ರಾಜ ! ನೀನೇ ಸ್ವತಃ ಅಂಗದೇಶಕ್ಕೆ ಹೋಗಿ ಋಷ್ಯ ಶೃಂಗರನ್ನು ಕರೆದು ತಾ. ಅವರಿಂದಲೇ ಯಜ್ಞ, ನಡೆಯುವಂತಾಗಲಿ" ಎಂದು ಒತ್ತಾಯಿಸಿದರು. ಅದರಂತೆ ದಶರಥ ತಾನೇ ಸ್ವತಃ ಅಂಗದೇಶಕ್ಕೆ ಹೋದ. ಬಂದ ಮಿತ್ರರನ್ನು ರೋಮಪಾದ ಸಂಭ್ರಮದಿಂದ ಸ್ವಾಗತಿಸಿದ. ಸಂತೋಷದಿಂದ ಮಗಳನ್ನೂ ಅಳಿಯನನ್ನೂ ಕಳುಹಿಸಿದ.

ಶಾಂತಾ ಋಷ್ಯಶೃಂಗರೊಡನೆ ದಶರಥ ನಗರವನ್ನು ಪ್ರವೇಶಿಸಿದ. ಅವರನ್ನು ಇದಿರು ಗೊಳ್ಳಲು ಸಕಲ ಸನ್ನಾಹಗಳೂ ನಡೆದಿದ್ದವು. ರಾಜಧಾನಿಯು ತಳಿರು ತೋರಣಗಳಿಂದಲೂ, ಧ್ವಜ ಪತಾಕೆಗಳಿಂದಲೂ ಅಲಂಕೃತವಾಗಿತ್ತು. ಸುಗಂಧ ಮಿಶ್ರಿತವಾದ ತಣ್ಣೀರನ್ನು ಚಿಮುಕಿಸಿ ರಾಜಮಾರ್ಗವನ್ನು ಹಸನಾಗಿಸಿದ್ದರು. ಅಲ್ಲಲ್ಲಿ ವಿಶ್ರಾಂತಿಗಾಗಿ ಮಂಟಪಗಳನ್ನು ನಿರ್ಮಿಸಿದ್ದರು.

ಯಾಗಕ್ಕಾಗಿ ಸರಯೂ ತೀರದಲ್ಲಿ ಭವ್ಯವಾದ ಯಜ್ಞಶಾಲೆ ನಿರ್ಮಿತವಾಯಿತು. ಉಚ್ಚೈಃ ಶ್ರವಸ್ಸನ್ನು ಹೋಲುವ ಉತ್ತಮವಾದ ಕುದುರೆಯನ್ನು ದಿಗ್ವಿಜಯಾರ್ಥ ಕಳುಹಿಸಿದ್ದಾಯಿತು. ಅದರ ಬೆಂಗಾವಲಿಗಾಗಿ ಸಮರ್ಥರಾದ ಶೂರರಾದ ಬೆಂಬಲಿಗರ ಪಡೆಯನ್ನು ಕಳುಹಿಸಿದ ದಶರಥ. ಒಂದು ವರ್ಷದವರೆಗೆ ಕುದುರೆ ನಾನಾಭಾಗಗಳಲ್ಲಿ ಸಂಚರಿಸಿ ಹಿಂದಿರುಗಿತು. ಯಾರೂ ದಶರಥನ ಕುದುರೆಯನ್ನು ಕಟ್ಟುವ ಸಾಹಸವನ್ನೇ ಮಾಡಲಿಲ್ಲ. ರಾಮ ಅಶ್ವಮೇಧ ಮಾಡುವಾಗ ಆಪಸೆ

ಮಕ್ಕಳೇ ಅವನ ಕುದುರೆಯನ್ನು ಕಟ್ಟುತ್ತಾರೆ. ಆದರೆ, ದಶರಥನ ಕುದುರೆ ಒಂದು ವರ್ಷದಲ್ಲಿ ಯಾರಿಂದಲೂ ಕಟ್ಟಿಸಿಕೊಳ್ಳದೆಯೇ ಹಿಂದಿರುಗಿತು.

ಅಶ್ವಮೇಧ ಎಂದರೆ ಸಾಮಾನ್ಯವೆ. ಅದಕ್ಕಾಗಿ ಸರ್ವಸಿದ್ಧತೆಗಳಾದವು. ಯಾರು ಏನು ಕೇಳಿದರೂ ಯಥೇಚ್ಛವಾಗಿ ದೊರೆಯುತ್ತಿತ್ತು.

"ಇಲ್ಲಿ ಭೋಜನ !" "ಇಲ್ಲಿ ವಸ್ತ್ರ" "ಇಲ್ಲಿ ಆಭರಣಗಳು" ಎಂದು ಎಲ್ಲ ಕಡೆಗಳಲ್ಲಿ ಕೂಗು ಕೇಳಿಬರುತ್ತಿತ್ತು. ಒಬ್ಬೊಬ್ಬರಿಗೂ ವಿಶೇಷವಾದ ಗಮನ ಕೊಡಲಾಗಿತ್ತು. ಎಲ್ಲರೂ ಯಾಗ ದಲ್ಲಿ ಸಂತೃಪ್ತರಾಗಿ ಭಾಗವಹಿಸಿದರು. ಎಲ್ಲರೂ ದಶರಥನನ್ನು ಕೊಂಡಾಡುವವರೇ.

ಕುಲಪುರೋಹಿತರೊಡನೆ. ಉತ್ತಮ ಬ್ರಾಹ್ಮಣರೊಡನೆ, ಮಹಾಋಷಿಗಳೊಡನೆ ಕೂಡಿ ಋಷ್ಯಶೃಂಗರು ಅಶ್ವಮೇಧವನ್ನು ಮಾಡಿದರು.

ಅಶ್ವಮೇಧಯಾಗದ ಕೆಲಸವೆಲ್ಲ ಸಾಂಗವಾಗಿ ನೆರವೇರಿತು. ಹಿಂದೆ ಬ್ರಹ್ಮನು ಅಶ್ವಮೇಧ ವನ್ನು ಮಾಡಿದಾಗ ಅನುಸರಿಸಿದ ಕ್ರಮವನ್ನನುಸರಿಸಿ ದಶರಥ ಋತ್ವಿಕ್ಕುಗಳಿಗೆ ತನ್ನ ರಾಜ್ಯವನ್ನೇ ಹಂಚಿಬಿಟ್ಟ.

ಔದಾರ್ಯಗುಣದ ಮಹಾರಾಜನ ಸೌಶೀಲ್ಯವನ್ನು ಕೊಂಡಾಡಿದ ಋತ್ವಿಜರು "ನಮಗೆ ಈ ಭೂಮಿ ಬೇಡ. ನಾವು ಇದನ್ನು ಆಳಲು ಶಕ್ತರಲ್ಲ. ಇದನ್ನು ನೀನೇ ಪರಿಪಾಲಿಸು. ಇದಕ್ಕೆ ಬದಲಾಗಿ ದಕ್ಷಿಣೆಯನ್ನೂ ಹಸುಗಳನ್ನೂ, ಕೊಡು" ಎಂದರು.

ಆಗ ಅರಸ ಬ್ರಾಹ್ಮಣರಿಗೆ ಹತ್ತು ಲಕ್ಷ ಹಸುಗಳನ್ನೂ, ಹತ್ತು ಕೋಟಿ ಚಿನ್ನದ ನಾಣ್ಯ ಗಳನ್ನೂ, ನಲವತ್ತುಕೋಟಿ ಬೆಳ್ಳಿಯನ್ನೂ ದಾನವಾಗಿ ಕೊಟ್ಟ. ಎಲ್ಲವೂ ಸಾಂಗವಾಗಿ ನಡೆದ ಬಳಿಕ ಋಷ್ಯಶೃಂಗ ದಶರಥನನ್ನು ಕುರಿತು "ರಾಜನ್–ಇನ್ನು ನಾನು ನಿನಗಾಗಿ ಪುತ್ರಕಾಮೇಷ್ಟಿ ಯನ್ನು ನಡೆಸುತ್ತೇನೆ, ಆದರಿಂದ ನಿನಗೆ ಪುತ್ರಭಾಗ್ಯವುಂಟಾಗುತ್ತದೆ" ಎಂದು ಹೇಳಿ ಪುತ್ರಕಾಮೇಷ್ಟಿ ಯಾಗವನ್ನು ಪ್ರಾರಂಭಿಸಿದ.

ಆಗ ದೇವತೆಗಳೆಲ್ಲ ಬ್ರಹ್ಮನಲ್ಲಿಗೆ ಹೋಗಿ ಮೊರೆಯಿಟ್ಟರು. "ನಿಮ್ಮ ವರದಿಂದ ಮತ್ತನಾದ ರಾವಣನ ಬಾಧೆಯನ್ನು ತಾಳಲಾರೆವು. ನಮ್ಮನ್ನು ಕಾಪಾಡಬೇಕು." ಬ್ರಹ್ಮನು ಅವರನ್ನು ಸಮಾ ಧಾನಪಡಿಸುತ್ತ "ರಾವಣನಿಗೆ ಯಾರಿಂದಲೂ, ಯಾವ ರೀತಿಯಲ್ಲೂ ಮರಣವಿಲ್ಲದಂತೆ ನಾನೇನೋ ಅನುಗ್ರಹಿಸಿರುತ್ತೇನೆ. ಆದರೆ, ಮನುಷ್ಯರಿಂದ ಸಾವು ಬೇಡ ಎಂದು ಮಾತ್ರ ಅವನು ಕೇಳಲಿಲ್ಲ. ಆದ್ದರಿಂದ, ಮನುಷ್ಯರು ಯಾರಾದರೂ ಅವನನ್ನು ಕೊಲ್ಲಬಹುದು" ಎಂದ. ಬ್ರಹ್ಮ ಹೀಗೆ ಹೇಳುತ್ತಿರುವಂತೆಯೇ ಅಲ್ಲಿ ಕೋಟಿಸೂರ್ಯಪ್ರಕಾಶವೊಂದು ಮಿಂಚಿದಂತಾಯ್ತು. ಆ ಪ್ರಕಾಶದ ಮಧ್ಯೆ ಶಂಕ ಚಕ್ರ ಗದಾಧಾರಿಯಾದ ಶ್ರೀ ಮಹಾವಿಷ್ಣು ಮೈದೋರಿದ. ಮಹಾವಿಷ್ಣುವನ್ನು ಕಂಡದೇವತೆಗಳೆಲ್ಲ ಅವನಿಗೆ ಕೈ ಮುಗಿದು ತಮ್ಮನ್ನು ರಾವಣನ ಬಾಧೆಯಿಂದ ಮುಕ್ತರನ್ನಾಗಿ ಮಾಡ ಬೇಕು ಎಂದು ಶರಣಾದರು.

ಶರಣಾದ ದೇವತೆಗಳಿಗೆ ಅಭಯವನ್ನಿತ್ತು ಮಹಾವಿಷ್ಣು ತಾನೇ ಮಾನವನಾಗಿ ದಶರಥನಲ್ಲಿ ಅವತರಿಸಿ ರಾವಣನನ್ನು ನಿಗ್ರಹಿಸುವುದಾಗಿ ಹೇಳಿ ಅಂತರ್ಧಾನನಾದ.

ಮಹಾವಿಷ್ಣು ಅಂತರ್ಧಾನ ಹೊಂದಿದ ನಂತರ ಬ್ರಹ್ಮನು ದೇವತೆಗಳನ್ನು ಕುರಿತು ವಿಷ್ಣುವಿನ ಬೆಂಬಲಕ್ಕಾಗಿ ತಮ್ಮ ತಮ್ಮ ಅಂಶಗಳಿಂದ ವಾನರರನ್ನು ಸೃಜಿಸುವಂತೆ ಹೇಳಿದ. ಅದರಂತೆಯೇ

ಎಲ್ಲ ದೇವತೆಗಳೂ, ಋಷಿಗಳೂ, ಸಿದ್ಧರೂ, ಚಾರಣರೂ ತಮ್ಮ ತಮ್ಮ ಅಂಶಗಳಿಂದ ವಾನರರನ್ನೂ, ಕರಡಿಗಳನ್ನೂ ಸೃಷ್ಟಿಸಿದರು. ದೇವೇಂದ್ರ ವಾಲಿಯನ್ನೂ, ಸೂರ್ಯ ಸುಗ್ರೀವನನ್ನೂ, ಬೃಹಸ್ಪತಿ ತಾರನೆಂಬ ಕಪಿಯನ್ನೂ, ಕುಬೇರನು ಗಂಧಮಾದನನನ್ನೂ, ದೇವಶಿಲ್ಪಿ ವಿಶ್ವಕರ್ಮ ನಳನನ್ನೂ, ಅಗ್ನಿ ನೀಲನನ್ನೂ, ಅಶ್ವಿನೀದೇವತೆಗಳು ಮೈಂದ-ದ್ವಿವಿದರನ್ನೂ, ವರುಣ ಸುಷೇಣನನ್ನೂ ಸೃಷ್ಟಿಸಿದರು.

ವಾಯುದೇವನ ಅಂಶದಲ್ಲಿ ಹನುಮಂತ ಹುಟ್ಟಿದ. ವಜ್ರದೇಹಿಯಾಗಿ ಗರುಡನಂತೆ ವೇಗವುಳ್ಳವನಾಗಿ, ಸೂರ್ಯನಂತೆ ತೇಜಸ್ವಿಯಾಗಿ ಬೆಳಗಿದ. ಅಪ್ಸರೆಯರಲ್ಲೂ, ಗಂಧರ್ವ ಸ್ತ್ರೀಯರಲ್ಲೂ, ನಾಗಕನ್ಯೆಯರಲ್ಲೂ ಹುಟ್ಟಿದ ವಾನರ ವೀರರೆಲ್ಲ ಪರಾಕ್ರಮಿಗಳು. ಹತ್ತುಸಾವಿರ ಆನೆಯ ಬಲವುಳ್ಳವರು ಒಬ್ಬೊಬ್ಬರೂ. ಎಲ್ಲರೂ ಕಾಮರೂಪಿಗಳು. ಎಲ್ಲರೂ ಹುಟ್ಟಿದರು ರಾಮ ಸೇವೆಗಾಗಿ.

ಪುತ್ರಕಾಮೇಷ್ಟಿ ಯಾಗ ಮುಗಿಯುತ್ತ ಬಂದಿತು. ಎಲ್ಲ ದೇವತೆಗಳೂ ತಾವಾಗಿಯೇ ಬಂದು ತಮ್ಮ ಭಾಗದ ಹವಿಸ್ಸನ್ನು ಸ್ವೀಕರಿಸಿದರು. ಇಂಥ ಯಾಗ ಹಿಂದೆಂದೂ ನಡೆದಿಲ್ಲ ಎನ್ನುವಷ್ಟು ಭವ್ಯವಾಗಿ ಜರುಗಿತು.

ಯಾಗಾಂತ್ಯದಲ್ಲಿ ಯಾಗಾಗ್ನಿಯಿಂದ ಉದ್ಭವಿಸಿದ, ಒಬ್ಬ ದಿವ್ಯ ಪುರುಷ. ಅವನ ದೇಹ ಸುವರ್ಣ ಕಾಂತಿಯನ್ನು ಚೆಲ್ಲುತ್ತಿತ್ತು. ಅವನು ತನ್ನ ಎರಡೂ ಕೈಗಳಲ್ಲಿ ಚಿನ್ನದ ಕೊಡ ಹಿಡಿದಿದ್ದ. ಆ ಸುವರ್ಣದ ಕೊಡದಲ್ಲಿ ದೇವನಿರ್ಮಿತವಾದ ಪಾಯಸವಿತ್ತು. ಆ ಕೊಡವನ್ನು ಬೆಳ್ಳಿಯ ಮುಚ್ಚಳದಿಂದ ಮುಚ್ಚಲಾಗಿತ್ತು. ಆ ಚಿನ್ನದ ಕೊಡವನ್ನು ಆ ತೇಜೋಪುರುಷ, ಪ್ರಿಯನು ಪ್ರೇಯಸಿಯನ್ನು ಅಪ್ಪಿಕೊಳ್ಳುವಂತೆ, ತಬ್ಬಿಕೊಂಡು ಯಜ್ಞಕುಂಡದಿಂದ ಹೊರ ಬಂದ.

ಹೊರಬಂದ ಯಜ್ಞಪುರುಷನನ್ನು ನೋಡಿದ ದಶರಥ. ನಿನಗೇನು ಬೇಕು? ಎಂದು ಕೇಳಿದ. ಇಕ್ಷ್ವಾಕುವಂಶದ ಹಿರಿಮೆಯೇ ಅಂಥದು. ಯಾವಾಗಲೂ ಇತರರಿಗೆ ನೀಡುವುದೇ ಅವರ ಸ್ವಭಾವ. ಯಜ್ಞದಿಂದ ಪ್ರೀತನಾದ ಯಜ್ಞಪುರುಷ ತಾನೇ ಸಾಕ್ಷಾತ್ತಾಗಿ ದಶರಥನ ಮನೋರಥವನ್ನು ಪೂರೈಸಲು ಬಂದಿದಾನೆ. ಅಂಥ ಯಜ್ಞಪುರುಷನನ್ನೇ ಕೇಳಿದ ದಶರಥ "ನಿನಗೇನು ಬೇಕು?" ಎಂದು.

ಬಂದ ಯಜ್ಞಪುರುಷ ತಾನು ತಂದಿದ್ದ ಪಾಯಸಪೂರ್ಣವಾದ ಕೊಡವನ್ನು ದಶರಥನಿಗಿತ್ತು "ಇದರಲ್ಲಿ ದೇವನಿರ್ಮಿತವಾದ ಪಾಯಸವಿದೆ. ಇದನ್ನು ನಿನ್ನ ಪತ್ನಿಯರಿಗೆ ಹಂಚಿಕೊಡು, ನಿನ್ನ ಇಷ್ಟಾರ್ಥ ನೆರವೇರುತ್ತದೆ" ಎಂದು ಹೇಳಿ ಅಂತರ್ಧಾನನಾದ.

ದಶರಥ ಬಹಳ ಸಂತೋಷಪಟ್ಟ. ತನ್ನ ಮೂವರು ರಾಣಿಯರನ್ನೂ ಕರೆದ. ಪಾಯಸದ ಅರ್ಧಭಾಗವನ್ನು ಹಿರಿಯಳಾದ ಕೌಸಲ್ಯೆಗೆ ಕೊಟ್ಟ. ಉಳಿದ ಅರ್ಧಭಾಗದಲ್ಲಿ ಅರ್ಧವನ್ನು ಎರಡನೆಯವಳಾದ ಸುಮಿತ್ರೆಗೆ ಕೊಟ್ಟ. ಉಳಿದ ಕಾಲುಭಾಗದಲ್ಲಿ ಅರ್ಧಭಾಗವನ್ನು ಕಿರಿಯಳಾದ ಕೈಕೇಯಿಗೆ ಕೊಟ್ಟ. ಮತ್ತೆ ಉಳಿದ ಅರೆಕಾಲು ಭಾಗವನ್ನು ಪುನಃ ಸುಮಿತ್ರೆಗೇ ಹಂಚಿದ. ಹೀಗೆ ಪಾಯಸವನ್ನು ಸವಿದು ಮೂವರು ರಾಣಿಯರೂ ಸಂತುಷ್ಟರಾದರು. ದಶರಥನೂ ಆನಂದಪಟ್ಟ

ಪಾಯಸ ವಿಭಾಗದ ಪ್ರಸಂಗ ಹಲವಾರು ರಾಮಾಯಣದಲ್ಲಿ ಹಲವಾರು ರೀತಿಯಲ್ಲಿ ವಿವರಿಸಲ್ಪಟ್ಟಿದೆ.

ಪಾರ್ವತಿ ದಿನನಿತ್ಯದಲ್ಲಿ ಸಹಸ್ರನಾಮಪಾರಾಯಣ ಮಾಡುತ್ತಿದ್ದಳು. ಅದಕ್ಕೆ ಬಹಳ ಕಾಲ ಹಿಡಿಯುತ್ತಿತ್ತು. ಒಂದು ದಿನ ಪರಶಿವನನ್ನು ಕೇಳಿದಳು. "ಸಹಸ್ರನಾಮಕ್ಕೆ ಸರಿದೂಗು ವಂಥ ಒಂದೇ ನಾಮ ಉಂಟೆ?" ಎಂದು. ಆಗ ಪರಶಿವ ಪಾರ್ವತಿಗೆ ಹೇಳಿದ "ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ। ಸಹಸ್ರನಾಮ ತತ್ತುಲ್ಯಂ ಶ್ರೀರಾಮ ನಾಮ ವರಾನನೇ"

"ರಾಮನಾಮ ಒಂದು ಸಹಸ್ರ ನಾಮಕ್ಕೆ ಸರಿಸಾಟಿಯಾದುದು" ಎಂದು ಹೇಳಿ ರಾಮಾಯಣ ವನ್ನು ಪಾರ್ವತಿಗೆ ಹೇಳುತ್ತಾನೆ. ಪರಮಶಿವ ಪಾರ್ವತಿಗೆ ಹೇಳಿದ ರಾಮಾಯಣ ಆಧ್ಯಾತ್ಮ ರಾಮಾಯಣ ಎಂದು ಪ್ರಸಿದ್ಧವಾಗಿದೆ.

ಆದರ ಪ್ರಕಾರ ದಶರಥ ಪಾಯಸದ ಅರ್ಧ ಭಾಗವನ್ನು ಕೌಸಲ್ಯೆಗೆ ಕೊಟ್ಟ. ಉಳಿದರ್ಧ ವನ್ನು ಕೈಕೇಯಿಗೆ ಕೊಟ್ಟ. ಸುಮಿತ್ರೆಗೆ ಪಾಯಸವೇ ಇಲ್ಲದಂತಾಯಿತು. ಇದನ್ನು ಕಂಡ ಕೌಸಲ್ಯೆ ತನ್ನ ಪಾಲಿನ ಪಾಯಸದಲ್ಲಿ ಅರ್ಧವನ್ನು ಸುಮಿತ್ರೆಗೆ ಕೊಟ್ಟಳು. ಕೈಕೇಯಿಯೂ ತನ್ನ ಪಾಲಿನ ಪಾಯಸದಲ್ಲಿ ಅರ್ಧಭಾಗವನ್ನು ಕೊಟ್ಟಳು. ಕೌಸಲ್ಯೆ ಕೊಟ್ಟ ಭಾಗದಿಂದ ಅವತರಿಸಿದ ಲಕ್ಷ್ಮಣ ಕೌಸಲ್ಯೆ ಪುತ್ರನಾದ ರಾಮನನ್ನನುಸರಿಸಿದ. ಕೈಕೇಯಿ ಕೊಟ್ಟ ಪಾಲಿನಿಂದ ಜನಿಸಿದ ಶತ್ರುಘ್ನ ಕೈಕೇಯೀ ಪುತ್ರನಾದ ಭರತನ ಅನುಚರನಾದ.

ಹೀಗೆ ಬೇರೆ ಬೇರೆ ರಾಮಾಯಣದಲ್ಲಿ ವಿವಿಧ ರೀತಿಯಲ್ಲಿ ಪಾಯಸ ವಿಭಾಗ ವಿವರಿಸ ಲ್ಪಟ್ಟಿದೆ.

ಯಾಗ ಪೂರ್ತಿಯಾಯಿತು. ರಾಜ ತನ್ನ ಮಡದಿಯರೊಂದಿಗೆ ಅವಭೃತ ಸ್ನಾನವನ್ನು ಮುಗಿಸಿ ಪಟ್ಟಣಕ್ಕೆ ಹೊರಡಲು ಸನ್ನದ್ಧನಾದ. ತನ್ನ ಎಲ್ಲ ಐಶ್ವರ್ಯವನ್ನೂ ದಾನ ಮಾಡಿ ಬಿಟ್ಟಿದ್ದ ದಶರಥ. ಆಗ ಅಲ್ಲಿಗೆ ಬಂದ ಒಬ್ಬ ಬ್ರಾಹ್ಮಣ. "ರಾಜ! ನನಗೆ ಏನಾದರೂ ಕೊಡು" ಎಂದ. ನೋಡಿದ ದಶರಥ. ಎಲ್ಲವನ್ನೂ ಯಾಗದಲ್ಲೇ ಕೊಟ್ಟಾಗಿತ್ತು. ತನ್ನ ತೋಳಿನಲ್ಲಿದ್ದ ರತ್ನಖಚಿತವಾದ ಕಂಕಣವನ್ನೇ ಕಳಚಿ ಬ್ರಾಹ್ಮಣನಿಗಿತ್ತ. ಸುಪ್ರೀತನಾದ ಬ್ರಾಹ್ಮಣ ದಶರಥನನ್ನು ಹರಸಿ ಹೊರ ಹೊರಟ.

ಆ ಬ್ರಾಹ್ಮಣ ಮತ್ತಾರೂ ಅಲ್ಲ. ಸಾಕ್ಷಾತ್ ನಾರಾಯಣನೇ. ತನ್ನ ಭಾವೀ ತಂದೆಯ ಗುಣವನ್ನು ಪರೀಕ್ಷಿಸುವ ಸಲುವಾಗಿ ಬ್ರಾಹ್ಮಣವೇಷ ಧರಿಸಿ ಬಂದಿದ್ದವ. ಸಕಲ ಕಲ್ಯಾಣ ಗುಣ ಪೂರ್ಣನಾದ ಸಾಕ್ಷಾತ್ ಮಹಾವಿಷ್ಣುವನ್ನೆ ಪುತ್ರನನ್ನಾಗಿ ಪಡೆಯಬೇಕಾದರೆ ಅವನಲ್ಲಿ ಎಂಥ ಯೋಗ್ಯತೆ ಇರಬೇಕು ಎಂಬುದನ್ನು ಪರೀಕ್ಷಿಸುವುದಕ್ಕಾಗಿಯೇ ಆ ಬ್ರಾಹ್ಮಣ ಹಾಗೆ ಬಂದದ್ದು.

ಸಂತೋಷದಿಂದ ರಾಜ ತನ್ನ ರಾಣಿಯರೊಡಗೂಡಿ ಅರಮನೆಯನ್ನು ಪ್ರವೇಶಿಸಿದ. ಕಾಲ ಕ್ರಮದಲ್ಲಿ ಮೂವರು ರಾಣಿಯರೂ ದೈವಾನುಗ್ರಹದಿಂದ ಗರ್ಭವತಿಯರಾದರು. ದಿನೇ ದಿನೇ ಹುಣ್ಣಿಮೆಯ ಚಂದ್ರನಂತೆ ಪ್ರವರ್ಧಮಾನರಾಗುತ್ತಿದ್ದರು. ರಾಣಿಯರ ಮುಖಗಳಲ್ಲಿ ದೈವೀ ತೇಜಸ್ಸು ಒಡೆದು ಮೂಡುತ್ತಿತ್ತು. ವೃದ್ಧನಾದ ದಶರಥನಾದರೋ ಪುತ್ರನ ಆಗಮನವನ್ನೇ ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದ. ಹನ್ನೆರಡು ತಿಂಗಳುಗಳು ಕಳೆದವು.

## ಪಾಯಸದ ತತ್ತ್ವ

ಯಾಗಾಂತ್ಯದಲ್ಲಿ ಯಜ್ಞಪುರುಷ ಚಿನ್ನದ ಕೊಡದಲ್ಲಿ ಬೆಳ್ಳಿಯ ಮುಚ್ಚಳದೊಡನೆ ಇದ್ದ

ಪಾಯಸವನ್ನು ದಶರಥನಿಗಿತ್ತ ಎಂದಿದೆ. ಇದರಲ್ಲಿ ಪೂರ್ವಾಚಾರ್ಯರು ಗಹನವಾದ ವಿಶಿಷ್ಟಾದ್ವೈತ ತತ್ವವನ್ನು ಕಂಡುಕೊಂಡಿದ್ದಾರೆ. ಚಿನ್ನದ ಕೊಡ ಎಂಬುದೇ ಜೀವಾತ್ಮ. ಪಾಯಸವೇ ಪರಮಾತ್ಮ ತತ್ವ. ಬೆಳ್ಳಿಯ ಮುಚ್ಚಳವೇ ಪ್ರಕೃತಿ. ಜೀವಾತ್ಮ, ಪರಮಾತ್ಮ ಮತ್ತು ಪ್ರಕೃತಿ ಇವುಗಳ ಸಂಶ್ಲೇಷದಿಂದಲೇ, ಇವುಗಳ ಸಂಮಿಲನದಿಂದಲೇ ಸೃಷ್ಟಿಕ್ರಮ ಸಾಧ್ಯ ಎಂಬ ತತ್ವವನ್ನೇ ಇದು ನಿರೂಪಿಸುತ್ತದೆ.

## ಶ್ರೀರಾಮಾವತಾರ

ಹನ್ನೆರಡು ತಿಂಗಳು ಪೂರ್ತಿಯಾಗುತ್ತ ಬಂದಿತು. ಆಗ,

"ತತಶ್ಚ ದ್ವಾದಶೇ ಮಾಸೇ ಚೈತ್ರೇ ನಾವಮಿಕೇ ತಿಥೌ
ನಕ್ಷತ್ರೇ ಅದಿತಿ ದೈವತ್ಯೇ ಸ್ವೋಚ್ಚ ಸಂಸ್ಥೇಷು ಪಂಚಸು ।
ಗ್ರಹೇಷು ಕರ್ಕಟೇ ಲಗ್ನೇ ವಾಕ್ಪತಾವಿಂದುನಾ ಸಹ
ಪ್ರೋದ್ಯಮಾನೇ ಜಗನ್ನಾಥಂ ಸರ್ವಲೋಕ ನಮಸ್ಕೃತಂ
ಕೌಸಲ್ಯಾಜನಯತ್ ರಾಮಂ ಸರ್ವ ಲಕ್ಷಣ ಸಂಯುತಂ ।
ವಿಷ್ಣೋರರ್ಧಂ ಮಹಾಭಾಗಂ ಪುತ್ರಂ ಇಕ್ಷ್ವಾಕು ವರ್ಧನಂ ॥

ಹನ್ನೆರಡನೇ ತಿಂಗಳಿನಲ್ಲಿ ಚೈತ್ರಮಾಸದ ನವಮೀ ತಿಥಿಯಲ್ಲಿ ಪುನರ್ವಸು ನಕ್ಷತ್ರದಲ್ಲಿ ಐದು ಗ್ರಹಗಳೂ ಉಚ್ಚಸ್ಥಾನದಲ್ಲಿರುವಾಗ ಕರ್ಕಾಟಕ ಲಗ್ನದಲ್ಲಿ ಜಗನ್ನಾಥ, ಸರ್ವಲೋಕ ನಮಸ್ಕೃತನಾದ ಸಾಕ್ಷಾತ್ ಮಹಾವಿಷ್ಣುವೇ ಮೈದೋರಿದ.

ಶ್ರೀರಾಮ ಅವತರಿಸಿದ್ದು ನವಮಿಯಂದು. ನವಮಿಯನ್ನು ಎಲ್ಲರೂ ನಿಂದಿಸುತ್ತಿದ್ದರು. ಅಂದು ಪ್ರಯಾಣ ಬೆಳೆಸಬಾರದು ಎಂದು ಶಾಸ್ತ್ರ. ಒಮ್ಮೆ ದಂಪತಿಗಳು ನವಮಿಯಂದು ಪ್ರಯಾಣ ಹೊರಟರು. ಸ್ವಲ್ಪ ದೂರ ಹೋಗಿ ಶ್ರಮ ಪರಿಹಾರಕ್ಕಾಗಿ ಒಂದೆಡೆ ತಂಗಿದರು. ಅಲ್ಲಿಗೇ ಕೆಲವು ಜನರು ಬಂದು ನೇರಿದರು. ಅವರಲ್ಲಿ ಒಬ್ಬ ಈ ದಂಪತಿಗಳ ಹತ್ತಿರ ಬಂದ. ಬಂದವನೇ ಆ ವ್ಯಕ್ತಿಯ ಮಡದಿಯ ಕೈಯ್ಯನ್ನು ಹಿಡಿದುಕೊಂಡ. ಗಂಡನಿಗೆ ಕೋಪ ಬಂದು ಕೈ ಬಿಡುವಂತೆ ಹೇಳಿದ. ಆಗ ಬಂದವ "ಇವಳು ನನ್ನ ಹೆಂಡತಿ—ನಾ ಬಿಡುವುದಿಲ್ಲ" ಎಂದ. ಇಬ್ಬರೂ ಕಚ್ಚಾಡ ತೊಡಗಿದರು.

ಕೊನೆಗೆ ಅವಳನ್ನೇ ಕೇಳಿಬಿಡೋಣ ನೀನು ಯಾರ ಪತ್ನಿ ಎಂದು ತೀರ್ಮಾನಿಸಿದರು. ಅವಳನ್ನು ಕೇಳಲಾಗಿ ಅವಳು "ನನಗೆ ಗೊತ್ತಿಲ್ಲ—ಇಬ್ಬರೂ ಒಂದೇ ರೀತಿ ಕಾಣುತ್ತಿದ್ದೀರಿ" ಎಂದು ಬಿಟ್ಟಳು. ಇಬ್ಬರೂ ಅಲ್ಲಿನ ಪೋಲೀಸ್ ಠಾಣೆಗೆ ನಡೆದರು. ಅಲ್ಲಿಯೂ ವ್ಯಾಜ್ಯ ಬಗೆಹರಿಯ ಲಿಲ್ಲ. ಕೊನೆಗೆ ಆ ರಾಜ್ಯದ ಮಂತ್ರಿಗೆ ದೂರಿತ್ತರು. ಮಂತ್ರಿ ಇಬ್ಬರನ್ನೂ ಕರೆದ. ಅವರ ಮುಂದೆ ನೀರು ತುಂಬಿದ ಕೊಡವನ್ನಿಟ್ಟ. "ನಿಮ್ಮಲ್ಲಿ ಯಾರು ಇವಳ ಪತಿಯೋ ಅವರು ಈ ನೀರಿ ನಲ್ಲಿ ಹೋಗಿ" ಎಂದ. ತಕ್ಷಣ ಆಗಂತುಕ ನೀರಿನಲ್ಲಿ ನುಸುಳಿ ಮಾಯವಾದ.

ರಾಜ ಅಚ್ಚರಿಪಟ್ಟು ಕೇಳಿದ "ಇದೇನು?" ಎಂದು. ಮಂತ್ರಿಹೇಳಿದ—ಇಂದು ನವಮಿ ತಿಥಿ ಬಂದವ ನವಮಿ ಪುರುಷ. ನವಮಿಯಂದು ಪ್ರಯಾಣ ಕೂಡದು. ಒಂಬತ್ತು ಗಂಟೆ ಯವರೆಗೆ ನವಮಿ ತಿಥಿಯಿತ್ತು. ಈಗ ಒಂಬತ್ತಾಯಿತು. ನವಮಿ ಪುರುಷ ಮರೆಯಾದ" ಎಂದು. ಪುನಃ ಸಂತೋಷದಿಂದ ಪತಿಪತ್ನಿಯರು ಒಂದಾಗಿ ಹೊರಟರು.

ಇದನ್ನು ಹೇಳುವ ಉದ್ದೇಶ ಏನೆಂದರೆ ದೂಷ್ಯವಾದ ನವಮೀ ತಿಥಿಯೂ ನಹ ಮಹಾ ಪುರುಷನಾದ ಶ್ರೀರಾಮನ ಅವತಾರದಿಂದ ಗ್ರಾಹ್ಯವಾಯಿತು. ಶ್ರೀರಾಮನ ಅವತಾರವಾದ ಮೇಲೆ ಎಲ್ಲರೂ ನವಮೀ ತಿಥಿಯನ್ನು ಕೊಂಡಾಡತೊಡಗಿದರು. ಶ್ರೀರಾಮ ಅವತರಿಸಿದ್ದು ಪುನರ್ವಸು ನಕ್ಷತ್ರ. ಅದಕ್ಕೆ ದೇವತೆ ಅದಿತಿ. ಕಳೆದುಹೋದ ವಸ್ತುವನ್ನು ದೊರಕಿಸುವ ನಕ್ಷತ್ರ ಅದು. ದೇವತೆಗಳ ರಾಜ್ಯ, ಐಶ್ವರ್ಯ, ಸ್ವಾತಂತ್ರ್ಯ ಎಲ್ಲ ರಾವಣನಿಂದ ಅಪಹೃತವಾಗಿದೆ. ಅವರ ಸಂಪತ್ತನ್ನೆಲ್ಲ ಅವರಿಗೆ ಹಿಂದಿರುಗಿಸುವ ಸಲುವಾಗಿಯೇ ಶ್ರೀರಾಮ ಪುನರ್ವಸು ನಕ್ಷತ್ರದಲ್ಲಿ ಆವಿರ್ಭವಿಸಿದ.

ವಾಲ್ಮೀಕಿ ಈ ಅವತಾರಘಟ್ಟದ ಶ್ಲೋಕವನ್ನು ಬಹಳ ಚೆನ್ನಾಗಿ ಹೆಣೆದಿರುತ್ತಾರೆ. ಶ್ರೀರಾಮ ಕಾಣಿಸಿಕೊಂಡ. ಅದಕ್ಕೇ "ಪ್ರೋದ್ಯಮಾನೇ ಜಗನ್ನಾಥಂ" ಎಂದಿರುತ್ತಾರೆ. ಹೀಗನ್ನುವಾಗ ಶ್ರೀರಾಮ ಅಪ್ರಾಕೃತ ದಿವ್ಯ ಮಂಗಳಮೂರ್ತಿ. ಪ್ರಾಕೃತರಿಗಿರುವಂತೆ ಅವನಿಗೆ ಗರ್ಭವಾಸಾದಿ ಕ್ಲೇಶಗಳು ಯಾವುವೂ ಇಲ್ಲ ಎಂಬುದೇ ಆಗಿದೆ.

ಪುಷ್ಯ ನಕ್ಷತ್ರ ಮೀನ ಲಗ್ನದಲ್ಲಿ ಭರತ ಕೈಕೇಯಿಯಲ್ಲಿ ಜನಿಸಿದ. ಆಶ್ಲೇಷಾನಕ್ಷತ್ರದಲ್ಲಿ ಸುಮಿತ್ರೆಯಲ್ಲಿ ಲಕ್ಷ್ಮಣ ಶತ್ರುಘ್ನರು ಉದಯಿಸಿದರು. ದಶರಥನ ಸಂತೋಷಕ್ಕಂತೂ ಪಾರವೇ ಇಲ್ಲ. ಒಬ್ಬ ಮಗ ಇಲ್ಲವೆಂದು ಪರಿತಪಿಸುತ್ತಿದ್ದ ಚಕ್ರವರ್ತಿಗೆ ನಾಲ್ಕು ಮಕ್ಕಳಾದವು. ಅದೂ ಎಂಥ ಮಕ್ಕಳು ! ಎಲ್ಲ ವಿಷ್ಣುವಿನ ಅಂಶಭೂತರು.

ಪುತ್ರ ಜನನದಿಂದ ದಶರಥನ ಮೈಯುಬ್ಬಿತು. 60,000 ವರ್ಷ ಕಳೆದ ವೃದ್ಧ ದಶರಥ ಮತ್ತೆ ಯುವಕನಾದ. ಬ್ರಾಹ್ಮಣರಿಗೆ ಯಥೇಷ್ಟವಾಗಿ ದಕ್ಷಿಣೆಯನ್ನೂ, ಹಸುಗಳನ್ನೂ, ಭೂಮಿಯನ್ನೂ ದಾನಮಾಡಿದ. ದಶರಥನಿಗೆ ಆದ ಸಂತೋಷವನ್ನು ವಿವರಿಸುತ್ತಾ ಕಂಬರು ಹೇಳುತ್ತಾರೆ : ಯಾರೂ ರಾಜನಿಗೆ ತೆರಿಗೆ ಕೊಡಬೇಕಾದ್ದಿಲ್ಲ ಎಂದು ಸಾರಿದನಂತೆ. ಸ್ವೇಚ್ಛೆಯಾಗಿ ಯಾರು ಎಷ್ಟು ಬೇಕಾದರೂ ತೆಗೆದುಕೊಂಡು ಹೋಗಿ ಎಂದನಂತೆ. ಅಯೋಧ್ಯೆಯ ಪ್ರಜೆಗಳೆಲ್ಲ ಸಂತೋಷ ಪಟ್ಟರು. ಬೀದಿ ಬೀದಿಗಳೂ ತಳಿರುತೋರಣಗಳಿಂದ ಅಲಂಕೃತವಾಯಿತು. ನೃತ್ಯ, ನಾಟಕ, ಗಾಯನ ನಡೆಯುತ್ತಿತ್ತು. ಎಲ್ಲೆಲ್ಲೂ ಸಂಭ್ರಮ, ಆನಂದ, ಸಂತೋಷ ತುಂಬಿ ತುಳುಕುತ್ತಿತ್ತು.

**ನಾಮಕರಣ**

ವಶಿಷ್ಠರು ನಾಲ್ಕು ಮಕ್ಕಳಿಗೂ ಕ್ರಮವಾಗಿ ರಾಮ, ಭರತ, ಲಕ್ಷ್ಮಣ, ಶತ್ರುಘ್ನ ಎಂದು ಹೆಸರಿಟ್ಟರು.

ನಾಮಗಳಲ್ಲಿ ಹಲವು ಬಗೆ. ಕೆಲವು ರೂಢಿನಾಮಗಳೆನಿಸುತ್ತವೆ. ಒಮ್ಮೆ ಒಬ್ಬ ರೋಗಿ ವೈದ್ಯರ ಬಳಿ ಹೋದ. ತನಗೆ ತಲೆನೋವು, ಜ್ವರ, ಮೈ ಸ್ವಲ್ಪವೂ ಸರಿಯಾಗಿಲ್ಲ ಎಂದ. ವೈದ್ಯರು ಔಷಧವನ್ನು ಬರೆದರು. "ನಿನ್ನ ಹೆಸರೇನು" ಎಂದರು. ರೋಗಿ "ಆರೋಗ್ಯಸ್ವಾಮಿ" ಎಂದ. ಅವನ ಹೆಸರೇನೋ ಆರೋಗ್ಯಸ್ವಾಮಿ ಎಂದು. ಆದರೆ, ಅವನು ರೋಗಿ. ಇಲ್ಲಿ ಹೆಸರು ಕೇವಲ ರೂಢನಾಮ ಎನಿಸಿಕೊಳ್ಳುತ್ತದೆ.

ವಶಿಷ್ಠರು ಇಟ್ಟ ಹೆಸರುಗಳು ಎಲ್ಲ ಅನ್ವರ್ಥವಾದವು.

ಹಿರಿಯ ಮಗನಿಗೆ "ರಾಮ" ಎಂದು ಇಟ್ಟರು. "ರಮಯತೀತಿರಾಮಃ" ಸಕಲರ ಕಣ್ಮನ

ಗಳನ್ನೂ ರಂಜಿಸತಕ್ಕವನು. ಯಾವನು ಮನಸ್ಸಿಗೂ, ಇಂದ್ರಿಯಗಳಿಗೂ ಸರ್ವ ಕಾಲದಲ್ಲೂ ರಂಜಕನೋ ಅವನೇ ರಾಮ ಎನಿಸಿದ.

"ರಾಮ" ನಾಮದ ಮಹತ್ವವನ್ನು ಹೇಳದ ಜ್ಞಾನಿಯಿಲ್ಲ. "ರಾ" ಎಂದ ಮಾತ್ರದಲ್ಲಿ ಒಳಗಡಗಿರುವ ಪಾಪಗಳೆಲ್ಲ ಹೊರಬೀಳುವುದಂತೆ. ಮತ್ತೆ "ಮ" ಎಂದೆನಲು ಹೊರಬಿದ್ದ ಪಾಪ ಗಳು ಮತ್ತೆ ಒಳಹೋಗದಂತೆ ಕಪಾಟವಾಗಿ ಇರುವುದಂತೆ. ಅಂಥ ದಿವ್ಯನಾಮ ಅದು. ಅದು ತಾರಕ ನಾಮ ಎನಿಸಿದೆ. ತಿರುಮಂಗೈ ಆಳ್ವಾರ್ ರಾಮನಾಮದ ಸವಿಯನ್ನು ಅನುಭವಿಸುತ್ತಾ ಪ್ರಪಂಚದಲ್ಲಿ ಯಾವ ಯಾವ ಮಧುರವಾದ ವಸ್ತುಗಳುಂಟೋ ಅವುಗಳೆಲ್ಲದರ ರಸಘಟ್ಟಿ ರಾಮ ನಾಮ ಎಂದಿದಾರೆ.

ಕೈಕೇಯೀ ಪುತ್ರನಿಗೆ "ಭರತ" ಎಂದು ಹೆಸರು. "ಭರತೋ ಭಕ್ತಿ ಭರಿತಃ" ಎಂದಿದಾರೆ ವಾಲ್ಮೀಕಿ. ಭಕ್ತಿಯ ಸಾಕಾರ ರೂಪವೇ ಆಗಿ ಮೆರೆದ, ಭಾಗವತ ಶಿರೋಮಣಿ ಭರತ.

ಸುಮಿತ್ರೆಯ ಹಿರಿಯ ಮಗ ಲಕ್ಷ್ಮಣನೆನಿಸಿದ. "ಲಕ್ಷ್ಮಣೋ ಲಕ್ಷ್ಮೀಸಂಪನ್ನಃ" ಎಂದರು ವಾಲ್ಮೀಕಿ. ಅವನಿಗೆ ಏಕೆ ಈ ವಿಶೇಷವಾದ ವಿಶೇಷಣ ? ಎಲ್ಲರೂ ಅರಮನೆಯಲ್ಲೇ ಹುಟ್ಟಿದ ವರು. ಎಲ್ಲರೂ ಸಮಾನವಾದ ಭೋಗಭಾಗ್ಯಗಳನ್ನೇ ಅನುಭವಿಸುವಂಥವರು. ಆದರೆ, ಲಕ್ಷ್ಮಣನಿಗೆ ಮಾತ್ರ "ಲಕ್ಷ್ಮೀಸಂಪನ್ನ" ಎಂದು ಏಕೆ ಹೇಳಿದರು ವಾಲ್ಮೀಕಿ, ಎಂಬುದಕ್ಕೆ ಪೂರ್ವಾಚಾರ್ಯರು ವ್ಯಾಖ್ಯಾನ ಮಾಡಿದಾರೆ. ರಾಮ ಹದಿನಾಲ್ಕು ವರ್ಷ ವನವಾಸ ಮಾಡಿದಾಗ ಎಡಬಿಡದೆ ಅವ ನೊಡನೆ ಇದ್ದು ಅವನ ಕೈಂಕರ್ಯವನ್ನು ಮಾಡಿದ ಮಹಾನುಭಾವ ಲಕ್ಷ್ಮಣ. ಹದಿನಾಲ್ಕು ವರ್ಷಗಳ ಕಾಲ ಒಬ್ಬನೇ ಎಲ್ಲ ರೀತಿಯ ಸೇವೆಯನ್ನೂ ಮಾಡಿದ. ರಾಮ ಅಯೋಧ್ಯೆಯಲ್ಲೇ ಇದ್ದಿದ್ದರೆ ಎಲ್ಲರೂ ರಾಮನ ಸೇವೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ವನದಲ್ಲಿ ಎಲ್ಲರೂ ಮಾಡುವ ಸೇವೆ-ಯನ್ನೂ ತಾನೊಬ್ಬನೇ ಮಾಡಿದ. ಹೀಗೆ ರಾಮಸೇವಾ ಭಾಗ್ಯವನ್ನು ಹೊಂದಿದವನಾದ್ದರಿಂದಲೇ, ಕೈಂಕರ್ಯಲಕ್ಷ್ಮಿಯನ್ನು ಪಡೆದವನಾದ್ದರಿಂದಲೇ ವಾಲ್ಮೀಕಿ ಲಕ್ಷ್ಮಣನನ್ನು "ಲಕ್ಷ್ಮೀಸಂಪನ್ನ" ಎಂದರು.

ಸುಮಿತ್ರೆಯ ಕಿರಿಯ ಮಗನಿಗೆ "ಶತ್ರುಘ್ನ" ಎಂದು ಹೆಸರಿಟ್ಟರು. "ಶತ್ರುಘ್ನೋ ನಿತ್ಯ ಶತ್ರುಘ್ನಃ" ಎಂದರು ವಾಲ್ಮೀಕಿ. ಶತ್ರುಗಳನ್ನು ನದೆಬಡಿದವ ಶತ್ರುಘ್ನ. ಆದರೆ ರಾಮಾಯಣ ದಲ್ಲಿ ಬರುವ ಮೂಕಪಾತ್ರಗಳಲ್ಲಿ ಶತ್ರುಘ್ನ ಒಬ್ಬ. ಕೊನೆಯಲ್ಲಿ ಉತ್ತರಕಾಂಡದಲ್ಲಿ ಲವಣಾಸುರ ನನ್ನು ಸಂಹರಿಸಿದ್ದನ್ನು ಬಿಟ್ಟರೆ ಶತ್ರುಘ್ನ ಶತ್ರುಸಂಹಾರ ಮಾಡಿದ ಉಲ್ಲೇಖವೇ ಇಲ್ಲ ರಾಮಾಯಣ ದಲ್ಲಿ. ಆದರೆ, ವಾಲ್ಮೀಕಿ "ಶತ್ರುಘ್ನೋ ನಿತ್ಯಶತ್ರುಘ್ನಃ" ಎಂದರಲ್ಲ. ಅದಕ್ಕೆ ವ್ಯಾಖ್ಯಾನ ಮಾಡುತ್ತಾ ಜ್ಞಾನಿಗಳು ಹೇಳುತ್ತಾರೆ.

ಶತ್ರುಗಳಲ್ಲಿ ಎರಡು ಬಗೆ. ಬಾಹ್ಯಶತ್ರು, ಅಂತಃಶತ್ರು ಎಂದು. ಬಾಹ್ಯ ಅಂದರೆ ಹೊರಗಿನ ಶತ್ರುಗಳನ್ನು ಶತ್ರುಘ್ನ ಜಯಿಸಿದ. ಆದರೆ, ಅದಕ್ಕಿಂತ ಹೆಚ್ಚಾಗಿ ಅಂತಃಶತ್ರುಗಳನ್ನು ನಿಗ್ರಹಿಸಿದವ ಶತ್ರುಘ್ನ. ಕಾಮ, ಕ್ರೋಧ, ಲೋಭ, ಮೋಹ, ಮದಮಾತ್ಸರ್ಯ ಈ ಶತ್ರು ಗಳನ್ನು ಜಯಿಸಿದವ. ಮಾತ್ರವಲ್ಲ ಕಣ್ಣು, ಕಿವಿ, ನಾಲಿಗೆ, ಮೂಗು, ಚರ್ಮ ಮುಂತಾದ ಪಂಚ ಕರ್ಮೇಂದ್ರಿಯಗಳನ್ನೂ, ಪಂಚ ಜ್ಞಾನೇಂದ್ರಿಯಗಳನ್ನೂ ಯಾವಾಗಲೂ ಹತೋಟಿಯಲ್ಲಿಟ್ಟು ಕೊಂಡು ನಿತ್ಯದಲ್ಲಿ ಶತ್ರುಘ್ನನಾಗಿ ಮೆರೆದ ಮಹಾನುಭಾವ.

ರಾಮ ಲಕ್ಷ್ಮಣ ಭರತ ಶತ್ರುಘ್ನರು ದಿನದಿನಕ್ಕೆ ಪ್ರವರ್ಧಮಾನರಾಗಿ ಬೆಳೆದರು. ಆಚಾರ್ಯ ವಶಿಷ್ಠರಲ್ಲಿ ಸಕಲ ಶಾಸ್ತ್ರಗಳನ್ನೂ, ಧನುರ್ವಿದ್ಯೆಯನ್ನೂ ಅಭ್ಯಾಸ ಮಾಡಿದರು. ದಿನದಿನಕ್ಕೆ ಬೆಳಗುತ್ತಿದ್ದ ಕುಮಾರರನ್ನು ಕಂಡು ಹಿರಿಹಿರಿ ಹಿಗ್ಗಿದ ದಶರಥ. ವಯಸ್ಸಿಗೆ ಬರುತ್ತಿರುವ ಮಕ್ಕಳಿಗೆ ಕಲ್ಯಾಣವನ್ನು ನಡೆಸಬೇಕು ಎಂದು ಯೋಚಿಸಿದ.

## ವಿಶ್ವಾಮಿತ್ರರ ಆಗಮನ

ಮಕ್ಕಳಿಗೆ ಮದುವೆ ಮಾಡಬೇಕು ಎಂದು ದಶರಥ ಯೋಚಿಸುತ್ತಿರುವಂತೆಯೇ ಒಬ್ಬ ದೂತ ಓಡಿಬಂದ. ದಶರಥನಿಗೆ ನಮಸ್ಕರಿಸಿ "ಮಹಾರಾಜ ಕೌಶಿಕ ಮುನಿ ಬಂದಿದ್ದಾರೆ" ಎಂದ. ಕೌಶಿಕರ ಆಗಮನವನ್ನು ಕೇಳಿದ ಕೂಡಲೇ ಆಸನದಿಂದ ಎದ್ದ ದಶರಥ. ಸಂಭ್ರಮದಿಂದ ಬಂದ ಮುನಿಯನ್ನು ಯಥಾವಿಧಿಯಾಗಿ ಸತ್ಕರಿಸಿದ. ಸ್ವಾಗತವನ್ನು ಕೋರುತ್ತಾ "ನೀವು ಬಂದದ್ದು ನನಗೆ ಬಹಳ ಸಂತೋಷ. ಧನವಿಹೀನನು ಧನವನ್ನು ಪಡೆದರೆ ಆಗುವ ಸಂತೋಷ, ಬಹುಕಾಲ ಮಕ್ಕಳಿಲ್ಲದೆ ಪರಿತಪಿಸುತ್ತಿದ್ದವನಿಗೆ ದಿವ್ಯ ಪುತ್ರ ಉದಯಿಸಿದರೆ ಆಗುವ ಸಂತೋಷ, ನೀವು ದಯಮಾಡಿಸಿದ್ದರಿಂದ ನನಗೆ ಆಗುತ್ತಿದೆ. ತಮಗೆ ಸ್ವಾಗತ. ನಿಮಗೆ ಏನು ಬೇಕೋ ಸಂಕೋಚವಿಲ್ಲದೆ ಕೇಳಿ" ಎಂದ.

ವಿಶ್ವಾಮಿತ್ರರು ಸಂತುಷ್ಟಚಿತ್ತರಾಗಿ "ರಾಜನ್ ! ನಿನ್ನ ಕುಲಕ್ಕೆ ತಕ್ಕಂಥ ಮಾತನ್ನೇ ನೀ ಆಡಿದೆ. ಇಕ್ಷ್ವಾಕು ವಂಶವೇ ಅಂಥದು. ಕೇಳಿದವರಿಗೆ ಕೇಳುವುದನ್ನು ಕೊಡುವಂಥವರು ಇಕ್ಷ್ವಾಕು ವಂಶದ ರಾಜರು. ನೀನೂ ಹಾಗೆಯೇ ಕೇಳಿದ್ದು ಸಂತೋಷ" ಎಂದರು ದಶರಥ ಶಾಸ್ತ್ರವನ್ನರಿತವನು ; ಸತ್ಪಾತ್ರರಲ್ಲಿ ಮಾಡಿದ ದಾನ ಒಂದಕ್ಕೆ ಹತ್ತರಷ್ಟು ಫಲವನ್ನು ಕೊಡುತ್ತದೆ ಎಂದು ತಿಳಿದ. ದಾನದಲ್ಲೂ ಮೂರು ಬಗೆ. ಸಾತ್ವಿಕ, ರಾಜಸ ಮತ್ತು ತಾಮಸ ಎಂದು.

"ದೇಶೇ ಕಾಲೇ ಚ ಪಾತ್ರೇ ಚ ಯದ್ದಾನಂ ತದ್ದಾನಂ ಸಾತ್ವಿಕಂ ಸ್ಮೃತಮ್" ಎಂದ ಗೀತಾಚಾರ್ಯ.

ಪುಣ್ಯದೇಶದಲ್ಲಿ, ಪುಣ್ಯಕಾಲದಲ್ಲಿ, ಸತ್ಪಾತ್ರದಲ್ಲಿ ಮಾಡುವ ದಾನ ಅನಂತವಾದ ಶ್ರೇಯಸ್ಸನ್ನೀಯುತ್ತದೆ. ಅಕಾಲದಲ್ಲಿ, ಅಪಾತ್ರದಲ್ಲಿ ದಾನ ಕೂಡದು.

ಒಬ್ಬ ಒಂದು ಸಲ ಒಬ್ಬರ ಮನೆಗೆ ರಾತ್ರಿ ಹನ್ನೆರಡು ಗಂಟೆ ಸಮಯದಲ್ಲಿ ಹೋದ. ಹಣ ಬೇಕು ಎಂದ. ಮನೆಯವರು "ಅಯ್ಯೋ ಪಾಪ ! ಬ್ರಾಹ್ಮಣ ಕೇಳುತ್ತಾನೆ" ಎಂದು ಐವತ್ತು ರೂಪಾಯಿಗಳನ್ನು ಕೊಟ್ಟು ಕಳುಹಿಸಿದರು. ಇದನ್ನೆಲ್ಲ ಗಮನಿಸುತ್ತಿದ್ದ ದುಷ್ಟರಿಬ್ಬರು ಮಾರ್ಗ ಮಧ್ಯದಲ್ಲಿ ಆ ಬ್ರಾಹ್ಮಣನಿಂದ ರೂಪಾಯಿಗಳನ್ನು ಕಸಿದುಕೊಂಡರು.

ಇದರಿಂದ ತಿಳಿಯಬೇಕಾದ ಅಂಶ ಎಂದರೆ ದಾನವನ್ನು ಯಾವಾಗಲೂ ಸತ್ಪಾತ್ರನಿಗೆ, ಸರಿಯಾದ ಕಾಲದಲ್ಲಿ, ಸರಿಯಾದ ದೇಶದಲ್ಲಿ ಕೊಡಬೇಕು.

ವಿಶ್ವಾಮಿತ್ರ ಮುನಿಶ್ರೇಷ್ಠ. ಒಳ್ಳೆಯ ಪಾತ್ರ. ಕಾಲವೂ ಸರಿಯಾಗಿದೆ. ದಶರಥ ಮತ್ತೆ ಮತ್ತೆ ಒತ್ತಾಯಪಡಿಸಿದ, ವಿಶ್ವಾಮಿತ್ರರನ್ನು. "ಸ್ವಾಮಿ ! ತಮಗೇನು ಬೇಕು"? ನಿಸ್ಸಂಕೋಚವಾಗಿ ಕೇಳಿ" ಎಂದ.

ವಿಶ್ವಾಮಿತ್ರರು ಕೇಳಿದರು. "ದೊರೆ ! ನಾನು ಒಂದು ಯಜ್ಞ ಮಾಡಬೇಕೆಂದಿದ್ದೇನೆ. ಆ ಯಜ್ಞ ನಿರ್ವಿಘ್ನವಾಗಿ ನಡೆಯಬೇಕಾಗಿದೆ. ಆದರೆ ಆ ಯಾಗಕ್ಕೆ ಮಾರೀಚ ಸುಬಾಹುಗಳೆಂಬ

ರಾಕ್ಷಸರು ವಿಘ್ನವನ್ನೊಡ್ಡುತ್ತಿದ್ದಾರೆ. ಯಾಗಕಾಲದಲ್ಲಿ ನಾನು ದೀಕ್ಷೆವಹಿಸಿ ಮೌನದಿಂದಿರುತ್ತೇನೆ. ಆಗ ನಾನು ಕೋಪಿಸಿಕೊಳ್ಳುವಂತಿಲ್ಲ. ಆದ್ದರಿಂದ ಶಾಪ ಕೊಡುವಂತಿಲ್ಲ. ಯಜ್ಞ ಸಾಂಗವಾಗಿ ಪೂರೈಸಲು ಆ ರಾಕ್ಷಸರನ್ನು ಕೊಲ್ಲಬೇಕಾಗಿದೆ. ಅದಕ್ಕಾಗಿ ನಿನ್ನ ಹಿರಿಯ ಮಗನನ್ನು ನನ್ನೊಡನೆ ಕಳುಹಿಸು" ಎಂದರು.

ಇದನ್ನು ಕೇಳಿದ ದಶರಥ, ತಕ್ಷಣವೇ ಬುಡ ಕಡಿದ ವೃಕ್ಷದಂತೆ ಆಸನದಿಂದ ಕೆಳಗುರುಳಿದ. ಸ್ವಲ್ಪಕಾಲ ಅಚೇತನ ಸ್ಥಿತಿಯನ್ನು ಪಡೆದ. ನಂತರ ಸಾವರಿಸಿಕೊಂಡ; ಎದ್ದ. "ಸ್ವಾಮಿ! ಇದೇನು? ನನ್ನ ಮುದ್ದು ರಾಮ ಇನ್ನೂ ಎಳೆಯ. ಅವನಿಗೆ ಹದಿನಾರು ಕೂಡ ತುಂಬಿಲ್ಲ. ಸೂರ್ಯಾಸ್ತಮಾನವಾಗುತ್ತಿದ್ದಂತೆ ತಾವರೆ ಮುಚ್ಚಿಕೊಳ್ಳುವಂತೆ ನನ್ನ ಮುದ್ದು ಮಗುವಿನ ಪದ್ಮದಂಥ ನೇತ್ರಗಳು ಸಂಜೆಯಾದೊಡನೆ ಮುಚ್ಚುತ್ತವೆ. ಅಂಥ ಸುಕುಮಾರಕಾಯನಾದ ರಾಮನೆಲ್ಲಿ? ಭೀಮಕಾಯರೂ, ಕ್ರೂರರೂ ಆದ ರಾಕ್ಷಸರೆಲ್ಲಿ? ಸ್ವಾಮಿ! ನನ್ನ ಮುದ್ದು ಕುವರನನ್ನು ಕಳುಹಿಸಲಾರೆ. ಬೇಕಾದರೆ ಸೈನ್ಯ ಸಮೇತನಾಗಿ ನಾನೇ ಬರುತ್ತೇನೆ, ರಾಕ್ಷಸರನ್ನು ಸಂಹರಿಸಲು" ಎಂದ. ವಿಶ್ವಾಮಿತ್ರರು ಕುಪಿತರಾದರು. "ರಾಜನ್! ನೀನು ಆಡಿದ ಮಾತನ್ನೇ ಮರೆತೆ! ರಾಮನನ್ನು ನಿನ್ನ ಮಗ ಎಂದುಕೊಳ್ಳಿದೆ. ಅದು ಮೌಢ್ಯ. ನಾ ಹೇಳುತ್ತೇನೆ ಕೇಳು. ರಾಮ ನನಗೆ ಚೆನ್ನಾಗಿ ಗೊತ್ತು.

"ಅಹಂವೇದ್ಮಿ ಮಹಾತ್ಮಾನಾಂ ರಾಮಂ ಸತ್ಯ ಪರಾಕ್ರಮಂ"
ವಶಿಷ್ಠೋಽಪಿ ಮಹಾತೇಜಾಃ ಯೇಚಾನ್ಯೇ ತಪಸಿ ಸ್ಥಿತಾಃ

"ರಾಮ ಸಾಮಾನ್ಯನಲ್ಲ. ಆವನು ಮಹಾತ್ಮ. ಅಣುವಿನಲ್ಲಿ ಅಣುವಾಗಿ ಮಹತ್ತಿನಲ್ಲಿ ಮಹತ್ತಾಗಿ "ಅಣೋರಣೀಯಾನ್ ಮಹತೋ ಮಹೀಯಾನ್" ಎಂದು ಶ್ರುತಿಗಳಲ್ಲಿ ಕೊಂಡಾಡಲ್ಪಡುವಂಥ ಸಾಕ್ಷಾತ್ ಪರಮಪುರುಷ ಅವನು. ಅವನು ಎಲ್ಲರ ಸೊತ್ತು. ನಿನಗೊಬ್ಬನಿಗೇ ಅಲ್ಲ. ಯಾರು ಜಗತ್ಕಾರಣ ವಸ್ತುವೋ, ಯಾರು ಸರ್ವಾಂತರ್ಯಾಮಿಯೋ, ಯಾರ ಆಧಾರದ ಮೇಲೆ ಈ ಜಗತ್ತು ಸ್ಥಿರವಾಗಿ ನಿಂತಿದೆಯೋ ಅಂಥ ಶ್ರೀಮನ್ನಾರಾಯಣನೇ ಶ್ರೀರಾಮ.

ದಶರಥನಿಗೆ ನಂಬಿಕೆ ಬರಲಿಲ್ಲ. ಅವನ ಸಂಕಟ ತಗ್ಗಲಿಲ್ಲ. ಜನ್ಮತಃ ಕುರುಡನಾಗಿದ್ದು ಬಹಳಕಾಲದ ಮೇಲೆ ಅದೃಷ್ಟವಶಾತ್ ಕಣ್ಣನ್ನು ಪಡೆದವ ತನ್ನ ದೃಷ್ಟಿಭಾಗ್ಯದಿಂದ ಸಂತುಷ್ಟನಾಗಿ ಜಗತ್ತಿನ ಸೌಂದರ್ಯವನ್ನು ನೋಡುತ್ತಿರುವಂತೆಯೇ ಪುನಃ ದೃಷ್ಟಿನಾಶವಾದರೆ ಹೇಗೋ ಹಾಗೆ ದಶರಥ ದುಃಖಿಸತೊಡಗಿದ.

"ಹದಿನಾರೂ ತುಂಬದ ಮಗನನ್ನು ಪಾಲಿಸಿದವ ನಾನು. ನನಗೆ ಗೊತ್ತಿಲ್ಲವೆ ನನ್ನ ರಾಮನ ವಿಷಯ. ಅವನಿನ್ನೂ ಸುಕುಮಾರ. ರಕ್ಕಸರನ್ನು ಹೇಗೆ ಸದೆಬಡಿಯಬಲ್ಲ" ಎಂದು ತರ್ಕಿಸಿದ.

ವಿಶ್ವಾಮಿತ್ರರು ನೋಡಿದರು "ರಾಜ! ನಾನು ರಾಮನ ಬಗ್ಗೆ ಹೇಳಿದ್ದೆಲ್ಲ ವಾಸ್ತವ. ನಿನಗೆ ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ ನಿನ್ನ ಕುಲಪುರೋಹಿತ ವಶಿಷ್ಠರನ್ನೇ ಕೇಳು ಅಥವಾ ತಪಸ್ಸನ್ನೇ ಧನವಾಗಿಉಳ್ಳ ಯಾವುದೇ ತಪಸ್ವಿಯನ್ನೇ ಕೇಳು; ಅವರು ಹೇಳುತ್ತಾರೆ. ನೀನು ಮೊದಲು "ಏನು ಬೇಕೋ ಕೇಳಿ" ಎಂದೆ. ನಾನು ಜ್ಯೇಷ್ಠಪುತ್ರನನ್ನು ಕೊಡು ಎಂದಾಗ ಒಲ್ಲೆ ಎಂದೆ. ವಚನ ಭ್ರಷ್ಟನೆನಿಸಿದೆ. ಇಕ್ಷ್ವಾಕುವಂಶದಲ್ಲೇ ಇದು ಹೊಸ ಮಾದರಿ, ಸರಿ. ನೀನು ಚೆನ್ನಾಗಿರು ನಾನು ಒರುತ್ತೇನೆ" ಎಂದು ಹೊರಡಲು ಸನ್ನದ್ಧರಾದರು.

ಇದನ್ನು ನೋಡಿದರು ವಶಿಷ್ಠರು. "ದಶರಥ! ವಿಶ್ವಾಮಿತ್ರ ಸಾಮಾನ್ಯರಲ್ಲ. "ಏಷ ವಿಗ್ರಹವಾನ್ ಧರ್ಮಃ ಏಷ ವೀರ್ಯವತಾಂ ವರಃ" ಧರ್ಮಜ್ಞರಲ್ಲಿ ಧರ್ಮಜ್ಞರು ಇವರು. ವೀರ್ಯವಂತರಲ್ಲಿ ವೀರ್ಯವಂತರು ಈ ಬ್ರಹ್ಮರ್ಷಿ. ಇವರು ಬಂದಿರುವುದು ತಮಗಾಗಿ ಅಲ್ಲ. ನಿನ್ನ ಹಿತಕ್ಕಾಗಿ, ಇವರಿಗೆ ಗೊತ್ತಿಲ್ಲದ ಅಸ್ತ್ರಶಸ್ತ್ರಗಳಿಲ್ಲ. ಯೋಚಿಸದೆ ಸಂತುಷ್ಟಚಿತ್ತನಾಗಿ ಇವರೊಂದಿಗೆ ಕಳುಹಿಸು ರಾಮನನ್ನು. ನಿನಗೆ ಮಂಗಳವಾಗುತ್ತದೆ" ಎಂದರು.

ಆಚಾರ್ಯನ ಉಪದೇಶದಿಂದ ಮೋಹದ ತೆರೆ ಸರಿಯಿತು. ದಶರಥ ರಾಮ–ಲಕ್ಷ್ಮಣರನ್ನು ಕರೆತರುವಂತೆ ಹೇಳಿದ. ರಾಮನನ್ನು ಕರೆದು ತರಲು ದಶರಥ ಆಜ್ಞಾಪಿಸುತ್ತಿದ್ದಂತೆಯೇ ವಿಶ್ವಾಮಿತ್ರರ ಕೋಪ ಇಳಿಯಿತು. ಇದು ಹೇಗಾಯಿತು ಎಂಬುದಕ್ಕೆ ಒಂದು ಉದಾಹರಣೆ :

ಒಮ್ಮೆ ತಿರುಮಂಗೈ ಆಳ್ವಾರರು ತಿರುಕ್ಕುಂಡದೈ ಸ್ವಾಮಿಯನ್ನು ದರ್ಶಿಸಲು ಬಂದರು. ಮೈಮರೆತು ಕೀರ್ತಿಸಿದರು ಭಗವದ್ಗುಣವನ್ನು. ಬಾಗಿಲು ಹಾಕಿತ್ತು. ಬಾಗಿಲನ್ನು ತೆಗೆದು ದೇವ, ಆಳ್ವಾರರಿಗೆ ದರ್ಶನ ಕೊಡಲಿಲ್ಲ. ಬಹಳ ಹೊತ್ತು ಹಾಡಿದರು. ಊಹುಂ. ದೇವ ಪ್ರಸನ್ನನಾಗಲಿಲ್ಲ. ಕೋಪಬಂದಿತು ಆಳ್ವಾರರಿಗೆ. ಅಲ್ಲಿದ್ದ ಮಣ್ಣನ್ನು ತೆಗೆದು ಎರಚಿದರು. "ನೀನು ದರ್ಶನ ಕೊಡದಿದ್ದರೆ ಬೇಡವೇಬೇಡ–ಹೋಗು" ಎಂದು ಹೇಳಿ ಎದ್ದರು ಅಲ್ಲಿಂದ ಹೊರಡಲು. ಆಗ ಭಗವಂತ ಅವರಿಗೆ ಕಾಣಿಸಿಕೊಂಡ. "ಆಳ್ವಾರರೇ ಕೋಪಿಸಬೇಡಿ. ನೀವು ನನ್ನನ್ನು ನೋಡಲು ಬಯಸಿದಿರಿ. ನಾನು ನಿಮಗೆ ಯಾವ ಬಣ್ಣದಲ್ಲಿ ದರ್ಶನ ಕೊಡುವುದು ಎಂದು ಯೋಚಿಸುತ್ತಿದ್ದೆ. ನನಗೆ ಒಂದೊಂದು ಯುಗದಲ್ಲಿ ಒಂದೊಂದು ಬಣ್ಣ. ಕೃತಯುಗದಲ್ಲಿ ಶುದ್ಧ ಶ್ವೇತವರ್ಣ, ತ್ರೇತಾಯುಗದಲ್ಲಿ ಚೊಕ್ಕ ಚಿನ್ನದ ಬಣ್ಣ, ದ್ವಾಪರಯುಗದಲ್ಲಿ ನೀಲಮೇಘ ವರ್ಣ ಮತ್ತು ಕಲಿಯುಗದಲ್ಲಿ ಕಪ್ಪು ಬಣ್ಣ. ಈ ಬಣ್ಣಗಳಲ್ಲಿ ಯಾವ ಬಣ್ಣ ನಿಮಗೆ ಹಿಡಿಸಬಹುದು ಎಂದು ನಾ ಯೋಚಿಸುತ್ತಿದ್ದೆ" ಎಂದ.

ಆಳ್ವಾರರು ಮೈ ಮರೆತರು. ಅದುವರೆಗೆ ಕಾಣಿಸಿಕೊಳ್ಳದೆ ತನ್ನನ್ನು ಕಾಡಿದ ಕೋಪವೆಲ್ಲ ಮಂಗಮಾಯವಾಯಿತು. ಸಂತೋಷದಿಂದ ಪರಮಾತ್ಮನ ಬಣ್ಣವನ್ನೆಲ್ಲ ವರ್ಣಿಸಿದರು. ಅವನ ಕೇಶ ಸೌಂದಯವನ್ನೂ ಬಣ್ಣಿಸಿದರು. ಅವನ ಸೌಶೀಲ್ಯವನ್ನು ಮೈ ಮರೆತು ಅನುಭವಿಸತೊಡಗಿದರು.

ಹಾಗೆಯೇ ಕಣ್ಮನಗಳನ್ನು ಸೆಳೆಯುವ ಪ್ರಿಯದರ್ಶನನಾದ ರಾಮನನ್ನು ಕಂಡೊಡನೆ ವಿಶ್ವಾಮಿತ್ರರೂ ಕೋಪವನ್ನು ಬಿಟ್ಟು ಸಂತುಷ್ಟರಾದರು.

ಬಂದ ರಾಮ–ಲಕ್ಷ್ಮಣರು ತಂದೆಗೂ, ಪುರೋಹಿತರಾದ ವಶಿಷ್ಠರಿಗೂ, ಬ್ರಹ್ಮರ್ಷಿ ವಿಶ್ವಾಮಿತ್ರರಿಗೂ ನಮಸ್ಕರಿಸಿದರು.

ಮಂಗಳಾಶೀರ್ವಾದ ಪೂರ್ವಕವಾಗಿ ವಶಿಷ್ಠರು ರಾಮಲಕ್ಷ್ಮಣರನ್ನು ಹರಸಿದರು. ತುಂಬು ಮನದಿಂದ, ಸಂತುಷ್ಟ ಅಂತರಂಗದಿಂದ ರಾಮಲಕ್ಷ್ಮಣರನ್ನು ವಿಶ್ವಾಮಿತ್ರರಿಗೆ ಒಪ್ಪಿಸಿದ ದಶರಥ.

ದಾನ ಕೊಡುವಾಗ ಪ್ರಸನ್ನ ಚಿತ್ತದಿಂದ ಕೊಡಬೇಕು. ಆದಕ್ಕೇ ವಾಲ್ಮೀಕಿ "ಸುಪ್ರೀತೇನ ಅಂತರಾತ್ಮನಾ" ಎಂದರು.

ವಿಶ್ವಾಮಿತ್ರರು ಕೇಳಿದ್ದು ರಾಮನನ್ನು ಮಾತ್ರ. ಜೊತೆಗೆ ಲಕ್ಷ್ಮಣನೂ ಹೊರಟ. ತಪ್ಪು ಕಾಣಿಕೆಯನ್ನು ಕೊಟ್ಟಂತೆ ದಶರಥ ರಾಮನೊಡನೆ ಲಕ್ಷ್ಮಣನನ್ನೂ ಕಳುಹಿಸಿದ. ಲಕ್ಷ್ಮಣ

ಹುಟ್ಟಿದಾಗಿನಿಂದ ರಾಮನ ಅನುಚರ. ರಾಮನೊಂದಿಗೇ ಊಟ, ರಾಮನೊಂದಿಗೇ ನಿದ್ದೆ. ಯಾವಾಗಲೂ ರಾಮನ ಜೊತೆಯಲ್ಲೇ ಇರುವವ ಅವನು. ಲಕ್ಷ್ಮಣನನ್ನು ವಿವರಿಸುತ್ತಾ ವಾಲ್ಮೀಕಿ "ಲಕ್ಷ್ಮಣೋ ಲಕ್ಷ್ಮೀಸಂಪನ್ನೋ ಬಹಿಃಪ್ರಾಣ ಇವಾಪರಂ" ಎಂದಿದ್ದಾರೆ. ರಾಮನ ಪ್ರಾಣವೇ ಹೊರಗೆ ಲಕ್ಷ್ಮಣ ರೂಪದಲ್ಲಿ ಚಲಿಸುತ್ತಿದ್ದಂತೆ ಲಕ್ಷ್ಮಣ ಅನವರತ ರಾಮನನ್ನು ಅನುಸರಿಸುತ್ತಿದ್ದ.

ತಂದೆಯ ಮಾತಿನಂತೆ ರಾಮಲಕ್ಷ್ಮಣರು ವಿಶ್ವಾಮಿತ್ರನನ್ನು ಅನುಸರಿಸಿ ಹೊರಟರು, ಬ್ರಹ್ಮನನ್ನು ಅನುಸರಿಸಿ ಅಶ್ವಿನೀದೇವತೆಗಳು ಹೋಗುವಂತೆ. ಮನೋಹರವಾದ ಕಮನೀಯ-ರೂಪುಳ್ಳ ರಾಮಲಕ್ಷ್ಮಣರು ಅಗ್ನಿಯಲ್ಲಿ ಹುಟ್ಟಿದ ಸ್ಕಂದ ವಿಶಾಖರು ದುರ್ಧರ್ಷನಾದ ಪರಮ ಶಿವನನ್ನು ಅನುಸರಿಸುವಂತೆ ವಿಶ್ವಾಮಿತ್ರರನ್ನು ಅನುಸರಿಸಿದರು. ಯೋಜನ ದೂರ ನಡೆದು ಬಂದರು. ಸರಯೂ ತೀರವನ್ನು ಸೇರಿದರು. ವಿಶ್ವಾಮಿತ್ರರು ರಾಮನಿಗೆ ಶುದ್ಧಾಚಮನ ಮಾಡುವಂತೆ ಹೇಳಿ ಬ್ರಹ್ಮನಿಂದ ಪ್ರೋಕ್ತವಾದ ಬಲಾ, ಅತಿಬಲಾ ಎಂಬ ವಿದ್ಯೆಗಳನ್ನು ಉಪದೇಶಿಸಿದರು. "ರಾಮ !, ಈ ವಿದ್ಯೆಗಳು ಬಹಳ ಫಲವನ್ನೀಯುವಂಥವು. ಇವನ್ನು ಚೆನ್ನಾಗಿ ಜಪ ಮಾಡು. ಅದರಿಂದ ನಿನಗೆ ಹಸಿವು, ಬಾಯಾರಿಕೆ, ಆಲಸ್ಯ ಇವು ಯಾವುವೂ ಉಂಟಾಗದು. ಧೈರ್ಯ, ಸ್ಥೈರ್ಯ, ಯುಕ್ತಾಯುಕ್ತ ವಿವೇಚನೆ, ಬಲ, ವೀರ್ಯ ಇವೆಲ್ಲ ಅಭಿವೃದ್ಧಿಯಾಗುತ್ತವೆ ಎಂದರು."

ರಾಮ ಹಾಗೆಯೇ ಆ ವಿದ್ಯೆಗಳನ್ನು ಜಪಿಸಿದ.

ವಿಶ್ವಾಮಿತ್ರರು ರಾಮ ಲಕ್ಷ್ಮಣರೊಡನೆ ಸಾಯಂಸಂಧ್ಯೆಯನ್ನು ಮುಗಿಸಿದರು. ರಾತ್ರಿ ಅಲ್ಲಿಯೇ ತಂಗೋಣ ಎಂದರು. ಅವರ ಆದೇಶದಂತೆಯೇ ರಾಮ ಲಕ್ಷ್ಮಣರು ಸರಯೂ ತೀರದಲ್ಲೇ ಹುಲ್ಲಿನ ಹಾಸಿಗೆಯ ಮೇಲೆ ಪವಡಿಸಿದರು. ಅರಮನೆಯಲ್ಲಿ ಹಂಸತೂಲಿಕಾತಲ್ಪದಲ್ಲಿ ಸುಖ ಶಯನದಲ್ಲಿ ಮಲಗುತ್ತಿದ್ದ ಸುಕುಮಾರರು ಇಂದು ಋಷಿಯೊಡನೆ ಹುಲ್ಲಿನ ಮೇಲೆಯೇ ಮಲಗಿದರು.

ಬೆಳಗಾಗುತ್ತ ಬಂದಿತು. ವಿಶ್ವಾಮಿತ್ರರು "ಕೌಸಲ್ಯಾ ಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ । ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ" ಎಂದು ಸುಪ್ರಭಾತ ಹೇಳಿದರು.

"ಕೌಸಲ್ಯಾ ಸುಪ್ರಜಾ ರಾಮ" ಎಂಬುದಕ್ಕೆ ಆಚಾರ್ಯರು ಅನೇಕ ರೀತಿಯಲ್ಲಿ ವ್ಯಾಖ್ಯಾನ ಮಾಡಿದಾರೆ.

ವಿಶ್ವಾಮಿತ್ರರು ಜ್ಞಾನಿಗಳು. ರಾಮ ಯಾರು ಎಂಬ ಅರಿವು ಅವರಿಗುಂಟು. ಇಡೀ ರಾತ್ರಿ ರಾಮನ ಸೌಂದರ್ಯವನ್ನೇ ಅನುಭವಿಸುತ್ತಿದ್ದರು.

"ಗಂಧರ್ವ ರಾಜ ಪ್ರತಿಮಂ ಅತೀವ ಪ್ರಿಯದರ್ಶನಂ" ಎಂದು ವಾಲ್ಮೀಕಿ ಹಲವಾರು ಬಾರಿ ರಾಮನ ಸೌಂದರ್ಯವನ್ನು ವರ್ಣಿಸಿದಾರೆ.

ಇಂಥ ಚಿತ್ತಾಕರ್ಷಕ ಸೌಂದರ್ಯದ ಖನಿ ಶ್ರೀರಾಮ. ನೋಡಿದಷ್ಟೂ ಮತ್ತೂ ನೋಡಬೇಕು ಎನಿಸುವಂಥ ಸೌಂದರ್ಯ ಅವನದು.

ಇಂಥ ಪ್ರಿಯದರ್ಶನನನ್ನು ಮಗನನ್ನಾಗಿ ಪಡೆದ ಆ ಕೌಸಲ್ಯೆ ಅದಾವ ನೋಂಪಿಯನ್ನು ನೋಂತಳೋ ಎಂದು ವಿಶ್ವಾಮಿತ್ರ ಉದ್ಗರಿಸತೊಡಗುತ್ತಾರೆ.

ದಿನದಿನವೂ ಈ ಸೌಂದರ್ಯವನ್ನು ಅನುಭವಿಸುವ ಪುಣ್ಯ, ಭಾಗ್ಯ ಅವಳದಾಗಿದೆಯಲ್ಲ; ಆ

ಹೆತ್ತವಳು ಎಂಥ ಪುಣ್ಯವತಿಯೋ ಎಂದು ಅನಿಸುತ್ತದೆ ರಾಮನ ಸೌಂದರ್ಯವನ್ನು ಕಂಡ ವಿಶ್ವಾಮಿತ್ರನಿಗೆ.

ನಿಜವಾದ ಸೌಂದರ್ಯ ಮಲಗಿರುವಾಗ ವ್ಯಕ್ತವಾಗುತ್ತದೆ. ಎಚ್ಚೆತ್ತಿರುವಾಗ ಸೌಂದರ್ಯದ ಸಾಧನಗಳಿಂದ ಕೃತಕವಾಗಿ ಸೌಂದರ್ಯದ ಶೋಭೆಯನ್ನು ವೃದ್ಧಿಪಡಿಸಿಕೊಳ್ಳಬಹುದು. ಆದರೆ ಗಾಢ ನಿದ್ರೆಯಲ್ಲಿರುವಾಗ ಆ ಮುಖದಲ್ಲಿ ತೋರುವ ಸೌಂದರ್ಯವೇ ನಿಜವಾದ ಸೌಂದರ್ಯ.

ರಾಮ ಅನೇಕ ಮೈಲಿ ವಿಶ್ವಾಮಿತ್ರರೊಡನೆ ನಡೆದು ಬಂದಿದ್ದಾನೆ. ಆಯಾಸದಿಂದ ಮಲಗಿದ ಅವನ ಮುಖ ಚಂದ್ರಬಿಂಬದಂತೆ ಆಹ್ಲಾದಕರವಾಗಿದ್ದು ಸೌಂದರ್ಯದ ಮಧುವನ್ನು ಚೆಲ್ಲುತ್ತಿದೆ. ನಾವೆಲ್ಲ ಎಚ್ಚರವಾಗಿರುವಾಗ (ಕೆಲವರು) ಅಂದವಾಗಿ ಕಾಣಬಹುದು. ಆದರೆ ರಾಮ ನಿದ್ರಿಸುತ್ತಿದ್ದಾಗಲೂ ಅಂದವಾಗಿ ಶೋಭಿಸುತ್ತಿದ್ದ ! ಇಡೀ ರಾತ್ರಿ ವಿಶ್ವಾಮಿತ್ರ ಆ ಮಧುವನ್ನು ಹೀರಿದರು, ಆಸ್ವಾದಿಸಿದರು. ಅನುಭವಿಸಿದರು. "ಆಹಾ ! ಸೌಂದರ್ಯ ಎಂದರೆ ಇದು ! ಒಂದು ರಾತ್ರಿ ಸವಿದ ನನಗೇ ಇಷ್ಟು ಆನಂದವಾಗಿರುವಾಗ, ಇವನನ್ನು ಪಡೆದ ಆ ಮಹಾ ತಾಯಿ ಅದೆಷ್ಟು ಭಾಗ್ಯವಂತಳೋ" ಎಂದು ಯೋಚಿಸಿದರು. ಆ ಹೃದ್ಗತವಾದ ಯೋಚನೆಯು ಬಾಯಿಂದ ಹೊರಹೊಮ್ಮಿತು. "ಕೌಸಲ್ಯಾ ಸುಪ್ರಜಾ ರಾಮ ಏಳು; ಬೆಳಗಿನ ಕರ್ತವ್ಯವನ್ನು ನಿರ್ವಹಿಸು" ಎಂದು ಎಬ್ಬಿಸಿದರು. ಕೌಸಲ್ಯಾ ಸುಪ್ರಜಾರಾಮ ಎಂದು ರಾಮನನ್ನು ಮಾತ್ರ ಏಕೆ ಕರೆದರು? ಲಕ್ಷ್ಮಣ ಆದಿಶೇಷ ಸ್ವರೂಪಿ. ಆದಿಶೇಷನೊಂದಿಗೆ ಪವಡಿಸಿದ ರಾಮನನ್ನು ನಿತ್ಯವೂ ನೋಡಿದಾಳೆ ಕೌಸಲ್ಯೆ; ಮಹಾ ಭಾಗ್ಯವಂತೆ. ಆದ್ದರಿಂದ ಕೌಸಲ್ಯಾ ಸುಪ್ರಜಾರಾಮ ! ಎನ್ನುತ್ತಾರೆ "ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸು, ಏಳು ರಾಮ !" ಎನ್ನುತ್ತಾರಂತೆ ಮಹರ್ಷಿ !

ವಾಲ್ಮೀಕಿ ನಿತ್ಯಕರ್ಮಗಳಿಗೆ ವಿಶೇಷ ಪ್ರಾತಿನಿಧ್ಯವನ್ನು ಕೊಟ್ಟಿದಾರೆ. ಸರ್ಗಸರ್ಗದಲ್ಲೂ ಸಂಧ್ಯಾವಂದನೆ ಆಹ್ನೀಕ ನಿತ್ಯಕರ್ಮಗಳನ್ನು ಮಾಡಿದರು ಎಂದಿದ್ದಾರೆ. ಏಕೆ ಹೀಗೆ ? ಒಂದು ಸಲ ಹೇಳಿದರೆ ಸಾಲದೆ ? ಮತ್ತೆ ಮತ್ತೆ ಏಕೆ ಹೇಳಬೇಕು ?

ರಾಮಾಯಣವು ಆದರ್ಶ ಸಮಾಜದ ಆದರ್ಶ ಕಾವ್ಯ. ಪ್ರತಿಸತ್ವದಲ್ಲಿ ಪ್ರತಿಯೊಬ್ಬರೂ ತಮ್ಮತಮ್ಮ ಕರ್ಮಗಳನ್ನು ಬಿಡದೆ ಮಾಡಬೇಕು. ಸೋಮಾರಿಯಾಗಿರಬಾರದು ಎಂದೇ ವಾಲ್ಮೀಕಿ ಹಾಗೆ ಮೇಲಿಂದಮೇಲೆ ಹೇಳಿದಾರೆ.

ವಿಶ್ವಾಮಿತ್ರರ ಮಾತನ್ನು ಕೇಳಿದ ತಕ್ಷಣ ರಾಮ ಲಕ್ಷ್ಮಣರು ಎದ್ದರು. ಸ್ನಾನ, ಸಂಧ್ಯಾವಂದನೆ, ಜಪ ಇವುಗಳನ್ನು ಮಾಡಿದರು. ವಿಶ್ವಾಮಿತ್ರರಿಗೆ ನಮಿಸಿದರು. "ಹೊರಡೋಣವೆ ?" ಎಂದು ಕೇಳಿದರು.

ವಿಶ್ವಾಮಿತ್ರರು ಸಂತೋಷದಿಂದ ರಾಮ ಲಕ್ಷ್ಮಣರೊಡಗೂಡಿ ಗಂಗಾ ಸರಯೂ ಸಂಗಮ ಕ್ಷೇತ್ರಕ್ಕೆ ಬಂದರು. ಅಲ್ಲಿ ಒಂದು ಮಹಾವನ. ಅದನ್ನು ಕಂಡ ರಾಮ, ವಿಶ್ವಾಮಿತ್ರರನ್ನು "ಇದು ಯಾರ ಆಶ್ರಮ ?" ಎಂದು ಕೇಳಿದ. ಅದಕ್ಕುತ್ತರವಾಗಿ ವಿಶ್ವಾಮಿತ್ರರು "ಇಲ್ಲಿ ಪಾರ್ವತಿಯನ್ನು ಮದುವೆಯಾಗುವ ಮೊದಲು ಪರಮಶಿವ ತಪಸ್ಸನ್ನು ಮಾಡುತ್ತಿದ್ದ. ಶಿವನ ತಪಸ್ಸನ್ನು ಕೆಡಿಸಲು ಮನ್ಮಥ ಬಂದ. ಅವನನ್ನು ಸುಟ್ಟು ಬೂದಿಮಾಡಿದ, ಪರಮಶಿವ. ಅಂದಿನಿಂದ ಮನ್ಮಥ ಅನಂಗನಾದ. ಆದ್ದರಿಂದ ಈ ಸ್ಥಳಕ್ಕೆ ಅಂಗದೇಶ ಎಂದು ಹೆಸರು" ಎಂದರು. ಅಷ್ಟರಲ್ಲಿ ಆ ಆಶ್ರಮದಲ್ಲಿದ್ದ ಮಹರ್ಷಿಗಳು ಬಂದರು. ರಾಮ ಲಕ್ಷ್ಮಣರನ್ನೂ ವಿಶ್ವಾಮಿತ್ರರನ್ನೂ ಸತ್ಕರಿಸಿದರು.

ಆ ರಾತ್ರಿ ತಂಗಿದ್ದು ಮರುದಿನ ದೋಣಿಯಲ್ಲಿ ಕುಳಿತು ಗಂಗಾನದಿಯನ್ನು ದಾಟಿ ಗಂಗೆಯ ದಕ್ಷಿಣ ತೀರವನ್ನು ಮುಟ್ಟಿದರು.

**ತಾಟಕಾವಧೆ**

ಭಯಂಕರವಾದ ಅಡವಿಯನ್ನು ಹೊಕ್ಕರು, ರಾಮಲಕ್ಷ್ಮಣರು ವಿಶ್ವಾಮಿತ್ರರೊಂದಿಗೆ. ನಿರ್ಜನ ಪ್ರದೇಶವಾಗಿದ್ದ ಆ ಮಹಾರಣ್ಯವನ್ನು ಕಂಡ ರಾಮ "ಇದು ಏಕೆ ಹೀಗಿದೆ" ಎಂದು ಕೇಳಿದ.

ವಿಶ್ವಾಮಿತ್ರರು ತಿಳಿಸಿದರು. ಹಿಂದೆ ದೇವಾಸುರ ಯುದ್ಧದಲ್ಲಿ ಇಂದ್ರ ವೃತ್ರಾಸುರನನ್ನು ಕೊಂದ. ಅದರಿಂದ ಅವನಿಗೆ ಬ್ರಹ್ಮಹತ್ಯೆ ಬಂದಿತು. ಹುಚ್ಚು ಹಸಿವೂ ಉಂಟಾಯಿತು. ಆಗ ದೇವತೆಗಳೂ ಋಷಿಗಳೂ ಸೇರಿ ಅವನನ್ನು ಇಲ್ಲಿಗೆ ಕರೆತಂದು ಮಂತ್ರಪೂರ್ವಕವಾಗಿ ಅವಭೃಥ ಸ್ನಾನ ಮಾಡಿಸಿದರು. ಇಂದ್ರನ ಬ್ರಹ್ಮಹತ್ಯೆ, ಹಸಿವು ನೀಗಿತು. ಅದರಿಂದ ಸುಪ್ರೀತನಾದ ಇಂದ್ರ ಈ ಪ್ರದೇಶಕ್ಕೆ "ಮಲದ, ಕರೂಷ" ಎಂದು ಹೆಸರಿಟ್ಟ. ಸರ್ವಸಮೃದ್ಧವಾಗಿರುವಂತೆ ಅನುಗ್ರಹಿಸಿದ.

ಕಾಲಕ್ರಮದಲ್ಲಿ ಈ ಪ್ರದೇಶವನ್ನು ತಾಟಕಿ ಎಂಬ ರಾಕ್ಷಸಿ ವಶಪಡಿಸಿಕೊಂಡಳು. ತಾಟಕಿ ಸುಕೇತು ಯಕ್ಷನ ಮಗಳು. ಬ್ರಹ್ಮನ ವರದಿಂದ ಹತ್ತು ಸಾವಿರ ಆನೆಯ ಬಲವಡೆದಿದ್ದಳು. ಅವಳನ್ನು ಸುಂದ ಎಂಬುವನಿಗೆ ಮದುವೆ ಮಾಡಿಕೊಟ್ಟ, ತಂದೆ ಸುಕೇತು. ಆ ತಾಟಕಿಯ ಮಗನೇ ಬಲಾಢ್ಯನಾದ ಮಾರೀಚ. ಸುಂದ ಅಗಸ್ತ್ಯ ಮಹರ್ಷಿಗಳ ಶಾಪದಿಂದ ನಾಶವಾದ. ಅದರ ಸೇಡನ್ನು ತೀರಿಸಿಕೊಳ್ಳಲು ತಾಟಕಿ ಅಗಸ್ತ್ಯರ ಮೇಲೆ ಬೀಳಲು ಹೋದಳು. ಆಗ ಅಗಸ್ತ್ಯರು ಅವಳನ್ನು "ಭಯಂಕರವಾದ ರಾಕ್ಷಸಿ ಆಗು" ಎಂದು ಶಪಿಸಿದರು. ಅಂದಿನಿಂದ ತಾಟಕಿ ಈ ಪ್ರದೇಶ ವನ್ನು ಆಕ್ರಮಿಸಿ ಗೋ ಬ್ರಾಹ್ಮಣರನ್ನು ಪೀಡಿಸುತ್ತಿದಾಳೆ ರಾಮ ! ನೀನು ಅವಳನ್ನು ಕೊಲ್ಲಬೇಕು. ಸ್ತ್ರೀಹತ್ಯೆ ಮಾಡುವುದೇ ಎಂದು ಯೋಚಿಸಬೇಡ. ಗೋ ಬ್ರಾಹ್ಮಣರಿಗೆ ಹಿಂಸೆ ಮಾಡುವ ಪಾಪಿಷ್ಠೆಯನ್ನು ಸ್ತ್ರೀ ಎಂದು ಎಣಿಸಬೇಡ. ರಾಜರಾದವರು ಪ್ರಜೆಗಳ ಹಿತಕ್ಕಾಗಿ ಮಾಡಲೇ ಬೇಕಾದ ಕಾರ್ಯ ಇದು" ಎಂದರು.

ರಾಮ ಎಲ್ಲವನ್ನೂ ಕೇಳಿದ. ತಂದೆ ತನ್ನನ್ನು ವಿಶ್ವಾಮಿತ್ರರಿಗೆ ಒಪ್ಪಿಸಿ ಅವರು ಹೇಳುವಂತೆ ನಡೆದುಕೋ, ಎಂದು ಆದೇಶವಿತ್ತಿದಾರೆ. ವಿಶ್ವಾಮಿತ್ರರು ಗುರುಗಳು. ಪಿತೃವಾಕ್ಯವನ್ನೂ, ಗುರುವಾಕ್ಯವನ್ನೂ ನಡೆಸಬೇಕಾದುದು ಧರ್ಮ. ಮೇಲಾಗಿ ಗೋಬ್ರಾಹ್ಮಣರ ಹಿತಕ್ಕಾಗಿ, ಪ್ರಜೆಗಳ ಹಿತಕ್ಕಾಗಿ ತಾಟಕಿಯನ್ನು ನಿಗ್ರಹಿಸುವುದು ಕರ್ತವ್ಯ ಎಂದು ನಿರ್ಧರಿಸಿದ.

ತನ್ನ ಧನುಸ್ಸಿಗೆ ಹೆದೆಯೇರಿಸಿದ, ಟಂಕಾರ ಮಾಡಿದ. ರಾಮನ ಧನುಸ್ಸಿನ ಟಂಕಾರಶಬ್ದ ನಿರ್ಜನವಾದ ವನವನ್ನೆಲ್ಲ ವ್ಯಾಪಿಸಿತು—ಪ್ರತಿಧ್ವನಿಸಿತು ಅದನ್ನು ಕೇಳಿದ ತಾಟಕಿ ರೋಷದಿಂದ ರಾಮನ ಕಡೆಗೆ ಬಂದಳು. ರಾಮ ಮುಂದೆ ಬರುತ್ತಿರುವ ಆ ರಾಕ್ಷಸಿಯನ್ನು ತನ್ನ ಬಾಣದಿಂದ ಹೊಡೆದ. ಬಾಣ ನಾಟಿದೊಡನೆ ತಾಟಕಿ ಕೆಳಗುರುಳಿದಳು. ಅಸುವನ್ನು ನೀಗಿದಳು. ಅದುವರೆಗೆ ಭಯಂಕರವಾದ, ಗಾಢವಾದ ಕತ್ತಲೆಯಿಂದ ಆವರಿಸಲ್ಪಟ್ಟಿದ್ದ ಆ ವನ ಪ್ರಕಾಶಮಾನವಾಯಿತು, ಪ್ರಶಾಂತವಾಯಿತು.

ಋಷಿಗಳು, ದೇವತೆಗಳು, ಮನುಷ್ಯರು, ಮೃಗಪಕ್ಷಿಗಳು ಎಲ್ಲರೂ ಸಂತೃಪ್ತರಾದರು. ವಿಶ್ವಾಮಿತ್ರ ರಾಮನನ್ನು ಆಲಂಗಿಸಿದರು. ಶಿರವನ್ನು ಆಘ್ರಾಣಿಸಿದರು. ಆ ರಾತ್ರಿ ಅಲ್ಲೇ ತಂಗಿದರು.

ಶ್ರೀರಾಮನ ಅವತಾರವು ಧರ್ಮ ಸಂಗ್ರಹಾರ್ಥಕ್ಕಾಗಿ. ಧರ್ಮವನ್ನು ನೆಲೆಗೊಳಿಸಬೇಕಾದರೆ ಮೊದಲು ಅವಿದ್ಯೆಯನ್ನು ಅಂದರೆ ಅಜ್ಞಾನವನ್ನು ಹೋಗಲಾಡಿಸಬೇಕು. ತಾಟಕಿಯೇ ಆ ಅವಿದ್ಯೆಯ ಪ್ರತೀಕ. ಆದ್ದರಿಂದ ಮೊದಮೊದಲು ಅಂಧಕಾರವನ್ನು ಅಂದರೆ ಅವಿದ್ಯೆಯನ್ನು ತೊಲಗಿಸಿದ ರಾಮ. ತಾಟಕಾ ವಧದಲ್ಲಿ ಅಡಗಿರುವ ತತ್ವ ಇದು.

## ವಿಶ್ವಾಮಿತ್ರರು ರಾಮನಿಗೆ ಅಸ್ತ್ರಗಳನ್ನು ಕೊಡುವುದು.

ರಾಮನ ಪರಾಕ್ರಮಕ್ಕೆ ಮೆಚ್ಚಿದ ವಿಶ್ವಾಮಿತ್ರರು ತಮಗೆ ತಿಳಿದಿದ್ದ ಸಮಸ್ತ ಅಸ್ತ್ರಗಳನ್ನೂ ರಾಮನಿಗೆ ಕೊಟ್ಟರು.

ದಂಡಚಕ್ರ, ಕಾಲಚಕ್ರ, ವಿಷ್ಣು ಚಕ್ರಗಳನ್ನೂ, ಐಂದ್ರಾಸ್ತ್ರ, ವಜ್ರಾಸ್ತ್ರ, ಬ್ರಹ್ಮಾಸ್ತ್ರ, ಬ್ರಹ್ಮ ಶಿರಾಸ್ತ್ರಗಳನ್ನೂ, ಶಿವನಿಗೆ ಪ್ರಧಾನವಾದ ಶೂಲವನ್ನೂ ಕೊಟ್ಟರು ಮೋದಕೀ, ಶಿಖರಿಣೀ ಎಂಬ ಎರಡು ತೇಜೋವಂತ ಗದೆಗಳನ್ನು ಕೊಟ್ಟರು. ಧರ್ಮಪಾಶ, ಕಾಲಪಾಶ, ವರುಣಪಾಶ-ಗಳನ್ನೂ, ಪಿನಾಕ, ನಾರಾಯಣ ಆಗ್ನೇಯ, ವಾಯವ್ಯ, ಹಯಶಿರಸ್, ಕ್ರೌಂಚ ಎಂಬ ಅಸ್ತ್ರ ಗಳನ್ನೂ ಕೊಟ್ಟರು. ಕಂಕಾಳ, ಮುಸಲ, ಕಾಪಾಲ, ಕಂಕಣ ಎಂಬ ರಾಕ್ಷಸರು ಬಳಸುವ ಅಸ್ತ್ರ ಗಳನ್ನೂ, ಗಂಧರ್ವರಿಗೆ ಪ್ರಿಯವಾದ ಮಾನವಾಸ್ತ್ರವನ್ನೂ, ನಿದ್ದೆ ತರುವಂಥ ಸ್ವಾಪನಾಸ್ತ್ರವನ್ನೂ. ಶಾಂತಿ ಹುಟ್ಟಿಸುವ ಪ್ರಶಮನಾಸ್ತ್ರವನ್ನೂ, ಸೂರ್ಯನಿಗೆ ಪ್ರಿಯವಾದ ಸೌರಾಸ್ತ್ರವನ್ನೂ ಕೊಟ್ಟರು.

ಅಷ್ಟೇ ಅಲ್ಲ. ಮನ್ಮಥನಿಗೆ ಇಷ್ಟವಾದ ದರ್ಪಣ, ಶೋಷಣ, ಸಂತಾಪನ, ವಿಲಾಪನ ಮುಂತಾದ ಅಸ್ತ್ರಗಳನ್ನೂ, ಮೋಹನ, ತಾಮಸ, ಸೌಮನ, ಸಂವರ್ಧ, ಮೌಸಲ, ಸತ್ಯ, ಮಾಯಾಧರ, ತೇಜಃಪ್ರಭ, ಪರತೇಜೋಪಕರ್ಷಣ, ಶಿಶಿರ, ಸದಾಮನ, ದಾರುಣ ಈ ಎಲ್ಲ ಅಸ್ತ್ರಗಳನ್ನೂ ಕೊಟ್ಟರು.

ಅಸ್ತ್ರಗಳನ್ನೂ ಅದರ ಉಪಸಂಹಾರ ಮಂತ್ರಗಳನ್ನೂ ಉಪದೇಶಿಸಿದರು.

ಸತ್ಯವಂತ, ಸತ್ಯಕೀರ್ತಿ, ಧೃಷ್ಟ, ರಭಸ, ಪ್ರತೀಹಾರತರ, ಪರಾಙ್ಮುಖ, ಅವಾಙ್ಮುಖ, ಲಕ್ಷಾಕ್ಷ, ವಿಷಮ, ದೃಢನಾಭ, ಸುನಾಭಕ, ದುಂಧುನಾಭ, ಜ್ಯೋತಿಷ, ಕೃಶನ, ನೈರಾಶ್ಯ, ವಿಮಲ, ಯೋಗಂಧರ, ಹರಿದ್ರ, ದೈತ್ಯ. ಪ್ರಶಮನ, ಸಾರ್ಚಿರ್ಮಾಲಿ, ಧೃತಿಮಾಲಿ, ವೃತ್ತಿಮಂತ, ರುಚಿರ, ವಿಧೂತ, ಮಕರ, ಕರವೀರಕರ, ಧನ, ಧಾನ್ಯ, ಮೋಹನ, ಜೃಂಭಕ, ಸರ್ವನಾಭ, ಸಂತಾನ, ಮುಂತಾದ ಎಲ್ಲ ಅಸ್ತ್ರಗಳನ್ನೂ ಉಪದೇಶಿಸಿದರು.

"ರಾಮ, ಈ ಅಸ್ತ್ರಗಳೆಲ್ಲ ಕಾಮರೂಪಿಗಳು, ತೇಜಸ್ವಿಗಳು. ಇವುಗಳನ್ನು ಯಥಾವಿಧಿಯಾಗಿ ಜಪಿಸು" ಎಂದರು.

ರಾಮ ಮಂತ್ರಗಳನ್ನು ಜಪಿಸತೊಡಗಿದ. ಅವನು ಒಂದೊಂದು ಮಂತ್ರವನ್ನೂ ಜಪಿಸುತ್ತಿದ್ದಂತೆ ಆಯಾ ಮಂತ್ರದ ಅಧಿದೇವತೆಗಳು ತಾವಾಗಿಯೇ ರಾಮನ ಮುಂದೆ ಕೈಕಟ್ಟಿ ನಿಂತರು. "ಏನು ಮಾಡಬೇಕು ಅಪ್ಪಣೆಯಾಗಲಿ" ಎಂದರು. "ಸಮಯ ಬಂದಾಗ ನಿಮ್ಮನ್ನು ಕರೆಯುತ್ತೇನೆ. ಈಗ ನೀವು ಹೋಗಿ" ಎಂದ ರಾಮ. ಅಸ್ತ್ರಾಭಿಮಾನಿ ದೇವತೆಗಳೆಲ್ಲ ರಾಮನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ತಮ್ಮ ಸ್ಥಾನಕ್ಕೆ ತೆರಳಿದರು.

"ನಿಶ್ಶಸ್ತ್ರೀಕರಣಕ್ಕಾಗಿ ಹುಟ್ಟಿರುವವನಿಗೆ ನೀವು ಅಸ್ತ್ರಗಳನ್ನೆಲ್ಲಾ ಕೊಡುತ್ತಿದೀರಲ್ಲಾ" ಎಂದು ರಾಮ ಮುನಿವರ್ಯರಲ್ಲಿ ಹೇಳಿಕೊಳ್ಳುತ್ತಾನಂತೆ. ವಿಶ್ವಾಮಿತ್ರರಿಗೆ ಸಖೇದಾಶ್ಚರ್ಯವಾಗುತ್ತದೆ.

ಸಕಾಲದಲ್ಲಿ ಮಗಳಿಗೆ ಮದುವೆ ಮಾಡುವ ತಂದೆ ಮಗಳನ್ನು ಗಂಡನ ಮನೆಗೆ ಕಳುಹಿಸಲು ಅಣಿಮಾಡಿಕೊಳ್ಳುತ್ತಿದ್ದಾಗ "ನಾನು ಸನ್ಯಾಸ ತೆಗೆದುಕೊಳ್ಳುತ್ತೇನೆ" ಎಂದು ಅಳಿಯನಿಂದ ಪತ್ರಬಂದರೆ ಆ ಹುಡುಗಿಯ ತಂದೆಗೆ ಹೇಗಾಗಬೇಕು ? ಅಷ್ಟೇ ದುಃಖವಾಯಿತು ವಿಶ್ವಾಮಿತ್ರರಿಗೆ !

ರಾಮನಿಗೆ ಎಲ್ಲವನ್ನೂ ಹೇಳಿಕೊಟ್ಟ ಮೇಲೆ ಲಕ್ಷ್ಮಣನಿಗೆ ಹೇಳಲು ಅವನನ್ನು ಹತ್ತಿರಕ್ಕೆ ಕರೆಯುತ್ತಾರೆ ವಿಶ್ವಾಮಿತ್ರರು. ಆದಕ್ಕೆ ಲಕ್ಷ್ಮಣ, "ಗುರುದೇವ, ನನಗೆ ರಾಮನೇ ಸರ್ವಸ್ವ. ಅವನಿಂದಲೇ ಕಲಿಯುತ್ತೇನೆ" ಎಂದು ಉತ್ತರಕೊಡುತ್ತಾನೆ.

## ವಾಮನಾವತಾರದ ವೈಭವ

ಮುಂದೆ ಸಾಗುತ್ತಿದ್ದಂತೆ ರಮಣೀಯವಾದ ಆಶ್ರಮವೊಂದು ಕಂಗೊಳಿಸಿತು. ಅದನ್ನು ಕಂಡ ರಾಮ "ಇದು ಯಾರ ಆಶ್ರಮ?" ಎಂದು ಕೇಳಿದ. ವಿಶ್ವಾಮಿತ್ರರು ಹೇಳತೊಡಗಿದರು :

ಹಿಂದೆ ವಿರೋಚನನ ಮಗನಾದ ಬಲಿ ಸಮಸ್ತ ದೇವತೆಗಳನ್ನೂ ಜಯಿಸಿದ. ಸ್ವರ್ಗಾಧಿಪತ್ಯವನ್ನೇ ಪಡೆದ. ಇಂದ್ರನಿಗೆ ರಾಜ್ಯ ಹೋಯಿತು. ಆಗ ಇಂದ್ರನ ತಾಯಿಯಾದ ಅದಿತಿ ತನ್ನ ಪತಿಯಾದ ಕಶ್ಯಪರಲ್ಲಿ ತನ್ನ ದುಃಖವನ್ನು ತೋಡಿಕೊಂಡಳು. ಕಶ್ಯಪರು ಅವಳಿಗೆ ಪಯೋವ್ರತವನ್ನು ಮಾಡುವಂತೆ ಹೇಳಿದರು.

ಅದರಂತೆ ವ್ರತ ಪೂರ್ತಿಯಾಯಿತು. ಶಂಖಚಕ್ರಗದಾಧಾರಿಯಾದ ಸಾಕ್ಷಾತ್ ನಾರಾಯಣನೇ ಕಶ್ಯಪ ಅದಿತಿಯರಿಗೆ ಮಗನಾಗಿ ಜನಿಸಿದ. ಸಣ್ಣ ಆಕಾರದವನಾದ್ದರಿಂದ "ವಾಮನ" ಎಂದು ಖ್ಯಾತಿಪಡೆದ. ಇಲ್ಲಿ ಕಶ್ಯಪನ ತಪಸ್ಸು ಸಿದ್ಧಿಸಿತು ಆದ್ದರಿಂದ ಇದಕ್ಕೆ "ಸಿದ್ಧಾಶ್ರಮ" ಎಂದು ಹೆಸರಾಯಿತು. ದೇವಕಾರ್ಯಕ್ಕಾಗಿ ವಾಮನ ಇಂದ್ರನಿಗೆ ತಮ್ಮನಾಗಿ ಅದಿತಿ-ಕಶ್ಯಪರಿಗೆ ಮಗನಾದ. ಅವನಿಗೆ ಸಾಂಗವಾಗಿ ಉಪನಯನ ಸಂಸ್ಕಾರ ಆಯಿತು.

ಉಪನಯನಕ್ಕೆ ಬ್ರಹ್ಮ ಯಜ್ಞೋಪವೀತವನ್ನು ಕೊಟ್ಟ. ಕುಬೇರ ಸುವರ್ಣದ ಭಿಕ್ಷಾಪಾತ್ರೆಯನ್ನು ಕೊಟ್ಟ. ಸಾಕ್ಷಾತ್ ಸೂರ್ಯನೇ ಗಾಯತ್ರಿಯನ್ನು ಉಪದೇಶಿಸಿದ. ಅನ್ನಪೂರ್ಣೆಯೇ ಭಿಕ್ಷೆ ನೀಡಿದಳು. ವೈಭವದಿಂದ ಉಪನಯನ ಜರುಗಿತು.

ಆ ಸಮಯದಲ್ಲಿ ಬಲಿ ಚಕ್ರವರ್ತಿ ನರ್ಮದಾ ನದೀತೀರದಲ್ಲಿ ಅಶ್ವಮೇಧಯಾಗ ಮಾಡುತ್ತಿದ್ದ. ಅವನ ಯಜ್ಞವಾಟವನ್ನು ವಾಮನ ಪ್ರವೇಶಿಸಿದ. ತೇಜಸ್ಸೇ ಮೂರ್ತರೂಪವನ್ನು ತಳೆದಿದೆಯೋ ಎಂಬಂತೆ ಬೆಳಗುತ್ತಿದ್ದ ಆ ವಟು. ಬಂದ ಬ್ರಾಹ್ಮಣ ವಟುವನ್ನು ಬಲಿ ಚಕ್ರವರ್ತಿ ಸ್ವಾಗತಿಸಿ ಸಂತೋಷದಿಂದ "ನೀನು ಯಾರು ?" ಎಂದ. ಅದಕ್ಕುತ್ತರವಾಗಿ ವಾಮನ "ನಾನು ಅಪೂರ್ವ" ಎಂದ.

"ನಿಮ್ಮ ತಂದೆ ತಾಯಿ ಯಾರು ?"

"ನಾನು ಅನಾಥ"

"ನಿಮ್ಮ ವಾಸ ಎಲ್ಲಿ ?"

"ಮೂರು ಲೋಕವೇ ನನ್ನ ವಾಸಸ್ಥಳ"

"ನಿಮಗೇನು ಬೇಕು ?"

"ತ್ರಿಪಾದ ಭೂಮಿ ಕೊಟ್ಟರೆ ಸಾಕು"

ವಟುವಿನ ಮಾತನ್ನು ಕೇಳಿ ನಕ್ಕ ಬಲಿ. "ವಟುವೇ ! ನಿನಗೆ ಕೇಳಲೂ ಗೊತ್ತಿಲ್ಲ. ಸಮೃದ್ಧವಾದ ದೇಶಗಳನ್ನೂ, ಗೋವುಗಳನ್ನೂ, ಸುವರ್ಣವನ್ನೂ ಕೇಳು" ಎಂದ. ವಾಮನ "ನನಗೆ ಅದೆಲ್ಲ ಬೇಡ. ನನ್ನ ಹೆಜ್ಜೆಯಲ್ಲಿ ಮೂರು ಹೆಜ್ಜೆ ನೆಲ ಸಾಕು" ಎಂದ.

ಬಲಿ ಚಕ್ರವರ್ತಿಯ ಪುರೋಹಿತ ಶುಕ್ರಾಚಾರ್ಯ. ಮಹಾಜ್ಞಾನಿ. "ಬಂದಿರುವವ ಸಾಮಾನ್ಯನಲ್ಲ; ಮಹಾವಿಷ್ಣು ಅವನು. ದೇವಕಾರ್ಯಕ್ಕಾಗಿ ಬಂದಿದಾನೆ. ಕೊಡಬೇಡ" ಎಂದು ಬಲಿಯನ್ನು ಎಚ್ಚರಿಸಿದ.

ಆದರೆ ಉದಾರಿಯಾದ ಬಲಿಚಕ್ರವರ್ತಿ ಕೇಳಲಿಲ್ಲ. ದಾನ ಕೊಡಲು ಸಿದ್ಧನಾದ. ತನ್ನ ಮಾತನ್ನು ಅಲಕ್ಷಿಸಿದ ಬಲಿಯನ್ನು "ಶ್ರೀವಿಹೀನನಾಗು" ಎಂದು ಶಪಿಸಿದ ಶುಕ್ರ.

ಬಲಿ ಹೆದರಲಿಲ್ಲ. "ಸಾಕ್ಷಾತ್ ಮಹಾವಿಷ್ಣುವೇ ನನ್ನ ಮುಂದೆ ಕೈಯೊಡ್ಡಿ ದಾನ ಸ್ವೀಕರಿಸುವುದಾದರೆ ನನಗಿಂತ ಭಾಗ್ಯಶಾಲಿ ಬೇರೊಬ್ಬ ಇಲ್ಲ" ಎಂದು ಕೊಂಡು ದಾನ ಕೊಟ್ಟೇಬಿಟ್ಟ.

ಧಾರೆಯನ್ನೆರೆಯುವಾಗ ನೀರು ಬೀಳದಂತೆ ಶುಕ್ರಾಚಾರ್ಯ ತಡೆದ, ಸೂಕ್ಷ್ಮರೂಪದಿಂದ. ಇದನ್ನರಿತ ವಾಮನ, ತನ್ನ ಕೈಯಲ್ಲಿದ್ದ ಪವಿತ್ರ ದರ್ಭೆಯ ಮೊನೆಯಿಂದ ಗಿಂಡಿಯ ರಂಧ್ರವನ್ನು ಚುಚ್ಚಿದ. ಶುಕ್ರಾಚಾರ್ಯರ ಒಂದು ಕಣ್ಣು ಹೋಯಿತು.

ದಾನದ ನೀರು ಕೈಯಿಗೆ ಬೀಳುತ್ತಿದ್ದಂತೆ ವಾಮನ ಬೆಳೆಯತೊಡಗಿದ. ಬೆಳೆಯುತ್ತ ಹೋದಂತೆ ಅವನ ಶಿರಸ್ಸಿಗೆ ಆಕಾಶದಲ್ಲಿನ ನಕ್ಷತ್ರಗಳು ವಜ್ರದ ಕಿರೀಟದಂತಾದುವು. ಮತ್ತೆ ಮೇಲೆ ಬೆಳೆದ. ಆಗ ನಕ್ಷತ್ರ ಮಾಲೆ ಆ ತ್ರಿವಿಕ್ರಮನಿಗೆ ಹೃದಯದ ಹಾರವಾಯಿತು. ಇನ್ನೂ ಬೆಳೆದ. ಆಗ ಆ ನಕ್ಷತ್ರ ಮಾಲೆ ಕಟಿಸೂತ್ರವಾಗಿ ಶೋಭಿಸಿತು. ಇನ್ನೂ ಬೆಳೆದಾಗ ಪಾದಗಳಿಗೆ ಅರ್ಚಿಸಿದ ಪುಷ್ಪಗಳಾದವು. ಹೀಗೆ ಅನಂತವಾಗಿ ಬೆಳೆದ. "ಇದಂ ವಿಷ್ಣುಃ ವಿಚಕ್ರಮೇ ತ್ರೇಧಾ ನಿಧದೇ ಪದಂ" ಎಂಬ ವೇದೋಕ್ತಿಯನ್ನು ಮಾಡಿ ತೋರಿಸಿದ.

ತನ್ನ ಒಂದು ಪಾದದಿಂದ ಅತಳ, ವಿತಳ, ಸುತಳ, ರಸಾತಳ, ಮಹಾ ಪಾತಾಳಾದಿ ಏಳು ಕೆಳಗಿನ ಲೊಕಗಳನ್ನೂ ವ್ಯಾಪಿಸಿದ.

ಇನ್ನೊಂದು ಪಾದದಿಂದ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳನ್ನು ವ್ಯಾಪಿಸಿದ. ಸಮಸ್ತಬ್ರಹ್ಮಾಂಡವನ್ನೂ ವ್ಯಾಪಿಸಿ ನಿಂತ ಸಣ್ಣ ಆಕಾರದಲ್ಲಿ ಬಂದವ ಮಹದಾಕಾರವನ್ನು ತಾಳಿ "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ಶ್ರುತಿಸೂಕ್ತಿಯನ್ನು ಯಥಾರ್ಥವಾಗಿಸಿದ

ಮೂರನೆಯ ಹೆಜ್ಜೆಗೆ ಸ್ಥಳವಿಲ್ಲದೆ ಹೋಯಿತು. ಆಗ ಬಲಿ ತನ್ನ ತಲೆಯ ಮೇಲೆಯೇ ಮೂರನೆಯ ಹೆಜ್ಜೆಯನ್ನಿಡಬೇಕು ಎಂದು ಪ್ರಾರ್ಥಿಸಿದ. ಭಗವತ್ ಪಾದದ ಸಂಪರ್ಕ ಹೊಂದಿದ ಬಲಿಯನ್ನು ತ್ರಿವಿಕ್ರಮ ಸುತಳ ಲೋಕದಲ್ಲಿರಿಸಿ ತಾನು ಅವನ ಅರಮನೆಯ ಮುಂದೆ ಕಾವಲಾಳಾಗಿ ನಿಂತ. ಇಂದ್ರನಿಗೆ ಕಳೆದುಕೊಂಡ ರಾಜ್ಯವನ್ನೂ, ಸಂಪತ್ತನ್ನೂ ಪುನಃ ಕೊಡಿಸಿಕೊಟ್ಟ. ಅಂಥ ದಿವ್ಯಪುರುಷನಾದ ವಾಮನಮೂರ್ತಿ ಈ ಆಶ್ರಮದಲ್ಲಿದ್ದ. ಅಂಥ ಪವಿತ್ರ ಆಶ್ರಮ ಇದು, ಎಂದು ವಿಶ್ವಾಮಿತ್ರರು ಸಿದ್ಧಾಶ್ರಮದ ಮಹಿಮೆಯನ್ನು ರಾಮ ಲಕ್ಷ್ಮಣರಿಗೆ ಹೇಳಿದರು. ಇಲ್ಲಿ ಒಂದು ಸಂದೇಹ ಬರಬಹುದು. ಭಗವಂತನ ಪಾದ ಶಿರಸ್ಸಿನ ಮೇಲೆ ಬಿದ್ದ ಮೇಲೆ ಬಲಿ ವೈಕುಂಠಕ್ಕಲ್ಲವೆ ಹೋಗಬೇಕು. ಪಾತಾಳಕ್ಕೆ ಏಕೆ ? ಎಂದು. ವೈಕುಂಠಕ್ಕೆ ಹೋಗಬೇಕಿತ್ತು. ಆದರೆ ಗುರುವಿನ

ಮಾತು ಕೇಳದೆ ಇದ್ದುದರಿಂದ ಪಾತಾಳಕ್ಕೆ ಹೋಗಬೇಕಾಯಿತು. ಬಲಿಯ ಐಶ್ವರ್ಯ ಭೃಗು ಆಚಾರ್ಯರದು. ಇದನ್ನು ವಾಮನ ಅಪಹರಿಸುವುದು ಹೇಗೆ ? ಇದು ಶುಕ್ರಾಚಾರ್ಯರ ಶಾಪದಿಂದ ಸರಿಹೋಯಿತು. ಆಚಾರ್ಯರು ಶಾಪಕೊಟ್ಟ ಮೇಲೆ ವಾಮನನಿಗೆ ಪಡೆಯಲು ಸುಲಭ ಆಯಿತು.

ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ತಮ್ಮ ಆಶ್ರಮಕ್ಕೆ ಕರೆದೊಯ್ದರು. ಆಶ್ರಮದ ಋಷಿಗಳು ರಾಮಲಕ್ಷ್ಮಣರನ್ನು ಸತ್ಕರಿಸಿದರು. ಆ ದಿನ ಅಲ್ಲೇ ವಿಶ್ರಮಿಸಿದರು.

### ಯಜ್ಞ ಸಂರಕ್ಷಣೆ

ವಿಶ್ವಾಮಿತ್ರ ಯಜ್ಞದೀಕ್ಷೆಯನ್ನು ವಹಿಸಿದರು. ಆರು ದಿನದ ವ್ರತ. ಉಗ್ರ ಮೌನ. ರಾಮಲಕ್ಷ್ಮಣರು ಸದಾ ಎಚ್ಚರದಿಂದ ಜಾಗರೂಕರಾಗಿ ಕಾಯುತ್ತಿದ್ದರು. ಐದು ದಿನ ಕಳೆಯಿತು. ಆರನೆಯ ದಿನ ಯಜ್ಞಕ್ಕೆ ವಿಘ್ನ ಒದಗುವ ಚಿಹ್ನಗಳು ಕಂಡುಬಂದವು.

ಇದ್ದಕ್ಕಿದ್ದಂತೆ ಯಜ್ಞವೇದಿಕೆಯಲ್ಲಿನ ಅಗ್ನಿ ಧಗಧಗನೆ ಉರಿಯತೊಡಗಿತು. ಭಯಂಕರ ಶಬ್ದ ಆಯಿತು. ಕಾರ್ಮೋಡ ಕವಿಯಿತು. ಕತ್ತಲು ಆವರಿಸಿತು. ಕತ್ತಲೆಯಲ್ಲಿ ಮಾರೀಚ ಸುಬಾಹುಗಳು, ಅವರ ಅನುಚರರು ಓಡೋಡುತ್ತ ಬಂದರು. ರಕ್ತದ ಮಳೆ ಕರೆಯುತೊಡಗಿದರು.

ನೋಡಿದ, ರಾಮ. ತತ್‌ಕ್ಷಣವೇ ಸಿದ್ಧವಾಗಿದ್ದ ಧನುಸ್ಸಿನಿಂದ ಮಾರೀಚನ ಮೇಲೆ ಮಾನ-ವಾಸ್ತ್ರವನ್ನು ಬಿಟ್ಟ. ಅದು ಅವನನ್ನು ಸಾವಿರಾರು ಯೋಜನ ದೂರ ತರೆಗೆಲೆಯಂತೆ ಹಾರಿಸಿ ಕೊಂಡು ಹೋಯಿತು. ಸಮುದ್ರದಲ್ಲಿ ಅದ್ದಿತು. ಆದರೆ ಮಾರೀಚನನ್ನು ಕೊಲ್ಲಲಿಲ್ಲ.

ಪರಮಭಾಸ್ವರವಾದ ಆಗ್ನೇಯಾಸ್ತ್ರವನ್ನು ಸುಬಾಹುವಿನ ವಕ್ಷಸ್ಥಳಕ್ಕೆ ಬಿಟ್ಟ ರಾಮ. ಅದು ಅವನನ್ನು ಕೊಂದೇಬಿಟ್ಟಿತು.

ಉಳಿದ ಅಸುರರನ್ನು ವಾಯುವ್ಯಾಸ್ತ್ರದಿಂದ ಕೊಂದುಹಾಕಿದ. ವಿಶ್ವಾಮಿತ್ರರ ಯಜ್ಞ ಸಾಂಗವಾಗಿ ನೆರವೇರಿತು. ಸಂತುಷ್ಟರಾದ ವಿಶ್ವಾಮಿತ್ರರು ರಾಮನನ್ನು ಮುದ್ದಾಡಿದರು. ಋಷಿಗಳೆಲ್ಲ ಕೃತಜ್ಞತೆಯನ್ನು ಅರ್ಪಿಸಿದರು; "ರಾಮ, ಇಂದು ಈ ಆಶ್ರಮಕ್ಕೆ ಸಿದ್ಧಾಶ್ರಮ ಎಂಬ ಹೆಸರು ಸಾರ್ಥಕವಾಯಿತು" ಎಂದರು.

ಮಾರನೆಯ ದಿನ ಪ್ರಾತಃಕಾಲ ವಿಶ್ವಾಮಿತ್ರರು ಸಿದ್ಧಾಶ್ರಮವನ್ನು ಬಿಟ್ಟು ರಾಮಲಕ್ಷ್ಮಣ ರನ್ನೂ, ಋಷಿಗಳನ್ನೂ ಒಡಗೂಡಿ ಮಿಥಿಲಾ ನಗರದತ್ತ ಹೊರಟರು. ಮಿಥಿಲೆಯ ಅರಸ ಜನಕ ಯಾಗಕ್ಕಾಗಿ ವಿಶ್ವಾಮಿತ್ರರಿಗೆ ಕರೆಯನ್ನು ಕಳುಹಿಸಿದ್ದ ಅದರಂತೆ ವಿಶ್ವಾಮಿತ್ರರು ರಾಮಲಕ್ಷ್ಮಣ ರನ್ನೂ ಕರೆದುಕೊಂಡು ಹೊರಟರು. ಬಹಳ ದೂರ ಪ್ರಯಾಣಮಾಡಿ ಶೋಣಾನದಿಯ ತೀರದಲ್ಲಿ ತಂಗಿದರು. ರಾಮಲಕ್ಷ್ಮಣರು ಅಗ್ನಿಕಾರ್ಯವನ್ನು ಮಾಡಿ ಋಷಿಗೆ ಪ್ರಣಾಮಮಾಡಿದರು.

ಅಲ್ಲಿ ಕಾಣುತ್ತಿರುವ ದೇಶದ ವೃತ್ತಾಂತವನ್ನು ತಿಳಿಸುವಂತೆ ರಾಮ ವಿಶ್ವಾಮಿತ್ರರನ್ನು ಕೇಳಿಕೊಂಡ.

ಅದರಂತೆ ವಿಶ್ವಾಮಿತ್ರ ಮಹರ್ಷಿ ಆ ದೇಶದ ವೃತ್ತಾಂತವನ್ನು ಹೇಳತೊಡಗಿದರು : ಬ್ರಹ್ಮನಿಗೆ ಕುಶ ಎಂಬ ತಪಸ್ವಿ ಮಗ. ಅವನು ವೈದರ್ಭಿಯನ್ನು ಮದುವೆಯಾದ. ಅವನಿಗೆ ನಾಲ್ಕು ಮಕ್ಕಳು. ಕುಶಾಂಬ, ಕುಶನಾಭ, ಅಧೂರ್ತರಜಸ್, ವಸು ಎಂದು.

ತಂದೆಯ ಆಣತಿಯಂತೆ ನಾಲ್ವರು ಮಕ್ಕಳೂ ನಾಲ್ಕು ಪಟ್ಟಣಗಳನ್ನು ನಿರ್ಮಿಸಿಕೊಂಡು ಧರ್ಮಿಷ್ಠರಾಗಿ ಆಳತೊಡಗಿದರು.

ಕುಶಾಂಬ, ಕೌಶಾಂಬಿ ಎಂಬ ಮಹಾನಗರವನ್ನೂ, ಕುಶನಾಭ, ಮಹೋದಯ ಎಂಬ ನಗರವನ್ನೂ, ಅಧೂರ್ತರಜಸ್ಸ, ಧರ್ಮಾರಣ್ಯವನ್ನೂ, ವಸು, ಗಿರಿವ್ರಜವನ್ನೂ ಕಟ್ಟಿಸಿದರು.

ಈಗ ನಾವು ಇರುವ ಸೀಮೆ, ವಸು ಮಹಾರಾಜನದು ಎಂದರು ವಿಶ್ವಾಮಿತ್ರರು. ಎರಡನೆಯ ಮಗನಾದ ಕುಶನಾಭ ಧರ್ಮಾತ್ಮ. ಘೃತಾಚಿ ಎಂಬ ಅಪ್ಸರೆಯನ್ನು ಕೈಹಿಡಿದ. ನೂರು ಮಂದಿ ಹೆಣ್ಣು ಮಕ್ಕಳನ್ನು ಪಡೆದ. ಎಲ್ಲರೂ ಸುಂದರಿಯರು. ಒಂದು ದಿನ ಅವರೆಲ್ಲ ಉದ್ಯಾನದಲ್ಲಿದ್ದ ವೇಳೆ ವಾಯು ಅಲ್ಲಿಗೆ ಬಂದ. ಅವರ ರೂಪವನ್ನು ಕಂಡು ಮೋಹಿಸಿ ತನ್ನನ್ನು ಮದುವೆಯಾಗುವಂತೆ ಕೇಳಿದ. ಆದರೆ ಅವರೆಲ್ಲ ತಂದೆಯನ್ನು ಕೇಳುವಂತೆ ಹೇಳಿದರು. "ತಾವಾಗಿ ಆಗುವುದು ಬೇಡ" ಎಂದರು. ತನ್ನ ಮಾತಿಗೆ ಒಪ್ಪದೆ ಇದ್ದುದನ್ನು ಕಂಡ ವಾಯು ಕುಪಿತನಾಗಿ ಅವರಲ್ಲಿ ಹೊಕ್ಕು ಉಪದ್ರವ ಮಾಡತೊಡಗಿದ. ವಾಯುವಿನಿಂದ ಪೀಡಿತರಾದ ಅವರು ಕುರೂಪಿಗಳಾದರು ಅವರ ಮೈ ಗೇಣುದ್ದ ಆಯಿತು. ಸಂಕಟದಿಂದ ತಂದೆಯಲ್ಲಿ ತಮ್ಮ ದುಃಖವನ್ನು ತೋಡಿಕೊಂಡರು.

ಕುಶನಾಭ ಅವರನ್ನು ಸಂತೈಸಿದ. "ನೀವೆಲ್ಲ ಒಟ್ಟಾಗಿ ಧರ್ಮವನ್ನು ಎತ್ತಿ ಹಿಡಿದಿರಿ. ನಿಮಗೆ ಕೆಡಕು ಮಾಡಿದಾಗಲೂ ಕ್ಷಮೆಯನ್ನೇ ತೋರಿದಿರಿ. ಕ್ಷಮಾಗುಣಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ" ಎಂದ.

ಆ ಸಮಯಕ್ಕೆ ಸರಿಯಾಗಿ ಚೂಳಿ ಎಂಬ ಒಬ್ಬ ಋಷಿ ತಪಸ್ಸು ಮಾಡುತ್ತಿದ್ದ. ಅವನಿಗೆ ಪರಿಚರ್ಯೆ ಮಾಡುತ್ತಾ ಸೋಮದೆ ಎಂಬ ಗಂಧರ್ವಿ ಇದ್ದಳು. ಸೋಮದೆಯ ಸೇವೆಯಿಂದ ತುಷ್ಟನಾದ ಚೂಳಿ ಅವಳನ್ನು ಕುರಿತು "ನಿನಗೇನು ಬೇಕೋ ಕೇಳು" ಎಂದ. ಅವಳು "ನಾನು ಬ್ರಹ್ಮಚಾರಿಣಿ. ಇನ್ನು ಮುಂದೆಯೂ ನೈಷ್ಠಿಕ ಬ್ರಹ್ಮಚಾರಿಣಿಯಾಗಿಯೇ ಇರತಕ್ಕವಳು. ನನಗೆ ಒಬ್ಬ ತೇಜಸ್ವಿಯಾದ ಪುತ್ರನನ್ನು ಅನುಗ್ರಹಿಸಬೇಕು" ಎಂದು ಕೇಳಿದಳು. ಅದರಂತೆ ಋಷಿ ಸಂಕಲ್ಪ ಮಾತ್ರದಿಂದ ಸೋಮದೆಗೆ ಒಬ್ಬ ಮಗನನ್ನು ಅನುಗ್ರಹಿಸಿದ. ಅವನೇ ಬ್ರಹ್ಮದತ್ತ ಎಂದು ಖ್ಯಾತಿ ಪಡೆದು ಕಾಂಪಿಲ್ಯ ನಗರಕ್ಕೆ ಒಡೆಯನಾದ.

ಕುಶನಾಭ ತನ್ನ ನೂರು ಮಂದಿ ಮಕ್ಕಳನ್ನೂ ಬ್ರಹ್ಮದತ್ತನಿಗಿತ್ತು ವಿವಾಹ ಮಾಡಿದ. ಮಂತ್ರಪೂರ್ವಕವಾಗಿ ಬ್ರಹ್ಮದತ್ತ ಒಬ್ಬೊಬ್ಬಳ ಕೈಯನ್ನು ಹಿಡಿಯುತ್ತಿದ್ದಂತೆ ಅವರು ವಿಕಾರವನ್ನು ತ್ಯಜಿಸಿ ಸುರೂಪಿಗಳಾಗುತ್ತಾ ಬಂದರು. ಹೀಗೆ ನೂರುಮಂದಿ ಸುಂದರಿಯರಾದ ಸೊಸೆಯರನ್ನೂ ಕಂಡು ಸೋಮದೆ ಹಿರಿ ಹಿರಿ ಹಿಗ್ಗಿದಳು.

ಬ್ರಹ್ಮದತ್ತ ತನ್ನ ಮಕ್ಕಳನ್ನೆಲ್ಲ ಕರೆದುಕೊಂಡು ಹೋದಮೇಲೆ ಕುಶನಾಭನಿಗೆ ಚಿಂತೆಯಾಯಿತು ಮನೆಯಲ್ಲಿ ಮಕ್ಕಳೇ ಇಲ್ಲ. ಅದರಿಂದ ಅವನು ಪುತ್ರ ಕಾಮೇಷ್ಟಿಯಾಗ ಮಾಡಿದ. ಕುಶನಾಭ ಯಜ್ಞದೀಕ್ಷೆಯಲ್ಲಿದ್ದಾಗ ಅವನ ತಂದೆ ಕುಶ ಬಂದು "ನಿನಗೆ ಸರಿಸಮನಾದ ವೀರ್ಯವಂತನಾದ ಪುತ್ರ ಆಗುತ್ತಾನೆ, ಅವನೇ ಗಾಧಿ ಎನಿಸುತ್ತಾನೆ" ಎಂದು ಹೇಳಿದ. ಅದರಂತೆ ಕುಶನಾಭನಿಗೆ ಗಾಧಿ ಎಂಬ ಮಗನಾದ. "ಆ ಗಾಧಿಯ ಮಗನೇ ನಾನು" ಎಂದು ವಿಶ್ವಾಮಿತ್ರ ಹೇಳಿ ಮುಂದುವರೆದು "ನನಗೆ ಸತ್ಯವತಿ ಎಂಬ ಅಕ್ಕ ಒಬ್ಬಳಿದ್ದಾಳೆ. ಅವಳು ಪರಮ ಪವಿತ್ರೆ, ಪತಿವ್ರತೆ, ಪುಣ್ಯವತಿ. ಸಶರೀರಳಾಗಿಯೇ ಸ್ವರ್ಗಕ್ಕೆ ಹೋದಳು. ಮತ್ತೆ ಭೂಲೋಕದ ಜನರಿಗೆ ಐಹಿಕ ಆಮುಷ್ಮಿಕ ಫಲಗಳನ್ನು ಅನುಗ್ರಹಿಸುವ ಸಲುವಾಗಿ ಕೌಶಿಕೀ ನದಿಯಾಗಿ ಪ್ರವಹಿಸಿದಳು. ಹಿಮಾಲಯದಿಂದ ಹರಿದು, ಬರುವ ಆ ಕೌಶಿಕೀ ನದಿ ಬಹಳ ಪುಣ್ಯವಾದುದು, ರಮ್ಯವಾದುದು. ಅಕ್ಕನ ಮೇಲಿನ ಪ್ರೀತಿಯಿಂದ ನಾನು ಹಿಮಾಲಯದಲ್ಲೇ ಕೌಶಿಕೀ ತೀರದಲ್ಲೇ ಇದ್ದೆ. ಯಜ್ಞದ ಕಾರಣಕ್ಕಾಗಿ

ಸಿದ್ಧಾಶ್ರಮಕ್ಕೆ ಬಂದೆ. ನೀನು ಬಂದು ಆ ಆಶ್ರಮದ ಹೆಸರನ್ನು ಅನ್ವರ್ಥವಾಗಿಸಿದೆ" ಎಂದರು.

ವಿಶ್ವಾಮಿತ್ರರ ವಂಶದ ಕಥೆಯನ್ನು ಕೇಳಿ ರಾಮಲಕ್ಷ್ಮಣರು ಪುಳಕಿತರಾದರು, ಸಂತೋಷ ಪಟ್ಟರು. ಆ ರಾತ್ರಿಯನ್ನು ಅಲ್ಲೇ ಸುಖವಾಗಿ ಕಳೆದರು.

ಮರುದಿನ ಬೆಳಗ್ಗೆ ಎದ್ದು ಸ್ನಾನ ಆಹ್ನೀಕಗಳನ್ನು ಮುಗಿಸಿಕೊಂಡು ಶೋಣಾ ನದಿಯನ್ನು ದಾಟಿದರು. ಅದನ್ನು ದಾಟಿದ ಬಳಿಕ ಪವಿತ್ರವಾದ ಗಂಗೆ ಹರಿಯುತ್ತಿದ್ದುದನ್ನು ಕಂಡರು. ಆಗ ರಾಮ ವಿಶ್ವಾಮಿತ್ರರನ್ನು "ಗಂಗೆ ಹೇಗೆ ತ್ರಿಪಥಗೆ ಎನಿಸಿದಳು ? ಮೂರು ಲೋಕಗಳಲ್ಲಿಯೂ ಅವಳು ಪ್ರವಹಿಸಿದ್ದನ್ನು ಹೇಳಬೇಕು" ಎಂದು ಪ್ರಾರ್ಥಿಸಿದ.
ವಿಶ್ವಾಮಿತ್ರರು ಹೇಳತೊಡಗಿದರು :

## ಕುಮಾರೋತ್ಪತ್ತಿ

ಹಿಮವಂತನಿಗೆ ಗಂಗೆ, ಉಮೆ ಎಂಬ ಇಬ್ಬರು ಹೆಣ್ಣುಮಕ್ಕಳು. ಹಿರಿಯಳಾದ ಗಂಗೆಯನ್ನು ದೇವತೆಗಳು ತಮಗೆ ಕೊಡಬೇಕೆಂದು ಪ್ರಾರ್ಥಿಸಿದರು. ಅದರಂತೆ ದೇವಲೋಕದಲ್ಲಿ ಪ್ರವಹಿಸಿ ಎಲ್ಲರಿಗೂ ಆನಂದದಾಯಕಳಾಗಿ ಮೆರೆದಳು ಗಂಗೆ. ಕಿರಿಯವಳಾದ ಉಮೆ ಪರಮೇಶ್ವರನನ್ನು ವರಿಸಿದಳು.

ಅನೇಕ ವರ್ಷಗಳು ಉಮಾ–ಮಹೇಶ್ವರರು ಸೌಖ್ಯವನ್ನನುಭವಿಸುತ್ತಿದ್ದರು. ಆದರೆ ದೇವತೆಗಳಿಗೆಲ್ಲ ಭಯವಾಯಿತು; ಪರಮೇಶ್ವರನ ತೇಜಸ್ಸಿನಿಂದ ಹುಟ್ಟುವ ಮಗನನ್ನು ತಡೆಯಲು ಸಾಧ್ಯವಾದೀತೆ ? ಎಂದು ಶಂಕಿಸಿದರು.

ಎಲ್ಲರೂ ಈಶ್ವರನ ಬಳಿ ಓಡಿದರು. ಪ್ರಾರ್ಥಿಸಿದರು. "ದೇವ ನಿನ್ನ ತೇಜಸ್ಸಿನಿಂದ ಹುಟ್ಟಿದ ಮಗನನ್ನು ಈ ಜಗತ್ತು ಧರಿಸಲಾರದು. ಆದ್ದರಿಂದ ನಿನ್ನ ತೇಜಸ್ಸನ್ನು ನಿನ್ನಲ್ಲಿಯೇ ಅಡಗಿಸಿಕೊ. ಜಗತ್ತಿಗೆ ಮಂಗಳ ಉಂಟು ಮಾಡು" ಎಂದರು. ಪರಮೇಶ್ವರ ಹಾಗೆಯೇ ಆಗಲಿ ಎಂದು ಅಭಯ ಕೊಟ್ಟ. ಶಿವ "ನೀವು ಹೇಳುವಂತೆಯೇ ನಾನು ನನ್ನ ತೇಜಸ್ಸನ್ನು ನನ್ನಲ್ಲಿಯೇ ಅಡಗಿಸಿಕೊಳ್ಳುತ್ತೇನೆ. ಆದರೆ ಈಗಾಗಲೇ ಸ್ಖಲಿತವಾಗಿರುವ ತೇಜಸ್ಸಿನ ಅಂಶವನ್ನು ಧರಿಸುವವರು ಯಾರು ?" ಎಂದ. ಆ ತೇಜಸ್ಸನ್ನು ಭೂಮಿಯಲ್ಲಿ ಬಿಡುವಂತೆ ದೇವತೆಗಳೆಲ್ಲ ಹೇಳಿದರು. ಹಾಗೆಯೇ ಶಿವ ತನ್ನ ತೇಜಸ್ಸನ್ನು ಭೂಮಿಯಲ್ಲಿ ಬಿಟ್ಟ. ಅದು ಭೂಮಿಯನ್ನೆಲ್ಲ ವ್ಯಾಪಿಸಿತು. ಇದನ್ನು ಕಂಡ ದೇವತೆಗಳು ಭಯಪಟ್ಟು, ಅಗ್ನಿಯನ್ನು ಪ್ರಾರ್ಥಿಸಿದರು. ಆಗ ಅಗ್ನಿ ಶಿವನ ತೇಜಸ್ಸನ್ನು ಧಾರಣೆಮಾಡಿದ.

ಪಾರ್ವತಿಗೆ ಕೋಪ ಬಂದಿತು. "ಸಂತಾನಾಪೇಕ್ಷೆಯಿಂದಿದ್ದ ನನಗೆ ಮಕ್ಕಳಾಗದಂತೆ ಮಾಡಿದಿರಾದ್ದರಿಂದ, ದೇವತೆಗಳೆ ! ನಿಮಗೂ ಸಂತಾನ ಇಲ್ಲದೆ ಹೋಗಲಿ ಎಂದು ಶಪಿಸಿದಳು "ಭೂಮಿಯೆ ! ನಾನು ಧರಿಸಬೇಕಾಗಿದ್ದ ತೇಜಸ್ಸನ್ನು ನೀನು ಧರಿಸಿ ನನ್ನ ಆನಂದಕ್ಕೆ ವಿಘ್ನ ಒಡ್ಡಿದೆ, ನೀನು ಬಹು ಜನರಿಗೆ ಪತ್ನಿಯಾಗು. ನಿನ್ನ ದೇಹ, ಮಣ್ಣು, ಚೌಳು ಆಗಲಿ" ಎಂದು ಶಪಿಸಿದಳು.

ದೇವತೆಗಳಿಗೆ ಸರಿಯಾದ ಒಬ್ಬ ಸೇನಾಪತಿ ಇರಲಿಲ್ಲ. ಬ್ರಹ್ಮನಲ್ಲಿಗೆ ಹೋಗಿ ಪ್ರಾರ್ಥಿಸಿದರು. ಬ್ರಹ್ಮನ ಆಜ್ಞೆಯಂತೆ ದೇವತೆಗಳೆಲ್ಲ ಶಿವನ ತೇಜಸ್ಸನ್ನು ಧರಿಸಿದ ಅಗ್ನಿಯನ್ನು ಕುರಿತು "ತೇಜಸ್ಸನ್ನು ಗಂಗೆಯಲ್ಲಿ ಬಿಡು" ಎಂದು ಪ್ರಾರ್ಥಿಸಿದರು.

ಅದರಂತೆ ಅಗ್ನಿ ತನ್ನಲ್ಲಿ ಅಡಗಿಸಿಕೊಂಡಿದ್ದ ಶಿವನ ತೇಜಸ್ಸನ್ನು ಗಂಗಾದೇವಿಯಲ್ಲಿ ಬಿಟ್ಟ.

ಗಂಗೆಗೆ ಮೈ ಸುಡಲು ಆರಂಭಿಸಿತು. ಅವಳಿಗೆ ಆ ತೇಜಸ್ಸನ್ನು ಧರಿಸಲು ಆಗಲಿಲ್ಲ. ಅಲ್ಲಿಂದ ಅಗ್ನಿಯ ಬಳಿಗೆ ಓಡಿದಳು. "ನನ್ನಿಂದ ಈ ತೇಜಸ್ಸನ್ನು ಧರಿಸಲು ಆಗದು" ಎಂದು ಅಂಗಲಾಚಿದಳು. "ಹಾಗಾದರೆ ಅದನ್ನು ಹಿಮವತ್ಪರ್ವತದ ಅಡಿಯಲ್ಲಿ ಇಳಿಸಿಕೊ" ಎಂದ ಅಗ್ನಿ. ಅದರಂತೆ ಗಂಗೆ ಹಿಮವತ್ಪರ್ವತದ ಪಾದದಲ್ಲಿ ತನ್ನ ಗರ್ಭವನ್ನು ಇಳಿಸಿದಳು. ಅಲ್ಲಿ ಅದು ಜೊಂಡುಹುಲ್ಲಿನ ಮೆದೆಯಾಗಿ ಪಸರಿಸಿತು. ಆ ಜೊಂಡುಹುಲ್ಲಿನ ಕಾಡಿನಲ್ಲಿ ಇದ್ದ ಗಿಡ ಮರ ಬಳ್ಳಿ ಎಲ್ಲ ಸುವರ್ಣಮಯವಾಯಿತು. ಆ ಗರ್ಭಸ್ರಾವದಿಂದ ಮಹಾತೇಜೋವಂತನಾದ ಮಗು ಒಂದು ಹುಟ್ಟಿತು. ಅದು ಕೃತ್ತಿಕಾ ನಕ್ಷತ್ರದಲ್ಲಿ ಜನಿಸಿದ್ದರಿಂದ ಕಾರ್ತಿಕೇಯ ಎಂಬ ಹೆಸರಾಯಿತು. ಗರ್ಭದಿಂದ ಜಾರಿಬಿದ್ದವನಾದ್ದರಿಂದ ಸ್ಕಂದನೆಂದೂ ಹೆಸರಾಯಿತು. ಕಾರ್ತಿಕೇಯನಿಗೆ ಕೃತ್ತಿಕಾನಕ್ಷತ್ರದ ಅಭಿಮಾನೀ ದೇವತೆಗಳು ಹಾಲುಣಿಸಿದರು. ಆ ದೇವತೆಗಳು ಆರು ಜನ. ಏಕಕಾಲದಲ್ಲಿ ಆರುಮುಖಗಳಿಂದ ಆ ಆರು ದೇವತೆಗಳಿಂದಲೂ ಸ್ತನ್ಯಪಾನವನ್ನು ಮಾಡಿದವನಾದ್ದರಿಂದ "ಷಣ್ಮುಖ" ಎಂದು ಕರೆಸಿಕೊಂಡ.

ಸ್ಕಂದ ಸಾಮಾನ್ಯನಲ್ಲ. ದೈವಾಂಶ ಸಂಭೂತ. ಪರಮಶಿವನ ತೇಜದಿಂದ ಜನಿಸಿದವ. ಬಲಾಢ್ಯ, ತೇಜೋವಂತ, ಧೃತಿವಂತ. ಇಂಥ ಷಣ್ಮುಖ ದೇವತೆಗಳಿಗೆ ಸೇನಾಪತಿಯಾದ. "ಸೇನಾನೀನಾಂ ಅಹಂ ಸ್ಕಂದಃ" ಸೇನಾಪತಿಗಳಲ್ಲೆಲ್ಲ ಸ್ಕಂದನೆನಿಸುವವ ನಾನೇ ಎಂದಿದಾನೆ ಶ್ರೀಕೃಷ್ಣ. ಹೀಗೆ ಭಗವತ್ ವಿಭೂತಿಯನ್ನು ವಿವರಿಸುತ್ತಾ ವಿಶ್ವಾಮಿತ್ರರು ರಾಮ ಲಕ್ಷ್ಮಣರಿಗೆ ಕುಮಾರ ಸಂಭವವನ್ನು ಹೇಳಿದರು.

**ಗಂಗಾವತರಣ**

ಮುಂದುವರಿದು ವಿಶಾಮಿತ್ರರು ದೇವಗಂಗೆಯು ತ್ರಿಪಥಗೆ ಆದ ವೃತ್ತಾಂತವನ್ನು ಹೇಳ ತೊಡಗಿದರು.

ಇಕ್ಷ್ವಾಕು ವಂಶದಲ್ಲಿ ಸಗರ ಎಂಬ ಒಬ್ಬ ಚಕ್ರವರ್ತಿ. ಅವನಿಗೆ ಕೇಶಿನಿ, ಸುಮತಿ ಎಂಬಿಬ್ಬರು ಪತ್ನಿಯರು. ಸಗರ ಚಕ್ರವರ್ತಿಗೆ ಬಹುಕಾಲವಾದರೂ ಮಕ್ಕಳಾಗಲಿಲ್ಲ. ಆತ ಪತ್ನಿಯರೊಡಗೂಡಿ ಹಿಮಾಲಯದ ಭೃಗು ಪ್ರಸ್ರವಣದಲ್ಲಿ (ಭೃಗು ಮಹರ್ಷಿಯ ನಿವಾಸ) ತಪಸ್ಸನ್ನು ಮಾಡತೊಡಗಿದ.

ಸಗರನ ತಪಸ್ಸಿಗೆ ಭೃಗುಮಹರ್ಷಿಗಳು ಮೆಚ್ಚಿದರು. ಪ್ರಸನ್ನರಾದ ಭೃಗುಋಷಿ "ರಾಜ! ನಿನಗೆ ಮಕ್ಕಳಾಗುತ್ತಾರೆ. ಒಬ್ಬಳಿಗೆ ವಂಶೋದ್ಧಾರಕನಾದ ಒಬ್ಬ ಮಗ ಹುಟ್ಟುತ್ತಾನೆ. ಇನ್ನೊಬ್ಬಳಿಗೆ ಶೂರರಾದ ಅರವತ್ತು ಸಾವಿರ ಮಕ್ಕಳಾಗುತ್ತಾರ" ಎಂದು ಅನುಗ್ರಹಿಸಿದರು.

ಸಗರನ ಪತ್ನಿಯರು ಮಹರ್ಷಿಯನ್ನು "ನಮ್ಮಲ್ಲಿ ಯಾರಿಗೆ ಒಬ್ಬ ಮಗ, ಯಾರಿಗೆ ಅರವತ್ತು ಸಾವಿರ ಮಕ್ಕಳು ಆಗುತ್ತಾರೆ" ಎಂದು ಕೇಳಿದರು.

ಅದಕ್ಕೆ ಮಹರ್ಷಿ "ನಿಮ್ಮ ನಿಮ್ಮ ಇಷ್ಟದಂತೆಯೇ ಆಗುತ್ತದೆ" ಎಂದು ಅನುಗ್ರಹಿಸಿದರು. ಹಿರಿಯವಳಾದ ಕೇಶಿನಿ ತನಗೆ ವಂಶೋದ್ಧಾರಕನಾದ ಒಬ್ಬನೇ ಮಗಸಾಕು ಎಂದು ಬಯಸಿದಳು. ಕಿರಿಯಳಾದ ಸುಮತಿ "ಶೂರರಾದ ಅರವತ್ತು ಸಾವಿರ ಮಕ್ಕಳು ಬೇಕು" ಎಂದು ಆಸೆಪಟ್ಟಳು.

ಅದರಂತೆ ಕೇಶಿನಿಗೆ ಅಸಮಂಜ ಎಂಬ ಒಬ್ಬ ಮಗ ಹುಟ್ಟಿದ. ಸುಮತಿಗೆ ಸೋರೇಕಾಯಿ ಆಕಾರದ ಪಿಂಡ ಜನಿಸಿತು. ಅದರಲ್ಲಿ ಅರವತ್ತು ಸಾವಿರ ಹೋಳುಗಳಿದ್ದವು. ಅವುಗಳನ್ನು ತುಪ್ಪದ ಕೊಡಗಳಲ್ಲಿಟ್ಟು ನೋಡಿಕೊಂಡರು. ಕ್ರಮವಾಗಿ ಅರವತ್ತು ಸಾವಿರ ಮಕ್ಕಳಾದರು. ಎಲ್ಲರೂ ಪರಾಕ್ರಮಿಗಳೇ ಆದರು.

ಹಿರಿಯುವನಾದ ಅಸಮಂಜ ತುಂಟನಾದ, ದುಷ್ಟನಾದ. ಬೀದಿಯಲ್ಲಿ ಆಟವಾಡುತ್ತಿದ್ದ ಎಳೆಯ ಮಕ್ಕಳನ್ನೆತ್ತಿ ಸರಯೂ ನದಿಯಲ್ಲಿ ಮುಳುಗಿಸಿ ಅವು ಮುಳುಗಿ ಸಾಯುವುದನ್ನು ಕಂಡು ಸಂತೋಷಪಡುತ್ತಿದ್ದ. ಪ್ರಜಾಕಂಟಕನಾದ ಹಿರಿಯ ಮಗನನ್ನು ಸಗರ ದೇಶಭ್ರಷ್ಟನನ್ನಾಗಿ ಮಾಡಿದ.

ಅಸಮಂಜನಿಗೆ ಅಂಶುಮಂತನೆಂಬ ಮಗ ಹುಟ್ಟಿದ.

ಸಗರ ಚಕ್ರವರ್ತಿ ಅಶ್ವಮೇಧಯಾಗವನ್ನು ಮಾಡಲು ನಿಶ್ಚಯಿಸಿದ. ಯಾಗ ಪೂರ್ತಿಯಾಗದಂತೆ ದೇವೇಂದ್ರ ಯಾಗದ ಕುದುರೆಯನ್ನು ಕದ್ದೊಯ್ದ. ಸಗರನ ಅರವತ್ತು ಸಾವಿರ ಮಕ್ಕಳು ಭೂಮಿಯನ್ನೆಲ್ಲಾ ಶೋಧಿಸಿದರು. ಕುದುರೆ ಸಿಕ್ಕಲಿಲ್ಲ. ಭೂಮಿಯನ್ನು ಅಗೆದರು, ಸಗರಪುತ್ರರಿಂದ ಸಮುದ್ರ ಮತ್ತೂ ಆಳವಾಯಿತು. ಆಗಿನಿಂದ ಸಮುದ್ರ "ಸಾಗರ" ಎನಿಸಿಕೊಂಡಿತು.

ಕುದುರೆ ಸಿಕ್ಕದೆ ಹಿಂದಿರುಗಿಬಂದ ಪುತ್ರರನ್ನು ಮತ್ತೊಮ್ಮೆ ಹುಡುಕಿಕೊಂಡು ಬರುವಂತೆ ಹೇಳಿ ಕಳುಹಿಸಿದ ಸಗರ. ತಮ್ಮ ತೀಕ್ಷ್ಣವಾದ ನಖಗಳಿಂದ ಪಾತಾಳದವರೆಗೂ ಅಗೆಯುತ್ತ ಹೋದರು ಸಗರಪುತ್ರರು.

ಸಗರಪುತ್ರರ ಉಪಟಳವನ್ನು ಕಂಡ ದೇವತೆಗಳು ಬ್ರಹ್ಮನನ್ನು ಮರೆಹೊಕ್ಕರು. ಬ್ರಹ್ಮ ಅವರನ್ನು ಸಮಾಧಾನಪಡಿಸಿದ. "ಮತ್ತರಾದ ಸಗರಪುತ್ರರು ಕಪಿಲ ಮಹಾಮುನಿಯನ್ನು ಅವಮಾನಿಸಿದಾಗ ಅವರ ಶಾಪದಿಂದ ದಗ್ಧರಾಗುತ್ತಾರೆ" ಎಂದ.

ಅಗೆಯುತ್ತ ಹೋದರು ಸಗರಪುತ್ರರು. ಭೂಗರ್ಭಕ್ಕೆ ಇಳಿದಾಗ ಅಲ್ಲಿ ಅವರು ವಿರೂಪಾಕ್ಷ, ಮಹಾಪದ್ಮ, ಸೌಮನಸ, ಭದ್ರ ಎಂಬ ದಿಗ್ಗಜಗಳನ್ನು ಕಂಡರು. ಪ್ರದಕ್ಷಿಣನಮಸ್ಕಾರ ಮಾಡಿದರು. ಕುದುರೆ ಸಿಗಲಿಲ್ಲ. ಅಲ್ಲಿಂದ ಈಶಾನ್ಯ ದಿಕ್ಕಿನಲ್ಲಿ ಅಗೆಯುತ್ತ ಪಾತಾಳದವರೆಗೆ ಹೋದರು. ಅಲ್ಲಿ ಒಂದು ಆಶ್ರಮ. ಅದರಲ್ಲಿ ಕಪಿಲರೂಪದಲ್ಲಿದ್ದ ಮಹಾವಿಷ್ಣುವನ್ನೂ, ಸಮೀಪದಲ್ಲೇ ಮೇಯುತ್ತಿದ್ದ ತಮ್ಮ ಕುದುರೆಯನ್ನೂ ಕಂಡರು.

ಕುದುರೆ ಸಿಕ್ಕಿದ್ದಕ್ಕೆ ಸಂತೋಷವಾಯಿತು. ಕಪಿಲಮುನಿಯನ್ನು ನೋಡಿದರು. ಈ ಮುನಿಯೇ ನಮ್ಮ ಕುದುರೆಯನ್ನು ಕದ್ದವ ಎಂದು ತರ್ಕಿಸಿದರು. ತಮ್ಮಲ್ಲಿದ್ದ ಆಯುಧಗಳನ್ನೆಲ್ಲ ಒಟ್ಟಾಗಿ ಸೇರಿಸಿಕೊಂಡು ಎಲ್ಲರೂ ಏಕಕಾಲದಲ್ಲಿ ಕಪಿಲಮುನಿಯ ಮೇಲೆ ಬೀಳಲು ಹೋದರು.

ಮೇಲೆ ಬೀಳಲು ಸನ್ನದ್ಧರಾಗುತ್ತಿದ್ದ ಸಗರ ಪುತ್ರರನ್ನು ಮಹರ್ಷಿ ಕಪಿಲ ಕಂಡು ಹುಂಕಾರ ಮಾಡಿದರು ಅಷ್ಟೆ, ಅರವತ್ತು ಸಾವಿರ ಜನರೂ ಅಲ್ಲೇ ಸುಟ್ಟು ಬೂದಿಯಾದರು.

ಮಹರ್ಷಿಗಳ ಕೋಪವೇ ಅಂಥದು. ಎಂತಲೇ ಎಷ್ಟೇ ದೇಹಬಲವಿದ್ದರೂ ಅಹಂಕಾರದಿಂದ ಹಿರಿಯರನ್ನೂ, ಗುರುಗಳನ್ನೂ ಅವಜ್ಞೆ ಮಾಡಕೂಡದು. ಬ್ರಹ್ಮಬಲದ ಮುಂದೆ ಯಾವ ಕಾಯಬಲವೂ ನಿಲ್ಲದು. ಇದಕ್ಕೆ ನಿದರ್ಶನ ಸಗರಪುತ್ರರು.

ಎಷ್ಟುಕಾಲ ಆದರೂ ಮಕ್ಕಳು ಹಿಂದಿರುಗಿ ಬರಲಿಲ್ಲ. ಇದನ್ನು ಕಂಡ ಸಗರ ಮೊಮ್ಮಗನಾದ ಅಂಶುಮಂತನನ್ನು "ನಿನ್ನ ಚಿಕ್ಕಪ್ಪಂದಿರ ವಿಷಯವನ್ನು ತಿಳಿದು ಕುದುರೆಯನ್ನು ಕರೆದು ತಾ" ಎಂದು ಕಳುಹಿಸಿದ.

ಅದರಂತೆ ಚಿಕ್ಕಪ್ಪಂದಿರು ಅಗೆದ ಮಾರ್ಗದಲ್ಲಿಯೇ ಬಂದ ಅಂಶುಮಂತ ದಿಗ್ಗಜಗಳನ್ನು ಕಂಡ. ಅವನ್ನು ನಮಸ್ಕರಿಸಿದ. ಚಿಕ್ಕಪ್ಪಂದಿರ ವಿಷಯವನ್ನು ಕೇಳಿದ. "ನಿನಗೆ ಕುದುರೆ

ಸಿಗುತ್ತದೆ. ಮಂಗಳವಾಗುತ್ತದೆ" ಎಂದು ಅವು ಹರಸಿದವು.

ಈಶಾನ್ಯ ದಿಕ್ಕಿನಲ್ಲಿ ಹೊರಟು ಪಾತಾಳವನ್ನು ಪ್ರವೇಶಿಸಿದ. ಅಲ್ಲಿ ಒಂದು ದೊಡ್ಡ ಬೂದಿಯ ರಾಶಿ ಕಂಡುಬಂದಿತು. ಇದು ತನ್ನ ಚಿಕ್ಕಪ್ಪಂದಿರದೇ ಎಂದುಕೊಂಡು ದುಃಖಿಸಿದ. ಸಮೀಪದಲ್ಲೇ ಯಜ್ಞದ ಕುದುರೆ ಮೇಯುತ್ತಿತ್ತು. ಚಿಕ್ಕಪ್ಪಂದಿರಿಗೆ ಜಲತರ್ಪಣ ಮಾಡುವಸಲುವಾಗಿ ನೀರಿಗಾಗಿ ಹುಡುಕಿದ. ಆಗ ಗರುಡ ಕಾಣಿಸಿಕೊಂಡ. ಗರುಡ ಸುಮತಿಯ ಸಹೋದರ. ಸಗರಪುತ್ರರಿಗೆ ಸೋದರಮಾವ. "ಅಂಶುಮಂತ! ನಿನ್ನ ಚಿಕ್ಕಪ್ಪಂದಿರು ಕಪಿಲಮಹಾಮುನಿಯಿಂದ ದಗ್ಧರಾಗಿದ್ದಾರೆ. ಅವರಿಗಾಗಿ ದುಃಖಿಸಬೇಡ. ಲೋಕಹಿತಕ್ಕಾಗಿ ನಡೆದ ಕಾರ್ಯ ಇದು. ಅವರಿಗೆ ಸಾಮಾನ್ಯ ಜಲದಿಂದ ತರ್ಪಣ ಸಲ್ಲದು. ಅದಕ್ಕಾಗಿ ಪರಮ ಪಾವನೆಯೆನಿಸಿದ ದೇವಲೋಕದ ಗಂಗೆಯನ್ನು ಕರೆತಂದು ಆ ಗಂಗಾಜಲವನ್ನು ಇದರ ಮೇಲೆ ಹಾಯಿಸು. ಈಗ ಈ ಕುದುರೆಯನ್ನು ತೆಗೆದುಕೊಂಡು ಹೋಗಿ ನಿನ್ನ ತಾತನ ಯಜ್ಞವನ್ನು ಪೂರೈಸು" ಎಂದ ಗರುಡ.

ಗರುಡನ ಮಾತಿನಂತೆಯೇ ಕರೆದುಕೊಂಡು ಹೋದ ಅಂಶುಮಂತ. ಸಗರನಿಗೆ ಎಲ್ಲವನ್ನೂ ಹೇಳಿದ. ಸಗರ ಸಂತಾಪಪಟ್ಟ. ಯಜ್ಞವನ್ನು ಪೂರ್ತಿಮಾಡಿದ. ದೇವಗಂಗೆಯನ್ನು ಕರೆತರುವುದು ಹೇಗೆ ಎಂದು ಚಿಂತಿಸುತ್ತಲೇ ಪ್ರಾಣಬಿಟ್ಟ.

ಸಗರನ ನಂತರ ಅಂಶುಮಂತ ಪಟ್ಟಕ್ಕೆಬಂದ. ಅವನ ಮಗ ದಿಲೀಪ. ಇಬ್ಬರೂ ಗಂಗೆಯನ್ನು ಕರೆತರುವುದು ಹೇಗೆ ಎಂದು ಚಿಂತಿಸುತ್ತಲೇ ಪ್ರಾಣಬಿಟ್ಟರು.

ದಿಲೀಪನ ಮಗ ಭಗೀರಥ ಮಹಾ ತೇಜಸ್ವಿ ಅವನಿಗೆ ಮಕ್ಕಳಾಗಲಿಲ್ಲ. ಮಕ್ಕಳಿಗಾಗಿಯೂ, ಮುತ್ತಾತಂದಿರಿಗೆ ಸದ್ಗತಿಯನ್ನು ದೊರಕಿಸುವುದಕ್ಕಾಗಿಯೂ ಹಿಮವತ್ಪರ್ವತದಲ್ಲಿ ತಪಸ್ಸನ್ನು ಮಾಡತೊಡಗಿದ. ಘೋರವಾದ ತಪಸ್ಸು ಮಾಡಿದ. ಹೇಗೆ ? ಪಂಚಾಗ್ನಿಯ ಮಧ್ಯೆ ಕೈ ಎತ್ತಿ ನಿಂತು ನಿಯತಾಹಾರನಾಗಿ ಜಿತೇಂದ್ರಿಯನಾಗಿ ಬಹಳ ಕಾಲ ಬ್ರಹ್ಮನನ್ನು ಕುರಿತು ಮಾಡಿದ ತಪಸ್ಸು ಅದು !

ಭಗೀರಥನ ತಪಸ್ಸಿಗೆ ಮೆಚ್ಚಿದ ಬ್ರಹ್ಮ ಅವನಿಗೆ ಪ್ರತ್ಯಕ್ಷನಾದ.
"ನಿನಗೇನು ಬೇಕು ? ಕೇಳು" ಎಂದ.

ಬ್ರಹ್ಮದೇವ ! ಪರಮಪವಿತ್ರವಾದ ಇಕ್ಷ್ವಾಕು ವಂಶ ವರ್ಧಿಸಬೇಕು. ನನ್ನ ಮುತ್ತಾತಂದಿರು ಸದ್ಗತಿ ಪಡೆಯಬೇಕು" ಎಂದ.

ಭಗೀರಥನ ಮನೋರಥಗಳು ಸಫಲವಾಗುವಂತೆ ಬ್ರಹ್ಮ ಅನುಗ್ರಹಿಸಿದ. ಗಂಗಾದೇವಿ ದೇವಲೋಕದಿಂದ ಭೂಮಿಗೆ ಇಳಿದುಬರುವಾಗ ಅವಳ ರಭಸವನ್ನು ತಡೆಯುವುದಕ್ಕಾಗಿ ಮಹೇಶ್ವರನನ್ನು ಪ್ರಾರ್ಥಿಸುವಂತೆ ಹೇಳಿದ. ಆತ ದೇವಲೋಕದಲ್ಲಿದ್ದ ಗಂಗೆಯನ್ನು ಕುರಿತು "ದೇವಿ ನೀನು ಸಮಯವನ್ನು ನೋಡಿ ಈ ಭಗೀರಥನೊಂದಿಗೆ ಹೋಗು" ಎಂದು ಆಜ್ಞಾಪಿಸಿದ.

ಭಗೀರಥ ಎರಡು ಕೈಗಳನ್ನೂ ಮೇಲಕ್ಕೆತ್ತಿ ವಾಯುವನ್ನೇ ಆಹಾರವನ್ನಾಗಿಸಿಕೊಂಡು, ಕಾಲ ಹೆಬ್ಬೆರಳಿನಮೇಲೆ ನಿಂತು ಒಂದು ವರ್ಷಕಾಲ ಈಶ್ವರನನ್ನು ಕುರಿತು ತಪಸ್ಸು ಮಾಡಿದ.

ಭಗೀರಥನ ಉಗ್ರ ತಪಸ್ಸಿಗೆ ಮೆಚ್ಚಿದ ಈಶ್ವರ, "ಗಂಗೆಯನ್ನು ಧರಿಸುತ್ತೇನೆ" ಎಂದು ಅಭಯಕೊಟ್ಟ.

ಭಗೀರಥ ಗಂಗೆಯನ್ನು ದೇವಲೋಕದಿಂದ ಇಳಿದು ಬರುವಂತೆ ಪ್ರಾರ್ಥಿಸಿದ. ಗಂಗೆ

ಒಪ್ಪಿದಳು. ನನ್ನ ರಭಸವನ್ನು ತಡೆಯುವ ಸಾಮರ್ಥ್ಯ ಈ ಶಿವನಿಗುಂಟೆ ಎಂದುಕೊಂಡಳು. ಮಹಾರಭಸದಿಂದ ದೇವಲೋಕದಿಂದ ಧುಮುಕಿದಳು.

ಗಂಗೆಯ ಸೊಕ್ಕನ್ನು ಗಮನಿಸಿದ ಶಿವ, "ಎಲೆ ಗಂಗೆ! ನಿನ್ನ ಸೊಕ್ಕನ್ನು ಮುರಿಯುತ್ತೇನೆ ನೋಡು' ಎಂದು ಸಂಕಲ್ಪಿಸಿದ. ಬೀಳುತ್ತಿದ್ದ ಗಂಗೆಯನ್ನು ತಡೆದು, ತನ್ನ ಜಟೆಯಲ್ಲೇ ಬಂಧಿಸಿಟ್ಟ. ಒಂದು ತೊಟ್ಟು ನೀರೂ ಕೆಳಗೆ ಬೀಳದಂತಾಯಿತು. ಶಿವನ ಜಟಾಜೂಟದಲ್ಲಿ ಸಿಕ್ಕಿಕೊಂಡಳು ಗಂಗೆ. ಅವಳ ಗರ್ವ ಇಳಿಯಿತು. ಭಗೀರಥ ನೋಡಿದ. ಗಂಗೆ ಇಳಿಯಲಿಲ್ಲ. ಪುನಃ ಶಿವನನ್ನು ಪ್ರಾರ್ಥಿಸಿದ. ಸಂತುಷ್ಟನಾದ ಪರಮೇಶ್ವರ ಗಂಗೆಯನ್ನು ಒಂದು ಸರೋವರದಲ್ಲಿ ಬಿಟ್ಟ. ಈಶ್ವರನ ಜಟೆಯಿಂದ ಹೊರಬಂದ ದೇವಗಂಗೆ ಏಳು ಕವಲುಗಳಾಗಿ ಹರಿಯಿತು. ಹ್ಲಾದಿನಿ, ನಲಿನಿ, ಪಾವನಿ ಎಂಬ ಮೂರು ಕವಲು ಪೂರ್ವದಿಕ್ಕಿಗೆ ಹರಿದವು. ಸುಚಕ್ಷು, ಸೀತೆ, ಸಿಂಧು ಎಂಬ ಮೂರು ಕವಲು ಪಶ್ಚಿಮಕ್ಕೆ ಹರಿದವು. ಏಳನೆಯ ಕವಲು ಮಾತ್ರ ಭಗೀರಥನನ್ನು ಹಿಂಬಾಲಿಸಿತು

ರಥವೇರಿ ಹೋಗುತ್ತಿದ್ದ, ಭಗೀರಥ. ಅವನ ಹಿಂದೆ ಹಿಂದೆ ಬರುತ್ತಿತ್ತು ಪ್ರವಾಹ. ಕೆಲವುಕಡೆ ದ್ರುತಗತಿ, ಕೆಲವೊಮ್ಮೆ ಮಂದಗತಿ, ಕೆಲವು ಬಾರಿ ಬಳಸುಗತಿ ಹೀಗೆ ನಾನಾಗತಿಗಳಲ್ಲಿ ಹರಿಯತೊಡಗಿದಳು, ಗಂಗೆ. ವಿಷ್ಣುಪಾದೋದ್ಭವೆ ಎನಿಸಿ, ಶಿವನ ಜಟಾಮಂಡಲದಿಂದ ಹೊರ ಬಂದ ಗಂಗೆ ಪರಮ ಪಾವನೆ ಎನಿಸಿದಳು. ದೇವ, ಋಷಿ, ಗಂಧರ್ವರೂ, ಮಾನವರೂ ಸ್ಪರ್ಶಿಸಿದರು. ಅದರಲ್ಲಿ ಸ್ನಾನಮಾಡಿದರು. ತಾಪ, ಪಾಪ ಶಾಪಗಳನ್ನು ಕಳೆದುಕೊಂಡರು. ಭಗೀರಥನ ರಥ ಜಹ್ನು ಮಹರ್ಷಿಯ ಆಶ್ರಮದ ಹತ್ತಿರ ಬಂದಿತು. ಅವನನ್ನು ಅನುಸರಿಸಿ ಬಂದ ಗಂಗೆ ಮಹರ್ಷಿಯ ಆಶ್ರಮವನ್ನೆಲ್ಲ ತೋಯಿಸಿದಳು.

ಕೋಪಗೊಂಡ ಜಹ್ನು ಮಹರ್ಷಿ ಗಂಗೆಯನ್ನು ಆಪೋಶನವಾಗಿ ಕುಡಿದುಬಿಟ್ಟ. ಇದನ್ನು ಕಂಡ ಭಗೀರಥ ಮತ್ತು ದೇವತೆಗಳು ಮಹರ್ಷಿಯನ್ನು ಸ್ತೋತ್ರಮಾಡಿದರು. "ಕೃಪೆಮಾಡಿ" ಎಂದು ಪ್ರಾರ್ಥಿಸಿದರು.

ಮಹರ್ಷಿ ಮತ್ತೆ ಗಂಗೆಯನ್ನು ತನ್ನ ಕಿವಿಯಿಂದ ಹೊರಗೆಬಿಟ್ಟ. ಜಹ್ನು ಮಹರ್ಷಿಯ ಕಿವಿಯಿಂದ ಹೊರಬಂದ ಗಂಗೆ "ಜಾಹ್ನವಿ" (ಅಂದರೆ ಜಹ್ನುವಿನ ಮಗಳು) ಎನಿಸಿದಳು. ಮತ್ತೆ ಭಗೀರಥನನ್ನು ಹಿಂಬಾಲಿಸಿದಳು. ಭಗೀರಥ ಸಾಗರವನ್ನು ಪ್ರವೇಶಿಸಿ ರಸಾತಲದ ಮೂಲಕ ಪಾತಾಳಕ್ಕೆ ಬಂದ. ಗಂಗೆಯೂ ಸಾಗರವನ್ನು ಪ್ರವೇಶಿಸಿ ಭಗೀರಥನ ಹಿಂದೆಯೇ ಪಾತಾಳಕ್ಕೆ ಬಂದಳು. ಚಿಕ್ಕಪ್ಪಂದಿರ ಬೂದಿಯ ರಾಶಿಯ ಮೇಲೆ ಹರಿಯುವಂತೆ ಪ್ರಾರ್ಥಿಸಿದ. ಅದ ರಂತೆಯೇ ಗಂಗೆ ಸಗರಪುತ್ರರ ಬೂದಿಯ ರಾಶಿಯ ಮೇಲೆ ಹರಿದಳು. ಆ ವಿಮಲೋದಕದಿಂದ ಪಿತೃಗಳಿಗೆ ತರ್ಪಣವನ್ನಿತ್ತ.

ಸಗರಪುತ್ರರು ಪಾಪವನ್ನು ಕಳೆದುಕೊಂಡವರಾಗಿ ಸದ್ಗತಿ ಪಡೆದರು. ಆಗ ಬ್ರಹ್ಮ ಭಗೀರಥನ ಬಳಿಗೆ ಬಂದು "ಭಗೀರಥ ನಿನ್ನ ಕರ್ಮ ಶ್ಲಾಘನೀಯ. ಗಂಗೆ ನಿನ್ನಿಂದ ಭೂಮಿಗೆ ಇಳಿಯುವಂತಾದಳು. ನೀನೇ ಅವಳಿಗೆ ತಂದೆ ಎನಿಸಿರುವೆ. ಅವಳಿಗೆ ಭಾಗೀರಥಿ ಎಂದು ಹೆಸರಾಗಲಿ. ನಿನ್ನ ಪಿತೃಗಳು ಮುಕ್ತರಾದರು. ನಿನಗೂ ಶ್ರೇಯಸ್ಸಾಗಲಿ. ಈ ಗಂಗಾಜಲದಲ್ಲಿ ಸ್ನಾನಮಾಡು" ಎಂದು ಹೇಳಿದ.

ಅದರಂತೆ ಭಗೀರಥ ಭಾಗೀರಥಿಯಲ್ಲಿ ಸ್ನಾನಮಾಡಿದ. ಕೃತಕೃತ್ಯನಾದ. ಹೀಗೆ ಸ್ವರ್ಗ, ಮರ್ತ್ಯ ಪಾತಾಳಗಳಲ್ಲಿ ಹರಿಯುವವಳಾದ್ದರಿಂದ ತ್ರಿಪಥಗೆ ಎನಿಸಿದಳು ಗಂಗೆ.

ಗಂಗಾವತರಣದ ಪರಮ ಪಾವನವಾದ ಕಥೆ ಇದು. ಇದನ್ನು ಹೇಳುವುದು ಕೇಳುವುದು ಸಕಲ ಸನ್ಮಂಗಳಗಳೂ ಲಭಿಸಲು ಸಾಧಕವಾಗುತ್ತದೆ ಎಂದು ವಿಶ್ವಾಮಿತ್ರರು ರಾಮ-ಲಕ್ಷ್ಮಣರಿಗೆ ಗಂಗಾವತರಣದ ವೃತ್ತಾಂತವನ್ನು ತಿಳಿಸಿದರು.

## ಸಮುದ್ರ ಮಥನ

ಗಂಗಾನದಿಯನ್ನು ದಾಟಿದ ಬಳಿಕ ರಾಮ ಲಕ್ಷ್ಮಣರು ವಿಶಾಲಾನಗರಕ್ಕೆ ಬಂದರು. ಆ ಪಟ್ಟಣದ ರಮ್ಯತೆಯನ್ನು ಕಂಡ ರಾಮ, ವಿಶ್ವಾಮಿತ್ರರನ್ನು ಕುರಿತು "ಈ ದೇಶ ಬಹಳ ರಮ್ಯವಾಗಿದೆ. ಇದರ ವೃತ್ತಾಂತವನ್ನು ತಿಳಿಯಬೇಕು ಎಂದು ಕುತೂಹಲಿಯಾಗಿದ್ದೇನೆ. ದಯವಿಟ್ಟು ತಿಳಿಸಿ" ಎಂದು ಪ್ರಾರ್ಥಿಸಿದ.

ವಿಶ್ವಾಮಿತ್ರರು ರಾಮ ಲಕ್ಷ್ಮಣರಿಗೆ ವಿಶಾಲಾನಗರದ ಪೂರ್ವವೃತ್ತಾಂತವನ್ನು ಹೇಳತೊಡಗಿದರು.

ಕಶ್ಯಪಮಹರ್ಷಿಗೆ ದಿತಿ, ಅದಿತಿ ಎಂಬ ಇಬ್ಬರು ಹೆಂಡಿರು. ದಿತಿಯಲ್ಲಿ ಹುಟ್ಟಿದವರು ದೈತ್ಯರು ಎನಿಸಿದರು. ಅದಿತಿಯಲ್ಲಿ ಹುಟ್ಟಿದವರು ದೇವತೆಗಳಾದರು. ದೈತ್ಯರು ಕಾಯಬಲವುಳ್ಳವರು—ಪರಾಕ್ರಮಿಗಳು. ಅವರಿಂದ ತಮಗೆ ತೊಂದರೆ ಆಗದಿರುವಂತೆ ಇರಲು ದೇವತೆಗಳು ಯೋಚಿಸಿದರು. ಕ್ಷೀರಸಮುದ್ರವನ್ನು ಕಡೆದು ಅಮೃತವನ್ನು ಪಡೆದು ಅಮರರಾಗಬೇಕು ಎನಿಸಿತು. ಅದರಂತೆ ದೈತ್ಯರೂ ದೇವತೆಗಳೂ ಕ್ಷೀರಸಮುದ್ರವನ್ನು ಕಡೆದರು. ಮಂದರ ಪರ್ವತವೇ ಕಡೆಗೋಲಾಯಿತು. ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿ ಮಾಡಿಕೊಂಡರು.

ಒಂದು ಕಡೆ ದೈತ್ಯರು, ಮತ್ತೊಂದು ಕಡೆ ದೇವತೆಗಳು ಕಡೆಯಲು ಪ್ರಾರಂಭಿಸಿದರು. ಪರ್ವತ ಮುಳುಗಿ ಹೋಯಿತು. ದೇವತೆಗಳೆಲ್ಲ ಮಹಾವಿಷ್ಣುವನ್ನು ಪ್ರಾರ್ಥಿಸಿದರು. ಆಗ ವಿಷ್ಣು ಆಮೆಯ ರೂಪವನ್ನು ತಳೆದ. ತನ್ನ ವಜ್ರದಂಥ ಬೆನ್ನಿನ ಮೇಲೆ ಮಂದರ ಪರ್ವತವನ್ನು ಧರಿಸಿದ. ಇನ್ನೊಂದು ರೂಪದಿಂದ ಪರ್ವತದ ಶಿಖರವನ್ನೂ ಆತು ನಿಂತ. ಮಗದೊಂದು ರೂಪದಿಂದ ದೇವತೆಗಳೊಡನೆ ಸೇರಿ ಕಡೆಯಲೂ ಅನುವಾದ. ಹೀಗೆ ನಾನಾ ರೂಪಗಳನ್ನು ಧರಿಸಿ ಅನಂತರೂಪಿಯಾದ ಮಹಾವಿಷ್ಣು ಕ್ಷೀರಸಮುದ್ರವನ್ನು ಕಡೆಯಲು ಅನುವು ಮಾಡಿಕೊಟ್ಟ.

ಕಡೆಯುತ್ತಿದ್ದಂತೆ ಮೊದಲಿಗೆ ತೀಕ್ಷ್ಣವಾದ ಹಾಲಾಹಲ ಹುಟ್ಟಿತು. ಅದರ ತೀಕ್ಷ್ಣತೆ ಎಲ್ಲವನ್ನೂ ಸುಡಲುತೊಡಗಿತು. ಆಗ ವಿಷ್ಣು ಈಶ್ವರನನ್ನು ಕುರಿತು "ದೇವತೆಗಳಲ್ಲಿ ಅಗ್ರಸ್ಥಾನ ನಿನಗೆ ಆದ್ದರಿಂದ ಮಥನ ಕಾಲದಲ್ಲಿ ಮೊದಲು ಹುಟ್ಟಿದ ವಸ್ತುವನ್ನು ಸ್ವೀಕರಿಸು. ಈ ಅಗ್ರಪೂಜೆಯನ್ನು ಕೈಕೊಳ್ಳು" ಎಂದ. ಸರ್ವ ಭೂತಗಳ ಹಿತವನ್ನೂ ಅನುಲಕ್ಷಿಸಿ ಪರಮಶಿವ ಆ ಹಾಲಾಹಲವನ್ನು ನುಂಗಿದ. ಧವಳ ದೇಹ ಕಾಂತಿಯೊಡಗೂಡಿದ ಶಿವನ ಬಿಳಿಯ ಕಂಠದಲ್ಲಿ ವಿಷ ನಿಂತಿತು ನೀಲಕಂಠ ಎನಿಸಿದ. ಆವನ ಕಂಠದಲ್ಲಿ ವಿಷ ನೀಲಮಣಿಯಂತೆ ಶೋಭಿಸಿತು.

ಹಾಲಾಹಲದ ನಂತರ ಸಮುದ್ರಮಥನಕಾಲದಲ್ಲಿ ಅಪ್ಸರೆಯರು. ವರುಣನ ಮಗಳಾದ ವಾರುಣಿ, ಉಚ್ಚೈಶ್ರವಸ್ಸೆಂಬ ಕುದುರೆ, ಕಾಮಧೇನು, ಇವೆಲ್ಲ ಕ್ರಮವಾಗಿ ಹುಟ್ಟಿದವು. ಧನ್ವಂತರಿ ಹುಟ್ಟಿದ.

ಮಹಾಲಕ್ಷ್ಮಿ ಸಮುದ್ರದಿಂದ ಹುಟ್ಟಿದಳು. ಅವಳು ಸಾಕ್ಷಾತ್ ಶ್ರೀಮನ್ನಾರಾಯಣನನ್ನೇ ವರಿಸಿದಳು. ಮಹಾವಿಷ್ಣುವಿನ ವಕ್ಷಸ್ಥಳವನ್ನೇ ತನ್ನ ಆವಾಸಸ್ಥಾನವನ್ನಾಗಿ ಮಾಡಿಕೊಂಡಳು.

ಕೊನೆಗೆ ಅಮೃತ ಹುಟ್ಟಿತು. ಅದಕ್ಕಾಗಿ ದೇವ ದಾನವರಿಗೆ ಕಚ್ಚಾಟ ಉಂಟಾಯಿತು. ವಿಷ್ಣು ಮೋಹನಾಕಾರವಾದ ಮೋಹಿನಿ ರೂಪವನ್ನು ಧರಿಸಿ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನಿತ್ತ. ದೇವತೆಗಳು ಅಮೃತವನ್ನು ಸವಿದರು-ಅಮರರಾದರು.

ದೈತ್ಯರೆಲ್ಲ ಯುದ್ಧದಲ್ಲಿ ನಾಶವಾದರು. ದಿತಿಗೆ ಇದರಿಂದ ಬಹಳ ದುಃಖವಾಯಿತು. ತನ್ನ ಮಕ್ಕಳೆಲ್ಲ ನಾಶ ಹೊಂದಿದ್ದನ್ನು ಕಂಡ ಅವಳು ಬಹಳ ಶೋಕ ಪಟ್ಟಳು. ಪತಿಯಾದ ಕಶ್ಯಪರಲ್ಲಿ ತನ್ನ ಸಂಕಟವನ್ನು ತೋಡಿಕೊಂಡಳು. "ದೇವೇಂದ್ರನನ್ನೇ ಕೊಲ್ಲುವಂಥ ಮಗ ತನಗೆ ಆಗಬೇಕು; ಹಾಗೆ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದಳು. ಕಶ್ಯಪರು "ನಿನಗೆ ದೇವೇಂದ್ರನನ್ನು ಜಯಿಸುವ ಮಗ ಆಗುತ್ತಾನೆ. ಅಂಥ ಮಗ ಆಗುವವರೆಗೆ ನೀನು ಮಾತ್ರ ಶುಚಿಯಾಗಿ ತಪಸ್ಸು ಮಾಡಬೇಕು" ಎಂದು ಹೇಳಿದರು.

ಅದರಂತೆ ದಿತಿ ಕುಶಪ್ಲವನ ಎಂಬಲ್ಲಿ ತಪಸ್ಸನ್ನು ಮಾಡಲು ಪ್ರಾರಂಭಿಸಿದಳು. ಸಹಸ್ರಾಕ್ಷನಾದ ಇಂದ್ರ ಇದನ್ನು ತಿಳಿದ. ದಿತಿಯನ್ನು ವಿವಿಧ ರೀತಿಯಲ್ಲಿ ಸೇವಿಸಲು ಪ್ರಾರಂಭಿಸಿದ. ದಿತಿ ದೇವೇಂದ್ರನ ಸೇವೆಯಿಂದ ಸಂತುಷ್ಟಳಾದಳು.

ಒಂದುದಿನ ಹಗಲು; ದಿತಿ ಆಯಾಸದಿಂದ ಮಂಡಿಯ ಮೇಲೆ ತಲೆಯನ್ನೂರಿ ಮಲಗಿದಳು. ಅವಳಿಗೆ ನಿದ್ದೆ ಬಂದಿತು. ತಲೆಯ ಕೂದಲು ಕಾಲಿಗೆ ತಗುಲುತ್ತಿತ್ತು .ಹಗಲು ನಿದ್ರಿಸಬಾರದು. ಅಲ್ಲದೆ ಕಾಲಿಗೆ ಕೂದಲು ತಗುಲುವುದೂ ನಿಷಿದ್ಧ. ಇದು ಅಶುಚಿಯಾಯಿತು.

ಇಂಥ ಸಮಯವನ್ನೇ ಕಾಯುತ್ತಿದ್ದ ಇಂದ್ರ. ಸೂಕ್ಷ್ಮರೂಪದಿಂದ ದಿತಿಯ ಗರ್ಭವನ್ನು ವಜ್ರಾಯುಧದಿಂದ ಏಳು ತುಂಡುಗಳಾಗಿ ಕತ್ತರಿಸಿದ. ಆ ಗರ್ಭಗಳು ಅಳತೊಡಗಿದವು. ಆಗ ಇಂದ್ರ "ಮಾರುದಃ–ಮಾರುದಃ" ಎಂದ. "ಅಳಬೇಡ-ಅಳಬೇಡ" ಎಂದು ಅರ್ಥ.

ದಿತಿಗೆ ಎಚ್ಚರವಾಯಿತು. ಇಂದ್ರ ತಾಯಿಗೆ ನಮಸ್ಕರಿಸಿದ. "ಅಮ್ಮಾ ನಿನ್ನ ಗರ್ಭದಲ್ಲಿ ನನ್ನ ವೈರಿ ಬೆಳೆಯುತ್ತಿದ್ದನಾದ್ದರಿಂದ ನೀವು ಅಶುಚಿಯಾಗಿದ್ದ ಕಾಲದಲ್ಲಿ ವಜ್ರಾಯುಧದಿಂದ ತುಂಡರಿಸಿದೆ. ಕ್ಷಮಿಸಿ" ಎಂದ.

ದಿತಿ "ಆದದ್ದಾಯಿತು. ಅವರನ್ನು ದೇವತೆಗಳ ಗುಂಪಿಗೆ ಸೇರಿಸಿಕೊ. ಮರುತ್ತುಗಳೆಂದು ಖ್ಯಾತಿ ಪಡೆಯಲಿ ಅವರು" ಎಂದಳು.

"ಹಾಗೆಯೇ ಆಗಲಿ" ಎಂದ ಇಂದ್ರ.

ಹೀಗೆ ಮಾರುತಗಳ ಉತ್ಪತ್ತಿಯನ್ನು ಹೇಳಿದ ವಿಶ್ವಾಮಿತ್ರರು "ರಾಮ, ಆ ದಿತಿ ತಪಸ್ಸು ಮಾಡಿದ ಸ್ಥಳ ಇದು. ಇಲ್ಲೇ ಇಕ್ಷ್ವಾಕು ಮಹಾರಾಜನಿಗೆ ಅಲಂಬುಸೆ ಎಂಬುವಳಲ್ಲಿ ವಿಶಾಲಾ ಎಂಬ ಮಗನಾದ. ಅವನು ಕಟ್ಟಿಸಿದ ನಗರವಾದ್ದರಿಂದ ಇದಕ್ಕೆ ವಿಶಾಲನಗರ ಎಂದು ಹೆಸರಾಯಿತು" ಎಂದು ಹೇಳಿದರು. ವಿಶ್ವಾಮಿತ್ರರು ರಾಮ ಲಕ್ಷ್ಮಣರೊಡಗೂಡಿ ವಿಶಾಲನಗರವನ್ನು ಆಗ ಪಾಲಿಸುತ್ತಿದ್ದ ಸುಮತಿ ಮಹಾರಾಜನಲ್ಲಿಗೆ ನಡೆದರು.

ವಿಶ್ವಾಮಿತ್ರರೊಡನೆ ಬಂದ ರಾಮ ಲಕ್ಷ್ಮಣರನ್ನು ನೋಡಿದ ದೊರೆ ಸುಮತಿ. ರಾಮ ಲಕ್ಷ್ಮಣರ ಸೌಂದರ್ಯಕ್ಕೆ ಮನಸೋತ.

**ಇಮೌ ಕುಮಾರೌ ಭದ್ರಂತೇ ದೇವತುಲ್ಯ ಪರಾಕ್ರಮೌ ।**

**ಗಜ ಸಿಂಹ ಗತೀ ವೀರೌ ಶಾರ್ದೂಲ ವೃಷಭೋಪಮೌ ॥**

ಹಿಂದೆ ಉದ್ಗರಿಸಿದ. ರಾಮಲಕ್ಷ್ಮಣರ ಅಪ್ರತಿಮ ಸೌಂದರ್ಯವನ್ನು ಕಂಡು ಸುಮತಿ ಬೆರಗಾದ. ಆ ಸೌಂದರ್ಯಕ್ಕೆ ದೃಷ್ಟಿ ತಾಗದೇ ಇರಬೇಕಲ್ಲಾ ಎಂದು ಚಿಂತಿಸಿದ ! ತನ್ನನ್ನೇ ಅರಿಯದೆ ಮೊದಲು "ಭದ್ರಂತೇ" ಎಂದು ಮಂಗಳಶಾಸನ ಮಾಡಿದ.

ಭಗವಂತನ ರೂಪವೇ ಅಂಥದು. ಆಳ್ವಾರುಗಳಲ್ಲಿ ಆಂಡಾಳ್ ತಂದೆ ಎನಿಸಿದ, ವಿಷ್ಣು ಚಿತ್ತರಿಗೆ "ಪೆರಿಯಾಳ್ವಾರ್ "ಎಂದು ಹೆಸರು.

"ಆಳ್ವಾರ್" ಎಂದರೆ ಭಗವದ್ಜ್ಞಾನಾನುಭೂತಿಯಲ್ಲಿ ಮುಳುಗಿದವರು ಎಂದು ಅರ್ಥ. ಅದರಲ್ಲಿ ವಿಷ್ಣುಚಿತ್ತರಿಗೆ ಮಾತ್ರ "ಪೆರಿಯಾಳ್ವಾರ್" ಎಂದು ಹೆಸರು ಬರಲು ಬಲವಾದ ಕಾರಣ ಉಂಟು.

ವಿಷ್ಣುಚಿತ್ತರಿಗೆ ಭಗವಂತ ದರ್ಶನ ಕೊಟ್ಟ. "ಏನು ಬೇಕು?" ಎಂದು ಕೇಳಿದ. ಆಗ ಆಳ್ವಾರ್ ಹಾಡತೊಡಗಿದರು.

"ಪಲ್ಲಾಂಡ್ ಪಲ್ಲಾಂಡ್ ಪಲ್ಲಾಯಿರತ್ತಾಂಡ್" ಎಂದು ಸರ್ವಶಕ್ತನಾದ ಪರಮಾತ್ಮನಿಗೆ ಮಂಗಳಾಶಾಸನ ಮಾಡಿದರು. ಪ್ರೀತಿ ಹೆಚ್ಚಾದಾಗ ಭಯವೂ ಹೆಚ್ಚುತ್ತದೆ. ಭಗವಂತನಲ್ಲಿ ಪೆರಿಯಾಳ್ವಾರಿಗೆ ಇದ್ದ ಪ್ರೇಮ ಅಪರಿಮಿತ. ಅದಕ್ಕೇ ತಾನು ನೋಡುವುದರಿಂದ ಭಗವಂತನಿಗೇ ಎಲ್ಲಿ ದೃಷ್ಟಿ ತಾಗುತ್ತದೋ ; ಅವನು ಎಂದೆಂದೂ ಚೆನ್ನಾಗಿರಬೇಕು ಎಂದು ಪಲ್ಲಾಂಡ್ ಹಾಡಿದರು !

ಎಲ್ಲರಿಗೂ ಮಂಗಳವನ್ನುಂಟುಮಾಡುವ ಮಂಗಳಮೂರ್ತಿಯಾದ ಮಂಗಳ ಪುರುಷನಿಗೆ ವಿಷ್ಣುಭಕ್ತರು ಮಂಗಳ ಶಾಸನ ಮಾಡಿದ್ದರಿಂದ "ಪೆರಿಯಾಳ್ವಾರ್" ಎನಿಸಿಕೊಂಡರು.

ಇತ್ತ ಸುಮತಿ ಮಹಾರಾಜನು ರಾಮಲಕ್ಷ್ಮಣರಿಗೆ ಅವರು ಯಾರು ಎಂದು ತಿಳಿಯುವ ಮೊದಲೇ ಮಂಗಳ ಶಾಸನ ಮಾಡಿದ. ಶುಭ ಕೋರಿದ. ಆ ಮೇಲೆ ಕೇಳುತ್ತಾನೆ "ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳ, ಆನೆ, ಸಿಂಹ, ಹುಲಿ, ವೃಷಭಗಳ ಗಂಭೀರ ನಡೆಯನ್ನು ಹೋಲುವಂಥ ಈ ಕುಮಾರದ್ವಯರು ಯಾರು ? ಇವರು ಇಷ್ಟು ದೂರ ನಡೆದು ಬರಲು ಕಾರಣವೇನು" ಎಂದು.

ವಾಲ್ಮೀಕಿ ಔಚಿತ್ಯವನ್ನರಿತು ಉಪಮಾನವನ್ನು ಅಳವಡಿಸಿರುತ್ತಾರೆ. ಆನೆ, ಸಿಂಹ ಮತ್ತು ಹುಲಿ—ಇವು ಗಂಭೀರವಾದ ನಡೆಯುಳ್ಳವು. ಆನೆ ಉದಾರವಾದ ಗುಣವುಳ್ಳದ್ದು. ಆನೆಗೆ ಅಕ್ಕಿಯನ್ನು ಆಹಾರವಾಗಿ ಇಟ್ಟರೆ ಅದು ತಿನ್ನುವಾಗ ನಾಲ್ಕುಕಡೆ ಎರಚಿಕೊಂಡೇ ತಿನ್ನುತ್ತದೆ. ಎರಚಲ್ಪಟ್ಟ ಅಕ್ಕಿಯನ್ನು ಉಳಿದ ಅನೇಕ ಪ್ರಾಣಿ—ಪಕ್ಷಿಗಳು ತಿನ್ನಲು ಒದಗಿಸುತ್ತದೆ. ಹಾಗೆಯೇ ರಾಮನಿಂದ ಅವನನ್ನು ಆಶ್ರಯಿಸಿದವರು ಸುಲಭವಾಗಿ ಬದುಕಬಹುದು. ಸಿಂಹ ಮೃಗರಾಜ. ಸಿಂಹದ ನಡೆ ಅನುಪಮವಾದುದು. ಅದಕ್ಕೇ ಆಂಡಾಳ್ ಶ್ರೀಕೃಷ್ಣನನ್ನು ತಿರುಪ್ಪಾವೈನಲ್ಲಿ ಪ್ರಾರ್ಥಿಸುತ್ತಾ "ಗುಹೆಯಲ್ಲಿ ಪವಡಿಸಿರುವ ಸಿಂಹ ಎದ್ದು ಬರುವಂತೆ ಎದ್ದು ಬಾ" ಎನ್ನುತ್ತಾಳೆ.

ಆನೆ ತಾನು ದೊಡ್ಡ ಪ್ರಾಣಿಯಾದರೂ ತನ್ನ ಮೇಲೆ ಎಲ್ಲರನ್ನೂ ಹತ್ತಿಸಿಕೊಳ್ಳುತ್ತದೆ. ಎಲ್ಲರೂ ಆನೆಯ ಮೇಲೆ ಏರಲು ಆಶಿಸುತ್ತಾರೆ. ಹಾಗೆಯೇ ಗಜರಾಜನೆನಿಸಿದ ಶ್ರೀರಾಮನನ್ನು ಎಲ್ಲರೂ ಆಶ್ರಯಿಸುತ್ತಾರೆ. ತನ್ನನ್ನು ಆಶ್ರಯಿಸಿದವರನ್ನು ಮೇಲೆತ್ತುವ ವ್ರತ ಉಳ್ಳವ ಶ್ರೀರಾಮ.

ಚಿತ್ರಕೂಟದಲ್ಲಿ ಸೀತಾರಾಮರು ವಿಹರಿಸುತ್ತಿದ್ದ ಸಮಯ. ಇಬ್ಬರೂ ಒಮ್ಮೆ ನಕ್ಕರು. ಸೀತೆಯನ್ನು ರಾಮ "ಏಕೆ ನಗುತ್ತಿದ್ದೀಯೆ?" ಎಂದ. "ಇಲ್ಲ; ನೀವು ನಡೆಯುವುದನ್ನು ನೋಡಿದಾಗ ಗಜರಾಜ ನಾಚಿಕೊಳ್ಳುವಂತಾಗುತ್ತದೆ. ಅದರಿಂದ ನಕ್ಕೆ" ಎಂದಳು. "ನೀವು ಏಕೆ ನಗುತ್ತೀರಿ?" ಎಂದಳು ಸೀತೆ. "ನಿನ್ನ ನಡೆಯನ್ನು ನೋಡಿ ಕಲಹಂಸಗಳೂ ನಾಚಿಕೊಳ್ಳುವಂತಿದೆಯಲ್ಲಾ ಎಂದು ನಗುತ್ತಿದ್ದೇನೆ" ಎಂದ ರಾಮ.

ವಿಶ್ವಾಮಿತ್ರ ಮಹರ್ಷಿ ಸುಮತಿಗೆ ಎಲ್ಲ ವೃತ್ತಾಂತವನ್ನೂ ತಿಳಿಸಿದ. ದಶರಥರಾಜನ ಮಕ್ಕಳು ತನ್ನಲ್ಲಿಗೆ ಬಂದದ್ದನ್ನು ಕಂಡ ಸುಮತಿ ಸಂತೋಷಪಟ್ಟ. ಅವರನ್ನು ಆದರಿಸಿದ. ಅತಿಥಿ ಸತ್ಕಾರ ಮಾಡಿದ. ಆ ರಾತ್ರಿ ಅಲ್ಲಿ ತಂಗಿದ್ದು ಮರುದಿನ ವಿಶ್ವಾಮಿತ್ರರು **ತ್ವರೆಯಿಂದ** ರಾಮ ಲಕ್ಷ್ಮಣರನ್ನು ಕರೆದುಕೊಂಡು ಮಿಥಿಲಾನಗರದತ್ತ ಪ್ರಯಾಣ ಬೆಳೆಸಿದರು.

ವಿಶ್ವಾಮಿತ್ರರು **ತ್ವರೆಯಿಂದ** ಏಕೆ ಹೊರಟರು? ಅದಕ್ಕೆ ಕಾರಣವುಂಟು. ವಿಶ್ವಾಮಿತ್ರರು ಬ್ರಹ್ಮಜ್ಞಾನಿಗಳು. ಅರಿತವರು. ರಾಮ ಪರಬ್ರಹ್ಮ ತತ್ವ ಎಂದು ತಿಳಿದವರು. ಆ ಪರಬ್ರಹ್ಮ ನೊಡನೆ ಶಕ್ತಿರೂಪಿಣಿಯಾದ ಜಾನಕಿಯನ್ನು ಸೇರಿಸಬೇಕು. ಶಕ್ತಿಯುಕ್ತನಾದ ನಾರಾಯಣನನ್ನು ಸೇವಿಸಬೇಕು ಎಂಬ ಆತುರ ಅವರಿಗೆ. ಅಲ್ಲದೆ, ಹಿಂದೆ ವಿಶ್ವಾಮಿತ್ರರು ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ಹರಿಶ್ಚಂದ್ರನನ್ನು ಕಠಿಣ ಪರೀಕ್ಷೆಗೆ ಒಳಗಾಗಿಸಿದ್ದರು. ಪತಿಪತ್ನಿಯರನ್ನು ಬೇರೆ ಬೇರೆ ಯಾಗಿಸಿದ್ದರು. ಆದರಿಂದ ಅದೇ ವಂಶದಲ್ಲಿ ಜನಿಸಿದ ರಾಮನಿಗೆ ಸೀತೆಯನ್ನಿತ್ತು ವಿವಾಹ ಮಾಡಿಸ ಬೇಕು ಎಂದು ಸಂಕಲ್ಪಿಸಿದರು. ಅದನ್ನು ಪೂರ್ತಿ ಮಾಡಲು ಅವರಿಗೆ ಆತುರ. ಅದಕ್ಕೇ "ತ್ವರೆ ಯಿಂದ ಹೊರಟರು ವಿಶ್ವಾಮಿತ್ರರು" ಎಂದು ಹೇಳಿದ್ದಾರೆ ವಾಲ್ಮೀಕಿ.

## ಅಹಲ್ಯಾ ಶಾಪವಿಮೋಚನೆ

ಮಿಥಿಲಾನಗರಕ್ಕೆ ಬರುತ್ತಿದ್ದಂತೆ ರಾಮನು ನಗರದ ಸಮೀಪದಲ್ಲಿ ರಮಣೀಯವಾದ ವನ ಒಂದನ್ನು ಕಂಡ. ವನವೇನೋ ರಮ್ಯವಾಗಿತ್ತು. ಆದರೆ ಶೂನ್ಯವಾಗಿತ್ತು. ವಿಶ್ವಾಮಿತ್ರರನ್ನು ಕುರಿತು "ಈ ಪ್ರದೇಶ, ಮಹರ್ಷಿಯ ಆಶ್ರಮದಂತೆ ಕಂಗೊಳಿಸುತ್ತಿದೆ. ಇದು ಯಾರ ಆಶ್ರಮ? ಏಕೆ ಹೀಗೆ ಶೂನ್ಯವಾಗಿದೆ?" ಎಂದು ಪ್ರಶ್ನಿಸಿದ.

ವಿಶ್ವಾಮಿತ್ರರು ಸಂತೋಷದಿಂದ "ರಾಮ, ನಾನೇ ನಿನಗೆ ಈ ಆಶ್ರಮದ ವೃತ್ತಾಂತವನ್ನು ಹೇಳಬೇಕೆಂದಿದ್ದೆ. ಅಷ್ಟರಲ್ಲಿ ನೀನೇ ಕೇಳಿದೆ" ಎಂದು ಹೇಳಿ ಪ್ರಾರಂಭಿಸಿದರು ; ಇದು ಗೌತಮ ಮಹರ್ಷಿಗಳ ಆಶ್ರಮ. ಇಲ್ಲಿ ಅಹಲ್ಯಾಗೌತಮರು ವಾಸಿಸುತ್ತಿದ್ದರು. ಗೌತಮರು ಮಹಾ ತಪಸ್ವಿಗಳು. ಅವರ ತಪವನ್ನು ಕೆಡಿಸಬೇಕು ಎಂದು ಯೋಚಿಸಿದ ದೇವೇಂದ್ರ.

ಒಂದು ದಿನ ಗೌತಮಋಷಿ ಹೊರಗೆ ಹೋಗಿದ್ದ ವೇಳೆ. ದೇವೇಂದ್ರ ಗೌತಮರಂತೆಯೇ ವೇಷ ಧರಿಸಿ ಅಹಲ್ಯೆಯ ಬಳಿ ಬಂದ. ಅಹಲ್ಯೆಯ ಸೌಂದರ್ಯವನ್ನು ಕಂಡು ಅವಳನ್ನು ಕಾಮಿ ಸಿದ. ಅಹಲ್ಯೆಗೂ ಗೊತ್ತಾಯಿತು, ಬಂದಿರುವವರು ಗೌತಮರಲ್ಲ ದೇವೇಂದ್ರನೇ ಎಂದು. ಆದರೆ ದೇವರಾಜನಾದ ಇಂದ್ರನೇ ತನ್ನನ್ನು ಇಚ್ಛಿಸಿದನಲ್ಲಾ ಎಂದು ಹೆಮ್ಮೆಪಟ್ಟು, ಒಪ್ಪಿದಳು. ತಪ್ಪು ಮಾಡಿದಳು.

ಗೌತಮರಿಗೆ ತಿಳಿಯಿತು. ಇಂದ್ರನಿಗೂ-ಅಹಲ್ಯೆಗೂ ಶಾಪಕೊಟ್ಟರು. ಅಹಲ್ಯೆ ಪಶ್ಚಾ ತ್ತಾಪದಿಂದ ಕಣ್ಣೀರಿಡುತ್ತ ಗೌತಮರನ್ನು ಪ್ರಾರ್ಥಿಸಿದಳು. ಗೌತಮರು 'ಈ ಆಶ್ರಮ ನಿರ್ಜನ

ಹೋಗುತ್ತದೆ. ಇಲ್ಲಿ ನೀನು ಯಾರ ಕಣ್ಣಿಗೂ ಬೀಳದಂತೆ, ಅನ್ನಾಹಾರಗಳಿಲ್ಲದೆ ಬರೀ ಗಾಳಿಯನ್ನೇ ಸೇವಿಸುತ್ತಾ ತಪಸ್ಸು ಮಾಡುತ್ತ ಬಿದ್ದಿರು. ಒಂದಾನೊಂದು ಕಾಲಕ್ಕೆ ದಶರಥರಾಮ ಇಲ್ಲಿಗೆ ಬಂದಾಗ ಅವನ ಪಾದ ಸ್ಪರ್ಶದಿಂದ ಪುನೀತಳಾಗುತ್ತೀಯೆ' "ಎಂದು ಹೇಳಿ ತಪಸ್ಸು ಮಾಡಲು ಹೊರಟುಹೋದರು" ಎಂದು ವಿಶ್ವಾಮಿತ್ರರು ರಾಮನಿಗೆ ಅಹಲ್ಯಾ ವೃತ್ತಾಂತವನ್ನು ತಿಳಿಸಿ, "ರಾಮ, ಈ ವನದಲ್ಲಿರುವ ಅಹಲ್ಯೆಯನ್ನು ಉದ್ಧರಿಸು" ಎಂದರು. ರಾಮ ಆ ವನವನ್ನು ಪ್ರವೇಶಿಸಿದ. ಶ್ರೀರಾಮನ ಪಾದಸ್ಪರ್ಶದಿಂದ ಅಹಲ್ಯೆ ಮೊದಲಿಗಿಂತ ಇಮ್ಮಡಿ ಕಾಂತಿಯನ್ನು ಪಡೆದು ಎದ್ದಳು. ಪುನೀತಳಾದಳು. ಅಹಲ್ಯೆ ಪುನೀತಳಾದದ್ದನ್ನು ಜ್ಞಾನದೃಷ್ಟಿಯಿಂದ ತಿಳಿದ ಗೌತಮರೂ ಅಲ್ಲಿಗೆ ಬಂದು ಸೇರಿದರು. ಅಹಲ್ಯೆ-ಗೌತಮರ ಮರು ಸಮಾಗಮ ಆಯಿತು. ಆ ದಂಪತಿಗಳು ರಾಮನನ್ನು ಸತ್ಕರಿಸಿದರು. ರಾಮ ಸಂತೋಷಗೊಂಡ.

ಅಹಲ್ಯಾ ಶಾಪವಿಮೋಚನೆಯ ಪ್ರಕರಣದಲ್ಲಿ ಶ್ರೀರಾಮನ ಪಾದದ ಪ್ರಭಾವ ವ್ಯಕ್ತವಾಯಿತು. ಅದನ್ನೇ ಕೊಂಡಾಡುತ್ತಾ ಜ್ಞಾನಿಯೊಬ್ಬರು ಹೇಳುತ್ತಾರೆ "ಕೈವಣ್ಣಂ ಅಂಗು ಕಂಡೇನ್ । ಕಾಲ್‌ವಣ್ಣಂ ಇಂಗುಕಂಡೇನ್." ತಾಟಕಾವಧದ ಪ್ರಕರಣದಲ್ಲಿ ರಾಘವನ ಕೈಬಲ, ತೋಳ್ಬಲ ಪ್ರಕಾಶವಾಯಿತು. ಅಹಲ್ಯೋದ್ಧಾರ ಪ್ರಕರಣದಲ್ಲಿ ಪಾದದ ಪ್ರಭಾವ ಪ್ರಕಟವಾಯಿತು.

"ಕಾಲ್‌ವಣ್ಣಂ" ಎಂಬುದಕ್ಕೆ ವ್ಯಾಖ್ಯಾನ ಮಾಡುವಾಗ ರಾಮನ ಪಾದದ ಪ್ರಭಾವ ಮಾತ್ರವೇ ಅಲ್ಲ. ನಿನ್ನ ಮಹಿಮೆಯ ಕಾಲು ಭಾಗ ಮಾತ್ರ ಪ್ರಕಾಶಕ್ಕೆ ಬಂದಿದೆ. ಇನ್ನೂ ಪ್ರಕಾಶಕ್ಕ ಬರದೆ ಇರುವ ನಿನ್ನ ಮಹಿಮೆ ಅನಂತ, ಎಂದಿದ್ದಾರೆ.

ಭಗವಂತನ ಪಾದಗಳ ಮಹಿಮೆಯೇ ಅಂಥದು. ಅವನ ಪಾದಗಳನ್ನು ವರ್ಣಿಸದ ಭಕ್ತನಿಲ್ಲ, ಕೊಂಡಾಡದ ಕವಿಯಿಲ್ಲ.

ರಾಮಾವತಾರ ಕಾಲದಲ್ಲಿ ಶಿಲೆಯನ್ನು ಹೆಣ್ಣಾಗಿಸಿದೆ.

ಕೃಷ್ಣಾವತಾರ ಕಾಲದಲ್ಲಿ ಬೂದಿಯನ್ನೇ ಕುಮಾರನನ್ನಾಗಿಸಿದೆ.

ಅಶ್ವತ್ಥಾಮಾಚಾರ್ಯರು ಉತ್ತರೆಯ ಗರ್ಭಕ್ಕೆ ಬ್ರಹ್ಮಾಸ್ತ್ರವನ್ನು ಬಿಟ್ಟರು. ಸುಟ್ಟು ಸತ್ತು ಹೋದ ಮಗು ಅವಳಿಗೆ ಹುಟ್ಟಿತು.

ಬ್ರಹ್ಮಾಸ್ತ್ರದಿಂದ ಸತ್ತಿರುವ ಕಾರಣ ಬ್ರಹ್ಮಚಾರಿಯೊಬ್ಬ ಮುಟ್ಟಿದರೆ ಮಗು ಬದುಕುತ್ತದೆ ಎಂದು ಹೇಳಿದರು. ಅಲ್ಲಿಗೆ ಕೃಷ್ಣ ಬಂದ. ನೋಡಿದ, ಮಗುವನ್ನು.

**"ಯದಿಮೇ ಬ್ರಹ್ಮಚರ್ಯಂ ಸ್ಯಾತ್ ಸತ್ಯಂಚ ವಚನಂ ಮಮ ।**

**ಅನ್ಯಾಹತಂ ಮಮೈಶ್ವರ್ಯಂ ತೇನ ಜೀವತು ಬಾಲಕಃ" ॥**

ಎಂದು ಹೇಳಿದ. ತನ್ನ ಪಾದದಿಂದ ಆ ಮಗುವನ್ನು ಮುಟ್ಟಿದ. ತಕ್ಷಣ ಮಗು ಜೀವಂತವಾಯಿತು.

ನಮ್ಮಾಳ್ವಾರ್ ಭಗವಂತನ ತಿರುವಡಿಗಳನ್ನು ಕೊಂಡಾಡುತ್ತಾರೆ, ಶ್ರೀ-ಭೂದೇವಿಯರು ಮೃದುವಾಗಿ ಹಿಡಿಯುವಂಥ ಪಾದ, ಭಕ್ತರೆಲ್ಲರಿಗೂ ಆವಾಸಸ್ಥಾನವಾದ ಪಾದ, ಎಲ್ಲರಿಂದ ಸೇವಿಸಲ್ಪಡುವ ಪಾದ...ಹೀಗೆ ಭಗವತ್ಪಾದಗಳ ಮಹಿಮೆ ವರ್ಣಿಸಲು ಅಸದಳವಾಗಿದೆ.

ಅಹಲ್ಯೆಯನ್ನು ಉದ್ಧರಿಸಿದ್ದು ರಾಮನ ದಿವ್ಯಪಾದ. ಅದಕ್ಕೇ ಪತಿವ್ರತೆಯರಲ್ಲಿ ಅವಳಿಗೇ ಅಗ್ರಸ್ಥಾನ.

"ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾ ಪಾತಕ ನಾಶನಂ" ॥

ಎನ್ನುವಾಗ ಅಹಲ್ಯೆಗೇ ಮೊದಲಿನ ಸ್ಥಾನ ಮೀಸಲು. ಇದಕ್ಕೆ ಕಾರಣ ಅವಳಿಗೆ ಭಗವತ್ಪಾದದ ಸ್ಪರ್ಶ ಆಗಿರುವುದೆ.

ಅಹಲ್ಯೆಯನ್ನು ಉದ್ಧರಿಸಿದ ರಾಮನನ್ನು ದೇವಗಂಧರ್ವ ಋಷಿಗಳೆಲ್ಲ ಹೊಗಳಿದರು. ವಿಶ್ವಾಮಿತ್ರರು ರಾಮಲಕ್ಷ್ಮಣರೊಡಗೂಡಿ ಮಿಥಿಲೆಯತ್ತ ಹೊರಟರು

**ಜನಕರಾಜನ ಹಿರಿಮೆ**

ಮಿಥಿಲಾಪುರವನ್ನು ಪರಿಪಾಲಿಸುತ್ತಿದ್ದ, ಜನಕ ಮಹಾರಾಜ. ಅವನು ಕರ್ಮ ಯೋಗಿ, ಜಿತೇಂದ್ರಿಯ, ಧರ್ಮನಿಷ್ಠ, ಸತ್ಯವ್ರತ ಗೀತೆಯಲ್ಲಿ ಶ್ರೀಕೃಷ್ಣನೇ ಹೇಳಿದಾನೆ. "ಕರ್ಮಣ್ಯೇವಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ" ಎಂದು. ಕರ್ಮಯೋಗಿಗಳಲ್ಲಿ ಅಗ್ರಸ್ಥಾನ ಜನಕನಿಗೆ.

ಜನಕನಸಭೆ ಯೋಗಿಗಳಿಂದ. ಋಷಿಗಳಿಂದ, ತಪಸ್ವಿಗಳಿಂದ ಮುನಿಶ್ರೇಷ್ಠರಿಂದ ತುಂಬಿರುತ್ತಿತ್ತು. ಯಾವಾಗಲೂ ಅಲ್ಲಿ ಪರತತ್ವ ನಿರ್ಣಯದ ಬಗ್ಗೆ ಚರ್ಚೆ ನಡೆಯುತ್ತಿತ್ತು.

ಒಮ್ಮೆ ಜನಕ ವಿದ್ವಜ್ಜನರ ಸಭೆ ಕೂಡಿಸಿದ. ಒಂದು ಸಾವಿರ ಹಸುಗಳನ್ನು ಚರ್ಚೆಗೆ ಪಣವಾಗಿಟ್ಟ. ಆ ಹಸುಗಳೂ ಎಂಥವು ! ಚಿನ್ನದ ಗೊರಸಿನಿಂದ, ರತ್ನಹಾರಗಳಿಂದ ಅಲಂಕೃತವಾದವು. (ಹಾಲು ಕರೆಯಲು ಬೆಳ್ಳಿಯ ಪಾತ್ರೆಗಳು!) ಒಂದೊಂದೂ ಪುಷ್ಟವಾದ ಹಸು. ಇಂಥ ಸಾವಿರ ಗೋವುಗಳನ್ನು ಪಣವಾಗಿ ಇಟ್ಟ ಜನಕ. ಸಭೆಯಲ್ಲಿ ಹೇಳಿದ "ಕೇಳುವ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುವಂಥ ಜಾಣ್ಮೆ, ಯೋಗ್ಯತೆ ಯಾರಿಗೆ ಉಂಟೋ ಅವರು ಈ ಗೋವುಗಳನ್ನು ತೆಗೆದುಕೊಂಡು ಹೋಗಬಹುದು" ಎಂದು.

ಇಡೀಸಭೆಯಲ್ಲಿ ಮೌನ ಆವರಿಸಿತು ಎಲ್ಲರೂ ಒಬ್ಬರ ಮುಖವನ್ನು ಒಬ್ಬರು ನೋಡತೊಡಗಿದರು. ಜನಕನಸಭೆ ಎಂದರೆ ಸಾಮಾನ್ಯವೆ ? ಯಾರೂ ಮಾತಾಡಲಿಲ್ಲ. ನೋಡಿದರು ಯಾಜ್ಞವಲ್ಕ್ಯರು ತಮ್ಮ ಶಿಷ್ಯನಿಗೆ ಸಾವಿರ ಹಸುಗಳನ್ನು ಕರೆದೊಯ್ಯುವಂತೆ ಹೇಳಿದರು. ಎಲ್ಲರೂ ನೋಡುತ್ತಿರುವಂತೆ ಶಿಷ್ಯ ಹಸುಗಳನ್ನು ಕರೆದುಕೊಂಡು ಹೋದ.

ಸಭಿಕರು ಸುಮ್ಮನೆ ಬಿಟ್ಟಾರೆ ? ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳಿದರು ಪ್ರಶ್ನೆಗಳ ಸುರಿಮಳೆಯೇ ಆಯಿತು ಸಭೆಯಲ್ಲಿದ್ದ ಒಬ್ಬೊಬ್ಬರೂ ಘಟಾನುಘಟಿಗಳು-ಸರ್ವಶಾಸ್ತ್ರಕೋವಿದರು. ಎಲ್ಲರ ಪ್ರಶ್ನೆಗಳಿಗೂ ಸಮಂಜಸವಾದ ಉತ್ತರವನ್ನಿತ್ತರು, ಯಾಜ್ಞವಲ್ಕ್ಯರು.

ಇಂಥ ಮಹಾತ್ಮರನ್ನು ಆಸ್ಥಾನದಲ್ಲಿಟ್ಟುಕೊಂಡವ ಜನಕ ಮಹಾರಾಜ. ಜನಕನಿಗೆ "ವಿದೇಹ" ಎಂದೂ ಹೆಸರು. ದೇಹಧಾರಿಯಾಗಿದ್ದಾಗ್ಯೂ, ಸಂಸಾರದಲ್ಲಿದ್ದರೂ, ಅದಕ್ಕೆ ಅಂಟಿಕೊಂಡವನಲ್ಲ.

ಶುಕಾಚಾರ್ಯರು ಭಗವತ್ ತತ್ವದ ಉಪನ್ಯಾಸ ಮಾಡುತ್ತಿದ್ದರು. ಎಲ್ಲ ಋಷಿಗಳೂ ನೆರೆದಿದ್ದರು. ಜನಕನೂ ಉಪನ್ಯಾಸವನ್ನು ಕೇಳುತ್ತಿದ್ದ. ಶುಕಾಚಾರ್ಯರು ಉಪನ್ಯಾಸವನ್ನು ಹೇಳುವಾಗ ಜನಕನ ಮುಖವನ್ನೇ ನೋಡುತ್ತ ಹೇಳುತ್ತಿದ್ದರು ಜನಕ ಬರುವವರೆಗೆ ಉಪನ್ಯಾಸ ಪ್ರಾರಂಭಿಸುತ್ತಿರಲಿಲ್ಲ. ಪಕ್ಷಪಾತ ಇದು ಎನಿಸಿತು. ಇತರರಿಗೆ. ಶುಕಾಚಾರ್ಯರಿಗೆ ಎಲ್ಲರ ಆಂತರ್ಯ ತಿಳಿಯಿತು.

ಒಂದು ದಿನ ಉಪನ್ಯಾಸ ನಡೆಯುತ್ತಿದೆ. ಯಾರೋ ಒಬ್ಬ ಓಡಿ ಬಂದ. "ಬೆಂಕಿ, ಬೆಂಕಿ ಹತ್ತಿಕೊಂಡು ಉರಿಯುತ್ತಿದೆ" ಎಂದು ಕೂಗಿದ. ತಕ್ಷಣ ಋಷಿಗಳೆಲ್ಲ ಓಡಿದರು, ತಮ್ಮ ವಲ್ಕಲವನ್ನೂ, ಕೃಷ್ಣಾಜಿನವನ್ನೂ, ಮಣ್ಣಿನ ಕಮಂಡಲುವನ್ನೂ ರಕ್ಷಿಸಿಕೊಳ್ಳಲು !

ಮಹಾರಾಜ ಜನಕ ಹಾಗೆಯೇ ಕುಳಿತಿದ್ದ, ಕೇಳುತ್ತ. ಶುಕಾಚಾರ್ಯರು ಹೇಳುತ್ತಲೇ ಇದ್ದರು.

ಓಡಿಹೋದ ಋಷಿಗಳೆಲ್ಲ ಹಿಂದಿರುಗಿ ಬಂದರು ಜನಕನನ್ನು ಕಂಡರು. ಅವನ ಏಕಾಗ್ರತೆಯನ್ನೂ ಅವನ ವೈರಾಗ್ಯನಿಷ್ಠೆಯನ್ನೂ ಅರಿತರು. ನಾಚಿಕೊಂಡರು. ಕರ್ಮರನೆನಿಸಿ ಕಾಲಕಾಲಕ್ಕೆ ಕೆಲಸವನ್ನು ಮಾಡುತ್ತಿದ್ದ ಜನಕ ಎಂಥ ವಿರಾಗಿ ಎಂದು ತಿಳಿಯಿತು. ಇಂಥ ಜನಕ, ವಿದೇಹ ಎನಿಸಿದವ. ಮಿಥಿಲೆಯ ಅರಸ. ವಿಶ್ವಾಮಿತ್ರರೊಡನೆ ಬಂದ ರಾಮಲಕ್ಷ್ಮಣರನ್ನು ನೋಡಿದ. ಬಂದ ಋಷಿಗಳನ್ನು ಸತ್ಕರಿಸಿದ, ಆದರಿಸಿದ. ಕೇಳಿದ, "ನಿಮ್ಮೊಂದಿಗೆ, ಅಶ್ವಿನೀ ದೇವತೆಗಳಂತೆ, ಇಂದ್ರಾಗ್ನಿಗಳಂತೆ ಜ್ವಲಿಸುತ್ತ ಬಂದಿರುವ ಕುಮಾರರು ಯಾರು ? ಇವರು ನಡೆದು ಬರುತ್ತಿದ್ದರೆ, ಆನೆ, ಸಿಂಹ, ಹುಲಿ, ವೃಷಭ ಇವು ನಾಚಿಕೊಳ್ಳುವಂತಿದೆಯಲ್ಲ. ಇವರು ಯಾರು" ಎಂದು.

ವಿಶ್ವಾಮಿತ್ರರು ಜನಕನಿಗೆ ಎಲ್ಲವನ್ನೂ ಹೇಳಿದರು. ತಾಟಕಾವಧೆಯಿಂದ ಪ್ರಾರಂಭಿಸಿ ಯಜ್ಞಸಂರಕ್ಷಣೆ, ಅಹಲ್ಯೋದ್ಧಾರದವರೆಗೆ ಎಲ್ಲ ಕಥೆಯನ್ನೂ ತಿಳಿಸಿದರು. "ನಿನ್ನಲ್ಲಿರುವ ಬಿಲ್ಲನ್ನು ನೋಡಲು ಬಂದಿದ್ದಾರೆ" ಎಂದರು.

ಜನಕರಾಜನ ಪುರೋಹಿತ ಶತಾನಂದರು ಅಹಲ್ಯಾ-ಗೌತಮರ ಪುತ್ರ. ತನ್ನ ತಾಯಿಗೆ ರಾಮನಿಂದ ಶಾಪವಿಮೋಚನೆಯಾದದ್ದನ್ನು ಕೇಳಿ ಸಂತೋಷಿಸಿದರು. ವಿಶ್ವಾಮಿತ್ರರನ್ನೂ ರಾಮನನ್ನೂ ಕೊಂಡಾಡಿದರು.

ರಾಮಲಕ್ಷ್ಮಣರಿಗೆ ವಿಶ್ವಾಮಿತ್ರರ ಚರಿತ್ರೆಯನ್ನು ಹೇಳಲು ಪ್ರಾರಂಭಿಸಿದರು.

## ವಿಶ್ವಾಮಿತ್ರರ ಚರಿತ್ರೆ

ಗಾಧಿ ಮಹಾರಾಜನ ಮಗನಾದ ಕೌಶಿಕ ಕ್ಷತ್ರಿಯಜಾತಿಗೆ ಸೇರಿದವನು. ಒಮ್ಮೆ ಬೇಟೆಯಾಡುತ್ತಾ ವಶಿಷ್ಠಾಶ್ರಮಕ್ಕೆ ಬಂದನು. ಬಂದ ರಾಜ ಪೂಜನೀಯ ಎಂದು ತಿಳಿದ ವಶಿಷ್ಠರು ಕೌಶಿಕನನ್ನು ಯಥಾವತ್ತಾಗಿ ಸತ್ಕರಿಸಿದರು. ತಮ್ಮಲ್ಲಿದ್ದ ಕಾಮಧೇನುವಿನ ಸಹಾಯದಿಂದ ಕೌಶಿಕನಿಗೂ ಆತನ ಸೈನ್ಯಕ್ಕೂ ಷಡ್ರಸೋಪೇತವಾದ ಭೋಜನ ಮಾಡಿಸಿದರು. ವಿಶ್ವಾಮಿತ್ರರ ಮೊದಲಿನ ಹೆಸರು ಕೌಶಿಕ.

ಕೌಶಿಕ ಎಲ್ಲವನ್ನು ನೋಡುತ್ತಿದ್ದ. ವಶಿಷ್ಠರ ಕಾಮಧೇನು ತನ್ನದಾಗಬೇಕು ಎಂದು ಬಯಸಿದ. ಹೋಗಿ ವಶಿಷ್ಠರನ್ನು ಕೇಳಿದ. "ಸಾವಿರ ಹಸುಗಳನ್ನು ಕೊಡುತ್ತೇನೆ. ಈ ಕಾಮಧೇನುವನ್ನು ಕೊಡಿ" ಎಂದ. ವಶಿಷ್ಠರು ಕೊಡಲು ಒಪ್ಪಲಿಲ್ಲ. "ಎರಡು ಸಾವಿರ ಹಸುಗಳನ್ನು ಕೊಡುತ್ತೇನೆ. ಸಾವಿರ ಆನೆಗಳನ್ನು ಕೊಡುತ್ತೇನೆ. ಅಸಂಖ್ಯವಾದ ಸುವರ್ಣವನ್ನು ಕೊಡುತ್ತೇನೆ. ಈ ಕಾಮಧೇನುವನ್ನು ಕೊಡಿ" ಎಂದ. ಆಗಲೂ ಅವರು ಒಪ್ಪಲಿಲ್ಲ. ಮತ್ತೂ ಕೇಳಿದ, ಅಮೂಲ್ಯವಾದುದೆಲ್ಲಾ ರಾಜನಿಗೇ ಸೇರಬೇಕು. ಈ ಧೇನು ರತ್ನಪ್ರಾಯವಾದುದು. ಕೊಡಿ" ಎಂದು ಬಲಾತ್ಕಾರ ಮಾಡಿದ. ವಶಿಷ್ಠರು ಊಹೂಂ. ಕೌಶಿಕನಿಗೆ ಸಿಟ್ಟುಬಂದಿತು. ಅನುಚರರ ಕಡೆ ನೋಡಿದ.

ದೊರೆಯ ಆಜ್ಞೆಯಂತೆ ಬಲಾತ್ಕಾರವಾಗಿ ಕಾಮಧೇನುವನ್ನು ಎಳೆದುಕೊಂಡು ಹೋದರು

ಅನುಚರರು. ಶಬಲೆ ಎಂಬ ಹೆಸರಿನ ಆ ಧೇನು ಗೋಳಿಟ್ಟಿತು. ವಸಿಷ್ಠರು "ನಾನು ನಿನ್ನನ್ನು ಬಿಟ್ಟುಕೊಟ್ಟಿಲ್ಲ. ಬಲಾತ್ಕಾರವಾಗಿ ನಿನ್ನನ್ನು ಕರೆದೊಯ್ಯುತ್ತಿದ್ದಾರೆ. ನಿನ್ನ ರಕ್ಷಣೆಯನ್ನು ನೀನು ಮಾಡಿಕೊ" ಎಂದರು. ಆಗ ಶಬಲೆ ಹುಂಕಾರಮಾತ್ರದಿಂದ ಶಕರನ್ನೂ, ಯವನರನ್ನೂ ಅಸಂಖ್ಯವಾಗಿ ಸೃಷ್ಟಿಸಿತು. ಶಬಲೆಯಿಂದ ಸೃಷ್ಟವಾದ ಆ ಸೈನ್ಯ ಕೌಶಿಕನ ಸೈನ್ಯವನ್ನೆಲ್ಲ ನಾಶ ಮಾಡಿತು.

ತನ್ನ ಸಮಸ್ತ ಸೈನ್ಯವೂ ನಾಶವಾದದ್ದನ್ನು ಕಂಡ ಕೌಶಿಕ ವಸಿಷ್ಠರಿಗೆ ತಕ್ಕ ಪ್ರತೀಕಾರ ಮಾಡಬೇಕು ಎಂದು ಯೋಚಿಸಿದ. ಹಿಮವತ್‌ಪರ್ವತಕ್ಕೆ ಹೋಗಿ ಪರಮಶಿವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದ. ಶಿವನ ಅನುಗ್ರಹದಿಂದ ಸಕಲ ಅಸ್ತ್ರಗಳ ಪ್ರಯೋಗ, ಉಪಸಂಹಾರ ಕ್ರಮಗಳನ್ನೂ ತಿಳಿದುಕೊಂಡ. ಪುನಃ ಸರ್ವ ಅಸ್ತ್ರಗಳನ್ನೂ ಸಿದ್ಧತೆ ಮಾಡಿಕೊಂಡು ಕೌಶಿಕ ವಸಿಷ್ಠರ ಬಳಿ ಬಂದ. "ನಿಲ್ಲು-ನಿಲ್ಲು-ಈಗ ನಿನ್ನನ್ನು ನಾಶಮಾಡುತ್ತೇನೆ" ಎಂದು ಅಬ್ಬರಿಸಿ ಬರುತ್ತಿದ್ದ ಕೌಶಿಕರಾಜನನ್ನು ನೋಡಿದರು ವಸಿಷ್ಠರು.

"ಆಗಲಿ, ನಿಲ್ಲುತ್ತೇನೆ. ನೀ ಏನು ಮಾಡಬೇಕೆಂದಿರುವೆಯೋ ಮಾಡು" ಎಂದರು ತಮ್ಮ ಬ್ರಹ್ಮದಂಡವನ್ನು ಕೈಯ್ಯಲ್ಲಿ ಹಿಡಿದು ನಿಂತೇಬಿಟ್ಟರು ವಸಿಷ್ಠರು. ಕೌಶಿಕ ಒಂದಾದ ಮೇಲೆ ಒಂದು ಅಸ್ತ್ರವನ್ನು ಬಿಡತೊಡಗಿದ. ಎಲ್ಲ ಅಸ್ತ್ರಗಳೂ ಬ್ರಹ್ಮದಂಡದಲ್ಲಿ ಐಕ್ಯವಾದವು. ಸಾಗರವನ್ನು ಸೇರುವ ನದಿಗಳಂತೆ! ಎಲ್ಲ ಅಸ್ತ್ರಗಳೂ ಮುಗಿದವು. ಐಂದ್ರಾಸ್ತ್ರ. ವಾಯುವ್ಯಾಸ್ತ್ರ. ಆಗ್ನೇಯಾಸ್ತ್ರ, ವಾರುಣಾಸ್ತ್ರ, ಎಲ್ಲವನ್ನೂ ಅಡಗಿಸಿತು ವಸಿಷ್ಠರ ಬ್ರಹ್ಮತೇಜ. ಒಂದೊಂದು ಅಸ್ತ್ರವೂ ಅವರಲ್ಲಿ ಅಡಗುತ್ತಿದ್ದಂತೆ ಅವರ ಮುಖ ತೇಜಸ್ಸಿನಿಂದ ಬೆಳಗುತ್ತಿತ್ತು. ಕೊನೆಗೆ ಉಳಿದದ್ದು ಬ್ರಹ್ಮಾಸ್ತ್ರ ಒಂದೇ. ವಿಶ್ವಾಮಿತ್ರ ಅದನ್ನೂ ಪ್ರಯೋಗಿಸಿದ. ದೇವತೆಗಳು, ಋಷಿಗಳು, ಗಂಧರ್ವರು ಎಲ್ಲರೂ ತಲ್ಲಣಿಸಿದರು. ಮುಂದೇನು ಗತಿ! ಎಂದು ಪರಿತಪಿಸಿದರು. ಜ್ವಲಿಸುತ್ತ, ಕೆಂಡದಂಥ ಕಿಡಿಗಳನ್ನು ಕಾರುತ್ತ ಮಹಾ ವೇಗವಾಗಿ ಬಂದಿತು ಬ್ರಹ್ಮಾಸ್ತ್ರ. ವಸಿಷ್ಠರು ಜ್ವಲಿಸುತ್ತಿದ್ದ ತಮ್ಮ ಬ್ರಹ್ಮದಂಡವನ್ನು ಚಾಚಿದರು ಮುಂದೆ. ಕಾಲದಂಡದಂತಿದ್ದ ಅವರ ಬ್ರಹ್ಮದಂಡ ಬ್ರಹ್ಮಾಸ್ತ್ರವನ್ನೂ ನುಂಗಿತು. ಬ್ರಹ್ಮಾಸ್ತ್ರವನ್ನು ನುಂಗಿದ ವಸಿಷ್ಠರ ಶಿರಸ್ಸಿನಿಂದ ಅದ್ಭುತ ತೇಜಸ್ಸು ಹೊರಹೊಮ್ಮಿತು. ಪ್ರಳಯಕಾಲದ ರುದ್ರನಂತೆ, ತುಪ್ಪಹೊಯ್ದ ಅಗ್ನಿ ಜ್ವಾಲೆಯಂತೆ, ಕೋಟಿ ಸೂರ್ಯನಂತೆ ಪ್ರಜ್ವಲಿಸತೊಡಗಿದರು. ವಸಿಷ್ಠರು. ಎಲ್ಲರೂ ವಸಿಷ್ಠರನ್ನೂ, ಅವರ ಸಾಮರ್ಥ್ಯವನ್ನೂ ಕೊಂಡಾಡಿದರು.

ಎಲ್ಲವನ್ನೂ ಕಂಡ ಕೌಶಿಕನಿಗೆ ನಾಚಿಕೆಯಾಯಿತು. ಧನಸ್ಸನ್ನು ಅಲ್ಲೇ ಬಿಸುಟು "ಧಿಕ್ ಬಲಂ" ಕ್ಷತ್ರಿಯ ಬಲಂ ಬ್ರಹ್ಮ ತೇಜೋ ಬಲಂ ಬಲಂ" ಎಂದು ಉದ್ಗರಿಸಿದ.

"ಸುಡು ಈ ಕಾಯಬಲವನ್ನು, ಬಲವೆಂದರೆ ಬ್ರಹ್ಮಬಲವೇ ಬಲ"

ಅಂಥ ಬ್ರಹ್ಮಬಲ ವಸಿಷ್ಠರಿಗೆ ಬಂದದ್ದು ಗಾಯತ್ರೀ ಮಂತ್ರದ ಪ್ರಭಾವದಿಂದ, ಗಾಯತ್ರೀ ಮಂತ್ರಕ್ಕೆ ಸಮನಾದ ಮಂತ್ರ ಬೇರೊಂದಿಲ್ಲ. ಅಂಥ ಗಾಯತ್ರೀಮಂತ್ರದ ಜಪದ ಪ್ರಭಾವದಿಂದಲೇ ವಸಿಷ್ಠರು ಬ್ರಹ್ಮಾಸ್ತ್ರವನ್ನೂ ಅಡಗಿಸಿಕೊಳ್ಳುವ ಸಾಮರ್ಥ್ಯ, ಬಲ ಪಡೆದರು.

ವಸಿಷ್ಠರ ಬ್ರಹ್ಮಬಲವನ್ನು ಕಣ್ಣಾರೆಕಂಡ ಕೌಶಿಕನಿಗೆ ತಾನೂ ವಸಿಷ್ಠರಂತೆಯೇ ಬ್ರಹ್ಮತ್ವವನ್ನು ಪಡೆಯಬೇಕು ಎನಿಸಿತು. ಅದಕ್ಕಾಗಿ ತಪಸ್ಸು ಮಾಡಲು ನಡೆದ. ದೀರ್ಘಕಾಲ ತಪಸ್ಸು ಮಾಡಿದನಂತರ ವಿಶ್ವಾಮಿತ್ರ ಆದರು. "ರಾಜರ್ಷಿ" ಎನಿಸಿಕೊಂಡರು. ಅದರಿಂದ ತೃಪ್ತಿಹೊಂದದೆ ಮತ್ತೂ ತಪವನ್ನು ಕೈಗೊಂಡರು.

ಇಕ್ಷ್ವಾಕು ವಂಶದಲ್ಲಿ ತ್ರಿಶಂಕು ಎಂಬ ಅರಸ. ಅವನಿಗೆ ಒಮ್ಮೆ ಸಶರೀರವಾಗಿಯೇ ಸ್ವರ್ಗಕ್ಕೆ ಹೋಗಬೇಕು ಎಂದೆನಿಸಿತು. ಅದಕ್ಕಾಗಿ ಯಾಗ ಮಾಡಿಸುವಂತೆ ಕುಲಪುರೋಹಿತರಾದ ವಸಿಷ್ಠರನ್ನು ಪ್ರಾರ್ಥಿಸಿದ. ವಸಿಷ್ಠರು "ಅದು ಸಾಧ್ಯವಿಲ್ಲ ಎಂದರು".

ತ್ರಿಶಂಕು ವಸಿಷ್ಠರ ನೂರು ಮಂದಿ ಮಕ್ಕಳ ಹತ್ತಿರ ಹೋದ. ತಪಸ್ಸು ಮಾಡುತ್ತಿದ್ದ ಅವರನ್ನು ಕಂಡು ನಮಸ್ಕರಿಸಿ "ಸಶರೀರನಾಗಿಯೇ ಸ್ವರ್ಗಕ್ಕೆ ಹೋಗುವಂತೆ ನೀವಾದರೂ ಯಾಗ ಮಾಡಿಸಿ. ನಿಮ್ಮ ತಂದೆ ಆಗುವುದಿಲ್ಲ ಎಂದರು" ಎಂದು ಕೇಳಿದ.

ವಸಿಷ್ಠಪುತ್ರರು "ನಮ್ಮ ತಂದೆ ಆಗುವುದಿಲ್ಲ ಎಂದದ್ದನ್ನು ನಾವು ಮಾಡಲು ಸಾಧ್ಯವಿಲ್ಲ" ಎಂದರು.

ತ್ರಿಶಂಕು "ನೀವು ಚೆನ್ನಾಗಿರಿ—ನಾ ಹೋಗುತ್ತೇನೆ ಎಂದು ಹೊರಟ. ತ್ರಿಶಂಕುವಿನ ವ್ಯಂಗ್ಯೋಕ್ತಿಯನ್ನು ಕೇಳಿದ ವಸಿಷ್ಠಪುತ್ರರಿಗೆ ಕೋಪ ಬಂದಿತು. "ಗುರುಗಳನ್ನು ಅವಜ್ಞೆ ಮಾಡಿದ ನೀನು ಚಂಡಾಲನಾಗು" ಎಂದು ಶಪಿಸಿದರು. ಗುರುಶಾಪದಿಂದ ತ್ರಿಶಂಕುವಿಗೆ ಚಂಡಾಲತ್ವ ಬಂದಿತು. ಕಪ್ಪು ಬಣ್ಣವನ್ನು ತಳೆದ. ಅವನ ಆಭರಣಗಳೆಲ್ಲ ಕಬ್ಬಿಣದ ಆಭರಣಗಳಾದವು. ಭಯಂಕರ ರೂಪ ಬಂದಿತು. ಅವನನ್ನು ಈ ಸ್ಥಿತಿಯಲ್ಲಿ ನೋಡಿದ ಅವನ ಮಂತ್ರಿಗಳು, ಪರಿಚಾರಕರು ಭಯಪಟ್ಟು ಓಡಿದರು.

ಚಂಡಾಲ ರೂಪದ ತ್ರಿಶಂಕು ವಿಶ್ವಾಮಿತ್ರನಲ್ಲಿಗೆ ಬಂದ. ತನ್ನ ದುಃಖವನ್ನು ಹೇಳಿಕೊಂಡ. ಕರುಣೆಯಿಂದ ಕೌಶಿಕರು ಅವನನ್ನು ಸಂತೈಸಿ "ನಾನು ನಿನ್ನನ್ನು ಇದೇ ರೂಪದಿಂದಲೇ ಸ್ವರ್ಗಕ್ಕೆ ಕಳಿಸುತ್ತೇನೆ" ಎಂದು ಆಶ್ವಾಸನವಿತ್ತರು. ಯಾಗ ಮಾಡಿಸುವ ಸಲುವಾಗಿ ಎಲ್ಲ ಋಷಿಗಳನ್ನೂ ಕರೆದು ತರಲು ತನ್ನ ಮಕ್ಕಳಿಗೆ ಆಜ್ಞಾಪಿಸಿದರು. ಎಲ್ಲ ಋಷಿಗಳೂ ಬಂದರು. ವಶಿಷ ಪುತ್ರರೂ, ಮಹೋದಯ ಎಂಬ ಋಷಿಯೂ ಬರಲಿಲ್ಲ. ಅವರನ್ನು ಶಪಿಸಿದ ವಿಶ್ವಾಮಿತ್ರರು ಯಾಗವನ್ನು ಪ್ರಾರಂಭಿಸಿದರು. ಹವಿಸ್ಸನ್ನು ಸ್ವೀಕರಿಸಲು ದೇವತೆಗಳು ಬರಲಿಲ್ಲ. ಕುಪಿತರಾಗಿ ತಮ್ಮ ಯೋಗಶಕ್ತಿಯಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದರು. ಸ್ವರ್ಗಕ್ಕೆ ಹೋದ ತ್ರಿಶಂಕು. "ಗುರುಶಾಪ ಹೊಂದಿದವನಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲ, ನೀನು ತಲೆಕೆಳಗಾಗಿ ಬೀಳು" ಎಂದ ಇಂದ್ರ.

ಸ್ವರ್ಗದಿಂದ ತಲೆಕೆಳಗಾಗಿ ಬೀಳುತ್ತಿದ್ದ ತ್ರಿಶಂಕು ವಿಶ್ವಾಮಿತ್ರರನ್ನು "ರಕ್ಷಿಸಿ" ಎಂದು ಪ್ರಾರ್ಥಿಸಿದ.

"ನಿಲ್ಲು-ನಿಲ್ಲು" ಎಂದು ಹೇಳುತ್ತಾ ವಿಶ್ವಾಮಿತ್ರರು ತಮ್ಮ ತಪೋಬಲದಿಂದ ಎರಡನೇ ಸ್ವರ್ಗವನ್ನೇ ಸೃಷ್ಟಿಸಲು ಪ್ರಾರಂಭಿಸಿದರು.

ಭಯಗೊಂಡ ದೇವತೆಗಳು ವಿಶ್ವಾಮಿತ್ರರನ್ನು ಪ್ರಾರ್ಥಿಸಿದರು.

ಆದುವರೆಗೆ ಸೃಷ್ಟಿಸಿದ ನಕ್ಷತ್ರಗಳ ಮಧ್ಯೆ ತ್ರಿಶಂಕು ಸ್ಥಿರವಾಗುವಂತೆ ವಿಶ್ವಾಮಿತ್ರರು ಹೇಳಿದರು. "ಹಾಗೆಯೇ ಆಗಲಿ" ಎಂದು ದೇವತೆಗಳು ಒಪ್ಪಿದರು. ವಿಶ್ವಾಮಿತ್ರರು ಸೃಷ್ಟಿಸಿದ ಆ ನಕ್ಷತ್ರಗಳ ಮಧ್ಯೆ ತ್ರಿಶಂಕು ಇಂದ್ರನಂತೆ ಶೋಭಿಸುತ್ತಾ ತಲೆಕೆಳಗಾಗಿಯೇ ನಿಲ್ಲುವಂತಾದ.

ಎಲ್ಲರೂ ವಿಶ್ವಾಮಿತ್ರರನ್ನು ಕೊಂಡಾಡುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೊರಟರು. "ದಕ್ಷಿಣ ದಿಕ್ಕಿನಲ್ಲಿ ಮಾಡುತ್ತಿದ್ದ ತಪಸ್ಸಿಗೆ ವಿಘ್ನ ಬಂತು" ಎಂದುಕೊಂಡು ವಿಶ್ವಾಮಿತ್ರರು ಅಲ್ಲಿಂದ ಪಶ್ಚಿಮ ದಿಕ್ಕಿಗೆ ಹೋಗಿ ತಪಸ್ಸು ಮಾಡತೊಡಗಿದರು.

ಇಕ್ಷ್ವಾಕು ವಂಶದ ಅಂಬರೀಷ ಮಹಾರಾಜ ಆ ಕಾಲದಲ್ಲಿ ಅಶ್ವಮೇಧಯಾಗವಮಾಡಲು ಪ್ರಾರಂಭಿಸಿದ. ಅವನ ಯಾಗದ ಕುದುರೆಯನ್ನು ಇಂದ್ರ ಅಪಹರಿಸಿದ "ಯಜ್ಞ ಪೂರ್ತಿಯಾಗಲು ನರಬಲಿಯನ್ನು ಕೊಡಬೇಕು" ಎಂದರು ಋತ್ವಿಜರು. ಅದರಂತೆ ನರಪಶುವನ್ನು ಹುಡುಕುತ್ತಾ ಹೊರಟ ರಾಜ. ಎಲ್ಲೂ ದೊರೆಯಲಿಲ್ಲ. ಕೊನೆಗೆ ಸತ್ಯವತೀ-ಋಚೀಕರ ಬಳಿ ಬಂದ. ಆ ದಂಪತಿಗಳಿಗೆ ಮೂವರು ಮಕ್ಕಳು. ಅಂಬರೀಷ ಯಾಗಕ್ಕಾಗಿ ಒಬ್ಬ ಮಗನನ್ನು ಕೊಡುವಂತೆ ಕೇಳಿದ. ಅದಕ್ಕೆ ಬದಲಾಗಿ ಸಾವಿರಾರು ಹಸುಗಳನ್ನೂ, ಅಪರಿಮಿತವಾದ ಧನವನ್ನೂ ಕೊಡುತ್ತೇನೆ" ಎಂದ.

ಋಚೀಕ"ನಾನು ಹಿರಿಯ ಮಗನನ್ನು ಕೊಡಲಾರೆ" ಎಂದ.

ತಾಯಿ ಸತ್ಯವತಿ "ಕಿರಿಯ ಮಗ ತಾಯಂದಿರಿಗೆ ಪ್ರಿಯ. ಅವನನ್ನು ಕೊಡಲಾರೆ ಎಂದಳು. ನಡುವಿನ ಮಗ ಶುನಃಶ್ಯೇಫ ನೋಡಿದ. ತಾನಾಗಿಯೇ ಮುಂದೆಬಂದ.

"ರಾಜನ್, ಹಿರಿಯವನನ್ನು ತಂದೆ ಕೊಡುವುದಿಲ್ಲ ಎಂದರು. ತಾಯಿ ಕಿರಿಯನನ್ನು ಕೊಡುವುದಿಲ್ಲ ಎಂದಳು. ಅಂದರೆ ಅವರು ನನ್ನನ್ನು ಒಪ್ಪಿಸಲು ಒಪ್ಪಿದಾರೆ ಎಂದಾಯಿತು. ನೀನು ತಂದಿರುವ ಧನವನ್ನು ಕೊಟ್ಟು ನನ್ನನ್ನು ಕರೆದುಕೊಂಡು ಹೋಗು" ಎಂದ. ಅಂಬರೀಷ ಸಂತೋಷದಿಂದ ತಾನು ತಂದಿದ್ದ ಧನಕನಕ ವಸ್ತುಗಳನ್ನೆಲ್ಲ ಅವರಿಗೆ ಕೊಟ್ಟು ಶುನಃಶ್ಯೇಫನನ್ನು ಕರೆದೊಯ್ದ.

ಬಹಳ ದೂರ ಹೋದನಂತರ ಮಾರ್ಗಾಯಾಸದಿಂದಾಗಿ ವಿಶ್ರಮಿಸಿಕೊಳ್ಳಲು ತಂಗಿದ ಅಂಬರೀಷ. ಆ ಸಮಯದಲ್ಲಿ ಶುನಃಶ್ಯೇಫ ವಿಶ್ವಾಮಿತ್ರರು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಓಡುತ್ತ ಬಂದ. "ಮಾವಾ ! ನೀವೇ ನನ್ನನ್ನು ಕಾಪಾಡಬೇಕು" ಎಂದು ಅತ್ತ. ವಿಶ್ವಾಮಿತ್ರರು ಶುನಃಶ್ಯೇಫನನ್ನು ಕೇಳಿದರು. ಕರುಣಾಮಯಿಯಾದ ಅವರು ತಮ್ಮ ನಾಲ್ಕು ಮಕ್ಕಳನ್ನೂ ಕರೆದು ಅವರಲ್ಲಿ ಒಬ್ಬ ಶುನಃಶ್ಯೇಫನಿಗೆ ಬದಲಾಗಿ ನರಪಶುವಾಗುವಂತೆ ಹೇಳಿದರು. ಎಲ್ಲ ಮಕ್ಕಳೂ ತಂದೆಯನ್ನು ಹಾಸ್ಯಮಾಡಿದರು. "ನಮಗೆ ಮಾರಿ ಪರರಿಗೆ ಉಪಕಾರಿಯಾಗುವಿರೆ" ಎಂದರು. ವಿಶ್ವಾಮಿತ್ರರು ಕುಪಿತರಾಗಿ ಮಕ್ಕಳನ್ನು ಶಪಿಸಿದರು "ನರಮಾಂಸ ಭಕ್ಷಕರಾಗಿ ನೀವು"ಎಂದು.

ಶುನಃಶ್ಯೇಫನನ್ನು ಆಲಂಗಿಸಿ ಮೈ ತಡವುತ್ತಾ "ವತ್ಸ ಶುನಃಶ್ಯೇಫ ! ನೀನು ಯೋಚಿಸಬೇಡ. ನಿನ್ನನ್ನು ಯೂಪಸ್ತಂಭಕ್ಕೆ ಕಟ್ಟಿದಾಗ ಭಯಪಡದೆ ನಾ ಉಪದೇಶಿಸುವ ಎರಡು ಮಂತ್ರಗಳನ್ನೂ ಉಚ್ಚರಿಸು. ನಿನಗೆ ಒಳ್ಳೆಯದಾಗುತ್ತದೆ" ಎಂದ.

ಇಂದ್ರನನ್ನೂ ಅವನ ತಮ್ಮ ಉಪೇಂದ್ರನನ್ನೂ ತುಷ್ಟಿಪಡಿಸುವ ಮಂತ್ರಗಳನ್ನು ವಿಶ್ವಾಮಿತ್ರರು ಶುನಃಶ್ಯೇಫನಿಗೆ ಉಪದೇಶಿಸಿದರು.

ಸಂತೋಷದಿಂದ ವಿಶ್ವಾಮಿತ್ರರಿಗೆ ನಮಸ್ಕರಿಸಿ, ಹೊರಟ ಶುನಃಶ್ಯೇಫ ಅಂಬರೀಷನ ಸಮೀಪಕ್ಕೆ ಬಂದು "ದೊರೆ-ಹೊತ್ತಾಯಿತು ಹೋಗೋಣ-ಯಜ್ಞ ಪೂರ್ತಿಮಾಡು" ಎಂದ. ಕುಮಾರನ ಧೈರ್ಯಕ್ಕೆ ಸಂತೋಷಪಟ್ಟ ಅಂಬರೀಷ ರಾಜಧಾನಿಯನ್ನು ಪ್ರವೇಶಿಸಿದ.

ಶುನಃಶ್ಯೇಫನಿಗೆ ಅಭ್ಯಂಜನವಾಯಿತು, ಬಲಿಗೆ ಸೂಕ್ತವಾದ ಅಲಂಕಾರಗಳಾದವು. ಯೂಪಸ್ತಂಭಕ್ಕೆ ಕಟ್ಟಿದಾಗ ಶುನಃಶ್ಯೇಫ ವಿಶ್ವಾಮಿತ್ರರು ತನಗುಪದೇಶಿಸಿದ ಮಂತ್ರವನ್ನು ಪುನಶ್ಚರಣೆ ಮಾಡಿದ. ಯಾಗ ಶಾಲೆಯಲ್ಲಿ ಇಂದ್ರ-ಉಪೇಂದ್ರರು ಪ್ರತ್ಯಕ್ಷರಾದರು. ಅಂಬರೀಷನಿಗೆ ಪೂರ್ಣವಾದ ಯಜ್ಞಫಲವನ್ನನುಗ್ರಹಿಸಿದರು. ಶುನಃಶ್ಯೇಫನಿಗೆ ದೀರ್ಘಾಯುಸ್ಸನ್ನೂ ಆರೋಗ್ಯವನ್ನೂ ಕರುಣಿಸಿದರು.

ಸಂತೋಷದಿಂದ ಶುನಶ್ಶೇಫ ತಪಸ್ಸು ಮಾಡಲು ಹೊರಟ. ವಿಶ್ವಾಮಿತ್ರ ಒಮ್ಮೆ ಪುಷ್ಕರ ತೀರ್ಥದಲ್ಲಿ ಸ್ನಾನಮಾಡುತ್ತಿದ್ದ ಕಾಲ. ಅಲ್ಲಿ ಮೇನಕೆ ಎಂಬ ಅಪ್ಸರೆಯನ್ನು ಕಂಡರು. ಚಿತ್ತ ಚಂಚಲವಾಯಿತು ಅವಳೊಡನೆ ಹತ್ತು ವರ್ಷ ಕಳೆದರು. ಆಮೇಲೆ ತಮ್ಮ ಕೃತ್ಯಕ್ಕಾಗಿ ನಾಚಿಕೊಂಡರು. ಮೇನಕೆಯನ್ನು ಕಳುಹಿಸಿ ತಾವು ಉತ್ತರಾಭಿಮುಖವಾಗಿ ಹೊರಟರು. ತಪಸ್ಸು ಮಾಡಿ "ಮಹರ್ಷಿ" ಎನಿಸಿಕೊಂಡರು. ಇಷ್ಟರಿಂದ ತೃಪ್ತರಾಗದೆ ಮತ್ತೂ ಉಗ್ರತಪಸ್ಸನ್ನಾರಂಭಿಸಿದರು.

ವಿಶ್ವಾಮಿತ್ರರ ತಪಸನ್ನು ಕೆಡಿಸಲು ಇಂದ್ರನಿಂದ ಪ್ರೇರಿತಳಾಗಿ ರಂಭೆ ಬಂದಳು. ಅವಳ ವಿಲಾಸವನ್ನು ನೋಡಿದ ವಿಶ್ವಾಮಿತ್ರರು ಅವಳನ್ನು ಕಲ್ಲಾಗುವಂತೆ ಶಪಿಸಿದರು. ಶಾಪ ಕೊಟ್ಟ ಮೇಲೆ ಪಶ್ಚಾತ್ತಾಪಪಟ್ಟರು. "ಇನ್ನೂ ಕೋಪವನ್ನು ಜಯಿಸಲಿಲ್ಲವಲ್ಲ" ಎಂದು ಚಿಂತಿಸಿದರು. ಆ ಸ್ಥಳವನ್ನು ಬಿಟ್ಟು, ಪೂರ್ವಾಭಿಮುಖವಾಗಿ ಹೊರಟರು. ಅನೇಕ ವರ್ಷಗಳು ಕೈಗಳನ್ನು ಮೇಲಕ್ಕೆತ್ತಿ ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯೆಯೂ, ಚಳಿಗಾಲದಲ್ಲಿ ನೀರ ಮಧ್ಯದಲ್ಲೂ ನಿಂತು ಘೋರವಾದ ತಪಸ್ಸನ್ನು ಮಾಡಿದರು.

ಬಹಳ ವರ್ಷಗಳು ತಪಸ್ಸನ್ನು ಮಾಡಿದ ನಂತರ ಒಂದು ದಿನ ಆಹಾರಕ್ಕಾಗಿ ಅನ್ನವನ್ನು ಬೇಯಿಸಿದರು. ಆಗ ದೇವೇಂದ್ರ ಬ್ರಾಹ್ಮಣ ರೂಪದಲ್ಲಿ ಬಂದು ಅನ್ನವನ್ನು ಬೇಡಿದ. ತಾವು ತಿನ್ನಬೇಕು ಎಂದಿಟ್ಟುಕೊಂಡಿದ್ದ ಅನ್ನವನ್ನು ಇಂದ್ರನಿಗೆ ಕೊಟ್ಟು ನಿರಾಹಾರಿಯಾಗಿಯೇ ಪುನಃ ತಪಸ್ಸನ್ನು ಮಾಡಲು ಪ್ರಾರಂಭಿಸಿದರು.

ವಿಶ್ವಾಮಿತ್ರರ ಉಗ್ರ ತಪಸ್ಸಿಗೆ ದೇವತೆಗಳು ತಲ್ಲಣಿಸಿದರು. ಘೋರವಾದ ತಪಸ್ಸಿನ ಪ್ರಭಾವದಿಂದ ವಿಶ್ವಾಮಿತ್ರರ ಶಿರಸ್ಸಿನಿಂದ ಹೊಗೆ ಬರಲು ಪ್ರಾರಂಭಿಸಿತು. ಈ ಹೊಗೆ ಮೂರು ಲೋಕವನ್ನೂ ಸುಡುವಂತೆ ವ್ಯಾಪಿಸುತ್ತಿತ್ತು. ಭಯಪಟ್ಟ ದೇವತೆಗಳು ಬ್ರಹ್ಮನ ಬಳಿ ಹೋದರು. "ವಿಶ್ವಾಮಿತ್ರ ಸ್ವರ್ಗಾಧಿಪತ್ಯವನ್ನೇ ಕೇಳಿದರೂ ಕೊಟ್ಟು ನಮ್ಮನ್ನು ಕಾಪಾಡು" ಎಂದು ಪ್ರಾರ್ಥಿಸಿದರು.

ಅದರಂತೆ ಬ್ರಹ್ಮ ವಿಶ್ವಾಮಿತ್ರರಿಗೆ ಬ್ರಹ್ಮರ್ಷಿತ್ವವನ್ನು ಅನುಗ್ರಹಿಸಿದ. ಓಂಕಾರ, ವಷಟ್ಕಾರಗಳು, ವೇದ ವೇದಾಂಗಗಳು ಎಲ್ಲ ವಿಶ್ವಾಮಿತ್ರರಿಗೆ ತಾವಾಗಿಯೇ ಸಿದ್ಧಿಸಿದವು.

ವಿಶ್ವಾಮಿತ್ರರು ಬ್ರಹ್ಮನನ್ನು ಪ್ರಾರ್ಥಿಸಿದರು. "ಬಹ್ಮನಿಷ್ಠರಾದ ವಸಿಷ್ಠರು ನನ್ನನ್ನು ಬ್ರಹ್ಮರ್ಷಿ ಎನ್ನಬೇಕು" ಎಂದರು,

ವಶಿಷ್ಠರಿಗೂ-ವಿಶ್ವಾಮಿತ್ರರಿಗೂ ದೇವತೆಗಳು ಸ್ನೇಹ ಮಾಡಿಸಿದರು. ವಶಿಷ್ಠರು "ಬ್ರಹ್ಮ ಹೇಳಿದಂತೆಯೇ ಆಗಲಿ" ಎಂದರು.

ಹೀಗೆ ಕಠಿಣತಮವಾದ ತಪಸ್ಸನ್ನು ಕೈಗೊಂಡು ಬಹ್ಮರ್ಷಿಪಟ್ಟವನ್ನು ಪಡೆದವರು ವಿಶ್ವಾಮಿತ್ರರು ಎಂದು ಶತಾನಂದರು ವಿಶ್ವಾಮಿತ್ರರ ಚರಿತ್ರೆಯನ್ನು ಹೇಳಿದರು. ಇದನ್ನು ಕೇಳಿದ ರಾಮಲಕ್ಷ್ಮಣರು ಸಂತೋಷಪಟ್ಟರು. ಇದನ್ನು ಕೇಳಿ ಜನಕ ಮಹಾರಾಜನೂ ಸಂತೃಪ್ತನಾದ. "ಇಂಥ ಬ್ರಹ್ಮರ್ಷಿಶ್ರೇಷ್ಠರು ಬಂದಿರುವುದು ನನ್ನಭಾಗ್ಯ" ಎಂದು ಹೇಳಿ ಆ ರಾತ್ರಿ ವಿಶ್ವಾಮಿತ್ರರನ್ನೂ, ರಾಮಲಕ್ಷ್ಮಣರನ್ನೂ ಅಲ್ಲಿ ತಂಗಲು ಏರ್ಪಾಡು ಮಾಡಿ ತಾನು ತನ್ನ ನಿತ್ಯ ವಿಧಿಯನ್ನು ಮಾಡಲು ಹೊರಟ.

ಮರುದಿನ ಪ್ರಾತಃಕಾಲ ವಿಶ್ವಾಮಿತ್ರರನ್ನೂ ರಾಮಲಕ್ಷ್ಮಣರನ್ನೂ ಯಥಾವತ್ತಾಗಿ ಕುಶಲವನ್ನು ವಿಚಾರಿಸಿದ ಜನಕ ರಾಮಲಕ್ಷ್ಮಣರು ತನ್ನಲ್ಲಿರುವ ಬಿಲ್ಲನ್ನು ನೋಡಲು ಬಂದಿದಾರೆ ಎಂದು ತಿಳಿದ ಜನಕ ಬಿಲ್ಲಿನ ಕಥೆಯನ್ನು ಹೇಳಿದ

"ನಿಮಿ ಚಕ್ರವರ್ತಿಯಿಂದ ಪ್ರಾರಂಭವಾದುದು ನಮ್ಮ ವಂಶ. ಅದರಲ್ಲಿ ಆರನೆಯವನಾದ ದೇವರಾತ ಎಂಬುವವ ಯಜ್ಞ ಮಾಡಿದ. ಅದರಿಂದ ತೃಪ್ತನಾದ ಇಂದ್ರ ಈ ಬಿಲ್ಲನ್ನು ಕೊಟ್ಟ. ಈ ಧನಸ್ಸು ಪರಮಶಿವನದು. ದಕ್ಷಯಜ್ಞಕಾಲದಲ್ಲಿ ತನಗೆ ಹವಿರ್ಭಾಗವನ್ನು ಕೊಡದೆ ಇದ್ದುದರಿಂದ ಕುಪಿತನಾದ ಈಶ್ವರ ದೇವತೆಗಳನ್ನು ನಾಶಮಾಡುವ ಸಲುವಾಗಿ ಈ ಧನುಸ್ಸನ್ನು ಹಿಡಿದ, ಭಯಪಟ್ಟ ದೇವತೆಗಳು ಈಶ್ವರನನ್ನು ಪ್ರಾರ್ಥಿಸಿದರು. ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿದ ಈಶ್ವರ ಈ ಬಿಲ್ಲನ್ನು ದೇವತೆಗಳಿಗೇಕೊಟ್ಟ ದೇವೇಂದ್ರ ಅದನ್ನು ನಮ್ಮ ವಂಶಸ್ಥನಿಗೆ ಕೊಟ್ಟ. ಇದರ ಹೆದೆಯೇರಿಸುವುದು ಬಹಳ ಕಷ್ಟ ಇದನ್ನು ನನ್ನ ಮಗಳಾದ ಸೀತಾ ದೇವಿಯ ಸ್ವಯಂವರಕ್ಕ ವೀರ್ಯಶುಲ್ಕವನ್ನಾಗಿ ಇಟ್ಟಿದ್ದೇನೆ." ಎಂದು ಬಿಲ್ಲಿನ ಮಹತ್ವವನ್ನು ವಿವರಿಸಿದ.

ರಾಮಲಕ್ಷ್ಮಣರಿಗೆ ಬಿಲ್ಲನ್ನು ತೋರಿಸುವ ಸಲುವಾಗಿ ಅದನ್ನು ತರಲು ಆಜ್ಞಾಪಿಸಿದ ಜನಕ. ಎಂಟು ಚಕ್ರಗಳುಳ್ಳ ದೊಡ್ಡ ರಥದಲ್ಲಿ ಆ ಬಿಲ್ಲನ್ನಿಟ್ಟು ಐದುನೂರು ಬಲಿಷ್ಠರಾದ ಸೇವಕರು ಆ ಧನುಸ್ಸನ್ನು ಸಭಾಮಧ್ಯಕ್ಕೆ ತಂದಿಟ್ಟರು ಅದನ್ನು ಎಳೆದು ತಂದ ಐನೂರು ಜನರೂ ಅಸಮ ಬಲರು. ಒಬ್ಬೊಬ್ಬರೂ ಆನೆಯಂತೆ ಶಕ್ತಿಯುಳ್ಳವರು. ಸಭೆಯಲ್ಲಿದ್ದವರೆಲ್ಲ ಶಿವಧನುಸ್ಸನ್ನೂ ರಾಮನನ್ನೂ ನೋಡತೊಡಗಿದರು. ಆಗ ವಿಶ್ವಾಮಿತ್ರರು ರಾಮನನ್ನು ಕುರಿತು—

''ವತ್ಸ ರಾಮ, ಧನುಃಪಶ್ಯ'' ಎಂದರು.

ವಾಲ್ಮೀಕಿ ಈ ಸಂದರ್ಭದಲ್ಲಿ ಹೇಳಿದ ಈ ಶ್ಲೋಕದ ಔಚಿತ್ಯವನ್ನು ಹಲವಾರು ಭಕ್ತರು ಹಲವಾರು ರೀತಿಯಲ್ಲಿ ಆಸ್ವಾದಿಸಿದಾರೆ.

''ವತ್ಸ, ರಾಮ – ಈ ಧನುಸ್ಸನ್ನು ನೋಡು'' ಎಂದರು ವಿಶ್ವಾಮಿತ್ರರು. ವಿಶ್ವಾಮಿತ್ರರು ಹಾಗೆ ಹೇಳುತ್ತಿರುವಾಗ. ಹಾಗೆ ಹೇಳಬೇಕಾದರೆ, ಆಗ ರಾಮ ಏನು ಮಾಡುತ್ತಿದ್ದ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ರಾಮ ಧನುಸ್ಸನ್ನು ನೋಡುತ್ತ ಇದ್ದರೆ ವಿಶ್ವಾಮಿತ್ರರು ಏಕೆ ''ವತ್ಸ. ಧನುಸ್ಸನ್ನು ನೋಡು'' ಎನ್ನ ಬೇಕಾಗಿತ್ತು ಎಂಬ ಸಂಶಯ ಬರುತ್ತದೆ.

ಇದಕ್ಕೆ ಕಂಬರು ಸರಿಯಾದ ಕಾರಣ ಕೊಡುತ್ತಾರೆ. ರಾಮ ಜನಕನ ಸಭೆಗೆ ಬರುತ್ತಿದ್ದನಂತೆ. ಆಗ. ಮಾಳಿಗೆಯ ಮೇಲೆ ಸೀತೆ ತನ್ನ ಸಖಿಯರೊಂದಿಗೆ ಚೆಂಡಾಡುತ್ತಿದ್ದುದನ್ನು ಕಂಡನಂತೆ. ಮಿಂಚಿನಬಳ್ಳಿಯಂತೆ ಪ್ರಕಾಶಿಸುತ್ತಿದ್ದ ಸೀತೆಯೂ ರಾಮನನ್ನು ನೋಡಿದಳಂತೆ. ರಾಮನೂ ಸೀತೆಯನ್ನು ನೋಡಿದ. ಇಬ್ಬರೂ ''ಎಲ್ಲೋ ಕಂಡಂತಿದೆಯಲ್ಲ'' ಎಂದುಕೊಂಡರು.

ಕಂಬರು ಅದನ್ನು ಹೇಳುವಾಗ ''ಅಣ್ಣನುಂ ನೋಕ್ಕಿನಾನ್ – ಅವಳುಂ ನೋಕ್ಕಿನಾಳ್ '' ಎಂದಿದಾರೆ. ಆ ನೋಟದಲ್ಲಿಯೇ ಅವರ ಹಿಂದಿನ ಪ್ರೇಮ. ಕ್ಷೀರಸಾಗರದಲ್ಲಿ ಆದಿಶೇಷಪರ್ಯಂಕದಲ್ಲಿ ಪವಡಿಸಿದ್ದ ನಾರಾಯಣನೇ ರಾಮ. ಅವನನ್ನು ಸೇವಿಸುತ್ತಿದ್ದ ಅನಪಾಯಿನಿಯಾದ ಲಕ್ಷ್ಮಿಯೇ ಸೀತೆ. ಅವರಿಬ್ಬರಿಗೂ ಬಹಳಕಾಲದ ನಂಟು. ಅದು ಈಗಿನದಲ್ಲ, ಎಂದರು ಆಳ್ವಾರ್.

ಹಾಗೆ ರಾಮನು ಸೀತೆಯ ಸೌಂದರ್ಯವನ್ನೇ ಆಸ್ವಾದಿಸುತ್ತ ನಿಂತಿದ್ದ. ಆಗ ವಿಶ್ವಾಮಿತ್ರರು ರಾಮನನ್ನು ''ವತ್ಸ, ಧನುಸ್ಸನ್ನು ಮೊದಲು ನೋಡು. ಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಿದರೆ

ಮಾತ್ರ ಸೀತೆ ನಿನಗೆ ದೊರಕುತ್ತಾಳೆ” ಎಂದು ಹೇಳುವ ರೀತಿಯಲ್ಲಿ “ರಾಮ, ಧನುಸ್ಸನ್ನು ನೋಡು” ಎಂದರು.

ಆಳ್ವಾರ್ ಅನುಭವಿಸುತ್ತಾರೆ. ರಾಮ ಹೇಳಿದನಂತೆ “ನಾನೇನೂ ಸೀತೆಯನ್ನು ನೋಡು-ತ್ತಿರಲಿಲ್ಲ. ಅವಳಾಡುತ್ತಿದ್ದ ಚೆಂಡಾಟವನ್ನು ನೋಡುತ್ತಿದ್ದೆ.”

“ಅದೇನು, ಸೀತೆ ಆಡುವ ಚೆಂಡಿನಲ್ಲಿ ನಿನಗೆ ಅಷ್ಟು ಆಸಕ್ತಿ ? ” ಎಂದರಂತೆ ವಿಶ್ವಾಮಿತ್ರರು. ಅದಕ್ಕೆ, “ಸೀತೆ ಆಡುತ್ತಿರುವ ಚೆಂಡು ಮೂರು ಬಣ್ಣವುಳ್ಳದಾಗಿ ಕಾಣುತ್ತಿದೆ. ಇದೇನು ಆಶ್ಚರ್ಯ! ಒಂದೇ ಚೆಂಡು ಮೂರು ಬಣ್ಣಗಳಾಗಿ ಕಾಣುತ್ತಿದೆಯಲ್ಲ ಎಂದು ನೋಡುತ್ತಿದ್ದೆ. ಸೀತೆಯ ಕೈಯಲ್ಲಿರುವಾಗ ಚೆಂಡು ಕೆಂಪಾಗಿದೆ. ಸೀತೆಯ ಅಂಗೈ ತಾವರೆಯಂತೆ ಮೃದುವಾಗಿ ರಕ್ತವರ್ಣವಾಗಿದೆ. ಆದ್ದರಿಂದ ಆ ಚೆಂಡೂ ಸೀತೆಯ ಅಂಗೈಯ ಕಾಂತಿಯಿಂದ ಕೆಂಪಾಗಿ ಕಾಣುತ್ತಿದೆ. ಪುನಃ ಆ ಚೆಂಡು ಕೆಳಗೆ ಪುಟ ಬಿದ್ದು ಮೇಲೇರುವಾಗ ಸೀತೆಯ ಕೈ ಬೆರಳಿನ ಉಗುರುಗಳ ಧವಳಕಾಂತಿಯಿಂದ ಬಿಳುಪಾಗಿ ಕಾಣುತ್ತದೆ. ಮತ್ತೆ ಸೀತೆ ಆ ಚೆಂಡನ್ನು ತನ್ನ ಕಪ್ಪುಮಿಶ್ರಿತವಾದ ನೀಲವರ್ಣದ ಕಣ್ಣುಗಳಿಂದ ನೋಡುತ್ತಾ ಚೆಂಡಾಡುವಾಗ ಆ ಚೆಂಡು ಅವಳ ಕಂಗಳ ಕಾಂತಿಯಿಂದ ಕಪ್ಪಾಗಿ ಕಾಣುತ್ತಿದೆ. ಈ ಆಶ್ಚರ್ಯವನ್ನು ನೋಡುತ್ತಿದ್ದೆ” ಎಂದನಂತೆ ರಾಮ ! . . . . ವಿಶ್ವಾಮಿತ್ರರ ಪಕ್ಕದಲ್ಲಿ ಕುಳಿತಿದ್ದ ರಾಮನನ್ನು ಕಂಡ ಸಭ್ಯರೆಲ್ಲ ಅವನ ಸೌಂದರ್ಯವನ್ನೂ, ಗಾಂಭೀರ್ಯವನ್ನೂ ಮೆಚ್ಚಿಕೊಂಡರು.

ಮಾಳಿಗೆಯ ಮೇಲೆ ಇದ್ದ ಸೀತೆಯ ಸಖಿಯರು ತಮ್ಮೊಳಗೇ ಮಾತಾಡಿ ಕೊಂಡರು. “ಆಹಾ ! ಮನ್ಮಥನನ್ನು ಧಿಕ್ಕರಿಸುವಂಥ ಸೌಂದರ್ಯ ನಿಧಿ ಎನಿಸಿದ ಈ ರಾಮನೇ ನಮ್ಮ ಮುದ್ದು ಸೀತೆಗೆ ಸರಿಯಾದ ವರ. ಸೀತಾರಾಮರು ಒಂದು ಗೂಡಿದರೆ ರತ್ನವನ್ನು ಚಿನ್ನದ ಕುಂದಣದಲ್ಲಿ ಬಿಗಿದಂತಾಗುವುದು. ಅಯ್ಯೋ ! ಅನ್ಯಾಯವಾಗಿ ಜನಕ ಬಿಲ್ಲಿನ ಪಣವನ್ನು ಇಟ್ಟನಲ್ಲ. ಈ ರಾಮನಿಗೇ ಸೀತೆಯನ್ನು ಕೊಟ್ಟು ಮದುವೆ ಮಾಡಬಾರದೆ ? ಈ ಸುಕುಮಾರನಾದ ರಾಮನಿಂದ ಈ ಭಾರವಾದ ಬಿಲ್ಲನ್ನು ಎತ್ತಲು ಆಗುವುದೇ ? ಹುಂ ! ದೈವದ ಒಲುಮೆಯಿದ್ದರೆ, ನಮ್ಮ ಸೀತೆಗೆ ರಾಮನೇ ಪತಿಯಾಗಬೇಕು ಎಂದಿದ್ದರೆ ಬಿಲ್ಲನ್ನು ಎತ್ತುವ ಯೋಗ್ಯತೆ ರಾಮನಿಗೆ ಬಂದೇ ಬರುವುದು” ಎಂದೆಲ್ಲ ಮಾತಾಡಿಕೊಳ್ಳುತ್ತಿದ್ದರು. ವಿಶ್ವಾಮಿತ್ರರು “ರಾಮ, ಧನುಸ್ಸನ್ನು ನೋಡು” ಎಂದು ಹೇಳುತ್ತಲೇ ರಾಮ ಎದ್ದ. ವಿಶ್ವಾಮಿತ್ರರಿಗೆ ನಮಸ್ಕರಿಸಿದ. ಮದ್ದಾನೆಯನ್ನೂ, ಮೃಗರಾಜನಾದ ಸಿಂಹವನ್ನೂ ನಾಚಿಸುವ ತನ್ನ ಗಂಭೀರ ನಡಿಗೆಯಲ್ಲಿ ಧನುಸ್ಸನ್ನಿಟ್ಟಲ್ಲಿಗೆ ಬಂದ. ಅದಕ್ಕೆ ಪ್ರದಕ್ಷಿಣೆ ಮಾಡಿ ಕೈಮುಗಿದ.

ಇದ್ದವರೆಲ್ಲ ಆಶ್ಚರ್ಯದಿಂದ ಎವೆಯಿಕ್ಕದೆ ನೋಡುತ್ತಿದ್ದರು. ದೇವತೆಗಳಿಂದಲೂ ಅಲುಗಿಸಲು ಸಾಧ್ಯವಿಲ್ಲದ ಈ ಮಹಾಶಿವಧನುಸ್ಸೆಲ್ಲಿ ? ಸುಕುಮಾರನಾದ ಊನಷೋಡಶ ವಯಸ್ಸಿನ ಬಾಲಕ ರಾಮನೆಲ್ಲಿ ? ಎಂದುಕೊಂಡರು ತಮ್ಮೊಳಗೆ. ಧನುಸ್ಸನ್ನು ನೋಡಿ ವಿಶ್ವಾಮಿತ್ರರ ಕಡೆ ತಿರುಗಿದ ರಾಮಚಂದ್ರ “ಧನುಸ್ಸನ್ನು ಮುಟ್ಟಲೆ ?” ಎಂದು ಕೇಳಿದ. ವಿಶ್ವಾಮಿತ್ರರ ಅಪ್ಪಣೆಯನ್ನು ಪಡೆದು ಧನುಸ್ಸನ್ನು ಎತ್ತಿದ ಲೀಲಾಜಾಲವಾಗಿ. ಧನುಸ್ಸನ್ನು ಎತ್ತಿದ್ದನ್ನು ಬೆರಗುಗಣ್ಣಿನಿಂದ ನೋಡಿದರು ಸಮಸ್ತರೂ. ಮರುಕ್ಷಣದಲ್ಲಿ “ಪಟಪಟ” ಎಂಬ ಸಿಡಿಲಿನಂಥ ಶಬ್ದ ಎಲ್ಲರನ್ನೂ ಮೂರ್ಛಿತರನ್ನಾಗಿಸಿತು. ಕೆಲಕಾಲ ಕಳೆದ ಮೇಲೆ ಎಲ್ಲರೂ ನೋಡುತ್ತಾರೆ, ಆ ಮಹಾಶಿವಧನುಸ್ಸು ಎರಡು ತುಂಡಾಗಿ ಒಡೆದಿದೆ. ಮಂದ ಹಾಸವನ್ನು ಸೂಸುವ ಸುಂದರವದನಾರವಿಂದನಾದ ರಾಮ ನಿಂತಿದ್ದಾನೆ.

ಜನಕನ ಸಂತೋಷಕ್ಕೆ ಪಾರವೇ ಇಲ್ಲ. ಸೀತೆ ಬಂದಳು. ಜಯವನ್ನು ಗಳಿಸಿದ ಶ್ರೀರಾಮನಿಗೆ ಜಯಮಾಲೆಯನ್ನು ಸಮರ್ಪಿಸಿದಳು. ಸೀತೆ ರಾಮನನ್ನು ವರಿಸಲು ಬಂದಾಗ ಲಜ್ಜೆ, ಕೀರ್ತಿ ಎಂಬ ಇಬ್ಬರು ವನಿತೆಯರೂ ರಾಮನನ್ನು ವರಿಸಲು ಬಂದರಂತೆ. ಸೀತೆ ರಾಮನನ್ನು ವರಿಸಿದ್ದನ್ನು ಕಂಡರು ಅವರು. ಇನ್ನು ತಮಗೆ ರಾಮ ಸಿಗಲಾರ ಎಂದುಕೊಂಡರು. "ಲಜ್ಜೆ" ಎಂಬ ವನಿತ ಆ ಸಭೆಯಲ್ಲಿ ಕುಳಿತಿದ್ದ ರಾಜರನ್ನೆಲ್ಲ ವರಿಸಿದಳಂತೆ. ಅಂದರೆ ಅಲ್ಲಿದ್ದ ರಾಜರ ಮುಖವೆಲ್ಲ ನಾಚಿಕೆ ಯಿಂದ ಆವೃತವಾಯಿತು !

ಕೀರ್ತಿ ನೋಡಿದಳು. "ಸೀತೆ ರಾಮನನ್ನು ವರಿಸಿದಳು. ಲಜ್ಜೆ ರಾಜರನ್ನೆಲ್ಲ ವರಿಸಿ ಬಿಟ್ಟಳು. ಇನ್ನು ನಾನು ದಶದಿಕ್ಕುಗಳನ್ನೇ ವರಿಸುತ್ತೇನೆ" ಎಂದುಕೊಂಡು ಹೊರಟು ಬಿಟ್ಟಳು. ರಾಮನ ಧವಳಕೀರ್ತಿ ದಶದಿಶೆಗಳಲ್ಲಿಯೂ ವ್ಯಾಪಿಸಿತು.

ರಾಮ ಧನುಸ್ಸನ್ನು ಮುರಿದದ್ದನ್ನು ಕಂಡ ಜನಕ ಸಂತೋಷಪಟ್ಟ. "ಮಗಳಾದ ಸೀತೆ ಯನ್ನು ಕೊಡುತ್ತೇನೆ ಸ್ವೀಕರಿಸು" ಎಂದ.

"ತಂದೆಯ ಒಪ್ಪಿಗೆ ಅವಶ್ಯ. ತಂದೆ ಒಪ್ಪಿದರೆ ಮದುವೆ" ಎಂದ ರಾಮ. ಅದರಂತೆ ಜನಕ ಶೀಘ್ರಗಾಮಿಗಳಾದ ದೂತರನ್ನು ವೇಗವಾಗಿ ಓಡುವ ಕುದುರೆಗಳ ಮೇಲೆ ಕಳುಹಿಸಿದ. ಓಲೆ ಯೊಂದಿಗೆ ದಶರಥನ ಬಳಿಗೆ ವೇಗವಾಗಿ ಪ್ರಯಾಣ ಬೆಳಸಿ ಮೂರು ದಿನಗಳಲ್ಲಿ ದೂತರು ಅಯೋಧ್ಯೆಯನ್ನು ಸೇರಿದರು. ದಶರಥನನ್ನು ಕಂಡರು. ಕೈಮುಗಿದರು. "ಜನಕ ಮಹಾರಾಜ ಕಳುಹಿಸಿದ್ದಾನೆ" ಎಂದು ಪತ್ರವನ್ನು ಕೊಟ್ಟರು. ಪತ್ರವನ್ನು ತೆಗೆದು ಓದಿಕೊಂಡ ದಶರಥ. ದೂತರು ವಿಜ್ಞಾಪಿಸಿದರು "ವಿಶ್ವಾಮಿತ್ರರೊಡಗೂಡಿ ಬಂದರು, ನಿಮ್ಮ ಕುಮಾರರಾದ ರಾಮ-ಲಕ್ಷ್ಮಣರು. ಹಿರಿಯನಾದ ರಾಮ ಮಹಾ ಧನುಸ್ಸನ್ನು ಮುರಿದ; ಆನೆ ಕಬ್ಬಿನ ಝಲ್ಲೆಯನ್ನು ಮುರಿಯುವಂತೆ. ವೀರ್ಯಶುಲ್ಕವಾಗಿಟ್ಟ ಧನುಸ್ಸು ಅದು. ಧನುಸ್ಸನ್ನು ಮುರಿದ ಶ್ರೀರಾಮನಿಗೆ ಸೀತೆಯನ್ನು ಕೊಟ್ಟು, ವಿವಾಹ ನಡೆಸುವುದಾಗಿ ಜನಕಮಹಾರಾಜ ನಿಶ್ಚಯಿಸಿದಾರೆ. ತಾವು ಇದಕ್ಕೆ ಪುತ್ರಕಳತ್ರರೊಂದಿಗೂ, ಬಂಧುಬಾಂಧವರೊಡನೆಯೂ, ಮಂತ್ರಿ ಗುರು ಪುರೋಹಿತ ರೊಂದಿಗೂ ಬರಬೇಕು" ಎಂದು ಪ್ರಾರ್ಥಿಸಿದರು

ದಶರಥ ಸಂತೋಷಪಟ್ಟ. ಕುಲ ಪುರೋಹಿತರಾದ ವಶಿಷ್ಠರಿಗೆ ಎಲ್ಲವನ್ನೂ ನಿವೇದಿಸಿದ. ವಶಿಷ್ಠರು ಒಪ್ಪಿದರು. "ಜನಕ ಚಕ್ರವರ್ತಿಯದು ಚಂದ್ರ ವಂಶ, ನಿನ್ನದು ಸೂರ್ಯವಂಶ, ಸೂರ್ಯ–ಚಂದ್ರ ವಂಶಗಳೆರಡೂ ಬಾಂಧವ್ಯದ ಬೆಸುಗೆಯಲ್ಲಿ ಬೆಸೆಯುವುದು ಹಾಲು ಜೇನು ಒಂದು ಗೂಡಿದಂತೆ. ಇದರಲ್ಲಿ ಸಂಶಯವಿಲ್ಲ. ವಿವಾಹಕ್ಕೆ ಹೊರಡಲು ಸಿದ್ಧತೆ ಮಾಡು" ಎಂದರು.

ದಶರಥ ಹಿಗ್ಗಿನಿಂದ ಮದುವೆಗೆ ಎಲ್ಲರೂ ಹೊರಡಲು ಸಜ್ಜು ಮಾಡಿದ. ಬೊಕ್ಕಸದಿಂದ ಧಾರಾಳವಾಗಿ ಹಣವನ್ನು ತೆಗೆದುಕೊಂಡ. ಮೂವರು ರಾಣಿಯರು, ಭರತ–ಶತ್ರುಘ್ನರು, ಮಂತ್ರಿಗಳು, ಪುರೋಹಿತರು, ವಿದ್ವಜ್ಜನರು, ಪ್ರಜೆಗಳು, ಇವರೊಂದಿಗೆ ದಶರಥನ ಮಹಾ ಸೈನ್ಯ ದಿಬ್ಬಣಕ್ಕೆ ಅನುವಾಯಿತು. ಕೌಸಲ್ಯಾ ಸುಮಿತ್ರಾ ಕೈಕೇಯಿಯರು ಅಸಂಖ್ಯ ಪರಿಚಾರಕೆಯ ರೊಂದಿಗೆ ದಿವ್ಯವಾದ ಕಾಂಚನದ, ವೈಡೂರ್ಯದ, ರತ್ನದ ರಥಗಳಲ್ಲಿ ಕುಳಿತು ಮದುವೆಗೆ ಹೊರಟರು.

ಬಂದ ದಶರಥನನ್ನೂ ಅವನ ಪರಿವಾರವನ್ನೂ ಇದಿರುಗೊಂಡ ಜನಕ. ಅವರನ್ನು ಯೋಗ್ಯವಾದ ಬಿಡಾರಗಳಲ್ಲಿ ಇಳಿಸಿದ. ಅಂದು ರಾತ್ರಿ ಎಲ್ಲರೂ ವಿಶ್ರಮಿಸಿಕೊಂಡರು.

ಮರುದಿನ ಪ್ರಾತಃಕಾಲ. ಜನಕ ಮಹಾರಾಜ ಸಭೆಯನ್ನು ನೇರಿಸಿದ. ಎಲ್ಲರ ಮುಂದೆ "ಬಿಲ್ಲನ್ನು ಮುರಿದ ಶ್ರೀರಾಮನಿಗೆ ನನ್ನ ಮಗಳಾದ ಜಾನಕಿಯನ್ನು ಕೊಟ್ಟು ವಿವಾಹ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ. ಲಕ್ಷ್ಮಣನಿಗೆ ತನ್ನ ಮಗಳಾದ ಊರ್ಮಿಳೆಯನ್ನಿತ್ತು ಮದುವೆ ಮಾಡುವುದಾಗಿ ಹೇಳಿದ. ಹಾಗೆಯೇ ವಿಶ್ವಾಮಿತ್ರರ ಸಲಹೆಯಂತೆ ಜನಕ ತನ್ನ ತಮ್ಮನಾದ ಕುಶಧ್ವಜನ ಮಗಳಾದ ಮಾಂಡವೀ, ಶ್ರುತಕೀರ್ತಿಯರನ್ನು ಭರತ ಶತ್ರುಘ್ನರಿಗೆ ಕೊಡುವುದಾಗಿ ವಾಗ್ದಾನ ಮಾಡಿದ.

ದಶರಥನ ಪ್ರಾರ್ಥನೆಯಂತೆ ಕುಲಪುರೋಹಿತರಾದ ವಶಿಷ್ಠರು ಎದ್ದರು. ಇಕ್ಷ್ವಾಕುವಿನಿಂದ ಮೊದಲಾದ ವಂಶವನ್ನು ಕೀರ್ತಿಸಿದರು. ದಶರಥನಮಕ್ಕಳಾದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರಿಗೆ, ಕ್ರಮವಾಗಿ ಸೀತಾ, ಊರ್ಮಿಳಾ, ಮಾಂಡವೀ, ಶ್ರುತಕೀರ್ತಿಯರನ್ನು ತಂದು ಕೊಳ್ಳುವುದಾಗಿ ಹೇಳಿದರು. ಜನಕರಾಜನ ಪುರೋಹಿತರಾದ ಶತಾನಂದರು ನಿಮಿ ಚಕ್ರವರ್ತಿಯಿಂದ ಪ್ರಾರಂಭಿಸಿ ಜನಕನವರೆಗೆ ಗೋತ್ರವನ್ನು ಬಿಡಿಸಿದರು.

ಹೀಗೆ ಗೋತ್ರ ಪ್ರವರಗಳ ಪಠನವಾಯಿತು. ಮೇಲೆ ನಡೆಯಬೇಕಾದ ವಿವಾಹೋಕ್ತ ಕರ್ಮಗಳೆಲ್ಲವನ್ನೂ ವೇದವಿಹಿತವಾದ ರೀತಿಯಲ್ಲಿ ನಡೆಸಿದರು. ದಶರಥ ಸಮಾವರ್ತನೆಯನ್ನು ಮಾಡಿಸಿದ. ನಾಲ್ಕು ಮಕ್ಕಳಿಂದಲೂ ಲಕ್ಷ ಲಕ್ಷ ಗೋವುಗಳನ್ನು ದಾನಮಾಡಿಸಿದ. ನಾಲ್ಕು ಮಕ್ಕಳ ನಡುವೆ ದಶರಥ ನಾಲ್ಕು ದಿಕ್ಪಾಲಕರ ಮಧ್ಯೆ ಶೋಭಿಸುವ ಬ್ರಹ್ಮನಂತೆ ಶೋಭಿಸಿದ. ವಿವಾಹಕರ್ಮಗಳೆಲ್ಲ ಸಾಂಗವಾಗಿ ನಡೆದವು. ಅಗ್ನಿಯನ್ನು ಪ್ರತಿಷ್ಠಿಸಿದ್ದಾಯಿತು, ಶಾಸ್ತ್ರೋಕ್ತ ಕ್ರಮದಲ್ಲಿ ಸಪ್ತಪದಿ ನಡೆಯಿತು. ಶ್ರೀರಾಮ ತನ್ನ ಮೃದುವಾದ ಕೈಗಳಿಂದ ಸೀತೆಯ ಪಾದವನ್ನೆತ್ತಿ ಮಂತ್ರಪೂತವಾದ ಕಲ್ಲಿನ ಮೇಲೆ ಇಟ್ಟ. ಸೀತಾರಾಮರು ಅಗ್ನಿಯನ್ನು ಪ್ರದಕ್ಷಿಣೆ ಮಾಡಿದರು. ಹಾಗೆಯೇ ಊರ್ಮಿಳಾ–ಲಕ್ಷ್ಮಣರೂ, ಮಾಂಡವೀ-ಭರತರೂ, ಶ್ರುತಕೀರ್ತಿ–ಶತ್ರುಘ್ನರೂ ಸಪ್ತಪದಿ ಶಾಸ್ತ್ರವನ್ನು ಅನುಷ್ಠಿಸಿದರು.

ಜನಕ ತನ್ನ ತೊಡೆಯ ಮೇಲೆ ಸೀತೆಯನ್ನು ಕೂಡಿಸಿಕೊಂಡು ರಾಮನಿಗೆ ಪಾಣಿಗ್ರಹಣವನ್ನು ಮಾಡಿಸಿದ.

**"ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ ।**

**ಪ್ರತೀಚ್ಛ ಚೈನಾಂ ಭದ್ರಂತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥**

**ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ ।"**

ಹೀಗೆ ಹೇಳುತ್ತಾ ಮಂತ್ರಪೂರಿತವಾದ ಜಲಧಾರೆಯೊಂದಿಗೆ ಸೀತೆಯ ಕೈಯನ್ನು ರಾಮನ ಕೈಯಲ್ಲಿತ್ತು ಪಾಣಿಗ್ರಹಣ ಮಹೋತ್ಸವವನ್ನು ನೆರವೇರಿಸಿದ.

ಪಾಣಿಗ್ರಹಣ ಕಾಲದಲ್ಲಿ ಶಾಸ್ತ್ರೋಕ್ತವಾದ ರೀತಿಯಲ್ಲೇ ಪಾಣಿಗ್ರಹಣ ಮಾಡಬೇಕು. ವಧೂವರರು ಕೈಯನ್ನು ಹಿಡಿದುಕೊಳ್ಳುವಾಗ "ಈ ರೀತಿಯಲ್ಲೇ ಕೈ ಹಿಡಿಯಬೇಕು" ಎಂದು ಶಾಸ್ತ್ರವು ಆದೇಶವಿತ್ತಿದೆ, ಅದರಂತೆ ಪಾಣಿಗ್ರಹಣ ಮಾಡಿದರೆ ಮಂಗಳವಾಗುತ್ತದೆ.

ವರನಾದವನು ತನ್ನ ಐದೂ ಬೆರಳುಗಳಿಂದ ವಧುವಿನ ಐದೂ ಬೆರಳುಗಳನ್ನೂ ಕೂಡಿಸಿ ಪಾಣಿಗ್ರಹಣ ಮಾಡಬೇಕು. ಹಾಗಲ್ಲದೆ ಕೇವಲ ಹೆಬ್ಬೆಟ್ಟನ್ನು ಮಾತ್ರ ಹಿಡಿದರೆ ಕೇವಲ ಪುತ್ರ ಸಂತಾನ ಮಾತ್ರ ಆಗುತ್ತದೆ. ಹೆಬ್ಬೆಟ್ಟನ್ನು ಬಿಟ್ಟು ಉಳಿದ ನಾಲ್ಕು ಬೆರಳುಗಳನ್ನು ಮಾತ್ರ ಹಿಡಿ

ವರೆ ಬರೀ ಹೆಣ್ಣು ಸಂತಾನವೇ ಆಗುತ್ತದೆ. ಇದು ಪಾಣಿಗ್ರಹಣದ ಶಾಸ್ತ್ರ. ಸೀತೆಯ ಪಾಣಿಗ್ರಹಣದ ಸಮಯದಲ್ಲಿ ಕರ್ಮಯೋಗಿ ಜನಕ ಆಡಿದ ಮಾತು ಅರ್ಥಗರ್ಭಿತವಾಗಿದೆ.

ರಾಮನನ್ನು ಕುರಿತು ಜನಕ "ಇಯಂ ಸೀತಾ" ಎಂದ. ಇದಕ್ಕೆ ವ್ಯಾಖ್ಯಾನ ಮಾಡುತ್ತಾರೆ ಜ್ಞಾನಿಗಳು:

"ಸೀತಾ" ಶಬ್ದದ ವೈಚಿತ್ರ್ಯವನ್ನು ಈ ಶಬ್ದದಲ್ಲಿ ಅಡಗಿಸಿದ್ದಾನೆ ಜನಕ. "ಸೀತೆ" ಸಾಮಾನ್ಯಳಲ್ಲ. ಯಜ್ಞಾರ್ಥವಾಗಿ ಭೂಮಿಯನ್ನು ಶೋಧಿಸುವಾಗ ನೇಗಿಲಿನ ತುದಿಗೆ ಸಿಕ್ಕಿದವಳು. ಆದರಿಂದ "ಸೀತೆ" ಎನಿಸಿಕೊಂಡಳು, ರಾಮನಾದರೋ ಯಜ್ಞದ ಪಾಯಸ ಪ್ರಭಾವದಿಂದ ಹುಟ್ಟಿದ. ಆದರೆ ಅವನು ಕೌಸಲ್ಯೆಯ ಗರ್ಭದಿಂದ ಬಂದ. ಸೀತೆಯಾದರೋ ಅಯೋನಿಜೆ; ಗರ್ಭವಾಸಾದಿ ಕ್ಲೇಶವನ್ನನುಭವಿಸದೆಯೇ ತೋರಿದವಳು. "ಇಂಥ ಸೀತೆ ನನಗೆ ಮಗಳಾಗಿದ್ದಾಳೆ" ಎನ್ನುತ್ತಾನೆ ಜನಕ. "ವಿದೇಹ" ಎಂದು ಖ್ಯಾತಿಪಡೆದವ ಜನಕ. ಅಂಥ ವಿರಾಗಿಯ ಮಗಳೆನಿಸಬೇಕಾದರೆ ಅವಳೆಂಥವಳು ಎಂದು ತಿಳಿಯಬೇಕು. ಇಂಥ ಸೀತೆ "ನಿನಗೆ ಸಹಧರ್ಮಚಾರಿಣಿಯಾಗಿರುತ್ತಾಳೆ" ಎಂದ ಜನಕ. ಧರ್ಮಚಾರಿಣಿ ಸೀತೆ. ರಾಮನ ಜೊತೆಯಲ್ಲಿ ಇದ್ದು ಅವನ ಧರ್ಮಕ್ಕೆ ಅನುವು ಮಾಡಿಕೊಡುವಂಥವಳು. "ಇಂಥವಳನ್ನು ನೀನು ಸ್ವೀಕರಿಸುವುದರಿಂದ ನಿನಗೆ ಮಂಗಳವಾಗುತ್ತದೆ" ಎನ್ನುತ್ತಾನೆ ಜನಕ.

ಸೀತೆಯನ್ನು ವಿವಾಹವಾಗುವವರೆಗೆ "ರಾಮ" "ರಾಮಚಂದ್ರ" ಎಂದಷ್ಟೇ ಕರೆಯಿಸಿಕೊಳ್ಳಲ್ಪಡುತ್ತಿದ್ದ ರಾಮ. ಸೀತೆಯನ್ನು ಮದುವೆಯಾದ ಮೇಲೆ "ರಾಮಭದ್ರ" ಎನಿಸಿಕೊಂಡ. ಶಕ್ತಿ ಸ್ವರೂಪಿಣಿಯಾದ ಮಂಗಳಮಯಿಯಾದ ಸೀತೆಯನ್ನು ಸ್ವೀಕರಿಸಿದುದರಿಂದಲೇ ರಾಮ ಮಂಗಳಮೂರ್ತಿಯಾದ. ಸೀತೆಯ ಗುಣವನ್ನು ವಿವರಿಸುತ್ತಾ ಹೇಳುತ್ತಾನೆ ಜನಕ, "ಇವಳು ಪತಿವ್ರತೆ. ಮಹಾ ಭಾಗ್ಯವಂತೆ. ಸದಾ ನಿನ್ನನ್ನು ನೆರಳಿನಂತೆ ಅನುಸರಿಸುತ್ತಾಳೆ" ಎಂದು.

ಜನಕನ ಮಾತಿನಂತೆಯೇ ಸೀತೆ ರಾಮನನ್ನು ನೆರಳಿನಂತೆಯೇ ಅನುಸರಿಸಿದಳು. ಘೋರವಾದ ಅರಣ್ಯವನ್ನು ರಾಮನೊಡನೆ ಹೊಕ್ಕಳು. ಸೀತೆಯೇ ಲಂಕೆಯಲ್ಲಿ ರಾವಣನಿಗೆ ಹೇಳುತ್ತಾಳೆ. "ಸೂರ್ಯನನ್ನು ಪ್ರಭೆ ಹೇಗೆ ಅನುಸರಿಸುತ್ತದೋ ಹಾಗೆ ನಾನು ರಾಮನನ್ನು ಅನುಸರಿಸುತ್ತೇನೆ" ಎನ್ನುತ್ತಾಳೆ.

ಶ್ರೀವೈಷ್ಣವ ಸಿದ್ಧಾಂತದಲ್ಲಿ ಲಕ್ಷ್ಮಿಗೆ ವಿಶಿಷ್ಟವಾದ ಸ್ಥಾನ. ಪರಮಾತ್ಮನನ್ನು ಜೀವಾತ್ಮವು ಸೇರಲು ಶಿಫಾರಸ್ಸು ಮಾಡುತ್ತಾಳೆ ಲಕ್ಷ್ಮಿ. ಆದ್ದರಿಂದ ಅವಳನ್ನು "ಪುರುಷಕಾರ ಸ್ವರೂಪಿಣಿ" ಎಂದಿದ್ದಾರೆ ಶ್ರೀವೈಷ್ಣವ ಸಿದ್ಧಾಂತದ ಆಚಾರ್ಯರು.

ಜೀವ ಪರಮಾತ್ಮನನ್ನು ಸೇರಬಯಸುವಾಗ ಪುರುಷಕಾರ ಸ್ವರೂಪಿಣಿಯಾದ ಲಕ್ಷ್ಮಿ "ಆ ಜೀವವನ್ನು ಉದ್ಧರಿಸು" ಎಂದು ಶಿಫಾರಸು ಮಾಡುತ್ತಾಳಂತೆ.

ಶ್ರೀವೇದಾಂತ ದೇಶಿಕರು "ಗೋದಾಸ್ತುತಿ"ಯಲ್ಲಿ ಹೇಳುತ್ತಾರೆ. 'ಅಮ್ಮಾ ಗೋದೆ. ನಿನ್ನ ಕಾರುಣ್ಯವನ್ನು ಎಷ್ಟೆಂದು ಹೇಳಲಿ. ಭಗವಂತ ಪಾಪಾತ್ಮನಾದ ಜೀವಾತ್ಮನನ್ನು ನೋಡಿ "ಇವನು ಬಹಳ ಪಾಪ ಮಾಡಿದ್ದಾನೆ. ಇವನನ್ನು ನೋಡಬಾರದು" ಎಂದು ಬಲಗಡೆ ತಿರುಗಿದನಂತೆ. ಅಲ್ಲಿದ್ದ ಶ್ರೀದೇವಿ "ಪಾಪ! ಮಗು ತಪ್ಪು ಮಾಡುವುದು ಸಹಜ. ನಾವೇ ಕೋಪಿಸಿಕೊಂಡರೆ ಹೇಗೆ. ಕ್ಷಮಿಸಿ ಅನುಗ್ರಹಿಸಿ" ಎನ್ನುತ್ತಾಳಂತೆ. "ಹುಂ!" ಎಂದು ಎಡಗಡೆಗೆ ತಿರುಗಿದರೆ ಅಲ್ಲಿ ಗೋದೆ ಇದ್ದು "ಹುಂ! ಎಂದರೆ ಹೇಗೆ! ಎಲ್ಲಿ ಹೋಗಬೇಕು. ಕರುಣಿಸಿ" ಎನ್ನುತ್ತಾಳಂತೆ.

ಹೀಗೆ ಎರಡೂ ಕಡೆ ತಿರುಗಿದರೂ ಶಿಫಾರಸ್ಸುಗಳು. ಇನ್ನೇನೂ ಮಾಡಲು ಆಗದೆ ಇದಿರಿನಲ್ಲಿದ್ದ ಪಾಪಿಯಾದ ಜೀವಾತ್ಮನ ಮೇಲೆ ಪರಮಾತ್ಮನ ಅಮೃತಸಂಚಿತವಾದ ಕಟಾಕ್ಷ ಬಿದ್ದಿತು. ತಕ್ಷಣ ಆವನು ಪಾಪಮುಕ್ತನಾದ. ಭಗವದನುಗ್ರಹಕ್ಕೆ ಪಾತ್ರನಾದ. ಹೀಗೆ "ಜೀವಿಯನ್ನು ಉದ್ಧಾರಮಾಡಲು "ಪುರುಷಕಾರ" ರೂಪಿಣಿಯಾಗಿ ಬೆಳಗುತ್ತಿರುವ ನಿನಗೆ ನಮಸ್ಕಾರ" ಎನ್ನುತ್ತಾರೆ ದೇಶಿಕರು.

ಜನಕನ ಮಾತನ್ನು ಕೇಳಿದ ರಾಮ ಲಕ್ಷ್ಮಣ ಭರತ ಶತ್ರುಘ್ನರು, ಸೀತಾ, ಊರ್ಮಿಳಾ, ಮಾಂಡವೀ, ಶ್ರುತಕೀರ್ತಿಯರ ಕೈಗಳನ್ನು ಮುಟ್ಟಿ ಪಾಣಿಗ್ರಹಣ ಮಾಡಿದರು. ವಿಜೃಂಭಣೆಯಾಗಿ ಮದುವೆ ನಡೆಯಿತು.

ವಿಶ್ವಾಮಿತ್ರರು ತಮ್ಮ ಕಾರ್ಯವಾದಮೇಲೆ ತಪಸ್ಸು ಮಾಡಲು ಹೊರಟರು. ದಶರಥ ತನ್ನ ಮಕ್ಕಳನ್ನೂ, ಸೊಸೆಯರನ್ನೂ, ಬಂಧುಬಾಂಧವರನ್ನೂ, ಮಂತ್ರಿ, ಗುರು, ಪುರೋಹಿತರನ್ನೂ, ಸೈನ್ಯವನ್ನೂ ಒಡಗೂಡಿ ಜನಕಮಹಾರಾಜನಿಂದ ಬೀಳ್ಕೊಂಡು ಅಯೋಧ್ಯೆಯತ್ತ ನಡೆದ.

ಜನಕ ತನ್ನ ಮಕ್ಕಳಿಗೆ ಯಥೇಚ್ಛವಾಗಿ ಬಳುವಳಿಯನ್ನು ಕೊಟ್ಟ. ಧನಕನಕ ವಸ್ತ್ರ ವಾಹನಗಳನ್ನೂ, ದಾಸ-ದಾಸೀ ಜನರನ್ನೂ, ಸಹಸ್ರಸಂಖ್ಯೆಯಲ್ಲಿ ಆನೆ ಕುದುರೆ ಒಂಟೆ ಹಸುಗಳನ್ನೂ ನಾನಾ ವಿಧವಾದ ಆಭರಣಗಳನ್ನೂ ಕೊಟ್ಟು ದಶರಥನನ್ನು ಕಳುಹಿಸಿಕೊಟ್ಟ.

**ಸೀತಾಕಲ್ಯಾಣದ ತತ್ವ**

> **ದತ್ತಾಃ ಪ್ರಜಾಃ ಜನಕವತ್ ತ್ವದೇಶಿಕೇಂದ್ರೈಃ**
> **ಪತ್ಯಾಭಿಸಂದ್ಯೆ ಭವತಾಪರಿಣೀಯಮಾನಾಃ**
> **ಮಾನ್ಯಾಃ ಸತಾಂ ಮಹಿತ ಭೋಗೆ ವಿಶೇಷ ಸಿದ್ಧ್ಯೈ**
> **ಮಾಂಗಲ್ಯ ಸೂತ್ರ ಮಿವ ಬಿಭ್ರ ಕಿಂಕರಿತ್ವಂ**

ಲಕ್ಷ್ಮಿ ಸೀತೆಯಾಗಿ ಪರವಸ್ತು: ಆದರೆ ನಾರಾಯಣನಿಗೆ ಅಧೀನಳು. ಸೀತೆಯೊಡನೆ ಶ್ರೀರಾಮ ಪರವಸ್ತು. ಅವಳನ್ನು ರಾಮನಿಗೆ ಒಪ್ಪಿಸಿದ ಜನಕ ಎಂದರೆ ಪರತಂತ್ರನಾದ ಜೀವನನ್ನು ಆಚಾರ್ಯರಲ್ಲಿ ಪರಮಾತ್ಮನಿಗೆ ಒಪ್ಪಿಸಿದನೆಂಬ ಅರ್ಥವು ಧ್ವನಿಸುತ್ತದೆ.

**ವಿಷ್ಣು ಧನುಸ್ಸಿನ ಪ್ರಾಪ್ತಿ**

ಮದುವಯ ದಿಬ್ಬಣದೊಂದಿಗೆ ಜನಕನಿಂದ ಬೀಳ್ಕೊಂಡು ಹೊರಟ ದಶರಥ. ಮಾರ್ಗ ಮಧ್ಯದಲ್ಲಿ ಅನೇಕ ರೀತಿಯ ದುಶ್ಯಕುನಗಳು ಕಾಣಿಸಿಕೊಂಡವು. ಮೃಗ ಪಕ್ಷಿಗಳೆಲ್ಲ ವಿಚಿತ್ರವಾದ ಶಬ್ದವನ್ನು ಮಾಡುತ್ತಾ ಇದ್ದವು. ಮೃಗಗಳೆಲ್ಲ ದಶರಥನ ಪರಿವಾರವನ್ನು ಪ್ರದಕ್ಷಿಣೆ ಮಾಡುತ್ತಿದ್ದವು. ದಶರಥ ಭಯದಿಂದ ವಶಿಷ್ಠರನ್ನು ಕೇಳಿದ. ವಶಿಷ್ಠರು "ಈ ಘೋರ ಶಬ್ದ ಯಾವುದೋ ಭಯವನ್ನು ಸೂಚಿಸುತ್ತಿದೆ. ಆದರೆ ಈ ಮೃಗಗಳು ಪ್ರದಕ್ಷಿಣೆ ಮಾಡುತ್ತಿವೆ. ಆದ್ದರಿಂದ ಒದಗುವ ಭಯ ನಿವಾರಣೆಯಾಗುತ್ತದೆ. ಭಯ ಪಡಬೇಡ" ಎಂದರು.

ಅಷ್ಟರಲ್ಲಿ ಸೂರ್ಯನ ಪ್ರಕಾಶವನ್ನು ಹೋಲುವ, ಅಗ್ನಿಯಂತೆ ತೇಜಸ್ವಿಯಾದ ಒಬ್ಬ ಮುನಿ ಕಾಣಿಸಿಕೊಂಡ. ಕೈಯಲ್ಲಿ ಕೊಡಲಿ, ಬಿಲ್ಲು ಇದ್ದವು. ನೋಡಿದ ದಶರಥ. ಇಪ್ಪತ್ತೊಂದು ಸಲ

ಭೂ ಪ್ರದಕ್ಷಿಣೆ ಮಾಡಿ ದುಷ್ಟ ಕ್ಷತ್ರಿಯರನ್ನೆಲ್ಲ ನಾಶಮಾಡಿದ ಪರಶುರಾಮ ಎಂದು ತಿಳಿದ. ಗಡ ಗಡ ನಡುಗಿದ. "ಸ್ವಾಮಿ ನಿಮಗೆ ನಮಸ್ಕಾರ. ಬಹುಕಾಲ ಕಳೆದ ಮೇಲೆ ಇದೀಗ ತಾನೇ ರಾಮನನ್ನು ಮಗನನ್ನಾಗಿ ಪಡೆದಿದ್ದೇನೆ. ಅವನಿನ್ನೂ ಹಸುಳೆ ಅವನನ್ನು ಏನೂ ಮಾಡದಿರಿ" ಎಂದು ಗೋಗರೆದ. ದಶರಥನತ್ತ ಪರಶುರಾಮ ಗಮನವನ್ನೇ ಕೊಡಲಿಲ್ಲ. ನೇರವಾಗಿ ರಾಮನ ಮುಂದೆ ಬಂದು ನಿಂತ ಪರಶುರಾಮ. ದಶರಥ ಮೂರ್ಛಿತನಾದ

"ರಾಮ ! ನೀನು ಶಿವಧನುಸ್ಸನ್ನು ಮುರಿದೆ ಎಂದು ಕೇಳಿದೆ. ನಿನ್ನಲ್ಲಿ ಶಕ್ತಿ ಇದ್ದರೆ ಇದೋ ಈ ವೈಷ್ಣವ ಧನುಸ್ಸನ್ನು ಹಿಡಿ. ಇದರ ಹೆದೆಯೇರಿಸು" ಎಂದು ಗುಡುಗಿದ.

ಬ್ರಾಹ್ಮಣ ಎಂಬ ಮರ್ಯಾದೆಯಿಂದ ಸ್ವಲ್ಪ ಸಹಿಸಿದ ದಶರಥರಾಮ. ಆದರೆ ಪರಶು-ರಾಮನ ಆರ್ಭಟವನ್ನು ಕೇಳಿದ. "ಕೊಡಿ—ಇಲ್ಲಿ" ಎಂದವನೇ ಪರಶುರಾಮನ ಕೈಯಲ್ಲಿದ್ದ ವೈಷ್ಣವ ಧನುಸ್ಸನ್ನು ತೆಗೆದುಕೊಂಡು ಅನಾಯಾಸವಾಗಿ ಹೆದೆಯೇರಿಸಿ ಬಾಣವನ್ನು ತೊಟ್ಟ.

"ಹೇಳಿ—ಈ ಬಾಣಕ್ಕೆ ಗುರಿಯಾವುದು" ಎಂದ.

ರಾಮನ ಶರಲಾಘವಕ್ಕೆ ತಲೆದೂಗಿದರು ಪರಶುರಾಮರು. ಅದುವರೆಗೆ ತಾವು ಗಳಿಸಿದ್ದ ಪುಣ್ಯಲೋಕಗಳನ್ನೇ ಬಾಣಕ್ಕೆ ಗುರಿಯಾಗಿ ಕೊಟ್ಟರು. ರಾಮನನ್ನು ಹರಸಿದರು. ಪರಶು-ರಾಮರು ಮಹೇಂದ್ರ ಪರ್ವತಕ್ಕೆ ತಪಸ್ಸು ಮಾಡಲು ಹೊರಟರು. ದೇವತೆಗಳು, ಋಷಿಗಳು, ಎಲ್ಲರೂ ರಾಮನನ್ನು ಕೊಂಡಾಡಿದರು.

ದಶರಥ ಎಚ್ಚೆತ್ತ. ನಡೆದದ್ದೆಲ್ಲವನ್ನೂ ತಿಳಿದು ಸಂತೋಷದಿಂದ ರಾಮನನ್ನು ಅಪ್ಪಿಕೊಂಡ. ಎಲ್ಲರೂ ಅಯೋಧ್ಯೆಗೆ ಪ್ರಯಾಣ ಬೆಳಸಿದರು.

## ಪರತತ್ವ ನಿರೂಪಣೆ

ಬಾಲಕಾಂಡದಲ್ಲಿ ಪರಶುರಾಮರ ಮೂಲಕ ರಾಮ ಸಾಕ್ಷಾತ್ ಪರಬ್ರಹ್ಮನೇ ಎಂಬ ತತ್ವ ಸ್ಪಷ್ಟೀಕರಿಸಲ್ಪಟ್ಟಿತು. ವಿಶ್ವಕರ್ಮ ಯೋಗಶಕ್ತಿಯಿಂದ ಸೃಷ್ಟಿಸಿದ ಎರಡು ಧನುಸ್ಸುಗಳಲ್ಲಿ ಒಂದು ರಾಮ ಮುರಿದ ಶಿವಧನುಸ್ಸು. ಇನ್ನೊಂದು ಮಹಾವಿಷ್ಣುವಿನ ಶಾರ್ಙ್ಗವೆಂಬ ಧನುಸ್ಸು. ಅದು ವಿಷ್ಣುವಿನಿಂದ ಪರಶುರಾಮನ ಕುಲಕ್ಕೆ ವಂಶಪಾರಂಪರ್ಯವಾಗಿ ಬಂದ ಧನುಸ್ಸು. ಅದನ್ನು ವಿಷ್ಣು ವಲ್ಲದೆ ಮತ್ತಾರೂ ಹಿಡಿಯಲು ಶಕ್ತರಲ್ಲ. ವಿಷ್ಣುವಿನ ಅಂಶಾವತಾರವಾದ ಪರಶುರಾಮ ಅದನ್ನು ಹಿಡಿದ. ರಾಮ ಆ ವಿಷ್ಣು ಧನುಸ್ಸನ್ನು ಹಿಡಿದುದರ ಮೂಲಕ ಸಾಕ್ಷಾತ್ ಮಹಾವಿಷ್ಣುವೇ ರಾಮನಾಗಿ ಬಂದಿದಾನೆ ಎಂದು ನಿರೂಪಿಸಿದ ಪರಶುರಾಮ.

ಕೂರತ್ತಾಳ್ವಾರ್ ಸಹ "ಅತಿಮಾನುಷಸ್ತವ" ದಲ್ಲಿ ಪರಮಾತ್ಮನ ಅತಿಮಾನುಷತ್ವವನ್ನು ಕೊಂಡಾಡುತ್ತಾ ಕೇಳುತ್ತಾರೆ. "ರಾಮ, ನೀನು "ನಾನು ದಶರಥನ ಮಗ; ಸಾಮಾನ್ಯ ಮನುಷ್ಯನೇ" ಎಂದೆಯಲ್ಲ. ಸಾಮಾನ್ಯ ಮನುಷ್ಯನಿಗೆ ವಿಷ್ಣು ಹಿಡಿಯುವ ಧನುಸ್ಸನ್ನು ಹಿಡಿಯುವುದು ಸಾಧ್ಯವೆ? ವಿಷ್ಣುವಿನ ಧನುಸ್ಸನ್ನು ನೀ ಹಿಡಿದೆ. ಆದ್ದರಿಂದ ನೀ ವಿಷ್ಣುವೇ" ಎಂದು ಸ್ತುತಿಸುತ್ತಾರೆ.

ಎಲ್ಲರೂ ಪುರಪ್ರವೇಶ ಮಾಡಿದರು. ನವ ವಧೂವರರನ್ನು ಇದಿರುಗೊಳ್ಳಲು ಅಯೋಧ್ಯೆಗೆ ಅಯೋಧ್ಯೆಯೇ ಕಿಕ್ಕಿರಿದು ನಿಂತಿತ್ತು.

ತಳಿರು ತೋರಣಗಳಿಂದಲೂ, ಧ್ವಜ ಪತಾಕೆಗಳಿಂದಲೂ ಅಲಂಕೃತವಾಗಿದ್ದ ಅಯೋಧ್ಯಾ

ನಗರಿ ಸರ್ವಾಲಂಕಾರ ಭೂಷಿತಳಾದ ನವವಧುವಿನಂತೆ ಶೋಭಿಸುತ್ತಿತ್ತು. ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ತಮ್ಮ ತಮ್ಮ ಅರಮನೆಯಲ್ಲಿ ತಮ್ಮ ತಮ್ಮ ಪತ್ನಿಯರೊಡನೆ ಸಂತೋಷವಾಗಿ ಕಾಲ ಕಳೆಯತೊಡಗಿದರು. ದಶರಥ ಆನಂದ ಸಾಗರದಲ್ಲಿ ತೇಲಾಡತೊಡಗಿದ.

ಭರತನ ಸೋದರಮಾವ ಮದುವೆಯ ಸಮಯದಲ್ಲೇ ದಶರಥನಲ್ಲಿಗೆ ಬಂದಿದ್ದ. ಅವನೂ ಈಗ ದಶರಥನೊಡನೆ ಅಯೋಧ್ಯೆಗೆ ಬಂದ. ತನ್ನ ಸೋದರಳಿಯ ಭರತನನ್ನು "ತನ್ನ ಮನೆಗೆ ಕಳುಹಿಸಿಕೊಡಬೇಕು" ಎಂದು ಪ್ರಾರ್ಥಿಸಿದ. ದಶರಥ ಒಪ್ಪಿದ. ಅದರಂತೆ ಭರತನೂ ಅವನನ್ನನುಸರಿಸಿ ಶತ್ರುಘ್ನನೂ ಮಾವನ ಮನೆಗೆ ಹೋದರು.

ರಾಮಲಕ್ಷ್ಮಣರು ಪಿತೃಶುಶ್ರೂಷೆಯನ್ನು ಮಾಡುತ್ತಾ ತಮಗೆ ವಿಹಿತವಾದ ಕೆಲಸಗಳನ್ನು ಮಾಡುತ್ತಾ ಸಂತೋಷವಾಗಿದ್ದರು.

ಸೀತೆಯೊಂದಿಗೆ ರಾಮ ಸಕಲ ಭೋಗಗಳನ್ನೂ ಅನುಭವಿಸುತ್ತಿದ್ದ. ಪರಸ್ಪರರನ್ನು ಅರ್ಥ ಮಾಡಿಕೊಂಡ, ಸೀತಾ-ರಾಮರು, ಲಕ್ಷ್ಮೀ-ವಿಷ್ಣುವಿನಂತೆ ಸೌಖ್ಯವಾಗಿದ್ದರು.

# ಅಯೋಧ್ಯಾಕಾಂಡ

ಬಾಲಕಾಂಡದಲ್ಲಿ ಪರತತ್ವನಿರೂಪಣೆಯಾದರೆ ಅಯೋಧ್ಯಾಕಾಂಡದಲ್ಲಿ ಸೌಶೀಲ್ಯಾದಿ ಗುಣಗಳ ವಿವರಣೆ ಬರುತ್ತದೆ.

ಪರಶುರಾಮರಿಂದ ವೈಷ್ಣವ ಧನುಸ್ಸನ್ನು ತೆಗೆದುಕೊಳ್ಳುತ್ತಿದ್ದಂತೆಯೇ ಅವರ ಸರ್ವಶಕ್ತಿಯನ್ನೂ ಅಪಹರಿಸಿ ರಾಮ ತನ್ನ ಪರತತ್ವದ ಮಹಿಮೆಯನ್ನು ತೋರಿದ.

ಅಂಥ ಪರತತ್ವ ಸ್ವರೂಪನಾದ ಶ್ರೀರಾಮನ ಗುಣವರ್ಣನೆಯೇ ಅಯೋಧ್ಯಾಕಾಂಡದ ಪ್ರಾರಂಭ ಸರ್ಗಗಳಲ್ಲಿ ವಿದಿತವಾಗಿದೆ. ವಾಲ್ಮೀಕಿ ನಾರದರನ್ನು ಕೇಳಿದ್ದು "ಗುಣವಾನ್" ಎಂದು. ಅಂಥ "ಗುಣಗಳ ಗಣಿ ರಾಮ" ಎಂಬುದನ್ನು ಹೃತ್ಪೂರ್ವಕವಾಗಿ ಅಯೋಧ್ಯಾಕಾಂಡದಲ್ಲಿ ವರ್ಣಿಸಿದರು.

ರಾಮಚಂದ್ರ ಮಹಾ ಬುದ್ಧಿವಂತ, ರೂಪವಂತ, ಶೀಲವಂತ, ಆಚಾರವಂತ, ಧರ್ಮನಿಷ್ಠ, ಸಕಲಶಾಸ್ತ್ರಗಳನ್ನೂ ತಿಳಿದವನು. ಮೇಲಾಗಿ ಸ್ವಲ್ಪವೂ ಗರ್ವವಿಲ್ಲದವನು. 'ಚಕ್ರವರ್ತಿ ಕುಮಾರ ತಾನು' ಎಂಬ ಹೆಮ್ಮೆ ಸ್ವಲ್ಪವೂ ಆತನಲ್ಲಿ ಇಲ್ಲ. ಸದಾ ಪ್ರಜೆಗಳೊಡನೆ ಬೆರೆಯುವ ಮನೋಭಾವ ಉಳ್ಳವನು. ಹಿರಿಯರನ್ನು ಕಂಡರೆ ಭಕ್ತಿ, ಗೌರವ. ತಾನು ಬೇಟೆಯಾಡಲು ಹೊರಟ ವೇಳೆ ಮಾರ್ಗಮಧ್ಯದಲ್ಲಿ ಜ್ಞಾನವೃದ್ಧರನ್ನು ಕಂಡರೆ ಅಲ್ಲೇ ಬಳಿಯಲ್ಲೇ ಕುಳಿತುಕೊಂಡು ಶಾಸ್ತ್ರಾರ್ಥ ಮಾಡತಕ್ಕವ. ಹಿರಿಯರನ್ನು ಸೇವಿಸುವುದರ ಮೂಲಕ ಧರ್ಮಸೂಕ್ಷ್ಮಗಳನ್ನು ಅರಿತುಕೊಳ್ಳುವಂಥವ.

ಹಿರಿಯರನ್ನು ಕಂಡರೆ ಗೌರವ. ಪ್ರಜೆಗಳನ್ನು ಕಂಡರೆ ಆದರ. ತಾನೇ ಪ್ರಜೆಗಳಿಗೆ ತಂದೆ, ತಾಯಿ, ಒಡೆಯ, ಸ್ನೇಹಿತ, ಬಂಧು ಎನಿಸಿಕೊಳ್ಳುವಂತೆ ಪ್ರಜೆಗಳನ್ನು ಕಾಪಾಡುವವ. ಪ್ರಜೆಗಳು ತಪ್ಪು ಮಾಡಿದಾಗ ತಂದೆ ಮಗನಿಗೆ ಸರಿಯಾದ ದಾರಿಯನ್ನು ತಿಳಿಸುವಂತೆ ತಿಳಿಸತಕ್ಕವ.

ಒಮ್ಮೆ ಒಬ್ಬ ಅಧಿಕಾರಿ ತನಿಖೆ ನಡೆಸಲು ಇನ್ನೊಬ್ಬ ಅಧಿಕಾರಿಯ ಮನೆಯಲ್ಲಿ ಇಳಿದುಕೊಂಡ. ಕಛೇರಿಯ ತನಿಖೆ ಕೆಲಸ ಎಲ್ಲ ನಡೆಯಿತು. ಪೂರ್ತಿಯಾಯಿತು. ಅಧಿಕಾರಿ ಹೊರಡುವ ದಿನ ಬಂದಿತು. ದೊಡ್ಡ ಊಟದ ಏರ್ಪಾಡು ನಡೆಯಿತು. ಸಾರನ್ನು ಬಡಿಸಿದರು ಸಾರನ್ನು ಕುಡಿದ ತಕ್ಷಣವೇ ಅಧಿಕಾರಿಗೆ ವಾಕರಿಕೆ ಬಂದಿತು. ಕುಪಿತನಾದ ಅಧಿಕಾರಿ ರಿಪೋರ್ಟ್ ಬರೆಯುವಾಗ 'ವಸತಿ, ಭೋಜನ ಸೌಕರ್ಯ ಸರಿಯಾಗಿಲ್ಲ" ಎಂದು ಬರೆದ. ಅದರ ಪರಿಣಾಮವಾಗಿ ಈ ಅಧಿಕಾರಿಗೆ ಯಾವುದೋ ದೂರದ ಊರಿಗೆ ವರ್ಗಕ್ಕೆ ಆರ್ಡರ್ ಬಂದಿತು.

ವರ್ಗಕ್ಕೆ ಆರ್ಡರ್ ಬಂದ ಅಧಿಕಾರಿ ತನ್ನ ತಂದೆಗೆ ಕಾಗದ ಬರೆದ. ತಂದೆ ಬಂದರು. ಅವರಿಗೂ ಅದೇ ರೀತಿ ಊಟವನ್ನಿಟ್ಟ. ಅವರೂ ಸಾರಿನಲ್ಲಿ ಉಂಡ ಮೇಲೆ ವಾಂತಿಮಾಡಿದರು. ಆದರೆ ಕಿಲ್ಮಿಷಯುಕ್ತವಾದ ಸಾರನ್ನು ಬಡಿಸಿದ್ದಕ್ಕಾಗಿ ಅವರು ಮಗನ ಮೇಲೆ ಕೋಪಿಸಲಿಲ್ಲ. ಯೋಚಿಸಿದರು, "ಏಕೆ ಹೀಗೆ ?" ಎಂದು. ತಿಳಿಯಿತು ಅವರಿಗೆ, ಅದು "ತಮ್ಮ ತಪ್ಪೇ" ಎಂದು. ತಾವು ಸರಿಯಾದ ಪಾತ್ರೆಗಳನ್ನು ಕೊಟ್ಟಿದ್ದರೆ ಸಾರು ಚೆನ್ನಾಗಿರುತ್ತಿತ್ತು. ತಾವು ಕೊಟ್ಟಿದ್ದು

ಕಲಾಯಿ ಇಲ್ಲದ ಪಾತ್ರೆ. "ತಮ್ಮದೇ ತಪ್ಪು" ಎಂದುಕೊಂಡರು. ಮಗನಿಗೆ ಸರಿಯಾದ ಪಾತ್ರೆಗಳನ್ನು ತೆಗೆಸಿಕೊಟ್ಟರು !

ಇದರಿಂದ ತಿಳಿಯಬೇಕಾದ ಅಂಶ ಎಂದರೆ ಪರಮಾತ್ಮ ತಾನೇ ತಂದೆಯಾಗಿ, ಗುರುವಾಗಿ, ಸಖನಾಗಿ, ಪ್ರಭುವಾಗಿ ಎಲ್ಲರನ್ನೂ ರಕ್ಷಿಸುತ್ತಾನೆ. ಜೀವ ತಪ್ಪು ಮಾಡಿದಾಗಲೂ 'ಅದು ತನ್ನ ತಪ್ಪೇ' ಎಂದುಕೊಂಡು ತಾನೇ ಜೀವನನ್ನು ತಂದೆಯಂತೆ ಸರಿಯಾದ ಹಾದಿಯಲ್ಲಿ ತರುತ್ತಾನೆ ಪರಮಾತ್ಮ. ಅದಕ್ಕೇ ಪರಮಾತ್ಮ "ಔದಾರ್ಯಗುಣ ವಿಶಿಷ್ಟ" ಎಂದು ಕರೆಸಿಕೊಳ್ಳುತ್ತಾನೆ.

ರಾಮನಾದರೋ ಅಂಥ ಔದಾರ್ಯಗುಣವುಳ್ಳವನೆ. ತಾನೇ ಪ್ರಜೆಗಳೊಂದಿಗೆ ಸೇರಿ ಅವರ ಕಷ್ಟ ಸುಖಗಳನ್ನು ವಿಚಾರಿಸುತ್ತಿದ್ದ.

ಪ್ರಪಂಚದಲ್ಲಿ ಕಷ್ಟದಲ್ಲಿರುವವರಿಗೆ ತಾವೇ ಬಂದು ಸಹಾಯಮಾಡುವವರು ವಿರಳ. ಆದರೆ ರಾಮ ಯಾರಿಗಾದರೂ ಕಷ್ಟ ಎಂಬುದು ತಿಳಿಯುತ್ತಲೇ ಅವರಲ್ಲಿಗೆ ತಾನೇ ಕರೆಯದೆಯೇ ಮುಂದಾಗಿ ಹೋಗಿ ಅವರ ಕಷ್ಟವನ್ನು ಪರಿಹರಿಸಿ ಬರುತ್ತಿದ್ದನಂತೆ. ಯಾರಿಗಾದರೂ ತೊಂದರೆ, ದುಃಖ ಎಂದರೆ ತಾನೂ ಅವರ ದುಃಖವನ್ನು ಅನುಭವಿಸಿ ಅವರ ಕಷ್ಟಕಾಲದಲ್ಲಿ ನೆರವಾಗುತ್ತಿದ್ದನಂತೆ.

ಯಾರ ಮನೆಯಲ್ಲಾದರೂ ಮದುವೆ ನಡೆಯಿತು ಎಂದರೆ ತಾನು ರಾಜಕುಮಾರ ಎಂಬ ಗರ್ವವನ್ನು ಬಿಟ್ಟು ತಾನಾಗಿ ಹೋಗಿ ಉಡುಗೊರೆಯನ್ನಿತ್ತು ವಧೂವರರನ್ನು ಆಶೀರ್ವದಿಸಿ ಬರುತ್ತಿದ್ದನಂತೆ.

ಎಲ್ಲರನ್ನೂ ತನ್ನ ಗುಣದಿಂದ, ರೂಪದಿಂದ ರಂಜಿಸುತ್ತಿದ್ದ. ತಾನೇ ಮುಂದಾಗಿ ಹೋಗಿ ಪ್ರಜೆಗಳ ಕುಶಲವನ್ನು ವಿಚಾರಿಸುತ್ತಿದ್ದ. ಎಲ್ಲಿ ನೋಡಿದರೂ ರಾಮನೇ ಆಗಿ ಭುವನಾಭಿರಾಮನಾಗಿ ಮೆರೆಯುತ್ತಿದ್ದ. ಯಾವಾಗಲೂ ಮಂದಹಾಸವನ್ನು ಸೂಸುವ ಸುಂದರ ವದನಾರವಿಂದ ಆತನದು. ಯಾವಾಗಲೂ ಮೃದುವಾದ, ಪ್ರಿಯವಾದ, ಸತ್ಯವಾದ ಮಾತುಗಳನ್ನೇ ಆಡುತ್ತಿದ್ದ. ತನ್ನ ನುಡಿಯಿಂದ, ನಡೆಯಿಂದ ಯಾರನ್ನೂ ನೋಯಿಸುತ್ತಿರಲಿಲ್ಲ.

ಕೃತಜ್ಞ, ಮಾಡಿದ ಉಪಕಾರವನ್ನು ಬೆಟ್ಟದಂತೆ ಭಾವಿಸುವವ. "ಕಥಂಚಿತ್ ಉಪಕಾರೇಣ ಕೃತೇನ ಏಕೇನ ತುಷ್ಯತಿ" ಎಂದರು ವಾಲ್ಮೀಕಿ. ಯಾವುದಾದರೂ ಒಂದು ಉಪಕಾರವನ್ನು ಒಬ್ಬ ಮಾಡಿದರೆ ಅಥವಾ ಮಾಡಬೇಕು ಎಂದು ತನಗೇ ಅರಿವಿಲ್ಲದಂತೆ ನೆನೆದರೂ, ಅದನ್ನೇ ಮಹತ್ತಾಗಿ ಭಾವಿಸಿಕೊಂಡು ಸಂತೋಷ ಪಡುತ್ತಿದ್ದನಂತೆ.

ಇದನ್ನು ವ್ಯಾಜವನ್ನಾಗಿಟ್ಟುಕೊಂಡು ಒಂದು ಉದಾಹರಣೆ :

ಒಬ್ಬ ನಾಸ್ತಿಕ. ತನ್ನ ಮಗಳನ್ನು ಒಬ್ಬ ಆಸ್ತಿಕನಿಗೆ ಮದುವೆ ಮಾಡಿಕೊಟ್ಟ. ಅಳಿಯ ಮಹಾ ದೈವಭಕ್ತ. ಮದುವೆಯನಂತರ ದೇವಾಲಯಕ್ಕೆ ಹೋಗಿಯೇ ತೀರಬೇಕು ಎಂದ. ಇಷ್ಟವಿಲ್ಲದಿದ್ದರೂ ಮಗಳಿಗಾಗಿ ನಾಸ್ತಿಕನೂ ಹೊರಟ ದೇವಾಲಯಕ್ಕೆ. ದೇವಸ್ಥಾನದ ಹತ್ತಿರ ಬಂದರು. ದೇವರಿಗೆ ಅರ್ಚನೆ ಮಾಡಿಸಬೇಕು. ಅರ್ಚನೆಯ ನಂತರ ನೈವೇದ್ಯಕ್ಕೆ ಹಣ್ಣು-ಕಾಯಿ ಆಗಬೇಕು. ದೇವರಿಗಾಗಿ ಹಣ್ಣು-ಕಾಯನ್ನು ಯಾರು ಕೊಳ್ಳುವುದು ಎಂದು ತರ್ಕ ಮಾಡಿದರು. ಅಳಿಯ ಒಂದೇ ಹಠ ಹಿಡಿದ. ಮಾವನೇ ತೆಗೆಸಿ ಕೊಡಬೇಕು ಎಂದ. ಇಷ್ಟವಿಲ್ಲದಿದ್ದರೂ ನಾಸ್ತಿಕನಾದರೂ ಮಗಳ ಹಿತಕ್ಕಾಗಿ ಹಣ್ಣು-ಕಾಯಿ ತೆಗೆಸಿಕೊಟ್ಟ.

ಕೆಲ ಕಾಲ ಕಳೆಯಿತು. ನಾಸ್ತಿಕ ಮಾಪ ಸತ್ತುಹೋದ. ಅವನನ್ನು ವಿಷ್ಣುಲೋಕಕ್ಕೆ ಕರೆದೊಯ್ಯಲು ವಿಷ್ಣುದೂತರು ಬಂದರು. ನರಕಕ್ಕೆ ಕರೆದೊಯ್ಯಲು ಯಮದೂತರೂ ಬಂದರು. ಯಮದೂತರು ಕೇಳಿದರು "ಇವನು ನಾಸ್ತಿಕ. ಒಂದಾದರೂ ಪುಣ್ಯ ಕೆಲಸ ಮಾಡಿಲ್ಲ. ಇವನನ್ನು ಏಕೆ ನಿಮ್ಮ ಲೋಕಕ್ಕೆ ಕರೆದುಕೊಂಡು ಹೋಗುವಿರಿ ?"

"ನಾಸ್ತಿಕನಾಗಿರಬಹುದು. ಆದರೆ, ಒಂದು ದಿನ ದೇವರಿಗಾಗಿ ಹಣ್ಣು ಹೂವನ್ನು ಸಮರ್ಪಿಸಿದಾನೆ. ಆ ಪುಣ್ಯದಿಂದಲೇ ಈಗ ವಿಷ್ಣುಲೋಕಕ್ಕೆ ಕರೆದುಕೊಂಡು ಬರಬೇಕು ಎಂದು ವಿಷ್ಣುವಿನ ಆಜ್ಞೆಯಾಗಿದೆ" ಎಂದರು. ನಾಸ್ತಿಕ ವಿಷ್ಣುಲೋಕವನ್ನು ಸೇರಿದ.

ಇದರಿಂದ ಭಗವಂತನ ಸೌಲಭ್ಯ ವಿದಿತವಾಗುತ್ತದೆ. ತನ್ನ ಇಚ್ಛೆಯಿಲ್ಲದೆಯೇ ಮಾಡಿದ ಒಂದೇ ಪುಣ್ಯ ಕೆಲಸವನ್ನೂ ಭಗವಂತ ತನಗಾಗಿ ಮಾಡಿದ ದೊಡ್ಡ ಕೆಲಸ ಎಂದು ಭಾವಿಸಿ ಅನುಗ್ರಹಿಸುತ್ತಾನೆ. ಅವನ ಔದಾರ್ಯ ಅಂಥದು.

ಭಗವಂತನ ಔದಾರ್ಯವನ್ನು ನಿರೂಪಿಸುವ ಇನ್ನೊಂದು ಉದಾಹರಣೆ.

ಒಬ್ಬ ವರ್ತಕ. ದುರಾಸೆ ಅವನಿಗೆ. ಒಂದಕ್ಕೆ ನಾಲ್ಕು ಬೆಲೆಯಲ್ಲಿ ಅಕ್ಕಿ ಮಾರುತ್ತಿದ್ದ. ಮಾರಾಟಕ್ಕಿಡುವ ಅಕ್ಕಿಯೂ ಚೆನ್ನಾಗಿರುತ್ತಿರಲಿಲ್ಲ. ಕಲ್ಲು ಮಣ್ಣುಗಳಿಂದ ತುಂಬಿರುತ್ತಿತ್ತು. ಅಂಥ ದುರಾಚಾರಿ ವರ್ತಕ ಪ್ರಾಣಬಿಟ್ಟ. ಅವನನ್ನು ದೇವಲೋಕಕ್ಕೆ ಕರೆದೊಯ್ಯಲು ವಿಷ್ಣುದೂತರು ಬಂದರು. ನರಕಕ್ಕೆ ಕರೆದುಕೊಂಡು ಹೋಗಲು ಯಮದೂತರೂ ಬಂದರು. ಅಲ್ಲಿಗೆ ಬಂದ ವಿಷ್ಣುದೂತರನ್ನು ನೋಡಿ ಯಮದೂತರು "ಇವನ ಇಡೀ ಜೀವನವೇ ಠಕ್ಕಿನ ಜೀವನವಾಗಿದೆ. ಇವನನ್ನು ವಿಷ್ಣುಲೋಕಕ್ಕೆ ಹೇಗೆ ಕರೆದೊಯ್ಯುತ್ತೀರಿ ?" ಎಂದರು. ಆಗ ವಿಷ್ಣುದೂತರು ಹೇಳಿದರು "ಇವನೇನೋ ಮೋಸಗಾರ. ನಿಜ. ಆದರೆ ಇವನು ಅಕ್ಕಿಯನ್ನು ಮಾರುವಾಗ ಶ್ರೀರಂಗದ ಅಕ್ಕಿ, ಶ್ರೀರಂಗದ ಅಕ್ಕಿ ಎಂದು ಹೇಳಿ ಮಾರುತ್ತಿದ್ದ. ಇವನ ನಾಲಿಗೆಯಲ್ಲಿ ಶ್ರೀರಂಗನ ನಾಮ ಬಂದಿತು. ಅದಕ್ಕಾಗಿ ವಿಷ್ಣುಲೋಕಕ್ಕೆ ಕರೆದುಕೊಂಡು ಬರುವಂತೆ ಆಜ್ಞೆಯಾಯಿತು" ಎಂದರು.

ಭಗವಂತ ಎಷ್ಟು ಉದಾರಿ ! ಕ್ಷಮಾಶೀಲ ! ಎಂಬುದು ಇದರಲ್ಲಿ ವ್ಯಕ್ತವಾಗುತ್ತದೆ. ಅವನ ಈ ಸೌಶೀಲ್ಯ ಗುಣವನ್ನೇ ಅನುಭವಿಸುತ್ತಾ ವಾಲ್ಮೀಕಿ ಹೇಳಿದರು ನೂರು ಅಪರಾಧಗಳನ್ನು ತನಗೆ ಮಾಡಿದರೂ ರಾಮ ಅದನ್ನು ಜ್ಞಾಪಕದಲ್ಲಿಡುತ್ತಿರಲಿಲ್ಲವಂತೆ. ಒಂದೇ ಒಂದು ಸಣ್ಣ ಉಪಕಾರವನ್ನು ಮಾಡಿದರೂ ಅದನ್ನೇ ಬೆಟ್ಟದಷ್ಟು ದೊಡ್ಡದಾಗಿ ಎಣಿಸುತ್ತಿದ್ದನಂತೆ. ಕ್ಷಮೆಯೇ ಮೂರ್ತಿರೂಪವನ್ನು ತಳೆದಿದೆಯೋ ಎಂಬಂತೆ ಇದ್ದ ರಾಮ. ಅದಕ್ಕೇ ಜ್ಞಾನಿಗಳು ಅವನನ್ನು "ಕರುಣಾ ಕಾಕುತ್ಸ್ಥ" ಎಂದರು. ಭಗವಂತನ ಕಾರುಣ್ಯ ಅಸದೃಶವಾದುದು

**ತೇಷಾಮೇವಾನು ಕಂ ಪಾರ್ಥ ಅಹಮಜ್ಞಾನಜಂ ತಮಃ।**

**ನಾಶಯಾಮ್ಯಾತ್ಮ ಭಾವಸ್ಥಃ ಜ್ಞಾನ ದೀಪೇನ ಭಾಸ್ವತಾ॥**

ಎಂದ ಕೃಷ್ಣ

ಜೀವರಲ್ಲಿರುವ ಅನುಕಂಪನೆಯಿಂದ ನಾನು ಅವರ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸಿ ಜ್ಞಾನದೀಪವನ್ನು ಪ್ರಕಾಶಪಡಿಸುತ್ತೇನೆ ಎಂದ. ಜೀವರಿಗೆ ಪರಮಾತ್ಮನ ಭಾವವನ್ನು ಅವನ ನೆಲೆಯನ್ನು ಅರಿಯುವುದು ಕಷ್ಟತಮ, ಅಸಾಧ್ಯ. ಭಗವಂತನೇ ತನ್ನ ಕರುಣೆಯಿಂದ ಜೀವರನ್ನು ಉದ್ಧರಿಸುತ್ತಾನೆ. ಇದೇ ಭಗವಂತನಲ್ಲಿರುವ ಕಾರುಣ್ಯ. ಅಹಲ್ಯೆಯನ್ನು ಉದ್ಧಾರ

ಮಾಡುವಾಗ ಈ ಕರುಣೆಯೇ ಪ್ರಾಧಾನ್ಯ. ರಾಮ ತಾನಾಗಿಯೇ ವಿಶ್ವಾಮಿತ್ರರನ್ನು ಶೂನ್ಯವಾದ ಗೌತಮರ ಆಶ್ರಮದ ಬಗ್ಗೆ ಪ್ರಸ್ತಾಪಿಸಿದ. ತನ್ನ ಕಾರುಣ್ಯವನ್ನು ತೋರ್ಪಡಿಸಿದ.

ಅಯೋಧ್ಯೆಯ ಜನರಿಗೆ ರಾಮ ಕಣ್ಮಣಿಯೆನಿಸಿದ. ಎಲ್ಲಿ ನೋಡಿದರೂ ರಾಮನ ಮಾತೇ. ರಾಮನ ವೀರ್ಯವನ್ನು ಕೊಂಡಾಡುವವರೇ ಎಲ್ಲರೂ. ವಿದ್ಯೆ, ರೂಪ ಯೌವನ, ಧನ, ಇವು ಒಂದೊಂದೇ ಗರ್ವವನ್ನು ಹುಟ್ಟಿಸುತ್ತದೆ. ಆದರೆ ವಿದ್ಯೆಯ ಆಗರವೆನಿಸಿ, ರೂಪವೇ ಮೂರ್ತಿ ಭವಿಸಿದಂತೆ ಇದ್ದು, ಯೌವನ, ಧನ, ಎಲ್ಲವೂ ಇದ್ದು ರಾಮ ಸ್ವಲ್ಪವೂ ಅಹಂಕಾರವಿಲ್ಲದೆ ನಿಗರ್ವಿ ಯಾಗಿದ್ದ. ಮಕ್ಕಳು, ದೊಡ್ಡವರು, ಗಂಡಸರು, ಹೆಂಗಸರು, ವೃದ್ಧರು, ಬಾಲರು ಎಲ್ಲರಿಗೂ ತುಂಬ ಬೇಕಾದವನಾದ.

ಎಲ್ಲರೂ ರಾಮನ ಮಂಗಳವನ್ನು ಚಿಂತಿಸುವವರೇ. ಅಯೋಧ್ಯೆಯ ದೇವಸ್ಥಾನಗಳಲ್ಲೆಲ್ಲ ಪೂಜೆ ನಡೆಯುತ್ತಿತ್ತು. ಎಲ್ಲ ಪ್ರಜೆಗಳೂ ದೇವಸ್ಥಾನದಲ್ಲಿ ಪೂಜೆಮಾಡಿ "ರಾಮ ಚೆನ್ನಾಗಿರಲಿ, ದೀರ್ಘಾಯುವಾಗಲಿ" ಎಂದೇ ಬೇಡಿಕೊಳ್ಳುತ್ತಿದ್ದರು. ತಮ ತಮಗೆ ಇಷ್ಟವಾದ ದೈವಗಳನ್ನೆಲ್ಲ "ರಾಮನಿಗೆ ಮಂಗಳವುಂಟುಮಾಡಿ" ಎಂದು ಪ್ರಾರ್ಥಿಸುತ್ತಿದ್ದರು. ಹೀಗೆ ರಾಮನೆಂದರೆ ಅಯೋಧ್ಯೆ—ಅಯೋಧ್ಯೆಯೆಂದರೆ ರಾಮ ಎನಿಸಿದ. ಪ್ರಜಾರಂಜಕನಾದ. ರಾಜನಾಗುವ ಮೊದಲೇ ಪ್ರಜೆಗಳ ಹೃನ್ಮನಗಳನ್ನು ಸೂರೆಗೊಂಡ.

ದಶರಥ ಚಕ್ರವರ್ತಿಗೆ ಇಂಥ ಮಗನನ್ನು ಪಡೆದ ಹಿಗ್ಗು ಅವರ್ಣನೀಯ. ಹೀಗೆ ಸುಖ ವಾಗಿ ಹಲವು ವರ್ಷಗಳು ಕಳೆದವು.

ಒಂದು ದಿನ ದಶರಥ ಚಕ್ರವರ್ತಿ ರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡಬೇಕು ಎಂದು ನೆನೆದ. ಅದಕ್ಕೆ ಮಹತ್ತರವಾದ ಕಾರಣವೂ ಇತ್ತು. ದಶರಥ ದುಃಸ್ವಪ್ನಗಳನ್ನು ಕಂಡ. ಆ ದುಃಸ್ವಪ್ನಗಳನ್ನು ಕಂಡವನಿಗೆ ಒಂದು ವಾರದಲ್ಲಿ ಮರಣ ಭಯ. ಆದ್ದರಿಂದ ಶೀಘ್ರವಾಗಿ ರಾಮನಿಗೆ "ಯೌವರಾಜ್ಯ ಪಟ್ಟಾಭಿಷೇಕವನ್ನು ಮಾಡಬೇಕು ಎಂದು ಯೋಚಿಸಿದ. ಅದರಂತೆ ಮಂತ್ರಿಗಳನ್ನೂ, ಪುರೋಹಿತರನ್ನೂ, ಸಾಮಂತರಾಜರನ್ನೂ ಪ್ರಜಾಪ್ರಮುಖರನ್ನೂ ಒಳಗೊಂಡ ಸಭೆಯನ್ನು ಸೇರಿಸಿದ.

ದಶರಥ ಎದ್ದು ನಿಂತ. ಎಲ್ಲರಿಗೂ ವಿನಯದಿಂದ ಕೈಮುಗಿದ.

'ನನ್ನ ಪ್ರೀತಿಯ ಪ್ರಜೆಗಳೇ, ಅರವತ್ತುಸಾವಿರ ವರ್ಷಗಳಿಂದ ರಾಜ್ಯ ಪರಿಪಾಲನೆ ಮಾಡಿದೆ. ಪ್ರಜಾಸೇವೆ ಮಾಡಿದೆ. ನನ್ನ ತಲೆಕೂದಲು ಬೆಳ್ಳಗಾಗಿದೆ. ನನ್ನ ತಲೆಕೂದಲು ಹೇಗೆ ಬೆಳ್ಳಗಾಯಿತು. ಗೊತ್ತೇ ನಿಮಗೆ ? ಈ ಶ್ವೇತಚ್ಛತ್ರದ ನೆರಳಿನಲ್ಲಿ ಈ ಅರವತ್ತುಸಾವಿರ ವರುಷಗಳೂ ಕಳೆದೆ. ಈ ಬೆಳ್ಗೊಡೆಯ ಬಿಳುಪು ನನ್ನ ತಲೆಕೂದಲನ್ನೂ ಬೆಳ್ಳಗಾಗಿಸಿತು. ನಾನು ಸೋತಿದ್ದೇನೆ. ಈಗ ನಿಮ್ಮನ್ನು ರಕ್ಷಿಸಲು ನನ್ನ ಜ್ಯೇಷ್ಠಪುತ್ರ ರಾಮನನ್ನು ಯುವರಾಜನನ್ನಾಗಿ ಮಾಡಬೇಕೆಂದಿದ್ದೇನೆ. ಹದಿನಾಲ್ಕು ಲೋಕಗಳನ್ನೂ ಆಳುವ ಸಾಮರ್ಥ್ಯವುಳ್ಳವ ಅವನು ಅಂಥ ಭುವನಾಭಿರಾಮನನ್ನು ನಿಮ್ಮ ಯುವರಾಜನನ್ನಾಗಿ ಮಾಡಬೇಕೆಂದಿದೇನೆ. ಅದಕ್ಕಾಗಿ ನಿಮ್ಮ ಅನುಮತಿಯನ್ನು ಕೋರು ತ್ತಿದೇನೆ" ಎಂದು ಹೇಳಿ ಕುಳಿತ.

ಸಭೆಯಲ್ಲಿ ಕಲಕಲ ಶಬ್ದ ಮೊದಲಾಯಿತು. ಎಲ್ಲರೂ ಏಕ ಕಂಠದಿಂದ ಕೂಗಿದರು. "ಚಕ್ರವರ್ತಿ, ನೀ ಹೇಳುವುದು ಸರಿ. ನಮಗೆ ರಾಮನೇ ಬೇಕು. ರಾಮನೇ ನಮ್ಮ ರಾಜ. ಬೇಗ ಅವನಿಗೆ ಪಟ್ಟವನ್ನು ಕಟ್ಟು" ಎಂದರು.

ವಾಲ್ಮೀಕಿ ಹೇಳುತ್ತಾರೆ :

**ಇಚ್ಛಾಮೋಹಿ ಮಹಾಭಾಗಂ ರಘುವೀರಂ ಮಹಾಬಲಂ**

"ನಾವೆಲ್ಲ ಮಹಾಭಾಗ್ಯವಂತನಾದ ರಘುವೀರನನ್ನು ಬಲಾಢ್ಯನಾದ ರಾಮನನ್ನು ರಾಜನನ್ನಾಗಿ ಆಶಿಸುತ್ತೇವೆ. ತಡಮಾಡದೆ ರಾಮನಿಗೆ ಪಟ್ಟಕಟ್ಟು. ಪಟ್ಟವನ್ನು ಕಟ್ಟಿಸಿಕೊಂಡ ಮೇಲೆ ಆನೆಯನ್ನೇರಿ ಬರುವ ಆ ರಾಮನನ್ನು ಕಾಣಲು ಕಂಗಳು ತವಕಿಸುತ್ತಿವೆ" ಎಂದು ಎಲ್ಲರೂ ಒಕ್ಕೊರಲಿನಿಂದ ದನಿಗೂಡಿಸಿದರು.

ದಶರಥ ಮನಸ್ಸಿನಲ್ಲಿ ಬಹಳ ಸಂತೋಷಪಟ್ಟ. ತನಗಿಂತ ತನ್ನ ಮಗ ಜನರ ಮೆಚ್ಚಿಗೆಯನ್ನು ಹೆಚ್ಚಾಗಿ ಗಳಿಸಿದನಲ್ಲ ಎಂದು ಹಿಗ್ಗಿದ. ಆದರೆ ಮೇಲೆ-ಮಾತ್ರ ಸ್ವಲ್ಪಮಟ್ಟಿಗೆ ದುಃಖಿತನಾದವನಂತೆ ಹೇಳಿದ. "ಪ್ರಜೆಗಳೇ, ನಿಮ್ಮ ಮಾತು ನನಗೆ ಅಚ್ಚರಿಯುಂಟುಮಾಡುತ್ತಿದೆ. ನೀವು ರಾಮನನ್ನು ಈ ರೀತಿ ಇಚ್ಛಿಸುವುದು ನನಗೆ ಸಂತೋಷವೇ. ಆದರೆ, ನೀವು ಇಷ್ಟೊಂದು ತವಕ ಪಡುವುದನ್ನು ಕಂಡರೆ ಕೊಲೆಗಡುಕನ ಕೈಯಿಂದ ತಪ್ಪಿಸಿಕೊಳ್ಳಲು ಯತ್ನಿಸುವಂತೆ ಇದೆಯಲ್ಲ. ನೀವೇಕೆ ನನ್ನಿಂದ ಬಿಡುಗಡೆ ಹೊಂದಲು ಇಷ್ಟೊಂದು ಕಾತುರರಾಗಿದ್ದೀರಿ. ನಾನೇನು ತಪ್ಪು ಮಾಡಿದೆ? ನಿಮ್ಮನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವೆ? ನನ್ನಿಂದ ನಿಮಗೆ ಏನು ಅಪಚಾರ ಆಗಿದೆ? ಹೇಳಿ" ಎಂದು ಕೇಳಿದ.

ಪ್ರಜಾಪ್ರತಿನಿಧಿ ಒಬ್ಬ ಎದ್ದು ನಿಂತ. "ರಾಜಾ, ನೀನು ನಮ್ಮನ್ನು ಅರವತ್ತು ಸಾವಿರ ವರ್ಷಗಳೂ ಚೆನ್ನಾಗಿಯೇ ನೋಡಿಕೊಂಡೆ. ಯಾವ ತಪ್ಪನ್ನೂ ನೀ ಮಾಡಲಿಲ್ಲ. ಆದರೆ ಒಂದೇ ಒಂದು ತಪ್ಪು ಮಾಡಿದೆ. ಯಾವುದು ಎಂದರೆ ನಿನಗಿಂತ ಗುಣಾಢ್ಯನಾದ ಅಪ್ರತಿಮ ಬಲಾಢ್ಯನನ್ನು ಪುತ್ರನನ್ನಾಗಿ ಪಡೆದುದೇ. ರಾಜಾ, ನಿನ್ನ ಮಗ ಗುಣದಲ್ಲಿ, ಶೀಲದಲ್ಲಿ, ಆಚಾರದಲ್ಲಿ, ನಡೆಯಲ್ಲಿ, ನುಡಿಯಲ್ಲಿ, ವೀರ್ಯದಲ್ಲಿ, ಬುದ್ಧಿಯಲ್ಲಿ, ಎಲ್ಲದರಲ್ಲೂ ನಿನ್ನನ್ನು ಮೀರಿಸಿದಾನೆ. ನಿನ್ನ ಮಗನನ್ನು ಏಕೆ ರಾಜನನ್ನಾಗಿ ಇಚ್ಛಿಸುತ್ತೇವೆ ಬಲ್ಲೆಯಾ? ಅವನಂಥ ಪ್ರಜಾನುರಾಗಿ, ಪ್ರಜಾರಂಜಕ ಅಪರೂಪ.

ವೀರ್ಯದಲ್ಲಿ ಇಂದ್ರನನ್ನು, ತೇಜದಲ್ಲಿ ಅಗ್ನಿಯನ್ನು, ಬುದ್ಧಿಯಲ್ಲಿ ಬೃಹಸ್ಪತಿಯನ್ನು, ಸೌಂದರ್ಯದಲ್ಲಿ ಮನ್ಮಥನನ್ನು, ಆಚಾರದಲ್ಲಿ ಬ್ರಹ್ಮನನ್ನು, ಕ್ಷಮೆಯಲ್ಲಿ ಭೂಮಿಯನ್ನು, ಪರಾಕ್ರಮದಲ್ಲಿ ಕಾರ್ತಿಕೇಯನನ್ನು, ಔದಾರ್ಯದಲ್ಲಿ ಸಾಗರವನ್ನು ಮೀರಿಸಿದಾನೆ ನಿನ್ನ ಮಗ ರಾಮ. ಸದಾ ಪ್ರಜೆಗಳ ಹಿತವನ್ನು ಚಿಂತಿಸುವುದೇ ಅವನ ಚಿಂತೆಯಾಗಿದೆ. ಇಂಥವನನ್ನು ಎಂದಿಗೆ ನಾಥನನ್ನಾಗಿ ಪಡೆದೇನೊ ಎಂದು ಭೂದೇವಿ ತವಕಿಸುತ್ತಿದಾಳೆ. ಚಾತಕಪಕ್ಷಿ ಮಳೆಗಾಗಿ ಕಾತರಿಸುವಂತೆ, ನಾವು ರಾಮನನ್ನು ರಾಜನನ್ನಾಗಿ ಕಾಣಲು ಕಾತರಿಸುತ್ತಿದ್ದೇವೆ; ಹಂಬಲಿಸುತ್ತಿದ್ದೇವೆ. ಎಲ್ಲ ಪ್ರಜೆಗಳೂ ತಮತಮಗೆ ಇಷ್ಟವಾದ ದೈವಗಳನ್ನು ಬೇಡಿಕೊಳ್ಳುತ್ತಾ "ದೇವರೆ! ಬೇಗ ರಾಮನೇ ರಾಜನಾಗುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸುತ್ತಿದಾರೆ. ಶ್ರೇಷ್ಠವಾದ ಇಕ್ಷ್ವಾಕು ವಂಶತಿಲಕನೆನಿಸಿದ ರಾಮ. ಪಟ್ಟಾಭಿಷಿಕ್ತನಾಗಿ ಶತ್ರುಂಜಯ ಎಂಬ ಪಟ್ಟದ ಆನೆಯ ಅಂಬಾರಿಯಲ್ಲಿ ಕುಳಿತು ಸಕಲ ವೈಭವಗಳೊಂದಿಗೆ ರಾಜಮಾರ್ಗದಲ್ಲಿ ಮೆರವಣಿಗೆಯಲ್ಲಿ ಬರುವುದನ್ನು ಕಾಣಬೇಕೆಂದಿದೇವೆ. ಅಂಥ ಮನೋಹರನಾದ ರಾಮನನ್ನು ಕಾಣದ ಮೇಲೆ ಈ ಕಣ್ಣುಗಳು ಏಕೆ? ಕಣ್ಣುಗಳನ್ನು ಪಡೆದದ್ದಕ್ಕೆ ರಾಮನ ದೃಷ್ಟಿಯಾದರೂ ನಮ್ಮ ಮೇಲೆ ಬೀಳಬೇಕು; ಇಲ್ಲವೆ ನಾವಾದರೂ ರಾಮನನ್ನು ದೃಷ್ಟಿಸಬೇಕು. ಇಲ್ಲದಿದ್ದರೆ ಜನ್ಮ ವ್ಯರ್ಥ ಎಂದು ಹೇಳುತ್ತಿದಾರೆ. ಇಂಥ ಆದರ್ಶ

ಗುಣಗಳಿಂದ ರಾಮ ನಮ್ಮೆಲ್ಲರ ಹೃದಯವನ್ನೂ ಗೆದ್ದಿದ್ದಾನೆ. ಅಂದಮೇಲೆ ನಾವಲ್ಲ ರಾಮನನ್ನು ರಾಜನನ್ನಾಗಿ ಆಶಿಸುವುದರಲ್ಲಿ ತಪ್ಪೇನಿದೆ?' ಎಂದು ಕೇಳಿದ.

ಪ್ರಜೆಗಳ ಮಾತನ್ನು ಕೇಳಿ ದಶರಥ ಬಹಳ ಸಂತೋಷಪಟ್ಟ. ಇಂಥ ಗುಣಗಣಿ ತನಗೆ ಮಗನಾದನಲ್ಲಾ ಎಂದು ಹೆಮ್ಮೆ ಪಟ್ಟ. ರಾಮನನ್ನು ಕರೆತರುವಂತ ಹೇಳಿದ ಬರುತ್ತಿರುವ ರಾಮನನ್ನು ನೋಡಿದ ದಶರಥನ ಹಿಗ್ಗು ಅಷ್ಟಿಷ್ಟಲ್ಲ. ಹೇಗೆ ಬಂದ ರಾಮ? ವಾಲ್ಮೀಕಿ ಹೇಳುತ್ತಾರೆ

**ರಾಮಂ ಇಂದೀವರಶ್ಯಾಮಂ ಕಂದರ್ಪ ಸದೃಶ ಪ್ರಭವಮ್ ।**
**ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿ ಚಿತ್ತಾಪಹಾರಿಣಂ ॥**
**ಗಂಧರ್ವರಾಜಪ್ರತಿಮಂ ಅತೀವ ಪ್ರಿಯದರ್ಶನಂ ।**
**ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿ ಚಿತ್ತಾಪಹಾರಿಣಂ ॥**

ಎಂದು ಮೇಲೆ ಮೇಲೆ ರಾಮನ ರೂಪ, ಗುಣ ಔದಾರ್ಯವನ್ನೇ ವರ್ಣಿಸುತ್ತಾರೆ.

ಚಿತ್ರರಥನೆಂಬ ಗಂಧರ್ವರಾಜನನ್ನೂ ಮೀರಿಸುವ ಅಪ್ರತಿಮವಾದ ಸೌಂದರ್ಯ ರಾಮನದು. ಇಂಥ ರೂಪವುಳ್ಳವ, ತನ್ನ ರೂಪವನ್ನು ಎಲ್ಲರೂ ಕಾಣಲಿ, ಎಲ್ಲರೂ ಅನುಭವಿಸಲಿ ಎಂಬ ಉದಾರಭಾವದಿಂದ ತೆರೆದ ರಥದಲ್ಲೇ ಬಂದನಂತೆ. ಆಚಾರ್ಯರು ರಾಮನ ಔದಾರ್ಯಗುಣವನ್ನು ಅನುಭವಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ "ತನ್ ಸೌಂದರ್ಯತ್ತೈ ವೆಳಿಪ್ಪಡುತ್ತುವದೇ ಔದಾರ್ಯಂ" ಎಂದಿದಾರೆ.

ನಿಷ್ಕಳಂಕವಾದ ಸೌಂದರ್ಯ ಕಣ್ಣಿಗೆ, ಮನಸ್ಸಿಗೆ ಆನಂದ ಉಂಟುಮಾಡುತ್ತದೆ. ರಾಮನ ಸೌಂದರ್ಯವನ್ನು ಸವಿಯುವುದರಿಂದ ತಾಪ ಶಾಪ ಎರಡೂ ನಾಶವಾಗುತ್ತದೆ. "ಎಲ್ಲರೂ ತನ್ನ ಸೌಂದರ್ಯವನ್ನು ಕಾಣಲಿ ಎಂದು ಬಂದನಲ್ಲಾ, ಇದೇ ಅವನ ಔದಾರ್ಯ" ಎಂದರು ಆಳ್ವಾರ್.

ರಾಮ ಬಂದೊಡನೇ ದಶರಥನ ಪಾದಗಳನ್ನು ಹಿಡಿದು ನಮಸ್ಕರಿಸಿದ. ಆಶೀರ್ವದಿಸಿದ ದಶರಥ. "ಅಪ್ಪಾ ರಾಮ, ನಿನಗೆ ನಾಳೆ ಪುಷ್ಯನಕ್ಷತ್ರದಲ್ಲಿ ಯೌವರಾಜ್ಯಾಭಿಷೇಕ ಮಾಡಬೇಕೆಂದಿದೇನೆ. ನೀನು ಯುವರಾಜನಾಗುವಿ" ಎಂದ. "ಅಪ್ಪಾ, ನೀವು ಹೇಳಿದಂತೆ" ಎಂದ ರಾಮ ವಿನಯದಿಂದ. "ರಾಮ, ನೀನು ಒಳ್ಳೆಯ ನಡತೆಯುಳ್ಳವನೇ ಸರಿ. ಇನ್ನು ಮುಂದೆ, ಯುವರಾಜನಾದ ಮೇಲೆ ಇನ್ನೂ ಜಾಗರೂಕನಾಗಿರು ಕಾಮ ಕ್ರೋಧಗಳನ್ನು ಜಯಿಸಬೇಕು. ಜಿತೇಂದ್ರಿಯನಾಗಿರಬೇಕು. ದುಷ್ಟರನ್ನು ದೂರದಲ್ಲಿಡಬೇಕು ಎಲ್ಲರಲ್ಲೂ ಸರಿಯಾಗಿ ನಡೆದುಕೊಳ್ಳಬೇಕು" ಎಂದು ಬುದ್ಧಿವಾದ ಹೇಳಿದ.

ತನಗೆ ಯೌವರಾಜ್ಯಾಭಿಷೇಕವಾಗುವ ವಾರ್ತೆಯನ್ನು ಮೊದಲು ತಾಯಿ ಕೌಸಲ್ಯೆಗೆ ತಿಳಿಸಬೇಕು ಎಂದು ಕೌಸಲ್ಯೆಯ ಅಂತಃಪುರಕ್ಕೆ ಬಂದ ರಾಮ. ಆ ವೇಳೆಗೆ ರಾಮನ ಹಿತಾಕಾಂಕ್ಷಿಗಳು ಕೌಸಲ್ಯೆಗೆ ಈ ಸಮಾಚಾರವನ್ನು ತಿಳಿಸಿದ್ದರು. ಅಂತಃಪುರಕ್ಕೆ ಬಂದು ಕೌಸಲ್ಯೆಗೆ ನಮಸ್ಕರಿಸಿದ ರಾಮ.

"ಮಗೂ, ನಿನಗೆ ಯೌವರಾಜ್ಯಾಭಿಷೇಕವಂತೆ ನಾಳೆ–ನಿಜವೇ" ಎಂದು ಸಂತೋಷದಿಂದ ಕೇಳಿದಳು ಕೌಸಲ್ಯೆ.

"ಅಹುದು, ನಾಳೆ ನನಗೆ ಯೌವರಾಜ್ಯಾಭಿಷೇಕ ಮಾಡಬೇಕು ಎಂಬುದು ಅಪ್ಪನವರ ಇಚ್ಛೆಯಾಗಿದೆ ಅಮ್ಮ" ಎಂದ ರಾಮ.

ಆಳ್ವಾರ್ ಪರಮಾತ್ಮನ ಪರತತ್ವದ ಭಾವವನ್ನು ಅನುಭವಿಸುತ್ತಾ ಹೇಳುತ್ತಾರೆ. ರಾಮ ಇಲ್ಲಿ ಕೌಸಲ್ಯೆಗೆ ಹೀಗೆ ಹೇಳುವುದರಿಂದ ಪಟ್ಟಾಭಿಷೇಕ ಮಾಡಿಕೊಳ್ಳುವುದು ತನ್ನ ಇಚ್ಛೆಯಲ್ಲ, ಅಪ್ಪನ ಇಚ್ಛೆ ಎಂದು ತೋರಿಸಿ ತಾನು ಪರತತ್ವವೇ ಎಂಬುದನ್ನು ಪ್ರಕಾಶಪಡಿಸಿದ ಎಂದು ನುಡಿಯುತ್ತಾರೆ.

ಪಟ್ಟಾಭಿಷೇಕದ ಹಿಂದಿನ ರಾತ್ರಿ ವ್ರತ ಕೈಗೊಳ್ಳಬೇಕು. ಅದಕ್ಕಾಗಿ ರಾಮನ ಅರಮನೆಗೆ ಬಂದರು ವಶಿಷ್ಠರು. ರಾಮನನ್ನು ಸ್ನಾನಮಾಡುವಂತೆ ಹೇಳಿದರು. ರಾಮನ ಕೈಯನ್ನು ಹಿಡಿದು ಕಂಕಣ ಕಟ್ಟಿದರು. ಇಲ್ಲಿ ಒಂದು ಸಂಶಯ ಸಾಮಾನ್ಯವಾಗಿ ಎಲ್ಲರನ್ನೂ ಕಾಡುತ್ತದೆ. "ತ್ರಿಕಾಲ ಜ್ಞಾನಿಗಳೂ, ತಪಸ್ವಿಯೂ, ಬ್ರಹ್ಮನಿಷ್ಠರೂ ಆದ ವಶಿಷ್ಠರು ಕಂಕಣ ಕಟ್ಟಿ, ಲಗ್ನವಿಟ್ಟಮೇಲೆ ಅದು ತಪ್ಪಿಹೋಯಿತಲ್ಲ" ಎಂಬುದೆ ಆ ಸಂಶಯ. ಅದನ್ನು ಹೀಗೆ ನಿವಾರಿಸುತ್ತಾರೆ ಜ್ಞಾನಿಗಳು. ವಶಿಷ್ಠರು ರಾಮನನ್ನು ಕಂಕಣ ಕಟ್ಟಿಸಿಕೊಳ್ಳಲು ಕೈ ನೀಡು ಎಂದರು. ರಾಮನ ಕೈಗಳ ಸೌಂದರ್ಯವನ್ನು ನೋಡುತ್ತ ಹಾಗೇ ಮೈಮರೆತರು. ಕಂಬರು ಸೀತಾಸ್ವಯಂವರ ಕಾಲದಲ್ಲಿ ರಾಮನ ಸೌಂದರ್ಯವನ್ನು ವರ್ಣಿಸುತ್ತಾ ಹೇಳಿದರು. "ತೋಳ್ ಕಂಡಾರ್ ತೋಳೇ ಕಂಡಾರ್" ಎಂದು. ಅಂದರೆ ರಾಮನ ತೋಳನ್ನು ನೋಡಿದವರು ತೋಳಿನ ಸೌಂದರ್ಯವನ್ನೇ ಸವಿಯುತ್ತಾ ಇದ್ದುಬಿಟ್ಟರಂತೆ. ಕಾಲನ್ನು ನೋಡಿದವರು ಕಾಲನ್ನೇ ನೋಡುತ್ತಾ ನಿಂತರಂತೆ. ಹೀಗೆ ರಾಮನ ಒಂದೊಂದು ಅವಯವದ ಸೌಂದರ್ಯವನ್ನೇ ಸವಿಯುತ್ತ ಬೇರೆ ಕಡೆಗೆ ದೃಷ್ಟಿಯೇ ಹೊರಳದಂತೆ ಆಗಿಬಿಟ್ಟಿತು. ಯಾರು ಯಾರು ಯಾವ ಯಾವ ಅಂಗವನ್ನು ನೋಡುತ್ತಿದ್ದರೋ ಅಲ್ಲಲ್ಲೇ ಅವರವರ ದೃಷ್ಟಿ ನಟ್ಟುಹೋಯಿತು. ಕಣ್ಣನ್ನು ಅಲ್ಲಿಂದ ತಿರುಗಿಸಲು ಆಗಲೇ ಇಲ್ಲ. ಹಾಗಾಗಿ ರಾಮನನ್ನು ಸಂಪೂರ್ಣವಾಗಿ ನೋಡಲು ಯಾರಿಗೂ ಆಗಲಿಲ್ಲ. ಅಂಥ ಸೌಂದರ್ಯ ರಾಮನದು, ಎಂದರು ಕಂಬರು

ಕಂಕಣ ಕಟ್ಟುವಾಗ ವಸಿಷ್ಠರಿಗೂ ಹಾಗೆಯೇ ಆಯಿತು. ರಾಮನ ಸುಕೋಮಲವಾದ ಕೈಯನ್ನು ಹಿಡಿದುಕೊಂಡರು. ಅವನ ಕೈಯಲ್ಲಿದ್ದ ರೇಖಾವಿನ್ಯಾಸವನ್ನು ನೋಡುತ್ತಾ ಮೈಮರೆತರು. "ಇಕ್ಷ್ವಾಕು ವಂಶದ ರಾಜರನ್ನೆಲ್ಲ ನೋಡಿದೇನೆ. ಯಾರ ಕೈಯ್ಯಲ್ಲೂ ಈ ವಿಶಿಷ್ಟ ರೀತಿಯ ರೇಖೆಗಳು ಕಂಡುಬರಲಿಲ್ಲವಲ್ಲಾ" ಎಂದು ಅಚ್ಚರಿಯಿಂದ ನೋಡುತ್ತಲೇ ಇದ್ದುಬಿಟ್ಟರು. ಕಂಕಣ ಕಟ್ಟುವುದಕ್ಕಾಗಿ ಇಟ್ಟಿದ್ದ ಲಗ್ನ ಮೀರಿತು. ಅದಕ್ಕೇ ರಾಮನಿಗೆ ಪಟ್ಟಾಭಿಷೇಕ ತಪ್ಪಿತು, ಎಂದು ಚಮತ್ಕಾರವಾಗಿ ಹೇಳಿದಾರೆ ಜ್ಞಾನಿಗಳು.

**ಗತೇಪುರೋಹಿತೇ ರಾಮಂ ಸ್ನಾತಃ ನಿಯತಮಾನಸಃ ।**

**ಸಹಪತ್ನ್ಯಾ ವಿಶಾಲಾಕ್ಷ್ಯಾ ನಾರಾಯಣಮುಪಾಗಮತ್ ॥**

ಹೀಗೆ ವಶಿಷ್ಠರು ಹೋದ ನಂತರ ರಾಮನೂ ವ್ರತಬದ್ಧನಾಗಿ ವಿಶಾಲಾಕ್ಷಿಯಾದ ಸೀತೆಯೊಂದಿಗೆ ಕುಲದೈವವಾದ ನಾರಾಯಣ–ಅಂದರೆ ರಂಗನಾಥನನ್ನು ಶರಣುಹೋದರು. ಇಲ್ಲಿ ವಿಶಾಲಾಕ್ಷ್ಯಾ ಎಂಬ ಪದಕ್ಕೆ ಒಂದ ವಿಶೇಷಾರ್ಥ ಇದೆ. ಸಿದ್ಧಾಂತ ರೀತ್ಯಾ ಕುಲದೈವವನ್ನು ನೋಡುತ್ತಲೇ ಸೀತೆಗ ಮುಖವೆಲ್ಲ ಕಣ್ಣಾಯಿತು ಎಂದಿದಾರೆ. ತನ್ನಿಲುಶೀರ್ಯ ಕೋಯಿಲಾಳ್ವಾರೈ ಸೇವಿಕ್ಕ ಪುಹ ಪಿರಾಟ್ಟಿಕ್ಕು ಮುಖಮೆಲ್ಲ ಕಣ್ಣಾಚ್ಚು ... ಬೇರೆ ವ್ಯಾಖ್ಯಾನಕಾರರು ಬೇರೆ

ಅರ್ಥವನ್ನೂ ಮಾಡಿದಾರೆ. ವಿಶಾಲಾಕ್ಷ್ಯಾ ಅನ್ನುವಾಗ ತನ್ನ ಅಭಿಪ್ರಾಯವನ್ನು ಸೀತೆ ವ್ಯಕ್ತ ಮಾಡಿದಳು ಎಂದು. ರಾಮಪಟ್ಟಾಭಿಷೇಕ ನಿಶ್ಚಯ ಆಯಿತು. ಇದು ನಡೆದರೆ ಭಗವತ್ ಸಂಕಲ್ಪ ನಡೆಯದೇ ಹೋಗಬಹುದು. ಅದಕ್ಕಾಗಿ ಸೀತೆ ತನ್ನ ವಿಶಾಲ ದೃಷ್ಟಿಯಿಂದ "ನೀನೇ ರಾಮನಾಗಿ ಬಂದು, 'ಆತ್ಮಾನಂ ಮಾನುಷಂ ಮನ್ಯೇ' ಎಂದು ಹೇಳಿ ನಿನ್ನ ಸಂಕಲ್ಪವನ್ನೇ ಮರೆತೆಯಾ ? ಇದಾಗದಂತೆ ಮಾಡು" ಎಂದು ರಂಗನಾಥನಿಗೆ ಜ್ಞಾಪಿಸುತ್ತಾಳೆ।

ವಶಿಷ್ಠರು ರಾಮನಿಗೆ ಕಂಕಣವನ್ನು ಕಟ್ಟಿದರು. ಕುಲದೈವವಾದ ರಂಗನಾಥನನ್ನು ಸೇವಿಸುವಂತೆ ಹೇಳಿದರು.

ಆ ರಾತ್ರಿ ಸೀತಾರಾಮರು ಬ್ರಹ್ಮಚರ್ಯೆಯಿಂದ ನಿಷ್ಠೆಯುಳ್ಳವರಾಗಿ ಶ್ರೀರಂಗನಾಥನನ್ನು ಸೇವಿಸಿದರು.

ರಾಮನಿಂದ ಸೇವಿಸಲ್ಪಟ್ಟವ ಶ್ರೀರಂಗನಾಥ. ರಾಮನೇ 'ದೈವ' ಎನಿಸಿಕೊಂಡವ. ಇಂಥ ದೇವನಿಂದ ಸೇವಿಸಿಕೊಂಡವನಾದ್ದರಿಂದ ಶ್ರೀರಂಗನಾಥ "ದೇವರ ದೇವ" "ಪೆರಿಯ ಪೆರುಮಾಳ್" ಎನಿಸಿಕೊಂಡ.

ರಾಮನಿಗೆ ಪಟ್ಟಾಭಿಷೇಕ. ನಗರದ ಜನರಿಗೆ ಸಂಭ್ರಮವೋ ಸಂಭ್ರಮ. ಬೀದಿ ಬೀದಿಯೂ ತಳಿರು ತೋರಣಗಳಿಂದಲೂ, ಧ್ವಜ ಪತಾಕೆಗಳಿಂದಲೂ ಅಲಂಕೃತವಾಯಿತು. ಅಲ್ಲಲ್ಲೇ ನೃತ್ಯ ಗಾಯನ ಸಮಾರಂಭಗಳು ನಡೆಯತೊಡಗಿದವು.

ಈ ಸಂಭ್ರಮವನ್ನೆಲ್ಲ ನೋಡಿದಳು ಮಂಥರೆ. ಅವಳು ಕೈಕೇಯಿಯ ದಾಸಿ. ಕೈಕೇಯಿಯೊಡನೆ ತವರುಮನೆಯಿಂದ ಬಂದವಳು. ಅವಳಿಗೆ ಗೂನು ಬೆನ್ನು. ಗೂನು ಬೆನ್ನಿನಂತೆಯೇ ಬುದ್ಧಿಯೂ ವಕ್ರ. ವಾಲ್ಮೀಕಿ ಅವಳ ಹುಟ್ಟನ್ನು ವರ್ಣಿಸಲು ಇಷ್ಟಪಡದೆ "ಜ್ಞಾತಿದಾಸೀ ಯತೋಜಾತಾ" ಎಂದು ಬಿಟ್ಟರು. "ಎಲ್ಲಿ ಹುಟ್ಟಿದವಳೋ ಅವಳು" ಎಂದು ಬೇಸರದಿಂದ ಹೇಳಿದಾರೆ. ಅಂಥ ಗೂನಿ ಮಂಥರೆ ನಗರವು ಸಂಭ್ರಮದಿಂದಿರುವುದನ್ನು ಕಂಡಳು. ಅಲ್ಲೇ ಮಾಳಿಗೆಯ ಮೇಲೆ ಸಂತೋಷದಿಂದ ನಿಂತಿದ್ದ ಕೌಸಲ್ಯೆಯ ದಾಸಿಯನ್ನು ಕಂಡಳು.

"ಏನೇ ಇದು ? ಏಕೆ ನಗರವೆಲ್ಲ ಅಲಂಕೃತವಾಗುತ್ತಿದೆ ! ಹೇಳು" ಎಂದು ಕೇಳಿದಳು.

ಕೌಸಲ್ಯೆಯ ದಾಸಿ ಸಂತೋಷದಿಂದ "ನಮ್ಮ ರಾಮಚಂದ್ರನಿಗೆ ನಾಳೆ ಯೌವರಾಜ್ಯಾಭಿಷೇಕ. ಅದಕ್ಕಾಗಿ ಈ ಸಡಗರ" ಎಂದಳು.

'ರಾಮನಿಗೆ ರಾಜ್ಯಾಭಿಷೇಕ' ಎಂದು ಕೇಳಿದೊಡನೆಯೇ ಅವಳ ಹೊಟ್ಟೆಯಲ್ಲಿ ಹುಳಿ ಕಿವುಚಿದಂತಾಯಿತು. ಅದೇಕೋ ಅವಳಿಗೆ ಮೊದಲಿನಿಂದ ರಾಮನನ್ನು ಕಂಡರೆ ಆಗದು. ರಾಮನಿಗೆ ಕೇಡು ಮಾಡಲು ಸಮಯ ಸಿಕ್ಕೀತೇ ಎಂದು ಕಾಯುತ್ತಿದ್ದಳು. ಈಗ ಅವಳಿಗೆ ಸರಿಯಾದ ಅವಕಾಶ ಒದಗಿತು.

ತನ್ನ ಗೂನನ್ನೂ ಲಕ್ಷ್ಯಮಾಡದೆ ಒಂದೇ ಇಳಿತದಲ್ಲಿ ಇಳಿದಳು ಮಾಳಿಗೆಯನ್ನು. ಕೈಕೇಯಿಯ ಅಂತಃಪುರವನ್ನು ಪ್ರವೇಶಿಸಿದಳು. ಅಲ್ಲಿ ಮಿಂಚಿನ ಬಳ್ಳಿಯಂತೆ ಕೈಕೇಯಿ ಸೊಗಸಾದ ಮೃದು ಪರ್ಯಂಕದಲ್ಲಿ ಒರಗಿದ್ದಳು. ಮಂಥರೆ ಬಂದವಳೇ "ಹೇ ಮೂಢೆ ಕೈಕೇಯಿ ! ಅನರ್ಥ ಆಗುತ್ತದೆ. ಒರ್ಗದ್ದೀಯಲ್ಲಾ ! ಏಳು - ಏಳು" ಎಂದಳು.

ಕೈಕೇಯಿ ದಿಗ್ಭ್ರಾಂತಳಾದಳು, ಒಂದು ಕ್ಷಣ. "ತನ್ನನ್ನು, ದಶರಥನ ಮೋಹದ ರಾಣಿ

ಯನ್ನು ಹೀಗೆ ತಿರಸ್ಕರಿಸಿ ಮಾತನಾಡುವ ಧೈರ್ಯ, ಎದೆಗಾರಿಕೆ ಯಾರಿಗುಂಟು" ಎಂದು ತಿರುಗಿದಳು. ನೋಡಿದಳು ಮಂಥರೆಯನ್ನು. ಮಂಥರೆ ಅವಳಿಗೆ ಬೇಕಾದವಳು. ಸಣ್ಣ ವಯಸ್ಸಿನಿಂದ ಎತ್ತಿ ಆಡಿಸಿದವಳು. ಅವಳಿಗೆ ತನ್ನಲ್ಲಿ ಸಲಿಗೆ. ಮಂಥರೆಯನ್ನು ಕೇಳಿದಳು. "ಏಕೆ ಹೀಗೆ ಒರಲುತ್ತಿರುವೆ ಮಂಥರೆ ! ಏನಾಗಿ ಹೋಯಿತು ಈಗ ?"

"ಏನಾಗಿ ಹೋಯಿತು ? ಬಹಳ ಚೆನ್ನಾಗಿದೆ. ಆ ರಾಮನಿಗೆ ನಾಳೆ ಪಟ್ಟಾಭಿಷೇಕವಂತೆ."

"ಆ್ಞ-ಏನು !? ಏನು ಹೇಳುತ್ತಿರುವೆ ಮಂಥರೆ ! ನನ್ನ ರಾಮನಿಗೆ ನಾಳೆ ಪಟ್ಟಾಭಿಷೇಕವೇ? ಎಂಥ ಮಂಗಳವಾರ್ತೆಯನ್ನು ನನಗೆ ಹೇಳಿದೆ. ಇದೋ ತೆಗೆದುಕೋ" ಎನ್ನುತ್ತಾ ತನ್ನ ಕತ್ತಿನಲ್ಲಿದ್ದ ಅನರ್ಘ್ಯ ಹಾರವೊಂದನ್ನು ತೆಗೆದುಕೊಟ್ಟಳು.

"ಛೀ ಮೂಢೆ ! ಈ ಹಾರ ನನಗೇಕೆ ಬೇಕು ?" ಎನ್ನುತ್ತಾ ಅದನ್ನು ದೂರ ಬಿಸುಟಳು ಆ ಗೂನಿ.

"ನಿನಗೆ ಏನಾಗಿದೆ ಮಂಥರೆ ? ಏಕೆ ಹೀಗೆ ಧುಮುಗುಟ್ಟುತ್ತಿರುವೆ ? ರಾಮನಿಗೆ ಪಟ್ಟಾಭಿಷೇಕ ಎಂದರೆ ನನಗೆ ಸಂತೋಷವಲ್ಲವೇ ? ರಾಮ ಅಂಥ ಗುಣಗಳ ಗಣಿ – ತನ್ನ ತಾಯಿಗಿಂತ ಹೆಚ್ಚಾಗಿ ನನಗೆ ಉಪಚಾರ ಮಾಡುತ್ತಾನೆ ಅವನು – ಅವನ ಕಲ್ಯಾಣವೇ ನನ್ನ ಕಲ್ಯಾಣ !''

"ಹುಂ ! ಅವನ ಕಲ್ಯಾಣವೇ ನಿನ್ನ ಕಲ್ಯಾಣ. ಚೆನ್ನಾಗಿ ಹೇಳಿದೆ. ನಿನ್ನ ಮಂಕುಬುದ್ಧಿಗೆ ಏನು ಹೇಳಿದರೂ ಸಾಲದು. ರಾಮ ಉಪಚಾರ ಮಾಡುತ್ತಾನಂತೆ ! ಎಲ್ಲ ಠಕ್ಕು, ಮೋಸ. ನಾಳೆ ಆ ಕೌಸಲ್ಯೆಯ ಮಗನಿಗೆ ಪಟ್ಟಾಭಿಷೇಕ. ಅಂದರೆ ಕೌಸಲ್ಯೆ ರಾಜಮಾತೆ ಆಗುತ್ತಾಳೆ. ಎಲ್ಲರೂ ಅವಳನ್ನು ಪೂಜಿಸುತ್ತಾರೆ. ದಶರಥನಿಗೆ ಪ್ರಿಯಳಾದುದರಿಂದಲೇ ತಾನೇ ಅವಳ ಮಗನಿಗೆ ದಶರಥ ಪಟ್ಟ ಕಟ್ಟಲು ನಿಶ್ಚಯಿಸಿರುವುದು. ರಾಮ ರಾಜನಾಗಲಿ, ಅವನ ತಾಯಿ ರಾಜಮಾತೆಯಾಗಲಿ. ನೀನು ಮೂಲೆಯಲ್ಲಿ ದಾಸಿಯಂತೆ ಬಿದ್ದುಕೊಂಡಿರು ಎಂದು. ನಿನ್ನ ಮಗ ಭರತ ದಾಸಿಯ ಪುತ್ರನಾಗಿ ಬಿದ್ದಿರಲಿ, ಈ ಮೂರ್ಖತೆಗೆ ಏನು ಹೇಳುವುದು" ಎಂದು ವಿಷಯುಕ್ತವಾದ ಮಾತುಗಳನ್ನು ಕೈಕೇಯಿಯ ಕಿವಿಗಳಲ್ಲಿ ತುಂಬಿದಳು.

ಕೈಕೇಯಿ ಸ್ವತಃ ಸಾತ್ವಿಕಳಾದರೂ ದುಷ್ಟಳಾದ ಮಂಥರೆಯ ಪಿಸುಣಸುಡಿಗೆ ವಶಳಾದಳು. "ಈಗೇನು ಮಾಡಲಿ" ಎಂದು ಮಂಥರೆಯನ್ನೇ ಸಲಹೆ ಕೇಳಿದಳು.

"ಹಿಂದೆ ದೇವಾಸುರ ಯುದ್ಧಕಾಲದಲ್ಲಿ ನೀ ದಶರಥನಿಗೆ ಸಹಾಯಮಾಡಿದೆ. ಅದಕ್ಕೆ ಫಲವಾಗಿ ದಶರಥ ನಿನಗೆ "ಎರಡು ವರಗಳನ್ನು ಕೊಡುತ್ತೇನೆ" ಎಂದಿದ್ದ. ಆ ವರಗಳನ್ನು ಈಗ ಕೇಳು. ಮೊದಲು ನೀನು ಆಭರಣಗಳನ್ನೆಲ್ಲ ಕಳಚಿಡು. ತಲೆ ಕೆದರಿಕೊ. ಏಕವಸ್ತ್ರಧಾರಿಣಿಯಾಗಿ ಕೋಪಗೃಹವನ್ನು ಪ್ರವೇಶಿಸು. ದಶರಥ ಬರುತ್ತಾನೆ. ನಿನ್ನನ್ನು ಮಿದುನುಡಿಗಳಿಂದ ರಮಿಸುತ್ತಾನೆ. ಆದರೆ ಅವನ ಇನಿಮಾತುಗಳಿಗೆ ಮರುಳಾಗಬೇಡ. ಸ್ಥಿರಳಾಗಿರು. ದಶರಥನಿಂದ ರಾಮನ ಮೇಲೆ ಆಣೆಮಾಡಿಸಿಕೊ. ಆಮೇಲೆ ಕೇಳು ಎರಡು ವರಗಳನ್ನು. ಮೊದಲನೆಯ ವರದಿಂದ ರಾಮನಿಗೆ ಹದಿನಾಲ್ಕು ವರ್ಷಗಳು ವನವಾಸವನ್ನು ಕೇಳು. ಎರಡನೆಯ ವರದಿಂದ ಭರತನಿಗೇ ರಾಜ್ಯಾಭಿಷೇಕ ಆಗಬೇಕು ಎಂದು ಕೇಳು" ಎಂದು ಉಪಾಯ ಹೇಳಿಕೊಟ್ಟಳು.

ರಾಜ್ಯಕಾಮಳಾದ ಕೈಕೇಯಿ, ಮಂಥರೆ ಹೇಳಿದಂತೆಯೇ ಮಾಡಿದಳು. ಅಮೂಲ್ಯವಾದ ವಸ್ತ್ರಾಭರಣಗಳನ್ನು ಈಡಾಡಿದಳು. ತಲೆಯಲ್ಲಿದ್ದ ಸುಗಂಧವಾದ ಪುಷ್ಪವನ್ನು ಕಿತ್ತೆಸೆದಳು.

ಕೊಳಕು ಬಟ್ಟೆಯನ್ನು ಧರಿಸಿದಳು. ಕೋಪಗೃಹಕ್ಕೆ ಹೋಗಿ ನೆಲದ ಮೇಲೆ ಬಿದ್ದುಕೊಂಡಳು.

ಇತ್ತ ರಾಮನ ಯೌವರಾಜ್ಯಾಭಿಷೇಕಕ್ಕೆ ಸಕಲವನ್ನೂ ಸಿದ್ಧಮಾಡುವಂತೆ ಏರ್ಪಾಡು ಮಾಡಿ ದಶರಥ, "ತನ್ನ ಮೋಹದ ರಾಣಿಯಾದ ಕೈಕೇಯಿಗೆ ತಾನೇ ಹೋಗಿ ಈ ಶುಭ ಸಮಾಚಾರವನ್ನು ಹೇಳಬೇಕು" ಎಂದುಕೊಂಡು ಅವಳ ಅಂತಃಪುರವನ್ನು ಪ್ರವೇಶಿಸಿದ.

ಎಂದಿನಂತೆ ಕೈಕೇಯಿ ತನ್ನನ್ನು ಇದಿರುಗೊಳ್ಳದ್ದನ್ನು ಕಂಡ ದಶರಥನ ಮನಸ್ಸು ತಳಮಳಿಸಿತು. ದಾಸಿಯರನ್ನು ಕೇಳಿದ. ಅವರು ಮೌನವಾಗಿ ಕೋಪಗೃಹದತ್ತ ಕೈ ತೋರಿದರು. ಭ್ರಾಂತಚಿತ್ತನಾದ ದಶರಥ ಕೋಪಗೃಹವನ್ನು ಪ್ರವೇಶಿಸಿದ. ಅಲ್ಲಿ ನೆಲದ ಮೇಲೆ ಬಿದ್ದಿದ್ದ ಕೈಕೇಯಿಯನ್ನು ನೋಡಿದ. ಪುಣ್ಯ ಕ್ಷಯದಿಂದ ನಕ್ಷತ್ರ ಭೂಮಿಗೆ ಬೀಳುವಂತೆ ಬಿದ್ದಿದ್ದ ಅವಳನ್ನು ಕಂಡ. ಅವಳ ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡು ಮುಂಗುರುಳನ್ನು ನೇವರಿಸುತ್ತಾ ಮೃದುವಾಗಿ ಕೇಳಿದ "ನನ್ನ ಮುದ್ದು ರಾಣಿ, ಏಕೆ ಹೀಗೆ ಕೋಪ ನಿನಗೆ ? ನಿನಗೇನಾಯಿತು ? ಯಾರಾದರೂ ನಿನ್ನನ್ನು ಅವಮಾನಿಸಿದರೆ ? ನಿನಗೆ ಮೈ ಸರಿಯಿಲ್ಲವೆ ? ಏತಕ್ಕಾಗಿ ಹೀಗೆ ಇರುವೆ ? ನಿನಗಾಗಿ ಏನನ್ನಾದರೂ ಮಾಡಲು ಸಿದ್ಧನಿದ್ದೇನೆ ಎಂದು ನೀ ತಿಳಿಯೆಯಾ ? ನಿನಗಾಗಿ ಒಬ್ಬ ಬಡವನನ್ನು ಧನಿಕನಾಗಿಸಬಲ್ಲೆ, ಒಬ್ಬ ಧನಿಕನನ್ನು–ನೀ ಇಚ್ಛಿಸುವುದಾದರೆ–ನಿನ್ನ ತೃಪ್ತಿಗಾಗಿ ಬಡವನಾಗಿಸಬಲ್ಲೆ. ನಿನಗಾಗಿ ಏನನ್ನಾದರೂ ಮಾಡುತ್ತೇನೆ. ನಿನಗೇನು ಬೇಕು ಹೇಳು, ಕಣ್ಮಣಿ ! ರಾಮನ ಆಣೆಯಾಗಿ ನಿನ್ನಿಷ್ಟವನ್ನು ಪೂರೈಸುತ್ತೇನೆ, ಹೇಳು ಹೇಳು" ಎಂದ.

ವಾಲ್ಮೀಕಿ ಈ ಪ್ರಸಂಗವನ್ನು ವರ್ಣಿಸುತ್ತಾ ಹೇಳುತ್ತಾರೆ. "ಸವೃದ್ಧಃ ತರುಣೀಂ ಭಾರ್ಯಾಂ" ಎಂದು ! ದಶರಥ ವೃದ್ಧ. ಕೈಕೇಯಿಯಾದರೋ ಇನ್ನೂ ಯುವತಿ. ಕಾಮ ಚಾಪಲ್ಯಕ್ಕೆ ಒಳಗಾದ ದಶರಥ ಯುಕ್ತಾಯುಕ್ತವನ್ನು ವಿವೇಚಿಸದೆ ರಾಮನ ಮೇಲೆ ಆಣೆಯಿಟ್ಟು "ನಿನ್ನ ಇಷ್ಟವನ್ನು ಪೂರೈಸುತ್ತೇನೆ" ಎಂದು ವಚನ ಕೊಟ್ಟುಬಿಟ್ಟ.

ಕೈಕೇಯಿಯೂ ರಾಜ್ಯಕಾಮಳಾದಳು. ರಾಜ್ಯವನ್ನು ಬಯಸಿದಳು. ಆದರಿಂದ ವೈಧವ್ಯವನ್ನು ಪಡೆಯುವಂತಾದಳು. "ಕಾಮ" ಎಂಬುದು ಬಹಳ ಕೆಟ್ಟದ್ದನ್ನು ಮಾಡುತ್ತದೆ. "ಆಶೆ"ಯನ್ನು ತ್ಯಜಿಸಿದವರೇ ಧನ್ಯರು. ಅದನ್ನೇ ಶ್ರೀಕೃಷ್ಣ ಗೀತೆಯಲ್ಲಿ

"ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ" ಎಂದಿದಾನೆ. ಕಾಮವನ್ನು ಗೆಲ್ಲುವುದು ಬಹಳ ಕಷ್ಟ. ಇಲ್ಲಿ ದಶರಥನೂ ಒಂದು ರೀತಿಯ ಕಾಮಚಾಪಲ್ಯಕ್ಕೆ ಒಳಗಾದ, ಕೈಕೇಯಿಯೂ ರಾಜ್ಯಕಾಮಳಾದಳು. ಅಂಥ ಕಾಮವೇ ಮುಂದೆ ಅನರ್ಥ ಪರಂಪರೆಯ ಕಾರಣವಾಯಿತು.

ದಶರಥ ಶಪಥ ಮಾಡಿದ ನಂತರ ಕೈಕೇಯಿಯು ಎದ್ದು ಕುಳಿತಳು. "ಹಿಂದೆ ದೇವ–ದಾನವ ಯುದ್ಧಕಾಲದಲ್ಲಿ ಕೊಟ್ಟ ವರಗಳನ್ನು ಈಗ ಕೊಡು" ಎಂದಳು. "ಮೊದಲನೆಯ ವರದಿಂದ ಭರತನಿಗೆ ಯೌವರಾಜ್ಯಾಭಿಷೇಕ ಆಗಬೇಕು. ಎರಡನೆಯ ವರದಿಂದ, ಹದಿನಾಲ್ಕು ವರ್ಷಗಳು ರಾಮ ಜಟಾವಲ್ಕಲಧಾರಿಯಾಗಿ ಮುನಿವೇಷದಿಂದ ಕಾಡಿನಲ್ಲಿರಬೇಕು" ಎಂದು ಕೇಳಿದಳು.

ತಾನು ಎಲ್ಲಿ ಇದ್ದೇನೆ ಎಂಬುದನ್ನೇ ದಶರಥ ಮರೆತ. 'ಇದೇನು ಸ್ವಪ್ನವೊ ?' ಎಂಬ ಭ್ರಾಂತಿಗೊಳಗಾದ. ಕಾದ ಸೀಸವನ್ನು ಕಿವಿಯಲ್ಲಿ ಹುಯ್ದಂತಾಯಿತು. ಕಾಸಿದ ಕಬ್ಬಿಣದ ಶಲಾಕೆಯಿಂದ ಕಣ್ಣನ್ನು ತಿವಿದಂತಾಯಿತು. "ಹಾ" ಎನ್ನುತ್ತಾ ಹಾಗೇ ಭೂಮಿಯ ಮೇಲೆ

ಒರಗಿದ. ಅಚೇತನನಾದ. ಸ್ವಲ್ಪ ಹೊತ್ತು ಕಳೆಯಿತು. ಪ್ರಜ್ಞೆ ಬಂತು. ಕೈಕೇಯಿಯನ್ನು ಪ್ರಾರ್ಥಿಸತೊಡಗಿದ:

"ಕೈಕೇಯಿ, ಇದೇನು ನೀ ಕೇಳುತ್ತಿರುವುದು. ಇದು ಹಾಸ್ಯವೇ ? ನನ್ನೊಂದಿಗೆ ಈ ವಿಷಯದಲ್ಲಿ ದಯವಿಟ್ಟು ತಮಾಷೆ ಮಾಡಬೇಡ. ರಾಮ ನನ್ನ ಪ್ರಾಣ. ಅವನಿಲ್ಲದೆ ನನ್ನ ಪ್ರಾಣ ನಿಲ್ಲದು. ಕೈಕೇಯಿ . . . ಕೈಕೇಯಿ, ನಿನ್ನನ್ನು ಪ್ರಾರ್ಥಿಸುತ್ತೇನೆ. ಚಕ್ರವರ್ತಿಯಾದ ನಾನು ಅಶ್ವಮೇಧವನ್ನು ಮಾಡಿ ಅವಭೃತ ಸ್ನಾನವನ್ನು ಮಾಡಿದ ಈ ತಲೆಯನ್ನು ನಿನ್ನ ಪಾದಗಳ ಮೇಲಿಟ್ಟು ಪ್ರಣಾಮಮಾಡಿ ಬೇಡಿಕೊಳ್ಳುತ್ತೇನೆ. ನನ್ನ ಮೇಲೆ ದಯೆ ತೋರು. ದಯವಿಟ್ಟು ನಿನ್ನ ಮಾತುಗಳನ್ನು ಹಿಂದಕ್ಕೆ ತೆಗೆದುಕೋ" ಎಂದು ಒರಲಿದ. ದೈನ್ಯದಿಂದ ಯಾಚಿಸಿದ. ಕೈಕೇಯಿಯ ಕಾಲುಗಳನ್ನು ಹಿಡಿದು ಬೇಡಿದ.

ಆದರೆ ರಾಜ್ಯಕಾಮುಳಾದ ಕೈಕೇಯಿಗೆ ಇದರಿಂದ ಕರುಣೆ ಬಂದೀತೆ ? "ರಾಜಾ, ಇದೇನು, ಕೊಟ್ಟ ಮಾತನ್ನು ನೀ ನಡೆಸಬೇಕು. ಇದು ಇಕ್ಷ್ವಾಕುವಂಶದ ಧರ್ಮ. ನೀ ನನಗೆ ಕೊಟ್ಟ ಮಾತನ್ನು ನಡೆಸದಿದ್ದರೆ ನಾನು ಈಗಲೇ ವಿಷಪಾನ ಮಾಡಿ ಪ್ರಾಣ ಬಿಡುತ್ತೇನೆ, ಎಚ್ಚರಿಕೆ" ಎಂದು ಗದರಿಸಿದಳು.

ಸಿಂಹಿಣಿಯ ಹಿಡಿತಕ್ಕೆ ಸಿಕ್ಕಿಕೊಂಡ ಆನೆಯಂತಾದ ದಶರಥ. "ಹಾ ಪಾಪಿಷ್ಠೇ, ದುಷ್ಟ ಚಾರಿತ್ರೇ, ನಿನ್ನ ಹಾಲಾಹಲಯುಕ್ತವಾದ ಹೃದಯವನ್ನು ಅರಿಯದೆ ನಿನ್ನ ಬಾಹ್ಯರೂಪಕ್ಕೆ ಮರುಳಾದೆನಲ್ಲಾ. ಅಯ್ಯೋ – ಕುಲಘಾತಿನಿ. ನೀನು ಇಕ್ಷ್ವಾಕುವಂಶವನ್ನು ಹಾಳು ಮಾಡಲು ಬಂದೆಯ ಹೆಮ್ಮಾರಿ !" ಎಂದು ಬಯ್ದ.

ಮತ್ತೆ ಮೂರ್ಛಿತನಾದ. ಸ್ವಲ್ಪ ಕಾಲ ಕಳೆದ ಬಳಿಕ ಪುನಃ ಎದ್ದ. ರಾಮನನ್ನು ನೆನಸಿಕೊಂಡ.

"ಹಾ ರಾಮಾ ! ನನ್ನ ಮುದ್ದು ಕಂದ, ನನ್ನ ಕಣ್ಮಣಿಯೆ ! ನಿನ್ನೆ ತಾನೇ ನಿನ್ನನ್ನು ಕರೆಸಿ ನಿನಗೆ ಪಟ್ಟಾಭಿಷೇಕ ಮಾಡುತ್ತೇನೆ ಎಂದೆನಲ್ಲ. ಈಗ ಏನು ಮಾಡಲಿ? ಯಾವ ಬಾಯಿಂದ ಪಟ್ಟಾಭಿಷೇಕ ಮಾಡುತ್ತೇನೆ ಎಂದೆನೋ ಅದೇ ಬಾಯಿಂದ ಕಾಡಿಗೆ ಹೋಗು ಎಂದು ಹೇಗೆ ಹೇಳಲಿ ? ಯಾವ ಅಪರಾಧಕ್ಕಾಗಿ ರಾಮನನ್ನು ಕಾಡಿಗೆ ಕಳುಹಿಸಲಿ. "ಹೇ ಪಾಪಿನಿ, ಕೈಕೇಯಿ! ನಿನಗೆ ಏನು ಮಾಡಿದನೆ ರಾಮ ? ಹೇಳೇ ? ಯಾವ ತಪ್ಪನ್ನು ಮಾಡಿದ್ದಕ್ಕಾಗಿ ಅವನನ್ನು ಕಾಡಿಗೆ ಕಳುಹಿಸಬೇಕೇ ?" ಅಯ್ಯೋ ! ಈ ದುಃಖವನ್ನು ತಾಳಲಾರೆ. ಆ ಭುವನಾಭಿ ರಾಮನನ್ನು ಕಾಡಿಗೆ ಕಳುಹಿಸಿದಮೇಲೆ ನಾನು ಬದುಕುವುದು ಹೇಗೆ ? ಕೈಕೇಯಿ, ರಾಮನನ್ನು ಕಳುಹಿಸಿದ ಮೇಲೆ ನನ್ನ ಜೀವ ನಿಲ್ಲದು. ಅವನೊಂದಿಗೇ ಹೋಗುತ್ತದೆ ಅದು. ಆಮೇಲೆ ನೀನು ವಿಧವೆಯಾಗುವಿ. ಯೋಚಿಸು ಕೈಕೇಯಿ. ಈಗಲಾದರೂ ಕರುಣಿಸು" ಎಂದು ಪರಿಪರಿಯಾಗಿ ಹಲುಬಿದ.

"ಬೆಳಗಾದರೆ ತಾನೇ ರಾಮ ಕಾಡಿಗೆ ಹೋಗಬೇಕು. ಬೆಳಗು ಆಗುವುದೇ ಬೇಡ. ಹೇ ಸೂರ್ಯ ಭಗವನ್, ನಿನ್ನ ವಂಶದಲ್ಲಿ ಹುಟ್ಟಿದ ರಾಮನು ಬೆಳಗಾದರೆ ಕಾಡಿಗೆ ಹೋಗಬೇಕಾಗುತ್ತದೆ. ಆದ್ದರಿಂದ ನೀನು ಉದಯಿಸಲೇಬೇಡ. ಅಷ್ಟು ಉಪಕಾರ ಮಾಡಲಾರೆಯಾ" ಎಂದು ಹುಚ್ಚನಂತೆ ಗೋಳಿಟ್ಟ.

ಕೈಕೇಯಿಯೋ ಭೂತ ಹಿಡಿದವಳಂತೆ ಕಠಿಣ ಮನಸ್ಕಳಾಗಿಯೇ ಇದ್ದಳು. ರಾಜ್ಯದ ಭೂತ

ಐಶ್ವರ್ಯವೆ ಪಿಶಾಚಿ ಅವಳನ್ನು ಹಿಡಿದಿತ್ತು. ಇಡೀ ರಾತ್ರಿಯನ್ನು ದಶರಥ ಗೋಳಾಡುತ್ತಲೇ ಕಳೆದ.

ಬೆಳಗಿನಜಾವ ವಶಿಷ್ಠರು ಪಟ್ಟಾಭಿಷೇಕಕ್ಕೆ ಸಕಲ ಸಿದ್ಧತೆಗಳನ್ನೂ ಮಾಡಿ ಮುಗಿಸಿದರು. "ಮಹಾರಾಜ ಇನ್ನೂ ಏಳಲಿಲ್ಲವಲ್ಲ" ಎಂದು ಸುಮಂತ್ರ ದಶರಥನ ಅರಮನೆಗೆ ಬಂದ. ಅಲ್ಲಿ ದಶರಥ ಇಲ್ಲದಿದ್ದುದನ್ನು ಕಂಡು ನೇರವಾಗಿ ಕೈಕೇಯಿಯ ಅಂತಃಪುರವನ್ನು ಪ್ರವೇಶಿಸಿದ. ದಶರಥ ಮೂರ್ಛಿತನಾಗಿ ಬಿದ್ದಿದ್ದ. ಅವನ ಕಣ್ಣುಗಳು ತೇಜೋಹೀನವಾಗಿ ಶೂನ್ಯವಾಗಿ ನಿಟ್ಟಿಸುತ್ತಿದ್ದವು.

ಸುಮಂತ್ರ ಬಂದದನ್ನು ಕಂಡು ಕೈಕೇಯಿ ರಾಮನನ್ನು ಶೀಘ್ರವಾಗಿ ಕರೆತರುವಂತೆ ಆಜ್ಞಾಪಿಸಿದಳು. ಸುಮಂತ್ರ ನೇರವಾಗಿ ರಾಮನ ಅಂತಃಪುರವನ್ನು ಪ್ರವೇಶಿಸಿದ. ಅಲ್ಲಿ ಮಹಾರ್ಹವಾದ ಆಸನದಲ್ಲಿ ಸೀತಾರಾಮರು ಆಸೀನರಾಗಿರುವುದನ್ನು ಕಂಡ. ಅಂಥ ದೃಶ್ಯ ಸುಮಂತ್ರನಿಗೆ ಮಾತ್ರ ಲಭ್ಯವಾಯಿತು. ರಾಮಾಯಣವನ್ನು ಬರೆದ ವಾಲ್ಮೀಕಿಗೂ ಅಲಭ್ಯವಾದ ದೃಶ್ಯವದು. ಲಕ್ಷ್ಮೀ–ನಾರಾಯಣರಂತೆ ಶೋಭಿಸುತ್ತಿರುವ ಸೀತಾರಾಮರು ಏಕಾಸನದಲ್ಲಿ ವಿರಾಜಿಸಿರುವುದನ್ನು ಸುಮಂತ್ರನು ಕಂಡ. ರಾಮನಿಗೆ ಸೀತೆ ದಿವ್ಯವಾದ ಗಂಧವನ್ನು ಪೂಸುತ್ತಿದ್ದಳು. ಪಟ್ಟಾಭಿ-ಷೇಕಕ್ಕೆ ಬೇಕಾದ ಅಲಂಕಾರ ಮಾಡುವುದರಲ್ಲಿ ನಿರತಳಾಗಿದ್ದಳು.

ಸುಮಂತ್ರ ಬಂದು "ಕೌಸಲ್ಯಾ ಸುಪ್ರಜಾರಾಮ, ನಿನ್ನ ತಂದೆ ನಿನ್ನನ್ನು ನೋಡಬಯಸುತ್ತಾರೆ" ಎಂದ.

ತಂದೆ ಎಂದರೆ ಭಯ–ಭಕ್ತಿ, ಗೌರವ ಬಹಳ ರಾಮನಿಗೆ. ತತ್ಕ್ಷಣ "ಸೀತೆ, ತಂದೆ ನನ್ನನ್ನು ನೋಡಬಯಸುತ್ತಾರಂತೆ ; ಹೋಗಿಬರುತ್ತೇನೆ. ಬಹುಶಃ ಪಟ್ಟಾಭಿಷೇಕಕ್ಕೆ ಮುನ್ನ ಆಶೀರ್ವ-ದಿಸಲು ನನ್ನನ್ನು ಕರೆಯಿಸಿರಬಹುದು. ಕೈಕೇಯೀ ಚಿಕ್ಕಮ್ಮನೂ ಅಲ್ಲೇ ಇರುವಳಂತೆ. ಅವಳಿಗೂ ನನ್ನಲ್ಲಿ ಅಕ್ಕರೆ ತುಂಬಾ. ಅವಳೂ ನನ್ನನ್ನು ಹರಸಲು ಕರೆಕಳುಹಿಸಿರಬಹುದು. ಬರುತ್ತೇನೆ" ಎಂದ.

**ಪತಿ ಸಮ್ಮಾನಿತಾ ಸೀತಾ ಭರ್ತಾರಂ ಅಸಿತೇಕ್ಷಣಾ**
**ಆದ್ವಾರೆ ಮನುವವ್ರಾಜ ಮಂಗಳಾನ್ಯಭಿದಧ್ಯುಷೀ**

ನೀಲೋತ್ಪಲದಳಕ್ಕೆ ಸಮಾನವಾದ ತನ್ನ ಕಣ್ಣುಗಳಿಂದ ಸೀತೆ ಒಮ್ಮೆ ರಾಮನನ್ನು ನೋಡಿದಳು. ನೋಟದಿಂದಲೇ ಅವಳು ರಾಮನಿಗೆ ಹಾರವನ್ನು ಸಮರ್ಪಿಸಿದಳು. ಇಂಗಿತಜ್ಞ-ನಾದ ರಾಮ ತನ್ನ ಕತ್ತಿನಿಂದ ಹಾರವನ್ನು ತೆಗೆದು ಸೀತೆಗೆ ಕೊಟ್ಟು "ಈಗಲೇ ಬಂದುಬಿಡುತ್ತೇನೆ ಸೀತೆ" ಎನ್ನುತ್ತಾ ಹೊರಹೊರಟ.

ಹೊರಡುತ್ತಿರುವ ರಾಮನಿಗೆ ಸೀತೆ ಮಂಗಳವನ್ನು ಕೋರಿದಳು ರಾಮ ರಾಜಮಾರ್ಗದಲ್ಲಿ ಬರುತ್ತಿದ್ದ. ಲಕ್ಷ್ಮಣನೂ ರಾಮನನ್ನು ಅನುಸರಿಸಿದ. ಪದ್ಮದಳಕ್ಕೆ ಸಮಾನವಾದ ನೇತ್ರಗಳುಳ್ಳ ರಾಮನನ್ನು ಕಾಣಲು ಅಯೋಧ್ಯೆಯ ಜನ ಕಿಕ್ಕಿರಿದು ನಿಂತಿದ್ದರು. ಎಲ್ಲರಿಂದಲೂ ಸೇವ್ಯನಾಗಿ ರಾಮ ರಥದಲ್ಲಿ ಹೋಗುತ್ತಿದ್ದ. ಎಲ್ಲರೂ ತಮ್ಮ ತಮ್ಮೊಳಗೆ ಮಾತನಾಡಿಕೊಳುತ್ತಿದ್ದರು. "ಆಹಾ, ಅವನೇ ರಾಮ - ಭುವನಾಭಿರಾಮನಾಗಿದಾನೆ. ನಯನಮನೋಹರನಾಗಿದಾನೆ. ಇಂಥವನನ್ನು ನಾನಾದರೂ ನೋಡಬೇಕು. ಇಲ್ಲ ರಾಮನಾದರೂ ನಮ್ಮನ್ನು ನೋಡಬೇಕು. ಇಲ್ಲದಿದ್ದರೆ ಜನ್ಮ ವ್ಯರ್ಥ" ಎಂದುಕೊಂಡರು.

ಕೈಕೇಯಿಯ ಅಂತಃಪುರವನ್ನು ಪ್ರವೇಶಿಸಿದ ರಾಮ. ದೀನನಾಗಿದ್ದ ತಂದೆಯನ್ನು ಕಂಡ. ಪಕ್ಕದಲ್ಲಿ ಕಾಳಿಯಂತೆ ನಿಂತಿದ್ದ ಕೈಕೇಯಿಯನ್ನೂ ನೋಡಿದ. ಹೋದವನೇ ದಶರಥನ ಎರಡೂ ಕಾಲುಗಳನ್ನು ಹಿಡಿದುಕೊಂಡು ''ನಾನು ರಾಮ. ನಮಸ್ಕರಿಸುತ್ತಿದ್ದೇನೆ'' ಎಂದ.

ದಶರಥ ಮಾತಾಡಲಿಲ್ಲ. ''ರಾಮ'' ಎಂಬ ಶಬ್ದ ಕೇಳಿದೊಡನೆ ಕಣ್ಣುಗಳನ್ನು ಅರಳಿಸಿ ಒಮ್ಮೆ ನೋಡಿದ. ದೀರ್ಘವಾದ ನಿಟ್ಟುಸಿರು ಬಿಟ್ಟ. ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು.

ರಾಮ ಕೈಕೇಯಿಯ ಕಡೆಗೆ ತಿರುಗಿದ. ''ಅಮ್ಮ, ಅಪ್ಪ ಏಕೆ ಹೀಗೆ ಇದಾರೆ. ನಾನು ನಮಸ್ಕಾರ ಮಾಡಿದರೆ ಆಶೀರ್ವಾದವನ್ನೇ ಮಾಡದೆ ಇದಾರಲ್ಲ ಏಕೆ? ನಾ ಏನು ತಪ್ಪು ಮಾಡಿದೆ? ಹೇಳಮ್ಮ. ನಾ ತಪ್ಪು ಮಾಡಿದ್ದರೆ ಅದಕ್ಕಾಗಿ ಶಿಕ್ಷೆ ಕೊಡುವ ಅಧಿಕಾರ ನಿಮಗೆ ಪೂರ್ಣವಾಗಿದೆ. ಹೀಗೆ ಏಕೆ ದುಃಖಿಸುತ್ತಿದ್ದಾರೆ? ಹೇಳಮ್ಮ" ಎಂದ.

ಕೈಕೇಯಿ ''ರಾಮ, ನೀನೇ ಅವರ ದುಃಖಕ್ಕೆ ಕಾರಣ. ನೀನು ಅವರು ಹೇಳುವ ಮಾತನ್ನು ನಡೆಸುವೆಯೋ—ಇಲ್ಲವೋ ಎಂಬ ಭಯದಿಂದ ಹಾಗೆ ದುಃಖಿತರಾಗಿದಾರೆ ಅಷ್ಟೆ'' ಎಂದಳು.

''ಏನಮ್ಮ" ಏನು ಹೇಳುತ್ತಿರುವೆ? ನನ್ನನ್ನು ಕಂಡರೆ ಅಪ್ಪನಿಗೆ ಭಯವೆ? ತಂದೆಯನ್ನು ಹೆದರಿಸುವ ಮಗ ಎನಿಸಿಕೊಂಡ ಮೇಲೆ ನಾ ಏಕೆ ಬದುಕಿರಬೇಕು ತಾಯೀ. ತಂದೆಗಾಗಿಯೇ ಈ ಜನ್ಮ. ಈ ದೇಹ, ಈ ಜೀವ ಅವರಿಗೇ ಮುಡಿಪು. ತಂದೆ "ಅಗ್ನಿಯಲ್ಲಿ ಹಾರು" ಎಂದರೆ ''ಏಕೆ"? ಎಂದು ವಿಚಾರಿಸದೆ ಒಡನೆ ಹಾರಿ ಬಿಡುತ್ತೇನೆ. ತಂದೆ ''ವಿಷವನ್ನು ಕುಡಿ' ಎಂದರೆ ಅದನ್ನು ಶಿರಸಾವಹಿಸಿ ನಡೆಸುತ್ತೇನೆ. ತಂದೆ ''ಸಮುದ್ರವನ್ನು ಪ್ರವೇಶಿಸು'' ಎಂದು ಅಪ್ಪಣೆ ಮಾಡಿದರೆ ತತ್‌ಕ್ಷಣ ಸಮುದ್ರದೊಳಗೆ ಮುಳುಗಿಬಿಡುತ್ತೇನೆ ನಾನು. ಅಮ್ಮ, ನೀ ಯೋಚಿಸದೆ ತಂದೆಯ ಮನೋಗತವನ್ನು ತಿಳಿದುಕೋ. ಅದನ್ನು ಖಂಡಿತವಾಗಿಯೂ ನಡೆಸುತ್ತೇನೆ'' ಎಂದ ರಾಮ.

''ತಂದೆ ನೀ ಹೇಳುವ ಯಾವುದೇ ಕೆಲಸವನ್ನು ಮಾಡಲೂ ನಿನಗೆ ಹೇಳಲಿಲ್ಲ ರಾಮ. ನನಗೆ ನಿಮ್ಮ ತಂದೆ ಶಂಬರಾಸುರ ಸಮರಕಾಲದಲ್ಲಿ ಎರಡು ವರಗಳನ್ನು ಕೊಟ್ಟಿದ್ದರು. ಅದನ್ನು ಈಗ ಕೇಳಿದ. ಅದನ್ನು ನೀನು ನಡೆಸುವೆಯೋ ಇಲ್ಲವೋ ಎಂದು ನಿಮ್ಮ ತಂದೆ ಚಿಂತಿಸುತ್ತಿದಾರೆ'' ಎಂದಳು ಕೈಕೇಯಿ.

"ಅಮ್ಮ, ನೀ ನಮ್ಮ ತಂದೆಯನ್ನು ವರ ಕೇಳಿ ಅವರನ್ನು ಕಷ್ಟಪಡಿಸಬೇಕೆ? ತಾಯೀ. ವರದ ಮಾತು ಹಾಗಿರಲಿ. ನೀನೇ ನನ್ನನ್ನು ಕರೆದು ''ರಾಮ! ನೀ ಈ ಕೆಲಸವನ್ನು ಮಾಡು'' ಎಂದು ಅಪ್ಪಣೆ ಮಾಡಿದ್ದರೆ ಅದನ್ನು ತಲೆಯಲ್ಲಿ ಹೊತ್ತು ನಡೆಸುತ್ತಿದ್ದೆನಲ್ಲಮ್ಮಾ. ಹುಂ! ಹೇಳು. ಈಗಲೂ ಹೇಳು, ನೀನು ಯಾವ ವರಗಳನ್ನು ಕೇಳಿದೆ ಹೇಳು. ಅದನ್ನು ಸತ್ಯವಾಗಿ ನಡೆಸುತ್ತೇನೆ'' ಎಂದ ರಾಮ.

''ರಾಮ, ನಾನು ಕೇಳಿದ ವರಗಳು ಎರಡು ಮೊದಲನೆಯ ವರದಿಂದ ಭರತನಿಗೆ ಪಟ್ಟಾಭಿಷೇಕ ಆಗಬೇಕು. ಎರಡನೆಯ ವರದಿಂದ ನೀನು ಜಟಾವಲ್ಕಲಧಾರಿಯಾಗಿ ಮುನಿವೇಷವನ್ನು ಧರಿಸಿ ಹದಿನಾಲ್ಕು ವರ್ಷಗಳು ಕಾಡಿನಲ್ಲಿ ಇರಬೇಕು."

''ಅಮ್ಮ! ಇವೇ ತಾನೇ ನಿನ್ನ ವರಗಳು. ಹಾಗೆಯೇ ಆಗಲಿ. ಅಮ್ಮ ನಿನಗೆ ಮೊದಲಿನಿಂದ ನನ್ನ ಮೇಲೆ ಪ್ರೀತಿ ಹೆಚ್ಚು. ಅದಕ್ಕೆ ಈಗಲೂ ಯಾವ ಜವಾಬ್ದಾರಿಯೂ ಇಲ್ಲದೆ ಹಾಯಾಗಿ ತಿರುಗಾಡಿಕೊಂಡಿರಲಿ ಎಂದು ನನ್ನನ್ನು ಕಾಡಿಗೆ ಕಳುಹಿಸಿ ರಾಜ್ಯದ ಸಮಸ್ತ

ಭಾರವನ್ನೂ ಮಗುವಾದ ಭರತನ ಮೇಲೆ ಹೊರಿಸಿದೆ. ಎಂಥ ಕರುಣಾಮಯಿಯಮ್ಮಾ ನೀನು. ನೀನು ಹೇಳುವಂತೆಯೇ ಆಗಲಿ. ಭರತನನ್ನು ಈಗಲೇ ಕರೆಕಳುಹಿಸು. ನಾನೇ ನಿಂತು ಅವನಿಗೆ ಪಟ್ಟಾಭಿಷೇಕ ಮಾಡಿ ಕಾಡಿಗೆ ಹೊರಡುತ್ತೇನೆ" ಎಂದ ರಾಮ.

"ಅದೆಲ್ಲ ಇರಲಿ. ಈಗ ನೀನು ಮೊದಲು ಕಾಡಿಗೆ ಹೊರಡು. ನೀ ಎಷ್ಟು ಬೇಗ ವನಕ್ಕೆ ಹೋದರೆ ಅಷ್ಟು ಬೇಗ ನಿಮ್ಮ ತಂದೆಗೆ ಸಂತೋಷವಾಗುತ್ತದೆ" ಎಂದಳು ಕೈಕೇಯಿ.

"ಅಮ್ಮಾ ನಾನು ಈಗಲೇ ಹೊರಡುತ್ತಿದ್ದೆ. ಆದರೆ, ಹೊರಡುವ ಮೊದಲು ನನ್ನ ತಾಯಿಗೆ–ಪತ್ನಿಗೆ ಹೇಳಬೇಕು. ಅದು ನನ್ನ ಕರ್ತವ್ಯ–ಅದಕ್ಕೆ ಕಾಲಾವಕಾಶ ಕೊಡು". ಹುಂ ! ಬೇಗ ಹೇಳಿ ಹೊರಡು" ಎಂದು ತ್ವರೆ ಮಾಡತೊಡಗಿದಳು ಕೈಕೇಯಿ. ಕೈಕೇಯಿಯ ವರ್ತನೆ ರಾಮನಿಗೂ ಜುಗುಪ್ಸೆಯನ್ನುಂಟುಮಾಡಿತು.

**ನಾಹಮರ್ಥಪರೋ ದೇವೀ ಲೋಕಮಾವಸ್ತು ಮುತ್ಸಹೇ**

**ವಿದ್ಧಿ ಮಾಂ ಋಷಿಭಿಸ್ತುಲ್ಯಂ ವಿಮಲಂ ಧರ್ಮಚಾರಿಣಂ**

"ಕೈಕೇಯಿ ದೇವಿಯೇ ! ಲೋಕದಲ್ಲಿ ಹಣವನ್ನು ಗಳಿಸಲು ಇರುವವ ನಾನಲ್ಲ. ಅಂಥ ಅರ್ಥಪರನಲ್ಲ ನಾನು. ಋಷಿಗಳಂತೆ ಧರ್ಮವನ್ನೇ ಅನುಷ್ಠಿಸಿ ಧರ್ಮಮಾರ್ಗದಲ್ಲಿಯೇ ನಡೆಯುವಂಥವ. ತಾಯೇ, ನನ್ನ ಮಾತನ್ನು ನಂಬು" ಎಂದು ತನ್ನ ಧರ್ಮನಿಷ್ಠೆಯನ್ನು ವ್ಯಕ್ತಪಡಿಸಿ ರಾಮ ಅಲ್ಲಿಂದ ಕೌಸಲ್ಯಾಂತಃಪುರದತ್ತ ನಡೆದ.

ಎಲ್ಲವನ್ನೂ ಕೇಳುತ್ತಿದ್ದ ಲಕ್ಷ್ಮಣ. ರಾಮ ಹೊರಟ ಒಡನೆಯೇ ಧನುರ್ಧಾರಿಯಾಗಿ ರಾಮನನ್ನನುಸರಿಸಿದ. ಸಾವಿರ ಹೆಡೆಯ ಸರ್ಪದಂತೆ ಬುಸುಗುಟ್ಟುತ್ತಿದ್ದ, ಲಕ್ಷ್ಮಣ. 'ರಾಮನಿಗೆ ವನವಾಸ' ಎಂಬುದನ್ನು ತಿಳಿದು ಕಣ್ಣುಗಳಲ್ಲಿ ನೀರು ಹರಿಯತೊಡಗಿತು. ಹೃದಯದಲ್ಲಿ ಕೈಕೇಯಿಯ ಮೇಲೂ ಅವಳ ಮಾತಿಗೆ ಮರೆನಾದ ದಶರಥನ ಮೇಲೂ ಕೋಪಾಗ್ನಿ ಪ್ರಜ್ವಲಿಸತೊಡಗಿತು.

ಮಗನಿಗೆ ಪಟ್ಟಾಭಿಷೇಕ ಎಂದು ಕೌಸಲ್ಯೆ ಆ ರಾತ್ರಿಯೆಲ್ಲ ನಾರಾಯಣನ ಪೂಜೆಯನ್ನು ಯಥಾವಿಧಿಯಾಗಿ ಮಾಡಿದಳು.

ಪುತ್ರನ ಹಿತವನ್ನು ಬಯಸಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಮಾಡಿದಳು. ಅಗ್ನಿಕಾರ್ಯವನ್ನು ಮಾಡಿಸಿ ರಾಮನ ಶ್ರೇಯಸ್ಸಿಗಾಗಿ ಹೋಮವನ್ನು ಮಾಡಿಸಿದಳು. ತನ್ನ ಅಂತಃಪುರಕ್ಕೆ "ಅಮ್ಮಾ" ಎಂದು ಕೂಗುತ್ತ ಬಂದ ರಾಮನನ್ನು ಕಂಡಳು ಕೌಸಲ್ಯೆ. "ಮಗೂ, ಪಟ್ಟಾಭಿಷೇಕವಲ್ಲವೆ ನಿನಗಿಂದು ? ನನ್ನ ಮುದ್ದಿನ ಕಣ್ಮಣಿಯೇ–ಬಾ" ಎಂದು ಆಲಂಗಿಸಿದಳು ರಾಮನನ್ನು. ಸಮೀಪದಲ್ಲೇ ರತ್ನಾಸನವನ್ನು ಹಾಕಿದಳು "ಕುಳಿತುಕೊ, ಮಗು" ಎನ್ನುತ್ತಾ ಆಸನವನ್ನು ತೋರಿಸಿದಳು.

ತಾಯಿ ತುಂಬೊಲವಿನಿಂದ ಕೊಟ್ಟ ರತ್ನಾಸನವನ್ನು ಮುಟ್ಟಿದ. ಇಷ್ಟೊಂದು ಆಸೆಯಿಟ್ಟುಕೊಂಡಿರುವ ತಾಯಿಗೆ ಕೈಕೇಯಿ ಹೇಳಿರುವ ಮಾತನ್ನು ಹೇಗೆ ತಿಳಿಸುವುದು ? ಎಂದು ಚಿಂತಿಸಿದ. ತಾಯಿಯ ಮಮತೆ ಅವನನ್ನು ಕ್ಷಣಕಾಲ ಪರವಶನನ್ನಾಗಿಸಿತು ಅವನಿಗರಿವಿಲ್ಲದೆಯೇ ರಾಮನ ಕಣ್ಣಂಚಿನಿಂದ ನೀರು ತೊಟ್ಟಿಕ್ಕಿತು. "ಅಮ್ಮ, ಇನ್ನು ಮೇಲೆ ನನಗೆ ಇಂಥ ಆಸನದಲ್ಲಿ ಕುಳಿತುಕೊಳ್ಳುವ ಅರ್ಹತೆ ಇಲ್ಲ. ಚಿಕ್ಕಮ್ಮ ಕೇಳಿದ ವರದಂತೆ ನಾನು ಹದಿನಾಲ್ಕು ವರ್ಷಗಳ ಕಾಲ

ಮುನಿವೇಷದಲ್ಲಿ ದಂಡಕಾರಣ್ಯದಲ್ಲಿ ಇರಬೇಕಾಗಿದೆ. ಎಂತಲೇ ಹೋಗುವ ಮುನ್ನ ನಿನಗೆ ತಿಳಿಸಿ ಹೋಗಲು ಬಂದೆ" ಎಂದ

ಈ ಕಠೋರವಾದ ಮಾತುಗಳನ್ನು ಕೇಳುತ್ತಿದ್ದಂತೆಯೇ ಕೌಸಲ್ಯೆಯು ಬುಡಕಡಿದ ಲತೆಯಂತೆ ಕೆಳಗುರುಳಿದಳು. ಪ್ರಜ್ಞಾಹೀನಳಾದಳು. ರಾಮನೇ ಎದ್ದು ತಾಯಿಯ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ಗಾಳಿಹಾಕಿದ. ಮುತ್ತಿನಂತೆ ನಿಂತಿದ್ದ ಬೆವರನ್ನು ತನ್ನ ಉತ್ತರೀಯದಿಂದ ಒರಸಿದ. ಕೌಸಲ್ಯೆ ಮೆಲ್ಲಗೆ ಕಣ್ತೆರೆದಳು. ವಿಲಪಿಸಲು ಪ್ರಾರಂಭಿಸಿದಳು. "ರಾಮ, ಇದೇನು ನೀ ಹೇಳುವುದು ? ಏತಕ್ಕಾಗಿ ನೀ ಕಾಡಿಗೆ ಹೋಗಬೇಕು ? ನೀ ಏನು ಅಪರಾಧ ಮಾಡಿದೆ ? ಮೊದಲಿನಿಂದ ಆ ಕೈಕೇಯಿಯದೇ ಮೇಲುಗೈ ಆಗುತ್ತಿದೆ. ನೀ ಹುಟ್ಟುವ ಮೊದಲು ನಾ ಒಂದು ದಿನವಾದರೂ ಸಂತೋಷವಾಗಿರಲಿಲ್ಲ. ಬಹುಕಾಲ ಕಳೆದಮೇಲೆ ನೀ ಮಗನಾದೆ. ನನ್ನ ದುಃಖದ ದಿನಗಳು ಕಳೆದವು ಎಂದಿದ್ದೆ ರಾಮ. ನೀ ಯಾಕಾದರೂ ನನ್ನ ಬಸಿರಲ್ಲಿ ಹುಟ್ಟಿಬಂದೆಯೋ ? ನನಗೆ ಮಗನಾಗುವ ಬದಲು ನೀನು ಕೈಕೇಯಿಗೇ ಮಗನಾಗಿದ್ದಿದ್ದರೆ ನಾ ಇಂಥ ದುಃಖವನ್ನು ಅನುಭವಿಸುವ ಸ್ಥಿತಿ ಬರುತ್ತಿರಲಿಲ್ಲವಲ್ಲ—ಅಯ್ಯೋ, ನನ್ನ ಕರ್ಮವೇ" ಎಂದು ರೋದಿಸತೊಡಗಿದಳು.

ಅದನ್ನು ನೋಡಿದ ಲಕ್ಷ್ಮಣನಿಗೆ ಸಹಿಸಲು ಆಗಲಿಲ್ಲ. "ಅಮ್ಮ, ನೀನು ಯೋಚಿಸಬೇಡ, ಆ ಕಾಮಾಂಧನಾದ ದಶರಥನನ್ನು ನಿಗ್ರಹಿಸಿ ಈಗಲೇ ನನ್ನ ರಾಮನಿಗೆ ಪಟ್ಟ ಕಟ್ಟುತ್ತೇನೆ. ನೋಡೋಣ ಅದಾರು ನನ್ನನ್ನು ಇದಿರಿಸಲು ಬರುತ್ತಾರೆ. ಕೈಕೇಯಿಯನ್ನೂ, ಅವಳ ಮಗ ಭರತನನ್ನೂ, ಇನ್ನೂ ಯಾರು ಯಾರು ಅವರ ಸಹಾಯಕ್ಕೆ ಬರುತ್ತಾರೋ ಅವರನ್ನೂ, ಎಲ್ಲರನ್ನೂ ಒಂದೇ ಬಾಣದಿಂದ ಹೊಡೆದುಹಾಕುತ್ತೇನೆ. ರಾಮನನ್ನು ಮಹಾರಾಜನನ್ನಾಗಿ ಮಾಡುತ್ತೇನೆ" ಎಂದು ಗುಡುಗಿದ.

ಬುಸುಗುಟ್ಟುತ್ತಿರುವ ಲಕ್ಷ್ಮಣ ಮತ್ತೆ ಹೇಳತೊಡಗಿದ:

"ರಾಮನು ಕಾಡಿಗೆ ಹೋಗುವುದು ಬೇಡ. ಏಕೆ ಹೋಗಬೇಕು ಕಾಡಿಗೆ ? ಸ್ತ್ರೀ ಚಾಪಲ್ಯಕ್ಕೆ ವಶನಾಗಿ ದಶರಥ ಹೇಳಿದ್ದಕ್ಕೆ ಹೋಗಬೇಕೆ? ಅದು ಕೂಡದು. ಕಾಡಿಗೆ ಹೋಗುವಂಥ ಪಾಪವನ್ನು ಏನು ಮಾಡಿದ್ದಾನೆ ರಾಮ ? ಅವನ ಗುಣಗಳು ಎಂಥವು ? ಯಾರಿಗೂ ಅವನು ಕೆಟ್ಟದ್ದನ್ನು ಮಾಡದವ. ಅಷ್ಟೇ ಏಕೆ ? ಶತ್ರುಗಳೂ ಸಹ ರಾಮನ ಗುಣಗಳನ್ನು ಕೊಂಡಾಡುತ್ತಾರೆ. ಇಂಥ ಗುಣವುಳ್ಳ ರಾಮ ಕಾಡಿಗೆ ಹೋಗುವುದು ಬೇಡ" ಎಂದ.

ವಾಲ್ಮೀಕಿ ಈ ಸಂದರ್ಭದಲ್ಲಿ ರಾಮನ ಗುಣವರ್ಣನೆಯನ್ನು ಮಾಡುತ್ತಾ ''ರಿಪೂಣಾಮಪಿ ವತ್ಸಲಃ'' ಎಂದಿದ್ದಾರೆ. ಈ ಮಾತು ರಾಮಾಯಣದಲ್ಲಿ ಎರಡು ಸಲ ಬರುತ್ತದೆ. ಒಮ್ಮೆ ಕೌಸಲ್ಯೆಯ ಬಳಿ ರಾಮನ ಗುಣವನ್ನು ವರ್ಣಿಸುತ್ತಾ ಲಕ್ಷ್ಮಣ ಹೇಳುವುದು. ಇನ್ನೊಮ್ಮೆ ರಾಮಲಕ್ಷ್ಮಣರು ನಾಗಪಾಶದಿಂದ ಕಟ್ಟಲ್ಪಟ್ಟಾಗ ಗರುಡ ಹೇಳುವುದು.

ಲಕ್ಷ್ಮಣ ''ರಿಪೂಣಾಮಪಿವತ್ಸಲಃ'' ಎಂದಿದ್ದಾನೆ. ಅದೇರೀತಿ ಗರುಡನೂ ಹೇಳಿದ್ದಾನೆ. ಇಲ್ಲಿ ಒಂದು ಸ್ವಾರಸ್ಯ. ಪ್ರಶಂಸೆ, ಬಿರುದುಗಳನ್ನು ಕೊಡುವವರು ತಕ್ಕವರಾಗಿರಬೇಕು. ಕೊಡುವುದಕ್ಕೆ ಅರ್ಹತೆ ಇರಬೇಕು. ಲಕ್ಷ್ಮಣ ತನ್ನ ರಿಪುವಾದ ಗರುಡನಮೇಲೆ ವಾತ್ಸಲ್ಯ ಇಟ್ಟಿದ್ದಾನೆ ಎಂದೂ, ಗರುಡ ತನ್ನ ರಿಪುವಾದ ಲಕ್ಷ್ಮಣನ ಮೇಲೆ ವಾತ್ಸಲ್ಯ ಇಟ್ಟಿದ್ದಾನೆ ಎಂದೂ ಹೇಳುತ್ತಾನೆ. ಲಕ್ಷ್ಮಣ ಆದಿಶೇಷ. ಗರುಡ ವಿಷ್ಣುವಾಹನ. ಆದಿಶೇಷನಿಗೂ ಗರುಡನಿಗೂ ಎಂಥ ವೈರ ಇದೆ ಎಂಬುದು ವಿಶ್ವವಿದಿತ !

ಹಿತವಾದವರು, ಮಿತ್ರರು, ಬಾಂಧವರು ಗುಣಗಳನ್ನು ಹೊಗಳುವುದು ಸಹಜ. ಆದರೆ, ಶತ್ರುಗಳೂ ಸಹ ರಾಮನ ವೀರ್ಯವನ್ನು, ತೇಜಸ್ಸನ್ನು, ಪರಾಕ್ರಮವನ್ನು ಪ್ರಶಂಸಿಸಿದ್ದಾರೆ. ಏಕೆ? ಕಾಡಿಗೆ ಕಳುಹಿಸಿದ ಕೈಕೇಯಿಯೇ, ರಾಮ ಸಚ್ಚಾರಿತ್ರ್ಯವುಳ್ಳವನು, ಎಂದು ಒಪ್ಪಿದಾಳೆ. ದೋಷವಿಲ್ಲದವನು ರಾಮ ಎಂದು ಹೇಳಿದಾಳೆ. ರಾಮನ ವೈರಿಯಾದ ಮಾರೀಚ, ಶೂರ್ಪಣಖಿ, ರಾವಣರೂ ರಾಮನನ್ನು ಮುಕ್ತ ಕಂಠದಿಂದ ಪ್ರಶಂಸಿಸಿದ್ದಾರೆ. ಹೀಗೆ ಶತ್ರುಗಳಿಂದಲೂ ಹೊಗಳಿಸಿಕೊಂಡವ, ಶತ್ರುಗಳೂ ಒಂದಿನಿತು ಕುಂದನ್ನೂ ಕಾಣದಂಥ ಗುಣವುಳ್ಳವ ರಾಮ. ಅದಕ್ಕೇ ವಾಲ್ಮೀಕಿ ರಾಮನನ್ನು ವರ್ಣಿಸುತ್ತಾ ''ರಿಪೂಣಾಮಪಿ ವತ್ಸಲಃ'' ಎಂದರು.

ಲಕ್ಷ್ಮಣನ ಮಾತುಗಳನ್ನು ಕೇಳಿದ ರಾಮ,

''ಲಕ್ಷ್ಮಣ, ನೀ ಹೇಳುವುದು ಸರಿಯಲ್ಲ. (ವಿಧಿ ಎನ್ನುವುದನ್ನು ಯಾರಿಂದಲೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಈಶ್ವರ ಎಲ್ಲರಿಗೂ ನಿಯಾಮಕ.) ಎಲ್ಲರೂ ಅವರವರ ಕರ್ತವ್ಯವನ್ನು ನಿರ್ವಹಿಸಲೇ ಬೇಕು. ತಂದೆಯ ಮಾತನ್ನು ನಡೆಸುವುದು ಮಕ್ಕಳ ಧರ್ಮ. ಕೈಕೇಯಿಯನ್ನು ಏಕೆ ನಿಂದಿಸುತ್ತೀಯೆ? (ಈಶ್ವರನ ಇಚ್ಛಾನುಸಾರವಾಗಿ ಸರ್ವವೂ ನಡೆಯುವುದು ) ಆ ದೈವಕ್ಕೆ ಇದಿರಾಗಿ ಯಾರೂ ನಿಲ್ಲಲು ಸಾಧ್ಯವಿಲ್ಲ. ಹಿಂದೆ ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳು ತಂದೆಯ ಆಜ್ಞೆಯಂತೆ ನಡೆಯಲಿಲ್ಲವೆ? ತಂದೆಯ ಮಾತೇ ವೇದವಾಕ್ಯ. ಅದನ್ನು ನಡೆಸಬೇಕು. ನಾನೂ ಸಹ ನಮ್ಮ ಕುಲದ ಧರ್ಮವನ್ನು ಅನುಸರಿಸಿಯೇ ತೀರುತ್ತೇನೆ. ತಂದೆಯ ಮಾತಿನಂತೆ ಹದಿನಾಲ್ಕು ವರ್ಷಗಳು ಕಾಡಿನಲ್ಲಿ ವಾಸ ಮಾಡುತ್ತೇನೆ. ಅದೇ ನನ್ನ ಧರ್ಮ'' ಎಂದ.

ಲಕ್ಷ್ಮಣನಿಗೆ ಕೋಪ ಇನ್ನೂ ಆರಿರಲಿಲ್ಲ.

''ದೈವ ದೈವ, ಎಂದು ಹೇಳುವವರು ಕೈಲಾಗದ ಹೇಡಿಗಳು. ಪುರುಷ ಪ್ರಯತ್ನದಿಂದ ಎಲ್ಲವನ್ನೂ ಸಾಧಿಸಬಹುದು. ದೈವ ಎನ್ನುತ್ತೀಯಲ್ಲ, ಆ ದೈವ ಎಲ್ಲಿದೆ ತೋರಿಸು ? ರಾಮ, ಆ ದೈವವನ್ನು ಈಗಲೇ ಇಲ್ಲ ವಿಸಿಸಿ ಬಿಡುತ್ತೇನೆ. ದೈವವಂತೆ ದೈವ'' ಎಂದು ಗುಡುಗಿದ. ''ಲಕ್ಷ್ಮಣ! ವೃಥಾ ಮಾತನ್ನು ಬೆಳೆಸುವುದರಲ್ಲಿ ಅರ್ಥವಿಲ್ಲ. ಧರ್ಮವನ್ನು ಅನುಷ್ಠಿಸುವುದೇ ಕರ್ತವ್ಯ. ಅದೇ ಸರಿಯಾದ ಕ್ರಮ. ನೀನು ನನ್ನಲ್ಲಿರುವ ಅತಿಶಯವಾದ ಪ್ರೀತಿಯಿಂದ ದೈವವನ್ನು ಧಿಕ್ಕರಿಸುತ್ತಿದೀಯೆ. ಹಾಗೆ ಮಾಡುವುದು ಸಲ್ಲದು" ಎಂದು ಲಕ್ಷ್ಮಣನನ್ನು ಸಂತೈಸಿ ರಾಮ ''ಅಮ್ಮ, ನಾ ಬರುತ್ತೇನೆ. ಅನುಜ್ಞೆ ಕೊಡು'' ಎಂದ. ''ರಾಮ, ನೀ ಏಕೆ ನನಗೆ ಮಗನಾದೆ? ಪ್ರಪಂಚದಲ್ಲಿ ಮಕ್ಕಳಿಲ್ಲದವರಿಗೆ ಒಂದೇ ಚಿಂತೆ. ಆದರೆ ಮಕ್ಕಳಾದವರಿಗೆ ನಾನಾ ಚಿಂತೆ. ನೀ ನನಗೆ ಮಗನಾಗಿ ಹುಟ್ಟದಿದ್ದರೆ ನಾ ಇಂದು ಇಂಥ ಸಂಕಟವನ್ನು ಅನುಭವಿಸುತ್ತಿರಲಿಲ್ಲ. ರಾಮ, ದಶರಥ ನಿನಗೆ ಹೇಗೆ ತಂದೆಯೋ ಹಾಗೆ ನಾನು ನಿನಗೆ ತಾಯಿ ಅಲ್ಲವೆ? ತಂದೆಯ ಮಾತನ್ನು ನಡೆಸುವುದು ಹೇಗೆ ಧರ್ಮವೋ ಹಾಗೆ ತಾಯಿಯ ಮಾತನ್ನು ನಡೆಸುವುದೂ ಧರ್ಮವೆ ಆಗಿದೆ. ಅಲ್ಲವೆ? ಆದ್ದರಿಂದ ಮಗು ರಾಮ, ನಾ ಹೇಳುತ್ತೇನೆ. ನೀ ಕಾಡಿಗೆ ಹೋಗಬೇಡ. ಇಲ್ಲೇ ಇರು'' ಎಂದಳು ಕೌಸಲ್ಯೆ.

ತಂದೆ ತಾಯಿಗಳ ಸೇವೆ ಮಾಡುವುದು ಮಕ್ಕಳ ಕರ್ತವ್ಯ. ಇದಕ್ಕೆ ಮಹಾಭಾರತದಲ್ಲಿ ಒಂದು ಉದಾಹರಣೆ ಇದೆ. ಕೌಶಿಕ ಎಂಬ ಒಬ್ಬ ಬ್ರಾಹ್ಮಣ ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದ. ಮರದ ಮೇಲಿದ್ದ ಒಂದು ಬಲಾಕ ಪಕ್ಷಿ ಕೌಶಿಕನ ತಲೆಯಮೇಲೆ ಮೈಲಿಗೆ ಮಾಡಿತು. ಕೋಪದಿಂದ ನೋಡಿದ ಕೌಶಿಕ. ಅವನ ಕ್ರೂರದೃಷ್ಟಿಗೆ ಆ ಬಲಾಕ ಪಕ್ಷಿ ಸುಟ್ಟುಬಿದ್ದಿತು. "ತನಗೆ

ತಪಸ್ಸು ಸಿದ್ಧಿಸಿತು" ಎಂದು ಸಂತೋಷಿಸಿದ ಕೌಶಿಕ, ಅಲ್ಲಿಂದ ಹೊರಟ. ಒಬ್ಬ ಗೃಹಿಣಿಯ ಮನೆಯ ಮುಂದೆ ಬಂದು ನಿಂತು "ಭಿಕ್ಷಾಂದೇಹಿ" ಎಂದ. ಆ ಗೃಹಿಣಿ ಭಿಕ್ಷೆ ಹಾಕುವುದು ತಡವಾಯಿತು. ತಡವಾಗಿ ಭಿಕ್ಷೆ ತಂದ ಗೃಹಿಣಿಯನ್ನು ದುರುಗುಟ್ಟಿ ನೋಡಿದ. ಆಗ ಆ ಗೃಹಿಣಿ "ಸ್ವಾಮಿ, ಏಕೆ ಹಾಗೆ ದುರುಗುಟ್ಟಿ ನೋಡುವಿರಿ ? ನಾನೇನೂ ಬಲಾಕ ಪಕ್ಷಿಯಲ್ಲ ಸುಟ್ಟು ಬೀಳಲು" ಎಂದಳು.

ಬ್ರಾಹ್ಮಣನಿಗೆ ಆಶ್ಚರ್ಯ. ನಾನು ಬಲಾಕಪಕ್ಷಿಯನ್ನು ಸುಟ್ಟಿದ್ದನ್ನು ಇವಳು ಹೇಗೆ ತಿಳಿದಳು ಎಂದು ತರ್ಕಿಸಿದ. ಕೇಳಿದ "ತಾಯೀ, ಪಕ್ಷಿ ಸುಟ್ಟದ್ದು ನಿಮಗೆ ಹೇಗೆ ಗೊತ್ತಾಯಿತು"? ''ನಮ್ಮ ನಮ್ಮ ಧರ್ಮದಲ್ಲಿ ನಾವು ನಾವು ನಿರತರಾಗಿರುವುದರಿಂದ ಜ್ಞಾನವು ತಾನಾಗಿಯೇ ಲಭಿಸುತ್ತದೆ. ಪತಿಸೇವೆ ಮಾಡುವುದು ನನ್ನ ಧರ್ಮ. ಅದರಿಂದ ಎಲ್ಲ ವೇದ್ಯವಾಗುತ್ತದೆ'' ಎಂದಳು. ''ಹಾಗಾದರೆ ನನಗೂ ಧರ್ಮರಹಸ್ಯವನ್ನು ತಿಳಿಸಿಕೊಡಿ-ತಾಯಿ'' ಎಂದು ಪ್ರಾರ್ಥಿಸಿದ ಕೌಶಿಕ.

''ಧರ್ಮರಹಸ್ಯವನ್ನು ತಿಳಿಯಬೇಕು ಎಂದು ಇಚ್ಛಿಸುವುದಾದರೆ ಕಾಶಿಯಲ್ಲಿ ಧರ್ಮವ್ಯಾಧ ಇದ್ದಾನೆ. ಅವನ ಹತ್ತಿರ ಹೋಗಿ'' ಎಂದಳು ಆ ಗೃಹಿಣಿ. ಅದರಂತೆ ಕಾಶಿಗೆ ಹೋದ. ಧರ್ಮವ್ಯಾಧನನ್ನು ಕಂಡ. ಕೌಶಿಕ ಬ್ರಾಹ್ಮಣನನ್ನು ಕಂಡಕೂಡಲೇ ಅವನು ''ಓಹೋ ! ಬನ್ನಿ, ಬನ್ನಿ. ಆ ಪತಿವ್ರತೆ ನಿಮ್ಮನ್ನು ಇಲ್ಲಿಗೆ ಕಳುಹಿಸಿದರು ಅಲ್ಲವೇ'' ಎಂದು ಸ್ವಾಗತಿಸಿದ.

ಬ್ರಾಹ್ಮಣನಿಗೆ ಆಶ್ಚರ್ಯ. ಒಳಗೆ ಕರೆದುಕೊಂಡು ಹೋದ. ನಿರ್ಮಲವಾಗಿದ್ದ ಕೊರಡಿಯಲ್ಲಿ ತೂಗು ಮಂಚದ ಮೇಲೆ ವೃದ್ಧ ದಂಪತಿಗಳು ಕೂತಿದ್ದರು. ಅವರನ್ನು ತೋರಿಸಿ ಧರ್ಮವ್ಯಾಧ ''ಇವರೇ ನನ್ನ ದೈವ'' ಎಂದ. ಧರ್ಮ ಬಹಳ ಸೂಕ್ಷ್ಮವಾದುದು. ಅವರವರಿಗೆ ವಿಹಿತವಾದ ಕರ್ಮವನ್ನು ಆಚರಿಸುವುದರಲ್ಲೇ ಶ್ರೇಯಸ್ಸು ಸಿದ್ಧಿಸುತ್ತದೆ. ಮಗನಾದವನು ಮಾತಾಪಿತೃಗಳನ್ನು ಸೇವಿಸಬೇಕು. ಅದು ಅವನ ಧರ್ಮ. ಬೇರೆ ಯಜ್ಞ, ದಾನ, ತಪಗಳಿಂದ ಲಭ್ಯವಾಗಬಹುದಾದ ಪುಣ್ಯವೆಲ್ಲ ಅವರವರ ಧರ್ಮವನ್ನು ಮಾಡುವುದರಲ್ಲೇ ಲಭ್ಯವಾಗುತ್ತದೆ'' ಎಂದ ಧರ್ಮವ್ಯಾಧ, ಕೌಶಿಕನಿಗೆ ಧರ್ಮದ ಅರಿವು ಆಯಿತು.

''ರಾಮೋ ವಿಗ್ರಹವಾನ್ ಧರ್ಮಃ'' ಎಂದರು ವಾಲ್ಮೀಕಿ. ಧರ್ಮವೇ ಮೂರ್ತ ಸ್ವರೂಪವಾಗಿರುವ ರಾಮ ಧರ್ಮಕ್ಕೆ ವಿರುದ್ಧವಾಗಿ ಎಂದಿಗೂ ನಡೆಯನು. ಎಂದೇ ಹೇಳಿದ ''ಅಮ್ಮಾ, ನೀ ಹೇಳುವುದು ಸರಿ. ಮೊದಲು ತಂದೆ ಹೇಳಿದ ಮಾತು. ಆಮೇಲೆ ನಿನ್ನ ಮಾತು. ಅಲ್ಲದೆ ದಶರಥ ನನಗೂ, ನಿನಗೂ ಎಲ್ಲರಿಗೂ ಪೂಜ್ಯ. ಅವನ ಮಾತನ್ನು ಕೇವಲ ನಾನು ಮಾತ್ರವಲ್ಲ, ಎಲ್ಲರೂ ನಡೆಸಬೇಕು. ಆದ್ದರಿಂದ ಹೋಗಲು ಅಪ್ಪಣೆ ಕೊಡು'' ಎಂದ

''ಮಗು ರಾಮ, ನೀ ಕಾಡಿಗೆ ಹೋದಮೇಲೆ ನಾ ಬದುಕಲು ಸಾಧ್ಯವಿಲ್ಲ. ಕರು ಇರುವ ಕಡೆ ತಾನೇ ಹಸು ಇರುತ್ತದೆ ? ನೀ ಇರುವಲ್ಲಿ ನಾನೂ ಇರುತ್ತೇನೆ. ನಾನೂ ನಿನ್ನೊಂದಿಗೆ ಕಾಡಿಗೆ ಬರುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗು.''

''ಅಮ್ಮ, ಸಾಧ್ಯವಿಲ್ಲ. ನಾ ಕಾಡಿಗೆ ಹೋಗುವುದರಿಂದ ದಶರಥ ಪರಿತಪಿಸುತ್ತಾನೆ. ಅಪ್ಪನನ್ನು ನೋಡಿಕೊಳ್ಳಲು ಯಾರೂ ಇರುವುದಿಲ್ಲ. ನಾ ಇಲ್ಲದಿರುವಾಗ ನೀನು ತಂದೆಯನ್ನು ನೋಡಿಕೊಳ್ಳಬೇಕು. ಹೆಂಗಸಿಗೆ ಪತಿಯೇ ಸರ್ವಸ್ವ. ಪತಿಯನ್ನು ಅನುಸರಿಸುವುದು ಆರ್ಯ ಸ್ತ್ರೀಯ ಲಕ್ಷಣ.''

"ರಾಮ, ನೀನು ಧರ್ಮಪಾಶದಲ್ಲಿ ನನ್ನನ್ನು ಕಟ್ಟುತ್ತಿದ್ದೀಯೆ. ನಾ ಏನು ಮಾಡಲೂ ಆಗುತ್ತಿಲ್ಲ, ನೀ ಕಾಡಿಗೆ ಹೋಗುತ್ತೀ ಎಂದು ಕೇಳಿಯೂ ನನ್ನ ಎದೆ ಬಿರಿಯದೆ ಇದೆಯಲ್ಲ, ಅದು ನಿಜವಾಗಿ ವಜ್ರಕ್ಕಿಂತಲೂ ಕಠಿಣವಾಗಿದೆ. ನಾ ಮಾಡಿದ ಪೂಜೆ, ದಾನ, ತಪಸ್ಸು, ಯಜ್ಞ ಎಲ್ಲ ನಿಷ್ಫಲವಾಯಿತಲ್ಲಾ" ಎಂದು ಕೌಸಲ್ಯೆ ಗೋಳಿಡಲು ಪ್ರಾರಂಭಿಸಿದಳು.

ರಾಮ "ಅಮ್ಮ, ಯೋಚಿಸಬೇಡ, ನೀ ಮಾಡಿದ ತಪಸ್ಸು, ದಾನ, ಎಲ್ಲ ನನ್ನನ್ನು ಕಾಡಿನಲ್ಲಿ ರಕ್ಷಿಸುತ್ತದೆ. ನನ್ನನ್ನು ಹರಸಿ ಕಳುಹಿಸು. ಹದಿನಾಲ್ಕು ವರ್ಷ ಬೇಗ ಕಳೆದುಬಿಡುತ್ತದೆ, ಆಮೇಲೆ ನಾ ನಿನ್ನ ಬಳಿಗೆ ಹಾರಿ ಬಂದುಬಿಡುತ್ತೇನೆ. ಅಮ್ಮಾ, ಇಗೋ ! ನಮಸ್ಕರಿಸುತ್ತೇನೆ. ಆಶೀರ್ವಾದಮಾಡಿ ಕಳುಹಿಸು" ಎಂದ.

ನೋಡಿದಳು ಕೌಸಲ್ಯೆ. ದೃಢವ್ರತ, ಧರ್ಮಚಾರಿ ನನ್ನ ಮಗ. ಹಿಡಿದ ಪಟ್ಟನ್ನು ಬಿಡುವವ ನಲ್ಲ ಎಂದು ತಿಳಿದಳು. ತನ್ನ ದುಃಖವನ್ನು ತಡೆದುಕೊಂಡು ರಾಮನಿಗೆ ಆಶೀರ್ವಾದ ಮಾಡಿದಳು. ಶಾಂತಿ ಹೋಮವನ್ನು ಮಾಡಿಸಿದಳು. ರಾಮನಿಗೆ ಒಳ್ಳೆಯದಾಗಲಿ ಎಂದು ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನು ಕೊಟ್ಟಳು. ಮಗನನ್ನು ಅಪ್ಪಿಕೊಂಡಳು. ಶಿರವನ್ನು ಆಘ್ರಾಣಿಸಿದಳು. "ಕಣ್ಮಣಿ ರಾಮ, ನಿನಗೆ ಸಮಸ್ತ ಸನ್ಮಂಗಳಗಳೂ ಆಗಲಿ, ಅಮೃತವನ್ನು ತರಲು ಹೊರಟ ಗರುಡನಿಗೆ ವಿನತೆ ಯಾವ ಮಂಗಳ ಮಾಡಿದಳೋ ಆ ಮಂಗಳ ನಿನಗಾಗಲಿ. ಭೂಮಿಯನ್ನು ಅಳೆದ ತ್ರಿವಿಕ್ರಮನಿಗೆ ಅದಿತಿದೇವಿ ಯಾವ ಮಂಗಳವಾಗಲಿ ಎಂದು ಹರಸಿದಳೋ ಆ ಮಂಗಳ ನಿನಗಾಗಲಿ. ನೀನು ಹೋಗುವಾಗ, ಮಲಗುವಾಗ, ಎಲ್ಲ ಕಾಲಗಳಲ್ಲಿಯೂ ನಿನ್ನನ್ನು ಆ ಪರಮಾತ್ಮ ರಕ್ಷಿಸಲಿ. ರಾಮ, ವನದಲ್ಲಿ ನಿನ್ನನ್ನು ವನದೇವತೆಗಳು, ಸೂರ್ಯ ಚಂದ್ರರು, ಅಗ್ನಿ ವಾಯುಗಳು, ಇಂದ್ರ ಉಪೇಂದ್ರರು, ಸಮಸ್ತರೂ ರಕ್ಷಿಸಲಿ. ಅಷ್ಟದಿಕ್ಪಾಲಕರೂ ಸದಾ ನಿನ್ನನ್ನು ಬೆಂಬಿಡದೆ ಕಾಯು ತ್ತಿರಲಿ. ಮೇಲಾಗಿ, ಮಗು ! ಯಾವ ಧರ್ಮವನ್ನು ನೀನು ನಂಬಿರುವೆಯೋ ಆ ಧರ್ಮ, ಆ ಸತ್ಯ, ನಿನ್ನನ್ನು ಕಾಯಲಿ. ಯಾವ ಯಾವ ಮಂಗಳಗಳಿವೆಯೋ ಅವೆಲ್ಲ ನಿನಗಾಗಲಿ. ದೃಢ ಕಾಯನಾಗಿ, ತೇಜಸ್ವಿಯಾಗಿ. ವಿಜಯಿಯಾಗಿ, ವಿಜಯರಾಘವ ಎನಿಸಿಕೊಂಡು ಶೀಘ್ರವಾಗಿ ಮಂಗಳಮೂರ್ತಿಯಾಗಿ ಹಿಂದಿರುಗು" ಎಂದು ಮನಸಾರೆ ಹರಸಿದಳು. ಅಪ್ಪಿಕೊಂಡಳು. ಒಮ್ಮೆ, ಮತ್ತೊಮ್ಮೆ, ಇನ್ನೊಮ್ಮೆ ಹಲವಾರು ಬಾರಿ, ಬಿಡಲಾರದೆ ತನ್ನ ಮುದ್ದುಗುವರ ಸಿರಿರಾಮನನ್ನು ಅಪ್ಪಿದಳು. ಮೈದಡವಿದಳು. ತಲೆಯನ್ನು ಆಘ್ರಾಣಿಸಿದಳು. ರಾಮನೂ ಪದೇಪದೇ ಕೌಸಲ್ಯೆಯ ಪಾದಗಳನ್ನು ಹಿಡಿದು ನಮಸ್ಕರಿಸಿದ, ಅವಳ ಪಾದವನ್ನು ಕಣ್ಣಿಗೆ ಒತ್ತಿಕೊಂಡ. ಅಮ್ಮನಿಂದ ಬೀಳ್ಕೊಂಡು ಸೀತೆಯ ಅಂತಃಪುರದತ್ತ ನಡೆದ.

ಸೀತೆಯ ಅಂತಃಪುರಕ್ಕೆ ಬರುವಾಗ ಅವಾಙ್ಮುಖನಾಗಿ ಬಂದ ಎಂದು ವಾಲ್ಮೀಕಿ ಹೇಳಿದಾರೆ. ರಾಮಾಯಣದಲ್ಲಿ ವಾಲ್ಮೀಕಿ ಎರಡು ಕಡೆಗಳಲ್ಲಿ ಈ ರೀತಿಯಾಗಿ ಹೇಳಿದಾರೆ. ಸೀತೆಯ ಅಂತಃ ಪುರಕ್ಕೆ ರಾಮ ಬರುವಾಗ ಒಂದುಸಾರಿ. ರಾವಣ ತನ್ನಲ್ಲಿದ್ದ ಅಸ್ತ್ರ–ಶಸ್ತ್ರಗಳನ್ನೂ, ರಥ, ಸಾರಥಿ, ಕುದುರೆ ಎಲ್ಲವನ್ನೂ ಕಳೆದುಕೊಂಡು ರಾಮನಮುಂದೆ ತಲೆತಗ್ಗಿಸಿ ನಿಲ್ಲುತ್ತಾನೆ ಎನ್ನುವುದು ಎರಡನೆಯಸಾರಿ.

ರಾಮ ಬರುವುದನ್ನು ಕಂಡತಕ್ಷಣ ಎದ್ದುನಿಂತಳು ಸೀತೆ. ರಾಮನ ಮುಖವನ್ನು ಗಮನಿಸಿ ದಳು. ಎಂದಿನಂತಿರಲಿಲ್ಲ ಅವನ ಮುಖ. ಮ್ಲಾನವದನನಾಗಿದ್ದ ರಾಮನನ್ನು ಕಂಡು ಸೀತೆ "ಆರ್ಯಪುತ್ರ—ಇದೇನು ? ಪಟ್ಟಾಭಿಷೇಕ ಮಾಡಿಕೊಂಡು ಬರುವುದು ಹೀಗೆಯೇ ? ಪಟ್ಟಾಭಿ-

ಷೇಕವಾದಮೇಲೆ ಶತಧಾರೆಗಳುಳ್ಳ ಶ್ವೇತಚ್ಛತ್ರದ ಪಡಿನೆರಳಿನಲ್ಲೇತಾನೇ ನೀವು ಬರಬೇಕು ? ಪಟ್ಟದ ಆನೆಯನ್ನೇರಿ ಬೆಳ್ಗೊಡೆಯ ಅಡಿಯಲ್ಲಿ, ಇಕ್ಕೆಲದಲ್ಲೂ ಚಂದ್ರನಪ್ರಭೆಯ ಚಾಮರಗಳು ಬೀಸುತ್ತಿರುವಂತೆ ಅಸಂಖ್ಯಾತ ಪರಿಜನರೊಡಗೂಡಿ ಬರುವ ನಿಮ್ಮನ್ನು ನಾ ಕಾಣಬೇಕು ಎಂದಿದ್ದೆ. ಇದೇನು ಹೀಗೆ ಒಬ್ಬರೆ ನಡೆದುಬರುತ್ತಿದೀರಿ ಶ್ವೇತಚ್ಛತ್ರ ಎಲ್ಲಿ ? ಚಾಮರ ಎಲ್ಲಿ ? ಪಟ್ಟದ ಆನೆ ಎಲ್ಲಿ ? ಪರಿಜನರು ಎಲ್ಲಿ ? ಏಕೆ ಹೀಗೆ ಮುಖ ಬಾಡಿದೆ ?" ಎಂದು ಒಂದಾದಮೇಲೊಂದು ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿಬಿಟ್ಟಳು ಸೀತೆ. ರಾಮ, "ವಿದೇಹ ರಾಜಪುತ್ರಿ ! ನೀ ಎಲ್ಲ ತಿಳಿದವಳು. ನಿನಗೆ ನಾನು ಹೆಚ್ಚಾಗಿ ಧರ್ಮವನ್ನು ಬೋಧಿಸಬೇಕಾಗಿಲ್ಲ. ನನ್ನ ತಂದೆಯ ಆಜ್ಞೆಯಂತೆ ಹದಿನಾಲ್ಕು ವರ್ಷ ನಾನು ಕಾಡಿನಲ್ಲಿ ವಾಸಮಾಡಬೇಕಾಗಿದೆ. ಅದಕ್ಕಾಗಿ ಈಗ ಅರಣ್ಯಕ್ಕೆ ಹೊರಡುತ್ತಿದ್ದೇನೆ. ನಾನಿಲ್ಲದಿರುವಾಗ ನೀನು ಸರಿಯಾಗಿ ನಡೆದುಕೊಳ್ಳಬೇಕು. ಬೆಳಗಿನಜಾವ ಬೇಗ ಎದ್ದು ದೈವಕಾರ್ಯವನ್ನು ಮಾಡು. ಆಮೇಲೆ ನಿನ್ನ ಅತ್ತೆ ಮಾವಂದಿರಸೇವೆಯನ್ನು ಮಾಡು. ಭರತ ರಾಜನಾಗುತ್ತಾನೆ. ಇದುವರೆಗಿದ್ದ ಸಲುಗೆಯಿಂದ ಭರತನೊಡನೆ ವರ್ತಿಸಬೇಡ. ಅವನು ಮಹಾರಾಜಪದವಿಯಲ್ಲಿರುತ್ತಾನೆ. ಔಚಿತ್ಯವನ್ನು ಮೀರದೆ ವರ್ತಿಸುತ್ತಿರು. ಇವನ್ನು ಹೇಳಬೇಕೆಂದೇ ಬಂದೆ" ಎಂದ.

"ಇದೇನು ನೀವು ಹೇಳುವುದು ? ನಿಮಗೆ ಅಸೂಯೆ, ಮತ್ಸರ ಈ ಗುಣಗಳೆಲ್ಲ ಇಲ್ಲ ಎಂದೇ ತಿಳಿದಿದ್ದೆ. ಈಗ ನೋಡಿದರೆ ನನ್ನ ವಿಷಯದಲ್ಲಿ ನಿಮಗೆ ಅಸೂಯ ಇದೆ ಎಂದು ಗೊತ್ತಾಗುತ್ತದೆ. ನೀವು ಮಾತ್ರ ಹದಿನಾಲ್ಕು ವರ್ಷ ವನವಾಸಮಾಡಿ "ಧರ್ಮಪುತ್ರ" ಎಂಬ ಕೀರ್ತಿ ಪಡೆಯಬೇಕು. ನಾ ಮಾತ್ರ ನಿಮ್ಮೊಡನೆ ಹದಿನಾಲ್ಕು ವರ್ಷ ವನವಾಸಮಾಡಿ "ಧರ್ಮಪತ್ನಿ" ಎಂದು ಕೀರ್ತಿಯನ್ನು ಪಡೆಯಬಾರದೋ" ಎಂದಳು ಸೀತೆ.

"ಹಾಗಲ್ಲ ಸೀತೆ. ನೀನು ಇನ್ನೂ ಬಾಲೆ. ಅರಣ್ಯದ ದುಃಖಗಳನ್ನೂ, ಕಷ್ಟಗಳನ್ನೂ ನೀ ಅರಿಯೆ. ನಾ ಹೇಳುವುದನ್ನು ಕೇಳು—ನೀ ಇಲ್ಲೇ ಅತ್ತೆಮಾವಂದಿರ ಸೇವೆ ಮಾಡಿಕೊಂಡಿರು. ಹದಿನಾಲ್ಕು ವರ್ಷ ಹದಿನಾಲ್ಕು ಗಂಟೆಗಳಂತೆ ಕಳೆದುಹೋಗುತ್ತದೆ. ನಾ ಬಂದುಬಿಡುತ್ತೇನೆ."

"ಅದೆಲ್ಲ ಇರಲಿ. ಪ್ರಪಂಚದಲ್ಲಿ ಅವರವರು ಮಾಡಿದ ಕರ್ಮಗಳಿಗೆ ಅವರವರೇ ಹೊಣೆ. ಯಾರೂ ಯಾರ ದುಃಖದಲ್ಲೂ ಭಾಗಿಗಳಾಗುವುದಿಲ್ಲ. ಆದರೆ ಪತ್ನಿಯ ವಿಷಯ ಹಾಗಲ್ಲ. ಪತಿಯ ಸುಖದುಃಖದಲ್ಲಿ ಸಮಪಾಲು ಅವಳದು. ಅದಕ್ಕೇ ಅರ್ಧಾಂಗಿ ಎನಿಸಿಕೊಂಡಿದ್ದಾಳೆ. ಹೆಂಗಸಿಗೆ ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ ಎಲ್ಲರೂ ಮಿತವಾದ ಸುಖವನ್ನು ಕೊಡುತ್ತಾರೆ. ಪತಿಯೊಬ್ಬನೆ ಅಮಿತವಾದ ಸುಖವನ್ನು ಕೊಡತಕ್ಕವ. "ಅಮಿತಸ್ಯ ಚ ದಾತಾರಂ" ಅಮಿತವಾದ ಸೌಖ್ಯ ಪತಿಯಿಂದಲೇ, ಆರ್ಯಸ್ತ್ರೀಯಾದವಳಿಗೆ ಪತಿಯೇ ಸರ್ವಸ್ವ. ನಮ್ಮ ತಂದೆ ಹೇಳಿದಂತೆ ನಾನು ನಿಮ್ಮನ್ನು ನೆರಳಿನಂತೆ ಅನುಸರಿಸುವವಳು. ನಾನೂ ನಿಮ್ಮೊಡನೆ ಬರುತ್ತೇನೆ. ನೀವು ಕಾಡಿಗೆ ಹೋದರೆ ನಿಮಗಿಂತ ಮುಂಚಿತವಾಗಿ ನಾ ಹೋಗಿ ಕಾಡಿನಲ್ಲಿರುವ ಮುಳ್ಳುಕಲ್ಲುಗಳನ್ನು ತೆಗೆದುಹಾಕಿ ನಿಮಗೆ ದಾರಿಮಾಡಿಕೊಡುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗಿ "

"ಸೀತೆ ! ಇದೇನು ನೀ ಹೇಳುವುದು ? ನಿನ್ನ ಹಿತಕ್ಕಾಗಿಯೇ ನಾನು ನಿನ್ನನ್ನು ಬರಬೇಡ ಎಂದೆ. ಕಾಡು ಎಂದರೆ ಏನೆಂದುಕೊಂಡಿರುವೆ ? ಸೂರ್ಯರಶ್ಮಿಯನ್ನೂ ಸರಿಯಾಗಿ ಕಾಣದ ನೀನು ಕಾಡಿಗೆ ಬಂದು ಕಷ್ಟಪಡುತ್ತೇನೆ ಎನ್ನುವೆಯಲ್ಲ. ಕಾಡಿನಲ್ಲಿ ಭಯಂಕರವಾದ ಮೃಗ ಪಕ್ಷಿ

ಗಳಿಂದ, ಹಾವುಗಳಿಂದ, ಪಕ್ಷಿ ರಾಕ್ಷಸ ಪಿಶಾಚಗಳಿಂದ ಬಾಧೆಯುಂಟು. ಆಡಿಗಡಿಗೆ ತೊಂದರೆ ತಪ್ಪಿದ್ದಲ್ಲ. ದಾರಿಯೋ ದುರ್ಗಮವಾದುದು ಕಲ್ಲು ಮುಳ್ಳುಗಳಿಂದ ಕೂಡಿದುದು. ಮೇಲಾಗಿ ಕಾಡಿನಲ್ಲಿ ನಾನು ಮುನಿವೃತ್ತಿಯಲ್ಲಿರಬೇಕು. ದಿನವೂ ನಿಯಮದಿಂದ ಕಾಲಕಾಲಕ್ಕೆ ಸ್ನಾನ, ಜಪ-ತಪ, ಅಗ್ನಿಕಾರ್ಯ, ಪಿತೃಕಾರ್ಯ ಎಲ್ಲ ಮಾಡಬೇಕು. ನೀನೋ ಜನಕನ ಮುದ್ದುಕುವರಿ. ಕಷ್ಟವನ್ನೇ ಅರಿಯದವಳು. ನನ್ನೊಂದಿಗೆ ಬರಲು ಹಠ ಮಾಡಬೇಡ. ಇಲ್ಲೇ ಇರು."

"ಆರ್ಯಪುತ್ರ. ನೀವು ಹೇಳುವ ಯಾವ ಮಾತಿಗೂ ನಾ ಬೆದರುವವಳಲ್ಲ. ನೀವು ಎಲ್ಲಿರುವಿರೋ ಅಲ್ಲೇ ನಾನು. ಇಂದ್ರಾಣಿ ಇಂದ್ರನನ್ನು ಅನುವರ್ತಿಸುವಂತೆ ಪ್ರಭೆ ಸೂರ್ಯನನ್ನು ಬಿಟ್ಟಗಲದಂತೆ ನಿಮ್ಮನ್ನು ಬಿಟ್ಟು ನಾನು ಒಂದು ಕ್ಷಣವೂ ಇರಲಾರೆ. ಕಾಡಿನಲ್ಲಿ ಕ್ರೂರ ಮೃಗ ಪಕ್ಷಿಗಳಿವೆ ಎಂದು ಹೆದರಿಸುತ್ತೀರಲ್ಲ; ನಾನೇನೂ ನಿಮ್ಮ ನಿಯಮಕ್ಕೆ ಭಂಗವುಂಟುಮಾಡುವುದಿಲ್ಲ. ನಿಮ್ಮ ಧರ್ಮಕ್ಕೆ ಸಹಾಯಕಳಾಗಿಯೇ ಇರುತ್ತೇನೆ. ಬ್ರಹ್ಮಚಾರಿಣಿಯಾಗಿ ಇರುತ್ತೇನೆ. ನಿಮ್ಮೊಡನೆ ಇರಬೇಕು ಎಂದು ಬಯಸುತ್ತೇನೆ. ನಿಮ್ಮ ಸಹವಾಸ ಬೇಕು ಎಂದು ಆಸೆಪಡುತ್ತೇನೆ ಅಷ್ಟೆ. ಅಲ್ಲದೆ ಕೇಳಿ, ಆರ್ಯಪುತ್ರ! ನೀವೇನಾದರೂ ನನ್ನನ್ನು ಬಿಟ್ಟು ಹೋದರೆ ನಾಳೆ ನನ್ನ ತಂದೆ ನಿಮ್ಮ ಬಗ್ಗೆ ಏನೆಂದುಕೊಂಡಾರು ?

**ಕಿಂ ತ್ವಾ ಮನ್ಯತ ವೈದೇಹಃ ಪಿತಾ ಮೇ ಮಿಥಿಲಾಧಿಪಃ।**
**ರಾಮ, ಜಾಮಾತರಂ ಪ್ರಾಪ್ಯ ಸ್ತ್ರಿಯಂ ಪುರುಷವಿಗ್ರಹಂ॥**

"ಹೆಂಡತಿಯನ್ನು ಕಾಡಿಗೆ ಕರೆದುಕೊಂಡು ಹೋಗಲು ಹೆದರಿ ಅರಮನೆಯಲ್ಲೇ ಬಿಟ್ಟು ಹೋದ. ಒಬ್ಬ ಹೆಂಗಸನ್ನು ಕಾಪಾಡಲು ಸಾಧ್ಯವಿಲ್ಲದವ. ನನ್ನ ಅಳಿಯ ಪುರುಷರೂಪದ ಸ್ತ್ರೀ ಎಂದುಕೊಂಡಾನು" ಎಂದು ಪ್ರಣಯಕೋಪದಿಂದ, ರಾಮನಲ್ಲಿ ಇರುವ ಅತಿಶಯವಾದ ಪ್ರೇಮದಿಂದ ತನ್ನನ್ನು ಎಲ್ಲಿ ಬಿಟ್ಟು ಹೊರಟು ಹೋಗುತ್ತಾನೋ ಎಂಬ ಭಯದಿಂದ ಸೀತೆ ಹೀಗೆಲ್ಲ ಹೇಳಿದಳು. ರಾಮ ಎಲ್ಲವನ್ನೂ ಕೇಳಿದ. "ಸರಿ, ನೀ ಬರುವುದಾದರೆ ಹೊರಡು. ಹೊರಡುವುದಕ್ಕಿಂತ ಮುಂಚೆ ನಿನ್ನೆಲ್ಲ ಧನ, ಕನಕ, ವಸ್ತ್ರ, ಆಭರಣಗಳನ್ನೂ ದೀನರಿಗೆ ದಾನಮಾಡಿ ಸಿದ್ಧಳಾಗು'' ಎಂದ.

"ಓಹೋ, ಎಲ್ಲವನ್ನೂ ಇದೀಗಲೇ ಕೊಟ್ಟುಬಿಡುತ್ತೇನೆ. ನಿಮ್ಮೊಡನೆ ಇರುವುದೇ ನನಗೆ ಭೋಗ, ಭಾಗ್ಯ, ಎಲ್ಲ. ಈ ಆಭರಣ, ವಸ್ತ್ರ ನನಗೆ ಬೇಕಿಲ್ಲ" ಎಂದು ಸೀತೆ ರಾಮನೊಡನೆ ಹೊರಡಲು ಸಜ್ಜಾದಳು.

ಸೀತಾರಾಮರು ವನಕ್ಕೆ ಹೊರಡಲು ಸಿದ್ಧರಾದುದನ್ನು ನೋಡಿದ ಲಕ್ಷ್ಮಣ. ಅಳುತ್ತಾ ಬಂದ. "ಅತ್ತಿಗೆ ನಾನೂ ಅಣ್ಣನೊಡನೆ ಬರುವಂತೆ ದಯವಿಟ್ಟು ಶಿಫಾರಸು ಮಾಡಿ" ಎಂದ.

"ಅಣ್ಣ, ನಾನೂ ನಿನ್ನೊಂದಿಗೆ ಬರುತ್ತೇನೆ. ನಿಮ್ಮಿಬ್ಬರನ್ನೂ ಹದಿನಾಲ್ಕು ವರ್ಷಗಳೂ ಅಹೋರಾತ್ರಿ ಸೇವೆ ಮಾಡುತ್ತೇನೆ. ನನ್ನನ್ನೂ ನಿನ್ನೊಂದಿಗೆ ಕರೆದುಕೊಂಡು ಹೋಗು" ಎಂದು ಬೇಡಿದ.

"ಲಕ್ಷ್ಮಣ, ನಾ ಇಲ್ಲದಿರುವಾಗ ತಂದೆಯನ್ನೂ, ತಾಯಿಯನ್ನೂ ನೋಡಿಕೊ'' ಎಂದ ರಾಮ.

"ಅಣ್ಣಾ, ನೀನೇ ನನಗೆ ತಂದೆ, ತಾಯಿ, ಬಂಧು, ಬಳಗ, ಸರ್ವಸ್ವ. ನಾ ಬಂದು ನಿಮ್ಮ

ಸೇವೆಯನ್ನು ಮೂರು ಹೊತ್ತೂ ಮಾಡಿಕೊಂಡಿರುತ್ತೇನೆ, ಅನುಮತಿ ಕೊಡು'' ಎಂದು ಅಂಗಲಾಚಿದ.

ರಾಮ ಅನುಮತಿಸಿದ.

ಸೀತಾರಾಮರು ತಮ್ಮಲ್ಲಿದ್ದ ವಸ್ತುವಾಹನಗಳನ್ನೂ, ಆಭರಣಗಳನ್ನೂ ದಾನ ಮಾಡಿದರು. ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣ ಬಂದ. "ರಾಮ, ನೀನು ದಾನ ಮಾಡುತ್ತಿರುವುದನ್ನು ಕೇಳಿದೆ. ನಾನು ಬಡವ–ಮಕ್ಕಳೊಂದಿಗ, ನನಗೆ ಏನಾದರೂ ಕೊಡು" ಎಂದ,

ಆ ಸಮಯದಲ್ಲಿ ರಾಮನಿಗೆ ಸ್ವಲ್ಪ ಹಾಸ್ಯಮಾಡೋಣ ಎನಿಸಿತು. "ವಿಪ್ರೋತ್ತಮರೆ, ನಿಮ್ಮ ಕೈಯಲ್ಲಿರುವ ಬೆತ್ತವನ್ನು ಎಸೆಯಿರಿ. ಎಷ್ಟು ದೂರದವರೆಗೆ ಆ ಬೆತ್ತ ಹೋಗಿಬೀಳು ವುದೋ ಅದುವರೆಗೆ ಇರುವ ಗೋಧನ ಎಲ್ಲ ನಿಮ್ಮದೇ ಆಗುತ್ತದೆ" ಎಂದ.

ಬ್ರಾಹ್ಮಣ ಸೊಂಟಕ್ಕೆ ಪಂಚೆ ಸುತ್ತಿದ, ಕೈಯಲ್ಲಿ ಬೆತ್ತವನ್ನು ಹಿಡಿದು ತಿರುಗಿಸಿ ದೂರ ಎಸೆದ. ಅದು ಸರಯೂ ನದಿಯ ಆಚೆಯ ದಡದವರೆಗೆ ಹೋಗಿ ಬಿತ್ತು.

ರಾಮ "ಬ್ರಾಹ್ಮಣೋತ್ತಮರೆ, ನಿಮ್ಮ ಶಕ್ತಿ ಅಗಾಧವಾದುದು. ದಯವಿಟ್ಟು ಹಾಸ್ಯ ಮಾಡಿದೆ ಎಂದು ಕೋಪಿಸಬೇಡಿ" ಎಂದು ಹೇಳಿ ಅಪಾರವಾದ ಗೋಧನವನ್ನು ಆ ಬ್ರಾಹ್ಮಣನಿಗೆ ದಾನವನ್ನಾಗಿ ಕೊಟ್ಟ.

"ಹಿರಿಯರಲ್ಲಿ ಯಾವಾಗಲೂ ಪ್ರಮಾದ ಸಲ್ಲದು" ಎಂದು ತಾನೇ ನಡೆದು ತೋರಿಸಿದ.

ಸೀತಾಲಕ್ಷ್ಮಣರೊಡಗೂಡಿ ದಶರಥನ ಬಳಿ ಬಂದ ರಾಮ, ಅವನ ಅನುಮತಿಯನ್ನು ಪಡೆ ಯಲು. ದಶರಥ ತನ್ನ ರಾಣೀ ವಾಸದವರನ್ನೆಲ್ಲ ಕರೆಸಿದ. ಎಲ್ಲರೂ ಗೋಳಿಡುವವರೇ. ಬಂದವನೇ ರಾಮ ದಶರಥನಿಗೆ ನಮಸ್ಕರಿಸಿ, "ಹೋಗಿ ಬರಲೇ ? " ಎಂದ.

ದಶರಥನ ಮುಖ ಪೇಲವಾಗಿತ್ತು. ಶೋಕದಿಂದ ಭಾರವಾದ ಹೃದಯ. ಮಾತೇ ಹೊರಡ ದಂತೆ ಆಗಿತ್ತು. ಕಷ್ಟದಿಂದ "ರಾಮಾ–ಈ ಪಾಪಿನಿ ನನ್ನನ್ನು ಧರ್ಮಪಾಶದಿಂದ ಬಂಧಿಸಿದ್ದಾಳೆ. ಅಯ್ಯೋ ! ಹದಿನಾಲ್ಕು ವರ್ಷಗಳು ಕಳೆದ ಬಳಿಕ ಈ ನನ್ನ ಭುವನಾಭಿರಾಮನನ್ನು ನೋಡುವವರೇ ಧನ್ಯರು" ಎಂದು ವಿಲಪಿಸತೊಡಗಿದ.

ಮಂತ್ರಿಗಳು. ಪುರೋಹಿತರು ಎಲ್ಲರೂ ಕೈಕೇಯಿಯನ್ನು "ನಿನ್ನ ಹಠವನ್ನು ಬಿಡು" ಎಂದು ಪ್ರಾರ್ಥಿಸಿದರು. ಕೈಕೇಯಿ ಜಗ್ಗಲಿಲ್ಲ.

ಸುಮಂತ್ರನಿಗೆ ಕೋಪ ಬಂದಿತು. "ಕೈಕೇಯಿ, ಕುಲಘಾತಿನಿ, ನಿನ್ನ ಕುಲಕ್ಕೆ ತಕ್ಕಂಥ ಕೆಲಸವನ್ನೇ ಮಾಡಿದೆ ನಿನ್ನ ತಾಯಿಗೆ ಸರಿಯಾದ ಮಗಳು ಎನಿಸಿದೆ. ಹೇಳುತ್ತೇನೆ ಕೇಳು. ಒಮ್ಮೆ ನಿನ್ನ ತಂದೆ ನಿನ್ನ ತಾಯಿಯೊಡನೆ ಆಸೀನನಾಗಿದ್ದ ವೇಳೆಯಲ್ಲಿ, ನಿನ್ನ ತಂದೆ ನಕ್ಕ. ವರಪ್ರಭಾವದಿಂದ ಅವನಿಗೆ ತಿರ್ಯಗ್ ಯೋನಿಗಳಲ್ಲಿ ಜನಿಸಿದ ಪಶುಪಕ್ಷಿಗಳ ಭಾಷೆಯ ಅರಿವಿತ್ತು. ನಿನ್ನ ತಾಯಿಯೊಡನೆ ಕುಳಿತಿದ್ದಾಗ ಯಾವುದೋ ಪಕ್ಷಿ ಆಡುತ್ತಿದ್ದ ಮಾತು ಕೇಳಿ ನಕ್ಕ. ನಗುವಿನ ಕಾರಣವನ್ನು ತಿಳಿಯಲೇಬೇಕು ಎಂದು ನಿನ್ನ ತಾಯಿ ಹಠಮಾಡಿದಳು. "ತನಗೆ ತಿಳಿದಿರುವ ಭಾಷೆಯ ರಹಸ್ಯವನ್ನು ಹೇಳಿದರೆ ತಲೆ ಸಿಡಿದುಹೋಗುತ್ತದೆ" ಎಂದು ನಿನ್ನ ತಂದೆ ಹೇಳಿದರೂ "ಪರವಾಗಿಲ್ಲ, ನನಗೆ ಹೇಳಿಯೇ ತೀರಬೇಕು" ಎಂದು ಛಲ ಮಾಡಿದಳು. ಅಂಥ ಛಲಗಾತಿಯ ಮಗಳಲ್ಲವೆ ನೀನು" ಎಂದು ಧಿಕ್ಕರಿಸಿದ ಕೈಕೇಯಿಯನ್ನು.

ಇದನ್ನೆಲ್ಲ ಕೈಕೇಯಿ ಲೆಕ್ಕಿಸಲಿಲ್ಲ. ವನವಾಸಕ್ಕೆ ಹೊರಡಬೇಕೆಂದು ಸಿದ್ಧರಾಗಿರುವ ಸೀತಾ ರಾಮಲಕ್ಷ್ಮಣರಿಗೆ ನಾರುಮಡಿಗಳನ್ನು, ಕೃಷ್ಣಾಜಿನಗಳನ್ನು ತಂದು ಕೊಟ್ಟಳು. ಅದೆಲ್ಲಿ ಸಿದ್ಧ ಮಾಡಿದ್ದಳೋ ಅವುಗಳನ್ನು ! ರಾಮಲಕ್ಷ್ಮಣರು ನಾರುಮಡಿಯನ್ನು ಧರಿಸಿದರು. ಸೀತೆಗೆ ಅದು ಹೊಸದು. ಅಭ್ಯಾಸವಿಲ್ಲ. ಒರಟಾಗಿದ್ದ ನಾರುಡೆಯನ್ನು ಕೈಗೆ ತೆಗೆದುಕೊಂಡಳು. ರಾಮ ನನ್ನು ನೋಡಿ "ಆರ್ಯಪುತ್ರ ಇದನ್ನು ಹೇಗೆ ಧರಿಸುವುದು?" ಎಂದಳು ಮೆಲ್ಲಗೆ. ರಾಮನು ತಾನೇ ಆ ನಾರುಡೆಯನ್ನು ಕೈಯಲ್ಲಿ ತೆಗೆದುಕೊಂಡು ''ಇದೋ ಸೀತೆ–ಹೀಗೆ ಎಂದು ಸೀತೆಗೆ ಉಡಿಸಲು ತೊಡಗಿದ.

ಇದನ್ನು ನೋಡಿದರು ವಶಿಷ್ಠರು. ಸಹಿಸಲು ಆಗಲಿಲ್ಲ ಅವರಿಂದ. ಕಣ್ಣುಗಳಲ್ಲಿ ಕಿಡಿಗಳನ್ನು ಕಾರುತ್ತಿರುವರೋ ಎಂಬಂತೆ ಕೆಂಗಣ್ಣು ಮಾಡಿ ಎದ್ದರು. ಕೈಕೇಯಿಯ ಕಡೆಗೆ ತಿರುಗಿದರು. "ಹೇ ದುರ್ವೃತ್ತೇ, ಕೆಟ್ಟ ನಡತೆಯುವಳೇ–ನಿನ್ನ ಕೆಟ್ಟತನಕ್ಕೂ ಎಲ್ಲೆ ಇಲ್ಲವೆ ? ಏನೆಂದು ಕೊಂಡಿರುವೆ ಎಲ್ಲರನ್ನೂ ? ನೀನು ವನವಾಸವನ್ನು ಕೇಳಿದ್ದು ರಾಮನಿಗೆತಾನೇ ? ಸೀತೆ ಏಕೆ ಕಾಡಿಗೆ ಹೋಗಬೇಕು ? ರಾಮ ಕಾಡಿಗೆ ಹೋಗಲಿ. ಸೀತೆಯನ್ನು ಸಿಂಹಾಸನದ ಮೇಲೆ ಕೂರಿಸಿ ಪಟ್ಟಾಭಿಷೇಕ ಮಾಡುತ್ತೇವೆ. ಅವಳೇ ನಮಗೆಲ್ಲ ಸಾಮ್ರಾಜ್ಞಿಯಾಗಿ ರಾಜ್ಯಸೂತ್ರವನ್ನು ನಡೆಸುತ್ತಾಳೆ." ಎಂದು ಹೇಳಿದರು.

ಸೀತೆಗೆ ಹದಿನಾಲ್ಕು ವರ್ಷಗಳಿಗಾಗುವಷ್ಟು ಪಟ್ಟೆ ಪೀತಾಂಬರ, ಆಭರಣಗಳನ್ನು ತರುವಂತೆ ದಶರಥ ಆಜ್ಞಾಪಿಸಿದ.

ಸುಮಿತ್ರೆಯ ಬಳಿಗೆ ಬಂದ ಲಕ್ಷ್ಮಣ. ನಮಸ್ಕರಿಸಿದ. "ಅಮ್ಮಾ ಹೋಗಿ ಬರುತ್ತೇನೆ" ಎಂದ. ಆಗ ಸುಮಿತ್ರೆ ಹೇಳಿದುದನ್ನು ವಾಲ್ಮೀಕಿ ಹೃದಯಂಗಮವಾಗಿ ವರ್ಣಿಸಿದಾರೆ. ಸುಮಿತ್ರೆ ಏನು ಹೇಳಿದಳು ? ಅವಳ ವರ್ತನೆ ಹೇಗಿತ್ತು ? ಕೌಸಲ್ಯೆಯಂತೆ ಅತ್ತಳೆ ? ಹೋಗಬೇಡ ಎಂದಳೆ? ನಾನೂ ಬರುತ್ತೇನೆ ಎಂದಳೆ? ಏನು ಹೇಳಿದಳು ಸುಮಿತ್ರೆ ? ವಾಲ್ಮೀಕಿ ಹೇಳುತ್ತಾರೆ.

**ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।**
**ಅಯೋಧ್ಯಾಂ ಅಟವೀಂ ವಿದ್ಧಿ ಗಚ್ಛ ತಾತ ಯಥಾ ಸುಖಂ ॥**

"ಮಗೂ ಲಕ್ಷ್ಮಣ, ನಿನಗೆ ಇನ್ನು ಮುಂದೆ ರಾಮನೇ ತಂದೆ, ಅವನೇ ದಶರಥ ಎಂದು ತಿಳಿ. ತಾಯಿ ನಿನಗೆ ಸೀತಾಮಾತೆ. ನೀ ಹೋಗುವ ಕಾಡೇ ಅಯೋಧ್ಯೆ. ಎಲ್ಲಿ ರಾಮ ಇರುವನೋ ಅದು ಕಾಡಾದರೂ ನಾಡು. ರಾಮ ಇಲ್ಲದ ನಾಡು ಅದು ನಾಡಲ್ಲ ಕಾಡು. ಹೋಗು. ನಿನಗೆ ಮಂಗಳವಾಗಲಿ'' ಎಂದಳು ಸುಮಿತ್ರೆ.

ರಾಮಂ ದಶರಥಂ ವಿದ್ಧಿ–ಅಂದರೆ ಇನ್ನೊಂದು ಅರ್ಥವೂ ಇದೆ. ರಾಮನನ್ನು ದಶ–ರಥ ಅಂದರೆ ವಿಷ್ಣು ಎಂದು ಭಾವಿಸು. ದಶ ಅಂದರೆ ಪಕ್ಷಿ, ರಥ–ಪಕ್ಷಿಯನ್ನೇ ರಥವನ್ನಾಗಿ ಉಳ್ಳವ. ಅರ್ಥಾತ್ ಪಕ್ಷಿವಾಹನನಾದ ವಿಷ್ಣು ಎಂದು ತಿಳಿ. ಮಾ ಅಂದರೆ ಲಕ್ಷ್ಮಿ. ಸೀತೆಯನ್ನು ಲಕ್ಷ್ಮಿ ಯನ್ನಾಗಿ ಭಾವಿಸು. ಕಾಡನ್ನೇ ಅಂದರೆ ರಾಮ ಇರುವ ಕಾಡನ್ನೇ ವೈಕುಂಠವನ್ನಾಗಿ ಭಾವಿಸು.

ಸುಮಿತ್ರೆ ದೀರ್ಘದರ್ಶಿ. ಮುಂದೆ ನಡೆಯುವುದನ್ನೆಲ್ಲ ತಿಳಿದುಕೊಳ್ಳುವ ಸಾಮರ್ಥ್ಯ ಆಕೆ ಯಲ್ಲಿತ್ತು ಎಂಬುದೂ ಈ ಶ್ಲೋಕದಲ್ಲಿ ವೇದ್ಯವಾಗುತ್ತದೆ. "ಮಡದಿ ಕೈಕೇಯಿಯ ಮಾತಿಗೆ ಕಟ್ಟುಬಿದ್ದು ದಶರಥ ಇಂಥ ಅಕಾರ್ಯ ಮಾಡಿದ" ಎಂದು ಲಕ್ಷ್ಮಣ ನಿಂದಿಸುತ್ತಾನೆ. ಅದೇರೀತಿ

"ಪತಿಯನ್ನು ಅಕಾರ್ಯದಲ್ಲಿ ತೊಡಗಿಸಿದಳು ಕೈಕೇಯಿ" ಎಂದೂ ಹೇಳುತ್ತಾನೆ. ಆಗ ತಾಯಿ ಸುಮಿತ್ರೆ "ಹಾಗೆ ನಿಂದಿಸಬೇಡ "ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ" ರಾಮನನ್ನು ದಶರಥ ಎಂದೇ ತಿಳಿ–ನಾಳೆ ರಾಮನೂ ಮಡದಿ ಸೀತೆ ಹೇಳಿದ ಮಾತನ್ನೇ ಕೇಳುತ್ತಾನೆ. [ಜಿಂಕೆ ಹಿಡಿದುಕೊಡು ಎಂದು ಸೀತೆ ಹಟಮಾಡುವುದು] ಸೀತೆಯೂ ರಾಮನನ್ನು ಬಲಾತ್ಕರಿಸುತ್ತಾಳೆ. [ನೀನು ಮಾಯಾಜಿಂಕೆ ಇದು ಎಂದು ಎಚ್ಚರಿಕೆ ಕೊಟ್ಟರೂ ಕಿವಿಗೊಡದೆ ಹಟಮಾಡುತ್ತಾಳೆ.] ಮಾಂ ವಿದ್ಧಿ . . . ಸೀತೆಯನ್ನೂ ತಾಯಿ ಕೈಕೇಯಿ ಎಂದೇ ಭಾವಿಸು . . . " ಎನ್ನುತ್ತಾಳೆ.

ಈ ಶ್ಲೋಕಕ್ಕೆ ಆಚಾರ್ಯರು ಬಹಳವಾಗಿ ವ್ಯಾಖ್ಯಾನ ಮಾಡಿದಾರೆ. ಸುಮಿತ್ರೆಯ ಪಾತ್ರದ ಘನತೆಯನ್ನು ಈ ಪ್ರಸಂಗ ಎತ್ತಿ ತೋರುತ್ತದೆ. ರಾಮಾಯಣದಲ್ಲಿ ಅಂತರ್ಮುಖಿಯಾಗಿ ಹರಿಯುವ ಗಂಗೆಯಂತೆ ಸುಮಿತ್ರೆಯ ಪಾತ್ರ ನಿರೂಪಣೆ ಸಾಗಿದೆ

ಸುಮಿತ್ರೆ ಎಲ್ಲವನ್ನೂ ತಿಳಿದವಳು. ಜ್ಞಾನಿ ಅದಕ್ಕೇ ಅವಳು ಎಲ್ಲರಂತೆ "ಹೋಗಬೇಡ" ಎನ್ನಲಿಲ್ಲ. ಅಳಲಿಲ್ಲ ಲಕ್ಷ್ಮಣನಿಗೆ ಎಚ್ಚರಿಕೆಯನ್ನು ಕೊಡುತ್ತಾಳೆ.

"ಲಕ್ಷ್ಮಣಾ, ರಾಮನೊಂದಿಗೆ ಎಚ್ಚರದಿಂದ ವರ್ತಿಸು. ಅಣ್ಣ ಎಂದು ಸಲಿಗೆಯಿಂದ ಇರಬೇಡ. ಪ್ರಮಾದವಾದೀತು. ರಾಮ ನಿನಗೆ ತಂದೆ. "ಮಾ" ಎಂದರೆ ಲಕ್ಷ್ಮಿಗೆ ಅರ್ಥ. ಲಕ್ಷ್ಮೀಸ್ವರೂಪಿಣಿ ಸೀತೆ ನಿನಗೆ ತಾಯಿ. ರಾಮನ ಸೇವೆಗಾಗಿ ನಿನ್ನ ಜೀವನ ಮೀಸಲಾಗಿರಲಿ. ಒಂದು ವೇಳೆ ಯುದ್ಧ ಏರ್ಪಟ್ಟರೆ ರಾಮನಿಗಿಂತ ಮುಂಚೆ ನೀನು ಪ್ರಾಣವನ್ನು ತ್ಯಜಿಸು. ರಾಮನಿಗಾಗಿ ನಿನ್ನ ಪ್ರಾಣ ಮೀಸಲು ಆಗಲಿ" ಎಂದಳು. ಅಮ್ಮಾ, ನಾ ಸೇವೆ ಮಾಡುವುದರಲ್ಲಿ ನಿನಗೆ ಅನುಮಾನವೇ ? ಸರಿಯಾಗಿ ರಾಮನನ್ನು ಸೇವಿಸುವುದಿಲ್ಲ ಎಂಬ ಸಂಶಯವೇ ?" ಎಂದ ಲಕ್ಷ್ಮಣ.

"ಹಾಗಲ್ಲ ಮಗು. ರಾಮನ ಸೌಂದರ್ಯ ಅಸದೃಶವಾದುದು. ರಾಮನ ಹಿಂದೆ ಹೋಗುವಾಗ ರಾಮನನ್ನೇ ನೋಡುತ್ತಾ ಅವನ ಸೌಂದರ್ಯವನ್ನೇ ಆಸ್ವಾದಿಸುತ್ತಾ ಮೈಮರೆಯಬೇಡ. ನಿನ್ನ ಕರ್ತವ್ಯ ರಾಮನಿಗೆ ಸದಾ ಸರ್ವದಾ ಎಚ್ಚರಿದ್ದು ಸೇವೆ ಮಾಡುವುದು ಎಂದೆ. ಆಗಲಿ ಮಗನೆ. ಹೋಗಿಬಾ. ಮಂಗಳವಾಗಲಿ" ಎಂದು ಬೀಳ್ಕೊಟ್ಟಳು ಸುಮಿತ್ರೆ.

ಸುಮಂತ್ರ ತಂದ ರಥದಲ್ಲಿ ಸೀತಾ ರಾಮ ಲಕ್ಷ್ಮಣರು ಕುಳಿತರು. ಅಯೋಧ್ಯೆಗೆ ಅಯೋಧ್ಯೆಯೇ ಶೋಕ ಪೀಡಿತವಾಗಿತ್ತು. ಯಾರ ಮುಖದಲ್ಲೂ ಕಳೆ ಇರಲಿಲ್ಲ. ಎಲ್ಲರೂ ತಮ್ಮ ಕೆಲಸಗಳನ್ನು ನಿಲ್ಲಿಸಿಬಿಟ್ಟಿದ್ದರು. ಬಹಳ ಕಾಲದಿಂದ ಮಕ್ಕಳಾಗದೆ ಮಕ್ಕಳಿಗಾಗಿ ತವಕಿಸುತ್ತಿದ್ದ ತಾಯಿಗೆ ಮೊದಲು ಹುಟ್ಟಿದ ಮಗುವೂ ಬೇಡವಾಯಿತು. ಎಲ್ಲರೂ ರಾಮನ ಹಿಂದೆ ಹೊರಟರು. ರಥ ಹೊರಡದಂತೆ ನಡೆದರು. ದೊಡ್ಡವರು–ಚಿಕ್ಕವರು, ಬಾಲರು-ವೃದ್ಧರು ಎಂಬ ಭೇದವಿಲ್ಲದೆ ಎಲ್ಲರೂ ರಾಮನನ್ನು ಹಿಂಬಾಲಿಸಿದರು. ರಾಮ, ವಿನಯದಿಂದ ಎಲ್ಲರನ್ನೂ ಪ್ರಾರ್ಥಿಸಿದ, 'ಹಿಂದಿರುಗಿ' ಎಂದು ಬೇಡಿಕೊಂಡ. ಸುಮಂತ್ರನಿಗೆ ರಥವನ್ನು ವೇಗವಾಗಿ ಬಿಡುವಂತೆ ಹೇಳಿದ, ಇತ್ತ ವೃದ್ಧನಾದ ದಶರಥ ಅರಮನೆಯ ಬಾಗಿಲಿಗೆ ಬೀಳುತ್ತ ಏಳುತ್ತ ಬಂದ. ಹೋಗುತ್ತಿದ್ದ ರಥವನ್ನು ನೋಡಿದ. ಕೈಯೆತ್ತಿ ಕೂಗಿದ "ಸುಮಂತ್ರಾ, ರಥವನ್ನು ನಿಲ್ಲಿಸು. ಮತ್ತೊಮ್ಮೆ ನನ್ನ ಕಣ್ಮಣಿ ರಾಮನನ್ನು ನೋಡಿಬಿಡುತ್ತೇನೆ. ರಾಮ ಬರುವ ವೇಳೆಗೆ ನಾ ಬದುಕಿರುವುದಿಲ್ಲ. ಮತ್ತೊಂದು ಸಲ ಅಭಿರಾಮನಾದ ಅರಗಿಣಿಯನ್ನು ಕಾಣುತ್ತೇನೆ. ದಯವಿಟ್ಟು ನಿಲ್ಲಿಸು" ಎಂದು ಅಂಗಲಾಚಿದ. ರಾಮ ಹೇಳಿದ, "ಸುಮಂತ್ರ, ರಥವನ್ನು ವೇಗವಾಗಿ ಬಿಡು." ಸುಮಂತ್ರ ಏನು ಮಾಡಬೇಕು? ಒಂದು ಕಡೆ ಮಹಾರಾಜ "ನಿಲ್ಲಿಸು" ಎನ್ನುತ್ತಿದ್ದಾನೆ. ಇನ್ನೊಂದು

ಕಡೆ ರಾಮ ವೇಗವಾಗಿಬಿಡು" ಎನ್ನುತ್ತಿದ್ದಾನೆ. ಯಾರ ಮಾತನ್ನು ಕೇಳುವುದು ? ಸುಮಂತ್ರನಿಗೆ ದಿಕ್ಕೇ ತೋಚಲಿಲ್ಲ. ನೋಡಿದ ರಾಮ. "ಏಕೆ ಸುಮಂತ್ರ ? ರಥವನ್ನು ವೇಗವಾಗಿ ಬಿಡು ಎಂದೆನಲ್ಲ. ಪರವಾಗಿಲ್ಲ–ತಂದೆ ಕೇಳಿದರೆ ಕೇಳಿಸಲಿಲ್ಲ ಎನ್ನು" ಎಂದ.

ವಾಲ್ಮೀಕಿ ಈ ಸಂದರ್ಭದಲ್ಲಿ "ನಾಶ್ರೌಷಂ" ಎಂಬ ಶಬ್ದವನ್ನು ಪ್ರಯೋಗಿಸಿದಾರೆ. "ಕೇಳಲಿಲ್ಲ ಎನ್ನು" ಎಂದರೆ ರಾಮ ಸುಳ್ಳು ಹೇಳಿದಂತೆ ಆಗಲಿಲ್ಲವೆ ? ಎಂಬ ಪ್ರಶ್ನೆ ಏಳುತ್ತದೆ. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು.

ಶ್ರೀಕೃಷ್ಣ ಅರ್ಜುನನಿಗೆ ಹದಿನೆಂಟು ಅಧ್ಯಾಯ ಗೀತೆಯನ್ನು ಉಪದೇಶಿಸಿದ. ಕೊನೆಯಲ್ಲಿ "ನ ಶ್ರೋಷ್ಯಸಿ ವಿನಂಕ್ಷ್ಯಸಿ" ಎಂದ. ಅಂದರೆ "ಇದುವರೆಗೆ ನಾ ಹೇಳಿದ್ದನ್ನು ನೀ ಕೇಳದಿದ್ದರೆ ನಾಶವಾಗುತ್ತಿ" ಎಂದು ಅರ್ಥ.

ಇಲ್ಲಿ "ಕೇಳದಿದ್ದರೆ" ಎಂಬ ಪದದ ಔಚಿತ್ಯವನ್ನು ಅರಿಯಬೇಕು. ಅರ್ಜುನ ಅದುವರೆಗೆ ಗೀತೆಯನ್ನು ಕೇಳುತ್ತಲೇ ಇದ್ದ. "ಕೇಳುವುದು" ಎನ್ನುವುದು ಕೇವಲ ಕಿವಿಯಿಂದ ಕೇಳುವುದು ಎಂದು ಮಾತ್ರವಲ್ಲ. ಹೇಳಿದಂತೆ ಕೇಳುವುದು" ಎಂದೂ ಅರ್ಥ. ಕೃಷ್ಣ ಅರ್ಜುನನಿಗೆ ಹೇಳುವಾಗ "ನಶ್ರೋಷ್ಯಸಿ ವಿನಂಕ್ಷ್ಯಸಿ" ಎನ್ನುವಾಗ, ನಾ ಹೇಳುವಂತೆ ನೀ ಕೇಳದಿದ್ದರೆ, ಅಂದರೆ ನಾ ಹೇಳುವುದನ್ನು ನೀನು ಮಾಡದಿದ್ದರೆ, ಅದರಂತೆ ಆಚರಿಸದಿದ್ದರೆ ನಾಶವಾಗುತ್ತೀ ಎಂದು ಹೇಳಿದ ಎಂದು ತಿಳಿಯಬೇಕು.

ಅದರಂತೆ ಈ ಪ್ರಸಂಗದಲ್ಲೂ ರಾಮ ಹೇಳುವುದು "ನೀವು ಹೇಳಿದಂತೆ ಕೇಳಲಿಲ್ಲ" ಎಂದು ಹೇಳು ಎಂದು. ಇದಕ್ಕೆ ಕಾರಣವನ್ನು ಹೇಳುತ್ತಾರೆ. ತಂದೆಯ ಆಜ್ಞೆಯನ್ನು ಪರಿಪಾಲಿಸುವುದು ಧರ್ಮವಾಗಿರುವಾಗ ಬೇಗ ಅದನ್ನು ಆಚರಿಸಬೇಕು. ತಾಮಸಮಾಡಿದರೆ, ತಡಮಾಡಿದರೆ ವೃಥಾ ದುಃಖವೇ ಮುಂದುವರಿಯುತ್ತದೆ. ಅದಕ್ಕಾಗಿಯೇ ರಾಮ ರಥವನ್ನು ವೇಗವಾಗಿ ಬಿಡಲು ಹೇಳಿದ.

ಸಾಯಂಕಾಲ ಸರಯೂ ನದೀ ತೀರದಲ್ಲಿ ತಂಗಿದರು ಸೀತಾ ರಾಮ ಲಕ್ಷ್ಮಣರು. ರಾಮನನ್ನು ಅನುಸರಿಸಿ ಬಂದ ಪುರಜನರೂ ರಾಮನೊಡನೆಯೇ ತಂಗಿದರು. ರಾಮ ಎಷ್ಟು ಹೇಳಿದರೂ ಹಿಂದಿರುಗಲು ಒಪ್ಪಲಿಲ್ಲ. ಸಾಯಂಸಂಧ್ಯಾಕರ್ಮವನ್ನು ಮುಗಿಸಿಕೊಂಡು ಎಲ್ಲರೂ ಆ ರಾತ್ರಿ ಅಲ್ಲೇ ಪವಡಿಸಿದರು. ಮಧ್ಯರಾತ್ರಿ ಕಳೆದು ಸ್ವಲ್ಪ ಹೊತ್ತಾಯಿತು. ರಾಮ ಸುಮಂತ್ರನನ್ನು ಕೂಗಿದ. ಲಕ್ಷ್ಮಣನನ್ನು ಕರೆಯುತ್ತಲೇ ಎದ್ದುಬಂದ. ಸುಮಂತ್ರನಿಗೆ ರಥವನ್ನು ಬಿಡುವಂತೆ ಹೇಳಿದ. ಎಲ್ಲರಿಗೂ ಗಾಢನಿದ್ದೆ. ಸೀತಾ ರಾಮಲಕ್ಷ್ಮಣರು ರಥವನ್ನೇರಿದರು. ರಾಮನ ಮಾತಿನಂತೆ ಸ್ವಲ್ಪದೂರ ಪುರಜನರ ಮೋಹನಾರ್ಥವಾಗಿ ಅಯೋಧ್ಯಾಭಿಮುಖವಾಗಿ ತಿರುಗಿಸಿ ಆಮೇಲೆ ಮುಂದಕ್ಕೆ ಪ್ರಯಾಣ ಬೆಳಸಿದರು.

ಬೆಳಗಾಯಿತು. ಪುರಜನರೆಲ್ಲ ಎದ್ದು ನೋಡಿದರು. ಸೀತಾ ರಾಮಲಕ್ಷ್ಮಣರು ಇಲ್ಲ. ಸುಮಂತ್ರನೂ ಇಲ್ಲ. ರಥವೂ ಇಲ್ಲ. ರಥದ ಜಾಡನ್ನೇ ಅನುಸರಿಸಿದರು. ಸ್ವಲ್ಪ ದೂರ ರಥವು ಅಯೋಧ್ಯಾಭಿಮುಖವಾಗಿತ್ತು. ಆಮೇಲೆ ಮುಂದೆ ದಾರಿ ತಿಳಿಯಲಿಲ್ಲ. ನಿದ್ದೆ ಮಾಡಿದ್ದಕ್ಕಾಗಿ ಎಲ್ಲರೂ ತಮ್ಮನ್ನೇ ನಿಂದಿಸಿ ನಗರಕ್ಕೆ ಹಿಂದಿರುಗಿದರು.

ಈ ಪ್ರಸಂಗದಲ್ಲಿ ಒಂದು ತತ್ವ ಬೆಳಕಿಗೆ ಬರುತ್ತದೆ. ಇಲ್ಲಿ ನಿದ್ದೆ ಎನ್ನುವುದು ಅಜ್ಞಾನ–ಮಾಯೆ. ಮಾಯೆಗೆ–ಅಜ್ಞಾನಕ್ಕೆ ವಶರಾದವರಿಗೆ ಪರತತ್ವದ ಲಾಭ ದುರ್ಲಭ. ಶ್ರೀಕೃಷ್ಣ ಗೀತೆಯಲ್ಲಿ,

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗ್ರತಿ ಸಂಯಮೀ ।**

**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥**

ಎಂದಿದ್ದಾನೆ. ಸಾಮಾನ್ಯ ಜನರು ರಾತ್ರಿ ಎಂದುಕೊಂಡಿರುತ್ತಾರೆ. ಅದು ಯೋಗಿಗಳಿಗೆ ಎಚ್ಚರದ ಕಾಲ ಆಗಿರುತ್ತದೆ. ಹಾಗೆಯೇ

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**

**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥**

ಎಂದಿದ್ದಾನೆ ಕೃಷ್ಣ.

ಕೋಟ್ಯಂತರ ಮನುಷ್ಯರು ನನ್ನನ್ನು ಅರಿಯಲು ಯತ್ನಿಸುತ್ತಾರೆ. ಅವರಲ್ಲಿ ಜಯಶೀಲ ನಾಗುವವನು ಒಬ್ಬನೇ ಎಂದು ಅದರರ್ಥ. ಹಾಗೆಯೇ ರಾಮನನ್ನು ಅನುಸರಿಸಿ ಕೋಟ್ಯಂತರ ಜನ ಬಂದರು. ಎಲ್ಲರೂ ನಿದ್ದೆ ಮಾಡಿದರು. ಎಚ್ಚರವಾಗಿದ್ದವ ಲಕ್ಷ್ಮಣ ಮಾತ್ರ. ಅವನೇ ಅಲ್ಲಿ ಯೋಗಿಯ ಲಕ್ಷಣವನ್ನು ಹೊರಗೆಡಹಿದ.

ಸೀತಾ ರಾಮ ಲಕ್ಷ್ಮಣರು ಗಂಗಾತೀರದಲ್ಲಿದ್ದ ಶೃಂಗಿಬೇರಪುರವನ್ನು ಸೇರಿದರು. ಅದನ್ನು ಪರಿಪಾಲಿಸುವವ ಗುಹ ಎಂಬುವ, ಬೇಡ. ಬೇಡರಿಗೆಲ್ಲ ಒಡೆಯ. ರಾಮನಲ್ಲಿ ಅವನಿಗೆ ಪ್ರೀತಿ ಅಧಿಕ. ತನ್ನ ಬೀಡಿಗೆ ಬಂದ ರಾಮನನ್ನು ಕಂಡ. ಓಡಿಹೋಗಿ ನಮಸ್ಕರಿಸಿದ. ಕಾಲಿಗೆ ಬೀಳು ತ್ತಿದ್ದ ಗುಹನನ್ನು ರಾಮ ಎತ್ತಿಹಿಡಿದ ಕಂಬರು ಹೇಳುತ್ತಾರೆ. ರಾಮ ರಾಜಕುಮಾರ ಆದರ ಬೇಡರ ಒಡೆಯನಾದ ಗುಹನನ್ನು ಸ್ನೇಹಿತ ಎಂದ. ಸೀತೆಯನ್ನು ತೋರಿಸಿ ಗುಹನಿಗೆ "ಗುಹ, ಇವಳು ನಿನ್ನ ಗೆಳತಿ" ಎಂದ. ಲಕ್ಷ್ಮಣನನ್ನು ತೋರಿಸಿ "ಇವನು ನಿನಗೆ ತಮ್ಮ" ಎಂದ. ಇಂಥ ಸೌಶೀಲ್ಯ ಗುಣವಿಶಿಷ್ಟ ರಾಮ ಎಂದು ಕೊಂಡಾಡಿದರು ಕಂಬರು

ಗುಹ ಹೇಳಿದ "ರಾಮಾ, ಆ ಕೈಕೇಯಿಯ ರಾಜ್ಯ ನಿನಗೆ ಬೇಡ. ಇದೋ ! ಈ ಶೃಂಗಿ-ಬೇರಪುರ ನಿನ್ನದು ಇದಕ್ಕೆ ನೀ ಒಡೆಯನಾಗು. ಇಲ್ಲೇ ಹದಿನಾಲ್ಕು ವರ್ಷಗಳ ಕಾಲ ಇರು" ಎಂದು ಬೇಡಿದ. ರಾಮ "ಇಲ್ಲ ಗುಹ, ನಿನ್ನ ಪ್ರೀತಿ ನನಗೆ ಗೊತ್ತು. ತಂದೆಯ ಮಾತು ಪರಿ ಪಾಲನ ಮಾಡಬೇಕು ಎಂದು. ನಾ ಹೊರಡುತ್ತೇನೆ" ಎಂದ. ರಾಮನಿಗಾಗಿ ಪಕ್ವವಾದ, ಮಧುರ ವಾದ ಫಲಗಳನ್ನು ತಂದಿತ್ತ ಗುಹ ಆದರೆ ರಾಮ ಅದನ್ನು ಸ್ವೀಕರಿಸಲಿಲ್ಲ. ಆಲದ ಹಾಲನ್ನು ತರುವಂತೆ ಹೇಳಿ ಅದರಿಂದ ಜಟಾಧಾರಣೆ ಮಾಡಿದ ಲಕ್ಷ್ಮಣನೂ ರಾಮನನ್ನನುಸರಿಸಿದ.

ಗುಹ ತಂದ ಫಲಗಳನ್ನು ರಾಮ ಏಕೆ ಸ್ವೀಕರಿಸಲಿಲ್ಲ ? ಇದಕ್ಕೆ ಆಚಾರ್ಯರು ಕಾರಣ ಹೇಳುತ್ತಾರೆ.

ಮುಂದೆ ಶಬರಿ ಕೊಟ್ಟ ಫಲವನ್ನು ಪ್ರೀತಿಯಿಂದ ಸ್ವೀಕರಿಸಿದ. ಆದರೆ ಗುಹನ ಸತ್ಕಾರವನ್ನು ಏಕೆ ಸ್ವೀಕರಿಸಲಿಲ್ಲ ?

ಶಬರಿ ಆಚಾರ ನಿಷ್ಠೆಯುಳ್ಳವಳು ಮತಂಗ ಋಷಿಗಳಿಂದ ಸಮಾಶ್ರಯಣ ಪಡೆದವಳು. ಆದರೆ ಗುಹ ಆಚಾರ್ಯ ಸೇವೆಯನ್ನು ಮಾಡಿದವನಲ್ಲ. ಗುಹ ಸಮಾಶ್ರಯಣ ರಹಿತ. ಶಬರಿ ಸಮಾಶ್ರಯಣ ಸಹಿತಳು

"ಆಪ್ಪೈಯಾಲ್ ಶಬರಿಯುಡೆಯ ಆತಿಥ್ಯತ್ತೈ ಸ್ವೀಕರಿತ್ತಾನ್" ಎಂದು ಶ್ರೀವೈಷ್ಣವ ಸಿದ್ಧಾಂತದಲ್ಲಿ ವ್ಯಾಖ್ಯಾನ ಮಾಡುತ್ತಾರೆ.

ಆಚಾರ್ಯನ ಹಿರಿಮೆಯನ್ನು ಶ್ರೀವೈಷ್ಣವ ಸಿದ್ಧಾಂತ ಒಸಳವಾಗಿ ಕೊಂಡಾಡುತ್ತದೆ. ಆದಕ್ಕೇ ಶ್ರೀವೈಷ್ಣವರಲ್ಲಿ ಯಾರಾದರೂ ಪ್ರಾಣಬಿಟ್ಟರೆ "ದೇವರವಾದ ಸೇರಿದರು" ಎನ್ನುವುದಿಲ್ಲ. "ಆಚಾರ್ಯನ್ ತಿರುವಡಿಗಳೈ ಅಡೈಂದಾನ್" ಅಂದರೆ "ಆಚಾರ್ಯನ ಶ್ರೀಪಾದಗಳನ್ನು ಸೇರಿದರು" ಎನ್ನುವುದು ರೂಢಿಯಾಗಿದೆ. ಇದರ ಅಂತರ್ಯದಲ್ಲಿ ಆಚಾರನಿಷ್ಠೆ ಅಡಗಿದೆ.

ಸೀತಾರಾಮರು ಆ ರಾತ್ರಿ ಎಲೆಯ ಹಾಸಿಗೆಯ ಮೇಲೆಯೇ ಮಲಗಿದರು. ಸೀತಾರಾಮರ ಕಾವಲಾಗಿ ಧನುರ್ಬಾಣಗಳನ್ನು ಹಿಡಿದು ರಕ್ಷಣೆಗೆ ನಿಂತ ಸೌಮಿತ್ರಿ. ಗುಹನೂ ಧನುಸ್ಸು ಬಾಣಗಳನ್ನು ಹಿಡಿದು ರಕ್ಷಣೆಗೆ ನಿಂತ. ಗುಹನ ಸೈನಿಕರೂ ಬಿಲ್ಲುಬಾಣಗಳನ್ನು ಹಿಡಿದು ಎಚ್ಚರದಿಂದ ಕಾಯುತ್ತಿದ್ದರು. ಗುಹ ಹೇಳಿದ, "ಲಕ್ಷ್ಮಣ ನೀ ಆಯಾಸಗೊಂಡಿರುವೆ, ಮಲಗು. ನಾನು ಸೀತಾರಾಮರನ್ನು ನೋಡಿಕೊಳ್ಳುತ್ತೇನೆ."

ಲಕ್ಷ್ಮಣ ಹೇಳಿದ, "ಇಲ್ಲ ಗುಹ, ನೀನೇ ಬಹಳ ಆಯಾಸಪಟ್ಟಿದೀಯೆ. ನೀನೇ ಮಲಗು ನಾನೇ ಎಚ್ಚರವಾಗಿದ್ದು ಕಾಯುತ್ತೇನೆ."

ಸೈನಿಕರು ಹೇಳಿದರು "ನೀವಿಬ್ಬರೂ ಮಲಗಿಕೊಳ್ಳಿ ನಾವು ಕಾಯುತ್ತೇವೆ" ಕೊನೆಗೆ ಯಾರೂ ಮಲಗಲಿಲ್ಲ. ಎಲ್ಲರೂ ಎಚ್ಚರವಾಗಿದ್ದರು. ಏಕೆ ಹೀಗೆ ? ಗುಹನಿಗೆ ಲಕ್ಷ್ಮಣನ ಮೇಲೆ ಸಂಶಯ !

"ಭರತನಿಂದ ಪ್ರೇರಿತನಾಗಿ, ಲಕ್ಷ್ಮಣ ರಾತ್ರಿ ಮಲಗಿದ್ದಾಗ ಒಂದು ವೇಳೆ ರಾಮನನ್ನು ಕೊಂದುಹಾಕಿದರೆ" ಎಂದು.

ಲಕ್ಷ್ಮಣನಿಗೆ ಗುಹನ ಮೇಲೆ ಸಂಶಯ.

"ನಾ ಮಲಗಿದಾಗ ಗುಹ ರಾಮನನ್ನು ಕೊಂದುಬಿಟ್ಟರೆ" ಎಂದು. ಪರಸ್ಪರ ಸಂಶಯ ಮನೋವೃತ್ತಿಯಿಂದ ಇಬ್ಬರೂ ಒಬ್ಬರನ್ನೊಬರು ನಂಬಲಿಲ್ಲ. ವಾಲ್ಮೀಕಿ ಹೇಳುತ್ತಾರೆ. "ರಾಮನ ಸೌಂದರ್ಯವೇ ಅಂಥದು.'' ಅವನನ್ನು ಕಂಡ ಗುಹನ ಸೈನಿಕರು ''ರಾಮನ ಸೌಂದರ್ಯಕ್ಕೆ ಕುಂದು ಬರಬಾರದು.'' ಎಂದು ಎಣಿಸಿ ರಾಮನನ್ನು ತಾವು ಎಚ್ಚರಿದ್ದು ಕಾಯುತ್ತಿದ್ದರು. ಹೀಗೆ ರಾತ್ರಿಯೆಲ್ಲ ಎಲ್ಲರೂ ಎಚ್ಚರದಿಂದಿದ್ದು ರಾಮನಿಗೆ ಕಾವಲಾಗಿದ್ದರು.

ಬೆಳಗಾಯಿತು. ರಾಮ ಗುಹನನ್ನು ಗಂಗಾನದಿಯನ್ನು ದಾಟಿಸುವಂತೆ ಕೇಳಿದ. ಅದರಂತೆಯೆ ಗುಹ ರಾಜರಿಗೆಂದೇ ವಿಶಾಲವಾಗಿಟ್ಟಿದ್ದ ದೋಣಿಯನ್ನು ತಂದ. ದೋಣಿಯಲ್ಲಿ ಕುಳಿತುಕೊಳ್ಳುವ ಮೊದಲು ರಾಮ ಸುಮಂತ್ರನನ್ನು ಬೀಳ್ಕೊಟ್ಟ. ಸುಮಂತ್ರ ಕಣ್ಣೀರ್ಗರೆಯುತ್ತಾ ನಿಂತ. ಅವನನ್ನು ಸಂತೈಸಿ ರಾಮ ' ದಶರಥನಿಗೂ ತಾಯಂದಿರಿಗೂ ನನ್ನ ನಮಸ್ಕಾರಗಳನ್ನು ತಿಳಿಸು'' ಎಂದ. ಲಕ್ಷ್ಮಣ ತನ್ನ ಸಂದೇಶವನ್ನು ತಿಳಿಸಿದ. ''ಸ್ತ್ರೀಯ ಮಾತನ್ನು ಕೇಳಿ ನಿರಪರಾಧಿಯಾದ ರಾಘವ ನನ್ನು ಕಾಡಿಗಟ್ಟಿದ ದಶರಥ ನನ್ನ ತಂದೆ ಅಲ್ಲ ಎಂದು ಹೇಳು'' ಎಂದ ಕಠೋರವಾಗಿ.

ಅಗಲಲಾರದೆ ಅಗಲಿದ ಸುಮಂತ್ರ. ರಾಮನ ದೋಣಿ ಹೋಗುವುದನ್ನೇ ಕಣ್ಣಿನ ದೃಷ್ಟಿ ಹೋಗುವವರೆಗೆ ನೋಡುತ್ತ ನಿಂತ. ಕೊನೆಗೆ ಕಣ್ಣಿನ ದೃಷ್ಟಿಗೆ ದೋಣಿ ಕಾಣಿಸದಂತಾಗಲು ವ್ಯಸನದಿಂದ ನಗರಿಗೆ ಹಿಂದಿರುಗಿದ.

ಗಂಗಾನದಿಯ ಆಚೆಯ ದಡವನ್ನು ಸೇರಿದಮೇಲೆ ರಾಮ ಗುಹನನ್ನು ಬೀಳ್ಕೊಟ್ಟ.

ಸೀತಾರಾಮಲಕ್ಷ್ಮಣರು ಭರದ್ವಾಜರ ಆಶ್ರಮಕ್ಕೆ ಬಂದರು. ಋಷಿಗಳನ್ನು ವಂದಿಸಿ ರಾಮ ವನವಾಸ ಮಾಡಲು ಯೋಗ್ಯವಾದಸ್ಥಳವನ್ನು ತೋರಿಸುವಂತೆ ಕೇಳಿದ. ಭರದ್ವಾಜರು ಹದಿನೈದು

ಪೈಲುಗಳ ಆಚೆ ಮಂದಾಕಿನೀ ತಟದಲ್ಲಿರುವ ಚಿತ್ರಕೂಟವನ್ನು ತೋರಿಸಿದರು. ಅದರಂತೆ ಚಿತ್ರಕೂಟಕ್ಕೆ ಸೀತಾರಾಮಲಕ್ಷ್ಮಣರು ನಡೆದರು. ಮಾರ್ಗಮಧ್ಯದಲ್ಲಿ ರಾಮ ''ಲಕ್ಷ್ಮಣಾ ನೋಡಿದೆಯಾ, ತಂದೆ ಚಿಕ್ಕಮ್ಮನ ಮಾತನ್ನು ಕೇಳಿ ನಮ್ಮನ್ನು ಕಾಡಿಗೆ ಕಳುಹಿಸಿಬಿಟ್ಟ, ಚಿಕ್ಕಮ್ಮ ಹೇಳಿದ ಮಾತನ್ನು ನಡೆಸುತ್ತಾನೆ ತಂದೆ. ಒಂದು ವೇಳೆ ಕೈಕೇಯಿ ವಿಷವನ್ನು ಕೊಟ್ಟು ಕುಡಿಯು ವಂತೆ ಹೇಳಿದರೂ ತಡಮಾಡದೆ ಕುಡಿದುಬಿಡುತ್ತಾನೆ'' ಎಂದ.

ಲಕ್ಷ್ಮಣನಿಗೆ ಅಚ್ಚರಿಯಾಯಿತು. ತಾನು ಕೈಕೇಯಿಯನ್ನು ನಿಂದಿಸಿದಾಗ "ಅದು ಕೂಡದು'' ಎಂದ ರಾಮ, ಈಗ ತಾನೇ ನಿಂದಿಸುತ್ತಿರುವನಲ್ಲಾ ಎಂದುಕೊಂಡ. ಮುಂದೆ ರಾಮ ಹೇಳುವು ದನ್ನು ಆಲಿಸಿದ. ರಾಮ ಮುಂದುವರೆದು "ಲಕ್ಷ್ಮಣಾ, ಚಿಕ್ಕಮ್ಮನ ಕೈಗೊಂಬೆಯಾಗಿ ಕುಣಿಯು ತ್ತಾನೆ ತಂದೆ. ಮುಖ್ಯವಾಗಿ ನಮ್ಮ ತಾಯಿಯರಿಗೆ ಬಂದಿತು ಕಷ್ಟ. ಅವರನ್ನು ನೋಡಿಕೊಳ್ಳು ವವರೇ ಇಲ್ಲವಾಗಿದೆ. ಆದ್ದರಿಂದ ಲಕ್ಷ್ಮಣಾ, ನೀ ಊರಿಗೆ ಹಿಂದಿರುಗು. ತಾಯಿಯರ ಸೇವೆ ಮಾಡು ಅವರನ್ನು ನೋಡಿಕೊ" ಎಂದ. ಲಕ್ಷ್ಮಣ "ರಾಮಾ ನೀ ಏನು ಹೇಳಿದರೂ ನಾ ಹಿಂದಿರುಗಿ ಹೋಗುವುದಿಲ್ಲ. ಹೋಗುವುದಾದರೆ ನಿನ್ನ ಜೊತೆಯಲ್ಲಿ ಹಿಂದಿರುಗುತ್ತೇನೆ. ನೀ ಇಲ್ಲದೆ ನಾ ಒಬ್ಬನೇ ಎಂದಿಗೂ ಹಿಂದಿರುಗಲಾರೆ. ಮೇಲಾಗಿ ನನಗೆ ತಂದೆ, ತಾಯಿ ಎಲ್ಲ ನೀನೇ. ಹೆಚ್ಚೇಕೆ! ರಾಮಾ! ನಿನ್ನನ್ನು ಅಗಲಿ ನಾನೂ, ಸೀತೆಯೂ ಒಂದರಗಳಿಗೆ ಜೀವಿಸಲಾರೆವು. ನೀರಿ ನಿಂದ ಹೊರತೆಗೆದ ಮೀನು ಹೇಗೆ ಜೀವದಿಂದಿರಲಾರದೋ ಹಾಗೆ ನಿನ್ನನ್ನು ಅಗಲಿ ಒಂದರೆಕ್ಷಣ ಬದುಕಲಾರೆವು" ಎಂದ.

ಸೀತಾ ರಾಮ ಲಕ್ಷ್ಮಣರು ಚಿತ್ರಕೂಟವನ್ನು ತಲುಪಿದರು. ಮಾರ್ಗದಲ್ಲಿ ರಾಮ ಸೀತೆಗೆ ವನದ ಸೌಂದರ್ಯವನ್ನು ತೋರಿಸುತ್ತಿದ್ದ. ''ಅದೋ ನೋಡು ಆ ಮಾಲತೀ ಪುಷ್ಪ–ಇಲ್ಲಿ ನೋಡು ಈ ಮಂದಾರ ಕುಸುಮ, ಅಲ್ಲಿ ನೋಡು ಆ ಬಾಳೆಯ ತೋಟ". ಎನ್ನುತ್ತಾ ಸೀತೆಗೆ ಮಾರ್ಗಾಯಾಸ ಗೊತ್ತಾಗದಂತೆ ಕರೆದುಕೊಂಡುಹೋದ. ಚಿತ್ರಕೂಟದ ಸೌಂದರ್ಯವನ್ನು ಮನದಣಿಯ ಅನುಭವಿಸಿದರು ಎಲ್ಲರೂ. ಸ್ಫಟಿಕದಂತೆ ಶುಭ್ರವಾದ ಮಂದಾಕಿನೀ ನದಿಯ ತಟ ದಲ್ಲಿ ರಮ್ಯವಾದ ಚಿತ್ರಕೂಟಪರ್ವತದ ಪ್ರದೇಶದಲ್ಲಿ ಆಶ್ರಮವನ್ನು ನಿರ್ಮಿಸಿದ ಲಕ್ಷ್ಮಣ. ದಿನ ನಿತ್ಯದಲ್ಲಿ ಮಂದಾಕಿನಿಯಲ್ಲಿ ಸ್ನಾನಮಾಡುತ್ತಿದ್ದರು ಸೀತಾ ರಾಮಲಕ್ಷ್ಮಣರು.

ಸೀತಾ ರಾಮಲಕ್ಷ್ಮಣರು ಸಂತೋಷವಾಗಿ ಚಿತ್ರಕೂಟದಲ್ಲಿ ಕಾಲ ಕಳೆಯುತ್ತಿದ್ದರು. ಒಂದು ದಿನ ರಾಮ "ಲಕ್ಷ ಣಾ, ಇಂದಿನ ಅಡುಗೆ ನಿನ್ನದು'' ಎಂದ. "ಆಗಲಿ" ಎಂದು ಅಡುಗೆಯನ್ನು ತಯಾರಿಸಿದ ಲಕ್ಷ್ಮಣ.

ಸೀತಾರಾಮರನ್ನು ಒಟ್ಟಾಗಿ ಕೂಡಿಸಿ, ತಯಾರಿಸಿದ ಅಡುಗೆಯನ್ನು ಬಡಿಸಿದ ಲಕ್ಷ್ಮಣ. ಅಡುಗೆಯ ರುಚಿಯನ್ನು ಸವಿಯುತ್ತಾ ರಾಮ "ಆಹಾ ಎಷ್ಟು ರುಚಿಯಾಗಿದೆ! ಲಕ್ಷ್ಮಣಾ ಅಯೋಧ್ಯೆಯ ನೆನಪಾಗುತ್ತದೆ ನೀ ಮಾಡಿರುವ ಅಡುಗೆಯನ್ನು ತಿನ್ನುವಾಗ. ಇಷ್ಟು ಚೆನ್ನಾಗಿ ಅಡುಗೆ ಮಾಡಲು ಎಲ್ಲಿ ಕಲಿತೆ ? ಯಾವಾಗ ಕಲಿತೆ ?" ಎಂದ.

ಸೀತಾರಾಮರು ಒಟ್ಟಾಗಿ ತಾ ಮಾಡಿದ ಅಡುಗೆಯನ್ನು ತಿನ್ನುವುದನ್ನು, ಅವರು ಸಂತೋಷ ದಿಂದಿರುವುದನ್ನು ಕಂಡು ಲಕ್ಷ್ಮಣ ಹಿಗ್ಗಿದ. ಹೀಗೆ ಸಂತೋಷದಿಂದ ಸೀತಾರಾಮ ಲಕ್ಷ್ಮಣರು ಚಿತ್ರಕೂಟದಲ್ಲಿ ಕಾಲ ಕಳೆಯುತ್ತಿದ್ದರು.

ಒಬ್ಬ ಕವಿ ಚಮತ್ಕಾರವಾಗಿ ಹೇಳಿದ

"ರಾಮನನ್ನು ಕಾಡಿಗೆ ಕಳುಹಿಸಿದರು" ಎಂದು ಕೈಕೇಯಿಯನ್ನು ನಿಂದಿಸುತ್ತಾರೆ. ಇದು ಶುದ್ಧ ತಪ್ಪು, ಕೈಕೇಯಿ ಒಳ್ಳೆಯದನ್ನೇ ಮಾಡಿದಳು. ರಾಮ ಕಾಡಿಗೆ ಹೋಗುವಾಗ ಇಪ್ಪತ್ತೈದು ವರ್ಷ ವಯಸ್ಸು. ಸೀತೆಗೆ ಹದಿನೆಂಟು ವರ್ಷ. ನವದಂಪತಿಗಳನ್ನು ಮದುವೆಯಾದ ಹೊಸದರಲ್ಲಿ ಮಧುಚಂದ್ರದರ್ಶನಕ್ಕೆ ಕಳುಹಿಸುವಂತೆ ಕೈಕೇಯಿ ಸೀತಾರಾಮರನ್ನು ವನಕ್ಕೆ ಕಳುಹಿಸಿದಳು. ''ಆಮೇಲೆ ಇದ್ದೇ ಇದೆ ರಾಜ್ಯಭಾರವಮಾಡುವುದು. ರಾಜ್ಯದ ಹೊರೆ ಹೊತ್ತುಕೊಂಡಮೇಲೆ ನಿರಾಳವಾಗಿ ಆನಂದದಿಂದ ಕಾಲ ಕಳೆಯುವಂತಿಲ್ಲ. ಈಗ ಇನ್ನೂ ಚಿಕ್ಕವಯಸ್ಸು. ಕೆಲಕಾಲ ವನಪ್ರದೇಶದಲ್ಲಿ, ಶೋಭಾಯಮಾನವಾದ ನದೀನದಗಳ ತೀರದಲ್ಲಿ ಹಕ್ಕಿಗಳಂತೆ ಯಥೇಚ್ಛವಾಗಿ ಸಂತೋಷದಿಂದ ಇದ್ದು ಬರಲಿ'' ಎಂದೇ ಕೈಕೇಯಿ ರಾಮನನ್ನು ಕಾಡಿಗೆ ಕಳುಹಿಸಿದಳು ಎಂದು ವರ್ಣಿಸಿದಾನೆ.

ರಮ್ಯವಾದ ಚಿತ್ರಕೂಟಪರ್ವತದ ವನಪ್ರದೇಶದಲ್ಲಿ ಸೀತಾ ರಾಮಲಕ್ಷ್ಮಣರು ಇರುತ್ತಿದ್ದರು.

**ದಶರಥನ ಮರಣ–ಭರತನ ಆಗಮನ**

ಇತ್ತ ದಶರಥ ಅರಮನೆಯ ದ್ವಾರದಲ್ಲಿ ನಿಂತು ರಾಮನ ರಥ ತನ್ನ ಕಣ್ಣಿಗೆ ಬೀಳುವವರೆಗೆ ನೋಡುತ್ತನಿಂತ. ಕಣ್ಣಿಗೆ ರಾಮನ ರಥ ಕಾಣಿಸಲಿಲ್ಲ. ರಥದ ಧೂಳು ಮರೆಯಾಗುವವರೆಗೆ ನಿಂತು ನೋಡುತ್ತಿದ್ದ. ಕ್ರಮೇಣ ಕಾಣಸದಾಯಿತು ಧೊಪ್ಪೆಂದು ಕೆಳಗೆ ಬಿದ್ದ. "ರಾಮಾ-ರಾಮಾ" ಎಂದು ಪ್ರಲಾಪಿಸತೊಡಗಿದ. ಪಕ್ಕದಲ್ಲಿದ್ದ ಕೈಕೇಯಿ ದಶರಥನ ಎರಡು ತೋಳು ಹಿಡಿದು ಎತ್ತಲು ಪ್ರಯತ್ನಿಸಿದಳು. ಕೈಕೇಯಿಯ ಸ್ಪರ್ಶವಾಗುತ್ತಲೇ ಹಾವು ಕಚ್ಚಿದವನಂತ ಬೆಚ್ಚಿದ ದಶರಥ. "ಹೇ ದುಷ್ಟೆ, ನನ್ನನ್ನು ಮುಟ್ಟಬೇಡ. ಇನ್ನು ನೀನು ನನಗೆ ಪತ್ನಿಯಲ್ಲ. ಒಂದುವೇಳೆ ಭರತ ನಿನ್ನ ಮಾತನ್ನು ಕೇಳುವವನಾದರೆ ಅವನೂ ನನಗೆ ಮಗನಲ್ಲ" ಎಂದ.

ಕೌಸಲ್ಯೆಯನ್ನು ಕುರಿತು "ಹೇಕೌಸಲ್ಯೆ, ರಾಮನನ್ನು ಹೆತ್ತ ಪುಣ್ಯವತಿ ! ನನ್ನನ್ನು ನಿನ್ನ ಅಂತಃಪುರಕ್ಕೆ ಕರೆದೊಯ್ಯಿ" ಎಂದ.

ಕೌಸಲ್ಯೆಯ ಅಂತಃಪುರಕ್ಕೆ ಬಂದ ದಶರಥ ದುಃಖಿಸತೊಡಗಿದ ಅಷ್ಟರಲ್ಲಿ ಹಿಂದಿರುಗಿದ ಸುಮಂತ್ರ. ರಾಮನ ಸಂದೇಶವನ್ನೂ, ಲಕ್ಷ್ಮಣ ಹೇಳಿದ್ದನ್ನೂ ತಿಳಿಸಿದ ''ಸೀತೆ ಹೇಗಿದ್ದಾಳೆ ? ಮೃಗಗಳನ್ನು ಕಂಡು ಅಂಜುವುದಿಲ್ಲವೆ, ಆ ಸುಕುಮಾರಿ ಜಾನಕಿ ?" ಎಂದ. ಸುಮಂತ್ರ ''ಇಲ್ಲ ಮಹಾರಾಜ, ವೀರ್ಯವಂತನಾದ ರಾಮನ ಕೈಯನ್ನು ಹಿಡಿದು ಹೋಗುತ್ತಿದಾಳೆ ಜಾನಕಿ. ಸಿಂಹವನ್ನು, ಆನೆಯನ್ನು ಕಂಡರೆ ಸ್ವಲ್ಪವೂ ಭಯಪಡದೆ ಹೋಗುತ್ತಿದಾಳೆ. ರಾಮನನ್ನೇ ಅನುಸರಿಸುತ್ತಿದಾಳೆ'' ಎಂದ.

ರಾಮ ಕಾಡಿಗೆ ಹೊರಟು ಹೋದ ಎಂಬ ಮಾತು ಶಲ್ಯದಂತೆ ದಶರಥನನ್ನು ಇರಿಯಿತು. ''ಹಾ ರಾಮ, ರಾಮ ! ಎನ್ನುತ್ತಾ ಕೌಸಲ್ಯೆಯ ಕೈಗಳನ್ನು ಹಿಡಿದು ಕೊಂಡು ಅವುಗಳನ್ನು ಕಣ್ಣಿಗೆ ಒತ್ತಿಕೊಂಡ. ''ಆಹಾ–ಈ ಕೈಗಳ ಸ್ಪರ್ಶ ಸ್ವಲ್ಪ ತಾಪಹಾರಕ ಎನಿಸಿದೆ. ಆ ರಾಮನನ್ನು, ನನ್ನ ಕಣ್ಮಣಿಯನ್ನು ಎತ್ತಿ ಆಡಿಸಿದ ಕರಗಳಲ್ಲವೆ ಇವು ?'' ಎನ್ನುತ್ತಾ ''ಕೌಸಲ್ಯೆ, ನಿನ್ನ ಕೈಗಳಿಂದ ನನ್ನನ್ನು ಒಮ್ಮೆ ನೇವರಿಸು. ಆ ರಾಮನನ್ನು ಅಪ್ಪಿದ ಕೈಗಳು ನನ್ನನ್ನು ಮುಟ್ಟಿದರೆ ನನ್ನ ತಾಪ ಹೋಗುತ್ತದೇನೋ'' ಎಂದು ವಿಲಪಿಸಿದ.

''ಕೌಸಲ್ಯೆ ಎಲ್ಲಿರುವೆ ? ಅಯ್ಯೋ, ನನ್ನ ಕಣ್ಣೇ ಕಾಣಿಸದು ರಾಮ ತನ್ನೊಡನೆಯೇ ನನ್ನ

ದೃಷ್ಟಿಯನ್ನೂ ಕೊಂಡೊಯ್ದುಬಿಟ್ಟ, ರಾಘವ, ನನ್ನ ಪ್ರಾಣಗಳು ಇನ್ನು ಹೆಚ್ಚು ಕಾಲ ನಿಲ್ಲವು. ನಿನ್ನನ್ನು ಅಗಲಿದ ಈ ಜೀವ ಈ ದೇಹದಲ್ಲಿ ನಿಲ್ಲದು'' ಎಂದು ಅಳತೊಡಗಿದ.

ಕೌಸಲ್ಯೆ ''ನೋಡು. ಒಂದು ಘಟನೆ ಜ್ಞಾಪಕಕ್ಕೆ ಬರುತ್ತಿದೆ. ಹೇಳುತ್ತೇನೆ ಕೇಳು. ಹಿಂದೆ ಒಂದು ದಿನ ನಾನು ಬೇಟೆಯಾಡುವ ನಲುವಾಗಿ ಕಾಡಿನಲ್ಲಿ ಅವಿತುಕೊಂಡಿದ್ದೆ. ಅನತಿದೂರದಲ್ಲಿ ''ಘುಳುಘುಳು'' ಶಬ್ದ ಕೇಳಿಸಿತು. ''ಓಹೋ ! ಆನೆಯೊಂದು ನೀರು ಕುಡಿಯುತ್ತಿದೆ' ಎಂದುಕೊಂಡ ನಾನು. ಒಡನೆ ಶಬ್ದ ಬಂದ ದಿಕ್ಕಿಗೆ ಶಬ್ದವೇಧಿ ಬಾಣವನ್ನು ಗುರಿಯಿಟ್ಟು ಹೊಡೆದೆ ಮರುಕ್ಷಣದಲ್ಲಿ "ಹಾ ವೃದ್ಧರೆ, "ನಿಮಗಿನ್ನಾರು ಗತಿ" ಎಂಬ ದನಿ ಕೇಳಿಸಿತು. "ಇದೇನೋ ಪ್ರಮಾದವಾಗಿಬಿಟ್ಟಿತಲ್ಲಾ" ಎಂದುಕೊಂಡು ನಾನು ಬಾಣ ಹೊಡೆದ ಸ್ಥಳಕ್ಕೆ ಓಡಿದೆ. ಅಲ್ಲೊಬ್ಬ ಮುನಿಕುಮಾರ ನನ್ನ ಬಾಣದಿಂದ ತಾಡಿತನಾಗಿ ಬಿದ್ದಿದ್ದ. ನನ್ನನ್ನು ನೋಡಿ 'ರಾಜಾ, ನೀನು ಎಂಥ ಕೆಲಸಮಾಡಿದೆ. ಹುಂ, ಹೋಗಲಿ, ನನ್ನ ವೃದ್ಧ ತಂದೆತಾಯಿಗಳು ಸಮೀಪದಲ್ಲೇ ಇದ್ದಾರೆ. ಅವರಿಗೆ ಈ ಚೊಂಬಿನಲ್ಲಿ ನೀರನ್ನು ಒಯ್ದುಕೊಡು. ಅವರು ಬಹಳ ಬಾಯಾರಿದ್ದಾರೆ" ಎಂದ

ನನಗೆ "ಬ್ರಹ್ಮಹತ್ಯೆ ಮಾಡಿದೆನಲ್ಲ'' ಎಂಬ ಕಳವಳ, ಚಿಂತೆ ಉಂಟಾಯಿತು. ಅದನ್ನು ಗಮನಿಸಿದ ಆ ಮುನಿಕುಮಾರ "ರಾಜಾ, ನೀ ಯೋಚಿಸಬೇಡ. ನಾ ಬ್ರಾಹ್ಮಣನಲ್ಲ.... ವೈಶ್ಯ. ನನ್ನ ತಂದೆತಾಯಿ ವೃದ್ಧರು, ಅಂಧರು, ಅವರಿಗೆ ನೀನು ನೀರು ತೆಗೆದುಕೊಂಡು ಹೋಗಿ ಕೊಡು. ಈ ಬಾಣವನ್ನು ಕಿತ್ತುಹಾಕು. ವೇದನೆ ಸಹಿಸಲಾರೆ" ಎಂದ.

ನನಗೆ ಬಹಳ ಸಂಕಟವಾಯಿತು. ಬಾಣವನ್ನು ಕಿತ್ತರೆ ಪ್ರಾಣ ಹೋಗುತ್ತದೆ. ಕೀಳದಿದ್ದರೆ ಆ ಮುನಿಕುಮಾರನ ಸಂಕಟ ನೋಡಲು ಆಗದು. ಕೊನೆಗೆ ಬಾಣವನ್ನು ಕಿತ್ತೆ. ಕೀಳುತ್ತಿದ್ದಂತೆ ಆ ಕುಮಾರನ ಪ್ರಾಣವೂ ಹೋಯಿತು.

ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಆ ವೃದ್ಧ ದಂಪತಿಗಳ ಹತ್ತಿರ ಹೋದೆ. ಅವರೋ ಹಣ್ಣು ಹಣ್ಣು ಮುದುಕರು. ಮೇಲಾಗಿ ಕುರುಡರು ನನ್ನ ಹೆಜ್ಜೆಯ ಸಪ್ಪಳ ಗಮನಿಸಿ "ಮಗೂ ಬಂದೆಯಾ ! ನಿನ್ನ ಬರವಿಗಾಗಿ ಎಷ್ಟು ಪರಿತಪಿಸಿದೆವು ಬಲ್ಲೆಯಾ ? ಮಗುವಿಗೆ ಏನಾಗಿ ಹೋಯಿತೋ ಎಂದು ಭಯಪಟ್ಟೆವು ಏಕೆ ಇಷ್ಟುಹೊತ್ತು ? ಮುದುಕರಾದ ನಮ್ಮ ಮೇಲೆ ತಾತ್ಸಾರ ಬಂದಿತೋ ಏನೋ ಎಂದು ಎಣಿಸಿದೆವು. ಏಕೆ ಇಷ್ಟು ಹೊತ್ತಾದರೂ ಮಾತಾಡುವು ದಿಲ್ಲ ? ನಮ್ಮ ಮೇಲೆ ಕೋಪವೇ ಮಗೂ ? ಮಾತಾಡು. ಬಹಳ ಬಾಯಾರಿದ್ದೇವೆ. ನೀರು ತಂದೆಯಾ ಅಪ್ಪ" ಎಂದರು.

ನಾನು ಅಧೈರ್ಯದಿಂದ ನೀರಿನ ಚೊಂಬನ್ನು ಮುಂದಿಡುತ್ತಾ ''ನಾನು ನಿಮ್ಮ ಮಗನಲ್ಲ. ಅಯೋಧ್ಯೆಯ ಅರಸು ದಶರಥ. ತಿಳಿಯದೆ ಯಾವುದೋ ಮೃಗ ಎಂದುಕೊಂಡು ಬಾಣ ಬಿಟ್ಟೆ. ಅದು ನಿಮ್ಮ ಮಗನನ್ನು ತಾಗಿತು. ಅದರಿಂದ ಅವನು ಅಸು ನೀಗಿದ್ದಾನೆ ನೀರನ್ನು ತಂದಿದೇನೆ. ತೆಗೆದುಕೊಳ್ಳಿ" ಎಂದೆ.

ಮಗನ ಸಾವಿನ ಸುದ್ಧಿಯನ್ನು ಕೇಳುತ್ತಲೇ ಆ ವೃದ್ಧರು ಪರಿಪರಿಯಾಗಿ ಹಲುಬಿದರು. ಮಗ ಮಾಡುತ್ತಿದ್ದ ಒಂದೊಂದು ಸೇವೆಯನ್ನೂ ನೆನಸಿಕೊಂಡು ಕಲ್ಲೂ ಕರಗುವಂತೆ ಅತ್ತರು. ತಮ್ಮನ್ನು ಮಗನ ಬಳಿಗೆ ಕರೆದುಕೊಂಡು ಹೋಗುವಂತೆ ಹೇಳಿದರು. ಅದರಂತೆ ಅವರನ್ನು ಕುಮಾರನ ಹತ್ತಿರ ಕರೆದುಕೊಂಡು ಹೋದೆ. ಅಲ್ಲಿ ಬಿದ್ದಿದ್ದ ಮಗನ ಶರೀರವನ್ನು ತಡವಿದರು. ತೊಡೆಯಮೇಲಿಟ್ಟುಕೊಂಡು ವಿಲಪಿಸಲು ಪ್ರಾರಂಭಿಸಿದರು ''ಕುಮಾರಾ, ಯಾವಾಗಲೂ ನಮಗಾಗಿ

ಸೇವೆ ಮಾಡಲು ಮುಂದಾಗಿ ಬರುತ್ತಿದ್ದೆ ನೀನು ಈಗ ಸ್ವರ್ಗಕ್ಕೆ ನಮಗಿಂತ ಮುಂದಾಗಿಯೇ ಹೊರಟುಬಿಟ್ಟೆಯಾ. ನಮ್ಮನ್ನು ಕಳಿಸಿ ಅಲ್ಲವೇ ನೀ ಬರಬೇಕು ಎಷ್ಟು ದಿನ ಈ ಮುದುಕರಿಗೆ ಸೇವೆ ಮಾಡುವುದು ? ಎಂದುಕೊಂಡು ಈ ತೊಂದರೆಬೇಡ ಎಂದೆಣಿಸಿ ಹೊರಟುಹೋದೆಯಾ. "ನೀರು ತರುತ್ತಾನೆ ಶ್ರವಣ" ಎಂದು ಕಾಯುತ್ತಿದ್ದೆವಲ್ಲ ನಿನಗಾಗಿ ನಾವು ನಿನ್ನನ್ನು ಕರೆಯುವುದಕ್ಕಿಂತ ಮುಂಚಿತವಾಗಿ ನಮಗೆ ಬೇಕಾದ ಸೇವೆಯನ್ನು ಮಾಡುತ್ತಿದ್ದೆಯಲ್ಲ. ಈಗ ನಾವು ಕರೆಯುತ್ತಿದ್ದರೂ ಮಾತಾಡದೆ ಏಕೆ ಸುಮ್ಮನೆ ಮಲಗಿರುವೆ ? ಮಗು, ನೋಡು. ನಿನ್ನ ತಾಯಿ ಎಷ್ಟು ಕಷ್ಟಪಡುತ್ತಿದ್ದಾಳೆ ! ಅವಳನ್ನು ಒಂದೇ ಒಂದು ಸಾರಿ "ಅಮ್ಮಾ" ! ಎಂದು ಕರೆಯಲಾರೆಯಾ." ಮುಂತಾಗಿ ಬಹಳವಿಧದಲ್ಲಿ ತಮ್ಮ ಶೋಕವನ್ನು ತೋಡಿಕೊಂಡು ಅವರು ಮಗನನ್ನು ಚಿತೆಯ ಮೇಲಿಟ್ಟು ತಾವೂ ಅವನೊಡನೆ ಚಿತೆಯಲ್ಲಿ ಬೀಳಲು ಸಂಕಲ್ಪಿಸಿದರು.

ಅಗ್ನಿಯಲ್ಲಿ ಬೀಳುವುದಕ್ಕೆ ಮೊದಲು ನನ್ನನ್ನು ಕುರಿತು "ರಾಜಾ, ನೀ ತಿಳಿಯದೆ ಮಾಡಿದ ಅಪರಾಧ ಇದು ಅಲ್ಲದೆ ನೀನಾಗಿಯೇ ಬಂದು ಹೇಳಿ ಕ್ಷಮೆಯನ್ನು ಯಾಚಿಸಿದೆ. ಇಲ್ಲವಾಗಿದ್ದರೆ ನಿನ್ನ ತಲೆ ಅನೇಕ ಹೋಳುಗಳಾಗಿ ಸಿಡಿದು ಹೋಗುತ್ತಿತ್ತು ಈ ವೇಳೆಗೆ. ಆದರೂ, ನಮ್ಮ ಸಂಕಟ ಬಹಳವಾಗಿದೆ. ಅದು ನಿನ್ನನ್ನು ಶಪಿಸಿದಲ್ಲದೆ ಶಾಂತವಾಗದು ಶಾಪವನ್ನು ಹಿಡಿ. ನಮಗೆ ಅಂತ್ಯಕಾಲದಲ್ಲಿ ಯಾವರೀತಿಯ ಸಂಕಟವನ್ನು ಉಂಟುಮಾಡಿದೆಯೋ ಅದೇ ರೀತಿಯ ಸಂಕಟ ನಿನಗೂ ನಿನ್ನ ಅಂತ್ಯಕಾಲದಲ್ಲಿ ಉಂಟಾಗಲಿ" ಎಂದು ಶಾಪಕೊಟ್ಟರು ಮಗನೊಡನೆ ಚಿತೆಯಲ್ಲಿ ಹಾರಿದರು ಮೂವರೂ ಸದ್ಗತಿ ಪಡೆದರು. "ಕೌಸಲ್ಯೆ, ಅಂದು ಆ ವೃದ್ಧ ದಂಪತಿಗಳು ಕೊಟ್ಟ ಶಾಪ ಇಂದು ನನ್ನ ಅಂತ್ಯಕಾಲದಲ್ಲಿ ಫಲಿಸಿದೆ" ಎಂದು ದಶರಥ ತನಗೆ ಶಾಪ ಬಂದ ವೃತ್ತಾಂತವನ್ನು ವಿವರಿಸಿದ.

ರಾಮನ ವಿರಹದಿಂದ ನಿದ್ರೆ, ಊಟ ಒಂದೂ ಇಲ್ಲದೆ ದಿನಗಳು ಕಳೆದಿದ್ದವು. ಆಗತಾನೇ ಎಲ್ಲರಿಗೂ ಜೋಂಪು ಹಿಡಿದಂತಾಯಿತು. ಬೆಳಗಾದಮೇಲೆ ಕೌಸಲ್ಯೆ ಸುಮಿತ್ರೆಯರು ಎದ್ದು ದಶರಥನನ್ನು ಎಬ್ಬಿಸಲು ನೋಡಿದರು. ದಶರಥ ಏಳಲಿಲ್ಲ. ಅವನ ಪ್ರಾಣಪಕ್ಷಿ ಹಾರಿಹೋಗಿತ್ತು. "ಹೋ" ಎಂದು ಕೌಸಲ್ಯಾ ಸುಮಿತ್ರೆಯರು ದಶರಥನ ಪಾದಗಳಮೇಲೆ ತಲೆಯನ್ನಿಟ್ಟು ರೋದಿಸ ತೊಡಗಿದರು. ಅಂತಃಪುರವೆಲ್ಲ ಶೋಕಸಾಗರದಲ್ಲಿ ಮುಳುಗಿತು.

ವಶಿಷ್ಠರು ಬಂದರು. ರಾಜನ ದೇಹವನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಇಡುವಂತೆ ಏರ್ಪಾಡು ಮಾಡಿದರು. "ಮಹಾರಾಜ ಇನ್ನು ಇಲ್ಲ. ರಾಮ ಲಕ್ಷ್ಮಣರು ಕಾಡಿಗೆ ಹೋಗಿದ್ದಾರೆ. ದೇಶ ಅನಾಯಕವಾಗಬಾರದು. ಅನಾಯಕವಾದ ರಾಜ್ಯ ಅಪಾಯಕರ" ಎಂದು ಯೋಚಿಸಿದರು ವಶಿಷ್ಠರು. ಮಾವನ ಮನೆಯಿಂದ ಭರತನನ್ನು ಕರೆದು ತರಲು ಕುಶಾಗ್ರಮತಿಗಳಾದ ದೂತರನ್ನು ನಿಯೋಜಿಸಿದರು. ಭರತನಿಗೆ ಮೊದಲೇ ವಿಚಾರ ತಿಳಿಯದಂತೆ ಅನುಮಾನ ಬರದಂತೆ ಆಭರಣಗಳನ್ನೂ, ವಸ್ತ್ರಗಳನ್ನೂ ಬಹುಮಾನವಾಗಿ ಕೊಟ್ಟು ರಾಜಧಾನಿಗೆ ಶೀಘ್ರವಾಗಿ ಬರುವಂತೆ "ಪುರೋಹಿತ ವಶಿಷ್ಠರು ಹೇಳಿ ಕಳುಹಿಸಿದಾರೆ" ಎಂದು ತಿಳಿಸುವಂತೆ ದೂತರಿಗೆ ಹೇಳಿದರು. ಆದರಂತೆ ವೇಗವಾದ ಕುದುರೆಗಳನ್ನೇರಿದ ದೂತರು ಏಳು ದಿನಗಳು ಪ್ರಯಾಣ ಬೆಳೆಸಿ ಕೇಕಯ ನಗರವನ್ನು ಸೇರಿದರು.

ದೂತರು ಬರುವ ಹಿಂದಿನ ರಾತ್ರಿ ಭರತ ದುಃಸ್ವಪ್ನಗಳನ್ನು ಕಂಡಿದ್ದ ತಮ್ಮ ಶತ್ರುಘ್ನನಿಗೆ ತಾನು ಕಂಡ ದುಃಸ್ವಪ್ನಗಳ ಬಗ್ಗೆ ತಿಳಿಸುತ್ತಾ "ನೋಡು ತಮ್ಮ, ನಿನ್ನೆ ನಾನು ಕೆಟ್ಟ ಕನಸನ್ನು ಕಂಡೆ.

ತಂದೆ ಮೈಗೆಲ್ಲ ಎಣ್ಣೆಯನ್ನು ಬಳಿದುಕೊಂಡು ಕೆಂಪು ಹೂಗಳಿಂದ ಅಲಂಕೃತರಾಗಿ ಕೆಂಪು ಬಟ್ಟೆಯನ್ನುಟ್ಟು ದಕ್ಷಿಣ ದಿಕ್ಕಿನ ಕಡೆ ಹೋಗುತ್ತಿರುವಂತೆ ಕಂಡೆ. ಇನ್ನೂ ಏನೇನೋ ಕೆಟ್ಟ ಕನಸುಗಳನ್ನು ಕಂಡೆ. ಇದರ ಫಲ ಯಾವುದೋ ?" ಎಂದು ಹೇಳುತ್ತಿರುವಂತೆ ವಶಿಷ್ಠರಿಂದ ಕಳುಹಿಸಲ್ಪಟ್ಟ ದೂತರು ಬಂದರು. ಭರತನಿಗೆ ನಮಸ್ಕರಿಸಿದರು. ವಶಿಷ್ಠರು ಕಳುಹಿಸಿದ ವಸ್ತ್ರಮಾಲ್ಯಗಳನ್ನೂ ಆಭರಣಗಳನ್ನೂ ಒಪ್ಪಿಸಿದರು,

ಭರತ ಅವರನ್ನು "ಏನು ದೂತರೆ? ನೀವು ಬಂದ ಕಾರಣವೇನು? ನಿಮ್ಮನ್ನು ಯಾರು ಕಳುಹಿಸಿದರು? ಅಪ್ಪನೆ ಕಳುಹಿಸಿರಬೇಕು. ತಂದೆ ಆರೋಗ್ಯವಾಗಿದಾರೆಯೆ? ನನ್ನ ಗುರು ಸಮಾನನಾದ ಅಣ್ಣ ರಾಮನಿಗೆ ಕುಶಲವೇ? ಲಕ್ಷ್ಮಣ ಚೆನ್ನಾಗಿರುವನೇ? ರಾಮ ಮಾತೆ ಕೌಸಲ್ಯೆ ಚೆನ್ನಾಗಿರುವಳೆ? ಸುಮಿತ್ರಾದೇವಿ ಹೇಗಿದಾಳೆ? ಸದಾ ಚಂಡಿಯೆನಿಸಿ, ಹಠಮಾರಿಯಾದ, ರಾಜ್ಯ ಕಾಮಳಾದ ನನ್ನ ತಾಯಿ ಕೈಕೇಯಿ ಹೇಗಿದಾಳೆ?'' ಎಂದು ಎಲ್ಲರ ಕುಶಲವನ್ನೂ ವಿಚಾರಿಸಿದ.

ವಾಲ್ಮೀಕಿ ಈ ಪ್ರಸಂಗವನ್ನು ಬಹಳ ರಸವತ್ತಾಗಿ ವರ್ಣಿಸಿದಾರೆ. ಭರತ ಎಲ್ಲರ ಗುಣವನ್ನೂ ಎಷ್ಟು ಚೆನ್ನಾಗಿ ಅರಿತಿದಾನೆ ಎಂಬುದನ್ನು ಅವನು ದೂತರನ್ನು ವಿಚಾರಿಸುವುದರಲ್ಲಿ ಗೊತ್ತಾಗುತ್ತದೆ. ತನ್ನ ತಾಯಿ ಕೈಕೇಯಿಯ ಗುಣವನ್ನು ವರ್ಣಿಸುತ್ತಾನೆ "ರಾಜ್ಯಕಾಮಾ ಸದಾ ಚಂಡೀ" ಎಂದಿದಾನೆ ಭರತ.

ಭರತನ ಪ್ರಶ್ನೆಗೆ ದೂತರು "ಕುಮಾರ, ನೀನು ಯಾರ ಯಾರ ಕ್ಷೇಮವನ್ನು ಬಯಸುವಯೋ ಅವರೆಲ್ಲ ಕುಶಲವಾಗಿದಾರೆ. ನಮ್ಮನ್ನು ಪುರೋಹಿತ ವಶಿಷ್ಠರು ಕಳುಹಿಸಿದಾರೆ. ಶೀಘ್ರವಾಗಿ ಬರುವಂತೆ ನಿಮಗೆ ಹೇಳಿ ಕಳುಹಿಸಿದಾರೆ" ಎಂದರು.

ತತ್ಕ್ಷಣ ಭರತ ತಾತನಿಗೂ ಮಾವನಿಗೂ ನಮಸ್ಕರಿಸಿದ. ಕೇಕಯ ರಾಜ ಅಳಿಯನಿಗೆ ಬೇಕಾದಷ್ಟು ಉಡುಗೊರೆಗಳನ್ನಿತ್ತ. ಅವನ್ನೆಲ್ಲ ನಂತರ ಕಳುಹಿಸುವಂತೆ ಹೇಳಿದ. ಭರತ ಶತ್ರುಘ್ನನೊಡನೆ ರಥವನ್ನೇರಿ ಅಯೋಧ್ಯಾಭಿಮುಖವಾಗಿ ಹೊರಟ.

ಮಾರ್ಗ ಮಧ್ಯದಲ್ಲಿ ಯೋಚಿಸಿದ. "ದೂತರನ್ನು ವಶಿಷ್ಠರು ಏಕೆ ಕಳುಹಿಸಿದರು? ತಂದೆಗೆ ಏನಾಗಿರಬಹುದು? ತಂದೆ ಜೀವದೊಂದಿಗಿದ್ದರೆ ವಶಿಷ್ಠರು ಏಕೆ ಹೇಳಿಕಳುಹಿಸಬೇಕು? ಅಥವಾ ತಂದೆ ಯಾವುದಾದರೂ ಯಾಗ ಮಾಡುತ್ತಿರಬಹುದು. ಅದರ ದೀಕ್ಷೆಯಲ್ಲಿರಬಹುದು. ಆದುದರಿಂದ ವಶಿಷ್ಠರು ಹೇಳಿಕಳುಹಿಸಿರಬಹುದು. ಊಹುಂ ಅಲ್ಲ. ತಂದೆ ದೀಕ್ಷಿತನಾಗಿದ್ದರೆ ಹಿರಿಯಣ್ಣ ರಾಮ ಹೇಳಿಕಳುಹಿಸಬಹುದಾಗಿತ್ತಲ್ಲ-ರಾಮ ಚೆನ್ನಾಗಿದ್ದರೆ ಸಾಕು." ಹೀಗೆಲ್ಲ ಮನಸ್ಸಿನಲ್ಲಿ ಯೋಚಿಸುತ್ತಾ ಭರತ ವೇಗವಾಗಿ ಬಂದ.

ಅಯೋಧ್ಯಾನಗರಿಯನ್ನು ದೂರದಿಂದಲೇ ನೋಡಿದ. ಕಳಾಹೀನವಾಗಿತ್ತು ಪಟ್ಟಣ. ಪತಿಯನ್ನು ಕಳೆದುಕೊಂಡ ವಿಧವೆಯಂತೆ ಅಯೋಧ್ಯಾನಗರಿ ಕಾಣಿಸುತ್ತಿತ್ತು. ನಗರದ ಒಳಗೆ ಪ್ರವೇಶಿಸಿದ. ಎಲ್ಲೂ ಚಟುವಟಿಕೆಗಳೇ ಕಾಣಲಿಲ್ಲ. ಅಂಗಡಿಗಳು, ಕಾರ್ಯಾಲಯಗಳು. ಮಂದಿರಗಳು, ದೇವಾಲಯಗಳು ಎಲ್ಲ ಮುಚ್ಚಿವೆ. ಉದ್ಯಾನವನ, ರಾಜಬೀದಿ ಎಲ್ಲ ಶೂನ್ಯವಾಗಿವೆ. "ಇದೇನು?" ಎಂದುಕೊಂಡ ಭರತ.

ದಶರಥನ ಮನೆಯ ಮುಂದೆ ರಥ ಬಂದಿತು. ರಥದಿಂದ ಒಂದೇ ನೆಗೆತಕ್ಕೆ ಇಳಿದು ತಂದೆಯ ಅರಮನೆಯನ್ನು ಹೊಕ್ಕ, ಅದು ಶೂನ್ಯವಾಗಿತ್ತು. ''ಅಪ್ಪ ಅಮ್ಮನ ಮನೆಯಲ್ಲಿರಬೇಕು'' ಎಂದುಕೊಂಡವನೇ ಕೈಕೇಯಿಯ ಅಂತಃಪುರಕ್ಕೆ ಓಡಿಬಂದ.

ಅಲ್ಲಿ ವಿಧವೆಯ ವೇಷದಲ್ಲಿದ್ದ ಕೈಕೇಯಿಯನ್ನು ನೋಡಿದ. ಮಗನನ್ನು ನೋಡಿದ ಕೈಕೇಯಿ ''ಮಗೂ ಬಂದೆಯಾ, ತಾತನ ಮನೆಯಲ್ಲಿ ಎಲ್ಲರೂ ಕುಶಲವೇ ? ಹೇಳು. ಪ್ರಯಾಣ ಸುಗಮವಾಯಿತೆ ?" ಎಂದಳು. ಭರತ ''ಎಲ್ಲ ಕುಶಲ ! ಅಮ್ಮಾ, ತಂದೆ ಎಲ್ಲಿ ?'' ಎಂದ. ಕೈಕೇಯಿ ''ಯಾಗತಿಃ ಸರ್ವಭೂತಾನಾಂ ತಾಂ ಗತಿಂ ತೇ ಪಿತಾ ಗತಃ" ''ಎಲ್ಲ ಭೂತಗಳೂ ಕೊನೆಯಲ್ಲಿ ಯಾವ ಗತಿಯನ್ನು ಹೊಂದುತ್ತವೆಯೋ ನಿನ್ನ ತಂದೆಯೂ ಅದೇ ಗತಿಯನ್ನೇ ಹೊಂದಿದ'' ಎಂದಳು.

ಇದನ್ನು ಕೇಳಿದ ಭರತ, ''ಅಪ್ಪಾ'' ಎನ್ನುತ್ತಾ ಶೋಕದಿಂದ ಪ್ರಜ್ಞಾಹೀನನಾದ. ಚೇತರಿಸಿಕೊಂಡು" ಅಮ್ಮಾ, ಅಪ್ಪ ಕೊನೆಯ ಗಳಿಗೆಯಲ್ಲಿ ಏನು ಹೇಳಿದ ? ರಾಮಲಕ್ಷ್ಮಣರೇ ಧನ್ಯರು. ಸಾಯುವ ವೇಳೆಯಲ್ಲಿ ತಂದೆಯ ಶುಶ್ರೂಷೆಯನ್ನು ಮಾಡಿ ಅವನ ಪಕ್ಕದಲ್ಲೇ ಇದ್ದರು. ಪುಣ್ಯವಂತರು ಅವರು. ಕೊನೆಯಲ್ಲಿ ತಂದೆ ಹೇಳಿದ ಮಾತುಗಳು ಏನಮ್ಮ ಹೇಳು'' ಎಂದ.

ಕೈಕೇಯಿ "ಕೊನೆಯಲ್ಲಿ ನಿಮ್ಮ ತಂದೆ "ರಾಮ, ಲಕ್ಷ್ಮಣಾ, ಜಾನಕೀ" ಎನ್ನುತ್ತಾ ಪ್ರಾಣ ಬಿಟ್ಟರು" ಎಂದಳು.

''ಅಮ್ಮ ! ಇದೇನು ! ರಾಮಲಕ್ಷ್ಮಣರು ಆಗ ಎಲ್ಲಿ ಹೋಗಿದ್ದರು ?"

"ಕಾಡಿಗೆ ಹೋಗಿದ್ದರು ಮಗು''

"ಕಾಡಿಗೆ !? ಏಕೆ?"

"ತಂದೆ ದಶರಥನೇ ಅವರನ್ನು ಕಾಡಿಗೆ ಕಳುಹಿಸಿದ !"

''ಏನಮ್ಮ ನೀ ಹೇಳುವುದು. ರಾಮನನ್ನು ಏಕಮ್ಮ ತಂದೆ ಕಾಡಿಗೆ ಕಳುಹಿಸಿದ ? ಯಾವ ತಪ್ಪಿಗಾಗಿ ರಾಮ ಕಾಡಿಗೆ ಹೋದನಮ್ಮ ? ಬ್ರಾಹ್ಮಣರ ಧನವನ್ನು ಅಪಹರಿಸಿದನೆ ? ಪರಸತಿಯನ್ನು ಬಯಸಿದನೆ ? ಏನು ಮಾಡಿದ್ದಕ್ಕಾಗಿ ರಾಮನನ್ನು ಕಾಡಿಗೆ ಕಳುಹಿಸಿದ ತಂದೆ ? ಸರಿಯಾಗಿ ಹೇಳಮ್ಮ" ಎಂದ ಭರತ.

''ಕಂದ, ಭರತ, ನೀ ಈ ಕನಕಮಯ ಆಸನದ ಮೇಲೆ ಸಾವಧಾನವಾಗಿ ಕುಳಿತುಕೊ, ಎಲ್ಲ ಹೇಳುತ್ತೇನೆ. ನೀ ಹೇಳಿದಂತೆ ರಾಮ ಯಾವ ತಪ್ಪನ್ನೂ ಮಾಡಲಿಲ್ಲ. ನಾನೇ ನಿನ್ನ ಅಭ್ಯುದಯಕ್ಕಾಗಿ ನಿಮ್ಮ ತಂದೆಯನ್ನು ಎರಡು ವರ ಕೇಳಿದೆ. ಹಿಂದೆ ದೇವಾಸುರ ಯುದ್ಧ ಕಾಲದಲ್ಲಿ ನಿಮ್ಮ ತಂದೆ ನನಗೆ ಕೊಟ್ಟ ವರಗಳನ್ನು ಈಗ ನಾ ಕೇಳಿದೆ. ಅದರಿಂದ ಮೊದಲ ವರದಮೂಲಕ ನಿನಗೆ ಪಟ್ಟಾಭಿಷೇಕ. ಎರಡನೆಯ ವರದಿಂದ ರಾಮನಿಗೆ ಹದಿನಾಲ್ಕುವರ್ಷ ವನವಾಸ. ಮಗು ಭರತ, ನಾ ಎಂಥ ಕಾರ್ಯ ಸಾಧಿಸಿದೆ ನೋಡು. ನಿನ್ನ ಹಿತವನ್ನು ಬಯಸಿ ಈಗ ದಶರಥ ಪ್ರಾಣ ಬಿಟ್ಟಿದಾನೆ.

ರಾಮ ಲಕ್ಷ್ಮಣರು ಕಾಡಿಗೆ ಹೋಗಿದಾರೆ. ''ಸಕಲ ವೈಭವಗಳಿಂದ ಕೂಡಿದ ನಿಷ್ಕಂಟಕವಾದ ರಾಜ್ಯವನ್ನು ನೀನು ಆಳು, ನೀ ರಾಜನಾಗು, ಪಟ್ಟಾಭಿಷಿಕ್ತನಾಗು'' ಎಂದಳು ಕೈಕೇಯಿ.

ತೀಕ್ಷ್ಣವಾದ ಕುಠಾರ ಪ್ರಹಾರಗಳು ಒಂದಾದ ಮೇಲೊಂದು ತಲೆಯ ಮೇಲೆ ಬೀಳುತ್ತಿದ್ದಂತೆ ಆಯಿತು ಭರತನಿಗೆ. ಕಾದ ಸೀಸವನ್ನು ಕಿವಿಯಲ್ಲಿ ಸುರಿದಂತಾಯಿತು. ಮೊದಲೇ ಉರಿಯುತ್ತಿದ್ದ ವ್ರಣಕ್ಕೆ ಉಪ್ಪನ್ನು ಹಚ್ಚಿದಂತಾಯಿತು. ಚೈತನ್ಯವೆಲ್ಲ ಉಡುಗಿತು. "ಪಾಪಿ, ರಾಕ್ಷಸಿ, ನೀ ನನಗೆ ತಾಯಿ ಖಂಡಿತ ಅಲ್ಲ. ತಾಯಿಯ ರೂಪದಲ್ಲಿರುವ ಕೊಲೆಪಾತಕಿ ನೀನು. ಏನು ಮಾಡಿಬಿಟ್ಟೆ, ಕುಲಘಾತಕಿಯಾದೆಯಲ್ಲೇ" ಎಂದು ಗತಚೈತನ್ಯನಾಗಿ ಕೆಳಗೆ ಬಿದ್ದ.

ಸ್ವಲ್ಪ ಕಾಲದ ಮೇಲೆ ಚೇತರಿಸಿಕೊಂಡ. "ಹೇ ಮೂಢೆ! ಪಿಶಾಚಿ, ರಾಜ್ಯ ಲೋಭದಿಂದ ಎಂಥ ಅನರ್ಥವನ್ನು ಮಾಡಿದೆ. ನಿನ್ನ ರಾಜ್ಯದ ಆನೆ ಸಕಲರಿಗೂ ತೊಂದರೆ ಆಗುವಂತೆ ಮಾಡಿತು. ಭುವನಾಭಿರಾಮನಾದ ಆ ಶ್ರೀರಾಮ ಕಾಡಿಗೆ ಹೋದ; ಮಹಾರಾಜ ದಶರಥ ಗತಪ್ರಾಣನಾದ; ಎಲ್ಲ ತಾಯಂದಿರಿಗೂ ವೈಧವ್ಯ ಬಂದಿತು ನಿನ್ನನ್ನು ಏನುಮಾಡಿದರೂ ಸಾಲದು. ಇದೀಗಲೇ ನಿನ್ನನ್ನು ನನ್ನ ನೊಂಟದಲ್ಲಿರುವ ಹರಿತವಾದ ಕತ್ತಿಯಿಂದ ತುಂಡರಿಸಿ ಚೆಲ್ಲುತ್ತಿದ್ದೆ. ಆದರೆ "ಮಾತೃಘಾತಕ" ಎಂದು ಎಲ್ಲಿ ರಾಮ ನನ್ನ ಮುಖಾವಲೋಕನ ಮಾಡುವುದಿಲ್ಲವೋ ಎಂದು ಸುಮ್ಮನಿದ್ದೇನೆ. ಅಯ್ಯೋ! ನಾನು ಏನೆಲ್ಲ ಆಸೆಗಳನ್ನಿಟ್ಟುಕೊಂಡು ಬಂದೆ. ತಂದೆ ಯಜ್ಞ ಮಾಡುತ್ತಾನೆ ಅದಕ್ಕಾಗಿ ಕರೆದಿದ್ದಾನೆ ಎಂದು ಬಂದೆ. ಮುದ್ದು ರಾಮನಿಗೆ ಯೌವರಾಜ್ಯಾಭಿಷೇಕ ಎಂದು ಕರೆಕಳುಹಿಸಿದ್ದಾರೆ ವಶಿಷ್ಠರು ಎಂದು ಬಂದೆನಲ್ಲ. ಈಗ ನೋಡಿದರೆ ತಂದೆಯನ್ನು ಕಳೆದುಕೊಂಡೆ. ತಂದೆಯ ಸ್ಥಾನದಲ್ಲಿರುವ ರಾಮ ವನವಾಸಿಯಾಗಲು ಕಾರಣನಾದೆ. ನನ್ನಂಥ ದುರ್ಭಾಗಿಗಳು ಉಂಟೇ" ಎಂದು ಪರಿಪರಿಯಾಗಿ ಹಲುಬಿದ ಭರತ.

ಕೈಕೇಯಿಯನ್ನು ನಿಂದಿಸಿ ಅಲ್ಲಿಂದ ಕೌಸಲ್ಯೆಯ ಬಳಿಗೆ ಬಂದ ಭರತ. ಭರತ ಬಂದುದನ್ನು ಕಂಡ ದೀನಳಾದ ಕೌಸಲ್ಯೆ "ಬಂದೆಯಾ ಭರತ. ಮಹಾರಾಜರು ಸ್ವರ್ಗಸ್ಥರಾದರು. ರಾಮ–ಲಕ್ಷ್ಮಣರು ಕಾಡಿಗೆ ಹೋದರು. ಇನ್ನು ಈ ನಿಷ್ಕಂಟಕವಾದ ಈ ರಾಜ್ಯವನ್ನು ಪರಿಪಾಲಿಸು. ನಿನ್ನ ಮನೋರಥಗಳು ಕೈಗೂಡಿದುವಷ್ಟೆ" ಎಂದಳು. ಕೌಸಲ್ಯೆಯ ಮಾತುಗಳನ್ನು ಕೇಳಿ "ಗೊಳೋ" ಎಂದು ರೋದಿಸುತ್ತಾ ಕೌಸಲ್ಯೆಯ ಪಾದಗಳಿಗೆ ಮಣಿದ ಭರತ.

"ಅಮ್ಮಾ. ನಾ ಏನೂ ಅರಿಯೆ ಮಾವನ ಮನೆಯಿಂದ ಇದೀಗ ತಾನೇ ಬರುತ್ತಿದ್ದೇನೆ. ರಾಮನನ್ನು ಕಾಡಿಗೆ ಕಳುಹಿಸುವುದರಲ್ಲಿ ನನ್ನ ಕೈವಾಡ ಏನೂ ಇಲ್ಲ. ತಾಯೇ ಇದು ಸತ್ಯ. ಇಗೋ ಶಪಥ ಮಾಡುತ್ತೇನೆ ಕೇಳು. ರಾಮನನ್ನು ಕಾಡಿಗೆ ಕಳುಹಿಸಲು ನಾ ಒಪ್ಪಿದ್ದರೆ, ನನಗೆ ಬ್ರಹ್ಮಹತ್ಯೆ, ಸುರಾಪಾನ, ಗುರುಸ್ತ್ರೀಗಮನ, ಸ್ತ್ರೀಹತ್ಯೆ, ಶಿಶುಹತ್ಯೆ ಮುಂತಾದ ಕ್ರೂರಕೆಲಸಗಳನ್ನು ಮಾಡಿದವರಿಗೆ ಬರುವ ಪಾಪಗಳೆಲ್ಲ ಬರಲಿ. ಹೆಚ್ಚೇಕೆ! ಈ ಜಗತ್ತಿನಲ್ಲಿ ಯಾವ ಯಾವ ಪಾಪಗಳಿವೆಯೋ ಅವೆಲ್ಲ ರಾಮನನ್ನು ನಾ ಕಾಡಿಗೆ ಕಳುಹಿಸಲು ಕಾರಣವಾಗಿದ್ದರೆ ನನಗೇ ಬರಲಿ."

ಭರತನ ನಿಷ್ಕಲ್ಮಷ ಹೃದಯವನ್ನು ಕಂಡ ಕೌಸಲ್ಯೆಗೆ ಸಮಾಧಾನ ಆಯಿತು. ಭರತ ಹೇಳಿದ: "ಅಮ್ಮ, ನೀ ಯೋಚಿಸದಿರು, ರಾಮನನ್ನು ಹಿಂದಿರುಗಿಸಿ ಅವನಿಗೇ ಈ ರಾಜ್ಯದ ಪಟ್ಟವನ್ನು ಕಟ್ಟುತ್ತೇನೆ. ಅವನಿಗೆ ಬದಲು ನಾ ಕಾಡಿನಲ್ಲಿರುತ್ತೇನೆ" ಎಂದ.

ವಶಿಷ್ಠರು ಬಂದರು. ಮುಂದೆ ನಡೆಯಬೇಕಾದ ಕರ್ಮಗಳನ್ನು ನಡೆಸುವಂತೆ ಹೇಳಿದರು ಭರತನಿಗೆ. ಅದರಂತೆ ದಶರಥನ ದೇಹವನ್ನು ಎಣ್ಣೆಯ ಕೊಪ್ಪರಿಗೆಯಿಂದ ತೆಗೆದು ರಾಜರಿಗೆ ಉಚಿತವಾದ ರೀತಿಯಲ್ಲಿ ಸಂಸ್ಕಾರ ಕ್ರಿಯೆಗಳನ್ನು ನಡೆಸಿದರು. ಶ್ರಾದ್ಧಕ್ರಿಯೆಗಳೆಲ್ಲ ಮುಗಿದುವು.

ವಶಿಷ್ಠರು ಸಭೆ ಸೇರಿಸಿದರು. ಮಂತ್ರಿಗಳು, ಪುರೋಹಿತರು. ಅಮಾತ್ಯರು, ಪುರಪ್ರಮುಖರು ಎಲ್ಲರೂ ಕೂಡಿದ್ದರು. ಭರತನಿಗಾಗಿ ವಿಶಿಷ್ಟವಾದ ಆಸನವನ್ನು ಹಾಕಿದ್ದರು. ವಶಿಷ್ಠರು ಭರತನನ್ನು ಆ ವಿಶಿಷ್ಟವಾದ ಆಸನದ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ಭರತ ಆ ಆಸನವನ್ನು ಕಣ್ಣಿಗೆ ಒತ್ತಿಕೊಂಡು ಅದರ ಕೆಳಗಿದ್ದ ಪೀಠದ ಮೇಲೆ ಕುಳಿತ. ವಶಿಷ್ಠರು, ಮಂತ್ರಿಗಳು, ಭರತನನ್ನು ರಾಜನಾಗುವಂತೆ ಪುನಃಪುನಃ ಪ್ರಾರ್ಥಿಸಿದರು.

ಭರತ ಜಗ್ಗಲಿಲ್ಲ. ಈಗಿಂದೀಗಲೇ ಹೊರಟು ರಾಮನನ್ನು ಹಿಂದಕ್ಕೆ ಕರೆತಂದು ರಾಮನಿಗೇ

ಪಟ್ಟಾಭಿಷೇಕ ಮಾಡುತ್ತೇನೆ" ಎಂದ. ರಾಮನನ್ನು ಹಿಂದಕ್ಕೆ ಕರೆತರಲು ತನ್ನೊಡನೆ ಎಲ್ಲರನ್ನೂ ಬರುವಂತೆ ಪ್ರಾರ್ಥಿಸಿದ. ಎಲ್ಲರೂ ಭರತನ ಮಾತನ್ನು ಅನುಮೋದಿಸಿದರು. "ಧನ್ಯ ಭರತ!" ಎಂಬ ಉದ್ಗಾರ ಎಲ್ಲೆಲ್ಲೂ ಕೇಳಿ ಬರುತ್ತಿತ್ತು. ರಾಮನನ್ನು ಸಕಲ ಮರ್ಯಾದೆಯಿಂದ ಹಿಂದಕ್ಕೆ ಕರೆತರಬೇಕು ಎಂದು ಭರತ ಸಮಸ್ತ ಸೈನ್ಯವನ್ನೂ ಸಜ್ಜುಗೊಳಿಸಿದ.

ವನಕ್ಕೆ ಹೊರಡಲು ಮಾರ್ಗ ನಿರ್ಮಾಣವಾಯಿತು. ಭರತ ಸಭೆಯನ್ನು ಸೇರಿಸಿದ. ಎಲ್ಲರಿಗೂ ತನ್ನ ಉದ್ದೇಶವನ್ನು ತಿಳಿಸಿದ. ಎಲ್ಲರೂ "ಸಾಧು–ಸಾಧು" ಎಂದು ಭರತನನ್ನು ಕೊಂಡಾಡಿದರು. ಆ ಸಭೆಯಲ್ಲಿ ಸರ್ವಾಲಂಕಾರಭೂಷಿತಳಾಗಿ ಗೂನಿ ಮಂಥರೆ ಕುಳಿತಿದ್ದಳು. ನೋಡಿದ ಶತ್ರುಘ್ನ. "ಈ ಕುಬ್ಜೆಯೇ ಎಲ್ಲ ಅನರ್ಥಗಳಿಗೂ ಕಾರಣ" ಎಂದು ತಿಳಿಯಿತು ಅವನಿಗೆ. ಕಟಕಟ ಹಲ್ಲು ಕಡಿಯುತ್ತಾ ಬಂದ. ಮಂಥರೆಯ ಮುಂಗೂದಲನ್ನು ಹಿಡಿದು ಜಗ್ಗಿದ. ಅವಳು ಜೋರಾಗಿ ಅಳುತ್ತಾ ಕೈಕೇಯಿಯನ್ನು ಮರೆಹೊಕ್ಕಳು. ಶತ್ರುಘ್ನ ಮತ್ತೆ ಮತ್ತೆ ಜಗ್ಗುತ್ತಲೇ ಇದ್ದ. ಇದನ್ನು ನೋಡಿದ ಭರತ ''ಶತ್ರುಘ್ನ, ಆ ಪಾಪಿಯನ್ನು ಬಿಟ್ಟುಬಿಡು. ಕೊಲ್ಲಬೇಡ. ಆಮೇಲೆ "ಸ್ತ್ರೀಹತ್ಯೆ ಮಾಡಿದವರು" ಎಂದು ರಾಮ ನಮ್ಮನ್ನು ನೋಡುವುದೂ ಇಲ್ಲ" ಎಂದು ಹೇಳಿ ಮಂಥರೆಯನ್ನು ಬಿಡಿಸಿದ.

ರಾಮನನ್ನು ಹಿಂದಕ್ಕೆ ಕರೆತರಲು ಎಲ್ಲರೂ ಹೊರಟರು. ಕೌಸಲ್ಯಾ, ಸುಮಿತ್ರೆಯರೂ ಹೊರಟರು. ಎಲ್ಲರೊಂದಿಗೆ ಕೈಕೇಯಿಯೂ ಹೊರಟಳು. ಕೈಕೇಯಿಗೆ ಮೊದಲಿನಿಂದ ರಾಮನಲ್ಲಿ ಅಕ್ಕರೆ ಇದ್ದಿತು. ಮಧ್ಯದಲ್ಲಿ ಕುಟಿಲಮತಿಯಾದ ಮಂಥರೆಯ ಪಿಸುಣ ನುಡಿಯನ್ನು ಕೇಳಿ ಮೋಸಹೋದಳು. ಇದರಲ್ಲಿ ಕೈಕೇಯಿಯ ತಪ್ಪು ಹೆಚ್ಚಿಲ್ಲ. ದೇವಕಾರ್ಯಕ್ಕಾಗಿ ರಾವಣನನ್ನು ನಿಗ್ರಹಿಸುವ ಸಲುವಾಗಿ ಸಾಕ್ಷಾತ್ ಸರಸ್ವತಿಯೇ ಕೈಕೇಯಿಯ ನಾಲಿಗೆಯಲ್ಲಿದ್ದು ಹಾಗೆ ವರಗಳನ್ನು ಕೇಳುವಂತೆ ಮಾಡಿದಳು. ಈಗ ಅವಳು ರಾಮನನ್ನು ಕರೆತರುವ ಸಲುವಾಗಿ ಹೊರಟಳು.

ಭರತ ಸೈನ್ಯದೊಂದಿಗೆ ಪ್ರಯಾಣ ಮಾಡುತ್ತಾ ಶೃಂಗಿಬೇರಪುರದತ್ತ ನಡೆದ.

### ಭರತ–ಗುಹ ಸಮಾಗಮ

ಅಪಾರವಾದ ಸೈನ್ಯದೊಂದಿಗೆ ಭರತ ಬರುತ್ತಿರುವುದನ್ನು ನೋಡಿದ ಗುಹ. ತನ್ನ ಪಡೆಗೆ "ಕೆಟ್ಟ ಮನಸ್ಸಿನಿಂದ ಭರತ ಒಂದು ವೇಳೆ ಬಂದಿದ್ದರೆ ಎಚ್ಚರವಾಗಿರಿ" ಎಂದು ಆಜ್ಞಾಪಿಸಿದ. ಸುಮಂತ್ರ, ಭರತನಿಗೆ ಗುಹನನ್ನು ಪರಿಚಯ ಮಾಡಿಕೊಟ್ಟ. ಇಬ್ಬರೂ ಪರಸ್ಪರ ಆಲಿಂಗನ ಮಾಡಿಕೊಂಡರು. ಗುಹ ಭರತನನ್ನು "ಇಷ್ಟು ದೊಡ್ಡ ಸೈನ್ಯದೊಡನೆ ಬರಲು ಕಾರಣವೇನು ?" ಎಂದು ಕೇಳಿದ. ಭರತ ಗುಹನ ಅಂತರ್ಯವನ್ನು ಕಂಡುಕೊಂಡ ''ಗುಹಾ, ನನ್ನನ್ನು ಶಂಕಿಸಬೇಡ. ನಾನು ರಾಮನನ್ನು ಹಿಂದಿರುಗಿಸುವ ಸಲುವಾಗಿ ಬರುತ್ತಿದೇನೆ. ನಾ ಒಬ್ಬನೇ "ಹಿಂದಿರುಗು" ಎಂದು ಹೇಳಿದರೆ ರಾಮ ಬರುತ್ತಾನೋ ಇಲ್ಲವೋ. ಇವರೆಲ್ಲ ಹೇಳಲಿ ಎಂದು ಕರೆತಂದಿದೇನೆ" ಎಂದು ಕಣ್ಣೀರ್ಗರೆದ. "ಭರತ ನೀ ಪರಮಧನ್ಯ. ರಾಮನನ್ನು ದೊಡ್ಡವ ಎಂದು ತಿಳಿದೆ. ಆದರೆ ಸಾವಿರ ರಾಮರೂ ಒಬ್ಬ ಭರತನಿಗೆ ಸರಿಸಾಟಿಯಾಗರು, ಇದು ಖಂಡಿತ. ಸುಲಭವಾಗಿ ಯಾವ ತೊಂದರೆಯೂ ಇಲ್ಲದೆ ಸಿಕ್ಕಿದ ರಾಜ್ಯವನ್ನು ಬಿಟ್ಟು, ಅಣ್ಣನಿಗಾಗಿ ಹಂಬಲಿಸುವ ಇಂಥ ತಮ್ಮ ಜಗತ್ತಿನಲ್ಲಿ ಅಪರೂಪ. ಭರತ ನಿನಗೆ ಯಾರು ಸರಿ ?" ಎಂದು ಗುಹ ಭರತನನ್ನಪ್ಪಿದ. ಇಬ್ಬರು ರಾಮಭಕ್ತರು ಪರಸ್ಪರ ಹಾಲು ಜೇನಿನಂತೆ ಒಂದಾದರು. ಶ್ರೀ ವೇದಾಂತ ದೇಶಿಕರು ಭರತನ ಹಿರಿಮೆಯನ್ನು ವರ್ಣಿಸುತ್ತಾ ಹೇಳುತ್ತಾರೆ :

**ಭರತಾಯ ಪರಂ ನಮೋಽಸ್ತು ತಸ್ಮೈ**
**ಪ್ರಥಮೋದಾಹರಣಾಯ ಭಕ್ತಿಭಾಜಾಂ ।**
**ಯದುಪಜ್ಞಂ ಅಶೇಷತಃ ಪೃಥಿವ್ಯಾಂ**
**ಪ್ರಥಿತೋ ರಾಘವ ಪಾದುಕಾ ಪ್ರಭಾವಃ ॥**

"ರಾಮಾಯಣದಲ್ಲಿ ಮೊದಲ ವಂದನೆಗೆ ಅರ್ಹ ಎಂದರೆ ಭರತ. ಭರತನನ್ನೇ ನಾ ಮೊದಲು ವಂದಿಸುತ್ತೇನೆ. ಏಕೆಂದರೆ ಭರತನಿಂದ ರಾಮನ ಪಾದುಕೆಗಳ ಪ್ರಭಾವ ಹೊರಬಂದಿತು. ಪಾದುಕೆಗಳ ಮಹತ್ವವನ್ನು ಭರತ ಪ್ರಸ್ತಾಪಿಸಿದ. ಅವನಿಗೆ ನಮೋನಮಃ'' ಎಂದರು. ಭರತ ಗುಹನಿಗೆ ಹೇಳುತ್ತಾನೆ. "ಗುಹಾ, ಇಷ್ಟೊಂದು ಜನರನ್ನು ಏಕೆ ಕರೆದುತಂದೆ'' ಎಂದೆ ಅಲ್ಲವ ? ಹೇಳುತ್ತೇನೆ ಕೇಳು. ಒಬ್ಬ ಕೈಮುಗಿದು ಬೇಡಿದರೇ ಸಾಕು, ರಾಮ ಹಿಂದಿರುಗಬೇಕು. ಹೀಗಿರುವಾಗ, ಇಷ್ಟು ಜನರೂ ಕೈಮುಗಿದು ಪ್ರಾರ್ಥಿಸಿದರೆ ರಾಮ ಖಂಡಿತವಾಗಿ ಹಿಂದಿರುಗುತ್ತಾನೆ. ಆ ಅಂಜಲಿಯ ಪ್ರಭಾವದಿಂದಲಾದರೂ ರಾಮ ಹಿಂದಿರುಗುವಂತಾಗಲಿ ಎಂದು ಕರೆತಂದೆ'' ಎಂದ.

## ಅಂಜಲಿ ವೈಭವ

ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ''ಅಂಜಲಿ''ಗೇ ವಿಶೇಷವಾದ ಪ್ರಾಮುಖ್ಯವಿದೆ. "ಅಂ ಜಲಯತಿ ಅಂಜಲಿಃ'' ಎಂದು. ಒಮ್ಮೆ ಭಕ್ತಿಪೂರ್ವಕವಾಗಿ ಕೈಮುಗಿದರೆ ಪರಮಾತ್ಮ ತೃಪ್ತನಾಗುತ್ತಾನೆ. ಇದಕ್ಕೆ ಒಂದು ಉದಾಹರಣೆ ಮಹಾಭಾರತದಲ್ಲಿದೆ.

ಮಹಾಭಾರತದ ಯುದ್ಧ ಆರಂಭವಾಗಿಬಿಟ್ಟಿದೆ. ಕಾಲರುದ್ರನ ಅವತಾರವೆನಿಸಿದ ಅಶ್ವತ್ಥಾಮಾಚಾರ್ಯರು ಪಾಂಡವರ ಸೈನ್ಯವನ್ನು ಪುಡಿಮಾಡುತ್ತಿದ್ದಾರೆ. ದುರ್ಯೋಧನನಿಗೆ ಪ್ರಿಯವನ್ನುಂಟುಮಾಡಲು ಪಾಂಡವರನ್ನು ಸೈನ್ಯಸಮೇತವಾಗಿ ನಾಶಮಾಡಲು ಪಣತೊಟ್ಟಿದ್ದಾರೆ. ಸರ್ವಶ್ರೇಷ್ಠವಾದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದ್ದಾರೆ. ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತಾ, ವಿಷವನ್ನು ಕಕ್ಕುವ ಕಿಡಿಗಳನ್ನುದುರಿಸುತ್ತಾ ಹೊರಬಂದಿದೆ ನಾರಾಯಣಾಸ್ತ್ರ. ಇಡೀ ಪಾಂಡವ ಸೈನ್ಯವನ್ನು ಆವರಿಸಿದೆ. ''ಇನ್ನೇನುಗತಿ'' ಎಂದು ಎಲ್ಲರೂ ತಲ್ಲಣಿಸಿದ್ದಾರೆ. ದೂರದಿಂದ ಇರುತ್ತಿರುವಾಗಲೇ ಅಸ್ತ್ರವು ವಿಷದ ಹೊಗೆಯನ್ನು ಕಕ್ಕುತ್ತಿದೆ. ''ಆಯಿತು. ಮುಗಿಯಿತು; ಪಾಂಡವರು ನಿಶ್ಶೇಷರಾದರು'' ಎಂದು ಹಿರಿಹಿರಿ ಹಿಗ್ಗಿದರು ಉಳಿದ ಕೌರವ ಪಡೆಯವರು. ನೋಡಿದ ಕೃಷ್ಣ. ಕೂಗಿ ಹೇಳಿದ ತನ್ನ ಕಡೆಯವರೆಲ್ಲರಿಗೂ. "ಎಲ್ಲರೂ ರಥಗಳನ್ನು, ಆನೆಗಳನ್ನು ಕುದುರೆಗಳನ್ನು, ಇತರ ವಾಹನಗಳನ್ನೂ ಬಿಟ್ಟು ಕೆಳಗಿಳಿಯಿರಿ. ಆಯುಧಗಳನ್ನು ಕೆಳಗೆ ಹಾಕಿ ಎರಡು ಕೈಗಳನ್ನೂ ಜೋಡಿಸಿ ಅಂಜಲಿಬದ್ಧರಾಗಿ'' ಎಂದು ತಿಳಿಸಿ ಹೇಳಿದ.

ಕೃಷ್ಣ ಹೇಳಿದಂತೆ ಪಾಂಡವರ ಕಡೆಯವರೆಲ್ಲ ತಮ್ಮ ತಮ್ಮ ವಾಹನಗಳಿಂದ ಕೆಳಗಿಳಿದರು. ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟರು ಎರಡು ಕೈಗಳನ್ನೂ ಮುಗಿದು ಅಂಜಲಿ ಮಾಡಿದರು. ಘೋರವಾದ ನಾರಾಯಣಾಸ್ತ್ರ ಅಂಜಲಿಬದ್ಧರಾದವರ ಸಮೀಪದಲ್ಲೂ ಸುಳಿಯಲಿಲ್ಲ. ಬಂದ ದಾರಿಯನ್ನು ಹೋದದ್ದೇ ಗೊತ್ತಾಗದಂತೆ ಹಿಂದಿರುಗಿತು. ಸರ್ವಶ್ರೇಷ್ಠವಾದ ನಾರಾಯಣಾಸ್ತ್ರ ಅಂಜಲಿಯಿಂದ ವಿಫಲಿತವಾಯಿತು.

ಭರತನ ಸದುದ್ದೇಶವನ್ನು ತಿಳಿದ ಗುಹ. ಆ ರಾತ್ರಿ ಭರತ ತನ್ನ ಸೈನ್ಯದೊಂದಿಗೆ ಅಲ್ಲಿಯೇ ತಂಗಿದ ಗುಹ ರಾತ್ರಿಯೆಲ್ಲ ಭರತನಿಗೆ ಸೀತಾರಾಮಲಕ್ಷ್ಮಣರ ವಿಚಾರವನ್ನೇ ಹೇಳುತ್ತಿದ್ದ.

ಸೀತಾರಾಮರು ಮಲಗಿದ್ದ ಸ್ಥಳವನ್ನು ತೋರಿಸಿದ. ಅದನ್ನು ನೋಡಿದ ಭರತ ''ಅಯ್ಯೋ ಹಂಸತೂಲಿಕಾತಲ್ಪದಲ್ಲಿ ಸುಖಶಯ್ಯೆಯಲ್ಲಿ ವಿರಾಜಮಾನರಾಗಿರಬೇಕಾದ ಸೀತಾರಾಮರು ನೆಲದ ಮೇಲೆ ಎಲೆಯ ಹಾಸಿಗೆಯಲ್ಲಿ ಮಲಗುವಂತಾಯಿತೆ ? ಇದಕ್ಕೆ ಪಾಪಿಯಾದ ನಾ ಕಾರಣ ಆದೆನಲ್ಲ. ನಾ ಹುಟ್ಟದೇ ಇದ್ದಿದ್ದರೆ ಸೀತಾರಾಮರಿಗೆ ಈ ಕಷ್ಟ ಬರುತ್ತಿರಲಿಲ್ಲವಲ್ಲಾ'' ಎಂದು ದುಃಖಿಸುತ್ತಾ ವಿಸಂಜ್ಞನಾದ ಕೌಸಲ್ಯೆ ಭರತನನ್ನು ಶೈತ್ಯೋಪಚಾರಮಾಡಿ ಎಬ್ಬಿಸಿದಳು

ಮುಂದೆ ಗುಹ ಲಕ್ಷ್ಮಣನ ಸೇವಾನಿಷ್ಠೆಯನ್ನು ಭರತನಿಗೆ ವಿವರಿಸಿದ. ವಾಲ್ಮೀಕಿ ಗುಹನನ್ನು ವರ್ಣಿಸುತ್ತಾ "ಗುಹೋ ಗಹನಗೋಚರಃ" ಎಂದಿದಾರೆ. ''ಗಹನ ಗೋಚರಃ'' ಶಬ್ದಕ್ಕೆ ವ್ಯಾಖ್ಯಾನ ಮಾಡುತ್ತಾ ಆಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಪಷ್ಟಪಡಿಸುತ್ತಾರೆ.

ಗುಹ ಲಕ್ಷ್ಮಣನ ಬಗ್ಗೆ ಭರತನಿಗೆ ಹೇಳುತ್ತಾನೆ. ಗುಹ–ಲಕ್ಷ್ಮಣರು ಒಟ್ಟಿಗಿದ್ದುದ್ದು ಒಂದೇ ರಾತ್ರಿ. ಭರತ ಲಕ್ಷ್ಮಣನೊಡನೆ ಹನ್ನೆರಡು ವರ್ಷಗಳ ಕಾಲ ಇದ್ದ. ಹೀಗೆ ಹನ್ನೆರಡು ವರ್ಷಗಳು ಒಟ್ಟಿಗಿದ್ದ ಭರತನಿಗೆ ಒಂದೇ ರಾತ್ರಿ ಲಕ್ಷ್ಮಣನೊಡನೆ ಇದ್ದ ಗುಹ ಲಕ್ಷ್ಮಣನನ್ನು ಕುರಿತು ಹೇಳುತ್ತಾನೆ ಒಂದು ರಾತ್ರಿಯಲ್ಲಿ ಲಕ್ಷ್ಮಣನನ್ನು ಪೂರ್ತಿಯಾಗಿ ತಿಳಿದ ಗುಹ ಲಕ್ಷ್ಮಣನ ರಹಸ್ಯವನ್ನು ಒಂದೇ ರಾತ್ರಿಯಲ್ಲಿ ಅರಿತ. ಅದಕ್ಕೇ ವಾಲ್ಮೀಕಿ "ಗುಹೋ ಗಹನ–ಗೋಚರಃ'' ಎಂದರು ಏನು ಲಕ್ಷ್ಮಣನ ರಹಸ್ಯ?

ಲಕ್ಷ್ಮಣನ ಕೈಂಕರ್ಯದ ಮಹತ್ವವನ್ನು ಪ್ರಕಾಶಪಡಿಸಿದ. ವಿಶಿಷ್ಟಾದ್ವೈತ ಸಿದ್ಧಾಂತದ ರೀತ್ಯ ಪರಮಾತ್ಮ ''ಶೇಷಿ" ಅಂದರೆ ಸ್ವಾಮಿ–ಜೀವಾತ್ಮ ಪರಮಾತ್ಮನಿಗೆ ''ಶೇಷ'' ಅರ್ಥಾತ್ ದಾಸಭೂತ. ಪರಮಾತ್ಮನಿಗೆ ಜೀವಾತ್ಮ ಯಾವಾಗಲೂ ''ಶೇಷ'' ಎಂಬುದನ್ನು ಆದಿಶೇಷನ ಅವತಾರ ಎನಿಸಿದ ಲಕ್ಷ್ಮಣ ಪ್ರಕಾರಪಡಿಸಿದ. ''ಕೈಂಕರ್ಯ'' ಅಂದರೆ ಭಗವತ್ಸೇವೆಯೇ ಇಹ ಪರದಲ್ಲಿ ಲಕ್ಷ್ಯ. ಅದೇ ಫಲ ಎಂದು ತಿಳಿಸಿದ. ಇದನ್ನು ಗುಹ ಅರಿತ, ಆದ್ದರಿಂದಲೇ ''ಗುಹೋ ಗಹನ ಗೋಚರಃ'' ಎಂದರು ವಾಲ್ಮೀಕಿ.

ಬೆಳಗಾದ ನಂತರ ಗುಹನ ಸಹಾಯದಿಂದ ಗಂಗಾ ನದಿಯನ್ನು ದಾಟಿದ ಭರತ ಸೈನ್ಯದೊಂದಿಗೆ ಸೈನ್ಯವನ್ನು ಅನತಿ ದೂರದಲ್ಲೇ ನಿಲ್ಲಿಸಿ ಶತ್ರುಘ್ನ, ಮಂತ್ರಿ, ಪುರೋಹಿತರೊಡನೆ ಭರಧ್ವಾಜರ ಆಶ್ರಮಕ್ಕೆ ಬಂದ. ಭರದ್ವಾಜರನ್ನು ಕಂಡು ನಮಸ್ಕರಿಸಿದ. ಭರದ್ವಾಜರು. ''ಭರತ, ಕುಶಲ ವಷ್ಟೆ–ರಾಮನ ಬಗ್ಗೆ ಒಳ್ಳೆಯ ಅಭಿಪ್ರಾಯದಿಂದ ತಾನೇ ಬರುತ್ತಿದೀಯೇ ?" ಎಂದು ಕೇಳಿದರು.

ಭರತನಿಗೆ ದುಃಖ ಉಮ್ಮಳಿಸಿತು "ಭಗವನ್, ಇದೇನು ? ಎಲ್ಲವನ್ನೂ ತಿಳಿದ ಜ್ಞಾನಿಗಳು ನೀವು. ನೀವೇ ನನ್ನಲ್ಲಿ ಶಂಕಿಸುವುದೇ ? ನಾನು ಯಾವ ಕೆಟ್ಟ ಅಭಿಪ್ರಾಯವನ್ನೂ ಹೊಂದಿಲ್ಲ. ರಾಮನನ್ನು ಅಯೋಧ್ಯೆಗೆ ಹಿಂದಿರುಗಿಸುವ ಸಲುವಾಗಿ ಬರುತ್ತಿದ್ದೇನೆ. ರಾಮ ಎಲ್ಲಿದಾನೆ ? ತಿಳಿಸಿ ಅನುಗ್ರಹಿಸಿ" ಎಂದ.

ಭರಧ್ವಾಜರು "ಭರತ ನಿನ್ನ ಅಂತರ್ಯವನ್ನು ನಾ ಬಲ್ಲೆ. ಎಲ್ಲರಿಗೂ ನಿನ್ನ ಹೃದಯ ಗೊತ್ತಾಗಲಿ ಎಂದು ಕೇಳಿದೆ ಅಷ್ಟೆ, ಭರತ, ಇಂದು ರಾತ್ರಿ ಇಲ್ಲೇ ತಂಗಿರು–ನಿನ್ನ ಸೈನ್ಯಕ್ಕೆಲ್ಲ ಔತಣ ಏರ್ಪಡಿಸುತ್ತೇನೆ" ಎಂದರು.

ಆ ದಿನ ಭರತ ಸೈನ್ಯಸಮೇತವಾಗಿ ಭರಧ್ವಾಜರ ಆಶ್ರಮದಲ್ಲೇ ತಂಗಿದ. ಭರಧ್ವಾಜರು ತಮ್ಮ ತಪಃಪ್ರಭಾವದಿಂದ ಭರತನ ಸೈನ್ಯಕ್ಕೆ ಬೇಕುಬೇಕಾದ ಸಾಮಗ್ರಿಗಳನ್ನೆಲ್ಲ ಒದಗಿಸಿದರು. ಒಬ್ಬೊಬ್ಬ ಸೈನಿಕನನ್ನು ಐದಾರು ಅಪ್ಸರೆಯರು ಪರಿಚರ್ಯೆ ಮಾಡಲು ನಿಂತರು. ಸುಗಂಧ

ಮಿಶ್ರಿತವಾದ ತೈಲವನ್ನು ಕಂಚಿನ ಪಾತ್ರೆಗಳಲ್ಲಿ ತುಂಬಿಕೊಂಡು, ಮಂದಹಾಸವನ್ನು ಸೂಸುವ ಚಂದ್ರಮುಖಿಯರು ಪ್ರತಿಯೊಬ್ಬರಿಗೂ ತೈಲಾಭ್ಯಂಜನ ಮಾಡಿಸಿದರು. ಉಡಲು ದಿವ್ಯವಾದ ವಸ್ತ್ರಗಳನ್ನಿತ್ತರು. ತೊಡಲು ಬೇಕಾದ ಆಭರಣಗಳಿತ್ತರು. ಅಸದೃಶ ರೂಪವುಳ್ಳ ಸುಂದರಾಂಗಿಯರು ಸುಕೋಮಲವಾದ ತಮ್ಮ ಕರಗಳಿಂದ ಒಬ್ಬೊಬ್ಬರನ್ನೂ ಅಲಂಕಾರ ಮಾಡಿದರು; ಚಂದನವನ್ನು ಪೂಸಿದರು: ದಿವ್ಯವಾದ ಹಾರಗಳಿಂದ ಅಲಂಕರಿಸಿದರು.

ಅಲಂಕಾರವಾದ ಮೇಲೆ ಷಡ್ರಸೋಪೇತವಾದ ಪರಮಾನ್ನವನ್ನೂ, ವಿವಿಧ ರುಚಿಕರಗಳಾದ ಭಕ್ಷ್ಯಭೋಜ್ಯಗಳನ್ನೂ, ಲೇಹ್ಯ, ಪೇಯಮಧುಗಳನ್ನೂ ತೃಪ್ತಿಯಾಗುವಂತೆ ಬಡಿಸಿದರು.

ಭರತನ ಸೈನ್ಯ, ಪರಿವಾರ ಆನಂದಸಾಗರದಲ್ಲಿ ಮುಳುಗಿತು. ಹಲವರು "ಅಯೋಧ್ಯೆಯೂ ಬೇಡ. ರಾಮನೂ ಬೇಡ; ಇಲ್ಲೇ ಹೀಗೆಯೇ ಇದ್ದುಬಿಡುವ" ಎಂದುಕೊಂಡರು.

ಎಲ್ಲರೂ ಭೋಗವನ್ನನುಭವಿಸಿದರು. ಅದನ್ನು ಸವಿಯದವನೆಂದರೆ ಭರತ ಮಾತ್ರ. ಭರಧ್ವಾಜರು ಭರತನಿಗೆಂದೇ ದಿವ್ಯವಾದ ಆಸನವನ್ನು ಹಾಕಿದ್ದರು. ಭರತನನ್ನು ಆ ಭದ್ರಪೀಠದ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು ನೋಡಿದ ಭರತ. ಆಸನವನ್ನು ಕಣ್ಣಿಗೆ ಒತ್ತಿಕೊಂಡ. ಮನಸಾ ಅದನ್ನು ರಾಮನಿಗೆ ಸಮರ್ಪಿಸಿದ ಪಕ್ಕದಲ್ಲಿ ಇರಿಸಿದ್ದ ಚಾಮರವನ್ನು ತೆಗೆದುಕೊಂಡು ಆ ಪೀಠದಲ್ಲಿ ಕೂಡಿಸಿದ್ದ ರಾಮನಿಗೆ ಗಾಳಿ ಹಾಕತೊಡಗಿದ.

ಕೃಷ್ಣ, ಗೀತೆಯಲ್ಲಿ

**ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ ಸಿದ್ಧಯೇ |**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ||**

ಎಂದಿದಾನೆ.

ಭಗವತ್ ಸಾಕ್ಷಾತ್ಕಾರವನ್ನು ಪಡೆಯಬೇಕು ಎಂದು ಪ್ರಯತ್ನಿಸುವವರು ಸಹಸ್ರ ಸಹಸ್ರ ಮಂದಿ. ಅವರಲ್ಲಿ ಸಿದ್ಧಿಯನ್ನು ಪಡೆಯುವ ಸಿದ್ಧ ಎಲ್ಲೋ ಒಬ್ಬ. ಅಂಥ ಸಿದ್ಧಿಯನ್ನು ಪಡೆದ ಸಿದ್ಧರಲ್ಲಿ ಪರಮಾತ್ಮತತ್ವವನ್ನು ಯಥಾರ್ಥವಾಗಿ ತಿಳಿಯುವವ ಯಾವನೋ ಒಬ್ಬ.

ರಾಮನ ಅನುಗ್ರಹ ಪಡೆಯಬೇಕು ಎಂದು ಸಹಸ್ರಾರು ಜನ ಹೊರಟರು ಅಯೋಧ್ಯೆಯಿಂದ. ಅವರೆಲ್ಲರೂ ಕ್ಷಣಿಕವಾದ ಭೋಗದಲ್ಲೇ ಮುಳುಗಿದರು. ಅದರಿಂದ ಮೇಲೆದ್ದು ದೃಢವಾಗಿ "ರಾಮನೇ ಬೇಕು" ಎಂದ ಸಿದ್ಧ ಮಹಾನುಭಾವ ಭರತ.

ಔತಣ ಆದಮೇಲೆ ಭರತ ಭರಧ್ವಾಜರನ್ನು ವಂದಿಸಿದ. ಭರಧ್ವಾಜರು "ನಿಮ್ಮ ತಾಯಿಯರ ಪರಿಚಯ ಮಾಡಿಕೊಡುವುದಿಲ್ಲವೇ ?" ಎಂದರು. ಆಗ ಭರತ ರಾಮ ಮಾತೆಯಾದ ಕೌಸಲ್ಯೆಯನ್ನೂ ಲಕ್ಷ್ಮಣ–ಶತ್ರುಘ್ನರನ್ನು ಪಡೆದ ಸುಮಿತ್ರೆಯನ್ನೂ ಪ್ರಶಂಸಿಸಿದ. ಕೈಕೇಯಿಯನ್ನು ದೂಷಿಸಿದ. ಅದನ್ನು ಕೇಳಿದ ಭರಧ್ವಾಜರು ಭರತನನ್ನು ಸಮಾಧಾನಪಡಿಸಿ "ತಾಯಿಯನ್ನು ಹೀಗಳೆಯಬೇಡ" ಎಂದರು.

ಕೌಸಲ್ಯೆಯೋ ರಾಮನ ಮಾತೆ.

ಸಕಲವನ್ನೂ ಸೃಷ್ಟಿಸುವವ ಬ್ರಹ್ಮ. ಆ ಸೃಷ್ಟಿಕರ್ತನಾದ ಬ್ರಹ್ಮನನ್ನೇ ತನ್ನ ನಾಭಿಯಿಂದ ಸೃಷ್ಟಿಸಿದ ನಾರಾಯಣ. ಆ ನಾರಾಯಣನನ್ನೇ ತನ್ನ ಮಗನನ್ನಾಗಿ ಪಡೆದಳು ಕೌಸಲ್ಯೆ. ನಾರಾಯಣ

ಮಗನಾದ್ದರಿಂದ ಸಕಲ ಐಶ್ವರ್ಯಗಳಿಗೂ ಅಧಿಷ್ಠಾತ್ರಿ ಎನಿಸಿದ ಸಾಕ್ಷಾತ್ ಲಕ್ಷ್ಮಿಯೇ ಸೊಸೆಯಾದಳು. ಲಕ್ಷ್ಮೀನಾರಾಯಣರನ್ನೇ ಮಗ–ಸೊಸೆಯರನ್ನಾಗಿ ಮಾಡಿಕೊಂಡ ಕೌಸಲ್ಯೆಯ ಭಾಗ್ಯಕ್ಕೆ ಎಣೆಯೇ ಇಲ್ಲ. ಇನ್ನು ಸುಮಿತ್ರೆ.

ಲಕ್ಷ್ಮೀನಾರಾಯಣರ ಪ್ರತೀಕವೆನಿಸಿದ ಸೀತಾರಾಮರ ಸೇವೆಯನ್ನೇ ಅನವರತ ಮಾಡುವ ಲಕ್ಷ್ಮೀಸಂಪನ್ನನಾದ ಲಕ್ಷ್ಮಣನನ್ನು ಪಡೆದವಳು ಅವಳು.

ಕೈಕೇಯಿಯೂ ಸಾಮಾನ್ಯಳಲ್ಲ. ಭಕ್ತಿಭರಿತನಾದ ಭಾಗವತೋತ್ತಮ ಭರತನ ಮಾತೆಯಾಗಿ ಗೌರವ ಪಡೆದವಳು. ಭರದ್ವಾಜರು ಚಿತ್ರಕೂಟಕ್ಕೆ ದಾರಿ ತೋರಿಸಿದರು. ಭರತ ಮಹರ್ಷಿಗೆ ನಮಸ್ಕರಿಸಿ ಅವರ ಅನುಜ್ಞೆಯನ್ನು ಪಡೆದು ರಾಮನನ್ನರಸುತ್ತಾ ಹೊರಟ ಪರಿವಾರದೊಂದಿಗೆ.

ಚಿತ್ರಕೂಟದಲ್ಲಿ ಸೀತಾ ಲಕ್ಷ್ಮಣ ಸಮೇತನಾಗಿ ರಾಮ ಇದ್ದ. ಮಂದಾಕಿನೀ ನದಿಯ ಶೋಭೆ ಹಾಗೂ ಚಿತ್ರಕೂಟದ ರಮಣೀಯತೆಯನ್ನು ಸೀತೆಗೆ ತೋರಿಸುತ್ತಾ ಕುಳಿತಿದ್ದ ರಾಮ. ಏನೋ ಶಬ್ದ ಕೇಳಿಸಿತು. ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಅದೇನು ಗದ್ದಲ ? ಆ ಮರವನ್ನು ಹತ್ತಿ ನೋಡು" ಎಂದ. ಲಕ್ಷ್ಮಣ ಎತ್ತರವಾದ ಮರವನ್ನೇರಿ ನೋಡಿದ. ಮರದ ಮೇಲಿನಿಂದಲೇ ಕೂಗಿ "ಅಣ್ಣಾ ಮೊದಲು ಸೀತೆಯನ್ನು ಗುಹೆಯಲ್ಲಿರಿಸು–ಧನುಸ್ಸನ್ನು ಹಿಡಿ. ಬಾಣವನ್ನು ಹೂಡು— ಯುದ್ಧಕ್ಕೆ ಸಿದ್ಧರಾಗೋಣ" ಎಂದು ಬಡಬಡಿಸಿದ.

"ಲಕ್ಷ್ಮಣಾ ! ಏನು ಅದು ? ಏಕೆ ಹೀಗೆ ಹೇಳುತ್ತಿರುವೆ ?" "ಅಣ್ಣಾ ಇಲ್ಲಿ ಸೈನ್ಯ ಬರುತ್ತಿದೆ ಸೈನ್ಯ–ಅದಕ್ಕಾಗಿ ಹೇಳಿದೆ." "ಯಾರ ಸೈನ್ಯ? ಸೈನ್ಯದೊಡನೆ ಯಾರು ಬರುತ್ತಿರುವರು-ನೋಡು!" "ಅಣ್ಣಾ –ನೋಡಿದೆ–ಚೆನ್ನಾಗಿ ನೋಡುತ್ತಿದ್ದೇನೆ. ಇಕ್ಷ್ವಾಕುವಂಶದ ಧ್ವಜ ಕಾಣುತ್ತಿದೆ. ದೊಡ್ಡ ಸೈನ್ಯದೊಂದಿಗೆ ಆ ಪಾಪಿ, ರಾಜ್ಯ ಕಾಮುಕ, ದುಷ್ಟ ಕೈಕೇಯಿಯ ಮಗ ಬರುತ್ತಿದ್ದಾನೆ. ಅವನನ್ನೂ ಅವನ ಸೈನ್ಯವನ್ನೂ ಈ ಬಾಣದಿಂದ ಹತಮಾಡುತ್ತೇನೆ; ನಿನಗೆ ರಾಜ್ಯವನ್ನು ಈಗಲೇ ಕೊಡಿಸುತ್ತೇನೆ," ಎಂದು ಗುಡುಗಿದ ಲಕ್ಷ್ಮಣ.

"ಲಕ್ಷ್ಮಣಾ, ಮೊದಲು ಮರದಿಂದ ಕೆಳಗೆ ಇಳಿ - ಇಲ್ಲಿ ಬಾ" ಎಂದ ರಾಮ. ಹತ್ತಿರಕ್ಕೆ ಬಂದ ಲಕ್ಷ್ಮಣನನ್ನು ಕುರಿತು ಹೇಳಿದ. "ಲಕ್ಷ್ಮಣಾ, ನೀ ಹೇಳುವುದಾದರೂ ಏನು ? ನಾನೂ ನೋಡುತ್ತಿದ್ದೇನೆ. ಅಯೋಧ್ಯೆಯಿಂದ ಇದುವರೆಗೆ ''ರಾಜ್ಯ–ರಾಜ್ಯ'' ಎಂದೇ ಹೇಳುತ್ತಾ ಬರುತ್ತಿರುವೆ, ಯಾರನ್ನು ನೀ "ಪಾಪಿ" ಎನ್ನುತ್ತಿರುವೆ ? ಭರತನ ವಿಷಯ ನನಗೆ ಚೆನ್ನಾಗಿ ಗೊತ್ತಿದೆ. ಅವನನ್ನು ಒಂದು ಮಾತೂ ಹೇಳಕೂಡದು ನೀನು. ಏನೆಂದುಕೊಂಡೆ ಭರತನನ್ನು ? ಭರತ ಬರಲಿ. ಅವನಿಗೆ ನಾನು ಒಂದು ಮಾತು ಹೇಳಿದರೆ ಸಾಕು, ನಿನಗೇ ರಾಜ್ಯವನ್ನು ಕೊಡುತ್ತಾನೆ. ರಾಜ್ಯವನ್ನು ಪಡೆದುಕೊಂಡು ಅಯೋಧ್ಯೆಗೆ ಹಿಂದಿರುಗು. ಪಟ್ಟಾಭಿಷೇಕ ಮಾಡಿಸಿಕೊ ನಾನು ಭರತನನ್ನು ಕರೆದುಕೊಂಡು ಕಾಡಿಗೆ ಹೋಗುತ್ತೇನೆ". ಲಕ್ಷ್ಮಣ ನಾಚಿ ತಲೆತಗ್ಗಿಸಿದ. ರಾಮ ಮತ್ತೆ ಹೇಳಿದ:

ಲಕ್ಷ್ಮಣಾ, ನನಗೆ ರಾಜ್ಯದ ಮೇಲೆ ಆಸೆ ಸ್ವಲ್ಪವೂ ಇಲ್ಲ ಕಂಡೆಯಾ. ರಾಜ್ಯವನ್ನು, ಭೋಗವನ್ನು, ಸೌಖ್ಯವನ್ನು ನಾ ಆಶಿಸುವುದು ನನಗಾಗಿ ಅಲ್ಲ ನಿಮ್ಮೆಲ್ಲರಿಗಾಗಿ. ನಿಮ್ಮೆಲ್ಲರಿಗಾಗಿ ನನ್ನ ಬದುಕು. ನಿಮಗಿಲ್ಲದ ರಾಜ್ಯವಾಗಲಿ, ಸೌಖ್ಯವಾಗಲಿ ನನಗೆ ಬೇಡವೇ ಬೇಡ.''

ಭರತ ಸೈನ್ಯವನ್ನೂ, ತಾಯಿಯರನ್ನೂ ಹಿಂದೆ ಬರುವಂತೆ ಹೇಳಿ ಶತ್ರುಘ್ನನೊಡಗೂಡಿ ಆತುರಾತುರವಾಗಿ ಚಿತ್ರಕೂಟದ ಕಡೆಗೆ ಧಾವಿಸಿದ. ಅಲ್ಲಲ್ಲಿ ಬೀಳುತ್ತ ಏಳುತ್ತ ಭರತ ಹೋಗು

ತ್ತಿರುವುದನ್ನು ಕಂಡ ವಶಿಷ್ಠರು ತಡೆದರು. "ನಿಧಾನಿಸು ಭರತ" ಎಂದರು.

ಭರತ, ನಿಧಾನಿಸು, ಎನ್ನುವಿರಾ ಆಚಾರ್ಯರೇ–ಅದು ನನ್ನಿಂದಾಗದು. ರಾಮನನ್ನು ಕಾಣುವವರೆಗೆ, ಅವನನ್ನು ಹಿಂದಿರುಗಿಸಿ ಪಟ್ಟಾಭಿಷೇಕ ಮಾಡುವವರೆಗೆ ನಿಧಾನ ಸಲ್ಲದು ನನಗೆ ಆಚಾರ್ಯ ! ನೀವು ಮಾತೆಯರನ್ನು ಕರೆದುಕೊಂಡು ಹಿಂದಿನಿಂದ ಬನ್ನಿ 'ನಾನು ಮುಂದೆ ಹೋಗು ತ್ತೇನೆ ಎಂದ.

ಮುಳ್ಳುಕಲ್ಲುಗಳನ್ನೂ ಲೆಕ್ಕಿಸದೆ, ಏಳುವುದನ್ನು, ಬೀಳುವುದನ್ನು ಕಾಣದೆ, ಹುಚ್ಚನಂತೆ ರಾಮನ ಆಶ್ರಮದತ್ತ ಲಕ್ಷ್ಯವಿಟ್ಟು ಸಾಗಿದ ಭರತ, ಪರತತ್ವವನ್ನರಸಿ ಹೋಗುವ ಯೋಗಿಯಂತೆ.

ದೂರದಲ್ಲಿ ಹೊಗೆ ಬರುತ್ತಿದ್ದುದನ್ನು ಕಂಡ. ಗುರುತಿಗಾಗಿ ಲಕ್ಷ್ಮಣ ಒಣಗಲು ಹಾಕಿದ್ದ ವಲ್ಕಲವನ್ನು ಕಂಡ, ಕುರುಡ ಕಣ್ಣನ್ನು ಪಡೆದಂತೆ, ನಿರ್ಭಾಗ್ಯ ಭಾಗ್ಯವನ್ನು ಪಡೆದಂತೆ. ಅರಸಿ ಕೊಂಡು ಹೋದ ಅಮೃತದ ಬಳ್ಳಿ ಕಾಲಿಗೆ ತೊಡರಿದಂತೆ ಭರತ ಒಂದೇ ಸಮನೆ ಓಡತೊಡಗಿದ. ದೂರದಲ್ಲೇ ಸೀತಾ ಸಮೇತನಾಗಿ ಕುಳಿತಿದ್ದ ರಾಮನನ್ನು ಕಂಡ. ಲಕ್ಷ್ಮಿ-ಶೇಷರಿಂದ ಸೇವಿತನಾದ ನಾರಾಯಣನಂತೆ ರಾಮ ಬೆಳಗುತ್ತಿದ್ದ ರಾಮನನ್ನು ದೂರದಿಂದ ಕಂಡೊಡನೆ ಓಟದ ವೇಗವನ್ನು ಇಮ್ಮಡಿಸಿದ. ಓಡುತ್ತ ಬಂದು "ಅಣ್ಣಾ" ಎಂದು ರಾಮನ ಕಾಲಿಗೆರಗಿದ ಅಷ್ಟೆ ಪ್ರಜ್ಞಾ ಶೂನ್ಯನಾದ ಭರತ.

ಕಾಲಿಗೆರಗಿದ ಭರತನನ್ನು ರಾಮ ಹಿಡಿದೆತ್ತಿದ. ತೊಡೆಯ ಮೇಲೆ ಕೂಡಿಸಿಕೊಂಡ, ನೋಡಿದ ಭರತನನ್ನು. ಭರತ ಸುಕುಮಾರ. ಹಾಸಿಗೆಯ ಮೇಲೆ ಮಲಗಿಸಿದರೆ ಭರತನ ದೇಹ ಎಲ್ಲಿ ಕಂದಿಹೋಗುತ್ತದೋ ಎಂದು ದಶರಥ ಭರತನನ್ನು ತನ್ನ ತೊಡೆಯ ಮೇಲೆಯೇ ಮಲಗಿಸಿ ಕೊಳ್ಳುತ್ತಿದ್ದ. ಅಂಥಕೋಮಲಕಾಯನಾದ ಭರತ ಈಗ ಕಂದಿಕುಂದಿ ಬಸವಳಿದು ಹೋಗಿದಾನೆ. ತಲೆಯಮೇಲೆ ಜಟೆ. ಅದೂ ಓಡಿ ಬಂದದ್ದರಿಂದ ಅಸ್ತವ್ಯಸ್ತವಾಗಿದೆ. ಮುಖವೆಲ್ಲ ಬಿಳುಪೇರಿದೆ.

ದೇಹವೆಲ್ಲ ಕೃಶವಾಗಿದೆ. ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಹರಿಯುತ್ತಿದೆ. ಇಂಥ ದೀನ ನಾದ ಭರತನನ್ನು ನೋಡಿದ ರಾಮ. ಕರುಳನ್ನೇ ಹಿಂಡಿದಂತಾಯಿತು. ತನ್ನ ನಾರುಮಡಿಯಿಂದ ಭರತನ ಕಣ್ಣೀರನ್ನು ಒರಸಿದ. ತಲೆಯನ್ನು ನೇವರಿಸಿದ. ಮೈ ತಡವಿದ.

"ಭರತ ! ಇದೇನು ರಾಜ್ಯವನ್ನು, ತಂದೆಯನ್ನು ಬಿಟ್ಟು ಇಲ್ಲಿಗೆ ಏಕೆಬಂದೆ ? ರಾಜ್ಯವನ್ನು ಸರಿಯಾಗಿ ನೋಡಿಕೊಳ್ಳುತ್ತಿರುವೆ ತಾನೆ ? ಮಂತ್ರಿಗಳನ್ನೂ, ಪುರೋಹಿತರನ್ನೂ ಹಿಂದಿನವರನ್ನೇ ಇಟ್ಟುಕೊಂಡಿರುವೆಯೋ, ಅಥವಾ ಹೊಸಬರನ್ನು ಸೇರಿಸಿಕೊಂಡಿರುವೆಯೋ ? ಮಂತ್ರಿಗಳು ಸಕಲ ಶಾಸ್ತ್ರಕೋವಿದರೂ, ನೀತಿಯನ್ನು ತಪ್ಪದವರೂ. ಧರ್ಮಾನುಷ್ಠಾನಪರರೂ. ಜಿತೇಂದ್ರಿಯರೂ, ಹಣದಾಸೆಗೆ ಒಳಗಾಗದವರೂ ಆಗಿದಾರಷ್ಟೆ ? ಎಲ್ಲರನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಅವರವರ ಸ್ಥಾನದಲ್ಲಿ ಇರಿಸಿರುವೆತಾನೇ ? ಸೈನ್ಯವನ್ನೂ ಸರಿಯಾಗಿ ಕಲೆಹಾಕಿರುವೆಯಾ ? ಸೈನಿಕ ರಿಗೆ ವೇತನವನ್ನು ಮುಂಚಿತವಾಗಿಯೇ ಕೊಡುತ್ತಿರುವೆಯಲ್ಲವೆ ? ಬ್ರಾಹ್ಮಣರನ್ನೂ, ಗುರುಹಿರಿಯ ರನ್ನೂ. ಮಾತಾಪಿತೃಗಳನ್ನೂ. ಗೋವುಗಳನ್ನೂ ಪೂಜಿಸುತ್ತಿರುವೆಯಷ್ಟೆ ? ದಿನವೂ ಬೆಳಗಿನ ಜಾವದಲ್ಲೆದ್ದು ಸ್ನಾನ, ಜಪ, ದೇವತಾರಾಧನೆ ಮಾಡಿ ಮಾತಾಪಿತೃಗಳನ್ನು ಸೇವಿಸಿ, ರಾಜಕಾರ್ಯ ವನ್ನು ಗಮನಿಸುತ್ತಿದೀಯೆ ಅಲ್ಲವೆ ?"

"ರಾಜ್ಯದ ವಿಷಯಗಳನ್ನು ಅರಿತ ಮಂತ್ರಿಗಳೊಂದಿಗೆ, ಸಕಲಶಾಸ್ತ್ರಕೋವಿದರಾದ ಪುರೋಹಿತರೊಂದಿಗೆ ಆಲೋಚಿಸುತ್ತಾ ಇರುವೆ ಅಲ್ಲವೆ? ಎಲ್ಲರೊಡನೆ ಆಲೋಚಿಸಿದ ನಂತರ

ಮಧ್ಯರಾತ್ರಿಯ ಸಮಯ ಏಕಾಂತವಾಗಿ ಮಂತ್ರಾಗಾರದಲ್ಲಿ ಒಬ್ಬನೇ ರಾಜಕಾರ್ಯಗಳ ಆಲೋಚನೆ ಮಾಡುವೆ ಅಲ್ಲವೆ ?

"ಯಾರುಯಾರಿಗೆ ಯಾವ ಯಾವ ಕೆಲಸ ಯುಕ್ತವೋ ಅವರಿವರಿಗೆ ಆಯಾ ಕೆಲಸಗಳನ್ನೇ ಕೊಡುತ್ತಾ ಇರುವೆ ತಾನೇ ? ವೇಷಾಂತರದಲ್ಲಿ ನಗರ ಪರ್ಯಟನ ಮಾಡಿ ನೀನೇ ಪ್ರತ್ಯಕ್ಷನಾಗಿ ಜನರ ಸುಖದುಃಖಗಳನ್ನು ಅರಿಯುತ್ತಿರುವೆಯಾ ? ಪ್ರಜಾರಕ್ಷಣೆ ಯುಕ್ತವಾದ ಕ್ರಮದಲ್ಲಿ ನಡೆಯುತ್ತಿದೆಯೇ ?

"ಬೊಕ್ಕಸ ತುಂಬಿ ಇದೆಯೇ ? ವರಮಾನಕ್ಕೆ ತಕ್ಕಂತೆ ವ್ಯಯವನ್ನು ಅಳವಡಿಸಿಕೊಂಡಿರುವೆ ತಾನೇ? ಕಾಲಕಾಲಕ್ಕೆ ಗೂಢಚಾರರಿಂದ ವರ್ತಮಾನಗಳನ್ನು ಸಂಗ್ರಹಿಸುತ್ತಿರುವೆಯಾ ? ಭರತ, ಎಲ್ಲವನ್ನೂ ಇಕ್ಷ್ವಾಕುಕುಲಕ್ಕೆ ಒಪ್ಪುವಂಥ ರೀತಿಯಲ್ಲಿ ನಡೆಸುತ್ತಿರುವೆಯಲ್ಲವೆ? ಅದಿರಲಿ. ಈ ಜಟೆ ಏಕೆ ? ಈ ನಾರುಮಡಿ ಏನು ? ಇದು ಏಕೆ ಇಂಥ ವೇಷ ? ಹೇಳು" ಎಂದು ಕುಶಲಪ್ರಶ್ನೆಯನ್ನು ವಿಚಾರಿಸುವ ನೆಪದಲ್ಲಿ ರಾಜಧರ್ಮವನ್ನೇ ಭರತನಿಗೆ ಬೋಧಿಸಿದ ದಾಶರಥಿ.

ವಾಲ್ಮೀಕಿ ವರ್ಣಿಸಿದ "ರಾಮರಾಜ್ಯ" ನೆಲೆಗೊಳ್ಳಬೇಕಾದರೆ ರಾಮ ಭರತನಿಗೆ ಉಪದೇಶಿಸಿದ ರಾಜಧರ್ಮವನ್ನು ಅವಲಂಬಿಸಬೇಕು. ಮಂತ್ರಿಗಳು ರಾಮನ ರಾಜ್ಯದಲ್ಲಿದ್ದಂತೆ ಜ್ಞಾನಿಗಳೂ, ವೀರ್ಯವಂತರೂ, ಬುದ್ಧಿವಂತರೂ. ಜಿತೇಂದ್ರಿಯರೂ ಆಗಿರಬೇಕು. ಹಣದಾಸೆಗೆ ಒಳಗಾಗದವರಾಗಬೇಕು. ಮುಖ್ಯವಾಗಿ ಯಾರು ಯಾರಿಗೆ ಯಾವ ಯಾವ ಯೋಗ್ಯತೆ ಇದೆಯೋ ಅವರವರಿಗೆ ಆಯಾ ಸ್ಥಾನಗಳು ದೊರೆಯುವಂತಾಗಬೇಕು. ಕಷ್ಟಸಹಿಷ್ಣುಗಳಾಗಿ, ಋಜುಮಾರ್ಗವನ್ನು ಅವಲಂಬಿಸಿರಬೇಕು ಆಡಳಿತ ನಡೆಸುವವರು. ಆಗ ಮಾತ್ರ ರಾಮರಾಜ್ಯ ನೆಲೆಗೊಂಡೀತು. ಎಂದೆಂದೂ ಪ್ರಜೆಗಳು ಸುಖಿಯಾಗಿ ಬಾಳಲಿ ಎಂಬ ಮಹೋದ್ದೇಶದಿಂದ ವಾಲ್ಮೀಕಿ ರಾಮಾಯಣ ಕಾವ್ಯವನ್ನು ರಚಿಸಿದರು. ಅದರಲ್ಲಿ ರಾಜಧರ್ಮವನ್ನೂ ವಿವರಿಸಿದರು.

ರಾಮ ಹೇಳಿದ್ದನ್ನೆಲ್ಲ ಕೇಳಿದ ಭರತ.

**ಕಿಂಮೇ ಧರ್ಮವಿಹೀನಸ್ಯ ರಾಜಧರ್ಮಃ ಕರಿಷ್ಯತಿ ।**

"ಪ್ರಭುರಾಘವ ! ಸಾಕ್ಷಾತ್ ಧರ್ಮವಾದ ನಿನ್ನನ್ನೇ ಪರಿತ್ಯಜಿಸಿದವನಿಗೆ ರಾಜಧರ್ಮದಿಂದೇನು ? ನೀ ಹೇಳುವುದೆಲ್ಲ ರಾಜನಿಗೆ, ಧರ್ಮಿಷ್ಠನಿಗಷ್ಟೇ ಅನ್ವಯಿಸುವುದು ? ನಾ ರಾಜನೂ ಅಲ್ಲ. ಧರ್ಮಿಷ್ಠ ಮೊದಲೇ ಅಲ್ಲ. ನನಗೇಕೆ ರಾಜನೀತಿ ? ಜ್ಯೇಷ್ಠಭ್ರಾತೃ ಇರುವಾಗ ರಾಜ್ಯ ಅವನಿಗೆ ಸಲ್ಲಬೇಕು. ಅವನು ರಾಜನಾಗಬೇಕು. ನೀನು ಹಿರಿಯ ಮಗ; ನಿನಗೆ ರಾಜಧರ್ಮ ತಿಳಿದಿರಬೇಕು. ನನಗೇಕೆ ಅದರ ಗೊಡವೆ? ಎಂದ.

ರಾಮನು, "ಅದಿರಲಿ. ಭರತ, ತಂದೆ ಕ್ಷೇಮವಾಗಿದ್ದಾರೆಯೇ" ಎಂದ. ದಶರಥ ಸ್ವರ್ಗಸ್ಥನಾದುದನ್ನು ಭರತ ತಿಳಿಸಿದ. ರಾಮ ತಂದೆಗಾಗಿ ಪರಿತಪಿಸಿದ. ದುಃಖಿಸಿದ. "ಲಕ್ಷ್ಮಣಾ ನೀನು ತಂದೆಯನ್ನು ಕಳೆದುಕೊಂಡೆ. ಸೀತೆ ನಿನಗೆ ಇನ್ನು ಮುಂದೆ ಮಾವ ಇಲ್ಲ" ಎಂದು ತನ್ನ ದುಃಖವನ್ನು ತೋಡಿಕೊಂಡ.

ವಶಿಷ್ಠರ ಆಜ್ಞೆಯಂತೆ ಮಂದಾಕಿನಿಯಲ್ಲಿ ಸ್ನಾನಮಾಡಿ ತಂದೆಗೆ ಜಲತರ್ಪಣವನ್ನೂ ಪಿಂಡಪ್ರದಾನವನ್ನೂ ಮಾಡಿದ.

ಆ ರಾತ್ರಿ ಎಲ್ಲರೂ ರಾಮನ ಆಶ್ರಮದಲ್ಲೇ ವಿಶ್ರಮಿಸಿದರು ಬೆಳಗಾಯಿತು. ಸ್ನಾನ ಸಂಧ್ಯಾ

ವಂದನೆ ಎಲ್ಲವನ್ನೂ ಮುಗಿಸಿ ರಾಮ ಆಶ್ರಮದ ಹೊರಭಾಗದಲ್ಲಿ ಕುಳಿತ. ಭರತ ಬಂದು ರಾಮನಿಗೆ ನಮಸ್ಕರಿಸಿದ. ಎರಡು ಕೈಗಳನ್ನೂ ತಲೆಯ ಮೇಲಿಟ್ಟು ಕೈಮುಗಿದ. "ಅಣ್ಣಾ ! ತಂದೆಯನ್ನು ಕಳೆದುಕೊಂಡ ನನಗೆ ತಂದೆ, ಗುರು, ದೈವ, ಎಲ್ಲವೂ ನೀನೇ. ನಿನ್ನಲ್ಲಿ ಶರಣಾಗತ ನಾಗಿದೇನೆ. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಅಯೋಧ್ಯೆಗೆ ಹಿಂದಿರುಗಿ, ಪಟ್ಟಾಭಿಷೇಕ ಮಾಡಿಕೋ" ಎಂದ. ರಾಮ ಭರತನನ್ನು ಸಂತೈಸಿದ. ಅವನಿಗೆ ಧರ್ಮಸೂಕ್ಷ್ಮವನ್ನು ಉಪ ದೇಶಿಸಿದ. "ವತ್ಸ, ಭರತ, ಪ್ರಪಂಚದಲ್ಲಿ ಸ್ಥಿರವಾದುದು ಧರ್ಮ; ಧರ್ಮದಿಂದಲೇ ಅರ್ಥ; ಧರ್ಮ ದಿಂದಲೇ ಕಾಮ, ಧರ್ಮದಿಂದಲೇ ಮೋಕ್ಷ. ಧರ್ಮವೊಂದೇ ಶಾಶ್ವತವಾದುದು. ನಕ್ಷತ್ರದವರೆಗೆ ಹಣದ ರಾಶಿಯನ್ನು ಗಳಿಸಬಹುದು. ಆದರೆ ನಕ್ಷತ್ರ ಹೇಗೆ ಕೆಳಗೆ ಬೀಳುವುದೋ ಹಾಗೆ ಅಷ್ಟೆತ್ತ ರದ ಹಣವೂ ಅಳಿದು ಹೋಗುತ್ತದೆ ಉಳಿಯುವುದು ಧರ್ಮ ಒಂದೇ. ಭರತ, ಹೇಳುತ್ತೇನೆ ಕೇಳು:

ಈ ಜಗತ್ತೆಲ್ಲ ಭಗವದಧೀನ. ಈ ಭಗವಂತನೊಬ್ಬನೇ ಎಲ್ಲರನ್ನೂ ಬೊಂಬೆಗಳಂತೆ ಕುಣಿ ಸುತ್ತಿದಾನೆ. ಸೂತ್ರಧಾರ ಅವನು. ಸೂತ್ರ ಆ ಈಶ್ವರನ ಕೈಯಲ್ಲಿ; ನಾವೆಲ್ಲ ಅವನು ಕುಣಿಸಿದಂತೆ ಕುಣಿಯುವ ಗೊಂಬೆಗಳು.

ಜೀವನವು ಪ್ರವಾಹದಂತೆ. ಪ್ರವಾಹದಲ್ಲಿ ಅದೆಷ್ಟೋ ವಸ್ತುಗಳು ಒಂದಕ್ಕೊಂದು ಸೇರು ತ್ತವೆ. ಬೇರೆ ಆಗುತ್ತವೆ. ಹಾಗೆಯೇ ತಂದೆ, ತಾಯಿ, ಹೆಂಡತಿ, ಮಕ್ಕಳು, ಬಂಧುಗಳು. ಸ್ನೇಹಿತರು ಎಲ್ಲರೂ. ಎರಡು ಮರದ ತುಂಡುಗಳು ಪ್ರವಾಹದ ಹೊಡೆತಕ್ಕೆ ಸಿಕ್ಕಿ ಕೆಲಕಾಲ ಒಂದಾಗಿದ್ದು ಗಾಳಿ ಬೀಸಿದ ನಂತರ ಮತ್ತೆ ಬೇರೆಯಾಗುವಂತೆ ಜೀವನದ ಸಂಬಂಧವೂ ನಹ. ಈ ಸಂಬಂಧ ವಿಚ್ಛೇದ ಹೊಂದುವುದು ನಿಶ್ಚಿತ,

ಧರ್ಮ ಒಂದೇ ನಿತ್ಯವಾದುದು. ರಂಧ್ರಗಳಿರುವ ಕೊಡದಲ್ಲಿ ನೀರಿಟ್ಟರೆ ಅದು ಹೇಗೆ ಸ್ರವಿಸಿ ಸ್ರವಿಸಿ ಬರಿದಾಗುವುದೋ ಹಾಗೆ ದಿವಾರಾತ್ರಿಗಳೆಂಬ ರಂಧ್ರಗಳ ಮೂಲಕ ಆಯುಷ್ಯ ಕಡಿಮೆ ಯಾಗುತ್ತಲೇ ಇರುತ್ತದೆ. ಹುಟ್ಟಿದವನಿಗೆ ಮರಣ ನಿಶ್ಚಯ.

ಆಯುಃ ಪರಿಸ್ರವತಿ ಭಿನ್ನ ಘಟಾ ದಿವಾಂಭಃ

ಆದ್ದರಿಂದ ಭರತ, ದೇಹಧಾರಿಯಾದವ ಶಾಶ್ವತವಾದ ಧರ್ಮವನ್ನು ಅನುಷ್ಠಿಸಬೇಕು. ಅಲ್ಪವಾದ ಸೌಖ್ಯವನ್ನು ಲಕ್ಷಿಸಬಾರದು."

ಭರತ "ಅಣ್ಣಾ, ಅವೆಲ್ಲ ಸರಿ. ಆದರೆ ಆಶ್ರಮಗಳಲ್ಲಿ ಉತ್ತಮವಾದುದು ಗೃಹಸ್ಥಾಶ್ರಮ ವಲ್ಲವೇ ? ಅದರಲ್ಲಿ ತಾನೇ ಧರ್ಮವನ್ನು ಅನುಷ್ಠಿಸಬೇಕು ? ಕ್ಷತ್ರಿಯನಾದವನ ಧರ್ಮ ಪ್ರಜಾ ರಕ್ಷಣೆ, ಅಲ್ಲವೇ ? ಕೊನೆಯಲ್ಲಿ ವೃದ್ಧರಾದ ಮೇಲೆ ಕಾಡಿಗೆ ಬರಬೇಕು ? ವಾನಪ್ರಸ್ಥಾಶ್ರಮ ಕೊನೆಯದು ಅಲ್ಲವೇ ? ರಾಮಾ ! ಕ್ಷತ್ರಿಯ ಧರ್ಮವನ್ನು ಆಚರಿಸುವುದು ನಿನ್ನ ಧರ್ಮ ಅಲ್ಲವೇ ? ಅದಕ್ಕಾಗಿಯೇ ಹೇಳುತ್ತಿದೇನೆ. ರಾಜ್ಯಕ್ಕೆ ಹಿಂದಿರುಗು. ಪಟ್ಟಾಭಿಷೇಕ ಮಾಡಿಕೋ. ಪ್ರಜಾ ರಕ್ಷಣೆ ಮಾಡು. ನೀ ಹೇಳುವಂತೆಯೇ ಧರ್ಮವನ್ನು ಪರಿಪಾಲಿಸು" ಎಂದ.

ರಾಮ ಭರತನನ್ನು ಕುರಿತು "ಭರತ, ಲೋಕದಲ್ಲಿ ಎಲ್ಲವೂ ತನ್ನ ಧರ್ಮಕ್ಕೆ ಅನುಸಾರ ವಾಗಿಯೇ ಇದೆ. ಹಂಸವನ್ನು ನೋಡು ! ಅದು ಎಷ್ಟು ಬಿಳುಪಾಗಿದೆ ? ಅದಕ್ಕೆ ಯಾರು ಆ ಬಿಳುಪನ್ನು ಕೊಟ್ಟರು ? ಗಿಣಿಗೆ ಹಸುರು ಬಣ್ಣ ಹೇಗೆ ಬಂದಿತು ? ನವಿಲಿಗೆ ಗರಿಗಳು ಏಕೆ ಸುಂದರ ವಾಗಿವೆ ? ಇವೆಲ್ಲ ಹೇಗೆ ಧರ್ಮವೋ ಹಾಗೆಯೇ ನಮ್ಮ ತಂದೆಯ ಆಜ್ಞೆಯನ್ನು ನಡೆಸುವುದು ನಮ್ಮ ಧರ್ಮ. ಇದನ್ನು ನಾವು ಬಿಡಲು ಹೇಗೆ ಸಾಧ್ಯ ?" ಎಂದ.

ಭರತ, "ಅಣ್ಣಾ, ನೀ ಹೇಳುವಂತೆಯೇ ಆಗಲಿ. ತಂದೆ ನನಗೆ ರಾಜ್ಯವನ್ನು ಕೊಟ್ಟ. ಆ ರಾಜ್ಯ ನನ್ನದಾಯಿತು. ನನ್ನ ರಾಜ್ಯವನ್ನು ನಾ ನಿನಗೆ ಒಪ್ಪಿಸುತ್ತೇನೆ. ಹಿಂದಿರುಗು. ಪಟ್ಟಾಭಿಷೇಕ ಮಾಡಿಕೊ"

"ಹಾಗಲ್ಲ ಭರತ, ನೀನೇ ರಾಜ್ಯ ಆಳಬೇಕು. ನಾನೇ ವನವಾಸ ಮಾಡಬೇಕು ಎಂದು ತಂದೆ ವಿಧಿಸಿದಾರೆ. ಅದನ್ನು ವ್ಯತ್ಯಾಸ ಮಾಡಲಾಗದು.

**ಪುರಾಭ್ರಾತಃ ಪಿತಾನಸ್ಸಃ ಮಾತರಂ ತೇ ಸಮುದ್ವಹರ್ |**
**ಮಾತಾಮಹೇ ಸಮಾಶ್ರೌಷೀದ್ರಾಜ್ಯಶುಲ್ಕಮನುತ್ತಮಮ್ ||**

ಮೇಲಾಗಿ ಕಲ್ಯಾಣ ಕಾಲದಲ್ಲಿ ನಿಮ್ಮ ತಾತನಿಗೆ ರಾಜ್ಯವನ್ನು ನಿನಗೇ ಕೊಡುವುದಾಗಿ ತಂದೆ ವಾಗ್ದಾನ ಮಾಡಿದಾರೆ. ಆ ಮಾತನ್ನು ನಡೆಸಬೇಕು. ಅದು ಕರ್ತವ್ಯ" ಎಂದ ರಾಮ.

"ರಾಮಾ ! ಅದು ಹಾಗಲ್ಲ. ಕಲ್ಯಾಣಕಾಲದಲ್ಲಿ ಸುಳ್ಳು ಹೇಳಿದರೆ ತಪ್ಪಲ್ಲ. ಶಾಸ್ತ್ರವು ಐದು ಸಮಯಗಳಲ್ಲಿ ಅನೃತವನ್ನು ಹೇಳಬಹುದು ಎಂದಿದೆ. ಅಲ್ಲದೆ ಅಣ್ಣಾ. ಇದೇನು ಅನ್ಯಾಯ ! ಹೊರಲಾರದ ಭಾರವನ್ನು ಕುದುರೆಯ ಮೇಲೆ ಹೊರಿಸಿದರೆ ಅದು ಹೊರಲು ಸಾಧ್ಯವೆ? ಸಮಸ್ತ ಬ್ರಹ್ಮಾಂಡವನ್ನೂ ಆಳುವ ಶಕ್ತಿಯುಳ್ಳ ನೀನು ಮೂರ್ತೀಭವಿಸಿರುವಾಗ ಅಲ್ಪನಾದ ನಾನು ರಾಜ್ಯವನ್ನಾಳಲು ಶಕ್ತನೆ ? ಅಣ್ಣಾ ದಯವಿಟ್ಟು ನನ್ನ ಪ್ರಾರ್ಥನೆಯನ್ನು ಮನ್ನಿಸಿ ಹಿಂದಿರುಗು." ಎಂದು ಅಂಗಲಾಚಿದ ಭರತ.

ರಾಮ ಹೇಳಿದ "ಭರತಾ ! ಅದು ಸಾಧ್ಯವಿಲ್ಲ. ಕಾನನಕ್ಕೆ ಬಂದದ್ದಾಯಿತು. ಇನ್ನು ತಂದೆ ಹೇಳಿದ್ದನ್ನು ನಡೆಸಲೇ ಬೇಕು. ಧರ್ಮಸೂಕ್ಷ್ಮ ನಿನಗೆ ತಿಳಿಯದು. ತಂದೆ ಹೇಳಿದಂತೆ ಕೇಳು. ನನ್ನನ್ನು ವೃಥಾ ನಿರ್ಬಂಧಿಸಬೇಡ. ನೀ ಇನ್ನೂ ಚಿಕ್ಕವನು, ನಾ ಹೇಳುವುದನ್ನು ಕೇಳು.''

"ಅಣ್ಣಾ-ನೀ ಹೇಳುವುದು ಸರಿಯಾಗಿದೆ. ನನಗಿಂತ ನೀನು ಒಂದು ದಿನ ಮಾತ್ರ ದೊಡ್ಡವನು. ಅಲ್ಲದೆ ಧರ್ಮ ಎನ್ನುತ್ತೀಯಲ್ಲ. ಇಕ್ಷ್ವಾಕು ವಂಶದಲ್ಲಿ ಇದುವರೆಗೆ ಜ್ಯೇಷ್ಠ ಇರುವಾಗ ಕನಿಷ್ಠನಿಗೆ ರಾಜ್ಯ ದೊರೆತಿರುವುದು ಉಂಟೆ ! ಜ್ಯೇಷ್ಠನಿರುವಾಗ ಕನಿಷ್ಠನು ರಾಜ್ಯವಾಳಬಹುದೆ ? ಅದು ಧರ್ಮಕ್ಕೆ ವಿರುದ್ಧ ಅಲ್ಲವೆ ?''

"ಭರತ–ನೀ ಹೇಳುವುದು ಸರಿಯಲ್ಲ; ಕೇಳು. ಧರ್ಮವು ಬಹಳ ಸೂಕ್ಷ್ಮವಾದದು. ಅದು ಹೀಗೇ ಸರಿ ಎಂದು ನಿರ್ಧರಿಸಲು ಬರುವಂಥದಲ್ಲ. ಧರ್ಮವು ಕಣ್ಣಿಗೆ ಕಾಣಿಸುವುದಲ್ಲ. ಕಣ್ಣಿಗೆ ಕಾಣುವಂಥ ಧರ್ಮ ಸ್ವರೂಪರು ಯಾರು ಗೊತ್ತೆ ನಿನಗೆ ? ಭರತ, ಕಣ್ಣಿಗೆ ಕಾಣುವಂಥ ಧರ್ಮ ರೂಪಿಗಳು ತಾಯಿ ತಂದೆ. ತಾಯಿ ತಂದೆಗಳೇ ದೈವ. ಅವರೇ ಪೂಜನೀಯರು. ಅವರ ಮಾತನ್ನು ಶಿರಸಾವಹಿಸಿ ನಡೆಸಬೇಕು. ಅದೇ ಧರ್ಮ. ತಂದೆ ನಮ್ಮನ್ನು ಸೃಷ್ಟಿಸಿದ. ತಾಯಿ ಹೆತ್ತು ಹೊತ್ತು ಸಾಕಿ ಸಲಹಿದಳು. ತಂದೆಗಿಂತ ತಾಯಿ ಹೆಚ್ಚು ಪೂಜನೀಯಳು. ಅವಳ ಮಾತನ್ನು ಕೇಳು. ನಿನ್ನ ತಾಯಿಯ ಇಷ್ಟದಂತೆ ರಾಜ್ಯವನ್ನು ಸ್ವೀಕರಿಸು ಹೋಗು ಭರತ ಹೋಗು" ಎಂದ ರಾಮ. ಆಗ ಅಲ್ಲಿದ್ದ ಜಾಬಾಲಿ ಋಷಿಯು,

ಕಲ್ಲೂ ಕರಗುವಂತೆ ಅಳುತ್ತಿರುವ ಭರತನನ್ನು ನೋಡಿದರು. ರಾಮನೋ ಖಡಾಖಂಡಿತವಾಗಿ ಒಲ್ಲೆ ಎನ್ನುತ್ತಿದಾನೆ. ಎದ್ದರು. ''ರಾಮಾ, ನೀ ಹೇಳುವುದು ಸರಿಯಲ್ಲ. ಒಂದು ವೇಳೆ ನೀ ಹೇಳುವುದೇ ಸರಿ ಎನ್ನುವ. ತಂದೆಯ ಮಾತು ಎನ್ನುತ್ತೀಯಲ್ಲ, ಯಾರಿಗೆ ಯಾರು ತಂದೆ–ಯಾರು ಮಗ–ಏನು ಸಂಬಂಧ ? ನಿನ್ನನ್ನು ಕಾಡಿಗೆ ಹೋಗು ಎಂದ ದಶರಥ ಈಗೆಲ್ಲಿ ?

ಆತನೇ ಇಲ್ಲದೆ ಇರುವಾಗ ತಂದೆ ಮಾತು-ತಂದೆ ಮಾತು ಎನ್ನುವಿ ಈ ದೇಹ ಹೋದಮೇಲೆ ಯಾರಿಗೆ ಯಾರ ಸಂಬಂಧ ? ಯಾರು ತಂದೆ ಯಾರು ಮಗ ? ಸುಮ್ಮನೆ ಭರತ ಹೇಳುವುದನ್ನು ಕೇಳು; ರಾಜ್ಯಕ್ಕೆ ಹಿಂದಿರುಗಿ ಪಟ್ಟಾಭಿಷೇಕ ಮಾಡಿಕೊ. ಇರುವಾಗ ಎಲ್ಲರನ್ನೂ ತೃಪ್ತಿಪಡಿಸು" ಎಂದರು.

ಜಾಬಾಲಿಯ ಮಾತನ್ನು ಕೇಳಿದ ರಾಮ. ಕೋಪಬಂದಿತು. "ಏನು ನೀವು ಹೇಳುವುದು ? ನಿಮ್ಮನ್ನು ಹೇಳಿ ಉಪಯೋಗವಿಲ್ಲ. ನಿಮ್ಮಂಥ ನಾಸ್ತಿಕರು ನಮ್ಮ ತಂದೆಯ ರಾಜ್ಯದಲ್ಲಿ ಇದಾರಲ್ಲ ಎಂದು ಪರಿತಾಪ ಪಡುತ್ತಿದೇನೆ. ತಂದೆಯಿಲ್ಲವೆಂದು ತಂದೆ ಹೇಳಿದ ಮಾತನ್ನು ಗಾಳಿಗೆ ತೂರಬೇಕೆ? ಏನು ನಿಮ್ಮ ಮತ ? ನಾನು ಯಾವಾಗಲೂ ಧರ್ಮ ಮಾರ್ಗದಲ್ಲೇ ನಡೆಯತಕ್ಕವ. ಧರ್ಮ ಮಾರ್ಗವನ್ನು ಬಿಡುವುದರಿಂದ ಅಯೋಧ್ಯೆಯೇ ಏಕೆ ? ದೇವೇಂದ್ರನ ಅಮರಾವತಿಯೇ ಸಿಗುವುದಾದರೂ, ಸಮಸ್ತ ಪ್ರಪಂಚದ ಸ್ವಾಮಿತ್ವ ಲಭ್ಯವಾಗುವುದಾದರೂ ಅದು ನನಗೆ ಬೇಡ. ಇದು ಖಂಡಿತ. ಇದರಲ್ಲಿ ಸಂಶಯವಿಲ್ಲ" ಎಂದ.

ಆಗ ವಸಿಷ್ಠರು ರಾಮನನ್ನು ಸಮಾಧಾನ ಪಡಿಸುತ್ತಾ 'ರಾಮ, ಜಾಬಾಲಿಗಳು ನಾಸ್ತಿಕರಲ್ಲ. ಬ್ರಹ್ಮಜ್ಞಾನಿಗಳು. ನಿನ್ನ ಮೇಲಿನ ಪ್ರೀತಿಯಿಂದ ನೀನು ಪಟ್ಟಾಭಿಷೇಕ ಮಾಡಿಕೊಳ್ಳಲಿ ಎಂದು ಹಾಗೆ ಹೇಳಿದರು. ಅದಿರಲಿ, ರಾಮಾ, ನೀನೇ ಹೇಳಿದೆಯಲ್ಲವೆ ತಂದೆ, ತಾಯಿ, ಗುರು-ಇವರು ದೈವಸ್ವರೂಪರು, ಧರ್ಮ ಮೂರ್ತಿಗಳು ಎಂದು. ಆದರಲ್ಲೂ ತಂದೆ ತಾಯಿಗಳಿಗಿಂತ ಆಚಾರ್ಯನು ಹೆಚ್ಚು ಪೂಜಾರ್ಹ. ಏಕೆಂದರೆ ಆಚಾರ್ಯನೇ ಜ್ಞಾನಮಾರ್ಗವನ್ನು ಉಪದೇಶಮಾಡುವವ. ನಾನು ನಿನಗೆ ಆಚಾರ್ಯ, ಗುರು. ನಿನಗೆ ಮಾತ್ರ ಅಲ್ಲ-ನಿನ್ನ ತಂದೆಗೂ ನಾನೇ ಆಚಾರ್ಯ. ನಾ ಹೇಳುತ್ತೇನೆ ಗುರುವಿನ ಮಾತನ್ನು ನಡೆಸು. ಹಿಂದಿರುಗು ಅಯೋಧ್ಯೆಗೆ. ಪಟ್ಟಾಭಿಷಿಕ್ತನಾಗು. ಗುರು ವಾಕ್ಯವನ್ನು ನಡೆಸಿ ಕೃತಾರ್ಥನಾಗು" ಎಂದರು.

ರಾಮ ಆಚಾರ್ಯರನ್ನು ನಮಸ್ಕರಿಸಿದ. ವಿನಯದಿಂದ "ಆಚಾರ್ಯವರ್ಯ ಆಗಲಿ, ನೀವು ಹೇಳುವಂತೆ ಹದಿನಾಲ್ಕು ವರ್ಷಗಳು ಕಳೆದ ಮೇಲೆ ಅಯೋಧ್ಯೆಗೆ ಹಿಂದಿರುಗುತ್ತೇನೆ, ಪಟ್ಟಾಭಿಷೇಕ ಮಾಡಿಕೊಳ್ಳುತ್ತೇನೆ" ಎಂದ.

ಭರತನ ಕಡೆ ತಿರುಗಿ ''ಭರತಾ, ನೀ ಏಕೆ ವ್ಯಸನಪಡುತ್ತೀ—ನೀ ಮಾತ್ರ ರಾಜನಾಗಬೇಕು, ನಾ ಕಾಡಿನಲ್ಲಿರಬೇಕಲ್ಲ ಎಂದು ತಾನೇ ನೀ ದುಃಖಿಸುತ್ತೀಯೆ ? ನಾವು ನಾಲ್ವರೂ ರಾಜ್ಯಭಾರ ಮಾಡೋಣ. ನೀನು ಅಯೋಧ್ಯೆಗೆ ರಾಜನಾಗು. ನಾನು ಅರಣ್ಯಕ್ಕೆ ರಾಜನಾಗುತ್ತೇನೆ. ನೀನು ಮನುಷ್ಯರಿಗೆ ರಾಜನಾಗು. ನಾನು ಮೃಗಗಳಿಗೆ ರಾಜನಾಗುತ್ತೇನೆ. ನಿನಗೆ ಮಂತ್ರಿ ಶತ್ರುಘ್ನ. ನನಗೆ ಮಂತ್ರಿ ಲಕ್ಷ್ಮಣ. ನೀನು ಶ್ವೇತಚ್ಛತ್ರದ ನೆರಳಿನಲ್ಲಿರು. ನಾ ಮರದ ನೆರಳಿನಲ್ಲಿರುತ್ತೇನೆ. ನಾವು ನಾಲ್ವರೂ ಹೀಗೆ ರಾಜ್ಯಭಾರ ಮಾಡಿ ತಂದೆ ದಶರಥನನ್ನು ಮೋಕ್ಷಕ್ಕೆ ಕಳುಹಿಸೋಣ. ಸರಿ ತಾನೇ ?" ಎಂದ.

ರಾಮ ಖಂಡಿತ ಬರುವುದಿಲ್ಲ. ಎಂದು ಅರಿತ ಭರತ. ಕೊನೆಯ ಅಸ್ತ್ರವನ್ನೂ ಪ್ರಯೋಗಿಸಬೇಕು ಎಂದುಕೊಂಡ. ದರ್ಭೆಯನ್ನು ತಂದು ಹಾಸಿ ಅದರಮೇಲೆ ಪೂರ್ವಾಭಿಮುಖವಾಗಿ ಮಲಗಿದ.

"ರಾಮ, ನೀ ಅಯೋಧ್ಯೆಗೆ ಹಿಂದಿರುಗುವವರೆಗೆ ನಾನು ಹೀಗೆಯೇ ಅನ್ನಾಹಾರಗಳಿಲ್ಲದೆ ಪ್ರಾಯೋಪವೇಶ ಮಾಡುತ್ತೇನೆ" ಎಂದ.

ರಾಮ ತಕ್ಷಣ "ಭರತ ಏಳು; ಇದೇನು ? ಬ್ರಾಹ್ಮಣನು, ತಾನು ಕೊಟ್ಟ ಹಣ ಹಿಂದಿರುಗಿ ಬರದಿದ್ದಾಗ ಸಾಲಗಾರನ ಮನೆಯಮುಂದೆ ಮಲಗುವಂತೆ ಮಲಗಿದೆ. ಹೋಗು, ಮಂದಾಕಿನಿಯಲ್ಲಿ ಸ್ನಾನಮಾಡಿ ಬಂದು ನನ್ನನ್ನು ಮುಟ್ಟು. ಇಲ್ಲವಾದರೆ ಪಾಪ ಬರುತ್ತದೆ. ಎಂದ.

ಆಕಾಶದಲ್ಲಿ ಅಶರೀರವಾಣಿ ನುಡಿಯಿತು. "ಭರತಾ, ರಾಮನನ್ನು ನಿರ್ಬಂಧಿಸಬೇಡ ಅವನು ಹೇಳಿದಂತೆ ಹಿಂದಿರುಗು"

ನೋಡಿದ ಭರತ. ರಾಮ ಹಿಂತಿರುಗುವುದಿಲ್ಲ ಎಂಬುದು ಖಚಿತವಾಯಿತು. ಆಗ ಕೇಳಿದ "ಅಣ್ಣಾ, ನೀನಂತೂ ಬರುವುದಿಲ್ಲ. ನಿನ್ನ ಪಾದುಕೆಗಳನ್ನಾದರೂ ಅನುಗ್ರಹಿಸು. ನನಗೆ ರಾಜ್ಯ ಪಾಳುವಶಕ್ತಿ ಸ್ವಲ್ಪವೂ ಇಲ್ಲ. ನಿನ್ನ ಪಾದುಕೆಗಳನ್ನೇ ಸಿಂಹಾಸನದ ಮೇಲಿರಿಸಿ ಅವುಗಳಿಗೆ ಕಿಂಕರನಾಗಿ ರಾಜ್ಯ ನಡೆಸುತ್ತೇನೆ" ಎಂದು.

ರಾಮ ಸಂತೋಷದಿಂದ ಹೇಮಭೂಷಿತವಾದ ತನ್ನ ಪಾದುಕೆಗಳನ್ನು ಅನುಗ್ರಹಿಸಿದ. ಪಾದುಕೆಗಳನ್ನು ಪಡೆದ ಭರತ. ತನ್ನ ತಲೆಯಮೇಲೆ ಎರಡು ಪಾದುಕೆಗಳನ್ನೂ ಇಟ್ಟುಕೊಂಡ. ರಾಮನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದ. "ಹದಿನಾಲ್ಕು ವರ್ಷ ಕಳೆದು ಮರುದಿನ ಪ್ರಾತಃಕಾಲ ನೀ ಬರದಿದ್ದರೆ ನಾನು ಅಗ್ನಿ ಪ್ರವೇಶ ಮಾಡುತ್ತೇನೆ" ಎಂದ. ರಾಮ ಭರತನನ್ನು ಅಪ್ಪಿಕೊಂಡ. "ಹಾಗೇ ಆಗಲಿ, ನೀ ಹೇಳುವಂತೆ ಹದಿನಾಲ್ಕುವರ್ಷ ಕಳೆದಕೂಡಲೇ ಬರುತ್ತೇನೆ. ನೀನೂ ತಾಯಿಯನ್ನು ನಿಂದಿಸದೆ ಪೂಜಿಸುತ್ತಿರು" ಎಂದು ಹೇಳಿ ಮೈದಡವಿ ಆಶೀರ್ವದಿಸಿ ಕಳುಹಿಸಿಕೊಟ್ಟ. ರಾಮನ ಪಾದುಕೆಗಳನ್ನು ತಲೆಯ ಮೇಲೆ ಹೊತ್ತು ಸಂತೋಷದಿಂದ ಭರತ ಹಿಂದಿರುಗಿದ. ಅಯೋಧ್ಯೆಗೆ ಹೋಗಲು ಮನಸ್ಸಾಗದೆ ನಂದಿಗ್ರಾಮದಲ್ಲೇ ಉಳಿದ. ಸಿಂಹಾಸನದ ಮೇಲೆ ಪಾದುಕೆಗಳನ್ನಿಟ್ಟು, ವೈಭವದಿಂದ ಅಭಿಷೇಕ ಮಾಡಿದ. ಬೆಳ್ಗೊಡೆಯನ್ನು ಹಿಡಿದ, ಸರ್ವ ವಿಧ ಪೂಜೆಗಳನ್ನೂ ಸಲ್ಲಿಸಿದ.

ದಿನದಿನವೂ ಪಾದುಕೆಯ ಎದುರಿಗೆ ಕೈಕಟ್ಟಿ ನಿಂತು ಸಮಸ್ತ ವಿಷಯವನ್ನೂ ನಿವೇದಿಸುತ್ತಿದ್ದ. ಹೀಗೆ ನಡೆಯಿತು ಪಾದುಕಾರಾಜ್ಯ. ದಶರಥ ರಾಮನಿಗೆ ಪಟ್ಟಕಟ್ಟಬೇಕು ಎಂದು ಯೋಚಿಸಿದ. ಕೈಕೇಯಿ ಭರತನಿಗೆ ರಾಜ್ಯ ದೊರೆಯಬೇಕು ಎಂದಳು. ವಿಧಿ "ಪಾದುಕೆಯ ರಾಜ್ಯ ಆಗಲಿ" ಎಂದಿತು. ಹೀಗೆ ಪಾದುಕೆಯ ಹೆಸರಿನಲ್ಲಿ ಭರತ ರಾಜ್ಯವಾಳತೊಡಗಿದ.

ರಾಮನಂತೆಯೇ ಜಟೆ, ನಾರುಮಡಿಯನ್ನು ಧರಿಸಿ, ನಿಯತಾಹಾರನಾಗಿ, ಜಿತೇಂದ್ರಿಯನಾಗಿ ತಾಪಸಿಯ ಜೀವನವನ್ನು ನಡೆಸತೊಡಗಿದ ಭರತ.

## ಪಾದುಕಾ ವೈಭವ

ಶ್ರೀವೇದಾಂತದೇಶಿಕರು ಸಂಸ್ಕೃತದಲ್ಲಿ 1008 ಶ್ಲೋಕಗಳಲ್ಲಿ 'ಪಾದುಕಾ ಸಹಸ್ರ'ವನ್ನು ರಚಿಸಿದಾರೆ. ಪಾದುಕೆಯ ಮಹಿಮೆಯನ್ನು ಅದರಲ್ಲಿ ವರ್ಣಿಸಿದಾರೆ. ಹೇಳುತ್ತಾರೆ:

**ನಿಶ್ಶೇಷ ಮಂಬರತಲಂ ಯದಿ ಪತ್ರಿಕಾ ಸ್ಯಾತ್**
**ಸಪ್ತಾರ್ಣವೀ ಯದಿ ಸಮೇತ್ಯ ಮಷೀ-ಭವಿತ್ರೀ ।**
**ವಕ್ತಾ ಸಹಸ್ರವದನಃ ಪುರುಷಸ್ಸ್ವಯಂ ಚೇತ್**
**ಲಿಖ್ಯೇತ ರಂಗಪತಿ ಪಾದುಕಯೋಃ ಪ್ರಭಾವಃ ॥**

ಪಾದುಕೆಯ ಹಿರಿಮೆ ವರ್ಣಿಸಲು ಶಕ್ಯವಿಲ್ಲ. ಮೇರು ಪರ್ವತವನ್ನೇ ಲೇಖನಿಯನ್ನಾಗಿಟ್ಟು ಕೊಂಡು, ಸಾಗರವನ್ನೇ ಮಸಿಯನ್ನಾಗಿಸಿ ಆಕಾಶವನ್ನೇ ಪತ್ರವಾಗಿಟ್ಟುಕೊಂಡು ಸಹಸ್ರ ಹೆಡೆಗಳು ಎರಡುಸಾವಿರ ನಾಲಿಗೆ ಉಳ್ಳ ಆದಿಶೇಷನೇ ಬರೆದರೂ ಪಾದುಕೆಯ ಮಹಿಮೆ ಮುಗಿಯದು ಎಂದಿ ವಾರೆ. "ಅಮ್ಮಾ ಪಾದುಕೆ. ನಿನ್ನ ಔದಾರ್ಯವನ್ನು ಎಷ್ಟೆಂದು ಕೊಂಡಾಡಲಿ. ಭರತ ಅತ್ತ, ಗೋಳಿಟ್ಟ. ರಾಮನನ್ನು ಹಿಂದಿರುಗು ಎಂದು ಬೇಡಿದ ಆದರೆ ರಾಮ ಹಿಂದಿರುಗಲಿಲ್ಲ. ನೀನು ಹಾಗಲ್ಲ. ಭರತ ನಿನ್ನನ್ನು ಕೇಳಿದ ತಕ್ಷಣ ಅವನ ಬಳಿಗೆ ಓಡಿ ಬಂದೆ. ಶರಣಾಗತರನ್ನು ರಕ್ಷಿಸು ವುದರಲ್ಲಿ ಪರಮಾತ್ಮನಿಗಿಂತ ನಿನಗೇ ಹೆಚ್ಚು ಕರುಣೆ ಎಂದು ಗೊತ್ತಾಯಿತು" ಎಂದು ಪಾದುಕೆಯನ್ನು ಸ್ತುತಿಸುತ್ತಾರೆ.

ಇಲ್ಲಿ ಭರತ ಮಾಡಿದ ಶರಣಾಗತಿ ಫಲಿಸಲಿಲ್ಲ ಎಂಬ ಶಂಕೆ ಬರುವುದು ಸಹಜ. ಅದು ಹಾಗಲ್ಲ. ಯಾವಾಗಲೂ ಶರಣಾಗತಿ ಮಾಡುವುದು ಭಗವತ್ಸಂಕಲ್ಪಕ್ಕೆ ವಿರೋಧವಲ್ಲದ ಗುರಿ ಯನ್ನು ಹೊಂದಿರಬೇಕು "ಎತ್ತು ಹಸುವಾಗಲಿ" ಎಂದು ಶರಣಾಗತಿ ಮಾಡಿದರೆ ಅದು ಫಲಿಸು ವುದೆ? "ಐದುಜನ ಹೆಣ್ಣುಮಕ್ಕಳು, ಅವರಲ್ಲಿ ಮೂವರು ಗಂಡಾಗಲಿ" ಎಂದು ಶರಣಾಗತಿ ಮಾಡಿದರೆ ಆ ಶರಣಾಗತಿ ಫಲಿಸುತ್ತದೆಯೇ? ಆದ್ದರಿಂದ, ಯಾವಾಗಲೂ ಭಗವತ್ಸಂಕಲ್ಪಕ್ಕೆ ವಿರೋಧವಾಗಿ ಶರಣಾಗತಿ ಮಾಡಬಾರದು.

ಅಲ್ಲದೆ, ಇಲ್ಲಿ ಭರತನ ಶರಣಾಗತಿ ವಿಫಲ ಆಗಲಿಲ್ಲ ಪಾದುಕೆಯನ್ನು ಅನುಗ್ರಹಿಸಿ ಭರತನ ಶರಣಾಗತಿಗೆ ತತ್‌ಕ್ಷಣದ ಫಲವನ್ನು ಅನುಗ್ರಹಿಸಿ ಹದಿನಾಲ್ಕು ವರ್ಷಗಳ ನಂತರ ಬಂದು ಭರತನ ಇಷ್ಟವನ್ನು ಪೂರ್ಣಗೊಳಿಸುವುದಾಗಿ ಅಭಯ ಕೊಟ್ಟ ರಾಮ.

ಇನ್ನೊಂದು ಪ್ರಶ್ನೆ ಇಲ್ಲಿ ಏಳುತ್ತದೆ. ಭರತ ರಾಮನನ್ನು ಹಿಂದಿರುಗಬೇಕು ಎಂದು ಶರಣಾಗತಿ ಮಾಡಿದ. ಶರಣಾಗತವತ್ಸಲ ಎನಿಸಿದ ರಾಮ ಏಕೆ ಭರತನ ಶರಣಾಗತಿಯನ್ನು ಮನ್ನಿಸಿ ಹಿಂದಿರುಗಬಾರದಿತ್ತು? ಶರಣಾಗತರನ್ನು ರಕ್ಷಿಸುವುದು ಶ್ರೇಷ್ಠ ಧರ್ಮ ಅಲ್ಲವೆ? ಎಂಬುದೇ ಆ ಪ್ರಶ್ನೆ.

ಶರಣಾಗತರನ್ನು ರಕ್ಷಿಸುವುದು ಪರಮಧರ್ಮ, ಇದರಲ್ಲಿ ಸಂಶಯವಿಲ್ಲ. ಅದರಂತೆಯೇ ರಾಮ ನಡೆದುಕೊಂಡ. ರಾವಣನ ಬಾಧೆಯನ್ನು ತಡೆಯಲಾರದೆ ದೇವತೆಗಳು ನಾರಾಯಣನಲ್ಲಿ ಮೊದಲೇ ಶರಣಾಗತಿ ಮಾಡಿದ್ದರು. ಬಾಲಕಾಂಡದಲ್ಲೇ ದೇವತೆಗಳ ಶರಣಾಗತಿ ಆಗಿತ್ತು. ಅಯೋಧ್ಯಾಕಾಂಡದಲ್ಲಿ ಭರತನ ಶರಣಾಗತಿ. ಮೊದಲು ಶರಣಾಗತರಾದ ದೇವತೆಗಳನ್ನು ರಕ್ಷಿಸಿ, ಅವರ ಶರಣಾಗತಿಗೆ ಮೊದಲು ಫಲ ಕೊಟ್ಟು ಆಮೇಲೆ ಭರತನ ಶರಣಾಗತಿಗೆ ಫಲ ಕೊಡುತ್ತಾನೆ ರಾಮಚಂದ್ರ. ಅಲ್ಲದೆ ಭರತನ ಶರಣಾಗತಿಗೆ ಮಹತ್ಫಲ ಆಗಲೇ ದೊರಕಿಬಿಟ್ಟಿತು. ಪಾದುಕೆಯ ರೂಪದಲ್ಲಿ! ಪಾದುಕೆಯ ಪ್ರಭಾವ ಎಂಥದು? ಸರ್ವ ಪ್ರಪಂಚವನ್ನೂ ಸೃಷ್ಟಿಸುವವ ಬ್ರಹ್ಮ. ಆ ಬ್ರಹ್ಮನನ್ನು ತನ್ನ ನಾಭಿಯಿಂದ ಸೃಷ್ಟಿಸಿದ ನಾರಾಯಣ. ವಿಶ್ವರೂಪಿಯಾದ ಸಾಕ್ಷಾತ್ ನಾರಾಯಣನನ್ನೇ ಹೊತ್ತಿದೆ ಪಾದುಕೆ, ಅಂಥ ಪಾದುಕೆ ಭರತನ ರಕ್ಷಣೆಗೆ ಬಂದಮೇಲೆ ಭರತನ ಭಾಗ್ಯ ಎಷ್ಟಿದ್ದೀತು?

ಪಾದುಕಾ ಲಾಭದಿಂದ ಭರತ ಎರಡು ಕಿರೀಟಗಳನ್ನು ಧರಿಸುವಂತಾದ. ಲೋಕದಲ್ಲಿ ರಾಜರೆಲ್ಲ ತಲೆಯ ಮೇಲೆ ಒಂದೇ ಕಿರೀಟವನ್ನಿಟ್ಟುಕೊಳ್ಳುತ್ತಾರೆ. ಭರತನೂ ಹಾಗೇ ಒಂದೇ ಕಿರೀಟವನ್ನು ಇಟ್ಟುಕೊಳ್ಳಬೇಕು ಎಂದು ಆಶಿಸಿದಳು ಕೈಕೇಯಿ. ಆದರೆ, ಭರತ ಒಂದೇ ಕಿರೀಟ

ಇಟ್ಟುಕೊಂಡು ತಾಯಿಯನ್ನು ಸಂತೋಷಪಡಿಸುವುದಕ್ಕಿಂತ ಎರಡು ಕಿರೀಟ ಇಟ್ಟುಕೊಂಡು ಇನ್ನೂ ಹೆಚ್ಚಾಗಿ ಸಂತೋಷಪಡಿಸಬೇಕು ಎಂದು ಯೋಚಿಸಿದ. ಅದರಂತೆ ರಾಮನ ಹೇಮ ಭೂಷಿತವಾದ ಎರಡು ಮಣಿಪಾದುಕೆಗಳನ್ನು ಎರಡು ರತ್ನ ಕಿರೀಟಗಳಂತೆ ತಲೆಯ ಮೇಲೆ ಇಟ್ಟುಕೊಂಡ.

ವಿಧಿವತ್ತಾಗಿ ಚಿನ್ನದ ಕೊಡಗಳಿಂದ ಪಾದುಕೆಗೆ ಅಭಿಷೇಕವಾಯಿತು. ಪಾದುಕೆಗೆ ಅಭಿಷೇಕ ಪಾದ ನೀರು ಹೊಳೆಯಾಗಿ ಹರಿದು ಸರಯೂ ನದಿಯನ್ನು ಸೇರಿತು. ಆ ಸರಯೂ ಗಂಗೆಯಲ್ಲಿ ಸೇರಿತು. ಆ ಗಂಗೆ ಸಮುದ್ರವನ್ನು ಸೇರಿತು. ಪಾದುಕಾ ಸಂಚಿತವಾದ ತೀರ್ಥ ಬಿದ್ದು ಸಮುದ್ರವೂ ಪಾವನವಾಯಿತು. ಅದಕ್ಕೇ ರಾಮ ಸಮುದ್ರವನ್ನು ಶೋಷಿಸಲು ಬಾಣ ಹೂಡಿದರೂ ಅದನ್ನು ಪ್ರಯೋಗಿಸಲು ಆಗಲಿಲ್ಲ. ಪಾದುಕೆಯ ಪ್ರಭಾವ ಅಂಥದು.

ಸರಸ್ವತಿಯಲ್ಲಿ ಏಳು ದಿನಗಳು ಸ್ನಾನಮಾಡಿದರೆ ಪಾಪ ಹೋಗುತ್ತದೆ. ಯಮುನೆಯಲ್ಲಿ ಎರಡು ದಿನ ಸ್ನಾನಮಾಡಿದರೆ ಪಾಪಕ್ಷಯವಾಗುತ್ತದೆ. ಗಂಗೆಯಲ್ಲಿ ಒಂದೇ ಒಂದುದಿನ ಸ್ನಾನ ಮಾಡಿದರೆ ಪಾಪವು ಕ್ಷಯಿಸುತ್ತದೆ. ಆದರೆ, ಕಾವೇರಿಯಲ್ಲಿ ತಾಗಿಯೂ ತಾಗದಂತೆ ಸ್ನಾನಮಾಡಿದರೂ ಸಾಕು. ಪಾಪ ನಿಶ್ಶೇಷವಾಗಿ ನಿರ್ಮೂಲವಾಗುತ್ತದೆ. ಕಾವೇರಿಗೆ ಇಷ್ಟೊಂದು ಮಹಿಮೆ ಬರಲು ಪಾದುಕೆಯೊಡನೆ ಶ್ರೀರಾಮನ ದಿವ್ಯಪಾದಗಳು ಕಾವೇರಿ ತಟದಲ್ಲಿ ಸಂಚರಿಸಿದುದೇ ಆಗಿದೆ. ಹೀಗಿದೆ ಪಾದುಕೆಯ ಪ್ರಭಾವ.

ದೊಡ್ಡವರನ್ನು ಆಶ್ರಯಿಸಿದವರಿಗೆ ಯಾವಾಗಲೂ ಮೇಲ್ಮೆಯೇ. ದೊಡ್ಡವರು ಕಾಲಿನಿಂದ ತುಳಿದರೂ ಅದರಿಂದ ಒಳ್ಳೆಯದೇ. ಇದಕ್ಕೆ ಪಾದುಕೆ "ನನ್ನನ್ನು ತುಳಿಯುವ ರಾಮನ ಪಾದಗಳೇ ಗತಿ" ಎಂದು ರಾಮನ ಪಾದಗಳನ್ನೇ ಬಲವಾಗಿ ಆಶ್ರಯಿಸಿತು. ಆದ್ದರಿಂದಲೇ ಪಾದುಕೆ ಸಿಂಹಾಸನದ ಮೇಲೆ ಏರಿ ಅಭಿಷೇಕ ಮಾಡಿಸಿಕೊಂಡಿತು. ವಿಧಿಯ ಬಗೆಯೇ ವಿಚಿತ್ರ ! ದಶರಥ ರಾಮನಿಗೆ ಅಭಿಷೇಕ ಆಗಬೇಕು ಎಂದು ಆಸೆಪಟ್ಟ. ಕೈಕೇಯಿ ಭರತ ರಾಜ ಆಗಬೇಕು ಎಂದಳು. ಆದರೆ ಆದುದು ಪಾದುಕೆಗೆ. ರಾಜ್ಯ ಪಾದುಕೆಗೆ ಬಂದಿತು. ಪಾದುಕಾರಾಜ್ಯವಾಯಿತು.

ಆ ಪಾದುಕಾರಾಜ್ಯ ಹೇಗಿದ್ದಿತು ! ಹದಿನಾಲ್ಕು ವರ್ಷಗಳು ನಡೆದ ಆ ಪಾದುಕಾರಾಜ್ಯದಲ್ಲಿ ಲೇಶವಾದರೂ ಕಷ್ಟ ಇರಲಿಲ್ಲ. ದಶರಥನ ರಾಜ್ಯದಲ್ಲಿ ಕುಟಿಲ ಮಂಥರೆ ಇದ್ದಳು. ರಾಮನ ರಾಜ್ಯದಲ್ಲಿ ನಿಂದೆಮಾಡುವ, ದೋಷ ಹುಡುಕುವ ಅಗಸ ಇದ್ದ. ಆದರೆ, ಪಾದುಕಾರಾಜ್ಯದಲ್ಲಿ ಒಬ್ಬರಾದರೂ ಕೆಟ್ಟವರಿರಲಿಲ್ಲ. ಅಲ್ಲದೆ ಯಾರಿಗೂ ಯಾವ ಕೊರತೆಯೂ ಇರಲಿಲ್ಲ. ರಾಮನ ರಾಜ್ಯದಲ್ಲಿ ಒಂದು ಮಗು ಪ್ರಾಣಬಿಟ್ಟಿತು. "ಅಕಾಲಮರಣಕ್ಕೆ ತುತ್ತಾಯಿತು" ಎಂದು ಬ್ರಾಹ್ಮಣ ಆಕ್ಷೇಪಿಸಿದ. ಆದರೆ, ಪಾದುಕಾರಾಜ್ಯದಲ್ಲಿ ಯಾವ ಆಕ್ಷೇಪಣೆಗೂ ಅವಕಾಶವೇ ಇರಲಿಲ್ಲ. ಪಾದುಕಾರಾಜ್ಯ ಎಷ್ಟು ಅಭಿವೃದ್ಧಿ ಸ್ಥಿತಿಯಲ್ಲಿತ್ತು ಎಂಬುದನ್ನು ಹದಿನಾಲ್ಕು ವರ್ಷಗಳು ಕಳೆದ ಬಳಿಕ ಭರತನೇ ಹೇಳುತ್ತಾನೆ. ವನವಾಸ ಮುಗಿಸಿಕೊಂಡು ಬಂದ ರಾಮನಿಗೆ ನಮಸ್ಕರಿಸಿ ಭರತ ರಾಮನ ಪಾದಗಳಿಗೆ ದಿವ್ಯ ಪಾದುಕೆಗಳನ್ನು ತೊಡಿಸುತ್ತಾ ರಾಜ್ಯವನ್ನು ಒಪ್ಪಿಸುವಾಗ ಹೇಳುತ್ತಾನೆ.

**ಅವೇಕ್ಷತಾಂ ಭವಾನ್ ಕೋಶಂ ಕೋಷ್ಠಾಗಾರಂ ಗೃಹಂ ಬಲಂ ।**
**ಭವತಸ್ತೇಜಸಾ ಸರ್ವಂ ಕೃತಂ ದಶಗುಣಂ ಮಯಾ ॥**

"ಕೋಶ, ಬಲ ಎಲ್ಲವೂ ಮೊದಲಿಗಿಂತ ಹತ್ತರಷ್ಟು ವೃದ್ಧಿಯಾಗಿದೆ. ಇದೆಲ್ಲವನ್ನೂ ಒಪ್ಪಿಸಿಕೋ" ಎನ್ನುತ್ತಾನೆ ಭರತ.

ಹೀಗೆ ರಾಜ್ಯ ಮೊದಲಿಗಿಂತ ಹತ್ತರಷ್ಟು ಅಭಿವೃದ್ಧಿಯಾಗಲು ರಾಮನ ಪಾದುಕೆಗಳ ಪ್ರಭಾವವೇ ಕಾರಣವಾಗಿದೆ.

ಪಾಂಚರಾತ್ರ ಶಾಸ್ತ್ರವು ಐದುಲಕ್ಷ ಶ್ಲೋಕಗಳುಳ್ಳದು. ಅದರಲ್ಲಿ ಅರ್ಧಭಾಗ ಪಾದುಕೆಯನ್ನು "ಗರುಡ" ಎಂದು ಹೇಳುತ್ತದೆ. ಉಳಿದರ್ಧ ಭಾಗ ಪಾದುಕೆಯನ್ನು "ಶೇಷ" ಎಂದು ಹೇಳುತ್ತದೆ. ಅಂದರೆ ಪಾದುಕೆ ಗರುಡ–ಶೇಷರ ಸ್ವರೂಪ.

ಶ್ರೀ ವೈಷ್ಣವ ಸಿದ್ಧಾಂತದ ರೀತ್ಯ ಪಾದುಕೆ "ನಮ್ಮಾಳ್ವಾರ್" ಸ್ವರೂಪ. ಆದಕ್ಕೆಂದೇ ಶ್ರೀವೈಷ್ಣವ ದೇವಾಲಯಗಳಲ್ಲಿ ಪಾದುಕೆಯ ಪೂಜೆ ನಡೆಯುತ್ತದೆ ಪಾದುಕೆಯನ್ನೇ "ಶಠಾರಿ" ಎನ್ನುತ್ತಾರೆ. ಅದನ್ನು ತಲೆಯ ಮೇಲೆ ಇಡುವುದರಿಂದ ಪಾದುಕೆಯ ಅನುಗ್ರಹ ಆಗುತ್ತದೆ ಎಂಬ ತತ್ವ ಅದರಲ್ಲಡಗಿದೆ.

**ರಾಮ ಅತ್ರಿಮಹರ್ಷಿಗಳ ಆಶ್ರಮಕ್ಕೆ ಹೋಗುವುದು.**

ಭರತ ಪಾದುಕೆಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಹಿಂದಿರುಗಿದ. ಭರತನ ಭಕ್ತಿಯನ್ನು ಮೇಲಿಂದ ಮೇಲೆ ನೆನಸಿಕೊಂಡ ರಾಮ. ''ಲಕ್ಷ್ಮಣಾ, ಭರತನನ್ನು ನೋಡು. ಪಾದುಕೆಗಳನ್ನು ತೆಗೆದುಕೊಂಡು ಹಿಂದಿರುಗಿದ ಅಯೋಧ್ಯೆಗೆ. ನನ್ನಲ್ಲಿ ಎಷ್ಟು ಪ್ರೇಮ, ಭಕ್ತಿ, ಗೌರವ "ಹೋಗು ಎಂದೊಡನೆ ಹಿಂದಿರುಗಿದ" ಎಂದ.

"ಅಣ್ಣಾ, ಭರತನನ್ನು ಮಾತ್ರ ಪ್ರಶಂಸಿಸಿದಿರಿ. ನಾನು ನಿಮ್ಮೊಂದಿಗೆ ಇದೇನೆ. ನಿಮ್ಮ ಸೇವೆಯೇ ನನ್ನ ಪರಮ ಭಾಗ್ಯ ಎಂದುಕೊಂಡಿದೇನೆ. ನನ್ನ ಕೆಲಸ ಮಾತ್ರ ನಿನ್ನ ಮನಸ್ಸಿಗೆ ಬರಲಿಲ್ಲ."

"ಲಕ್ಷ್ಮಣಾ, ವ್ಯತ್ಯಾಸವಾಗಿ ತಿಳಿಯಬೇಡಪ್ಪಾ ನೀನು, ಭರತ, ಶತ್ರುಘ್ನ ಮೂವರೂ ನನ್ನ ಪ್ರಾಣಗಳು. ಭರತ ನನಗೆ ತಮ್ಮ. ಆದರೆ. ನೀನು ನನಗೆ ತಂದೆ ಲಕ್ಷ್ಮಣಾ, ತಂದೆಯ ಸ್ಥಾನದಲ್ಲಿದ್ದುಕೊಂಡು ತಂದೆ ಇದ್ದಿದ್ದರೆ ಈಗ ನನ್ನನ್ನು ಹೇಗೆ ನೋಡಿಕೊಳ್ಳುತ್ತಿದ್ದರೋ ಹಾಗೆ ನೀ ಸ್ವಲ್ಪವೂ ಲೋಪವಾಗದಂತೆ ನನ್ನನ್ನು ನೋಡಿಕೊಳ್ಳುತ್ತಿರುವೆ" ಎಂದ ರಾಮ.

ಅಲ್ಲಿದ್ದ ಋಷಿಗಳೆಲ್ಲ ರಾಮನತ್ತ ಸಂಕೇತಮಾಡಿ ತಮ್ಮೊಳಗೇ ಏನೋ ಹೇಳಿಕೊಳ್ಳುತ್ತಿದ್ದರು. ರಾಮ ಆ ಋಷಿಗಳ ಕುಲಪತಿಯ ಕಡೆಗೆ ಹೋದ. ವಿನಯದಿಂದ ಕೇಳಿದ ''ಸ್ವಾಮೀ ತಾವು ನನ್ನನ್ನು ತೋರಿಸಿ ಏನೋ ಮಾತಾಡಿಕೊಳ್ಳುತ್ತಿರುವಿರಲ್ಲ ಏಕೆ ? ನನ್ನಿಂದ ನಿಮಗೆ ಏನಾದರೂ ಅಪಚಾರವಾಯಿತೆ ? ನನ್ನ ತಮ್ಮ ಲಕ್ಷ್ಮಣ ಏನಾದರೂ ನಿಮಗೆ ತೊಂದರೆ ಕೊಟ್ಟನೆ ? ಅಥವಾ ಸೀತೆಯಿಂದ ಏನಾದರೂ ನಿಮ್ಮ ಧರ್ಮಕ್ಕೆ ಚ್ಯುತಿ ಏರ್ಪಟ್ಟಿತೆ ? ಏನಾಯಿತು ನಮ್ಮಿಂದ, ತಿಳಿಸಿ" ಎಂದ.

ಋಷಿವರ್ಯರು ''ರಾಮಾ, ಧರ್ಮಮೂರ್ತಿಗಳೆನಿಸಿದ ನಿಮ್ಮಿಂದ ನಮಗೆ ತೊಂದರೆ ಒದಗುವುದು ಅಂದರೆ ಏನು? ಅದೆಲ್ಲ ಇಲ್ಲ. ರಾವಣನ ಅನುಚರರಾದ ರಾಕ್ಷಸರಿಂದ ತೊಂದರೆ ಆಗುತ್ತಿದೆ. ಅವರಿಂದ ತಪಸ್ಸಿಗೆ ವಿಘ್ನ ಬರುತ್ತಿದೆ. ಆದರಿಂದ ನಾವು ಈ ಪ್ರದೇಶವನ್ನು ಬಿಟ್ಟು ಹೋಗುತ್ತಿದೇವೆ. ನೀನೂ ಈ ಪ್ರದೇಶವನ್ನು ಬಿಟ್ಟುಹೋದರೆ ಒಳ್ಳೆಯದು'' ಎಂದರು.

ರಾಮ ಯೋಚಿಸಿದ. "ಇದೀಗ ತಾನೇ ಭರತ, ತಾಯಂದಿರು ಸೈನ್ಯ ಎಲ್ಲ ಈ ಪ್ರದೇಶಕ್ಕೆ

ಬಂದಿದೆ. ಆದ್ದರಿಂದ ನನ್ನ ಬಂಧು-ಪ್ರಜೆಗಳ ನೆನಪು ದಿನದಿನವೂ ಉಂಟಾಗುತ್ತದೆ. ಆ ನೆನಪು ಶೋಕವನ್ನು ಉಂಟುಮಾಡುತ್ತದೆ. ಆದ್ದರಿಂದ, ಈ ಪ್ರದೇಶವನ್ನು ಬಿಟ್ಟು ಹೋಗುವುದೇ ಸರಿ" ಎಂದುಕೊಂಡು ಸೀತಾಲಕ್ಷ್ಮಣರೊಡಗೂಡಿ ಚಿತ್ರಕೂಟದಿಂದ ಹೊರಟ ರಾಮ.

ಕಾಲ್ನಡಿಗೆಯಲ್ಲಿ ಯಾತ್ರೆ ನಡೆಸುವುದು ಲಾಭಕರ. ಯಥಾವತ್ತಾಗಿ ಪ್ರತಿಯೊಂದು ದೇಶದ ಜನರ, ಮೃಗ ಪಕ್ಷಿಗಳ, ನೆಲದ ಪರಿಚಯ ಆಗುತ್ತದೆ. ಸೃಷ್ಟಿ ವೈಚಿತ್ರ್ಯದ ಬಗ್ಗೆ ಅರಿವು ಮೂಡುತ್ತದೆ.

ಸೀತಾರಾಮಲಕ್ಷ್ಮಣರು ಅತ್ರಿ ಮಹರ್ಷಿಗಳ ಆಶ್ರಮಕ್ಕೆ ಬಂದರು. ಕಾಮ, ಕ್ರೋಧ, ಲೋಭ – ಈ ಮೂರನ್ನೂ ನಿಗ್ರಹಿಸಿದ ಮಹಾನುಭಾವರು ಅತ್ರಿ ಮಹರ್ಷಿಗಳು. ಅವರ ಪತ್ನಿ ಅನಸೂಯೆ ಅಸೂಯೆಯಿಲ್ಲದವಳು. ಇವರಿಬ್ಬರಿಗೂ ಸಾಕ್ಷಾತ್ ನಾರಾಯಣನೇ ದತ್ತಾತ್ರೇಯ ನಾಗಿ ಅವತರಿಸಿದ. ಇಂಥ ಋಷಿದಂಪತಿಗಳಿಗೆ ಸೀತಾರಾಮ ಲಕ್ಷ್ಮಣರು ನಮಿಸಿದರು. ಅತ್ರಿ ಮಹರ್ಷಿಗಳು ಸೀತೆಯನ್ನು ತಮ್ಮ ಪತ್ನಿ ಅನಸೂಯೆಯ ಹತ್ತಿರ ಹೋಗುವಂತೆ ಹೇಳಿದರು. ಪತ್ನಿಯ ಮಹತ್ವದ ಬಗ್ಗೆ ಹೇಳಿದರು "ರಾಮಾ, ಅನಸೂಯೆ ಸಾಮಾನ್ಯಳಲ್ಲ. ತಪಸ್ಸಿದ್ಧಿಯನ್ನು ಪಡೆದ ಪತಿವ್ರತೆ. ಒಮ್ಮೆ ಸೂರ್ಯನನ್ನೇ ತನ್ನ ತಪಶ್ಶಕ್ತಿಯಿಂದ ಉದಯಿಸದಂತೆ ತಡೆದಳು. ಇನ್ನೊಮ್ಮೆ ಅಕಾಲ ಒದಗಿ ಮಳೆಯೇ ಇಲ್ಲದೆ ಇದ್ದಾಗ ತನ್ನ ಶಕ್ತಿಯಿಂದ ಮಳೆಯನ್ನು ತರಿಸಿದ ತಪೋನಿಷ್ಠೆ'' ಎಂದರು.

ಸೀತೆಗೆ ಕಾಡಿಗೆ ಬಂದಾಗ ಹದಿನೆಂಟು ವರ್ಷ ವಯಸ್ಸು. ಹದಿನೆಂಟರ ಬಾಲೆ ತನ್ನನ್ನು ನಮಸ್ಕರಿಸುತ್ತಿರುವುದನ್ನು ಕಂಡ ವೃದ್ಧೆ ಅನಸೂಯೆ ಸೀತೆಯನ್ನು ಆಶೀರ್ವದಿಸಿದಳು. ''ಜನಕ ರಾಜಕುಮಾರಿ, ಸುಕುಮಾರಿಯಾದ ನೀನು ಕಷ್ಟವನ್ನು ಲೆಕ್ಕಿಸದೆ ಪತಿಯೊಡನೆ ಕಾಡಿಗೆ ಬಂದೆ. ನಿನ್ನಂಥ ಪತಿವ್ರತೆ ವಿರಳ'' ಎಂದು ಪ್ರಶಂಸಿಸಿದಳು. ಅದಕ್ಕೆ ಸೀತೆ ವಿನಯದಿಂದ "ತಾಯೆ ಇದ ರಲ್ಲಿ ನನ್ನ ಹೆಚ್ಚುಗಾರಿಕೆ ಏನೂ ಇಲ್ಲ. ರಾಮ ಅಂಥವನು. ಧರ್ಮ ಸತ್ಯ ಎರಡೂ ಅವನ ಎರಡು ಕಣ್ಣುಗಳು.

ಅವನ ಗುಣಗಳೂ ಅಂಥವು. ನನ್ನ ಸ್ಥಾನದಲ್ಲಿ ಯಾರೇ ಇದ್ದರೂ ರಾಮನನ್ನು ನನ್ನಂತೆಯೇ ಅನುಸರಿಸುತ್ತಿದ್ದರು. ರಾಮನೊಡನೆ ಇರುವುದೇ ಸ್ವರ್ಗ, ಅದೇ ಮೋಕ್ಷ, ಅದು ಅವನ ಹಿರಿಮೆ" ಎಂದಳು.

ಸೀತೆಯಂತೆ ಪತಿವ್ರತೆಯಾಗಿರಬೇಕು ಎಂದು ಹೇಳಿದರೆ ಹೆಣ್ಣುಮಕ್ಕಳು ಹೇಳುತ್ತಾರೆ "ಪುರುಷರೆಲ್ಲ ರಾಮನಂತಿರಲಿ. ಆಗ ಸೀತೆಯಂತೆ ಇರಲು ಸಾಧ್ಯವಾಗುತ್ತದೆ" ಎಂದು !

ಅನಸೂಯೆ ಸೀತೆಯನ್ನು ಕುರಿತು "ನಿನ್ನ ವಿವಾಹದ ಕಥೆ ಹೇಳು, ಕೇಳುತ್ತೇನೆ" ಎಂದಳು.

ಸೀತೆ ತನ್ನ ಮದುವೆಯ ಕಥೆಯನ್ನು ಹೇಳಿದಳು. ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ಕರೆತಂದುದು, ರಾಮ ಶಿವಧನುಸ್ಸನ್ನು ಮುರಿದುದು ತನ್ನ ಮದುವೆ ರಾಮನೊಂದಿಗೆ ನಡೆದುದು ಎಲ್ಲವನ್ನೂ ವಿವರವಾಗಿ ಹೇಳಿದಳು. ಸೀತಾಕಲ್ಯಾಣವನ್ನು ಕೇಳಿದಳು ಅನಸೂಯೆ. ಸೀತೆಯೇ ತನ್ನ ಕಲ್ಯಾಣವನ್ನು ವಿವರಿಸಿದ್ದು ಅನಸೂಯೆಗೆ ಸಂತೋಷವನ್ನುಂಟುಮಾಡಿತು. ಅನಸೂಯೆ ಸೀತೆಗೆ ಉತ್ತಮವಾದ ಪಟ್ಟೆಮಡಿಯನ್ನೂ, ದಿವ್ಯವಾದ ಆಭರಣಗಳನ್ನೂ, ಯಾವಾಗಲೂ ಬಾಡದೆ ಇರುವ ಹೂವನ್ನೂ, ಸುಗಂಧಯುಕ್ತವಾದ ಲೇಪನವನ್ನೂ ಕೊಟ್ಟಳು. ತಾನೇ ಕೈಯಾರೆ

ಸೀತೆಗೆ ಅಲಂಕಾರಮಾಡಿದಳು. "ಆಹಾ! ವೈದೇಹಿ, ಈ ಆಭರಣಗಳು, ವಸ್ತ್ರಗಳು ಇಂದು ಸಾರ್ಥಕವಾದವು. ಎಷ್ಟು ಶೋಭೆಯಿಂದ ಬೆಳಗುತ್ತಿರುವೆ ಸೀತೆ ! ಹೋಗು, ಸಾಯಂಕಾಲವಾಗುತ್ತ ಬಂತು. ನಿನ್ನ ಅಲಂಕಾರವನ್ನು ರಾಮನಿಗೆ ತೋರಿಸು" ಎಂದಳು,

ಸೀತೆ ಭಕ್ತಿಯಿಂದ ಅನಸೂಯೆಗೆ ನಮಸ್ಕರಿಸಿ ಅವಳ ಆಶೀರ್ವಾದವನ್ನು ಪಡೆದು ರಾಮನ ಹತ್ತಿರ ಬಂದಳು. ಹೊಸದಾಗಿ ಅಲಂಕರಿಸಿಕೊಂಡು ಇಮ್ಮಡಿ ಶೋಭಿಸುತ್ತಿದ್ದ ಸೀತೆಯನ್ನು ನೋಡಿ ರಾಮ ಬಹಳ ಸಂತೋಷಪಟ್ಟ. ಅತ್ರಿಮಹರ್ಷಿಗಳಿಗೆ ವಂದಿಸಿ ಅವರ ಅನುಜ್ಞೆಯನ್ನು ಪಡೆದು ಅಲ್ಲಿಂದ ಹೊರಟರು.

ಸೀತಾರಾಮಲಕ್ಷ್ಮಣರು ಅತ್ರಿಮಹರ್ಷಿಗಳ ಆಶ್ರಮದಿಂದ ಹೊರಟು ಘೋರವಾದ ದಂಡ-ಕಾರಣ್ಯವನ್ನು ಪ್ರವೇಶಿಸಿದರು.

—o—

# ಅರಣ್ಯಕಾಂಡ

**ಪ್ರವಿಶ್ಯ ತು ಮಹಾರಣ್ಯಂ ದಂಡಕಾರಣ್ಯಮಾತ್ಮವಾನ್ ।**
**ದದರ್ಶ ರಾಮೋ ದುರ್ಧರ್ಷಸ್ತಾಪಸಾಶ್ರಮ ಮಂಡಲಮ್ ॥**

ಬಾಲಕಾಂಡದಲ್ಲಿ ಪರತತ್ವನಿರೂಪಣೆ, ಅಯೋಧ್ಯಾಕಾಂಡದಲ್ಲಿ ಸೌಶೀಲ್ಯಾದಿ ಗುಣಗಳ ಪ್ರಕಾಶ, ಅರಣ್ಯಕಾಂಡದಲ್ಲಿ "ಶರಣಾಗತ ರಕ್ಷಣೆಯೇ ಪರಮಧರ್ಮ" ಎಂಬ ತತ್ವವನ್ನು ಪ್ರಕಾಶ ಪಡಿಸಿದರು ವಾಲ್ಮೀಕಿ. ಅರಣ್ಯವನ್ನು ರಾಮ ಪ್ರವೇಶಿಸುವುದರಲ್ಲೂ ಔಚಿತ್ಯ ಅಡಗಿದೆ.

**ಅಗ್ರತಃ ಪ್ರಯಯೌ ರಾಮಃ ಸೀತಾ ಮಧ್ಯೇ ಸುಮಧ್ಯಮಾ ।**
**ಪೃಷ್ಠತಸ್ತು ಧನುಃಪಾಣಿಃ ಲಕ್ಷ್ಮಣೋಽನುಜಗಾಮ ಹ ॥**

ಪ್ರಣವೋಪಾಸನೆ ಮಾಡುವ ಋಷಿಗಳಿಗೆ ಪ್ರತ್ಯಕ್ಷವಾಗಿ ಅದರರ್ಥವನ್ನು ತೋರಿಸಲು ಅಕಾರವಾಚ್ಯನಾದ ತಾನು ಮುಂದೆಯೂ, ಉಕಾರವಾಚ್ಯಳಾದ ಸೀತೆಯು ಮಧ್ಯೆಯೂ, ಮಕಾರ ವಾಚ್ಯನಾದ ಲಕ್ಷ್ಮಣನು ಹಿಂದೆಯೂ ಹೋಗಿ ಅವರಿಗೆ ದರ್ಶನ ಕೊಟ್ಟರು.

ರಾಮ ಮುಂದೆ, ಮಧ್ಯೆ ಸೀತೆ, ಹಿಂದೆ ಲಕ್ಷ್ಮಣ, ಈ ಕ್ರಮದಲ್ಲಿ ಮಹಾ ಅರಣ್ಯವನ್ನು ಪ್ರವೇಶಿಸಿದರು.

"ಅರಣ್ಯ ಎಂಬುದೇ ಬೃಹದಾರಣ್ಯಕ ಉಪನಿಷತ್ತು. ಅದರಲ್ಲಿ ಪ್ರವೇಶಿಸಿರುವವ ಪ್ರಣವ ವಾಚ್ಯನಾದ ಪರಮಪುರುಷ. ಪ್ರಣವಕ್ಕೆ ಮೂರು ಅಕ್ಷರಗಳು. ಅ, ಉ, ಮ – ಈ ಮೂರು ಅಕ್ಷರಗಳ ಸಮ್ಮಿಲನವೇ ಪ್ರಣವ. "ಅ" ಕಾರವಾಚ್ಯನಾದ ಪರಬ್ರಹ್ಮಸ್ವರೂಪ ರಾಮ ಅರಣ್ಯದಲ್ಲಿರುವ ಋಷಿಗಳಿಗೆ ದರ್ಶನಭಾಗ್ಯವನ್ನು ಕರುಣಿಸಲು ಮುಂದೆಹೋದ. ಅವನ ಹಿಂದೆ "ಉ"ಕಾರ ವಾಚ್ಯಳೆನಿಸಿದ ಲಕ್ಷ್ಮೀ ಸ್ವರೂಪಿಣೀ ಸೀತೆ. ಅವಳ ಹಿಂದೆ "ಮ"ಕಾರವಾಚ್ಯನಾದ ಜೀವ ಲಕ್ಷ್ಮಣ.

ಹೀಗೆ ಹೋಗುವುದರಲ್ಲಿ ಇನ್ನೊಂದು ತತ್ವ ಅಡಗಿದೆ. "ಮ"ಕಾರವಾಚ್ಯ ಜೀವನಿಗೆ "ಅ"ಕಾರ ವಾಚ್ಯ ಪರಮಾತ್ಮನ ಸಾಕ್ಷಾತ್ಕಾರ ಆಗಬೇಕಾದರೆ ಮಧ್ಯೆ "ಉ"ಕಾರವಾಚ್ಯಳಾದ ಪುರುಷಕಾರ ಸ್ವರೂಪಳೆನಿಸಿದ ಲಕ್ಷ್ಮಿಯ ಅನುಗ್ರಹ ಇರಬೇಕು. ರಾಮ ಸೀತಾ ಲಕ್ಷ್ಮಣರು ಅರಣ್ಯವನ್ನು ಪ್ರವೇಶಿಸುತ್ತಿದ್ದಂತೆ ತಪಸ್ವಿಗಳ ಆಶ್ರಮಗಳನ್ನು ಕಂಡರು.

ಆಶ್ರಮಗಳಲ್ಲಿದ್ದ ತಪಸ್ವಿಗಳೂ ರಾಮನನ್ನು ಕಂಡರು. ರಾಮನ ದಿವ್ಯ ಸೌಂದರ್ಯಕ್ಕೆ ಮುಗ್ಧರಾದರು. ಆ ಅಂದವಾದ ಕೇಶಪಾಶ, ನೀಲಮೇಘವನ್ನು ಧಿಕ್ಕರಿಸುವ ಮುಖವರ್ಣ, ತಾವರೆಯನ್ನು ಹೋಲುವ ಕೆಂಪಾದ ವಿಶಾಲನೇತ್ರಗಳು, ಮೊಣಕಾಲಿನವರೆಗೆ ನೀಳವಾದ ದೀರ್ಘಬಾಹುಗಳು, ಅದ್ಭುತವಾದ ದೇಹಕಾಂತಿ ಇವನ್ನೆಲ್ಲ ನೋಡುತ್ತ ಋಷಿಗಳು ತಮ್ಮನ್ನೇ ಮರೆತರು. ಅದುವರೆಗೆ ಅನುಷ್ಠಿಸುತ್ತಿದ್ದ ವೇದೋಕ್ತ ಕರ್ಮಗಳನ್ನು ನಿಲ್ಲಿಸಿದರು. ಹಿಂಡು ಹಿಂಡಾಗಿ ಓಡೋಡಿ ರಾಮನನ್ನು ನೋಡಲು ಬಂದರು. ಇಂದೀವರಶ್ಯಾಮನಾದ, ಕಂದರ್ಪನನ್ನು ಮೀರಿಸುವ, ಎಣೆಯಿಲ್ಲದ ಸೌಂದರ್ಯವುಳ್ಳ ರಾಮನನ್ನು ನೋಡಿ ವಿಸ್ಮಿತರಾದರು. ತಮ್ಮೊಳಗೇ

ಮಾತಾಡಿಕೊಂಡರು. "ಆಹಾ ! ಎಂಥ ಸೌಂದರ್ಯ. ರತ್ನದಂತೆ ದೇಹಕಾಂತಿ ಜ್ವಲಿಸುತ್ತಿದೆ" ಎಂದರು.

## ಪರಮಾತ್ಮ ಹಾಗೂ ಅನರ್ಘ್ಯ ರತ್ನ

ರತ್ನಕ್ಕೆ ಎರಡು ದೊಡ್ಡ ಗುಣ. ಒಂದು ದೂರದಿಂದಲೇ ಅದು ತನ್ನ ಪ್ರಕಾಶವನ್ನು ಬೀರುತ್ತದೆ. ಅದರಂತೆ ರಾಮನೂ ದೂರದಲ್ಲಿ ಬರುತ್ತಿದ್ದಂತೆಯೇ ತನ್ನ ಪ್ರಭಾವವನ್ನು ಬೀರುತ್ತ ನಡೆದ. ಅಲ್ಲದೆ ರತ್ನ ಉತ್ತಮರಲ್ಲಿಯೇ ಇರುವಂಥದು. ಹೆಚ್ಚು ಶ್ರೀಮಂತರು ಮಾತ್ರ ಅನರ್ಘ್ಯವಾದ ರತ್ನವನ್ನು ಕೊಳ್ಳಬಲ್ಲರು. ಅದರಂತೆ ಪರತತ್ವವೂ ಎಲ್ಲರಿಗೂ ಗೋಚರವಾಗದು. ತಪೋಧನರಾದವರಿಗೆ ಮಾತ್ರ ಆ ಪರತತ್ವವನ್ನು ತಿಳಿಯಲು ಸಾಧ್ಯ. ಎರಡನೆಯದಾಗಿ, ರತ್ನವನ್ನು ದಳ್ಳಾಳಿಯ ಮೂಲಕ ಕೊಳ್ಳಬೇಕು. ರತ್ನವ್ಯಾಪಾರಿಗೂ, ಕೊಂಡುಕೊಳ್ಳುವವನಿಗೂ ಮಧ್ಯೆ ಒಬ್ಬ "ದಳ್ಳಾಳಿ" ಇರಬೇಕು. ರತ್ನದ ವಿಷಯವನ್ನು ತಿಳಿದ ಉತ್ತಮ ರತ್ನ ಪರೀಕ್ಷಕನಿಂದ ದಳ್ಳಾಳಿಯ ಸಹಾಯದಿಂದ ರತ್ನವನ್ನು ಕೊಂಡುಕೊಳ್ಳಲು ಸಾಧ್ಯ.

ಹಾಗೆಯೇ ಪರತತ್ವವನ್ನು ತಿಳಿದ "ಆಚಾರ್ಯ" ಎಂಬ ದಳ್ಳಾಳಿಯ ಮೂಲಕವೇ ಶಿಷ್ಯ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯ. ಋಷಿಗಳೆಲ್ಲ ರಾಮನ ಅಪ್ರತಿಮ ಸೌಂದರ್ಯವನ್ನು ನೋಡಿದರು. ಮನಸಾರೆ ಸವಿದರು. ಈ ಸೌಂದರ್ಯಕ್ಕೆ "ಕುಂದಾಗದಿರಲಿ" ಎಂದು ರಾಮನಿಗೆ ಎಲ್ಲರೂ ಮಂಗಳಾಶಾಸನ ಮಾಡಿದರು ತಪೋಧನರಾದ ಋಷಿಗಳು ರಾಮನನ್ನು ಸತ್ಕರಿಸಿದರು. "ನಗರದಲ್ಲಿದ್ದರೂ ವನದಲ್ಲಿದ್ದರೂ ನೀನೇ ನಮಗೆ ರಾಜ, ನಾವು ನಿನ್ನ ರಕ್ಷಣೆಗೆ ಒಳಪಟ್ಟಿದೇವೆ" ಎಂದು ಹೇಳಿದರು. ರಾಮ ತಾನು ರಕ್ಷಿಸುವುದಾಗಿ ಅವರಿಗೆ ಆಶ್ವಾಸನ ವಿತ್ತು, ಮುಂದೆ ನಡೆದ.

## ವಿರಾಧ ವಧೆ

ಅರಣ್ಯದಲ್ಲಿ ಮುಂದೆ ಹೋಗುತ್ತಿದ್ದಂತೆ ಸೀತಾರಾಮಲಕ್ಷ್ಮಣರು ಕಪ್ಪು ಬೆಟ್ಟದಂಥ ಆಕೃತಿಯೊಂದನ್ನು ನೋಡಿದರು. ಮೆಲ್ಲಮೆಲ್ಲಗೆ ಆ ಬೆಟ್ಟ ಚಲಿಸುತ್ತಾ ಇವರ ಸಮೀಪಕ್ಕೇ ಬರುತ್ತಿತ್ತು. ನೋಡಿದರೆ ಅದು ಬೆಟ್ಟ ಅಲ್ಲ ''ವಿರಾಧ" ಎಂಬ ಘೋರ ರಾಕ್ಷಸ. ಬೆಟ್ಟದಂಥ ಆಕಾರ ಅವನದು. ಕಂಬದಂಥ ಕೈಯಲ್ಲಿ ರುದ್ರನಂತೆ ಶೂಲವನ್ನು ಹಿಡಿದಿದ್ದ. ಶೂಲದ ಮೂರು ಕೊಕ್ಕೆಗಳಿಗೂ ಅಸಂಖ್ಯ ಪ್ರಾಣಿಗಳನ್ನು ಸಿಕ್ಕಿಸಿಕೊಂಡಿದ್ದ.

ಮೂರು ಸಿಂಹ, ನಾಲ್ಕು ಹುಲಿ, ಹತ್ತು ಜಿಂಕೆ, ಒಂದು ಆನೆ – ಇವುಗಳನ್ನು ಶೂಲಕ್ಕೆ ಚುಚ್ಚಿದ್ದ ಘೋರವಾದ ರೂಪ. ರಾಮಲಕ್ಷ್ಮಣರ ಸಮೀಪಕ್ಕೆ ಬಂದ. "ಓಹೋ ! ನೋಡಿದರೆ ಮುನಿವೇಷ. ಆದರೆ ನಡೆಸುವ ಕಾರ್ಯ ಅನಾಚಾರಯುಕ್ತವಾದದು, ನೀವು ಇಬ್ಬರು ಮುನಿವೇಷಧಾರಿಗಳು ಒಬ್ಬ ಚೆಲುವೆಯೊಡನೆ ರಮಿಸುತ್ತ ಬರುತ್ತಿರುವಿರಿ ಅಲ್ಲವೆ ? ನಾ ಸಾಮಾನ್ಯನಲ್ಲ. "ವಿರಾಧ" ಎಂದು ನನ್ನ ಹೆಸರು. ನಿಮಗೆ ಬದುಕಬೇಕು ಎಂದು ಆಸೆ ಇದ್ದರೆ ಈ ಹೆಣ್ಣನ್ನು ನನಗೆ ಒಪ್ಪಿಸಿ" ಎನ್ನುತ್ತಾ ಸೀತೆಯನ್ನು ಎತ್ತಿಕೊಂಡು ಓಡತೊಡಗಿದ. ಸೀತೆ "ರಾಮಾ-ಲಕ್ಷ್ಮಣಾ" ಎಂದು ಅಳತೊಡಗಿದಳು.

ರಾಮಲಕ್ಷ್ಮಣರು ವಿರಾಧನನ್ನು ಹಿಂಬಾಲಿಸಿದರು. ಸ್ವಲ್ಪ ದೂರ ಹೋದ ಮೇಲೆ ವಿರಾಧ

ಸೀತೆಯನ್ನು ಕೆಳಗಿಳಿಸಿ ರಾಮಲಕ್ಷ್ಮಣರನ್ನು ಭುಜದ ಮೇಲೆ ಹೊತ್ತುಕೊಂಡು ಓಡತೊಡಗಿದ. ಇತ್ತ ಸೀತೆ ಪರಿತಪಿಸತೊಡಗಿದಳು.

ಸ್ವಲ್ಪದೂರ ಹೋದಮೇಲೆ ರಾಮ ವಿರಾಧನ ಎಡತೋಳನ್ನೂ ಲಕ್ಷ್ಮಣ ಬಲತೋಳನ್ನೂ ಕತ್ತಿಯಿಂದ ಕತ್ತರಿಸಿದರು. ತೋಳು ಕತ್ತರಿಸಿದ ಒಡನೆಯೇ ವಿರಾಧ "ಕೌಸಲ್ಯಾ ಪುತ್ರ! ನೀ ರಾಮ ಎಂಬುದನ್ನು ಇದುವರೆಗೆ ಏಕೆ ಮರೆಸಿದೆ ? ಏಕೆ ನೀ ನನ್ನ ಪರಿಚಯ ಮಾಡಿಕೊಳ್ಳಲಿಲ್ಲ" ಎಂದು ಹೇಳಿ ಜ್ಞಾನಯುಕ್ತವಾದ ಮಾತುಗಳನ್ನು ಆಡತೊಡಗಿದ.

"ರಾಮ, ನೀನು ನಿನ್ನ ವಿಷಯ ಹೇಳದಿದ್ದರೂ ನಾನೇ ನಿನ್ನನ್ನು ಅರಿತೆ. ನಾನು ತುಂಬುರು ಎಂಬ ಗಂಧರ್ವ. ಕುಬೇರನ ಶಾಪದಿಂದ ಈ ರೂಪವನ್ನು ಧರಿಸುವಂತಾದೆ. ಕುಬೇರ ನನಗೆ ವಿಶಾಪವನ್ನು ಅನುಗ್ರಹಿಸುತ್ತಾ ರಾಮ-ಲಕ್ಷ್ಮಣರು ಅರಣ್ಯಕ್ಕೆ ಬಂದು ನಿನ್ನನ್ನು ಅನುಗ್ರಹಿಸಿದಾಗ ನಿನ್ನ ಈ ರೂಪ ಹೋಗಿ ಮೊದಲಿನ ರೂಪ ಪಡೆಯುತ್ತೀಯೆ ಎಂದಿದ್ದ. ಅದರಂತೆ ದಶರಥನ ಮಕ್ಕಳಾದ ನೀವು ಬಂದಿರುವಿರಿ. ಶಸ್ತ್ರಾಸ್ತ್ರಗಳಿಂದ ಸಾಯುವವನಲ್ಲ ನಾನು. ನನಗೆ ಹಾಗೆ ವರ ಉಂಟು. ಆದ್ದರಿಂದ ದೊಡ್ಡ ಹಳ್ಳ ತೆಗೆದು ಅದರಲ್ಲಿ ನನ್ನನ್ನು ಹೂತುಬಿಡಿ. ನನಗೆ ಸದ್ಗತಿ ಆಗುತ್ತದೆ" ಎಂದ ವಿರಾಧ.

ಅದರಂತೆ ಲಕ್ಷ್ಮಣ ದೊಡ್ಡ ಹಳ್ಳ ತೋಡಿದ. ವಿರಾಧನನ್ನು ಅದರಲ್ಲಿ ಹೂತು ಸಂಸ್ಕಾರ ಮಾಡಿದರು ರಾಮ ಲಕ್ಷ್ಮಣರು. ವಿರಾಧ ದಿವ್ಯರೂಪವನ್ನು ಪಡೆದು ರಾಮಲಕ್ಷ್ಮಣರನ್ನು ಕೊಂಡಾಡುತ್ತಾ ತನ್ನ ಲೋಕಕ್ಕೆ ಹೋದ.

### ಶರಭಂಗ ಮೋಕ್ಷ

ವಿರಾಧವಧೆಯಾದ ನಂತರ ರಾಮನು ಸೀತಾಲಕ್ಷ್ಮಣರೊಡಗೂಡಿ ಶರಭಂಗ ಮಹಾಮುನಿಗಳ ಆಶ್ರಮದತ್ತ ನಡೆದ ದೂರದಿಂದಲೇ ಶರಭಂಗರ ಆಶ್ರಮವನ್ನು ಕಂಡ. ಆಶ್ರಮದ ಹೊರಗೆ ನೆಲದಿಂದ ನಾಲ್ಕಂಗುಲ ಮೇಲಕ್ಕೆ ಪ್ರಕಾಶಮಾನವಾದ ಕಾಂಚನ ರಥ ನಿಂತಿದ್ದುದನ್ನು ಕಂಡ ರಾಮ. ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಶರಭಂಗರ ಆಶ್ರಮಕ್ಕೆ ಇಂದ್ರ ಬಂದಂತಿದೆ. ಅವರಿಬ್ಬರೂ ಮಾತಾಡುತ್ತಿರುವ ವೇಳೆ ಮಧ್ಯೆ ನಾವು ಪ್ರವೇಶಿಸುವುದು ಅನುಚಿತವಾದೀತು. ಇಲ್ಲೇ ಸ್ವಲ್ಪ ಕಾಲ ಇರೋಣ" ಎಂದ.

ಇಂದ್ರ ''ರಾವಣನ ಸಂಹಾರ ಶೀಘ್ರವಾಗಿ ಆಗಬೇಕಾಗಿದೆ. ಅದಕ್ಕಾಗಿ ರಾಮನನ್ನು ಅಗಸ್ತ್ಯರ ಸಮೀಪಕ್ಕೆ ಕಳುಹಿಸಿಕೊಡಿ'' ಎಂದು ಶರಭಂಗರಿಗೆ ಹೇಳಿ ಹೊರಟ.

ಸೀತಾರಾಮಲಕ್ಷ್ಮಣರು ಬಂದರು. ಶರಭಂಗರಿಗೆ ನಮಸ್ಕರಿಸಿದರು. ತಪೋಧನರಾದ ಮುನಿವರ್ಯರು ಯಥೋಚಿತವಾಗಿ ಸೀತಾರಾಮಲಕ್ಷ್ಮಣರನ್ನು ಸೇವಿಸಿದರು. ರಾಮ ವಿನಯದಿಂದ "ದಂಡಕಾರಣ್ಯದಲ್ಲಿ ತಂಗಲು ನಮಗೆ ಸರಿಯಾದ ಸ್ಥಳ ತೋರಿಸಿ" ಎಂದು ಕೇಳಿದ. ಶರಭಂಗರು ರಾಮನನ್ನು ಸುತೀಕ್ಷ್ಣಾಶ್ರಮಕ್ಕೆ ಹೋಗುವಂತೆ ಹೇಳಿದರು. "ರಾಮಾ, ಇದೀಗ ತಾನೇ ದೇವೇಂದ್ರ ನನ್ನನ್ನು ತನ್ನ ಲೋಕಕ್ಕೆ ಕರೆದೊಯ್ಯಲು ಬಂದುದಾಗಿ ಹೇಳಿದ. ಆದರೆ, ನಾನು ಸರ್ವಲೋಕಶರಣ್ಯನಾದ ನಿನ್ನನ್ನು ನೋಡದೆ ಬರುವುದಿಲ್ಲ ಎಂದೆ. ಈಗ ಪುಣ್ಯಪುರುಷನಾದ ನಿನ್ನನ್ನು ದರ್ಶಿಸಿದೆ. ಇನ್ನು ನನ್ನ ಜನ್ಮ ಸಫಲವಾಯಿತು. ಇನ್ನು ನಾ ಬರುತ್ತೇನೆ. ಅನುಮತಿ ಕೊಡು" ಎಂದು ಹೇಳಿ ಯೋಗಾಗ್ನಿಯನ್ನು ಪ್ರಜ್ವಲಗೊಳಿಸಿ ಅದರಲ್ಲಿ ತಮ್ಮ ದೇಹವನ್ನು ಅರ್ಪಿಸಿದರು,

ಸರ್ವಾಲಂಕಾರ ಭೂಷಿತನಾದ, ಮಹಾತೇಜಸ್ವಿಯಾದ ಹದಿನಾರು ವರ್ಷ ವಯಸ್ಸಿನ ದಿವ್ಯ ಪುರುಷನು ಆ ಅಗ್ನಿಯಿಂದ ಮೇಲಕ್ಕೆ ಹೊರಹೊರಟು ತೇಜೋಯುಕ್ತವಾದ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋದ.

## ತಪಸ್ವಿಗಳಿಗೆ ರಾಮನಿಂದ ಅಭಯಪ್ರದಾನ

ಶರಭಂಗರ ಆಶ್ರಮದಿಂದ ಹೊರಟು ರಾಮ ಬರುತ್ತಿದ್ದಂತೆ ಗುಂಪು ಗುಂಪಾಗಿ ಋಷಿಗಳು ರಾಮನ ಹತ್ತಿರ ಬಂದರು. ವಾಲಖಿಲ್ಯರು, ವೈಖಾನಸರು, ಎಲ್ಲರೂ ತಪೋಧನರು. ಮೂರು ದಿನಗಳಿಗೊಮ್ಮೆ ಊಟಮಾಡುವವರು; ಕೆಲವರು ತಿಂಗಳಿಗೊಮ್ಮೆ ಭುಂಜಿಸತಕ್ಕವರು; ಮತ್ತೆ ಕೆಲವರು ಫಲಾಹಾರಿಗಳು; ಇನ್ನೂ ಕೆಲವರು ಪರ್ಣಾಹಾರಿಗಳು; ಮತ್ತೆ ಕೆಲವರು ಬರೀ ನೀರನ್ನೇ ಕುಡಿದುಕೊಂಡು ತಪಸ್ಸು ಮಾಡುವವರು; ಇನ್ನೂ ಇತರರು ಗಾಳಿಯನ್ನೇ ಆಹಾರವನ್ನಾಗಿ ಉಳ್ಳವರು. ಇಂಥ ಋಷಿಶ್ರೇಷ್ಠರು ರಾಮನ ಹತ್ತಿರ ಬಂದರು. "ರಾಮ, ದೇವಲೋಕದ ಕಲ್ಪವೃಕ್ಷವೇ ಇಲ್ಲಿಗೆ ನಡೆದು ಬಂದಂತಿದೆ ನೀನು ಇಲ್ಲಿಗೆ ಬಂದಿರುವುದು. ಇದುವರೆಗೆ ನಾವು ಬಹಳ ಕಷ್ಟಪಟ್ಟಿದೇವೆ. ದಶರಥಕುಮಾರ, ನೋಡು ರಾಕ್ಷಸರಿಂದ ಪೀಡಿಸಲ್ಪಟ್ಟು ಎಷ್ಟು ಜರ್ಝರಿತವಾಗಿದೆ ನಮ್ಮ ದೇಹ. ಅಲ್ಲಿ ನೋಡು ಪರ್ವತದಂತೆ ಇರುವ ಮೂಳೆಯ ರಾಶಿಗಳನ್ನು. ಅವೆಲ್ಲ ಏನೆಂದುಕೊಂಡಿರುವೆ ? ತಪಸ್ವಿಗಳ ಅಸ್ಥಿಗಳು ಅವು. ರಾವಣನ ಅನುಚರರಾದ ರಾಕ್ಷಸರು ನಮ್ಮನ್ನು ಬಹಳವಾಗಿ ಹಿಂಸೆ ಮಾಡುತ್ತಿದಾರೆ. ಇನ್ನು ನಾವು ಆ ಹಿಂಸೆಯನ್ನು ತಾಳಲಾರೆವು. ನಾವೆಲ್ಲ ನಿನ್ನನ್ನು ಶರಣು ಹೊಕ್ಕಿದೇವೆ. ಶರಣಾಗತರನ್ನು ರಕ್ಷಿಸುವುದು ಶ್ರೇಷ್ಠ ಧರ್ಮ. ಅದರಲ್ಲೂ ನಮ್ಮಂಥ ನಿರಪರಾಧಿಗಳನ್ನು ರಾಕ್ಷಸರು ಕಿತ್ತು ತಿನ್ನುತ್ತಿದಾರೆ. ನಮಗೆ ನಿನ್ನನ್ನು ಬಿಟ್ಟು ಬೇರೆಗತಿ ಇಲ್ಲ ನಮ್ಮನ್ನು ರಕ್ಷಿಸು" ಎಂದು ಪ್ರಾರ್ಥಿಸಿದರು.

ಋಷಿಗಳ ಪ್ರಾರ್ಥನೆಯನ್ನು ಕೇಳಿ ರಾಮನ ಮನಸ್ಸು ಕರಗಿತು. "ಪೂಜ್ಯರೇ ಇದೇನು ? ನೀವು ನನ್ನನ್ನು ಪ್ರಾರ್ಥಿಸುವುದೇ ? ನೀವು ಪಾದದಲ್ಲಿ ತೋರಿದ್ದನ್ನು ಶಿರಸ್ಸಿನಲ್ಲಿ ಹೊತ್ತು ನಡೆಸಬೇಕು ನಾನು. ನಾನೇ ಮೊದಲು ದುಷ್ಟರನ್ನು ಶಿಕ್ಷಿಸಿ ನಿಮ್ಮನ್ನು ರಕ್ಷಿಸಬೇಕಾಗಿತ್ತು. ನೀವು ನನ್ನನ್ನು "ಹೀಗೆ ಮಾಡು" ಎಂದು ಆಜ್ಞಾಪಿಸಬೇಕು. ನೀವು ಹಿರಿಯರು, ಜ್ಞಾನಿಗಳು, ತಪಸ್ವಿಗಳು; ನನ್ನನ್ನು ಪ್ರಾರ್ಥಿಸುವುದೆ ?" ಎಂದ ರಾಮ.

"ರಾಕ್ಷಸರ ಹಿಂಸೆ ತಾಳಲಾರೆವು ಎಂದಿರಿ. ಯೋಚಿಸಬೇಡಿ. ದುಷ್ಟ ರಾಕ್ಷಸರನ್ನೆಲ್ಲ ಅವರ ಬಂಧು ಬಾಂಧವರ ಸಹಿತ ನಿರ್ನಾಮ ಮಾಡುತ್ತೇನೆ. ಇನ್ನು ನೀವು ನಿಶ್ಚಿಂತರಾಗಿ ನಿಮ್ಮ ತಪಸ್ಸನ್ನು ಅಭಿವೃದ್ಧಿ ಪಡಿಸಿಕೊಳ್ಳಿ" ಎಂದು ಅಭಯ ಕೊಟ್ಟ. ಋಷಿಗಳೆಲ್ಲ ಸಂತುಷ್ಟರಾದರು. ರಾಮನನ್ನು ಕೊಂಡಾಡುತ್ತಾ ತಪಸ್ಸಿಗೆ ತೆರಳಿದರು.

ರಾಮ ಸುತೀಕ್ಷ್ಣರ ಆಶ್ರಮಕ್ಕೆ ಹೋದ. ಹೆಸರಿಗೆ ತಕ್ಕಂತೆಯೇ ತೀಕ್ಷ್ಣವಾದ ತಪಸ್ಸು ಅವರದ್ದು. ರಾಮನನ್ನು ಬರಮಾಡಿಕೊಂಡರು. ಆದರಿಸಿ ಸತ್ಕರಿಸಿದರು. ರಾತ್ರಿ ಅಲ್ಲಿ ತಂಗಿದ್ದು ಪುನಃ ಹೊರಡಲು ಸಿದ್ಧನಾದ ರಾಮ. ಸುತೀಕ್ಷ್ಣರು ರಾಮನನ್ನು ಅಲ್ಲಿಂದ ಹೊರಡುವ ಮೊದಲು ಇನ್ನೊಮ್ಮೆ ಬರುವಂತೆ ಪ್ರಾರ್ಥಿಸಿದರು. ಅದರಂತೆಯೇ ರಾಮ ಎರಡನೆಯ ಸಲ ಸುತೀಕ್ಷ್ಣರ ಆಶ್ರಮಕ್ಕ ಬಂದಾಗ ಸುತೀಕ್ಷ್ಣರು ರಾಮನಿಗೆ ಅಗಸ್ತ್ಯಾಶ್ರಮಕ್ಕೆ ಹೋಗುವಂತೆ ಹೇಳಿ ದಾರಿ ತೋರಿಸಿದರು.

ಋಷಿಗಳಿಗೂ, ಆಳ್ವಾರುಗಳಿಗೂ ಒಂದು ವ್ಯತ್ಯಾಸ. ಇಬ್ಬರೂ ಪರಮಾತ್ಮನ ಅನುವರ್ತಿಗಳು. ಆದರೆ, ಋಷಿಗಳಿಗಿಂತ ಆಳ್ವಾರುಗಳಿಗೆ ಪರಮಾತ್ಮನಲ್ಲಿ ಪ್ರೇಮ ಹೆಚ್ಚು. ಋಷಿಗಳು ತಮ್ಮ ಸೌಖ್ಯವನ್ನು ಚಿಂತಿಸಿ, ತಾವು ರಾಕ್ಷಸರ ಬಾಧೆಯಿಂದ ನಿಶ್ಚಿಂತರಾಗಿರಬೇಕು ಎಂದು ರಾಮ ಪಂಚವಟಿಗೆ ಹೋಗುವಂತೆ ಪ್ರೇರೇಪಿಸಿದರು. ಆದರೆ, ಆಳ್ವಾರುಗಳಿಗೆ "ತಮ್ಮದು" ಎಂಬ ಸ್ವಾರ್ಥವೆ ಇಲ್ಲ. ತಮ್ಮನ್ನು ರಕ್ಷಿಸು ಎಂದು ಬೇಡಿದವರಲ್ಲ. ತಮಗೆ ಮಂಗಳವಾಗಬೇಕು ಎಂದು ಹಾರೈಸಿದವರಲ್ಲ. ಮಂಗಳಮೂರ್ತಿಯಾದ ಪರಮಾತ್ಮನಿಗೇ ಮಂಗಳಾಶಾಸನ ಮಾಡಿದ ನಿಸ್ವಾರ್ಥಿಗಳು, ಪ್ರೇಮಮಯರು ಆಳ್ವಾರುಗಳು.

ಪರಮಾತ್ಮನ ದಿವ್ಯಮಂಗಳ ವಿಗ್ರಹಕ್ಕೆ ಕಣ್ಣಾಸರಾದೀತು, ತನ್ನಂತಹ ಪಾಪಿಯ ದೃಷ್ಟಿ ಸೋಕಿ ಎಂದು–"ಪಲ್ಲಾಂಡು ಪಲ್ಲಾಂಡು"–ಚಿರಕಾಲ ಬದುಕು ಎಂದು ಹರಸಿದ ಮಹಾಮಹಿಮರು ಅವರು.

**ರಾಮನ ಧರ್ಮನಿಷ್ಠೆ**

ಅಗಸ್ತ್ಯಾಶ್ರಮದತ್ತ ಸೀತಾರಾಮಲಕ್ಷ್ಮಣರು ಹೋಗುತ್ತಿದ್ದಾಗ, ಸೀತೆ ರಾಮನನ್ನು ಕುರಿತು "ಆರ್ಯಪುತ್ರ, ಪ್ರಪಂಚದಲ್ಲಿ ಮೂರು ಕೆಲಸ ನಿಷಿದ್ಧ. ದೊಡ್ಡ ಸುಳ್ಳಾಡುವುದು ಒಂದು. ಪರಸ್ತ್ರೀಗಮನ ಎರಡನೆಯದು. ಅನಿಮಿತ್ತವೈರ, ದ್ವೇಷ ಸಾಧಿಸುವುದು ಮೂರನೆಯದು. ಸ್ವಾಮಿ, ತಮ್ಮಲ್ಲಿ ಮೊದಲು ಹೇಳಿದ ಎರಡು ದೋಷಗಳು ಇಲ್ಲ ''ರಾಮೋ ದ್ವಿರ್ನಾಭಿಭಾಷತೇ." ಎಂದೂ ನೀವು ಸುಳ್ಳಾಡತಕ್ಕವರಲ್ಲ. ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡುವುದಿಲ್ಲ ನೀವು" ಎಂದಳು.

ಈ ಪ್ರಸಂಗದಲ್ಲಿ ರಾಮನ ಹಿರಿಮೆ ಪ್ರಕಾಶಕ್ಕೆ ಬರುತ್ತದೆ. ಎಲ್ಲರೂ ಹೇಳಬಹುದು ಪುರುಷನನ್ನು "ಜಿತೇಂದ್ರಿಯ" ಎಂದು. ಆದರೆ, ಪತ್ನಿಯು ಯೋಗ್ಯತಾಪತ್ರ ಕೊಟ್ಟರೆ ಆಗ ಅದರ ಬೆಲೆ ಹೆಚ್ಚುತ್ತದೆ. ರಾಮನಿಗೆ ಸೀತೆಯೇ ಹೇಳುತ್ತಾಳೆ "ನೀವು ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡುವುದಿಲ್ಲ'' ಎಂದು. ಅಂದಮೇಲೆ ರಾಮನ ಜಿತೇಂದ್ರಿಯತ್ವ ಎಂಥದು ! ಎಷ್ಟು ಅಮೋಘವಾದುದು ! ಸೀತೆ ಹೇಳಿದ್ದನ್ನು ಕೇಳಿದ ರಾಮ. ''ಏನೋ ಹೇಳುವುದಕ್ಕೆ ಇದು ಪೀಠಿಕೆ. ಮುಂದುವರಿಸು'' ಎಂದ.

'"ಇಲ್ಲ . . . ನಾ ಹೇಳಿದಂತೆಯೇ ನೀವು ಸುಳ್ಳಾಡುವವರಲ್ಲ. ಪರಸ್ತ್ರೀಯರನ್ನು ನೋಡುವವರೂ ಅಲ್ಲ. ಇನ್ನು ನಿಮ್ಮಲ್ಲಿ ಮೂರನೆಯ ದೋಷ ಕಾಣುತ್ತಿದೆ. ಅದೇ ವಿನಾಕಾರಣ ವೈರಭಾವ. ರಾಕ್ಷಸರು ನಮಗೆ ಏನೂ ಮಾಡದೆ ಇರುವಾಗ "ಅವರ ಕುಲವನ್ನೇ ನಾಶಮಾಡುತ್ತೇನೆ" ಎಂದು ಋಷಿಗಳಿಗೆ ಮಾತು ಕೊಟ್ಟಿರಲ್ಲ. ಇದು ನ್ಯಾಯವೆ ? ಪ್ರಭು, ಧರ್ಮವನ್ನು ತಿಳಿದವರು ನೀವು. ನಿಮಗೆ ಉಪದೇಶಮಾಡುತ್ತಿದೇನೆ ಎಂದು ಭಾವಿಸಬೇಡಿ. ಏನೋ ಚಪಲ; ಹೇಳಿದೆ. ಇದು ಅನ್ಯಾಯ ಅಲ್ಲವೆ ? ಹೇಳಿ. ಅಲ್ಲದೆ. ನಿಮ್ಮ ವೇಷಕ್ಕೂ, ನೀವು ಧರಿಸಿರುವ ಆಯುಧಕ್ಕೂ ಹೊಂದಿಕೆ ಆಗುವುದಿಲ್ಲ. ನಿಮ್ಮ ತಲೆಯಲ್ಲಿ ಜಟೆ, ಮೈಮೇಲೆ ನಾರುಡೆ. ಧರಿಸಿರುವುದು ಮುನಿವೇಷ. ಆದರೆ ಕೈಯಲ್ಲಿ ಬಿಲ್ಲು ಬಾಣಗಳು. ಇದರಿಂದ ವನದಲ್ಲಿರುವ ಮೃಗಪಕ್ಷಿಗಳಿಗೆ ತೊಂದರೆ ಅಲ್ಲವೆ ? ಇದು ವೃಥಾ ಹಿಂಸಾಕಾರ್ಯ ಅಲ್ಲವೆ ? ಎಂದಳು. ಅದಕ್ಕೆ ರಾಮ, "ವೈದೇಹಿ, ನೀ ಹೇಳಿದಂತೆ ನಾನು ನಿನ್ನ ಮಾತುಗಳನ್ನು ಅನ್ಯಥಾ ಭಾವಿಸುವುದಿಲ್ಲ. ಹೇಳುತ್ತೇನೆ

ಕೇಳು. ಶರಣಾಗತರನ್ನು ರಕ್ಷಿಸುವುದೇ ಪರಮ ಧರ್ಮ. ಅದರಲ್ಲೂ ನಿರಪರಾಧಿಗಳಾದ ಋಷಿಗಳಿಗೆ ಕೊಟ್ಟ ಅಭಯವನ್ನು ನಡೆಸಿಯೇ ತೀರುತ್ತೇನೆ.

ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಂ ।
ನಹಿ ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ॥

ಇದಕ್ಕಾಗಿ ಯಾರೇ ಅಡ್ಡ ಬಂದರೂ ಅವರನ್ನೂ ತ್ಯಜಿಸುತ್ತೇನೆ. ನನ್ನ ಪ್ರಾಣವನ್ನೇ ಶರಣಾಗತ ರಕ್ಷಣೆಗಾಗಿ ಮೀಸಲಾಗಿಟ್ಟಿದೇನೆ. ಹೆಚ್ಚೇಕೆ ? ಜಾನಕಿ ! ಪ್ರಾಣಕ್ಕಿಂತ ಪ್ರಿಯಳೆನಿಸಿದ ನಿನ್ನನ್ನೂ, ಲಕ್ಷ್ಮಣನನ್ನೂ ಬೇಕಾದರೂ ಬಿಟ್ಟೇನು; ಶರಣಾಗತರನ್ನು ಮಾತ್ರ ಬಿಡುವುದಿಲ್ಲ ಇದು ನನ್ನ ವ್ರತ ಎಂದು ರಾಮ "ಶರಣಾಗತ ರಕ್ಷಣೆಯೇ ಪರಮಧರ್ಮ" ಎಂಬ ತತ್ವವನ್ನು ವಿವರಿಸಿದ.

ಈ ಪ್ರಕರಣದಲ್ಲಿ ನಾವು ತಿಳಿಯಬೇಕಾದ ಒಂದು ಮುಖ್ಯ ವಿಷಯ ಇದೆ. ಪುರುಷಕಾರಳಾದ ಸೀತೆ ಏಕೆ ಹೀಗೆ ಕೇಳಿದಳು ? ಶರಣಾಗತರನ್ನು ರಕ್ಷಿಸುವುದು ರಾಮನ ಧರ್ಮವೆಂದು ತಿಳಿದೂ ಹೀಗೆ ಏಕೆ ಕೇಳಿದಳು ? ಅದಕ್ಕೆ ಸಮಾಧಾನವಿದು.

ಸೀತಾರಾಮರು ಲಕ್ಷ್ಮೀನಾರಾಯಣರು. ಲಕ್ಷ್ಮೀನಾರಾಯಣರು "ಅಳಲಕಿಲ್ಲೇನ್ ಇರೈಯುಂ" ಎಂದು ಶಠಗೋಪರು ಅನುಭವಿಸಿದಂತೆ ಸೀತೆಯು ಒಂದು ಕ್ಷಣವೂ ರಾಮನನ್ನು ಬಿಟ್ಟಿರಲಾರಳು. ಆದರೆ ಇನ್ನು ಕೊಂಚ ಕಾಲದಲ್ಲೇ ರಾವಣನಿಂದ ಅಪಹರಿಸಲ್ಪಡತಕ್ಕವಳು ಆಗ ರಾಮನು ತನ್ನನ್ನುಳಿದು ಜೀವಿಸಿರಲು ಸಾಧ್ಯವೇ ಎಂದು ತಿಳಿಯುವ ಕುತೂಹಲ ಸೀತೆಗೆ. ಅದನ್ನು ನೇರವಾಗಿ ಹೇಗೆ ಕೇಳುವುದು ? ಅದಕ್ಕಾಗಿ ಹೀಗೆ ಕೇಳಿದಳು ರಾಮನಿಗೆ ಅರ್ಥವಾಯಿತು. ಎಂದೇ ಹೇಳಿದ "ತ್ವಾಂ ವಾ ಸೀತೇ ಸಲಕ್ಷ್ಮಣಾಂ" ಎಂದು. ಆಗ ಸೀತೆಗೆ ಸಮಾಧಾನವಾಯಿತು.

**ಅಗಸ್ತ್ಯ ದರ್ಶನ**

ಸೀತಾ ರಾಮ ಲಕ್ಷ್ಮಣರು ಅಗಸ್ತ್ಯಾಶ್ರಮದತ್ತ ಹೊರಟರು. ಮಾರ್ಗದಲ್ಲಿ ರಾಮ ಅಗಸ್ತ್ಯರ ಮಹಿಮೆಯನ್ನು ವಿವರಿಸಿದ. ಅಗಸ್ತ್ಯರು ಸಾಮಾನ್ಯರಲ್ಲ. ಹದಿನಾರುಸಾವಿರ ಶಿಷ್ಯರೊಡಗೂಡಿದ ಕುಲಪತಿಗಳು. ಮಹಾತಪಸ್ವಿಗಳು. ತಮ್ಮ ತಪಸ್ಸಿನಿಂದ ಅನೇಕ ಉಪಕಾರಗಳನ್ನು ಮಾಡಿದವರು.

ಒಮ್ಮೆ ದಾನವರು ದೇವತೆಗಳನ್ನು ಬಹಳವಾಗಿ ಪೀಡಿಸಿದರು. ಇಂದ್ರ ಅವರನ್ನು ಕೊಲ್ಲಲು ಬಂದಾಗ ಆ ದೈತ್ಯರು ಸಮುದ್ರದಲ್ಲಿ ಅವಿತುಕೊಂಡುಬಿಟ್ಟರು. ದೇವತೆಗಳು ಅಗಸ್ತ್ಯರನ್ನು ಪ್ರಾರ್ಥಿಸಿದರು. ಆಗ, ಅಗಸ್ತ್ಯರು ತಮ್ಮ ತಪಃ ಪ್ರಭಾವದಿಂದ ಸಮುದ್ರವನ್ನೇ ಏಕಾಪೋಶನ ತೆಗೆದುಕೊಂಡು ಬಿಟ್ಟರು. ಆಗ ಇಂದ್ರ ಸುಲಭವಾಗಿ ದೈತ್ಯರನ್ನು ನಿಗ್ರಹಿಸಿದ. ದೇವತೆಗಳೆಲ್ಲ ಅಗಸ್ತ್ಯರ ಮಹಿಮೆಯನ್ನು ಕೊಂಡಾಡಿದರು.

ವಿಂಧ್ಯಪರ್ವತ ಮೇಲಕ್ಕೆ ಬೆಳೆಯುತ್ತಲೇ ಇತ್ತು. ಅಗಸ್ತ್ಯರನ್ನು ಪ್ರಾರ್ಥಿಸಿದರು, ಎಲ್ಲರೂ. ಅಗಸ್ತ್ಯರು ವಿಂಧ್ಯಪರ್ವತದ ಸಮೀಪಕ್ಕೆ ಬಂದರು. ವಿಂಧ್ಯಪರ್ವತ ಅಗಸ್ತ್ಯರಿಗೆ ಗೌರವ ತೋರಿಸಿತು. ಅಗಸ್ತ್ಯರು ಹೇಳಿದರು "ಪರ್ವತವೇ, ನಾನೀಗ ದಕ್ಷಿಣದ ಕಡೆಗೆ ಹೊರಟಿದೇನೆ. ಪುನಃ ನಾನು ಹಿಂದಿರುಗಿ ಬರುವವರೆಗೆ ನೀ ಬೆಳೆಯಬೇಡ." "ಆಗಲಿ" ಎಂದಿತು ವಿಂಧ್ಯಪರ್ವತ. ಅಗಸ್ತ್ಯರು ದಕ್ಷಿಣಕ್ಕೆ ಬಂದವರು ಅಲ್ಲೇ ಉಳಿದು ಬಿಟ್ಟರು. ಪುನಃ ಉತ್ತರಕ್ಕೆ ಹೋಗಲೇ ಇಲ್ಲ. ಹಾಗಾಗಿ ವಿಂಧ್ಯಪರ್ವತ ಬೆಳೆಯದೆ ಹಾಗೆಯೇ ನಿಂತಿತು.

ವಾತಾಪಿ, ಇಲ್ವಲ ಎಂಬ ಇಬ್ಬರು ಸಹೋದರರು ಬಹಳ ದುಷ್ಟರು. "ಇಲ್ವಲ" ಎಂಬುವ ಋಷಿಗಳನ್ನೆಲ್ಲ ಶ್ರಾದ್ಧಕರ್ಮಕ್ಕಾಗಿ ಆಮಂತ್ರಿಸುತ್ತಿದ್ದ. ಬಂದ ಋಷಿಗಳಿಗೆ ಆಡಿನ ಮಾಂಸದಿಂದ ಮಾಡಿದ ಅಡುಗೆಯನ್ನು ಬಡಿಸುತ್ತಿದ್ದ. ಮಂತ್ರದ ಪ್ರಭಾವದಿಂದ ತನ್ನ ಸಹೋದರ ವಾತಾಪಿ ಯನ್ನೇ ಆಡನ್ನಾಗಿ ಪರಿವರ್ತಿಸಿ ಅವನ ಮಾಂಸದಿಂದ ಮಾಡಿದ ಅಡುಗೆಯನ್ನು ಋಷಿಗಳಿಗೆ ಬಡಿಸುತ್ತಿದ್ದ. ಭೋಜನವಾದ ಮೇಲೆ ಮೃತ ಸಂಜೀವಿನೀ ಮಂತ್ರವನ್ನು ಜಪಿಸಿ "ವಾತಾಪೀ, ಬಾ" ಎಂದು ಕರೆಯುತ್ತಿದ್ದ. ಆಗ ಋಷಿಗಳ ಹೊಟ್ಟೆಯನ್ನು ಭೇದಿಸಿಕೊಂಡು ವಾತಾಪಿ ಹೊರಗೆ ಬರುತ್ತಿದ್ದ. ಋಷಿಗಳು ಮೃತರಾಗುತ್ತಿದ್ದರು. ಹೀಗೆ ಅನೇಕ ಋಷಿಗಳು ಮರಣವನ್ನಪ್ಪಿದ್ದರು.

ಒಮ್ಮೆ ಇಲ್ವಲ ಅಗಸ್ತ್ಯರನ್ನು ಆಹ್ವಾನಿಸಿದ. ಅಗಸ್ತ್ಯರು ಒಪ್ಪಿದರು. ಎಂದಿನಂತೆ ಆಡಿನ ಮಾಂಸದ ಅಡುಗೆಯನ್ನು ಬಡಿಸಿದ ಅಗಸ್ತ್ಯರು ಭುಜಿಸಿದರು. ಭೋಜನವಾದ ಮೇಲೆ "ವಾತಾಪೀ ಬಾ" ಎಂದ ಇಲ್ವಲ. ಅಗಸ್ತ್ಯರು ಹೊಟ್ಟೆಯನ್ನು ತಡವಿಕೊಂಡು "ವಾತಾಪೀ ಜೀರ್ಣೋ ಭವ" ಎಂದರು "ವಾತಾಪೀ ಜೀರ್ಣವಾಗು" ಎಂದೊಡನೆ ವಾತಾಪಿ ಜೀರ್ಣವಾದ. ಇಲ್ವಲನಿಗೆ ಕೋಪ ಬಂದು ಅಗಸ್ತ್ಯರನ್ನು ಕೊಲ್ಲುವ ಸಲುವಾಗಿ ಮೇಲೆ ಬೀಳಲು ಬಂದ ಅಗಸ್ತ್ಯರು "ಹುಂಕಾರ" ಮಾಡಿದರು. ಇಲ್ವಲ ಅಲ್ಲೇ ಬೂದಿಯಾದ ಇಂಥ ಮಹಾಮಹಿಮರು ಅಗಸ್ತ್ಯರು.

ಅವರೇ ತಮಿಳು ಭಾಷೆಗೆ ವ್ಯಾಕರಣವನ್ನು ರಚಿಸಿದವರು.

ಇಂಥಾ ಮಹಾ ತಪಸ್ವಿಗಳ ಮಹಿಮೆಯನ್ನು ನೆನೆಸಿಕೊಳ್ಳುತ್ತಾ ಸೀತಾ ರಾಮಲಕ್ಷ್ಮಣರು ನಡೆದರು. ಅಗಸ್ತ್ಯಾಶ್ರಮಕ್ಕೆ ಬಂದರು. ಅಗಸ್ತ್ಯರು ಸೀತಾ ರಾಮಲಕ್ಷ್ಮಣರಿಗೆ ಉಪಚಾರವಾಡಿ ದರು. ರಾಮನಿಗೆ ವೈಷ್ಣವ ಧನುಸ್ಸನ್ನೂ, ಅಕ್ಷಯವಾದ ಬಾಣಗಳುಳ್ಳ ಬತ್ತಳಿಕೆಗಳನ್ನೂ ಕೊಟ್ಟರು. ರಾಮ ತಂಗಲು ಸ್ಥಳ ಕೇಳಿದ. ಆಗಲೇ ಹತ್ತುವರ್ಷ ವನವಾಸ ಮಾಡಿ ಆಗಿತ್ತು. ಇನ್ನು ಉಳಿದ ನಾಲ್ಕು ವರ್ಷಗಳನ್ನು ಗೋದಾವರೀ ತೀರದಲ್ಲಿ ವಿರಾಜಿಸುತ್ತಿರುವ ಪಂಚವಟಿಯಲ್ಲಿ ಕಳೆಯುವಂತೆ ಅಗಸ್ತ್ಯರು ಹೇಳಿದರು ಐದು ಆಲದಮರಗಳಿಂದ ಕೂಡಿದ ರಮ್ಯವಾದ ಪಂಚವಟಿ ಯತ್ತ ಸೀತಾರಾಮ ಲಕ್ಷ್ಮಣರು ನಡೆದರು.

## ಲಕ್ಷ್ಮಣ ಪರ್ಣಶಾಲೆಯನ್ನು ರಚಿಸುವುದು

ಪಂಚವಟಿಯತ್ತ ಸೀತಾರಾಮ ಲಕ್ಷ್ಮಣರು ಬರುತ್ತಿದ್ದರು. ಮಾರ್ಗದಲ್ಲಿ "ಜಟಾಯು" ಎಂಬ ಗೃಧ್ರರಾಜನನ್ನು ಕಂಡರು. ಜಟಾಯು ಹೇಳಿತು "ನಾನು ನಿಮ್ಮ ತಂದೆ ದಶರಥನ ಸ್ನೇಹಿತ. ಸಮಾನವಯಸ್ಕರು ನಾವಿಬ್ಬರೂ. ನಿಮಗೆ ನಾನು ಏನು ಸೇವೆ ಮಾಡಲೂ ಸಿದ್ಧನಾಗಿದೇನೆ. ನಿಮಗೆ ನನ್ನಿಂದ ಏನಾಗಬೇಕು ?"

ರಾಮ ತನ್ನ ತಂದೆಯ ಸ್ನೇಹಿತ ಜಟಾಯುವನ್ನು ಕಂಡು ಸಂತೋಷಿಸಿದ. ಪಂಚವಟಿಗೆ ದಾರಿ ತೋರಿಸುವಂತೆ ಕೇಳಿದ. ಜಟಾಯುವಿಗೂ ಪಂಚವಟಿಗೂ ಹತ್ತಿರವೇ. ದಾರಿ ತೋರಿಸಿತು.

ಸೀತಾ ರಾಮಲಕ್ಷ್ಮಣರು ಪಂಚವಟಿಯನ್ನು ಸೇರಿದರು ಅಲ್ಲಿ ಮುಂದ ಮುಂದವಾಗಿ ನಿರ್ಮಲ ವಾದ ಗೋದಾವರೀ ನದಿ ಹರಿಯುತ್ತಿದೆ. ಸುತ್ತಲೂ ಎಲ್ಲಿ ನೋಡಿದರೂ ಆಲದ ಮರಗಳು. ರಮ್ಯವಾದ ಪಂಚವಟಿಯನ್ನು ನೋಡಿದ ರಾಮ. ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ. ವನ ವಾಸದ ಹತ್ತುವರ್ಷಗಳಲ್ಲಿ ನನಗಿಷ್ಟವಾದ ಸ್ಥಳದಲ್ಲಿ ನನ್ನಿಷ್ಟದಂತೆ ಸೊಗಸಾಗಿ ಪರ್ಣಶಾಲೆಯನ್ನು ಕಟ್ಟಿದೆ. ಈಗ ನಿನಗಿಷ್ಟವಾದ ಪ್ರದೇಶದಲ್ಲಿ ನಿನ್ನ ಇಷ್ಟದಂತೆ ಪರ್ಣಶಾಲೆಯನ್ನು ನಿರ್ಮಿಸು"

ಎಂದ ರಾಮನ ಮಾತನ್ನು ಕೇಳಿದ ಒಡನೆ ಲಕ್ಷ್ಮಣ ಅಳತೊಡಗಿದ. "ಯಾಕೆ ಲಕ್ಷ್ಮಣ ಅಳು ತ್ತಿದ್ದೀಯೆ ?" ಎಂದ ರಾಮ.

"ಅಣ್ಣಾ, ನಾನು ಯಾವಾಗಲೂ ನಿನಗೆ ದಾಸ. ದಾಸನಿಗೆ ತನ್ನ ಇಷ್ಟ ಎಂಬುದಿಲ್ಲ. ಸ್ವಾಮಿಯ ಇಷ್ಟವೇ ದಾಸನ ಇಷ್ಟ. ಪಾದರಕ್ಷೆ, ಚಂದನ, ಕೊಡೆ ಇವು ತಾಪವನ್ನು ಹೀರಿ ತಂಪನ್ನು ಕೊಡುತ್ತವೆ. ಅವು ಹೇಗೆ ಕೈಂಕರ್ಯಕ್ಕೆ ಒದಗುತ್ತವೋ ಹಾಗೇ ನಾನೂ ನಿನ್ನ ಕೈಂಕರ್ಯಕ್ಕೆ ಒದಗುವವ. ಕೈಂಕರ್ಯವೇ ಪುರುಷಾರ್ಥ ನನಗೆ. ನೀನು ಇಲ್ಲಿ ಕಟ್ಟು ಎಂದು ಆಜ್ಞಾಪಿಸು. ನಾನು ಅಲ್ಲಿ ಆಜ್ಞೆಯಂತೆ ಪರ್ಣಶಾಲೆ ನಿರ್ಮಿಸುತ್ತೇನೆ" ಎಂದ.

ಲಕ್ಷ್ಮಣ "ಅಯ್ಯೋ, ಕೈಕೇಯಿ ರಾಮನಿಗೆ ವನವಾಸ ಕೇಳಿದಳಲ್ಲ, ನೂರು ವರ್ಷ ಎಂದು ಕೇಳಬಾರದಿತ್ತೆ ? ಅಷ್ಟು ಕಾಲ ನಾನು ರಾಮನಿಗೆ ಸೇವೆ ಮಾಡುವ ಭಾಗ್ಯ ಒದಗುತ್ತಿತ್ತಲ್ಲ" ಎಂದುಕೊಂಡ !

ನೀರಿನ ಸೌಲಭ್ಯವಿರುವ ಕಡೆ, ಪುಷ್ಪಗಳು, ಫಲಗಳು ಸಮೃದ್ಧಿಯಾಗಿರುವೆಡೆ ಪರ್ಣಶಾಲೆ ಯನ್ನು ನಿರ್ಮಿಸುವಂತೆ ರಾಮ ಲಕ್ಷ್ಮಣನಿಗೆ ಹೇಳಿದ.

ರಾಮನ ಅನುಜ್ಞೆಯಂತೆ ಲಕ್ಷ್ಮಣ ಭವ್ಯವಾದ ಪರ್ಣಶಾಲೆಯನ್ನು ನಿರ್ಮಿಸಿದ. ಅದರಲ್ಲಿ ಅಡುಗೆಯನ್ನು ಮಾಡಲು ಬೇರೆಯಾಗಿ ಪಾಕಶಾಲೆಯನ್ನು ನಿರ್ಮಿಸಿದ. ಸಾಮಾನುಗಳನ್ನು ಇಡಲು ಒಂದು ಸ್ಥಳ, ಬಂದವರನ್ನು ಕೂಡಿಸಲು ಬೇರೆ ಸ್ಥಳ, ಯಜ್ಞಶಾಲೆ, ಶಯನಗೃಹ ಹೀಗೆ ಬೇರೆ ಬೇರೆಯಾಗಿ ನಿರ್ಮಿಸಿದ.

ಲಕ್ಷ್ಮಣ ಆಶ್ರಮ ಕಟ್ಟಿದ್ದನ್ನು ನೋಡಿ ರಾಮ ಬಹಳ ಸಂತೋಷಪಟ್ಟ. ಲಕ್ಷ್ಮಣನನ್ನು ಆಲಂಗಿಸಿದ. ಲಕ್ಷ್ಮಣಾ, ಇಷ್ಟು ಸೊಗಸಾಗಿ ಪರ್ಣಶಾಲೆ ಕಟ್ಟುವುದನ್ನೆಲ್ಲ ಎಲ್ಲಿ ಕಲಿತೆ ? ನಾವು ಕಾಡಿಗೆ ಬರುವುದು ಮೊದಲೇ ನಿನಗೆ ಗೊತ್ತಿತ್ತೆ ? ಲಕ್ಷ್ಮಣಾ, ತಂದೆ ಇಲ್ಲದ ಕೊರಗನ್ನು ನೀಗಿಸಿದೆ ನೀನು. ನೀನೇ ತಂದೆ ನನಗೆ" ಎಂದು ಮತ್ತೆ ಮತ್ತೆ ಅಪ್ಪಿದ ಪ್ರೇಮದಿಂದ ಲಕ್ಷ್ಮಣನನ್ನು.

ಈ ಪ್ರಸಂಗದಲ್ಲಿ ಲಕ್ಷ್ಮಣ ದಾಸನ ಲಕ್ಷಣಗಳನ್ನು ತೋರಿಸಿದ. ಭಗವಂತನ ದಾಸರು ತಮಗಾಗಿ ಏನನ್ನೂ ಇಚ್ಛಿಸುವುದಿಲ್ಲ. ಆಳ್ವಾರುಗಳೂ ಹಾಗೆಯೇ. ಒಮ್ಮೆ ಒಬ್ಬ ಆಳ್ವಾರಿಗೆ ಭಗವಂತ ಪ್ರತ್ಯಕ್ಷನಾದ. "ಆಳ್ವಾರೇ, ನಿಮಗೇನು ಬೇಕು ?" ಎಂದ. "ಸ್ವಾಮಿಾ ನನಗೆ ಏನೂ ಬೇಡ. ನಿನ್ನ ದಾಸ್ಯ ಒಂದೇ ಸಾಕು" ಎಂದರು.

"ನಿನಗೆ ಮೋಕ್ಷ ಕೊಡುತ್ತೇನೆ'' ಎಂದ ಭಗವಂತ. ಅದಕ್ಕೆ ಆಳ್ವಾರ್ ಹೇಳಿದರು, "ಸ್ವಾಮಿಾ ನಾನಾಗಿ, ನನಗಾಗಿ ನಿನ್ನನ್ನು ಮೋಕ್ಷ ಕೊಡು ಎನ್ನುವುದಿಲ್ಲ. ನಿನಗಾಗಿ, ನಿನಗೆ ಸಂತೋಷ ಆಗುವುದಕ್ಕಾಗಿ ಕೊಡುವುದಾದರೆ ಕೊಡು '' ಅದನ್ನೇ ತಮಿಳಿನಲ್ಲಿ ಹೇಳುವಾಗ "ತನಕ್ಕೇಯಾಹ ಎನ್ನೈಕೊಳ್ಳು ಮಾರೇ" ಎಂದಿದಾರೆ.

ಇಲ್ಲಿ ವ್ಯಾಕರಣದ ರೀತ್ಯಾ ಈ ಪ್ರಯೋಗ ತಪ್ಪು ಎನ್ನುತ್ತಾರೆ. ಒಬ್ಬ ವ್ಯಕ್ತಿ ಎದುರಿಗೆ ನಿಂತಿರುವಾಗ ''ಉಮಕ್ಕೇ'' ಎಂದು ಹೇಳದೆ" ತನಕ್ಕೇ" ಎಂದರಲ್ಲ ಎಂದು ಆಕ್ಷೇಪ ಹೇಳುತ್ತಾರೆ. ಆದರೆ, ಅದಕ್ಕೆ ಸಮಾಧಾನ. ಆಳ್ವಾರ್ ಭಗವಂತನ ಇದಿರಿಗೂ ನಿಲ್ಲಲಿಲ್ಲ. ಪಕ್ಕದಲ್ಲಿ ನಿಂತು ಪ್ರಾರ್ಥಿಸಿದರು ಎಂದಿದಾರೆ. ಅಂದರೆ, ಭಗವಂತನ ದಾಸರು ದಾಸರಾಗಿರುವುದರಲ್ಲೇ ತೃಪ್ತಿಪಡು ತ್ತಾರೆ. ಅಲ್ಲದೆ ಪದವಿಯನ್ನೋ, ಐಶ್ವರ್ಯವನ್ನೋ, ಭೋಗಭಾಗ್ಯವನ್ನೋ ಇಚ್ಛಿಸುವುದಿಲ್ಲ ಎಂದು ತಾತ್ಪರ್ಯ. ಕುಲಶೇಖರಾಳ್ವಾರ್ ಹೇಳುತ್ತಾರೆ.

ದಿವಿ ವಾ ಭುವಿ ವಾ ಮಮಾಸ್ತು ವಾಸಃ
ನರಕೇ ವಾ ನರಕಾಂತಕ ! ಪ್ರಕಾಮಂ ।
ಅವಧೀರಿತ–ಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ॥

ಎಂದು ಭಗವಂತನನ್ನು ಪ್ರಾರ್ಥಿಸುತ್ತಾ "ದೇವ, ನನ್ನನ್ನು ದೇವಲೋಕದಲ್ಲಾದರೂ ಇರಿಸು, ಇಲ್ಲಿ ಭೂಲೋಕದಲ್ಲಾದರೂ ಇಡು; ನರಕದಲ್ಲೇ ಬೇಕಾದರೂ ನನ್ನನ್ನಿಡು. ಆದರೆ ಎಲ್ಲಿ ನನ್ನನ್ನಿಟ್ಟರೂ ನಿನ್ನ ಪಾದಾರವಿಂದಗಳಿಗೆ ಸೇವೆಮಾಡುವ ಭಾಗ್ಯಮಾತ್ರ ಕರುಣಿಸು" ಎಂದಿದಾರೆ.

ಅಂತೆಯೇ ಲಕ್ಷ್ಮಣನೂ ಹದಿನಾಲ್ಕು ವರ್ಷಗಳ ಕಾಲ ಎಡಬಿಡದೆ ಭಗವಂತನ ಸೇವೆಯಲ್ಲಿ ನಿರತನಾಗಿದ್ದ.

**ಪಂಚವಟಿಯಲ್ಲಿ ಹೂರು ವರ್ಷಗಳು**

ಒಂದು ದಿನ ಬೆಳಗಿನ ಜಾವದಲ್ಲಿ ಸೀತಾ ಲಕ್ಷ್ಮಣರೊಡನೆ ರಾಮ ಗೋದಾವರಿಯಲ್ಲಿ ಸ್ನಾನ ಮಾಡಲು ಹೋಗುತ್ತಿದ್ದ. ಲಕ್ಷ್ಮಣ ಇದ್ದಕ್ಕಿದ್ದಂತೆ ಅಳಲು ಆರಂಭಿಸಿದ. "ಲಕ್ಷ್ಮಣಾ, ಏನು ? ಇದ್ದಕ್ಕಿದ್ದಂತೆ ಅಳಲು ಪ್ರಾರಂಭಿಸಿದೆ ? ಊರ್ಮಿಳೆಯ ಜ್ಞಾಪಕ ಬಂದಿತೆ ?'' ಎಂದ ರಾಮ.

''ಇಲ್ಲ ಅಣ್ಣ, ಊರ್ಮಿಳೆಯ ಜ್ಞಾಪಕ ಬರಲಿಲ್ಲ. ಭರತನ ಜ್ಞಾಪಕ ಬಂದಿತು. ಈಗ ಭರತ ಎಷ್ಟು ಕಷ್ಟಪಡುತ್ತಿದಾನೆ ಎಂದು ನೆನೆದು ದುಃಖವಾಯಿತು. ಅಣ್ಣಾ, ಭರತ ದಿನವೂ ಹಗಲಿನಲ್ಲಿ ಸ್ನಾನಮಾಡನು ಏಕೆಂದರೆ ಸರಯೂ ನದಿಗೆ ಸ್ನಾನ ಮಾಡಲು ಪ್ರಜೆಗಳು ಬರುತ್ತಾರೆ. ಬಂದವರೇ ಭರತನನ್ನು ನೋಡಿ "ಅಣ್ಣನನ್ನು ಕಾಡಿಗೆ ಕಳುಹಿಸಿದವನು ಇವನೇ'' ಎನ್ನುತ್ತಾರೆ ಎಂದು ಹೆದರಿ ಭರತ ನಡುರಾತ್ರಿಯಲ್ಲಿ ಈ ಚಳಿಗಾಲದಲ್ಲಿ ಬಂದು ಸರಯೂ ನದಿಯಲ್ಲಿ ಸ್ನಾನ ಮಾಡಿ ಹೋಗುತ್ತಾನೆ ನೆಲದ ಮೇಲೆ ಮಲಗುತ್ತಾನೆ. ನಿನಗಾಗಿ ಪರಿತಪಿಸುತ್ತಿರುವ ಆ ಭರತನನ್ನು ನೆನೆದು ಸಂಕಟವಾಯಿತು. ಆ ಪಾಪಿ ಕೈಕೇಯಿಯಿಂದ ಇಷ್ಟು ಅನರ್ಥವಾಯಿತು'' ಎಂದ ಲಕ್ಷ್ಮಣ.

ಆಗ ರಾಮ ''ಲಕ್ಷ್ಮಣಾ, ನನಗೆ ಪ್ರಿಯನಾದ ಭರತನ ಬಗ್ಗೆ ಹೇಳಿದೆ. ಅದರಿಂದ ನನಗೆ ಸಂತೋಷವಾಯಿತು. ಆದರೆ ನೀನು ನಡುಕಲ ತಾಯನ್ನು ಬೈದೆ. ಅದು ಕೂಡದು. ಕೈಕೇಯಿಯನ್ನು ನಿಂದಿಸಬೇಡ'' ಎಂದ. "ಹಾ ಭರತಾ" ಎಂದು ಭರತನನ್ನು ನೆನಸಿಕೊಂಡ. "ಲಕ್ಷ್ಮಣಾ, ಎಂದಿಗೆ ಈ ವನವಾಸ ಕಳೆಯುವುದೋ, ಎಂದಿಗೆ ನಾನು ನೀನು ಭರತ ಶತ್ರುಘ್ನ–ನಾವು ನಾಲ್ವರೂ ಒಟ್ಟಾಗಿ ಇರುವೆವೋ ಎನಿಸಿಬಿಟ್ಟಿದೆ'' ಎಂದು ಪರಿತಾಪ ಪಟ್ಟ.

ರಾಮ ಕೈಕೇಯಿಯನ್ನು ''ನಡುಕಲ ತಾಯಿ'' ಎಂದ. ಆದರೆ ಕೈಕೇಯಿ ಎಲ್ಲರಿಗಿಂತ ಚಿಕ್ಕವಳಲ್ಲವೆ ಎಂಬ ಸಂದೇಹ ಬರುವುದು ಸಹಜ. "ಇಲ್ಲಿ ಮಧ್ಯದ ತಾಯಿ" ಎನ್ನುವಾಗ ಮಧ್ಯದ ಅವಸ್ಥೆಯಲ್ಲಿ ಅಂದರೆ ಯೌವನಾವಸ್ಥೆಯಲ್ಲಿರುವ ಕೈಕೇಯಿ ಎಂದು ಅರ್ಥ.

ಗೋದಾವರಿಯಲ್ಲಿ ಸೀತಾ ರಾಮ ಲಕ್ಷ್ಮಣರು ಮಿಂದರು. ಆಶ್ರಮಕ್ಕೆ ನಡೆದರು. ನಿತ್ಯ ಕರ್ಮಗಳನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದರು. ಸೀತೆ ಪರ್ಣಶಾಲೆಯ ಒಳಗೆ ಇದ್ದಳು. ಲಕ್ಷ್ಮಣ ಪರ್ಣಶಾಲೆಯ ಸಮೀಪದಲ್ಲಿ ಏನೋ ಕೆಲಸದಲ್ಲಿ ನಿರತನಾಗಿದ್ದ. ರಾಮ ಪರ್ಣಶಾಲೆಯ ಹೊರಗೆ ದರ್ಭಾಸನದಲ್ಲಿ ವಿರಾಜಮಾನನಾಗಿದ್ದ.

ಶೂರ್ಪಣಖಾ ಪ್ರಕರಣ

ಹಾಗೆ ರಾಮ ವಿರಾಜಮಾನನಾಗಿದ್ದ ಸಮಯದಲ್ಲಿ ಅಲ್ಲಿಗೆ ತನ್ನ ಇಷ್ಟದಂತೆ ಸುತ್ತಾಡುತ್ತಾ ''ಶೂರ್ಪಣಖಾ'' ಎಂಬ ರಾಕ್ಷಸಿ ಬಂದಳು. ನೋಡಿದಳು ದೂರದಿಂದ ರಾಮನನ್ನು ಮೊದಲು "ಏನಾದರೂ ಆಹಾರ ಸಿಕ್ಕಿದರೆ ತಿನ್ನುವ" ಎಂದು ಬಂದವಳು ರಾಮನನ್ನು ನೋಡಿದಳು, ಅವನ ಸೌಂದರ್ಯಕ್ಕೆ ಮಾರುಹೋದಳು. ತಿನ್ನುವ ಬುದ್ಧಿಯನ್ನು ಬಿಟ್ಟು ರಾಮನನ್ನು ವರಿಸಬೇಕು ಎಂದು ನಿಶ್ಚಯಿಸಿದಳು. ಒನಪು ವಯ್ಯಾರದೊಡನೆ ರಾಮನ ಮುಂದೆ ಬಂದು ನಿಂತಳು. ಅವಳನ್ನು ನೋಡಿದ ರಾಮ. "ನೀನು ಯಾರು ?" ಎಂದು ಕೇಳಿದ. ಶೂರ್ಪಣಖಿ ಹೇಳಿದಳು. "ನನ್ನ ಹೆಸರು ಶೂರ್ಪಣಖಿ. ನನಗೆ ಮೂವರು ಅಣ್ಣಂದಿರು. ರಾಕ್ಷಸರಿಗೆಲ್ಲ ರಾಜನಾಗಿರುವ ರಾವಣನೇ ನನ್ನ ಹಿರಿಯಣ್ಣ. ಮಹಾಬಲವುಳ್ಳ ಕುಂಭಕರ್ಣನೇ ನನ್ನ ಎರಡನೆಯ ಅಣ್ಣ. ನನ್ನ ಹಿರಿಯ ಅಣ್ಣಂದಿರಿಬ್ಬರೂ ರಾಕ್ಷಸ ಸ್ವಭಾವವುಳ್ಳವರು. ಆದರೆ ನನ್ನ ಮೂರನೆಯ ಅಣ್ಣನಾದ ವಿಭೀಷಣ ಸಾತ್ವಿಕ ಸ್ವಭಾವದವನು. ಅವನಿಗೆ ರಾಕ್ಷಸ ಸ್ವಭಾವವೇ ಇಲ್ಲ" ಎಂದಳು.

ಶೂರ್ಪಣಖಿ ವಿಭೀಷಣನನ್ನು ವರ್ಣಿಸುತ್ತಾ "ನತು ರಾಕ್ಷಸಚೇಷ್ಟಿತಃ" ಎಂದಳು ಇದನ್ನೇ ರಾಮ ಮನಸ್ಸಿನಲ್ಲಿಟ್ಟುಕೊಂಡ. ಈಗ ಶೂರ್ಪಣಖಿ ವಿಭೀಷಣನ ಬಗ್ಗೆ ಹೇಳಿದ್ದು ವಿಭೀಷಣ ಶರಣಾಗತನಾದಾಗ ಸಹಾಯಕ್ಕೆ ಒದಗಿತು.

ಶೂರ್ಪಣಖಿ ರಾಮನನ್ನು "ನೀನು ಯಾರು ?" ಎಂದು ಪ್ರಶ್ನಿಸಿದಳು ರಾಮ ಅದಕ್ಕೆ ''ನಾನು ದಶರಥ ಮಹಾರಾಜನ ಹಿರಿಯ ಮಗ, ರಾಮ ನನ್ನ ಪಕ್ಕದಲ್ಲಿರುವವಳು ನನ್ನ ಪತ್ನಿ ಸೀತೆ. ಸೀತೆಯೊಂದಿಗೆ, ತಮ್ಮನಾದ ಲಕ್ಷ್ಮಣನೊಂದಿಗೆ ತಂದೆಯ ಆಜ್ಞೆಯನ್ನು ಪರಿಪಾಲಿಸಲು ಕಾಡಿಗೆ ಬಂದಿದೇನೆ'' ಎಂದ.

ಶೂರ್ಪಣಖಿ ರಾಮನನ್ನು ಕುರಿತು ''ರಾಮಾ, ನೀ ನನ್ನನ್ನು ಮದುವೆ ಮಾಡಿಕೊ. ನಿನಗೆ ಸರಿಯಾದ ಪತ್ನಿ ಎಂದರೆ ನಾನೇ. ನೀನು ನನ್ನನ್ನು ವಿವಾಹವಾದರೆ ಬಹಳ ಸೌಖ್ಯವನ್ನನುಭವಿಸ ಬಹುದು. ನಿನ್ನನ್ನು ನಾ ಬಯಸಿ ಬಂದಿದೇನೆ. ವಿವಾಹವಾಡಿಕೊ'' ಎಂದಳು.

ಶೂರ್ಪಣಖಾ ಪ್ರಕರಣದಲ್ಲಿ ವಾಲ್ಮೀಕಿ ಹಾಸ್ಯರಸದ ಹೊನಲನ್ನು ಹರಿಸಿದಾರೆ "ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ" ಎಂಬುದು ಆರ್ಯೋಕ್ತಿ. ವಿವಾಹವಾಗಲೀ, ವಿವಾದ– ಅಂದರೆ ಚರ್ಚೆಯಾಗಲೀ ಸಮಾನರಾದವರಲ್ಲಿ ಶೋಭಿಸುತ್ತದೆ. ಇಲ್ಲಿ ವಾಲ್ಮೀಕಿ ಶೂರ್ಪಣಖಿ ಯನ್ನೂ ರಾಮನನ್ನೂ ಹೋಲಿಸಿ ನೋಡುತ್ತಾರೆ. ಶೂರ್ಪಣಖಾ–ರಾಮರಿಗೆ ವಿವಾಹ ನಡೆದರೆ ಸರಿಯಾಗುತ್ತದೆಯೆ ? ಇಬ್ಬರಿಗೂ ಪರಸ್ಪರ ಸಾಮ್ಯ ಬೇಡವೆ ? ಇದನ್ನು ವಾಲ್ಮೀಕಿ ಹೃದಯಂಗಮ ವಾಗಿ ವರ್ಣಿಸಿದಾರೆ. ರಾಮ ಸುಮುಖನಾದರೆ ಆ ರಾಕ್ಷಸಿ ದುರ್ಮುಖಿ. ರಾಮನ ಮುಖ ಚಂದ್ರಬಿಂಬದಂತೆ ದೇದೀಪ್ಯಮಾನವಾದರೆ, ಶೂರ್ಪಣಖಿಯದು ಕರಾಳವಾದ ಮುಖ.

ರಾಮನ ಸೊಂಟ ಕಿರಿದಾದರೆ ಶೂರ್ಪಣಖಿಯ ಸೊಂಟ ಪರ್ವತದಂತೆ ಇದೆ. ರಾಮನ ರೂಪ ಪ್ರಿಯದರ್ಶನವಾದುದು. ನೋಡಿದಷ್ಟೂ ''ಮತ್ತೂ ನೋಡಬೇಕು. ಇನ್ನೂ ನೋಡ ಬೇಕು'' ಎಂಬ ಆಶೆಯನ್ನು ಹುಟ್ಟಿಸುವಂಥದು. ಆದರೆ ಶೂರ್ಪಣಖಿಯ ಮುಖವೋ ನೋಡಿ ದರೆ ಮತ್ತೊಮ್ಮೆ ಆ ದಿಕ್ಕಿಗೇ ತಿರುಗುವುದು ಬೇಡ ಎನಿಸುವಂಥ ಮುಖ !

ರಾಮನ ಸ್ವರ ಇನಿದಾದುದು, ಮಧುರವಾದುದು.

ಶೂರ್ಪಣಖಿಯದೋ ಕರ್ಕಶ ಸ್ವರ.

ರಾಮ ತರುಣ. ಯೌವನ ಸಂಪತ್ತಿನಿಂದ ಕೂಡಿದವ.

ಶೂರ್ಪಣಖಿ ಮುದುಕಿ.

ರಾಮ ಸರಳವಾಗಿ ಭಾಷಿಸುವಂಥವ.

ಶೂರ್ಪಣಖಿ ಕುಟಿಲಭಾಷಿಣಿ.

ರಾಮ ತನ್ನ ವೀರ್ಯವನ್ನು, ಪರಾಕ್ರಮವನ್ನು, ಶಕ್ತಿಯನ್ನು ಸತ್ಕಾರ್ಯಗಳಿಗೆ ವಿನಿಯೋಗಿಸುವವ.

ಆದರೆ ಶೂರ್ಪಣಖಿ ಕೆಟ್ಟಕೆಲಸ ಮಾಡುವುದಕ್ಕಾಗಿಯೇ ಬಂದವಳು. ಹೀಗಿತ್ತು ಪರಸ್ಪರರಿಗೆ ಹೊಂದಾಣಿಕೆ.

ಶೂರ್ಪಣಖಿ ಕಾಮಮೋಹಿತೆಯಾಗಿ ರಾಮನನ್ನು ಬಯಸಿದಳು. ರಾಮ ಹೇಳಿದ, "ನನಗೆ ಮದುವೆ ಆಗಿದೆ ನೋಡು: ಸೀತೆ ಪಕ್ಕದಲ್ಲೇ ಇದ್ದಾಳೆ."

ಶೂರ್ಪಣಖಿ ಹೇಳಿದಳು, ''ರಾಮಾ ನಿನ್ನ ರೂಪಕ್ಕೆ ಸೀತೆ ಸರಿಯಿಲ್ಲ. ನೋಡು ಅವಳಿಗೆ ಸೊಂಟವೇ ಇಲ್ಲ. ನಾನು ನಿನಗೆ ಸರಿಯಾದವಳು. ಸೀತೆಯನ್ನು ಬಿಟ್ಟುಬಿಡು. ನನ್ನನ್ನು ಮದುವೆಯಾಗು.''

ರಾಮ ''ಇಲ್ಲ, ನಾನು ಏಕಪತ್ನೀ ವ್ರತಸ್ಥ. ಅದೂ ಅಲ್ಲದೆ ಮಡದಿ ಪಕ್ಕದಲ್ಲಿದ್ದಾಳೆ ನನಗೆ. ನನಗೊಬ್ಬ ತಮ್ಮ ಇದ್ದಾನೆ. ಅದೋ ನೋಡು, ಅವನೇ. ಅವನಿಗೆ ಹೆಂಡತಿ ಇಲ್ಲ, ಅವನ ಹತ್ತಿರ ಹೋಗು, ಅವನನ್ನು ಮದುವೆಯಾಗು" ಎಂದ. ಅದರಂತೆ ಶೂರ್ಪಣಖಿ ಲಕ್ಷ್ಮಣನ ಬಳಿಗೆ ಬಂದಳು. "ನೀನು ಯಾರು ?" ಎಂದ ಲಕ್ಷ್ಮಣ.

"ನಾನು ರಾವಣನ ತಂಗಿ. ನಿನ್ನನ್ನು ಮದುವೆ ಆಗಲು ಬಂದೆ. ನನ್ನನ್ನು ನಿನ್ನ ಅಣ್ಣನೇ ನಿನ್ನ ಬಳಿ ಕಳುಹಿಸಿದ. ನನ್ನನ್ನು ವಿವಾಹವಾಗು" ಎಂದಳು ಶೂರ್ಪಣಖಿ.

ಲಕ್ಷ್ಮಣ "ಅಯ್ಯೋ, ನನ್ನ ಹತ್ತಿರ ಏಕೆ ಬಂದೆ ನೀನು ? ನಾನು ನನ್ನ ಅಣ್ಣನಿಗೆ ದಾಸ. ದಾಸನನ್ನು ಮದುವೆ ಆದರೆ ನೀನೂ ದಾಸಿ ಆಗಬೇಕಾಗುತ್ತದೆ. ಆದ್ದರಿಂದ ಅಣ್ಣನ ಹತ್ತಿರವೇ ಹೋಗು. ಅವನನ್ನೇ ಮದುವೆ ಆಗು. ಆಗ ನಾನು ನಿಮ್ಮಿಬ್ಬರಿಗೂ ಸೇವೆ ಮಾಡುತ್ತೇನೆ" ಎಂದ.

"ಅದೂ ಸರಿ" ಎನಿಸಿತು ಶೂರ್ಪಣಖಿಗೆ. ಪುನಃ ರಾಮನ ಬಳಿಗೇ ಬಂದಳು. "ನನ್ನನ್ನು ನೀನೇ ಮದುವೆಯಾಗು" ಎಂದಳು. ರಾಮ ಪುನಃ ಅವಳನ್ನು ಲಕ್ಷ್ಮಣನ ಬಳಿ ಕಳುಹಿಸಿದ. ಲಕ್ಷ್ಮಣ ಅವಳನ್ನು ರಾಮನ ಹತ್ತಿರ ಕಳುಹಿಸಿದ. ಹೀಗೆ ನಾಲ್ಕಾರು ಬಾರಿ ನಡೆಯಿತು. ಶೂರ್ಪಣಖಿಗೆ ಕೋಪಬಂದಿತು. ನೋಡಿದಳು. "ಈ ಸೀತೆ ಇರುವುದರಿಂದ ತಾನೇ ಇಷ್ಟು, ಇವಳನ್ನು ಕಬಳಿಸಿಬಿಟ್ಟರೆ ಸರಿ" ಎಂದು ಅಬ್ಬರಿಸುತ್ತಾ ಸೀತೆಯನ್ನು ನುಂಗಲು ಬಂದಳು. ಅದನ್ನು ನೋಡಿದ ರಾಮ "ಲಕ್ಷ್ಮಣಾ" ಎಂದ. ಒಡನೇ ಲಕ್ಷ್ಮಣ ಹರಿತವಾದ ಕತ್ತಿಯಿಂದ ಶೂರ್ಪಣಖಿಯ ಕಿವಿ ಮೂಗುಗಳನ್ನು ಕತ್ತರಿಸಿ ಹಾಕಿದ. ಕಾಡೆಲ್ಲಾ ಪ್ರತಿಧ್ವನಿಸುವಂತೆ ಶೂರ್ಪಣಖಿ "ಹೋ" ಎಂದು ಅಳುತ್ತಾ ಅಣ್ಣ ಖರನ ಬಳಿ ಹೋದಳು. ಅವಳನ್ನು ನೋಡಿದ ಖರ "ಏನಾಯಿತು ? ಏಕೆ ಅಳುತ್ತೀ ? ನಿನ್ನ ಕಿವಿ ಮೂಗುಗಳು ಏನಾದುವು ?" ಎಂದ.

ಆಗ ಶೂರ್ಪಣಖಿ ಹೇಳುವುದನ್ನು ಬಹಳ ಚೆನ್ನಾಗಿ ವರ್ಣಿಸಿದಾರೆ ವಾಲ್ಮೀಕಿ. "ನಿನಗೆ ಏನಾಯಿತು? ಏಕೆ ಅಳುತ್ತೀ" ಎಂದು ಖರ ಕೇಳಿದ್ದಕ್ಕೆ ಶೂರ್ಪಣಖಿ ರಾಮ ಲಕ್ಷ್ಮಣರ ಸೌಂದರ್ಯ ವನ್ನು ವರ್ಣಿಸುತ್ತಾಳೆ.

ರಾಮಾಯಣದಲ್ಲಿ ವಾಲ್ಮೀಕಿ ಪಾತ್ರಗಳನ್ನೂ ಬಹಳ ಚೆನ್ನಾಗಿ ಅಳವಡಿಸಿದಾರೆ. ರಾಮನ ಅನುಚರ ಎನಿಸಿದ ಲಕ್ಷ್ಮಣ "ದೈವ ಎಲ್ಲಿದೆ ?" ಎಂದು ರಾಮನೊಡನೆ ವಾದಿಸುತ್ತಾನೆ.

ನಿರಂತರವಾಗಿ ತಪಸ್ಸು ಮಾಡುತ್ತಿರುವ ಜಾಬಾಲಿ ನಾಸ್ತಿಕವಾದ ಮಾಡುತ್ತಾರೆ, ರಾಕ್ಷಸಿ ಶೂರ್ಪಣಖಿ, ವಾನರ ಸ್ತ್ರೀ ತಾರೆ ಭಗವತ್ಸ್ವರೂಪವನ್ನು ವರ್ಣಿಸುತ್ತಾರೆ. ಇಂಥ ವೈವಿಧ್ಯತೆ ಯಿಂದ ಕೂಡಿದೆ ರಾಮಾಯಣ

ರಾಮಾಯಣದಲ್ಲಿ ಇನ್ನೊಂದು ವೈಶಿಷ್ಟ್ಯ ನೋಡಲು ಸಿಗುತ್ತದೆ. ರಾಮನಲ್ಲಿ ಪೂರ್ಣ ರಾಗಿ ಅನುರಕ್ತರಾದವರು ಎಂದರೆ ರಾವಣನ ಕುಟುಂಬದವರೇ ಆಗಿದಾರೆ.

ರಾವಣ ರಾಮನ ವೀರ್ಯಕ್ಕೆ ಮಾರುಹೋಗುತ್ತಾನೆ. "ತಂ ಮನ್ಯೇ ರಾಘವಂ ವೀರಂ ನಾರಾಯಣ ಮನಾಮಯಂ" ಎಂದು ರಾವಣ ಯುದ್ಧದಲ್ಲಿ. ರಾಮನಿಂದ ಸೋಲಿಸಲ್ಪಟ್ಟಾಗ ಉದ್ಗರಿಸುತ್ತಾನೆ.

"ವೀರನಾದ ರಾಘವ ಸಾಕ್ಷಾತ್ ನಾರಾಯಣನೇ. ಇದರಲ್ಲಿ ಸಂಶಯವಿಲ್ಲ" ಎಂದು ಶತ್ರು ರಾವಣ ರಾಮನ ವೀರ್ಯಗುಣಕ್ಕೆ ಮೋಹಿತನಾಗುತ್ತಾನೆ. ರಾವಣ ವೀರ್ಯ ಗುಣವನ್ನು ಮೆಚ್ಚಿ ದರೆ ಅವನ ತಮ್ಮ ವಿಭೀಷಣ ರಾಮನ ಶೀಲಕ್ಕೆ ಮಾರು ಹೋಗುತ್ತಾನೆ. ಶೀಲವಂತನಾದ ರಾಘವನನ್ನೇ ಶರಣು ಹೋಗುತ್ತಾನೆ.

ರಾವಣ ವೀರ್ಯಕ್ಕೆ, ವಿಭೀಷಣ ಶೀಲಕ್ಕೆ ಆಕರ್ಷಿತರಾದರೆ ಅವರ ತಂಗಿ ಶೂರ್ಪಣಖಿ ರಾಮನ ಸೌಂದರ್ಯಕ್ಕೆ ವಶಳಾಗುತ್ತಾಳೆ. ರಾಮನ ಪೂರ್ಣವಾದ ಸೌಂದರ್ಯದ ಸವಿಯನ್ನು ಆಸ್ವಾದಿಸಿದವಳು ಎಂದರೆ ಶೂರ್ಪಣಖಿಯೇ.

ತನ್ನ ಮೂಗು ಕಿವಿಗಳನ್ನು ಕತ್ತರಿಸಿದಾನೆ ಲಕ್ಷ್ಮಣ. ಆದಾಗ್ಯೂ ಖರ "ಏಕೆ ಅಳುತ್ತೀ ? ಯಾರೇನು ಮಾಡಿದರು ನಿನಗೆ ? " ಎಂದು ಕೇಳಿದಾಗ ಮೊದಲು "ರಾಮಲಕ್ಷ್ಮಣರ ರೂಪವನ್ನು" ವರ್ಣಿಸುತ್ತಾಳೆ.

**ತರುಣೌ ರೂಪಸಂಪನ್ನೌ ಸುಕುಮಾರೌ ಮಹಾಬಲೌ ।**
**ಪುಂಡರೀಕ ವಿಶಾಲಾಕ್ಷೌ ಚೀರಕೃಷ್ಣಾಜಿನಾಂಬರೌ ॥**

ಎಂಬ ಶ್ಲೋಕದಿಂದ ರಾಮಲಕ್ಷ್ಮಣರ ಅಪ್ರತಿಮ ಸೌಂದರ್ಯವನ್ನು ವರ್ಣಿಸುತ್ತಾಳೆ.

ತರುಣರು, ಇಬ್ಬರೂ ಅಪ್ರತಿಮ ರೂಪ ಸಂಪತ್ತುಳ್ಳವರು, ಸುಕುಮಾರರು ಕೋಮಲ ಕಾಯರು ಆದರೂ ಮಹಾಬಲವುಳ್ಳವರು. ತಾವರೆಯಂತೆ ವಿಶಾಲವಾದ ನೇತ್ರವುಳ್ಳವರು ಎಂದಿದಾಳೆ.

ರಾಮಾಯಣದಲ್ಲಿ ರಾಮನ ಕಣ್ಣುಗಳನ್ನು ಇಷ್ಟು ಚೆನ್ನಾಗಿ ವರ್ಣಿಸಿರುವವಳು ಎಂದರೆ ಶೂರ್ಪಣಖಿಯೇ. ಎಂಥ ರಸಿಕ-ಹೃದಯ ಅವಳದ್ದು. ತನ್ನ ಮೂಗು ಕಿವಿಗಳನ್ನು ಕೊಯ್ದಿದಾನೆ. ಲಕ್ಷ್ಮಣ. ಮೂಗು ಕಿವಿಗಳನ್ನು ಕೊಯ್ಯುವಾಗ ಲಕ್ಷ್ಮಣ ಅವಳನ್ನು ಸ್ಪರ್ಶಿಸಿದ್ದನ್ನು ನೆನಸಿಕೊಂಡು

"ಅಯ್ಯೋ—ಕುಯ್ಯುವುದಂತೂ ಕುಯ್ದ. ಇನ್ನೂ ಸ್ವಲ್ಪ ನಿದಾನವಾಗಿ ಕುಯ್ಯಬಾರದಿತ್ತೆ? ಇನ್ನೂ ಒಂದರೆಕ್ಷಣ ಆತನ ಸ್ಪರ್ಶಸುಖವನ್ನು ಅನುಭವಿಸುತ್ತಿದ್ದೆನಲ್ಲ" ಎಂದುಕೊಂಡಳಂತೆ!

ರಾಮಲಕ್ಷ್ಮಣರ ಸೌಂದರ್ಯವನ್ನು ಶೂರ್ಪಣಖಿ ವರ್ಣಿಸಿರುವುದು ಅನುಪಮವಾಗಿದೆ. ಅದಕ್ಕೇ ತಿರುಮಂಗೈ ಆಳ್ವಾರ್ ಶೂರ್ಪಣಖಿಯನ್ನು "ರಾವಣ ನಲ್ ತಂಗೈ" ಎಂದಿದಾರೆ. "ರಾವಣನ ಒಳ್ಳೆಯ ತಂಗಿ" ಶೂರ್ಪಣಖಿ ಎಂದು ಹೇಳಿ ಲಕ್ಷ್ಮಣ ಅವಳ ನಾಸಿಕಾಚ್ಛೇದನ ಮಾಡಿದ್ದು ಅನುಚಿತ ಎನ್ನುತ್ತಾರೆ. "ಏಕೆ ಅನುಚಿತ?" ಎಂದು ಕೇಳಿದರೆ ಅದಕ್ಕೆ ಆಳ್ವಾರ್ ಹೇಳುತ್ತಾರೆ:

"ಶೂರ್ಪಣಖಿ ಮೂಗಿಲ್ಲದೆಯೇ ರಾಮಲಕ್ಷ್ಮಣರ ಸೌಂದರ್ಯವನ್ನು ಅಷ್ಟು ಚೆನ್ನಾಗಿ ನಾಲ್ಕು ಶ್ಲೋಕಗಳಲ್ಲಿ ಹಾಡಿದಳು. ನಿಜವಾಗಿ ಅವಳಿಗೆ ಮೂಗೂ ಇದ್ದಿದ್ದರೆ ಇನ್ನೆಷ್ಟು ಚೆನ್ನಾಗಿ ರಾಮನ ಸೌಂದರ್ಯವನ್ನು ವರ್ಣಿಸುತ್ತಿದ್ದಳೋ" ಎನ್ನುತ್ತಾರೆ.

ಪೆರಿಯಾಳ್ವಾರ್ ಶೂರ್ಪಣಖಿಯ ಮೂಗಿನ ಮೇಲೆಯೇ ಇಪ್ಪತ್ತು ಪಾಶುರಗಳನ್ನು ರಚಿಸಿದಾರೆ. ಅವರು ಹೇಳುತ್ತಾರೆ. "ವಾಸ್ತವದಲ್ಲಿ ಶೂರ್ಪಣಖಿ ಒಳ್ಳೆಯವಳು. ಆದರೆ, ಅವಳ ಮೂಗು ಮಾತ್ರ ಕೆಟ್ಟದು. ಕಾಡಿನಲ್ಲಿ ಋಷಿಗಳಿರುವುದನ್ನು ಮೂಗಿನಿಂದ ವಾಸನೆ ಹಿಡಿಯುವುದರ ಮೂಲಕ ತಿಳಿದುಕೊಂಡು ಹೋಗಿ ಋಷಿಗಳನ್ನು ಕೊಲ್ಲುತ್ತಿದ್ದಳು. ಆದ್ದರಿಂದಲೇ ಲಕ್ಷ್ಮಣ ಅವಳ ಮೂಗನ್ನು ಕೊಯ್ದ" ಎಂದಿದಾರೆ.

ಶೂರ್ಪಣಖಿ ರಾಮನನ್ನು ಬಯಸಿದಳು. ಇದು ತಪ್ಪೆ? ಎಲ್ಲರನ್ನೂ ಅಪಹರಿಸುವ ರೂಪವನ್ನುಳ್ಳ ರಾಮನನ್ನು ಬಯಸಿದ್ದರಲ್ಲಿ ಶೂರ್ಪಣಖಿ ತಪ್ಪು ಮಾಡಲಿಲ್ಲ. ಆದರೆ ಅವಳು ರಾಮನನ್ನು ಮಾತ್ರ ಬಯಸಿದಳು. ಶ್ರೀವೈಷ್ಣವ ಸಿದ್ಧಾಂತದ ರೀತ್ಯಾ ಲಕ್ಷ್ಮೀವಿಶಿಷ್ಟನಾದ ನಾರಾಯಣನೇ ಶರಣ್ಯ. ಲಕ್ಷ್ಮೀನಾರಾಯಣನನ್ನೇ ಶರಣು ಹೋಗಬೇಕು. ಆಗಲೇ ಶರಣಾಗತಿ ಫಲಿಸುತ್ತದೆ. ಇಲ್ಲಿ ಶೂರ್ಪಣಖಿ ಸೀತೆ—ಅಂದರೆ ಲಕ್ಷ್ಮೀ ಬೇಡ; ರಾಮ—ಅಂದರೆ ನಾರಾಯಣ ಬೇಕು ಎಂದಳು. ಅದಕ್ಕೇ ಕರ್ಣನಾಸಗಳನ್ನು ಕಳೆದುಕೊಂಡಳು.

ಅಣ್ಣತಂಗಿ ಇಬ್ಬರೂ ಒಂದೇ ತಕ್ಕಡಿ. ರಾವಣ ಸೀತೆ ಬೇಕು, ರಾಮ ಬೇಡ ಎಂದ. ಶೂರ್ಪಣಖಿ ಸೀತೆ ಬೇಡ, ರಾಮ ಮಾತ್ರ ಬೇಕು ಎಂದಳು. ಕೇವಲ ಸೀತೆಯನ್ನು ಅಂದರೆ ಲಕ್ಷ್ಮಿಯನ್ನು ಮಾತ್ರ ಬಯಸಿದ ರಾವಣ ಮರಣವನ್ನಪ್ಪಿದ.

ಬರೀ ನಾರಾಯಣನೇ ಬೇಕು ಎಂದ ಶೂರ್ಪಣಖಿ ಕಿವಿ ಮೂಗುಗಳನ್ನು ಕಳೆದುಕೊಂಡಳು.

ವಿಭೀಷಣನು ಸೀತಾರಾಮರಿಬ್ಬರನ್ನೂ ಸೇವಿಸಿದ. ರಾಜ್ಯ ದೊರೆಯಿತು. ಲಂಕೆಗೆ ಒಡೆಯನಾದ.

## ರಾಮನಿಂದ ಹದಿನಾಲ್ಕುಸಾವಿರ ರಾಕ್ಷಸರಿಂದೊಡಗೂಡಿದ ಖರನ ವಧೆ

ಶೂರ್ಪಣಖಿ ತನಗಾದ ಪರಿಭವವನ್ನು ಕಂಡು ಖರನಲ್ಲಿ ಹೇಳಿಕೊಂಡಳು. ಒಡನೇ ಕೋಪದಿಂದ ಖರ ಮೊದಲು ಹದಿನಾಲ್ಕು ಜನ ಬಲಾಢ್ಯರಾದ ರಾಕ್ಷಸರನ್ನು ಕಳುಹಿಸಿದ. ಅವರನ್ನೆಲ್ಲ ರಾಮ ಒಬ್ಬನೇ ಕೊಂದ. ಖರ ತಾನೇ ಸ್ವತಃ ಹದಿನಾಲ್ಕು ಸಾವಿರ ರಾಕ್ಷಸ ಸೈನ್ಯದೊಂದಿಗೆ ಪಂಚವಟಿಗೆ ಬಂದ.

ಮಹತ್‌ಸೈನ್ಯ ಬರುತ್ತಿರುವುದನ್ನು ಕಂಡ ರಾಮ. ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ ಸೀತೆಯನ್ನು ಗುಹೆಯಲ್ಲಿರಿಸಿ ನೀನು ಧನುಃಪಾಣಿಯಾಗಿ ಗುಹಾದ್ವಾರದಲ್ಲಿ ನಿಂತು ಕಾಯುತ್ತಿರು, ನಾ

ಈ ರಾಕ್ಷಸರನ್ನೆಲ್ಲ ಕೊಲ್ಲುತ್ತೇನೆ" ಎಂದ.

ಅದಕ್ಕೆ ಲಕ್ಷ್ಮಣ "ಅಣ್ಣಾ, ನೀನೆ ಸೀತೆಯೊಡನೆ ಗುಹೆಯಲ್ಲಿರು; ನಾನೇ ರಾಕ್ಷಸರನ್ನೆಲ್ಲಾ ಕೊಲ್ಲುತ್ತೇನೆ" ಎಂದ

"ಹಾಗಲ್ಲ ಲಕ್ಷ್ಮಣ ಈಗ ನಾ ಹೇಳುವಂತೆ ಕೇಳು" ಎಂದು ಸೀತಾ ಲಕ್ಷ್ಮಣರನ್ನು ಕಳುಹಿಸಿ ರಾಮ ಕವಚವನ್ನು ಧರಿಸಿ ಧನುಸ್ಸನ್ನು ಹಿಡಿದು ನಿಂತ, ಯುದ್ಧಕ್ಕೆ ಅನುವಾಗಿ.

ಖರನೊಡನೆ ಬಂದಿದ್ದ ಹದಿನಾಲ್ಕುಸಾವಿರ ರಕ್ಕಸರನ್ನೂ ನಾರೆಮಾಡಿದ ದೂಷಣ ತ್ರಿಶಿರಸ್ಸರನ್ನೂ ಕೊಂದ. ರಾಮನ ಯುದ್ಧನೀತಿ, ಅವನ ಕರಲಾಘವ ಅನುಪಮವಾಗಿತ್ತು. ಧನುಸ್ಸನ್ನು ಹಿಡಿದು ನಿಂತ ರಾಮ ಪ್ರಳಯಕಾಲದ ರುದ್ರನಂತೆ ಕಂಗೊಳಿಸುತ್ತಿದ್ದ. ಧನುಸ್ಸನ್ನು ಹಿಡಿದುನಿಂತದ್ದು ಮಾತ್ರ ಕಾಣುತ್ತಿತ್ತು. ಯಾವಾಗ ಬಾಣ ತೆಗೆಯುತ್ತಿದ್ದನೋ, ತೆಗೆದ ಬಾಣ ವನ್ನು ಯಾವ ಸಮಯದಲ್ಲಿ ಹೂಡುತ್ತಿದ್ದನೋ--ಯಾವಾಗ ನಾಣನ್ನು ಎಳೆಯುತ್ತಿದ್ದನೋ ಇವೊಂದೂ ಗೊತ್ತಾಗುತ್ತಿರಲಿಲ್ಲ ಶತ್ರುಗಳಿಗೆ ಬಾಣ ಬಂದು ತಾಕುವುದು, ಅದರಿಂದ ಅವರು ಹತರಾಗಿ ಬೀಳುವುದು ಮಾತ್ರ ಗೊತ್ತಾಗುತ್ತಿತ್ತು.

ಕೊನೆಗೆ ಉಳಿದವ ಖರ ಒಬ್ಬನೇ. ಅವನನ್ನೂ ರಾಮ ತನ್ನ ಅಮೋಘವಾದ ಬಾಣದಿಂದ ಹೊಡೆದ ಖರ ಮೇಲೆ ಬೀಳಲು ಬಂದಾಗ ರಾಮ ಒಂದಡಿ ಹೆಜ್ಜೆಯನ್ನು ಹಿಂದಿಟ್ಟು ಬಾಣವನ್ನು ಸಂಧಾನ ಮಾಡಿ ಖರನ ಮೇಲೆ ಪ್ರಯೋಗಿಸಿದ. ಖರ ಸತ್ತುಬಿದ್ದ.

ಖರವಧೆ ಪ್ರಕರಣದಲ್ಲಿ ರಾಮ ಒಂದಡಿ ಹಿಂದಕ್ಕೆ ಹೆಜ್ಜೆಯನ್ನಿಟ್ಟ ಎಂದಿದೆಯಲ್ಲ ಅದು ರಾಮನ ವೀರ್ಯಕ್ಕೆ ಕುಂದಾಗಲಿಲ್ಲವೆ ? ಎಂಬ ಆಕ್ಷೇಪ ಎತ್ತುವುದೂ ಉಂಟು.

ಆದರೆ, ರಾಮ ಭಯಪಟ್ಟು ಹೆಜ್ಜೆಯನ್ನು ಹಿಂದಕ್ಕಿಡಲಿಲ್ಲ. ಖರ ಮೇಲೆ ಬೀಳಲು ಬಂದ. ಅವನನ್ನು ಹೊಡೆಯುವುದು ಅನಿವಾರ್ಯವಾಗಿತ್ತು. ಧನುಸ್ಸಿಗೂ ಖರನಿಗೂ ಮಧ್ಯೆ ಸ್ವಲ್ಪದೂರ ಇರುವುದು ಅವಶ್ಯ. ಅದರಿಂದ ನಾಣನ್ನು ಆಕರ್ಣಾಂತವಾಗಿ ಸೆಳೆಯಲು ಅನುಕೂಲವಾಗಲು ರಾಮ ಒಂದು ಹೆಜ್ಜೆಯನ್ನು ಹಿಂದಕ್ಕಿಟ್ಟ. ರಾಮ ಅಪ್ರತಿಮವೀರ. ಅವನ ವೀರ್ಯ ಸತ್ಯ ವಾದುದು. ಅದಕ್ಕೇ ಮುಂದೆ ಇಂದ್ರಜಿತ್ತನನ್ನು ಕೊಲ್ಲುವಾಗ ಲಕ್ಷ್ಮಣ ರಾಮನ ವೀರ್ಯದ ಮೇಲೆಯೇ ಪ್ರಮಾಣ ಮಾಡುತ್ತಾನೆ.

ಮುಹೂರ್ತಾರ್ಧ ಕಾಲದಲ್ಲಿ ಹದಿನಾಲ್ಕುಸಾವಿರ ರಾಕ್ಷಸರನ್ನು ಅನಾಯಾಸವಾಗಿ ಹೊಡೆದು ಹಾಕಿದ ರಾಮ, ಸಂತೋಷದಿಂದ ಗುಹೆಯತ್ತ ಸಾಗಿದ.

ರಾಕ್ಷಸರನ್ನು ಕೊಲ್ಲುವ ಈ ಪ್ರಕರಣದಲ್ಲಿ ರಾಮ ಒಬ್ಬನೇ ಏಕೆ ಎಲ್ಲರನ್ನೂ ಕೊಲ್ಲಲು ನಿಶ್ಚಯಿಸಿದ ? ಎಂಬ ಪ್ರಶ್ನೆ ಏಳುತ್ತದೆ ಇದಕ್ಕೆ ಕಾರಣ ಉಂಟು.

ಕಾಡಿಗೆ ಹೋಗುವ ಸಮಯದಲ್ಲಿ ಪ್ರಣಯಕೋಪದಿಂದ ಸೀತೆ "ಸ್ತ್ರಿಯಂ ಪುರುಷ ವಿಗ್ರಹಂ ಅಂದರೆ "ಗಂಡುವೇಷದ ಹೆಂಗಸು" ಎಂದಿದ್ದಳು ಅದನ್ನೇ ಮನಸ್ಸಿನಲ್ಲಿಟ್ಟು ರಾಮ, ಸೀತೆಗೆ ತನ್ನ ಪರಾಕ್ರಮವನ್ನು ತೋರಿಸಬೇಕು ಎಂದು ಕಾಯುತ್ತಿದ್ದ. ಈಗ ಅದಕ್ಕೆ ಅವಕಾಶ ಒದಗಿತು.

ಸೀತೆ ಗುಹಾದ್ವಾರದಿಂದ ಎಲ್ಲವನ್ನೂ ನೋಡುತ್ತಿದ್ದಳು. ರಾಮ ಬರುತ್ತಿರುವುದನ್ನು ಕಂಡಳು ತಾನೂ ಗುಹೆಯಿಂದ ಹೊರಗೆ ಓಡಿಬಂದು ಬರುತ್ತಿದ್ದ ರಾಮನಿಗೆ ಅಭಿಮುಖವಾಗಿ ಹೋಗಿ ಅವನನ್ನು ಸಂತೋಷದಿಂದ ಅಪ್ಪಿದಳು. ಜಯಲಕ್ಷ್ಮಿ, ಸೀತಾಲಕ್ಷ್ಮಿಯರ ಅಪ್ಪುಗೆಯಲ್ಲಿ

ಬಂಧಿತನಾದ ರಾಮ. ರಾಕ್ಷಸರಿಂದ ಅವನ ಮೈಮೇಲೆ ಆದ ಗಾಯಗಳೆಲ್ಲ ಸೀತೆಯ ಅಪ್ಪುಗೆಯಿಂದ ಮಾಯವಾದವು.

**ತಂ ದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ।**

**ಬಭೂವ ಹೃಷ್ಟಾ ವೈದೇಹಿ ಭರ್ತಾರಂ ಪರಿಷಸ್ವಜೇ॥**

ಇತ್ತ ರಾಕ್ಷಸರೆಲ್ಲ ನಾಶವಾದುದನ್ನು ನೋಡಿದ ಅಕಂಪನ ಎಂಬ ರಾಕ್ಷಸ ಭಯದಿಂದ ಕಂಪಿಸುತ್ತಾ ಓಡಿದ ರಾವಣನ ಬಳಿಗೆ. ರಾವಣನಿಗೆ ಎಲ್ಲವನ್ನೂ ಹೇಳಿದ. ರಾವಣ ಕೋಪದಿಂದ "ನನ್ನ ಸೈನ್ಯ ಏನಾಯಿತು ?" ಎಂದ.

''ಎಲ್ಲರನ್ನೂ ಆ ರಾಮ ಒಬ್ಬನೇ ಕೊಂದ'' ಎಂದು ಅಕಂಪನ ರಾಮನ ವೀರ್ಯವನ್ನು ಹೊಗಳಲು ಪ್ರಾರಂಭಿಸಿದ.

ರಾವಣ ಕೇಳಿದ ''ಎಲ್ಲರನ್ನೂ ರಾಮ ನಿಗ್ರಹಿಸಿದ ಎಂದೆಯಲ್ಲ. ನೀ ಮಾತ್ರ ಹೇಗೆ ತಪ್ಪಿಸಿಕೊಂಡು ಬಂದೆ ?''

"ನಾನು ಸ್ತ್ರೀವೇಷ ಧರಿಸಿ ತಪ್ಪಿಸಿಕೊಂಡು ಬಂದೆ" ಎಂದ ಅಕಂಪನ.

"ಹಾಗಾದರೆ ರಾಮ ನಿನ್ನನ್ನು ನೋಡಲಿಲ್ಲವೆ ? ನೋಡಿದ್ದರೆ ಗೊತ್ತಾಗುತ್ತಿರಲಿಲ್ಲವೇ ?"

"ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡದ ಶೀಲವಂತ ರಾಮ. ಪರಸ್ತ್ರೀಯರೇ ಏಕೆ ? ಸ್ತ್ರೀ ವೇಷ ಧರಿಸಿದವರತ್ತ ಸಹ ತನ್ನ ದೃಷ್ಟಿಯನ್ನು ಹೊರಳಿಸದವ" ಎಂದ ಅಕಂಪನ.

ಅಕಂಪನನ ಮಾತನ್ನು ಕೇಳಿದ ರಾವಣ ರಥವನ್ನು ಹತ್ತಿ ಮಾರೀಚನ ಆಶ್ರಮಕ್ಕೆ ಬಂದ. ರಾಮನನ್ನು ಬಗ್ಗುಬಡಿಯಲು ಉಪಾಯ ಕೇಳಲು ಬಂದೆ ಎಂದ.

ರಾಮನ ಹೆಸರನ್ನು ಕೇಳಿದ ಒಡನೆ ಮಾರೀಚ ಬೆದರಿದ. ರಾವಣನಿಗೆ ಬುದ್ಧಿವಾದ ಹೇಳಿದ. "ರಾಮ ಎಂದರೆ ಸಾಮಾನ್ಯನಲ್ಲ. ವೃಥಾ ಅವನೊಂದಿಗೆ ವೈರ ಕಟ್ಟಿಕೊಳ್ಳಬೇಡ. ನಿನಗಾಗದವರು ಯಾರೋ ನೀನು ಚೆನ್ನಾಗಿರುವುದನ್ನು ಸಹಿಸದೆ ನಿನ್ನನ್ನು ಹಾಳುಮಾಡಲು ಈ ಸಲಹೆ ಕೊಟ್ಟಿದ್ದಾರೆ. ಬೇಡ. ನಿನ್ನವರೊಡನೆ ಸುಖವಾಗಿರು, ರಾಮನ ಗೊಡವೆಗೆ ಹೋಗಬೇಡ" ಎಂದ.

ಮಾರೀಚನ ಮಾತನ್ನು ಕೇಳಿ ರಾವಣ ಲಂಕೆಗೆ ಹಿಂದಿರುಗಿದ. ಶೂರ್ಪಣಖಿ ರಾಮನ ವೀರ್ಯವನ್ನು ಕಣ್ಣಾರೆ ಕಂಡವಳು ಅಲ್ಲಿಂದ ರಾವಣನ ಬಳಿಗೆ ಹೋದಳು. ರಾವಣ ಒಡ್ಡೋಲಗದಲ್ಲಿ ಕುಳಿತಿದ್ದ. ಹೋದವಳೇ "ನೀ ಏನು ಆಡಳಿತ ನಡೆಸುತ್ತೀ, ನಿನ್ನ ಆಳ್ವಿಕೆಯಲ್ಲಿ ಸ್ವಲ್ಪವೂ ಬಿಗಿಯಿಲ್ಲ, ಹಿಡಿತವಿಲ್ಲ. ರಾಕ್ಷಸರೆಲ್ಲ ನಾಶವಾಗುವ ಕಾಲ ಬಂದಿತು. ತಪಸ್ವಿಗಳೆಲ್ಲ ನಿಶ್ಚಿಂತೆಯಿಂದ ತಪಸ್ಸು ಮಾಡುತ್ತಿದ್ದಾರೆ" ಎಂದಳು.

ರಾವಣ "ನನ್ನ ರಾಕ್ಷಸ ಸೈನ್ಯವನ್ನು ಜನಸ್ಥಾನದಲ್ಲಿ ಇಟ್ಟಿದ್ದೆನಲ್ಲ" ಎಂದ.

"ಇಟ್ಟಿದ್ದೆ, ಅದು ಈಗ ಇಲ್ಲ. ಎಲ್ಲವನ್ನೂ ಆ ದಶರಥ ಕುಮಾರ ರಾಮ ಕೊಂದ. ಆ ರಾಮ ಎಂಥವನು ಗೊತ್ತೆ ನಿನಗೆ ? ತಾವರೆಯಂಥ ಕಣ್ಣುಳ್ಳವ ದೀರ್ಘಬಾಹು. ಅವನು ಧನುಸ್ಸನ್ನು ಹಿಡಿದಿರುವಷ್ಟೇ ಕಾಣಿಸುವುದು. ಅವನು ಬಾಣ ಬಿಡುವ ವೈಖರಿ ಹೇಗಿದೆ ಗೊತ್ತೆ ? ಅವನೊಬ್ಬನೇ ಎಲ್ಲ ರಾಕ್ಷಸರನ್ನೂ ಕೊಂದ. ಬಲಶಾಲಿ ಎಂದರೆ ರಾಮ. ಅವನ ಜೊತೆಗೆ ಅವನಷ್ಟೇ ಪರಾಕ್ರಮಿಯಾದ ತಮ್ಮ ಒಬ್ಬ ಇದ್ದಾನೆ. ಅವನೇ ಲಕ್ಷ್ಮಣ. ಆ ರಾಮನಿಗೆ "ಸೀತೆ" ಎಂಬ ಸುಂದರ ಪತ್ನಿ. ಅವಳ ಸೌಂದರ್ಯ ಇಂತಿಷ್ಟು ಎಂದು ಹೇಳುವುದಕ್ಕೇ, ಆಗದು. ಒಟ್ಟಿನಲ್ಲಿ

ಹೇಳುವುದಾದರೆ ಅವಳು ಯಾರಿಗೆ ಪತ್ನಿ ಆಗುವಳೋ ಅವರು ಮೂರು ಲೋಕಕ್ಕೂ ಒಡೆಯರಾಗುವರು. ಅವಳನ್ನು ನಿನಗೆ ಪತ್ನಿಯನ್ನಾಗಿ ತರೋಣ ಎಂದು ಹೋದೆ. ಹೀಗೆ ವಿರೂಪ ಹೊಂದಿದೆ" ಎಂದಳು ಶೂರ್ಪಣಖಿ.

ರಾವಣ ತಂಗಿಯನ್ನು ಸಮಾಧಾನಪಡಿಸಿ ಅಲ್ಲಿಂದ ರಥವನ್ನೇರಿ ಪುನಃ ಮಾರೀಚನ ಆಶ್ರಮಕ್ಕೆ ಬಂದ.

ಎರಡನೆಯ ಸಲ ರಾವಣ ತನ್ನ ಬಳಿ ಬಂದದ್ದನ್ನು ಕಂಡ ಮಾರೀಚ ನಡುಗಿದ.

## ಮಾರೀಚನ ಬುದ್ಧಿವಾದ

ಮಾರೀಚನು ಬಂದ ರಾವಣನನ್ನು ಸತ್ಕರಿಸಿದ, ಕುಶಲಪ್ರಶ್ನೆ ಮಾಡಿದ ರಾವಣ ಹೇಳಿದ ಹಿಂದೆ ನಾ ಹೇಳಿದಂತೆ ರಾಮಪತ್ನಿಯಾದ ಸೀತೆಯನ್ನು ಅಪಹರಿಸಲೇಬೇಕು ಎಂದು ಸಂಕಲ್ಪಿಸಿದ್ದೇನೆ. ನೀನು ನನಗೆ ಸಹಾಯಮಾಡು" ಎಂದ. ಮಾರೀಚ ರಾವಣನಿಗೆ ಹೇಳಿದ. ರಾವಣ, ಲೋಕದಲ್ಲಿ ಪ್ರಿಯವಾದ, ಮಾತನ್ನಾಡುವವರು ಸುಲಭವಾಗಿ ದೊರೆಯುತ್ತಾರೆ. ಆದರೆ, ಅಪ್ರಿಯವಾದರೂ, ಪಥ್ಯವನ್ನೂ, ಹಿತವನ್ನೂ ಹೇಳುವವರು ಅಂತಹ ಮಾತನ್ನು ಕೇಳುವವರೂ ವಿರಳ.

"ಹೇಳುತ್ತೇನೆ ಕೇಳು. ರಾಮನು ಸಾಮಾನ್ಯ ಎಂದುಕೊಳ್ಳಬೇಡ. ಇನ್ನೂ ಹನ್ನೆರಡು ವರ್ಷದ ಬಾಲಕನಾಗಿದ್ದಾಗ ಅವನು ಬಿಟ್ಟ ಬಾಣ ಇನ್ನೂ ನನ್ನನ್ನು ಗಾಬರಿಗೊಳಿಸುತ್ತದೆ. ಅಂದ ಮೇಲೆ ಈಗ ರಾಮ ಬೆಳೆದಿದಾನೆ. ಅವನ ಬಲ ಎಷ್ಟಿದ್ದೀತು! ನೀನೇ ಊಹಿಸು, ಅಲ್ಲದೆ ರಾವಣ ರಾಮನೊಂದಿಗೆ ನಾ ಮೂರು ಸಲ ಹಳಗಿದ್ದೇನೆ. ಮೂರು ಸಲವೂ ಅವನ ವೀರ್ಯವನ್ನು ಕಂಡಿದೇನೆ.

"ಒಮ್ಮೆ ಹನ್ನೆರಡು ವರ್ಷ ವಯಸ್ಸಾಗಿದ್ದಾಗ ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಲು ಬಂದಿದ್ದ ಅವನ ಬಾಣದ ರುಚಿಯನ್ನು ಕಂಡೆ. ಈಗಲೂ ಅದನ್ನು ನೆನೆಸಿಕೊಂಡರೇ ಮೈ ನಡುಗುತ್ತದ.

"ಇನ್ನೆರಡು ಸಲ ರಾಮ ಕಾಡಿನಲ್ಲಿದ್ದಾಗ ಮೃಗರೂಪ ಧರಿಸಿ ಹೋಗಿದ್ದೆ. ಆಗಲೂ ಹೇಗೋ ತಪ್ಪಿಸಿಕೊಂಡು ಬಂದೆ. ರಾಮನನ್ನು ಕಾಡಿನಲ್ಲಿ ಕಂಡಂದಿನಿಂದ ನಾನು ಕೆಟ್ಟ ಕೆಲಸ ಮಾಡುವುದಿಲ್ಲ. ಎಲ್ಲಿ ನೋಡಿದರೂ ರಾಮನೇ ಕಾಣಬರುತ್ತಾನೆ. ಅದರಿಂದ ಮುನಿವೇಷ ಧರಿಸಿ ಯೋಗಮಾರ್ಗವನ್ನು ಹಿಡಿದೆ. ರಾವಣ, ನಾನು ಈ ಕಾಡಿನ ಮರಮರಗಳಲ್ಲೂ ರಾಮನನ್ನು ಕಾಣುತ್ತಿದೇನೆ."

**ವೃಕ್ಷೇ ವೃಕ್ಷೇ ಚ ಪಶ್ಯಾಮಿ ಪಾಶಹಸ್ತ ಮಿವಾಂತಕಂ |**

**ಗೃಹೀತಧನುಷಂ ರಾಮಂ ಪಾಶಹಸ್ತಮಿವಾಂತಕಂ ||**

"ಮರಮರಗಳಲ್ಲೂ ಕೃಷ್ಣಾಜಿನವನ್ನುಟ್ಟು ಕೈಯಲ್ಲಿ ಬಿಲ್ಲನ್ನು ಹಿಡಿದ ರಾಮನನ್ನು ಕಾಣುತ್ತಿದೇನೆ. ಅಷ್ಟೇಕೆ? ರಾವಣ, "ರ" ಕಾರದಿಂದ ಪ್ರಾರಂಭವಾಗುವ ಹೆಸರನ್ನು ಕೇಳಿದರೇ ಮೈ ಥರಗುಟ್ಟುತ್ತದೆ. "ರಥ" ಎನ್ನುವುದಕ್ಕೂ ಭಯ. ಎಲ್ಲಿ ''ರಥ'' ಎನ್ನುವಾಗ ''ರಾಮ" ಬಂದುಬಿಡುತ್ತಾನೋ ಎಂದು ಅಂಜುತ್ತೇನೆ.

**ರಕಾರಾದೀನಿ ನಾಮಾನಿ ರಾಮತ್ರಸ್ತಸ್ಯರಾವಣ |** ಎನ್ನುತ್ತಾನೆ. ರಾವಣ, ನಿನ್ನ ಹಿತಕ್ಕಾಗಿ ಹೇಳುತ್ತೇನೆ ಕೇಳು. ಬೇಡ ರಾಮನಗೊಡವೆ ನಿನಗೆ.

"ಪ್ರಪಂಚದಲ್ಲಿ ಒಬ್ಬರು ಮಾಡಿದ ತಪ್ಪಿಗೆ ಮತ್ತೊಬ್ಬರು ಶಿಕ್ಷೆಯನ್ನು ಅನುಭವಿಸುವಂತಾ

ಗುತ್ತದೆ. ರಾವಣ, ನೀ ಮಾಡುವ ತಪ್ಪಿಗೆ ನಾನು ಶಿಕ್ಷೆ ಅನುಭವಿಸುವುದು ಬೇಡ. ನೀನು ರಾಮನ ಗೊಡವೆಗೆ ಹೋಗಬೇಡ. ಸುಖವಾಗಿರು ಎಂದು ಹೇಳುತ್ತೇನೆ. ನೀನು ಅದನ್ನು ಕೇಳದಿದ್ದರೆ ನಿನಗೆ ಇಷ್ಟ ಬಂದಂತೆ ಮಾಡು. ಆದರೆ ನನ್ನನ್ನು ಮಾತ್ರ ನಿನ್ನ ಯೋಚನೆಯಲ್ಲಿ ಸೇರಿಸಿಕೊಳ್ಳ ಬೇಡ.' ಬೇಡಿಕೊಳ್ಳುತ್ತೇನೆ" ಎಂದು ಮಾರೀಚ ಅಂಗಲಾಚಿದ. ರಾವಣ ಕ್ರುದ್ಧನಾಗಿ ''ಮಾರೀಚ ನಾ ಇಲ್ಲಿಗೆ ಬಂದದ್ದು ನಿನ್ನ ಸಲಹೆಯನ್ನು ಕೇಳಲು ಅಲ್ಲ. ನಾ ಹೇಳುವಂತೆ ನೀ ಕೇಳಲೇಬೇಕು; ಇಲ್ಲವಾದರೆ ನೋಡಿಕೋ, ಇದೇ ಕತ್ತಿಯಿಂದ ಇದೀಗಲೇ ನಿನ್ನ ತಲೆಯನ್ನು ತರಿದುಹಾಕಿಬಿಡುವೆ, ಎಚ್ಚರಿಕೆ. ನಾ ಹೇಳುವಂತೆ ನೀನು ಚಿನ್ನದ ಜಿಂಕೆಯಾಗು. ಬೆಳ್ಳಿಯ ಬೊಟ್ಟುಗಳು ಮೈಮೇಲೆ ಇರಲಿ, ಸುಂದರವಾದ ಮಾಯಾ ಮೃಗದ ರೂಪವನ್ನು ಧರಿಸಿ ಸೀತೆ ಮರುಳಾಗುವಂತೆ ಆಶ್ರಮದ ಮುಂದೆ ಸುಳಿದಾಡು. ಸೀತೆ ಬಯಸುತ್ತಾಳೆ, ರಾಮನನ್ನು ಪ್ರೇರಿಸುತ್ತಾಳೆ. ಆಗ ನೀನು ರಾಮನ ಕೈಗೆ ಸಿಗದೆ ಬಹುದೂರ ರಾಮನನ್ನು ಕರೆದುಕೊಂಡು ಹೋಗು. ರಾಮ ನಿನ್ನನ್ನು ಬಾಣದಿಂದ ಹೊಡೆದರೆ ಸಾಯುವ ಮೊದಲು ರಾಮನ ದನಿಯನ್ನು ಅನುಕರಿಸಿ, ' ಹಾ ಸೀತೆ, ಹಾ ಲಕ್ಷ್ಮಣಾ'' ಎಂದು ಕೂಗು. ಹೀಗೆ ನೀ ಮಾಡಲೇಬೇಕು ಇಲ್ಲವಾದರೆ ಇಲ್ಲೇ ನೀನು ಸಾವನ್ನಪ್ಪುವಿ" ಎಂದ.

ಮಾರೀಚ ಕತ್ತರಿಯ ಮಧ್ಯೆ ಸಿಕ್ಕಿಕೊಂಡ ಅಡಕೆಯಂತೆ ಆದ. ಹೋಗದಿದ್ದರೆ ರಾವಣನ ಕೈಯಿಂದ ಸಾವು, ಹೋದರೆ ರಾಮನ ಕೈಯಿಂದ ಸಾವು. ಯಾವುದು ಒಳಿತು ? ಎಂದು ಯೋಚಿಸಿ ಕೊನೆಗೆ "ರಾಮನ ಕೈಯಿಂದ ಸಾಯುವುದೇ ಲೇಸು" ಎಂದು ತೀರ್ಮಾನಿಸಿದ.

ಮಾರೀಚನ ಉಪದೇಶ ರಾವಣನಿಗೆ ಹತ್ತಲಿಲ್ಲ. ಮೃತ್ಯುವಶನಾಗುತ್ತಿರುವ ರೋಗಿಗೆ ಔಷಧ ಪಥ್ಯವಾಗದು. ಅಂತೆಯೇ ರಾವಣ ಮರಣೋನ್ಮುಖನಾಗುತ್ತಿರುವ ವೇಳೆ ಅವನಿಗೆ ಬದುಕುವ ದಾರಿ ರುಚಿಸಲಿಲ್ಲ.

ಮಾರೀಚನನ್ನು ನಿರ್ಬಂಧಿಸಿದ. ಏನೂ ಮಾಡಲು ಆಗದೆ ಮಾರೀಚ ರಾವಣನೊಡನೆ ಜನ ಸ್ಥಾನವನ್ನು ತಲುಪಿದ.

ರಾವಣ ಹೇಳಿದಂತೆಯೇ ಮಾರೀಚ ಚಿನ್ನದ ಜಿಂಕೆಯಾಗಿ ಮಾರ್ಪಟ್ಟ. ಥಳಥಳಿಸುವ ನಕ್ಷತ್ರಗಳಂತೆ ಬೆಳ್ಳಿಯ ಬೊಟ್ಟುಗಳು ಆ ಜಿಂಕೆಯ ಮೈಮೇಲೆ; ನವರತ್ನದಂತೆ ಹೊಳೆಯುವ ಕಣ್ಣುಗಳು; ಮಿಂಚಿನಂತೆ ದೇಹಕಾಂತಿ; ಇಂಥ ಸುಂದರ ಜಿಂಕೆಯ ರೂಪವನ್ನು ಧರಿಸಿದ ಮಾರೀಚ. ರಾಮನ ಆಶ್ರಮದ ಮುಂದೆ ಸುಳಿದಾಡುತ್ತಲಿದ್ದ.

**ಸೀತಾಪಹರಣ**

ಸ್ವರ್ಣಮಯವಾದ ಜಿಂಕೆ ಬೆಳಗಿನ ಹೊಂಬಿಸಿಲಿನಲ್ಲಿ ಥಳಥಳ ಹೊಳೆಯುತ್ತಾ ರಾಮಾಶ್ರ ಮದ ಮುಂದೆ ಸುಳಿಯುತ್ತಿತ್ತು. ಆ ವೇಳೆಯಲ್ಲಿ ಸೀತೆ ತೋಟದಲ್ಲಿ ಮಲ್ಲಿಗೆ ಮುಂತಾದ ಹೂ ಗಳನ್ನು ಬಿಡಿಸುತ್ತಿದ್ದಳು. ಇದ್ದಕ್ಕಿದ್ದಂತೆ ಮಿಂಚಿನಂತೆ ಹೊಳೆಯುವ ಜಿಂಕೆಯನ್ನು ನೋಡಿದಳು. ಆ ಜಿಂಕೆಯೋ ಸ್ವಲ್ಪ ಹೊತ್ತು ಸೀತೆಗೆ ಸ್ವಲ್ಪ ದೂರದಲ್ಲೇ, ಕುಣಿಯುತ್ತಾ ನೆಗೆಯುತ್ತಾ ಹುಲ್ಲನ್ನು ತಿನ್ನುತ್ತಿತ್ತು. ಇನ್ನೊಂದು ಕ್ಷಣದಲ್ಲಿ ಸೀತೆಗೆ ಸ್ವಲ್ಪ ಹತ್ತಿರದಲ್ಲೇ ಸುಳಿಯತೊಡಗಿತು. ಅದ್ಭುತ ವಾದ ಆ ಜಿಂಕೆಯನ್ನು ಸೀತೆ ಕಂಡಳು. ವಿಸ್ಮಯಪಟ್ಟಳು. ರಾಮನನ್ನು ಕೂಗಿ "ಆರ್ಯಪುತ್ರ, ಅಲ್ಲಿ ನೋಡಿ. ಆ ಜಿಂಕೆ ಎಷ್ಟು ನಯನಮನೋಹರವಾಗಿದೆ ! ಅದನ್ನು ಸಾಕಿಕೊಳ್ಳಬೇಕು ಎಂದು ಅನಿಸುತ್ತಿದೆ. ಅದನ್ನು ನೋಡಿದಾಗಿನಿಂದ ಅದರ ಮೇಲೆ ನನ್ನ ಮನಸ್ಸು ನಟ್ಟುಹೋಗಿದೆ. ಅದನ್ನು

ಹಿಡಿದು ತಂದುಕೊಡಿ. ಅಯೋಧ್ಯೆಗೆ ಹಿಂದಿರುಗುವಾಗ ಅದನ್ನೂ ಜೊತೆಯಲ್ಲಿ ಕರೆದುಕೊಂಡು ಹೋದರೆ ಎಲ್ಲರೂ ಆಶ್ಚರ್ಯಪಡುತ್ತಾರೆ. ಜೀವಂತವಾಗಿಯೇ ಹಿಡಿದು ತನ್ನಿ. ಹಾಗೆ ಆಗದಿದ್ದರೆ ಅದನ್ನು ಕೊಂದು ಅದರ ಚರ್ಮವನ್ನಾದರೂ ತನ್ನಿ" ಎಂದಳು.

ರಾಮ "ಲಕ್ಷ್ಮಣಾ ಬಿಲ್ಲನ್ನು ಕೊಡು. ಸೀತೆಯ ಮನಸ್ಸನ್ನು ಅಪಹರಿಸಿದ ಈ ಜಿಂಕೆಯನ್ನು ಈಗಲೇ ಹಿಡಿದು ತರುತ್ತೇನೆ" ಎಂದ.

ಲಕ್ಷ್ಮಣ "ಅಣ್ಣಾ, ಇದು ನಿಜವಾದ ಜಿಂಕೆಯಲ್ಲ. ಎಲ್ಲಾದರೂ ಲೋಕದಲ್ಲಿ ಚಿನ್ನದ ಜಿಂಕೆ ಇರುವುದುಂಟೆ. ಇದು ರಾಕ್ಷಸರ ಮಾಯೆ, ಅಲ್ಲದೆ ನೋಡು. ಈ ಜಿಂಕೆ ಒಂಟಿಯಾಗಿ ಹುಲ್ಲು ಮೇಯುತ್ತಿದೆ. ಕಾಡಿನಲ್ಲಿರುವ ಇತರ ಮೃಗಗಳು ಇದರ ಬಳಿ ಬರುವುದಕ್ಕೇ ಅಂಜುತ್ತವೆ ನೋಡು. ಅಲ್ಲದೆ ಇದು ಮಾಯೆಯೆ ಸರಿ. ಹಿಂದೆ ಎರಡು ಬಾರಿ ಮೃಗರೂಪ ಧರಿಸಿ ಬಂದ ಮಾರೀಚನೇ ಈಗಲೂ ಜಿಂಕೆಯ ರೂಪ ಧರಿಸಿ ಬಂದಿದಾನೆ. ಅಣ್ಣಾ ಖಂಡಿತ ಹೋಗುವುದು ಬೇಡ" ಎಂದ.

ರಾಮ "ಇರಲಿ ಬಿಡು ಲಕ್ಷ್ಮಣ, ವನವಾಸದ ಇಷ್ಟು ವರ್ಷಗಳ ಕಾಲದಲ್ಲಿ ವೈದೇಹಿ ಏನನ್ನೂ ಬಯಸದೆ ಇದೀಗ ಈ ಜಿಂಕೆಗೆ ಆಸೆಪಟ್ಟಿದಾಳೆ. ಒಂದು ಕ್ಷಣದಲ್ಲಿ ಇದನ್ನು ಹಿಡಿದು ತರುತ್ತೇನೆ. ಒಂದು ವೇಳೆ ನೀ ಹೇಳುವಂತೆ ರಾಕ್ಷಸನೇ ಆಗಿದ್ದರೆ ರಾಕ್ಷಸ ಸಂಹಾರ ಆಗುತ್ತದೆ" ಎಂದು ಹೇಳಿ ಸೀತೆಯನ್ನು ಕಾಯ್ದುಕೊ ಎಚ್ಚರಿಕೆ ಎಂದು ಎಚ್ಚರಿಸಿ ಬಿಲ್ಲನ್ನು ಹಿಡಿದು ಜಿಂಕೆಯ ಬೆನ್ನಟ್ಟಿ ಹೊರಟ.

ಆ ಜಿಂಕೆ ರಾಮ ತನ್ನನ್ನು ಬೆನ್ನಟ್ಟಿ ಬರುವುದನ್ನು ಕಂಡು ವೇಗವಾಗಿ ಓಡತೊಡಗಿತು. ಇನ್ನೂ ಬಹಳ ದೂರ ಓಡಿತು, ಹಿಡಿಯಲು ಆಗದು ಎಂದು ರಾಮ, ಬಾಣ ಹೂಡಲು ಸಿದ್ಧನಾಗುತ್ತಿದ್ದಂತೆ ರಾಮನಿಗೆ ಸಮೀಪದಲ್ಲಿ ಸುಳಿದಾಡತೊಡಗಿತು.

"ಹತ್ತಿರದಲ್ಲೇ ಇದೆ, ಹಿಡಿದೇಬಿಡುವ" ಎಂದು ರಾಮ ಓಡಿದರೆ ಕೈಗೆ ಸಿಗುವಷ್ಟು ಹತ್ತಿರದಲ್ಲಿದ್ದ ಜಿಂಕೆ ಛಂಗನೆ ನೆಗೆದು ಬಹಳದೂರ ಓಡಿಹೋಗುತ್ತಿತ್ತು. ಹೀಗೆ ರಾಮನನ್ನು ಬಹು ದೂರಕ್ಕೆ ಒಯ್ದಿತು. ನೋಡಿದ ರಾಮ. ಇನ್ನು ಈ ಜಿಂಕೆ ಸಿಗುವುದಿಲ್ಲ. ಇದನ್ನು ಕೊಂದೇ ತೀರಬೇಕು ಎಂದು ಬಾಣವನ್ನು ಧನುಸ್ಸಿಗೆ ಹೂಡಿದ, ಬಿಟ್ಟ. ಬಾಣ ತಗುಲಿದ್ದೇ ತಡ "ಜಿಂಕೆ ಕೆಳಗೆ ಬಿದ್ದಿತು." ಬೀಳುವಾಗ ರಾಮನ ದನಿಯನ್ನು ಅನುಕರಿಸಿ "ಹಾ ಸೀತೇ, ಹಾ ಲಕ್ಷ್ಮಣಾ" ಎಂದು ಕೂಗಿಕೊಂಡೇ ಅಸು ನೀಗಿತು. ಸಾಯುವಾಗ ಜಿಂಕೆಯ ರೂಪ ಹೋಗಿ ರಾಕ್ಷಸರೂಪವೇ ಬಂದಿತು.

ಇಲ್ಲಿ ಒಂದು ಸಂಶಯ ಮೂಡುತ್ತದೆ. ಮಾರೀಚ ರಾಮನ ಮಹಿಮೆಯನ್ನು ತಿಳಿದೂ ರಾವಣನಿಗೆ ಬೋಧಿಸಿದ. ಅವನೇ ಏಕೆ ಕೊನೆಯಲ್ಲಿ ರಾಮನ ದನಿಯನ್ನು ಅನುಕರಿಸಿ ಹಾಗೆ ಕೂಗಬೇಕಾಗಿತ್ತು ? ಮಾರೀಚ ಹಾಗೆ ಕೂಗದೆ ಇದ್ದಿದ್ದರೆ ಮುಂದಿನ ಅನರ್ಥವೇ ಆಗುತ್ತಿರಲಿಲ್ಲವಲ್ಲ ? ಎಂಬುದೇ ಈ ಸಂಶಯ.

ಈ ಸಂಶಯಕ್ಕೆ ಸಮಾಧಾನವನ್ನು ಆಳ್ವಾರ್ ಹೇಳುತ್ತಾರೆ. ಏಕಾಏಕಿ ಉದಯವಾದ ತತ್ವಜ್ಞಾನ ಬಹಳಕಾಲ ನಿಲ್ಲುವುದಿಲ್ಲ. ಅದಕ್ಕೇ ಶ್ರೀಕೃಷ್ಣ "ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ" ಎಂದ. ಜ್ಞಾನ, ವೈರಾಗ್ಯ ಬಹಳಕಾಲದ ಸತತವಾದ ಅಭ್ಯಾಸದಿಂದ ಲಭ್ಯವಾಗುವಂಥದು. ಅನೇಕ ಭಕ್ತರಿಂದ ಭಗವದ್ಗುಣಗಳನ್ನು ಕೇಳುವುದರಿಂದ, ಸತತವಾಗಿ ಹಿರಿಯರ ಸೇವೆಯಿಂದ, ನಿರಂತರವಾದ ಅಭ್ಯಾಸಬಲದಿಂದ ಜ್ಞಾನ ಲಭ್ಯವಾಗುವುದಾದರೆ. ವೈರಾಗ್ಯ ಏರ್ಪಡುವು

ದಾದರೆ ಅದು ಪಕ್ವವಾದ ಜ್ಞಾನ, ವೈರಾಗ್ಯವೆನಿಸುತ್ತದೆ. ಅಂಥ ಪಕ್ವವಾದ ಜ್ಞಾನವು ಮೋಕ್ಷಕ್ಕೆ ಸಾಧಕವಾಗುತ್ತದೆ. ಮಾರೀಚನಿಗೆ ಹಾಗೆ ಅಭ್ಯಾಸಬಲದಿಂದ ಜ್ಞಾನ ಉದಯಿಸಲಿಲ್ಲ. ಭಯದಿಂದ ಏಕಾಏಕಿ ವೈರಾಗ್ಯವನ್ನು ಗ್ರಹಣಮಾಡಿದ. ಆದ್ದರಿಂದಲೇ ಜ್ಞಾನ ಶಾಶ್ವತವಾಗಿ ನಿಲ್ಲಲಿಲ್ಲ ಮಾರೀಚನಿಗೆ. ಸಾಯುವಾಗ ತನ್ನ ರಾಕ್ಷಸ ಬುದ್ಧಿಯೇ ಕಾಣಿಸಿಕೊಂಡಿತು. ಅದಕ್ಕೇ ಶ್ರೀಕೃಷ್ಣ "ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ" ಎಂದು ಹೇಳಿದ.

ಸರ್ವಕಾಲದಲ್ಲೂ ಭಗವಂತನನ್ನೇ ಧ್ಯಾನಿಸುತ್ತಿರಬೇಕು. ಆದ್ದರಿಂದ ನಿರಂತರವಾಗಿ ಭಗವದ್ಧ್ಯಾನವನ್ನು ಮಾಡುವ ಅಭ್ಯಾಸ ಇಟ್ಟುಕೊಂಡಿದಾರೆ ಜ್ಞಾನಿಗಳು.

ಮಾರೀಚನ ಕೂಗು ಸೀತಾಲಕ್ಷ್ಮಣರ ಕಿವಿಯನ್ನು ಮುಟ್ಟಿತು. ಕೂಗನ್ನು ಕೇಳಿದ ಸೀತೆ ಭಯ ವಿಹ್ವಲಳಾದಳು. ಲಕ್ಷ್ಮಣಾ, ಶೀಘ್ರವಾಗಿ ಹೋಗು, ನಿಮ್ಮಣ್ಣ ಆಪತ್ತಿಗೆ ಸಿಲುಕಿಕೊಂಡಿರುವಂತಿದೆ" ಎಂದಳು.

ಲಕ್ಷ್ಮಣ "ಇಲ್ಲ ತಾಯಿ. ಅಣ್ಣನಿಗೆ ರಾಕ್ಷಸರಿಂದ, ದಾನವರಿಂದ, ಪಿಶಾಚಿಗಳಿಂದ ಸ್ವಲ್ಪವೂ ಭಯ ಇಲ್ಲ. ಹದಿನಾಲ್ಕುಸಾವಿರ ರಕ್ಕಸರನ್ನು ಏಕಾಕಿಯಾಗಿ ತರಿದದ್ದನ್ನು ನೀವೇ ಕಾಣಲಿಲ್ಲವೆ? ಅಂಥ ಶೂರನಿಗೆ ಆಪತ್ತು ಎಂದರೆ ಏನು? ಇದು ರಾಕ್ಷಸರ ಮಾಯೆ" ಎಂದ. "ನೀ ಹೋಗಲೇಬೇಕು ಲಕ್ಷ್ಮಣಾ. ನಿಜವಾಗಿ ರಾಮನಿಗೆ ಕಷ್ಟ ಬಂದೇ ಇದೆ, ಹೋಗು. ಹಾಗೆ ಹೇಳಬೇಡ. ಇದೀಗಲೇ ಇಲ್ಲಿಂದ ಹೊರಡು" ಎಂದಳು. "ತಾಯಿ. ಭಯಪಡಬೇಡಿ. ಅಣ್ಣನ ಪರಾಕ್ರಮ ನನಗೆ ಗೊತ್ತು. ನಾ ಮೊದಲೇ ಹೇಳಿದಂತೆ ಆ ಮಾಯಾಜಿಂಕೆಯ ಮಾಯೆ ಇದು. ರಾಮನಿಗೆ ಏನೂ ಆಗುವುದಿಲ್ಲ, ಸಮಾಧಾನವಾಗಿರಿ" ಎಂದ, ಲಕ್ಷ್ಮಣ. "ಏನು ? ಹೋಗುವುದಿಲ್ಲವೆ ನೀನು? ಲಕ್ಷ್ಮಣಾ, ಹ್ಞಾ, ಇದೀಗ ನನಗೆ ನಿನ್ನ ಅಭಿಪ್ರಾಯ ಅರ್ಥವಾಯಿತು. ಕೈಂಕರ್ಯದ ನೋಗಿನಲ್ಲಿ ಭರತನಿಂದ ಪ್ರೇರಿಸಲ್ಪಟ್ಟು, ನೀ ಅರಣ್ಯಕ್ಕೆ ಬಂದೆ. ಸಮಯ ಕಾಯುತ್ತಿದ್ದೆ ಇದುವರೆಗೆ. ಈಗ ಗೊತ್ತಾಯಿತು. ನೀನು ರಾಮ ಸೇವೆಗಾಗಿ ಬರಲಿಲ್ಲ. ನನಗಾಗಿ ಬಂದೆ ಎಂದು. ಎಚ್ಚರಿಕೆ. ನಾನು ರಾಮನನ್ನಲ್ಲದೆ ಉಳಿದವರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಎಷ್ಟು ದಿನಗಳಿಂದ ನನಗಾಗಿ ಹೊಂಚು ಹಾಕುತ್ತಿದ್ದೆ ? ಮಿತ್ರರೂಪದ ಶತ್ರು ನೀನು. ಈಗ ನೀನು ಹೋಗದಿದ್ದರೆ ಗೋದಾವರಿಯಲ್ಲಿ ಬಿದ್ದು ಪ್ರಾಣಬಿಡುತ್ತೇನೆ" ಎಂದಳು ಸೀತೆ.

ಈ ಕರ್ಣಕಠೋರವಾದ ನುಡಿಗಳನ್ನು ಕೇಳಲಾರದೆ ಕಿವಿಗಳನ್ನು ಮುಚ್ಚಿಕೊಂಡ ಲಕ್ಷ್ಮಣ. ಮುಂದೆ ಒಂದು ಕ್ಷಣವೂ ಅಲ್ಲಿ ನಿಲ್ಲಲಾಗಲಿಲ್ಲ ಅವನಿಂದ.

"ತಾಯೇ, ನಿಮಗೆ ಮಂಗಳವಾಗಲಿ. ನಾನು ಹೋಗಿಬರುತ್ತೇನೆ. ವನದೇವತೆಗಳೇ ಸೀತೆಯನ್ನು ರಕ್ಷಿಸಿ" ಎಂದು ಹೇಳಿ ಆಶ್ರಮದಿಂದ ಹೊರಹೊರಟ. ಲಕ್ಷ್ಮಣ ಆಶ್ರಮದಿಂದ ಹೊರಗೆ ಹೋಗುವುದನ್ನೇ ಕಾಯುತ್ತಿದ್ದ ರಾವಣ. ರಾಮಲಕ್ಷ್ಮಣರು ಇಲ್ಲದ ಆಶ್ರಮಕ್ಕೆ ಪ್ರವೇಶಿಸಿದ, ಸನ್ಯಾಸಿವೇಷದಲ್ಲಿ. ಬಾಗಿಲಲ್ಲಿ ನಿಂತ ಸನ್ಯಾಸಿಯನ್ನು ಸ್ವಾಗತಿಸಿದಳು ಸೀತೆ. "ಭಗವನ್, ನನ್ನ ಪತಿ ಮೈದುನ ಹೊರಗೆ ಹೋಗಿದಾರೆ. ಇನ್ನೇನು ಈಗ ಬಂದುಬಿಡುತ್ತಾರೆ ಅವರು. ನಿಮ್ಮನ್ನು ಸತ್ಕರಿಸುತ್ತಾರೆ" ಎಂದಳು. ಸೀತೆ, "ನಿನ್ನ ಸೌಂದರ್ಯ ಕಣ್ಮನಗಳನ್ನು ಸೆಳೆಯುತ್ತಿದೆ. ನೀನು ಏಕೆ ಕಾಡಿನಲ್ಲಿ ಇರುವೆ ? ಯಾರು ನೀನು ?" ಎಂದ ರಾವಣಸನ್ಯಾಸಿ.

"ನಾನು ಮಹಾರಾಜ ದಶರಥನ ಸೊಸೆ, ಜನಕನ ಮಗಳು, ರಾಮನಿಗೆ ಪತ್ನಿ. ಪಿತೃವಾಕ್ಯ ಪರಿಪಾಲನೆಗಾಗಿ ರಾಮನೊಡನೆ ನಾನೂ ಕಾಡಿಗೆ ಬಂದೆ. ನನ್ನನ್ನು "ಸೀತೆ ಎನ್ನುತ್ತಾರೆ" ಎಂದು

ತನ್ನ ಪರಿಚಯವನ್ನು ಮಾಡಿಕೊಟ್ಟಳು. "ನಿನ್ನನ್ನು ನೋಡಿದಾಗಿನಿಂದ ನನ್ನ ಮನಸ್ಸು ನಿನ್ನಲ್ಲೇ ಲೀನವಾಗಿ ಬಿಟ್ಟಿದೆ. ಸೀತೆ, ನೀನು ನನ್ನನ್ನು ವರಿಸು. ನೋಡು ನನ್ನ ರೂಪವನ್ನು" ಎನ್ನುತ್ತಾ ಸನ್ಯಾಸ ರೂಪವನ್ನು ಬಿಟ್ಟು ತನ್ನ ನಿಜವಾದ ರೂಪವನ್ನು ತೋರಿದ ರಾವಣ. ಸಿಂಹವನ್ನು ಕಂಡ ಹರಿಣಿಯಂತೆ ಬೆದರಿದಳು ಸೀತೆ.

ರಾವಣ ಹೇಳತೊಡಗಿದ "ಸೀತೆ, ನನ್ನನ್ನು ಸಾಮಾನ್ಯ ಎಂದುಕೊಳ್ಳಬೇಡ. ವಿಶ್ರವಸ್ಸಿನ ಮಗ ನಾನು. ಕುಬೇರನ ತಮ್ಮ. ನೀನು ನನ್ನನ್ನು ವರಿಸಿದೆಯಾದರೆ ಸಕಲ ಭೋಗಗಳನ್ನೂ ಪಡೆಯುವೆ. ಆ ರಾಮ, ನಾರುಡೆಯನ್ನು ಉಟ್ಟು ಕಾಡು ಕಾಡು ಸುತ್ತುವ ಅಲ್ಪ ಮನುಷ್ಯ. ನಿನಗೇನು ಸುಖ ಕೊಟ್ಟಾನು ? ನೀನು ನನ್ನಲ್ಲಿ ಅನುರಕ್ತಳಾಗಿ ಇದೇ ಈ ರಥವನ್ನು ಏರಿಕೊ" ಎಂದ.

ಸೀತೆ ರಾವಣನಿಗೆ ಬುದ್ಧಿವಾದ ಹೇಳಿದಳು. "ರಾವಣ, ಇದು ನಿನ್ನ ಯೋಗ್ಯತೆಗೆ ಸರಿಯಾದುದಲ್ಲ. ಕುಬೇರನ ತಮ್ಮನಾಗಿ ಪರಸ್ತ್ರೀಯನ್ನು ಬಯಸುವ ಈ ನೀಚ ಕೆಲಸ ನಿನಗೆ ತಕ್ಕುದಲ್ಲ" ಎಂದು ಪರಿಪರಿಯಾಗಿ ಹೇಳಿದಳು.

ರಾವಣ ಹೊತ್ತಾಗುತ್ತ ಇರುವುದನ್ನು ಗಮನಿಸಿದ. ಇನ್ನು ತಡಮಾಡಿದರೆ ಕಾರ್ಯ ಕೆಡುತ್ತದೆ ಎಂದು ಸೀತೆಯನ್ನು ಬಲಾತ್ಕಾರವಾಗಿ ರಥದಲ್ಲಿ ಎತ್ತಿ ಕೂರಿಸಿಕೊಂಡು ಹೊರಟೇ ಬಿಟ್ಟ.

ಸೀತೆ ಕೊಸರಿದಳು. ಕೂಗಿದಳು. ಅಳಲಿದಳು ! ಬಾಯ್ಬಿಡೆದು ಮೊರೆಯಿಟ್ಟಳು. "ಹಾ ಲಕ್ಷ್ಮಣಾ ! ಹಾ ರಾಮಾ" ಎನ್ನುತ್ತ ಚೀರಿದಳು ಅಬಲೆ. "ಅಯ್ಯೋ, ನನ್ನನ್ನು ಕಾಯುವವರು ಯಾರೂ ಇಲ್ಲವೆ ? ಹಾ ರಾಮಾ, ನೀ ಎಲ್ಲಿರುವೆ ? ರಾಮಾನುಜಾ ನೀ ಕೋಪಿಸಿಕೊಳ್ಳಬೇಡ ನನ್ನ ಮೇಲೆ ! ನನ್ನನ್ನು ಕಾಯುವವರು ಯಾರೂ ಇಲ್ಲವೆ ?" ಎಂದು ಗೋಳಿಡುತ್ತಾ ಇದ್ದಳು ಸೀತೆ. ಸ್ವಲ್ಪದೂರ ಹೋದ ಮೇಲೆ ಸೀತೆ ಕೂಗುತ್ತಿದ್ದುದು ಜಟಾಯುವಿಗೆ ಕೇಳಿಸಿತು.

ಝಗ್ಗನೆ ಎದ್ದಿತು. ರಾವಣ ಸೀತೆಯನ್ನು ಹೊತ್ತುಕೊಂಡು ಹೋಗುತ್ತಿರುವುದು ಕಂಡಿತು. ಅಲ್ಲಿಂದ ಒಂದೇ ಹಾರಿಗೆ ಹಾರಿ ರಾವಣನ ರಥದ ಇದಿರು ಬಂದು ನಿಂತಿತು ಆ ಪಕ್ಷಿ. "ನಿಲ್ಲು-ನಿಲ್ಲು. ನಾ ಇರುವಾಗ ಅದು ಹೇಗೆ ನೀನು ಜಾನಕಿಯನ್ನು ಹೊತ್ತುಕೊಂಡು ಹೋಗಲು ಸಾಧ್ಯ ? ಏ ಕಳ್ಳ ನಿಲ್ಲೋ ! ನಿನ್ನಲ್ಲಿ ಶಕ್ತಿ ಇದ್ದರೆ ನನ್ನೊಡನೆ ಮೊದಲು ಯುದ್ಧಮಾಡು" ಎಂದು ಅಬ್ಬರಿಸಿತು. ರಾವಣನ ರಥ ಮುಂದೆ ಹೋಗದಂತೆ ಅಡ್ಡಗಟ್ಟಿತು. ನಿರ್ವಾಹವಿಲ್ಲದೆ ರಾವಣ ಜಟಾಯುವಿನೊಡನೆ ಹೋರಾಡಲು ಸಿದ್ಧನಾದ. ಅರವತ್ತುಸಾವಿರ ವರ್ಷ ತುಂಬಿದ ಜಟಾಯು ತನ್ನ ಕೊಕ್ಕಿನಿಂದ ಕುಕ್ಕಿ, ಪಕ್ಷಗಳಿಂದ ಹೊಡೆದು ರಾವಣನ ರಥವನ್ನೂ, ಸಾರಥಿಯನ್ನೂ, ಧ್ವಜವನ್ನೂ ಪುಡಿಮಾಡಿತು. ರಾವಣನೊಡನೆ ದ್ವಂದ್ವ ಯುದ್ಧ ನಡೆಸಿತು. ದುಷ್ಟನಾದ ರಾವಣ ಜಟಾಯುವಿನ ರೆಕ್ಕೆಗಳನ್ನು ಕತ್ತಿಯಿಂದ ಕತ್ತರಿಸಿದ. ಮರ್ಮಸ್ಥಾನಕ್ಕೆ ಏಟು ಬಿದ್ದುದ್ದರ ಪರಿಣಾಮವಾಗಿ ಜಟಾಯು ಧೊಪ್ಪೆಂದು ಕೆಳಗೆ ಬಿದ್ದಿತು. ಪ್ರಾಣ ಹೋಗುವ ಸ್ಥಿತಿ ಒದಗಿತು. ಆಗ ಸೀತೆ ಜಟಾಯುವಿನ ಹತ್ತಿರಕ್ಕೆ ಓಡಿಬಂದಳು. ಜಟಾಯುವಿನ ತಲೆಯನ್ನು ಸವರಿ "ಜಟಾಯುವೇ, ನನಗಾಗಿ ನೀ ನಿನ್ನ ಅಮೂಲ್ಯವಾದ ಪ್ರಾಣವನ್ನೇ ಕೊಟ್ಟೆ. ರಾಮಲಕ್ಷ್ಮಣರು ಬರುವವರೆಗೆ ಜೀವಿಸಿದ್ದು ನೀ ಅವರಿಗೆ ನನ್ನ ಸಮಾಚಾರ ಹೇಳು" ಎಂದು ಹೇಳಿದಳು.

ಅಷ್ಟರಲ್ಲಿ ರಾವಣ ಮತ್ತೆ ಬಂದು ಸೀತೆಯನ್ನು ಅಂಗೈಯಲ್ಲೇ ಬಲವಾಗಿ ಹಿಡಿದುಕೊಂಡು ಆಕಾಶಮಾರ್ಗದಲ್ಲಿ ಮತ್ತೆ ಹೊರಟ. ಸೀತೆ ದಾರಿಯುದ್ದಕ್ಕೂ "ರಾಮಾ–ಲಕ್ಷ್ಮಣಾ" ಎಂದು

ಕೂಗುತ್ತಿದ್ದಳು. ದಾರಿಯಲ್ಲಿ ಒಂದು ಪರ್ವತದ ಶಿಖರದ ಮೇಲೆ ಐವರು ವಾನರರು ಕುಳಿತಿದ್ದು ದನ್ನು ಕಂಡು ಉತ್ತರೀಯದಲ್ಲಿ ತನ್ನ ಕೆಲವು ಆಭರಣಗಳನ್ನು ಕಟ್ಟಿ ಕೆಳಗೆ ಹಾಕಿದಳು

ಸಮುದ್ರವನ್ನು ದಾಟಿ ರಾವಣ ಸೀತೆಯೊಡನೆ ಲಂಕೆಯನ್ನು ಸೇರಿದ. ಲಂಕೆಯ ಸಮಸ್ತ ವೈಭವವನ್ನೂ ಸೀತೆಗೆ ತೋರಿಸಿದ. ಸೀತೆ ಅದನ್ನು ಕಣ್ಣೆತ್ತಿಯೂ ನೋಡಲಿಲ್ಲ. ಪರಿಪರಿಯಾಗಿ ಸೀತೆಯ ಮನಸ್ಸನ್ನು ಒಲಿಸುವ ಪ್ರಯತ್ನ ಮಾಡಿದ. ಯಾವುದಕ್ಕೂ ಸೀತೆ ಮಣಿಯಲಿಲ್ಲ. ಕೋಪಗೊಂಡ ರಾವಣ ''ಹೇ ಸೀತೆ! **ನಿನಗೆ ಹನ್ನೆರಡು ತಿಂಗಳ ಅವಧಿ ಕೊಟ್ಟಿದೇನೆ.** ಅಷ್ಟ ರಲ್ಲಿ ನನ್ನನ್ನು ನೀ ವರಿಸದಿದ್ದರೆ ನನ್ನ ಬೆಳಗಿನ ಉಪಹಾರಕ್ಕೆ ನಿನ್ನನ್ನು ಉಪಯೋಗಿಸಿಕೊಳ್ಳುತ್ತೇನೆ ಎಚ್ಚರಿಕೆ!" ಎಂದು ಹೇಳಿ ಅಶೋಕವನದಲ್ಲಿ ಸೀತೆಯನ್ನಿಟ್ಟ. ಅವಳಿಗೆ ಕಾವಲಾಗಿ ಕ್ರೂರರಾದ ರಾಕ್ಷಸಿಯರನ್ನು ನಿಯಮಿಸಿದ.

### ಸೀತಾಪಹರಣದಲ್ಲಿ ಅಡಗಿರುವ ತತ್ವ

ಆಸೆಯಿರುವವರೆಗೂ ಪರಮಾತ್ಮನ ದಯೆ ದೊರಕದು. ಸೀತೆ ಪ್ರಾಪಂಚಿಕ ವಿಷಯವಾದ ಜಿಂಕೆಯಲ್ಲಿ ಮನಸಿಟ್ಟಳು. ಅದರ ಫಲವಾಗಿಯೇ ರಾಮನಿಂದ ದೂರವಾದಳು. ವಿಷಯಗಳಲ್ಲಿ ಆಸಕ್ತಿಯಿರುವವರೆಗೂ ಪರಮಾತ್ಮನು ದೂರವಾಗಿಯೇ ಇರುವನೆಂಬುದನ್ನು ಪ್ರಪಂಚಕ್ಕೆ ಮನ ಗಾಣಿಸಿದಳು. ಭರತನ ಉಪಜಾಪಕ್ಕೆ ಒಳಗಾಗಿ ಸೇವೆಯ ನೆಪದಲ್ಲಿ ತನ್ನನ್ನು ಪಡೆಯಲು ಬಂದ ಮೋಸಗಾರನೆಂದು ಲಕ್ಷ್ಮಣನ ವಿಷಯದಲ್ಲಿ ಅಪಚಾರವಟ್ಟಳು. ಹೀಗೆ ಭಾಗವತಾಪಚಾರದ ಫಲ ವಾಗಿಯೂ ಜಾನಕಿ ರಾಮನ ಅಗಲಿಕೆಯನ್ನು ಪಡೆಯಬೇಕಾಯಿತು.

ತನ್ನ ಆಚರಣೆಯಿಂದ ವಿಷಯ ಸುಖೇಚ್ಛೆ, ಭಾಗವತಾಪಚಾರ ಎಂಥ ಘೋರವಾದ ಫಲ ವನ್ನು ಕೊಡುತ್ತದೆ ಎಂಬುದನ್ನು ಜಾನಕಿ ಪ್ರಪಂಚಕ್ಕೆ ತಾನೇ ಉದಾಹರಣೆಯಾಗಿ ತೋರಿಸಿದಳು.

"ವಿಷಯ" ಎಂದರೆ ಇಂದ್ರಿಯಗಳಿಗೆ ತೃಪ್ತಿಯನ್ನುಂಟುಮಾಡತಕ್ಕವು ಎಂದು ಅರ್ಥ. ಕಣ್ಣು, ಕಿವಿ, ಮೂಗು, ಬಾಯಿ, ಚರ್ಮ ಇವು ಇಂದ್ರಿಯಗಳನ್ನು ಸಂತೋಷಪಡಿಸತಕ್ಕ ವಿಷಯಗಳು.

ದೃಶ್ಯ ಕಣ್ಣಿಗೆ ವಿಷಯ, ಸಂಗೀತ ಕಿವಿಗೆ ವಿಷಯ, ಗಂಧ ಮೂಗಿಗೆ, ಹಾಗೇ ರುಚಿಯಾದ ಪದಾರ್ಥ ನಾಲಿಗೆಗೆ ವಿಷಯ ಎನಿಸುತ್ತದೆ. ಈ ವಿಷಯ ಸುಖವು ಅಶಾಶ್ವತ. ಇದು ಏಳು ಬಗೆಯ ನ್ಯೂನತೆಗಳಿಂದ ಕೂಡಿದೆ.

1) ಅಲ್ಪತ್ವ, 2) ಅಸ್ಥಿರತೆ, 3) ದುಃಖ ಮೂಲತ್ವ, 4) ದುಃಖ ಮಿಶ್ರತ್ವ 5) ದುಃಖೋ ದರ್ಕತ್ವ, 6) ಸ್ವಾಭಾವಿಕಾನಂದ ವಿರುದ್ಧತ್ವ, 7) ವಿಪರೀತಾಭಿಮಾನ ಮೂಲತ್ವ.

ಉದಾಹರಣೆ : ಸಕ್ಕರೆ ಪೊಂಗಲ್

ಸಕ್ಕರೆ ಪೊಂಗಲನ್ನು ಸ್ವಲ್ಪ ತಿಂದರೆ ರುಚಿ. ಹೆಚ್ಚು ತಿಂದರೆ ? – ಬೇಸರ. ಅದು "ಅಲ್ಪತ್ವ"ವನ್ನು ಹೊರಗೆಡಹುತ್ತದೆ. ಆ ಸಕ್ಕರೆ ಪೊಂಗಲ್ ಮಾಡಿದ ತಕ್ಷಣವೇ ರುಚಿ. ಅದನ್ನೇ ಮರುದಿನದವರೆಗೆ ಇಟ್ಟರೆ ಹಳಸಿಹೋಗುತ್ತದೆ. ಇದು ಅದರ "ಅಸ್ಥಿರತೆ"ಯನ್ನು ಹೊರಗೆಡ ಹುತ್ತದೆ ಹೀಗೆಯೇ–ಉಳಿದ ದೋಷಗಳೂ ಒಂದರ ಹಿಂದೆ ಒಂದು ಬಾದುಬಿಡುತ್ತವೆ.

ಅದೇ ರೀತಿ ಸಕ್ಕರೆ ಪೊಂಗಲನ್ನು ಮಾಡುವುದು ಎಷ್ಟು ಕಷ್ಟ ? ಅದಕ್ಕಾಗಿ ಸಾಮಗ್ರಿಗಳನ್ನು ಒದಗಿಸಿಕೊಳ್ಳಬೇಕು. ಅದನ್ನು ತಯಾರು ಮಾಡಬೇಕು.

ಅಂಬರೀಷೋಪಾಖ್ಯಾನ

ಅಪರಾಧಗಳಲ್ಲೆಲ್ಲ ಹಿರಿದು ಭಾಗವತಾಪಚಾರ. ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತ ಉಂಟು. ಆದರೆ, ಭಾಗವತಾಪಚಾರಕ್ಕೆ ಮಾತ್ರ ಪ್ರಾಯಶ್ಚಿತ್ತವೇ ಇಲ್ಲ. ಇದಕ್ಕೆ ಒಂದು ಉಪಾಖ್ಯಾನ ಭಾಗವತದಲ್ಲಿದೆ. ಇಕ್ಷ್ವಾಕು ವಂಶದ ಶ್ರೇಷ್ಠ ಅರಸರಲ್ಲಿ ಒಬ್ಬ ಅಂಬರೀಷ ಮಹಾರಾಜ. ಧರ್ಮಿಷ್ಠ. ಸತ್ಯಸಂಧ. ಏಕಾದಶೀ ವ್ರತವನ್ನು ನಿಷ್ಠೆಯಿಂದ ಆಚರಿಸುತ್ತಿದ್ದ. ಒಮ್ಮೆ ಏಕಾದಶೀ ವ್ರತವನ್ನು ಅನುಷ್ಠಿಸುವ ಕಾಲಕ್ಕೆ ಸರಿಯಾಗಿ ದೂರ್ವಾಸ ಮಹರ್ಷಿಗಳು ಅಂಬರೀಷನ ಅರಮನೆಗೆ ಬಂದರು. ಬಂದ ಋಷಿಗಳಿಗೆ ಉಚಿತವಾದ ರೀತಿಯಲ್ಲಿ ಸತ್ಕಾರಮಾಡಿದ ಅಂಬರೀಷ. ದ್ವಾದಶೀವ್ರತದ ಬೆಳಗು. ಭೋಜನಕ್ಕೆ ಏಳಬೇಕು ಎಂದು ಪ್ರಾರ್ಥಿಸಿದ. ದೂರ್ವಾಸರು ಸ್ನಾನ, ಆಹ್ನೀಕ ಮುಗಿಸಿಕೊಂಡು ಬರುತ್ತೇನೆ ಎಂದು ಹೇಳಿ ನದಿಗೆ ಹೊರಟರು.

ಎಷ್ಟು ಹೊತ್ತಾದರೂ ಬರಲೇ ಇಲ್ಲ. ದ್ವಾದಶೀ ತಿಥಿ ಮೀರುವ ವೇಳೆ ಆಯಿತು. ಅಂಬರೀಷ ಧರ್ಮಸಂಕಟಕ್ಕೆ ಸಿಲುಕಿಕೊಂಡ. ಅತಿಥಿಯನ್ನು ಬಿಟ್ಟು ಊಟಮಾಡುವಂತಿಲ್ಲ. ತಿಥಿ ಮೀರುವುದರೊಳಗೆ ಪಾರಣೆ ಆಗದಿದ್ದರೆ ವ್ರತಭಂಗವಾಗುತ್ತದೆ ಯೋಚಿಸಿದ. ಬ್ರಾಹ್ಮಣೋತ್ತಮರ ಆಜ್ಞೆಯಂತೆ ತೀರ್ಥಪಾರಣೆಯನ್ನು ಮಾಡಿ ದೂರ್ವಾಸರ ಬರವನ್ನೇ ಇದಿರು ನೋಡ ತೊಡಗಿದ.

ದೂರ್ವಾಸರು ಬಂದರು. ಅಂಬರೀಷ ತೀರ್ಥಪಾರಣೆ ಮಾಡಿದುದನ್ನು ತಿಳಿದು ಕುಪಿತರಾದರು. "ಅತಿಥಿಯನ್ನು ಅಪಮಾನಪಡಿಸಿದೆ" ಎಂದು ಕೂಗಾಡಿದರು. ತಮ್ಮ ಜಟೆಯಿಂದ ಕೇಶವನ್ನು ಕಿತ್ತು ಒಂದು ಭೂತವನ್ನು ಸೃಷ್ಟಿಸಿದರು. ಆ ಭೂತ ಅಂಬರೀಷನನ್ನು ನುಂಗಲು ಬಂದಿತು.

ಅಂಬರೀಷ ದೈವಭಕ್ತ. ಅವನ ಹತ್ತಿರ ಯಾವಾಗಲೂ ಭಗವಂತನ ಚಕ್ರಾಯುಧ ಇತ್ತು. ಭೂತ ಅಂಬರೀಷನನ್ನು ನುಂಗಲು ಬಂದುದನ್ನು ನೋಡಿತು ಸುದರ್ಶನ ಚಕ್ರ. ಒಂದೇ ಏಟಿಗೆ ಆ ಭೂತವನ್ನು ಹೊಡೆದುಹಾಕಿ ಸುದರ್ಶನ ಚಕ್ರ ಬೆಂಕಿಯನ್ನು ಕಕ್ಕುತ್ತಾ ದೂರ್ವಾಸರತ್ತ ಧಾವಿಸಿತು.

ಚಕ್ರ ಬರುವುದನ್ನು ನೋಡಿದರು ದೂರ್ವಾಸರು. ಓಡಿದರು ಅಲ್ಲಿಂದ. ಚಕ್ರವೂ ಅವರನ್ನು ಬೆನ್ನಟ್ಟಿತು. ಕೈಲಾಸಕ್ಕೆ ಹೋಗಿ ಶಿವನನ್ನು ಪ್ರಾರ್ಥಿಸಿದರು, ಪ್ರಯೋಜನ ಆಗಲಿಲ್ಲ. ಬ್ರಹ್ಮಲೋಕಕ್ಕೆ ಹೋಗಿ ಚತುರ್ಮುಖನನ್ನು "ರಕ್ಷಿಸು" ಎಂದರು. ಉಪಯೋಗವಾಗಲಿಲ್ಲ. ಅಲ್ಲಿಂದ ವೈಕುಂಠಕ್ಕೆ ಹೋದರು. ಓಡಿಬರುತ್ತಿದ್ದ ದೂರ್ವಾಸರನ್ನು ಕಂಡ ಮಹಾವಿಷ್ಣು "ದೂರ್ವಾಸರೆ, ಇದೇನು, ಹೀಗೆ ಓಡಿಬರುತ್ತಿದೀರಿ ?'' ಎಂದ.

"ಮಹಾಸ್ವಾಮಿ, ಎಲ್ಲ ತಮ್ಮ ಚಕ್ರದ ಮಹಿಮೆ, ಮೊದಲು ಆ ಸುದರ್ಶನವನ್ನು ತಡೆಯಿರಿ. ನೋಡಿ, ನನ್ನ ಹಿಂದೆಯೇ ಬರುತ್ತಿದೆ" ಎಂದರು.

ಮಹಾವಿಷ್ಣು ದೂರ್ವಾಸರಿಂದ ಎಲ್ಲ ತಿಳಿದ.

"ದೂರ್ವಾಸರೆ, ಚಕ್ರ ನನ್ನದು ನಿಜ. ಆದರೆ, ನಾನು ಏನೂ ಮಾಡುವಂತಿಲ್ಲ. ಏಕೆಂದರೆ ನೀವು ಭಾಗವತಾಪಚಾರ ಮಾಡಿರುತ್ತೀರಿ. ನಾ ಏನೂ ಮಾಡುವ ಹಾಗಿಲ್ಲ" ಎಂದುಬಿಟ್ಟ. ದೂರ್ವಾಸರು ಅತ್ತರು, ಗೋಗರೆದರು. "ಸ್ವಾಮೀ ಹೇಗಾದರೂ ಕಾಪಾಡಿ'' ಎಂದರು.

ಮಹಾವಿಷ್ಣು, "ನಾ ಮೊದಲೇ ಹೇಳಿದೆ. ಭಾಗವತಾಪಚಾರಕ್ಕೆ ಯಾವ ಮದ್ದೂ ಇಲ್ಲ

ಪಾದು. ಆದರೆ, ಒಂದು ಉಪಾಯ ಹೇಳುತ್ತೇನೆ. ಅದರಂತೆ ನೀವು ನಡೆದರೆ ನಿಮ್ಮ ರಕ್ಷಣೆ ಆಗಬಹುದು. ನೀವು ಯಾವ ಅಂಬರೀಷನಿಗೆ ಅಪಚಾರವೆಸಗಿದೆರೋ ಅವನನ್ನೇ ಶರಣು ಹೋಗುವುದರಿಂದ ಈ ಚಕ್ರ ಶಾಂತವಾಗಬಹುದು" ಎಂದ.

ದೂರ್ವಾಸರು ಪುನಃ ಬಂದರು ಅಂಬರೀಷ ಮಹಾರಾಜನ ಬಳಿಗೆ. ಆ ವೇಳೆಗೆ ಒಂದು ವರುಷ ಕಳೆದಿತ್ತು. ಅದುವರೆಗೆ ಅಂಬರೀಷ ಊಟಮಾಡದೆ ದೂರ್ವಾಸರಿಗಾಗಿ ಕಾಯುತ್ತಿದ್ದ. ಬಂದ ದೂರ್ವಾಸರನ್ನು ಸ್ವಾಗತಿಸಿ "ಸ್ವಾಮಿಶಾ ಬನ್ನಿ, ನಿಮಗಾಗಿಯೇ ಕಾಯುತ್ತಿದ್ದೆ, ಊಟಕ್ಕೇಳಿ" ಎಂದ.

ದೂರ್ವಾಸರು "ಅಂಬರೀಷ, ಊಟ ಆಮೇಲೆ, ಮೊದಲು ಈ ಚಕ್ರದಿಂದ ನನ್ನನ್ನು ಕಾಪಾಡು. ಈ ಸುದರ್ಶನ ಶಾಂತ ಆಗುವ ಹಾಗೆ ಮಾಡು" ಎಂದು ಪ್ರಾರ್ಥಿಸಿದರು.

ಆಗ ಕಾರುಣ್ಯನಿಧಿಯಾದ ಅರಸ ಸುದರ್ಶನ ಚಕ್ರವನ್ನು ಪ್ರಾರ್ಥಿಸಿದ.

**ಸಹಸ್ರಾದಿತ್ಯ ಸಂಕಾಶಂ, ಸಹಸ್ರವದನಂ ಪರಂ।**
**ಸಹಸ್ರದೋಃ ಸಹಸ್ರಾರಂ ಪ್ರಪದ್ಯೇಹಂ ಸುದರ್ಶನಂ॥**

ಎಂದು ಸುದರ್ಶನ ಚಕ್ರವನ್ನು ಸ್ತುತಿಸಿದ. ಚಕ್ರ ಶಾಂತವಾಯಿತು. ದೂರ್ವಾಸರು ಅಂಬರೀಷನ ಕ್ಷಮೆ ಕೇಳಿದರು. ಅಂಬರೀಷ ದೂರ್ವಾಸರಿಗೆ ದಿವ್ಯವಾದ ಭೋಜನವನ್ನು ಮಾಡಿಸಿದ.

ತೃಪ್ತರಾಗಿ ದೂರ್ವಾಸರು ಅಲ್ಲಿಂದ ಹೊರಟರು.

ಇದರಿಂದ ತಿಳಿಯಬೇಕಾದ ಅಂಶ ಎಂದರೆ ಭಾಗವತರಲ್ಲಿ ದೋಷ ಎಣಿಸುವ ಅಪರಾಧ ಕೂಡದು ಎಂಬುದೇ.

## ಜಟಾಯು ಮೋಕ್ಷ

ಮಾರೀಚ ಸಾಯುವಾಗ "ಹಾ ಸೀತಾ - ಹಾ ಲಕ್ಷ್ಮಣ" ಎಂದು ಕೂಗಿದ್ದನ್ನು ಕೇಳಿ ರಾಮ ಕಾತರಿಸಿದ. ಇನ್ನೆಲ್ಲಿ ಲಕ್ಷ್ಮಣ ಸೀತೆಯೊಬ್ಬಳನ್ನೇ ಬಿಟ್ಟು ಬಂದು ಬಿಡುತ್ತಾನೋ ಎಂದುಕೊಂಡು ವೇಗವಾಗಿ ನಡೆಯುತ್ತ ಬಂದ.

ಸ್ವಲ್ಪದೂರ ಬರುವಷ್ಟರಲ್ಲಿ ಇದಿರಿಗೆ ಲಕ್ಷ್ಮಣ ಬರುತ್ತಿರುವುದು ಕಾಣಿಸಿತು. ಲಕ್ಷ್ಮಣನನ್ನು ಕಂಡು "ಅಯ್ಯೋ, ಲಕ್ಷ್ಮಣಾ ಇದೇನು ಮಾಡಿದೆ ? ಸೀತೆಯನ್ನು ಬಿಟ್ಟು ಏಕೆ ಬಂದೆ ?" ಎಂದು ಗದರಿಸಿದ. "ನಾ ಹೇಳಿದ್ದೆನಲ್ಲ ಸೀತೆಯನ್ನು ಬಿಟ್ಟುಬರಬೇಡ ಎಂದು. ನನ್ನ ಆಜ್ಞೆಯನ್ನು ಮೀರಿದೆ ಏಕೆ ?" ಎಂದ.

ಮೇಲಿಂದ ಮೇಲೆ ರಾಮ ಕೇಳತೊಡಗಿದ ಮೇಲೆ ಲಕ್ಷ್ಮಣ "ಅಣ್ಣಾ, ಅತ್ತಿಗೆ ಕಠೋರವಾದ ಮಾತುಗಳಿಂದ ನನ್ನನ್ನು ನಿಂದಿಸಿದಳು. ಅದನ್ನು ಕೇಳಲಾಗದೆ ಬಂದೆ" ಎಂದ.

ರಾಮ "ಏನೋ ಸ್ತ್ರೀ ಸಹಜವಾದ ಭಯದಿಂದ ಒಂದು ಮಾತು ಹೇಳಿದರೆ ಅಷ್ಟಕ್ಕೇ ಬಂದು ಬಿಡುವುದೇ? ರಾಕ್ಷಸರ ಮಾಯೆಯಿಂದ ಆವೃತವಾದ ಈ ಅರಣ್ಯದಲ್ಲಿ ಸೀತೆಯನ್ನು ಒಬ್ಬಳನ್ನೇ ಬಿಟ್ಟು ಬಂದೆಯಲ್ಲಾ. ನಾವು ಹೋಗುವವರೆಗೆ ಸೀತೆ ಆಶ್ರಮದಲ್ಲಿ ಇರುವಳೆ ? ಪುನಃ ಅವಳನ್ನು ನಾನು ಕಾಣುವೆನೇ ?" ಎಂದ.

ಸೀತೆಯ ಚಿಂತೆಯನ್ನೇ ಮಾಡುತ್ತಾ ರಾಮ ಲಕ್ಷ್ಮಣನೊಡಗೂಡಿ ವೇಗವಾಗಿ ಆಶ್ರಮದತ್ತ ಬಂದ. ದೂರದಿಂದಲೇ ಆಶ್ರಮವನ್ನು ನೋಡಿ "ಸೌಮಿತ್ರಿ. ಆಶ್ರಮ ಪಾಳುಬಿದ್ದಿದೆ. ಶೂನ್ಯವಾಗಿದೆ, ಸೀತೆ ಇರುವಳೇನೋ ನೋಡು ಎಂದ.

ಲಕ್ಷ್ಮಣ ಆಶ್ರಮದ ಒಳಗಡೆ ಸೀತೆಯನ್ನು ಹುಡುಕಿದ, ಕಾಣಲಿಲ್ಲ. ಆಶ್ರಮದ ಹೊರಗೆಲ್ಲ ನೋಡಿದ, ಎಲ್ಲೂ ಸೀತೆ ಇರಲಿಲ್ಲ. ರಾಮನೂ ಮತ್ತೆ ಮತ್ತೆ ಸೀತೆ ಇರಬಹುದಾದ ಸ್ಥಳಗಳಲ್ಲೆಲ್ಲ ಹುಡುಕಿದ. ಸ್ನಾನಾರ್ಥವಾಗಿ ನದಿಗೆ ಹೋಗಿರುವಳೇನೋ ಎಂದು ಗೋದಾವರಿಯಲ್ಲಿ ನೋಡಿದ. "ಹೇ ಗೋದಾವರಿಯೇ ದಿನ ದಿನವೂ ಸೀತೆ ನಿನ್ನಲ್ಲಿ ಸ್ನಾನ ಮಾಡಲು ಬರುತ್ತಿದ್ದಳಲ್ಲ–ಅವಳೆಲ್ಲಿ ಹೇಳು. ನಿನ್ನಲ್ಲಿ ಹೇಳಿ ಹೋಗಿದಾಳೆಯೇ ಅವಳು" ಎಂದು ಕೇಳಿದ. ರಾವಣನ ಭಯದಿಂದಲೋ ಎಂಬಂತೆ ಗೋದಾವರಿ ಪ್ರತ್ಯುತ್ತರವನ್ನೇ ಕೊಡಲಿಲ್ಲ !

ಪುನಃ ಆಶ್ರಮಕ್ಕೆ ಬಂದ. ಎಲ್ಲೆಲ್ಲೂ ಹುಡುಕಿದ. ಆಶ್ರಮದ ಹೊರಗೆ ನಿಂತು "ವೈದೇಹಿ, ಜಾನಕೀ, ಸೀತೆ," ಎಂದು ಉನ್ಮತ್ತನಂತೆ ಕೂಗಿದ.

"ಸೀತೆ, ನಾ ಬರುವುದು ಹೊತ್ತಾಯಿತು ಎಂದು ಎಲ್ಲಾದರೂ ಅವಿತುಕೊಂಡು ವಿನೋದ ಮಾಡುತ್ತಿರುವೆಯಾ. ಹಾಗೆ ಮಾಡಬೇಡ, ಎಲ್ಲಿದ್ದರೂ ಬಂದುಬಿಡು ನಿನ್ನ ವಿರಹವನ್ನು ತಡೆಯಲಾರೆ. ವೈದೇಹೀ. ಎಲ್ಲಿದ್ದರೂ ಬೇಗ ಬಾ–ಬಾ'' ಎಂದು ಕೂಗಿದ. ಪ್ರತ್ಯುತ್ತರವಿಲ್ಲ.

"ಸೌಮಿತ್ರೀ–ಹುಂ, ಸೀತೆ ಇನ್ನು ಇಲ್ಲ, ಯಾವ ರಾಕ್ಷಸನೋ ಅವಳನ್ನು ತಿಂದಿರಬೇಕು. ಅಯ್ಯೋ, ನನ್ನ ಅದೃಷ್ಟವೇ !" ಎಂದು ವಿಲಪಿಸಿದ.

ಲಕ್ಷ್ಮಣ ರಾಮನನ್ನು ಸಂತೈಸುತ್ತಾ, "ಅಣ್ಣಾ, ಹೀಗೇ ಸೀತೆಯನ್ನು ಹುಡುಕುತ್ತಾ ಹೋಗೋಣ" ಎಂದು ರಾಮನನ್ನು ಕರೆದುಕೊಂಡು ಹೋದ.

ಹೋಗುತ್ತಿದ್ದಂತೆ ರಾಮ "ವನದೇವತೆಯೇ ನಿನ್ನ ರಕ್ಷಣೆಯಲ್ಲಿ ಇಷ್ಟು ದಿನ ಸೀತೆ ಇದ್ದಳು. ಅವಳು ಎಲ್ಲಿದಾಳೆ ಹೇಳು'' ಎಂದು ದೈನ್ಯದಿಂದ ಕೇಳಿದ.

ವನದಲ್ಲಿದ್ದ ಮೃಗಗಳು ದೈನ್ಯದಿಂದ ರಾಮನನ್ನೇ ನೋಡುತ್ತಾ ದಕ್ಷಿಣ ದಿಕ್ಕನ್ನು ಸೂಚಿಸುತ್ತ ಹೋಗುತ್ತಿದ್ದವು. ಇದನ್ನು ಕಂಡ ಲಕ್ಷ್ಮಣ "ಅಣ್ಣಾ, ಈ ಮೃಗಗಳು ದಕ್ಷಿಣದ ಕಡೆಗೆ ಮುಖ ಮಾಡಿ ಕಣ್ಣೀರಿಡುತ್ತಿವೆ. ದಕ್ಷಿಣ ದಿಕ್ಕಿನ ಮಾರ್ಗದಲ್ಲಿ ಸೀತೆಯನ್ನು ಹುಡುಕೋಣ" ಎಂದ.

ಮಾರ್ಗದಲ್ಲಿ ಹೋಗುತ್ತಿರುವಾಗ ಒಂದು ಜಿಂಕೆಯನ್ನು ಕಂಡ ರಾಮ. "ಜಿಂಕೆಯೇ, ನಿನ್ನಂತೆಯೇ ಕಣ್ಣುಳ್ಳವಳು ನನ್ನ ಸೀತೆ. ಅವಳು ಈಗ ಎಲ್ಲಿದಾಳೆ ಹೇಳು" ಎಂದು ಕೇಳಿದ. ಹೀಗೆ ಮಾರ್ಗದಲ್ಲೆಲ್ಲ ಸೀತೆಯನ್ನೇ ನೆನೆಯುತ್ತಾ, ನೆನೆಯುತ್ತಾ ಪರಿತಪಿಸತೊಡಗಿದ ರಾಮ, ಪ್ರಾಕೃತರಂತೆ.

ಸ್ವಲ್ಪದೂರ ಹೋದಮೇಲೆ ನೆಲ ರಕ್ತದಿಂದ ಸಿಂಚಿತವಾಗಿರುವುದನ್ನು ನೋಡಿದರು ರಾಮ-ಲಕ್ಷ್ಮಣರು. ಸೀತೆ ಮುಡಿದಿದ್ದ ಹೂಗಳು ಅಲ್ಲಲ್ಲಿ ಉದುರಿದ್ದುದನ್ನು ಕಂಡ ರಾಮ. ರಥ ಮುರಿದು ಬಿದ್ದುದನ್ನು ಕಂಡು "ಯುದ್ಧ ನಡೆದಿದೆ" ಎಂದು ತರ್ಕಿಸಿದ.

ಸ್ವಲ್ಪದೂರದಲ್ಲಿ ಪರ್ವತಾಕಾರವಾಗಿ ಜಟಾಯು ಬಿದ್ದಿದ್ದನ್ನು ಕಂಡ. ದೂರದಿಂದಲೇ ಅದನ್ನು ನೋಡಿದ ರಾಮ. "ಲಕ್ಷ್ಮಣಾ, ಅಗೋ ನೋಡು ಅಲ್ಲಿರುವ ಪಕ್ಷಿಯೇ ಸೀತೆಯನ್ನು ತಿಂದುಹಾಕಿಬಿಟ್ಟಿದೆ. ಅದನ್ನು ಈಗಲೇ ಕೊಂದುಬಿಡುತ್ತೇನೆ" ಎಂದು ಧನುಸ್ಸನ್ನು ಹಿಡಿದ. ಆಗ

ದಶರಥನ ಕುಮಾರ, ರಾಮಾ, ನಾನು ನಿನ್ನ ತಂದೆಯ ಮಿತ್ರ ಜಟಾಯು, ಹತ್ತಿರ ಬಾ" ಎಂಬ ಧ್ವನಿ ಕೇಳಿಸಿತು.

ತಕ್ಷಣ ಜಟಾಯುವಿನ ಬಳಿಗೆ ಓಡಿದ. ನಿನಗೆ ಈ ಅವಸ್ಥೆ ಬರಲು ಕಾರಣವೇನು ? ಎಂದು ಕೇಳಿದ. ಜಟಾಯು ಹೇಳಿತು. ''ರಾಮಾ, ರಾವಣ ಸೀತೆಯನ್ನು ರಥದಲ್ಲಿ ಕೂಡಿಸಿಕೊಂಡು ಬರುತ್ತಿದ್ದ. ಸೀತೆ ''ರಾಮಾ–ಲಕ್ಷ್ಮಣಾ" ಎಂದು ಕೂಗಿದಳು. ನನಗೆ ಅದು ಕೇಳಿಸಿ ರಾವಣ ನೊಡನೆ ಸೆಣಸಿದೆ. ಆ ಪಾಪಿ ನನ್ನ ಎರಡು ರೆಕ್ಕೆಗಳನ್ನೂ ಕತ್ತರಿಸಿ ಸೀತೆಯನ್ನು ಕರೆದುಕೊಂಡು ಹೊರಟುಹೋದ'' ಎಂದಿತು, ಇದನ್ನು ಕೇಳಿ ರಾಮನಿಗೆ ಬಹಳ ಸಂಕಟವಾಯಿತು. ಜಟಾಯು ವಿನ ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡ. ''ನನ್ನ ಅದೃಷ್ಟವೇ ಕೆಟ್ಟದು. ಅಪ್ಪ ಪಟ್ಟಾಭಿಷೇಕ ಮಾಡುತ್ತೇನೆ ಎಂದು ಹೇಳಿ ಮರುದಿನ ಅರಣ್ಯಕ್ಕೆ ಕಳುಹಿಸಿದ. ರಾಜ್ಯವನ್ನು ಕಳೆದುಕೊಂಡೆ. ಪ್ರೀತಿಪಾತ್ರನಾದ ಭರತನ ವಿರಹ ಏರ್ಪಟ್ಟಿತು. ವನವಾಸದಲ್ಲಿ ಸೀತೆಯನ್ನು ಕಳೆದುಕೊಂಡೆ. ಈಗ ನನಗಾಗಿ ಈ ಪಕ್ಷಿಯೂ ಪ್ರಾಣಕೊಟ್ಟಿತು. ನನ್ನಂಥ ಪಾಪಿ ದುರದೃಷ್ಟ ಶಾಲಿಗಳು ಯಾರೂ ಇಲ್ಲ" ಎಂದು ಪ್ರಲಾಪಿಸತೊಡಗಿದ. ಜಟಾಯು, ''ರಾಮಾ, ದುಃಖಿಸ ಬೇಡ. ರಾವಣ ಸೀತೆಯನ್ನು ಕದ್ದೊಯ್ದ ವೇಳೆ ''ವಿಂದ'' ಎಂಬ ಮುಹೂರ್ತ. ಆ ಮುಹೂರ್ತದಲ್ಲಿ ಕದ್ದುಕೊಂಡು ಹೋದ ವಸ್ತು ಅದರ ನಿಜವಾದ ಒಡೆಯನಿಗೇ ಲಭಿಸುತ್ತದೆ. ಚಿಂತಿಸಬೇಡ–ನೀನು ಸೀತೆಯನ್ನು ಪಡೆಯುತ್ತಿ. ರಾಜ್ಯವನ್ನೂ ಪಡೆಯುತ್ತಿ'' ಎಂದು ಸಂತೈಸಿತು.

ರಾಮ ಜಟಾಯುವಿನ ತಲೆಯನ್ನು ನೇವರಿಸುತ್ತಾ "ಜಟಾಯು ರಾವಣನ ಬಗ್ಗೆ ನಿನಗೆ ಗೊತ್ತಿದ್ದುದನ್ನು ಹೇಳು" ಎಂದ.

ಜಟಾಯು, 'ರಾವಣ ವಿಶ್ರವಸ್ಸಿನ ಮಗ. ಕುಬೇರನ ತಮ್ಮ' ಎಂದು ಹೇಳುತ್ತಿದ್ದಂತೆಯೇ 'ರಾಮಾ' ಎನ್ನುತ್ತ ಪ್ರಾಣ ಬಿಟ್ಟಿತು. ಜಟಾಯುವನ್ನು ನೆನಸಿಕೊಂಡು ರಾಮ ಬಹಳವಾಗಿ ದುಃಖಿಸಿದ. 'ಲಕ್ಷ್ಮಣಾ, ತಿರ್ಯಗ್ ಯೋನಿಯಲ್ಲೂ ಪರೋಪಕಾರಿಗಳು ಇದಾರೆ ನೋಡಿದೆಯಾ. ಈ ಪಕ್ಷಿ ಅರವತ್ತು ಸಾವಿರ ವರ್ಷ ಬದುಕಿತು. ಕೊನೆಯಲ್ಲಿ ನನಗಾಗಿ ತನ್ನ ಪ್ರಾಣವನ್ನೇ ಕೊಟ್ಟಿತು' ಎಂದು ಕಣ್ಣೀರಿಟ್ಟ.

ಶಾಸ್ತ್ರೋಕ್ತವಾದ ಕ್ರಮದಲ್ಲಿ ಜಟಾಯುವಿನ ದೇಹವನ್ನು ಚಿತೆಯಮೇಲಿಟ್ಟು ಅಗ್ನಿ ಸಂಸ್ಕಾರ ಮಾಡಿದ ರಾಮ. ದಹನಕ್ರಿಯೆ ಮುಗಿದ ಮೇಲೆ ಗೋದಾವರಿಯಲ್ಲಿ ಸ್ನಾನ ಮಾಡಿ ವಿಧಿವತ್ತಾಗಿ ಜಲತರ್ಪಣವನ್ನು ಕೊಟ್ಟ.

'ಜಟಾಯೋ, ಯಾಗ–ಯಜ್ಞಗಳನ್ನು ಮಾಡುವವರು ಯಾವ ಗತಿಗೆ ಹೋಗುತ್ತಾರೋ, ಅಗ್ನಿ ಕಾರ್ಯವನ್ನು ಬಿಡದೆ ಮಾಡುವವರು ಯಾವ ಗತಿಗೆ ಹೋಗುತ್ತಾರೋ, ಬ್ರಹ್ಮನಿಷ್ಠರು, ತಪೋಧನರು ಯಾವ ಲೋಕಕ್ಕೆ ಹೋಗುತ್ತಾರೋ ನೀನೂ ಅಂಥ ಅನುತ್ತಮವಾದ ಲೋಕಕ್ಕೆ ಹೋಗು' ಎಂದ ರಾಮ.

ರಾಮನು ಜಟಾಯುವನ್ನು ಕುರಿತು 'ಗಚ್ಛ ಲೋಕಾನ್ ಅನುತ್ತಮಾನ್' ಎಂದಿದಾನೆ.

ಇದಕ್ಕೆ ಆಚಾರ್ಯರು ಆಳ್ವಾರುಗಳು ವ್ಯಾಖ್ಯಾನ ಮಾಡಿದಾರೆ. ಅನುತ್ತಮವಾದ ಲೋಕಕ್ಕೆ ಎಂದರೆ 'ವೈಕುಂಠ' ಎಂದಿದಾರೆ. ರಾಮ ಜಟಾಯುವಿಗೆ ಅನುತ್ತಮವಾದ ಲೋಕ ಅಂದರೆ ಮೋಕ್ಷಕ್ಕೆ ಹೋಗು ಎಂದ. ಜಟಾಯುವಿಗೆ 'ಮೋಕ್ಷ' ಕೊಟ್ಟ.

ಈ ಪ್ರಸಂಗದಲ್ಲಿ ರಾಮನ ಪರತ್ವವು ಪ್ರಕಾಶಕ್ಕೆ ಬರುತ್ತದೆ. ರಾಮ ತನ್ನನ್ನು "ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ" ಎಂದುಕೊಂಡಿದ್ದಾನೆ.

ನಾನು ದಶರಥನ ಮಗ! ಮನುಷ್ಯ ಎಂದುಕೊಂಡಿದ್ದಾನೆ. ಮನುಷ್ಯನಿಗೆ ಇಷ್ಟೊಂದು ಶಕ್ತಿ ಎಲ್ಲಿಯದು ಎಂದರೆ ಸತ್ಯದಿಂದ ಎಂದಿದ್ದಾನೆ.

'ಸತ್ಯೇನ ಲೋಕಾನ್ ಜಯತಿ' ಸತ್ಯದಿಂದ ಲೋಕಗಳನ್ನೆಲ್ಲ ವಶಪಡಿಸಿಕೊಳ್ಳಲು ಸಾಧ್ಯ ಎಂದಿದ್ದಾನೆ.

ಕೂರುತ್ತಾಳ್ವಾರ್ 'ಅತಿಮಾನುಷಸ್ತವ' ದಲ್ಲಿ ಭಗವಂತನನ್ನು ಕೇಳುತ್ತಾರೆ. "ರಾಮಾ, ನೀನು ದಶರಥನ ಮಗ ಎಂದುಕೊಂಡೆ. ಮನುಷ್ಯನಂತೆ ವ್ಯವಹರಿಸಿದೆ. ಆದರೆ ನೀನು ಕೆಲವು ಕಡೆ ನಿನ್ನ ಅತಿಮಾನುಷತ್ವವನ್ನು ವ್ಯಕ್ತಪಡಿಸಿದೀಯೆ. ಅದರಲ್ಲಿ ಜಟಾಯುವಿಗೆ ಮೋಕ್ಷ ಕೊಟ್ಟ ಪ್ರಕರಣ ಒಂದು. ಜಟಾಯುವನ್ನು ಕುರಿತು 'ಗಚ್ಛ ಲೋಕಾನ್ ಅನುತ್ತಮಾನ್' ಎಂದು ಹೇಳಿ ಅನುತ್ತಮವಾದ ಸ್ಥಾನ ಎಂದರೆ ವೈಕುಂಠವನ್ನು ಕೊಟ್ಟೆಯಲ್ಲ. ನೀ 'ನಾರಾಯಣ' ಎಂದು ಇದರಿಂದಲೇ ನಾ ತಿಳಿದೆ. 'ಮೋಕ್ಷಮಿಚ್ಛೇತ್ ಜನಾರ್ದನಾತ್' ಮೋಕ್ಷವನ್ನು ಕೊಡುವ ಸಾಮರ್ಥ್ಯ ನಾರಾಯಣನೊಬ್ಬನಿಗೇ. ನೀನು ಜಟಾಯುವಿಗೆ ಮೋಕ್ಷವನ್ನು ಕೊಟ್ಟೆ. ಆದರಿಂದ 'ನಾರಾಯಣ' ಎಂಬುದನ್ನು ನೀನಾಗಿಯೇ ವ್ಯಕ್ತಪಡಿಸಿದೆ. ಇದು ಸರಿ ಅಲ್ಲವೆ?' ಎಂದು ರಾಮನನ್ನು ಪ್ರಾರ್ಥಿಸುತ್ತಾರೆ.

'ಪರೋಪಕಾರಾರ್ಥಮಿದಂ ಶರೀರಂ' ಎಂಬ ಉಕ್ತಿಯಂತೆ ಜಟಾಯು ತನ್ನ ದೇಹವನ್ನು ಪರೋಪಕಾರಕ್ಕಾಗಿಯೇ ವಿನಿಯೋಗಿಸಿತು. ಶರೀರವು ಧರ್ಮವನ್ನು ಗಳಿಸಲು ಸಾಧನ. ಆದ್ದರಿಂದ ಧರ್ಮಕಾರ್ಯಗಳಲ್ಲೇ ತೊಡಗಬೇಕು. ಆದರಿಂದ ಮೋಕ್ಷ ತಾನಾಗಿಯೇ ಲಭ್ಯವಾಗುತ್ತದೆ ಎಂಬುದನ್ನು ಜಟಾಯು ತನ್ನ ಕಾರ್ಯದಿಂದ ಸಮರ್ಥಿಸಿತು. ಒಂದು ಪಕ್ಷಿಯೇ ತನ್ನ ದೇಹವನ್ನು ಪರೋಪಕಾರಕ್ಕಾಗಿ ವಿನಿಯೋಗಿಸಿ ಮನುಷ್ಯನು ಹೇಗೆ ಧರ್ಮದ ಹಾದಿಯಲ್ಲಿ ನಡೆಯಬೇಕು ಎಂಬುದಕ್ಕೆ ಮಾರ್ಗದರ್ಶನವಾಯಿತು, ಇದರಿಂದ ಜಟಾಯುವಿಗೆ ಬಂದ ಫಲ ಅನುಪಮವಾದುದು. ತಂದೆಯಾದ ದಶರಥನಿಗೇ ಜ್ಯೇಷ್ಠಪುತ್ರನೆನಿಸಿದ ರಾಮ. ಅಗ್ನಿ ಸಂಸ್ಕಾರ ಮಾಡಲು ಆಗಲಿಲ್ಲ. ಆದರೆ ಜಟಾಯುವಿಗೆ ತನ್ನ ಕೈಯಾರೆ ದಹನ ಮಾಡಿ. ಜಲತರ್ಪಣವನ್ನಿತ್ತ. ಜಟಾಯುವಿನ ಜೀವಿತವೇ ಧನ್ಯವಾದುದು!

## ಕಬಂಧ ಮೋಕ್ಷ

ಜಟಾಯುವಿಗೆ ಮೋಕ್ಷವನ್ನಿತ್ತ ಮೇಲೆ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಹೊರಟರು. ಅಡವಿ ಕಡಿದಾಗಿತ್ತು. ಭಯಂಕರವಾದ ಅರಣ್ಯದಲ್ಲಿ ಹೋಗುತ್ತಿರುವಾಗ ರಾಮಲಕ್ಷ್ಮಣರನ್ನು ಎರಡು ತೋಳುಗಳು ಹಿಡಿದವು. ನೋಡಿದರೆ ಕಂಬದಂತೆ ಎರಡು ತೋಳುಗಳು ಮಾತ್ರ ಕಾಣಬರುತ್ತಿವೆ. ಆ ತೋಳುಗಳು ಯೋಜನಗಳಷ್ಟು ದೂರಕ್ಕೆ ಚಾಚಿವೆ. ಹೋದಷ್ಟು ದೂರವೂ ಬರೀ ತೋಳೇ ತೋಳಾಗಿ ಕಾಣಿಸುತ್ತಿದೆ. ಇದನ್ನು ನೋಡಿದರು ರಾಮಲಕ್ಷ್ಮಣರು. ಬಹಳ ದೂರ ಹೋದಮೇಲೆ ರುಂಡ ಮುಂಡಗಳಿಲ್ಲದ ಪರ್ವತಾಕಾರದ ಆಕೃತಿಯನ್ನು ಕಂಡರು. ಆ ಆಕೃತಿಗೆ ತಲೆಯೇ ಇಲ್ಲ. ಬರೀ ಹೊಟ್ಟೆ. ಮೇರು ಪರ್ವತದ ಶಿಖರದಂತೆ ಕಾಣಿಸುತ್ತಿದೆ. ಪರ್ವತದ ಗುಹೆಯಿಂದ ಮಾತು ಹೊರಡುತ್ತಿರುವಂತೆ ಆ ಆಕೃತಿ ಮಾತಾಡತೊಡಗಿತು. "ಬಹಳ

ಕಾಲದಿಂದ ಆಹಾರವಿಲ್ಲದೆ ಪರಿತಪಿಸುತ್ತಾ ಇದ್ದೆ. ಸರಿಯಾದ ಸಮಯಕ್ಕೆ ನೀವು ಒದಗಿದಿರಿ. ಈಗ, ನನ್ನಿಂದ ನೀವು ತಪ್ಪಿಸಿಕೊಳ್ಳಲಾರಿರಿ, ಇಲ್ಲಿಗೆ ಮುಗಿಯಿತು ನಿಮ್ಮ ಜೀವಿತ. ಇದೀಗ ನಿಮ್ಮನ್ನು ನನ್ನ ಹೊಟ್ಟೆಗೆ ಹಾಕಿಕೊಳ್ಳುತ್ತೇನೆ'' ಎಂದ ಆ ರಾಕ್ಷಸ.

ರಾಮಲಕ್ಷ್ಮಣರು ಕಬಂಧನ ಎರಡೂ ತೋಳುಗಳನ್ನು ಕತ್ತಿಯಿಂದ ಕತ್ತರಿಸಿದರು. ತೋಳುಗಳನ್ನು ಕಳೆದುಕೊಂಡ ಕಬಂಧ ''ನೀವು ಯಾರು ? ನನ್ನ ತೋಳುಗಳನ್ನು ಕತ್ತರಿಸುವ ಬಲ ನಿಮಗೆಲ್ಲಿಯದು ? ಹೇಳಿ" ಎಂದ ಆಗ ಲಕ್ಷ್ಮಣ "ನಾವು ದಶರಥರಾಜನ ಕುಮಾರರು. ಇವನೇ ಹಿರಿಯ ಮಗ ರಾಮ ನಾನು ಅವನ ತಮ್ಮ. ತಂದೆಯ ಆಜ್ಞೆಯನ್ನು ನೆರವೇರಿಸಲು ವನಕ್ಕೆ ಬಂದೆವು. ವನದಲ್ಲಿ ನನ್ನ ಅತ್ತಿಗೆ ಸೀತೆಯನ್ನು ಯಾರೋ ರಾಕ್ಷಸ ಅಪಹರಿಸಿದ. ಸೀತೆಯನ್ನು ಹುಡುಕುತ್ತಾ ಬರುತ್ತಿದೇವೆ. ಅದಿರಲಿ, ನೀನು ಯಾರು ? ನಿನಗೇಕೆ ಈ ಕಬಂಧ ಜನ್ಮ ಬಂದಿತು? ಎಂದು ಕೇಳಿದ.

ಬಂದಿರುವವರು ರಾಮಲಕ್ಷ್ಮಣರೆಂದು ತಿಳಿದು ಕಬಂಧ ಸಂತೋಷಿಸಿದ. ಇಂದ್ರ ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು. ತನ್ನ ವೃತ್ತಾಂತವನ್ನು ಹೇಳಲು ತೊಡಗಿದ.

"ಹಿಂದೆ ನಾನು ಹೀಗಿರಲಿಲ್ಲ. ಸೂರ್ಯಚಂದ್ರರಂತೆ ತೇಜೋಮಯವಾದ ಶರೀರವನ್ನು ಹೊಂದಿದ್ದೆ. ಬಹಳ ರೂಪವಂತನಾಗಿದ್ದೆ. ಆದರೆ ಆಗಾಗ ರಾಕ್ಷಸ ರೂಪವನ್ನು ಧರಿಸಿ ಕಾಡಿನಲ್ಲಿದ್ದ ಋಷಿಗಳಿಗೆ ತೊಂದರೆ ಕೊಡುತ್ತಿದ್ದೆ. ಒಮ್ಮೆ ಘೋರವಾದ ರಾಕ್ಷಸ ರೂಪವನ್ನು ಧರಿಸಿ, ಸ್ಥೂಲಶಿರಸ್ಸೆಂಬ ಋಷಿಯನ್ನು ಅವಮಾನ ಪಡಿಸಿದೆ. ಋಷಿಗಳು ಕುಪಿತರಾಗಿ "ನೀನು ಯಾವ ಘೋರ ರೂಪದಿಂದ ನನ್ನನ್ನು ಅವಮಾನ ಪಡಿಸಿದೆಯೋ ಅದೇ ಘೋರರೂಪವುಳ್ಳ ರಾಕ್ಷಸನಾಗು" ಎಂದು ಶಪಿಸಿದರು.

ಶಾಪವನ್ನು ಪಡೆದ ನಾನು ಋಷಿಗಳ ಕಾಲಿಗೆರಗಿದೆ "ಕರುಣಿಸಿ" ಎಂದು ಪ್ರಾರ್ಥಿಸಿದೆ. ಕ್ಷಮಾಶೀಲರಾದ ಋಷಿಗಳು "ರಾಮಲಕ್ಷ್ಮಣರು ನೀನಿರುವಲ್ಲಿಗೆ ಬಂದು ನಿನ್ನ ತೋಳುಗಳನ್ನು ಕತ್ತರಿಸಿ ನಿನಗೆ ಸಂಸ್ಕಾರ ಮಾಡಿದಾಗ ಮೊದಲಿನ ತೇಜೋರೂಪಬರಲಿ" ಎಂದು ಅನುಗ್ರಹಿಸಿದರು.

ಅಂದಿನಿಂದ ಘೋರವಾದ ರಾಕ್ಷಸರೂಪವನ್ನು ಪಡೆದೆ. ಅಷ್ಟಕ್ಕೇ ಸುಮ್ಮನೆ ಇರಲಿಲ್ಲ ನಾನು. ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದೆ. ಬ್ರಹ್ಮನ ಅನುಗ್ರಹದಿಂದ ದೀರ್ಘಜೀವಿತ್ವವನ್ನು ಪಡೆದೆ. ಅದರಿಂದ ಗರ್ವಿತನಾದೆ. ಇಂದ್ರನನ್ನೇ ಇಲ್ಲದಂತೆ ಮಾಡೋಣ ಎಂದು ಅನಿಸಿತು. ಇಂದ್ರಲೋಕವನ್ನೇ ಮುತ್ತಿದೆ. ಕೋಪಗೊಂಡ ದೇವೇಂದ್ರ ತನ್ನ ಸಹಸ್ರಧಾರೆಯುಳ್ಳ ವಜ್ರಾಯುಧದಿಂದ ನನ್ನ ತಲೆಯ ಮೇಲೆ ಹೊಡೆದ, ತಲೆ ಹೊಟ್ಟೆಯಲ್ಲಿ ಸೇರಿಕೊಂಡಿತು. ವಜ್ರಾಯುಧದಿಂದ ಹೊಡೆಯಲ್ಪಟ್ಟರೂ ಬ್ರಹ್ಮನ ವರದಿಂದ ಪ್ರಾಣ ಹೋಗಲಿಲ್ಲ.

ಇಂದ್ರನನ್ನು ಪ್ರಾರ್ಥಿಸಿದೆ. ''ಹೀಗೆ ತಲೆ ಒಳಗೆ ಹೋಗಿದೆಯಲ್ಲ, ನಾನು ತಿನ್ನುವುದು ಹೇಗೆ ?" ಎಂದೆ. ಆದಕ್ಕೆ ಇಂದ್ರ ನನ್ನ ಹೊಟ್ಟೆಯಲ್ಲೇ ಬಾಯನ್ನು ಮಾಡಿದ. "ನಿನಗೆ ಬ್ರಹ್ಮನ ವರದಿಂದ ಧೀರ್ಘಾಯಸ್ಸು ಉಂಟು. ಅಷ್ಟೂ ವರುಷಗಳು ಹೀಗೇ ಇರು. ನಿನಗೆ ಆಹಾರ ಸಿಗಲು ಅನುಕೂಲವಾಗುವಂತೆ ಧೀರ್ಘವಾದ ಬಾಹುಗಳನ್ನು ಅನುಗ್ರಹಿಸಿದ್ದೇನೆ. ಕೈಯನ್ನು ನೀಡಿ ಕೈಯೊಳಗೆ ಸಿಗುವ ಪ್ರಾಣಿಗಳನ್ನು ತಿಂದು ನೀನು ಜೀವಿಸುತ್ತಿರು. ಮಹರ್ಷಿಗಳು ಹೇಳಿದಂತೆ ರಾಮಲಕ್ಷ್ಮಣರು ನಿನ್ನ ತೋಳುಗಳನ್ನು ಕಡಿದು ನಿನಗೆ ಸಂಸ್ಕಾರ ಮಾಡಿದಾಗ ಮೊದಲಿನ ರೂಪ ನಿನಗುಂಟಾಗಲಿ" ಎಂದು ಹೇಳಿಹೋದ.

ಈ ಪ್ರಸಂಗದಲ್ಲಿ ರಾಮನ ಪರತ್ವವು ಪ್ರಕಾಶಕ್ಕೆ ಬರುತ್ತದೆ. ರಾಮ ತನ್ನನ್ನು "ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ" ಎಂದುಕೊಂಡಿದಾನೆ.

ನಾನು ದಶರಥನ ಮಗ ! ಮನುಷ್ಯ ಎಂದುಕೊಂಡಿದಾನೆ. ಮನುಷ್ಯನಿಗೆ ಇಷ್ಟೊಂದು ಶಕ್ತಿ ಎಲ್ಲಿಯದು ಎಂದರೆ ಸತ್ಯದಿಂದ ಎಂದಿದಾನೆ.

'ಸತ್ಯೇನ ಲೋಕಾನ್ ಜಯತಿ' ಸತ್ಯದಿಂದ ಲೋಕಗಳನ್ನೆಲ್ಲ ವಶಪಡಿಸಿಕೊಳ್ಳಲು ಸಾಧ್ಯ ಎಂದಿದಾನೆ.

ಕೂರುತ್ತಾಳ್ವಾರ್ 'ಅತಿಮಾನುಷಸ್ತವ' ದಲ್ಲಿ ಭಗವಂತನನ್ನು ಕೇಳುತ್ತಾರೆ. "ರಾಮಾ, ನೀನು ದಶರಥನ ಮಗ ಎಂದುಕೊಂಡೆ, ಮನುಷ್ಯನಂತೆ ವ್ಯವಹರಿಸಿದೆ. ಆದರೆ ನೀನು ಕೆಲವು ಕಡೆ ನಿನ್ನ ಅತಿಮಾನುಷತ್ವವನ್ನು ವ್ಯಕ್ತಪಡಿಸಿದೀಯೆ. ಅದರಲ್ಲಿ ಜಟಾಯುವಿಗೆ ಮೋಕ್ಷ ಕೊಟ್ಟ ಪ್ರಕರಣ ಒಂದು. ಜಟಾಯುವನ್ನು ಕುರಿತು 'ಗಚ್ಛ ಲೋಕಾನ್ ಅನುತ್ತಮಾನ್' ಎಂದು ಹೇಳಿ ಅನುತ್ತಮವಾದ ಸ್ಥಾನ ಅಂದರೆ ವೈಕುಂಠವನ್ನು ಕೊಟ್ಟೆಯಲ್ಲ. ನೀ 'ನಾರಾಯಣ' ಎಂದು ಇದರಿಂದಲೇ ನಾ ತಿಳಿದೆ. 'ಮೋಕ್ಷಮಿಚ್ಛೇತ್ ಜನಾರ್ದನಾತ್' ಮೋಕ್ಷವನ್ನು ಕೊಡುವ ಸಾಮರ್ಥ್ಯ ನಾರಾಯಣನೊಬ್ಬನಿಗೇ. ನೀನು ಜಟಾಯುವಿಗೆ ಮೋಕ್ಷವನ್ನು ಕೊಟ್ಟೆ. ಆದರಿಂದ 'ನಾರಾಯಣ' ಎಂಬುದನ್ನು ನೀನಾಗಿಯೇ ವ್ಯಕ್ತಪಡಿಸಿದೆ. ಇದು ಸರಿ ಅಲ್ಲವೆ ?' ಎಂದು ರಾಮನನ್ನು ಪ್ರಾರ್ಥಿಸುತ್ತಾರೆ.

'ಪರೋಪಕಾರಾರ್ಥಮಿದಂ ಶರೀರಂ' ಎಂಬ ಉಕ್ತಿಯಂತೆ ಜಟಾಯು ತನ್ನ ದೇಹವನ್ನು ಪರೋಪಕಾರಕ್ಕಾಗಿಯೇ ವಿನಿಯೋಗಿಸಿತು. ಶರೀರವು ಧರ್ಮವನ್ನು ಗಳಿಸಲು ಸಾಧನ. ಆದ್ದರಿಂದ ಧರ್ಮಕಾರ್ಯಗಳಲ್ಲೇ ತೊಡಗಬೇಕು. ಆದರಿಂದ ಮೋಕ್ಷ ತಾನಾಗಿಯೇ ಲಭ್ಯವಾಗುತ್ತದೆ ಎಂಬುದನ್ನು ಜಟಾಯು ತನ್ನ ಕಾರ್ಯದಿಂದ ಸಮರ್ಥಿಸಿತು. ಒಂದು ಪಕ್ಷಿಯೇ ತನ್ನ ದೇಹವನ್ನು ಪರೋಪಕಾರಕ್ಕಾಗಿ ವಿನಿಯೋಗಿಸಿ ಮನುಷ್ಯನು ಹೇಗೆ ಧರ್ಮದ ಹಾದಿಯಲ್ಲಿ ನಡೆಯಬೇಕು ಎಂಬುದಕ್ಕೆ ಮಾರ್ಗದರ್ಶನವಾಯಿತು, ಇದರಿಂದ ಜಟಾಯುವಿಗೆ ಬಂದ ಫಲ ಅನುಪಮವಾದುದು. ತಂದೆಯಾದ ದಶರಥನಿಗೇ ಜ್ಯೇಷ್ಠಪುತ್ರನೆನಿಸಿದ ರಾಮ. ಅಗ್ನಿ ಸಂಸ್ಕಾರ ಮಾಡಲು ಆಗಲಿಲ್ಲ. ಆದರೆ ಜಟಾಯುವಿಗೆ ತನ್ನ ಕೈಯಾರೆ ದಹನ ಮಾಡಿ. ಜಲತರ್ಪಣವನ್ನಿತ್ತ. ಜಟಾಯುವಿನ ಜೀವಿತವೇ ಧನ್ಯವಾದುದು !

## ಕಬಂಧ ಮೋಕ್ಷ

ಜಟಾಯುವಿಗೆ ಮೋಕ್ಷವನ್ನಿತ್ತ ಮೇಲೆ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಹೊರಟರು. ಅಡವಿ ಕಡಿದಾಗಿತ್ತು. ಭಯಂಕರವಾದ ಅರಣ್ಯದಲ್ಲಿ ಹೋಗುತ್ತಿರುವಾಗ ರಾಮ ಲಕ್ಷ್ಮಣರನ್ನು ಎರಡು ತೋಳುಗಳು ಹಿಡಿದವು. ನೋಡಿದರೆ ಕಂಬದಂತೆ ಎರಡು ತೋಳುಗಳು ಮಾತ್ರ ಕಾಣಬರುತ್ತಿವೆ. ಆ ತೋಳುಗಳು ಯೋಜನಗಳಷ್ಟು ದೂರಕ್ಕೆ ಚಾಚಿವೆ. ಹೋದಷ್ಟು ದೂರವೂ ಬರೀ ತೋಳೇ ತೋಳಾಗಿ ಕಾಣಿಸುತ್ತಿದೆ. ಇದನ್ನು ನೋಡಿದರು ರಾಮಲಕ್ಷ್ಮಣರು. ಬಹಳ ದೂರ ಹೋದಮೇಲೆ ರುಂಡ ಮುಂಡಗಳಿಲ್ಲದ ಪರ್ವತಾಕಾರದ ಆಕೃತಿಯನ್ನು ಕಂಡರು. ಆ ಆಕೃತಿಗೆ ತಲೆಯೇ ಇಲ್ಲ. ಬರೀ ಹೊಟ್ಟೆ. ಮೇರು ಪರ್ವತದ ಶಿಖರದಂತೆ ಕಾಣಿಸುತ್ತಿದೆ. ಪರ್ವತದ ಗುಹೆಯಿಂದ ಮಾತು ಹೊರಡುತ್ತಿರುವಂತೆ ಆ ಆಕೃತಿ ಮಾತಾಡತೊಡಗಿತು. "ಬಹಳ

## ಶಬರೀ ಮೋಕ್ಷ

ಕಬಂಧ ಹೇಳಿದಂತೆ ರಾಮಲಕ್ಷ್ಮಣರು ಮತಂಗ ವನಕ್ಕೆ ಬಂದರು. ಪ್ರಶಾಂತವಾದ ಆಶ್ರಮವನ್ನು ಕಂಡರು. ಅಲ್ಲಿ ಮೃಗಗಳು, ಪಕ್ಷಿಗಳು ಸ್ವೇಚ್ಛೆಯಾಗಿ ಯಾವ ಭಯವೂ ಇಲ್ಲದೆ ವಿಹರಿಸುವುದನ್ನು ಕಂಡರು ಶಬರಿಯ ಆಶ್ರಮಕ್ಕೆ ಬಂದರು

ಬಂದ ರಾಮಲಕ್ಷ್ಮಣರನ್ನು ಕಂಡ ಶಬರಿಯ ಸಂತೋಷ ಹೇಳತೀರದು ಅದೆಷ್ಟು ವರ್ಷಗಳಿಂದ ರಾಮನ ಬರವಿಗಾಗಿ ಕಾಯುತ್ತಿದ್ದಳೋ ಅವಳು. ಇಂದು ತನ್ನ ಇದಿರಿಗೇ ನಿಂತಿರುವ ರಾಮನನ್ನು ಕಂಡು ಪುಳಕಿತಳಾದಳು, ಅರ್ಘ್ಯ, ಪಾದ್ಯ ಆಚಮನಗಳನ್ನಿತ್ತು ಯಥಾವಿಧಿಯಾಗಿ ಸತ್ಕರಿಸಿದಳು.

ರಾಮ ಶಬರಿಯ ಕುಶಲವನ್ನು ವಿಚಾರಿಸಿದ. "ತಪೋಧನೇ! ಕುಶಲವಷ್ಟೆ, ನಿನ್ನ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿದೆಯೇ ? ತಪಸ್ಸಿಗೆ ಇರಬೇಕಾದ ನಿಯಮವನ್ನು ಬಿಡದೆ ಪಾಲಿಸುತ್ತಿರುವೆಯಾ ? ಕೋಪವನ್ನು ಗೆದ್ದಿರುವೆಯಾ ? ಆಹಾರವನ್ನು ತಪಸ್ಸಿನ ನಿಯಮಕ್ಕನುಗುಣವಾಗಿ ಮಿತವಾಗಿ ಸೇವಿಸುತ್ತಿರುವೆಯಾ ? ನಿನ್ನ ಆಶ್ರಮ ಚೆನ್ನಾಗಿದೆಯಷ್ಟೆ ?" ಎಂದು ಕೇಳಿದ.

ಶಬರಿ ರಾಮಲಕ್ಷ್ಮಣರಿಗೆ ಆಶ್ರಮವನ್ನೆಲ್ಲ ತೋರಿಸಿದಳು, ಅಗ್ನಿಕಾರ್ಯ ಮಾಡುತ್ತಿದ್ದ ಅಗ್ನಿಶಾಲೆಯನ್ನು ತೋರಿಸಿದಳು. "ರಾಮಾ ಇಲ್ಲಿ ಅನೇಕ ವರ್ಷಗಳ ಹಿಂದೆ ಗುರುಗಳಾದ ಮತಂಗ ಮಹರ್ಷಿಗಳು ಯಾಗ ಮಾಡುತ್ತಿದ್ದರು. ಈಗಲೂ ಆ ಯಾಗವೇದಿ ಹೇಗೆ ಪ್ರಜ್ವಲಿಸುತ್ತಿದೆ ನೋಡು" ಎಂದಳು.

ಆಶ್ರಮವನ್ನು ತೋರಿಸಿದ ಮೇಲೆ ಶಬರಿ ಉತ್ತಮವಾದ ಫಲಗಳನ್ನು ರಾಮನಿಗೆ ಕೊಟ್ಟಳು. ಆ ಫಲಗಳು ಮಧುರವಾಗಿದ್ದವು, ಶುಚಿಯಾಗಿದ್ದವು. ಶಬರಿಯ ಪೂಜೆಯನ್ನು ರಾಮ ಪ್ರೀತಿಯಿಂದ ಸ್ವೀಕರಿಸಿದ.

ಇಲ್ಲಿ ವಾಲ್ಮೀಕಿ "ಶಬರ್ಯಾಪೂಜಿತಃ ಸಮ್ಯಕ್" ಎಂದಿದಾರೆ. ರಾಮ ಶಬರಿಯಿಂದ ಚೆನ್ನಾಗಿ ಪೂಜಿಸಲ್ಪಟ್ಟ ಎಂದರು. ಚೆನ್ನಾಗಿ "ಸಮ್ಯಕ್" ಈ ಪದಕ್ಕೆ ವ್ಯಾಖ್ಯಾನ ಮಾಡುತ್ತಾ ಆಚಾರ್ಯರು ಆಚಾರ್ಯನಿಷ್ಠಳಾದ ಶಬರಿಯಿಂದ ರಾಮ ಪೂಜೆಯನ್ನು ಸ್ವೀಕರಿಸಿದ. ಶಬರಿಗೆ ಆಚಾರ್ಯನಿಷ್ಠೆ ಇದ್ದಿದ್ದರಿಂದ ತಾನಾಗಿಯೇ ರಾಮ ಶಬರಿಯ ಬಳಿಗೆ ಬಂದ ಎಂದಿದಾರೆ.

"ರಾಮಲಕ್ಷ್ಮಣರನ್ನು ಯಥಾವಿಧಿಯಾಗಿ ಪೂಜಿಸಿದ ನಂತರ ಶಬರಿ "ರಾಮಾ ನನ್ನ ಜೀವಿತ ಸಫಲವಾಯಿತು. ಗುರುಗಳಾದ ಮತಂಗ ಮಹರ್ಷಿಗಳು ಬ್ರಹ್ಮಲೋಕಕ್ಕೆ ಹೋಗುವಾಗ ಹೇಳಿ ಹೋಗಿದ್ದರು. "ರಾಮ ಬರುತ್ತಾನೆ, ಅವನನ್ನು ಸಂದರ್ಶಿಸು ಎಂದು. ಅದರಂತೆ ನಿನ್ನನ್ನು ಕಾಣುವ ಭಾಗ್ಯ ನನಗೆ ಲಭ್ಯವಾಯಿತು. ರಾಮಾ, ನಿನ್ನನ್ನು ಕಾಣುವ ಸಲುವಾಗಿ ನಾನು ಇಷ್ಟು ದಿನ ಜೀವಿಸಿದ್ದೆ. ಈಗ ಜೀವಿತ ಸಾಫಲ್ಯವನ್ನು ಪಡೆಯಿತು. ಇನ್ನು ನನ್ನ ಸ್ಥಾನಕ್ಕೆ ಹೋಗುತ್ತೇನೆ. ಅಪ್ಪಣೆ ಕೊಡು" ಎಂದು ಹೇಳಿ ರಾಮ ಲಕ್ಷ್ಮಣರಿಗೆ ಕೈಮುಗಿದಳು. ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದಳು,

ಒಣಗಿದ ಕಾಷ್ಠಗಳನ್ನೊಟ್ಟಿ ಚಿತೆಯನ್ನು ಪ್ರಜ್ವಲಿಸಿ ಅದರಲ್ಲಿ ತನ್ನ ದೇಹವನ್ನು ಸಮರ್ಪಿಸಿ ಕೊಂಡಳು.

ಜೀರ್ಣವಾಗಿದ್ದ ಶಬರಿಯ ದೇಹ ನಿಮಿಷಾರ್ಧದಲ್ಲಿ ಅಗ್ನಿಯಲ್ಲಿ ಸೇರಿತು. ಮರುಕ್ಷಣ ಅಗ್ನಿ ಜ್ವಾಲೆಯಿಂದ ತೇಜೋಮಯವಾದ ದೇಹ ಹೊರಬಂದಿತು.

ದಿವ್ಯ ಮಾಲ್ಯಗಳಿಂದ, ದಿವ್ಯ ವಸ್ತ್ರಗಳಿಂದ, ದಿವ್ಯಾಭರಣಗಳಿಂದ ಅಲಂಕೃತವಾದ ಜಾಜ್ವಲ್ಯಮಾನವಾದ ದೇಹದಿಂದ ಶಬರಿ ವಿಮಾನವೇರಿ ಮೋಕ್ಷಕ್ಕೆ ಹೊರಟಳು.

ಶಬರೀ ಮೋಕ್ಷದ ಪ್ರಕರಣದಲ್ಲಿ ವಿಶಿಷ್ಟಾದ್ವೈತಸಿದ್ಧಾಂತದ ವೈಶಿಷ್ಟ್ಯ ಪ್ರಕಾಶಕ್ಕೆ ಬರುತ್ತದೆ.

ಆಳ್ವಾರುಗಳು, ಆಚಾರ್ಯರು ಈ ಪ್ರಕರಣದಲ್ಲಿ ಪ್ರಭಾವಯುತವಾದ ವ್ಯಾಖ್ಯಾನವನ್ನು ಮಾಡಿದಾರೆ.

ಮೊದಲೇ ಹೇಳಿದಂತೆ ಶಬರಿ ಆಚಾರ್ಯನಿಷ್ಠಳು ಮತಂಗ ಮಹರ್ಷಿಗಳನ್ನು ಸೇವಿಸುತ್ತಿದ್ದಳು. ಆಚಾರ್ಯನಿಷ್ಠರಾದವರ ಬಳಿಗೆ ಪರಮಾತ್ಮ ತಾನಾಗಿಯೇ ಬರುತ್ತಾನೆ ಎಂಬುದಕ್ಕೆ ಶಬರಿಯೇ ನಿದರ್ಶನ.

ವೇದಾಂತ ದೇಶಿಕರು ಹೇಳುತ್ತಾರೆ: "ಆಚಾರ್ಯನಿಷ್ಠರಾದವರಿಗೆ ಮೋಕ್ಷ ತಾನಾಗಿಯೇ ಲಭ್ಯವಾಗುತ್ತದೆ. ಅದನ್ನು ಪರಮಾತ್ಮ ಕೊಡಬೇಕಾದುದೇ ಇಲ್ಲ ಎನ್ನುತ್ತಾರೆ. ರಾಮ ಜಟಾಯುವಿಗೆ, ಶರಭಂಗನಿಗೆ, ಕಬಂಧನಿಗೆ ಮೋಕ್ಷ ಕೊಟ್ಟ. ಆದರೆ, ಶಬರಿ ಮೋಕ್ಷಕ್ಕೆ ಹೋಗುವುದನ್ನು ಸಾಕ್ಷಿಮಾತ್ರವಾಗಿ ನಿಂತು ನೋಡುತ್ತಿದ್ದ. ಅದನ್ನೇ "ಶಬರೀ ಮೋಕ್ಷ ಸಾಕ್ಷೀಭೂತ'' ಎಂದಿದಾರೆ. ಶಬರಿ ತನ್ನ ಆಚಾರ್ಯನಿಷ್ಠೆಯ ಪ್ರಭಾವದಿಂದಲೇ ಮೋಕ್ಷಕ್ಕೆ ಹೋದಳು. ಅದನ್ನು ರಾಮ ಸಾಕ್ಷಿಯಾಗಿ ನಿಂತು ನೋಡಿದ. ಆಚಾರ್ಯನಿಷ್ಠೆ ಎಷ್ಟು ಫಲಪ್ರದವಾದುದು !" ಎಂದರು.

ಆಚಾರ್ಯ ನಿಷ್ಠೆಗೆ ಒಂದೆರಡು ನಿದರ್ಶನಗಳನ್ನು ಹೇಳಬಹುದು. ಶ್ರೀ ರಾಮಾನುಜರು ಚೋಳರಾಜನಿಂದ ಪೀಡಿತರಾಗಿ ಶ್ರೀರಂಗವನ್ನು ಬಿಟ್ಟು, ಮೇಲುಕೋಟೆಗೆ ಬಂದಿದ್ದ ಸಮಯ. ರಾಮಾನುಜರ ಪಟ್ಟಶಿಷ್ಯರಾದ ಕೂರುತ್ತಾಳ್ವಾರ್ ಶ್ರೀರಂಗದಲ್ಲಿ ಶ್ರೀರಂಗನಾಥನನ್ನು ಸೇವಿಸಲು ಬಂದರು. ಚೋಳರಾಜನ ಶಾಸನಕ್ಕೆ ಒಳಪಟ್ಟ ದೇವಸ್ಥಾನದ ಅಧಿಕಾರಿಗಳು ಕೂರುತ್ತಾಳ್ವಾರನ್ನು ತಡೆದರು. ಏಕೆ ತಡೆಯುತ್ತೀರಿ ? ಎಂದು ಕೇಳಿದ್ದಕ್ಕೆ ದೇವಾಲಯದ ಅಧಿಕಾರಿಗಳು ಹೇಳಿದರು. "ನೀವು ನಾನು ರಾಮಾನುಜರ ಶಿಷ್ಯನಲ್ಲ ಎಂದು ಹೇಳಿ. ತಡೆಯದೆ ಒಳಗೆ ಬಿಡುತ್ತೇವೆ." ಅದಕ್ಕೆ ಆಚಾರ್ಯನಿಷ್ಠರಾದ ಕೂರುತ್ತಾಳ್ವಾರ್ "ಎನ್ ಆಚಾರ್ಯನುಕ್ಕು ಇಲ್ಲಾದ ಪೆರುಮಾಳ್ ಎನಕ್ಕು ಮ್‌ವೇಂಡಾಂ" ಎಂದರು.

"ನನ್ನ ಆಚಾರ್ಯನಿಗೆ ಇಲ್ಲದಿರುವ ದೇವರು ನನಗೂ ಬೇಡ" ಎಂದು ಹೇಳಿ ಅಲ್ಲಿಂದ ಶ್ರೀರಂಗನಾಥನನ್ನು ಸೇವಿಸದೆ ಹಾಗೆಯೇ ಹೊರಟುಬಿಟ್ಟರು.

ಮುಂದೆ ತಿರುಕ್ಕುಡಂದೈಗೆ ಬಂದು ಅಲ್ಲಿ ಭಗವಂತನನ್ನು ನೂರಮೂವತ್ತು ಪದ್ಯಗಳಿಂದ ಸ್ತೋತ್ರಮಾಡಿದರು. ಅಲ್ಲಿಂದ ಅವರು ಹೊರಡುವ ಮುನ್ನ ಶಿಲಾರೂಪದಲ್ಲಿದ್ದ ಪರಮಾತ್ಮ ಪ್ರತ್ಯಕ್ಷನಾಗಿ ಆಳ್ವಾರೊಡನೆ ಸಂಭಾಷಿಸಿದ.

"ಆಳ್ವಾರ್, ನೀವು ಧೈರ್ಯವಾಗಿ ನನ್ನನ್ನು ಹೇಗೆ ಸ್ತೋತ್ರ ಮಾಡಿದಿರಿ ?" ಎಂದು ಕೇಳಿದ. ಅದಕ್ಕೆ ಆಳ್ವಾರ್ "ಸ್ವಾಮಿ ನಾನು ಆಚಾರ್ಯ ರಾಮಾನುಜರಲ್ಲಿ ಕಾಲಕ್ಷೇಪ ಮಾಡಿದೇನೆ. ಅವರು

ಸಾಮಾನ್ಯರಲ್ಲ. ಅವರಲ್ಲೇ ಕಾಲಕ್ಷೇಪ ಮಾಡಿದ ನನಗೆ ನಿನ್ನನ್ನು ಸ್ತೋತ್ರ ಮಾಡುವುದು ಹೆಚ್ಚೇನಲ್ಲ" ಎಂದರು.

ಆಗ ಸ್ವಾಮಿ "ಹಾಗಾದರೆ ಮೊದಲು ನೀವು ನನ್ನನ್ನು ವರ ಕೇಳಿ. ಆಮೇಲೆ ಸ್ತೋತ್ರ ಮಾಡುವಿರಂತೆ" ಎಂದ. ವರ ಕೇಳುತ್ತಾ ಆಳ್ವಾರ್ "ಆಚಾರ್ಯರ ಶ್ರೀ ಪಾದಗಳ ಅನುಗ್ರಹ ಆಗುವಂತೆ ಅನುಗ್ರಹಿಸು" ಎಂದರು. ದೇವ ಆಳ್ವಾರ್ ಅವರ ಆಚಾರ್ಯನಿಷ್ಠೆಗೆ ತಲೆದೂಗುತ್ತಾ "ಆಹಾ ! ಎಲ್ಲರೂ ಆಚಾರ್ಯನ ಅನುಗ್ರಹದಿಂದ ದೈವವನ್ನು ಪಡೆಯಲು ಆಶಿಸಿದರೆ, ನೀನು ದೈವದ ಅನುಗ್ರಹದಿಂದ ಆಚಾರ್ಯನನ್ನು ಪಡೆಯಬೇಕು ಎನ್ನುವಿಯಲ್ಲ'' ಎಂದ. ಹೀಗಿದೆ ಆಚಾರ್ಯ ನಿಷ್ಠೆಯ ಮಹತ್ವ.

ರಾಮಾನುಜರ ಮತ್ತೊಬ್ಬ ಶಿಷ್ಯ ಆಚಾರ್ಯರ ಬಳಿಗೆ ಬಂದು "ಸ್ವಾಮಿ ಎನಕ್ಕು ಇರು ಪರೈ ಕಂಡಾಲ್ ಪಿಡಿಕ್ಕವಿಲ್ಲೈ." ಸ್ವಾಮಿ ನನಗೆ ಇರುಹರನ್ನು "ಕಂಡರೆ ಆಗದು" ಎಂದ.

"ಹಾಗೆಂದರೆ ಏನು ?" ಎಂದು ಆಚಾರ್ಯರು ಕೇಳಿದರು. "ಸ್ವಾಮಿ, ಇರುಹರು ಎಂದರೆ ಎರಡೂ ಕಡೆ ವಾಲುವವರು, ಹಾಗೂ ಸರಿ–ಹೀಗೂ ಸರಿ ಎನ್ನುವವರು. ಕೆಲವರು ರಂಗನಾಥ ನನ್ನು ಕಂಡಾಗ ನೀನೇ ಗತಿ ನೀನೇ ದೊಡ್ಡವ ಎಂದು ಕೈಮುಗಿದು ಹಲ್ಗಿರಿಯುತ್ತಾರೆ. ಅವರೇ ಆಚಾರ್ಯರನ್ನು ಕಂಡಾಗ ನೀವೇ ಗತಿ, ನೀವೇ ದೊಡ್ಡವರು ಎಂದೂ ಹೇಳುತ್ತಾರೆ. ಇದೇನು ! ಎರಡೂ ಕಡೆ ವಾಲುವುದು. ಇದು ಸರಿ ಬೀಳದು. ಆಚಾರ್ಯನಲ್ಲಿ ಏಕನಿಷ್ಠೆ ಇರಬೇಕಲ್ಲವೇ'' ಎಂದನಂತೆ.

ಒಮ್ಮೆ ರಾಮಾನುಜರು ಪೂಜೆಗಾಗಿ ತಮ್ಮ ಪೂಜಾಪೆಟ್ಟಿಗೆಯನ್ನು ತರುವಂತೆ ಶಿಷ್ಯನಿಗೆ ಹೇಳಿದರು. ಶಿಷ್ಯ ಹೋದ. ಪೆಟ್ಟಿಗೆಯನ್ನು ತೆಗೆದುಕೊಂಡು ಕಲ್ಯಾಣಿಗೆ ನಡೆದ. ಪೆಟ್ಟಿಗೆಯಲ್ಲಿದ್ದ ಸಾಲಿಗ್ರಾಮಗಳನ್ನು ಕಲ್ಯಾಣಿಯಲ್ಲಿ ಬಿಟ್ಟು ಅದರಲ್ಲಿ ಆಚಾರ್ಯನ ಪಾದುಕೆಗಳನ್ನು ಇಟ್ಟುಕೊಂಡು ರಾಮಾನುಜರ ಬಳಿಗೆ ತಂದ.

ರಾಮಾನುಜರು ಪೆಟ್ಟಿಗೆ ತೆಗೆದು ನೋಡಿದರು. ಅದರಲ್ಲಿ ಸಾಲಿಗ್ರಾಮಗಳೇ ಇಲ್ಲ. ಅದಕ್ಕೆ ಬದಲು ತಮ್ಮ ಪಾದುಕೆಗಳಿವೆ. ಶಿಷ್ಯನನ್ನು ಕರೆದು "ಇದೇನು ?'' ಎಂದರು. ಆಗ ಆ ಶಿಷ್ಯ "ದೇವರೀರ್, ಪೆರುಮಾಳೈ ಕಾಟ್ಟಿಲುಂ ಎಂಪೆರುಮಾಳ್ ಪುಟ್ಟ ಮಾ." ಸ್ವಾಮಿ–ನಿಮಗೆ ದೇವರು, ಸಾಲಿಗ್ರಾಮ ಇರಬಹುದು. ಆದರೆ, ನನ್ನ ದೇವರು ನೀವು. ನಿಮ್ಮ ದೇವರಿಗಿಂತ ನಮ್ಮ ದೇವರು ಕಡಿಮೆಯೇನಿಲ್ಲ'' ಎಂದನಂತೆ.

ಶ್ರೀವೈಷ್ಣವ ಸಿದ್ಧಾಂತದ ರೀತ್ಯಾ ಆಚಾರ್ಯನಿಷ್ಠೆ ಇರಬೇಕು. "ರಾಮಾನುಜರ ದಿವ್ಯಪಾದಗಳೇ ಗತಿ" ಎಂಬ ದೃಢಬುದ್ಧಿ ಇರಬೇಕು.

ಶಬರಿ ಅಂತಹ ಆಚಾರ್ಯನಿಷ್ಠೆ ಉಳ್ಳವಳು. ರಾಮನು ತಾನಾಗಿಯೇ ಅವಳಿರುವಲ್ಲಿಗೆ ಬಂದ. ಅನುಗ್ರಹಿಸಿದ.

ಹಾಗೆಯೇ ಆಚಾರ್ಯನಿಷ್ಠರ ಬಳಿಗೆ ಪರಮಾತ್ಮ ತಾನಾಗಿಯೇ ಬಂದು ಅನುಗ್ರಹಿಸುತ್ತಾರೆ ಎಂಬುದು ತಾತ್ಪರ್ಯ.

ಶಬರಿಯ ಆಶ್ರಮದಿಂದ ಹೊರಟ ರಾಮಲಕ್ಷ್ಮಣರು ಪಂಪಾ ಸರೋವರದತ್ತ ನಡೆದರು. ಮಾರ್ಗದಲ್ಲಿ ರಾಮ ಲಕ್ಷ್ಮಣನೊಡನೆ ಮತಂಗವನದ ರಮಣೀಯತೆಯನ್ನು ವರ್ಣಿಸುತ್ತಾ ನಡೆದ.

"ಲಕ್ಷ್ಮಣಾ, ನೋಡಿದೆಯಾ, ಮತಂಗವನ ಎಷ್ಟು ಪ್ರಶಾಂತವಾಗಿದೆ? ಇಲ್ಲಿ ಮೃಗಗಳು, ಪಕ್ಷಿಗಳು, ಭಯವಿಲ್ಲದೆ ಹೇಗೆ ವಾಸಿಸುತ್ತವೆ ನೋಡು! ಮೃಗಗಳು ತಮ್ಮ ಸಹಜ ವೈರವನ್ನೂ ತೊರೆದು ಮಿತ್ರಭಾವದಿಂದ ವರ್ತಿಸುತ್ತಿವೆ. ಈ ಆಶ್ರಮದ ಮಹತ್ವ ಎಂಥದು" ಎಂದು ಹೇಳುತ್ತಾ ಮುನ್ನಡೆದ.

ರಾಮಲಕ್ಷ್ಮಣರು ಪಂಪಾತೀರವನ್ನು ಸೇರಿದರು. ಪಂಪಾತೀರದ ಶೋಭೆ ರಾಮಲಕ್ಷ್ಮಣ ರಿಗೆ ಸಂತಸವನ್ನುಂಟುಮಾಡಿತು. ಕಬಂಧ ಹೇಳಿದಂತೆಯೇ ಪಂಪಾ ಸರೋವರ ಮನೋಹರವಾಗಿತ್ತು. ನಿರ್ಮಲವಾಗಿ ಸ್ಫಟಿಕದಂತಿರುವ ಜಲ, ತಾವರೆ, ಕನ್ನೈದಿಲೆ ಇವೆಲ್ಲ ಆ ಸರೋವರದಲ್ಲಿ ಶೋಭಾಯಮಾನವಾಗಿದ್ದವು.

ಪಂಪಾತೀರದಲ್ಲಿದ್ದ ವೃಕ್ಷಗಳು ಪುಷ್ಪ ಫಲಗಳಿಂದ ಶೋಭಿಸುತ್ತಿದ್ದವು. ಎಲ್ಲೆಲ್ಲಿ ನೋಡಿ ದರೂ ಹಸಿರು ಮರಗಳು ವಿಧವಿಧ ಪುಷ್ಪಗಳಿಂದ ತುಂಬಿ ಸರ್ವಾಭರಣಗಳಿಂದ ಅಲಂಕೃತಳಾದ ಯುವತಿಯಂತೆ ವನದೇವತೆ ಶೋಭಿಸುತ್ತಿದ್ದಳು.

ಪ್ರಶಾಂತವಾದ ವಾತಾವರಣ. ಮಂದಮಂದವಾಗಿ ಸುಗಂಧದ ಕಂಪನ್ನು ಹೊತ್ತು ಬೀಸುವ ಮಾರುತ, ಎಲ್ಲಿ ನೋಡಿದರೂ ಹಸಿರು ಮರ. ಎಲ್ಲಿ ನೋಡಿದರೂ ಹಣ್ಣುಗಳಿಂದ ತುಂಬಿದ ವೃಕ್ಷಗಳು. ಸುತ್ತಲೂ ವಿಧವಿಧವಾದ ಹೂವಿನ ಗಿಡಗಳು. ಮಾಲತಿ, ಪುನ್ನಾಗ, ಜಾಜಿ, ಮಲ್ಲಿಗೆ, ಸೇವಂತಿಗೆ ಸಂಪಿಗೆ, ಪಾದರಿ, ದೇವದಾರು ಮುಂತಾದ ಕಂಪನ್ನು ಬೀರುವ ಹೂಗಳು. ಅಲ್ಲಲ್ಲಿ ಹೂಗಳ ಪರಿಮಳವನ್ನು ಆಸ್ವಾದಿಸಲು ಮಕರಂದವನ್ನು ಸೇವಿಸಲು ಬರುತ್ತಿರುವ ದುಂಬಿಗಳ ಝೇಂಕಾರ, ಗುಂಪುಗುಂಪಾಗಿ ಹಾರಾಡುತ್ತಿರುವ ಪಕ್ಷಿಗಳ ಕಲಕಲ ನಿನಾದ. ಮನಸ್ಸಿನ ಕಿಲ್ಬಿಷ ವನ್ನೇ ತೊಡೆದು ಹಾಕುವಂತೆ ಶುಭ್ರವಾದ ನೀರುಳ್ಳ ಪಂಪಾತೀರದ ಸರೋವರದ ಅಮಲಜಲದ ಮಂಜುಳ ಕಲಕಲಶಬ್ದ.

ಇದನ್ನೆಲ್ಲ ಗಮನಿಸಿದ, ರಾಮ. ಈ ಸಮಯದಲ್ಲಿ ಪಕ್ಕದಲ್ಲಿ ಈ ಸವಿಯನ್ನು ಸವಿಯಲು ಸೀತೆ ಇಲ್ಲವಲ್ಲ ಎಂದು ಚಿಂತಾಕ್ರಾಂತನಾದ.

ಹೀಗೆ ರಮ್ಯವಾದ ಪಂಪಾತೀರವನ್ನು ರಾಮಲಕ್ಷ್ಮಣರು ಸೇರಿದರು.

ಅರಣ್ಯಕಾಂಡದಲ್ಲಿ ವಾಲ್ಮೀಕಿ ರಾಮನ ದೃಢವ್ರತತ್ವ ಶರಣಾಗತರಕ್ಷಣೆಗಳನ್ನು ವಿವರಿ ಸಿದ್ದಾರೆ.

ರಾಮಾವತಾರದ ರಹಸ್ಯವನ್ನೇ ಅರಣ್ಯಕಾಂಡದಲ್ಲಿ ಅಡಗಿಸಿಟ್ಟಿದಾರೆ. ರಾಮ "ಪರತತ್ವ ಸ್ವರೂಪಿ" ಎಂಬುದು ವೇದ್ಯವಾಗುವುದು ಈ ಕಾಂಡದಲ್ಲೇ.

ದುಷ್ಟನಿಗ್ರಹ, ಶಿಷ್ಟ ಪರಿಪಾಲನೆ—ಇವೇ ಪರಮಾತ್ಮನ ಅವತಾರದ ರಹಸ್ಯ. ಇದಕ್ಕಾ ಗಿಯೇ ರಾಮ ಅರಣ್ಯದಲ್ಲಿದ್ದ ಋಷಿಗಳಿಗೆ ಅಭಯ ಕೊಟ್ಟ. ಹದಿನಾಲ್ಕು ಸಾವಿರ ರಾಕ್ಷಸರನ್ನು ಏಕಾಕಿಯಾಗಿ, ಮುಹೂರ್ತಾರ್ಧಕಾಲದಲ್ಲಿ ನಿಗ್ರಹಿಸಿದ.

ಅರಣ್ಯದಲ್ಲೆಲ್ಲ ಸಂಚರಿಸಿ ಎಲ್ಲ ಋಷಿಗಳಿಗೂ ದರ್ಶನ ಕೊಟ್ಟ. ದೇವಲೋಕದ ಕಲ್ಪ ವೃಕ್ಷವೇ ಮೂರ್ತರೂಪದಲ್ಲಿ ಸಂಚರಿಸುತ್ತಿದೆಯೋ ಎಂಬಂತೆ ತನ್ನನ್ನು ಆಶ್ರಯಿಸಿದವರಿಗೆಲ್ಲ ಮಂಗಳವನ್ನು ಮಾಡಿದ.

ವಿರಾಧ, ಕಬಂಧ, ಇವರ ಶಾಪವನ್ನು ವಿಮೋಚನೆಮಾಡಿದ. ಶರಭಂಗ, ಜಟಾಯು, ಶಬರಿ–ಇವರಿಗೆ ಮೋಕ್ಷವನ್ನಿತ್ತ. "ಬೃಹದಾರಣ್ಯಕ'' ಎಂಬ ಉಪನಿಷತ್ತಿನಲ್ಲಿ ಪ್ರೋಕ್ತವಾಗಿರುವ ಸಾಕ್ಷಾತ್ ಪರಬ್ರಹ್ಮ ವಸ್ತುವೇ ತಾನು ಎಂಬುದನ್ನು ನಿರೂಪಿಸಲು ಮಹಾರಣ್ಯವಾದ ದಂಡಕಾರಣ್ಯವನ್ನು ಪ್ರವೇಶಿಸಿದ.



# ಕಿಷ್ಕಿಂಧಾಕಾಂಡ

ರಮ್ಯವಾದ ಪಂಪಾತೀರವನ್ನು ಸೇರಿದ ರಾಮಲಕ್ಷ್ಮಣರು ಪಂಪಾತೀರದ ಶೋಭೆಯನ್ನು ನೋಡುತ್ತಿದ್ದರು. ಸರ್ವ ಋತುಗಳಲ್ಲೂ ಪಂಪಾತೀರ ಹಸಿರುಡೆಯನ್ನುಟ್ಟು, ಶೋಭಿಸುತ್ತಿತ್ತು. ಪಂಪಾತೀರದ ಒಂದು ವೈಶಿಷ್ಟ್ಯ ಎಂದರೆ ಅಲ್ಲಿ ಎಲ್ಲ ಕಾಲವೂ ವಸಂತ ಕಾಲದಂತೆಯೇ ಭಾಸವಾಗುತ್ತಿತ್ತು

ವಸಂತ ಋತುವಿನಲ್ಲಿರುವಂತೆಯೇ ಎಲ್ಲೆಲ್ಲೂ ತಳಿರು, ಪಕ್ಷಿಗಳ ಕಲಕಲಧ್ವನಿ, ಕೋಗಿಲೆಯ ಇನಿದಾದ ಕೂಗು, ಭ್ರಮರಗಳ ಝೇಂಕಾರ, ಮಂದಮಾರುತ, ಎಲ್ಲೆಲ್ಲೂ ಪುಷ್ಪಭರಿತವಾದ ವೃಕ್ಷಗಳು, ಮಯೂರಗಳ ನರ್ತನ. ಅದರ ಚೆಲುವೇ ಚೆಲುವು.

ಇದನ್ನೆಲ್ಲ ನೋಡಿದ ರಾಮನಿಗೆ ಸೀತೆಯ ವಿರಹವೇದನೆ ಮತ್ತೆ ಕೆರಳಿತು. ಪ್ರಾಕೃತನಂತೆ ಲಕ್ಷ್ಮಣನೊಡನೆ ತನ್ನ ವೇದನೆಯನ್ನು ತೋಡಿಕೊಳ್ಳತೊಡಗಿದ.

"ಲಕ್ಷ್ಮಣಾ, ಪಂಪಾತೀರವೇನೋ ರಮ್ಯವಾಗಿದೆ. ಆದರೆ, ಒಂದೊಂದು ವಸ್ತುವೂ ನನಗೆ ಸೀತೆಯ ನೆನಪನ್ನೇ ಉಂಟುಮಾಡುತ್ತದೆ. ಆ ಪುಷ್ಪಗಳನ್ನೆಲ್ಲ ನೋಡುವಾಗ "ಸೀತೆ ಇದ್ದಿದ್ದರೆ?" ಎನ್ನಿಸುತ್ತದೆ. ನೋಡು ಆ ನವಿಲುಗಳು ಎಷ್ಟು ಚೆನ್ನಾಗಿ ಜೊತೆ-ಜೊತೆಯಾಗಿ ನರ್ತಿಸುತ್ತಿವೆ? ಆ ಪಕ್ಷಿಗಳು ಒಂದರೊಡನೆ ಒಂದು ಹೊಂದಿಕೊಂಡು ಎಷ್ಟು ಸೌಖ್ಯವಾಗಿವೆ? ಮೃಗಗಳು ಸಂತೋಷದಿಂದಿವೆ. ತಿರ್ಯಗ್ ಜಂತುಗಳೂ ಇಷ್ಟು ಆನಂದದಿಂದ ಇರುವಾಗ ನಾನು ಸೀತೆಯ ವಿರಹವನ್ನು ಹೇಗೆ ಸಹಿಸಲಿ? ಲಕ್ಷ್ಮಣಾ, ಆ ತಾವರೆಯನ್ನು ನೋಡು. ಅದನ್ನು ನೋಡುತ್ತಿದ್ದಂತೆ ನನಗೆ ಸೀತೆಯ ನೆನಪು ಇನ್ನೂ ಕೆರಳುತ್ತದೆ. ಸೀತೆಯ ಮುಖ ತಾವರೆಯಂತಿದೆ. ಅವಳ ಕಣ್ಣುಗಳು ತಾವರೆಯ ಎಸಳಿನಂತೆ ಅಗಲವಾಗಿವೆ. ಆ ವಿಶಾಲಾಕ್ಷಿ ಈಗ ನನ್ನೊಡನೆ ಇದ್ದರೆ ಎಷ್ಟು ಚೆನ್ನಾಗಿತ್ತು. ಅವಳಿಲ್ಲದೆ ನಾ ಪಡುತ್ತಿರುವ ವೇದನೆ ಹೇಳತೀರದು. ಸೌಮಿತ್ರಿ, ಆ ಪುಷ್ಪಭರಿತವಾದ ಲತೆಗಳನ್ನು ನೋಡು ಸೀತೆಗೆ ಹೂವೆಂದರೆ ಹಿಗ್ಗು. ವಿಧವಿಧದ ಹೂಗಳನ್ನು ಆಯುವುದರಲ್ಲಿ ಆಕೆ ಸಮರ್ಥಳು. ಈಗ ಅವಳಿಲ್ಲದೆ ಈ ಹೂಗಳನ್ನು ನೋಡುವ ಸ್ಥಿತಿ ಒದಗಿತಲ್ಲಾ. ಅವಳಾದರೂ ಈಗ ಎಲ್ಲಿರುವಳೋ? ಅವಳೂ ರಾಕ್ಷಸನ ಕೈಗೆ ಸಿಕ್ಕಿ ನನ್ನಂತೆಯೇ ಪರಿತಪಿಸುತ್ತಿರಬೇಕಲ್ಲವೆ? ಲಕ್ಷ್ಮಣಾ – ಈ ಕೋಗಿಲೆಯ ಕೂಗನ್ನು ಕೇಳಿದೆಯಾ ಎಷ್ಟು ಇಂಪಾಗಿದೆ. ಸೀತೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದಳು ಬಲ್ಲೆಯಾ.

ಆ ಹೆಣ್ಣು ನವಿಲನ್ನು ನೋಡು ಸೌಮಿತ್ರಿ! ಎಷ್ಟು ಚೆನ್ನಾಗಿ ಗರಿಗೆದರಿ ನರ್ತಿಸುತ್ತಿದೆ. ಅದರ ನರ್ತನಕ್ಕೆ ಸರಿಯಾಗಿ ತಾಳ ಹಾಕುವಂತೆ ಆ ಗಂಡು ನವಿಲೂ ಹೇಗೆ ಜೊತೆಯಲ್ಲಿ ನರ್ತಿಸುತ್ತಿದೆ ನೋಡು ನರ್ತಿಸುತ್ತಾ ನರ್ತಿಸುತ್ತಾ ಆ ಮಯೂರಿ ಮಯೂರದ ಬಳಿಗೆ ಹೇಗೆ ಹೋಗುತ್ತಿದೆ. ನನ್ನ ಪ್ರಿಯಳಾದ ಸೀತೆ ಈಗ ಇದ್ದಿದ್ದರೆ ನನ್ನನ್ನು ನೋಡಿ ಹೀಗೆಯೇ ನನ್ನ ಬಳಿಗೆ ಬರುತ್ತಿದ್ದಳು ಅಲ್ಲವೇ ಲಕ್ಷ್ಮಣಾ.

ಸುಗಂಧ ಮಿಶ್ರಿತವಾದ ಮಲಯಮಾರುತ ಮಂದವಾಗಿ ಬೀಸುತ್ತಿದೆ. ಅದು ಸೀತೆಯ ಮೇಲೆ ಬೀಸಿ ಇತ್ತ ಬಂದಿರಬೇಕು ಅಲ್ಲವೇ? ಸೀತೆಯ ಸ್ಪರ್ಶವಾದುದರಿಂದಲೇ ಆ ಮಾರುತ

ಇಷ್ಟು ಮಂದವಾಗಿ ತಣ್ಣಗೆ ಬೀಸುತ್ತಿರಬೇಕು. ಅಯ್ಯೋ—ನಾನು ಈ ವಿರಹವನ್ನು ತಾಳಲಾರೆ. ಸುಮಿತ್ರಾಕುಮಾರ, ವಿರಹದ ಬೆಂಕಿ ನನ್ನನ್ನು ಸುಡುತ್ತಿದೆ.

ಈ ಅಗ್ನಿಯನ್ನು ಹೊತ್ತಿಸಿ ಪ್ರಜ್ವಲಿಸುತ್ತಿದ್ದಾನೆ ವಸಂತ. ಕೆಂಪಗಿರುವ ಈ ಅಶೋಕದ ತಳಿರೇ ಅಗ್ನಿಜ್ವಾಲೆ. ಆ ಅಗ್ನಿಜ್ವಾಲೆ ಜಾಜ್ವಲ್ಯಮಾನವಾಗಿ ಉರಿಯುತ್ತಿದೆ. ಅದರಲ್ಲಿ ಸಾಬೆಂದು ಹೋಗುತ್ತಿದ್ದೇನೆ. ಸೀತೆ ಇಲ್ಲದೆ ಈ ರಮಣೀಯ ದೃಶ್ಯವೂ ನನಗೆ ತಾಪದಾಯಕವಾಗುತ್ತಿದೆ. ತಾಪಹಾರಿಯಾದ ಪಂಪಾಸರೋವರ, ಸೀತೆಯಿಲ್ಲದ ನನಗೀಗ ಮತ್ತೂ ತಾಪವನ್ನು ಕೆರಳಿಸುತ್ತಿದೆ. ಸೌಮಿತ್ರಿ, ಈ ಸಮಯದಲ್ಲಿ ಸೀತೆ ನನ್ನೊಂದಿಗಿದ್ದಿದ್ದರೆ ಇವೆಲ್ಲ ಎಷ್ಟು ಚೆನ್ನಾಗಿ ಕಾಣುತ್ತಿತ್ತು. ಅದೋ ನೋಡು, ಅಲ್ಲಿ ಮಂಗಳವಾದ ಋಷ್ಯಮೂಕ ಪರ್ವತ ಕಾಣಿಸುತ್ತಿದೆ. ಅಲ್ಲಿಯೇ ಆ ಕಬಂಧ ಹೇಳಿದ ವಾನರರಾಜ ಸುಗ್ರೀವ ಇರಬೇಕು ಅಲ್ಲವೆ ? ಎಂದ ರಾಮ.

ಋಷ್ಯಮೂಕ ಪರ್ವತದ ಸಮೀಪದಲ್ಲಿ ಸಂಚರಿಸುತ್ತಿದ್ದ ಸುಗ್ರೀವ ಇದ್ದಕ್ಕಿದ್ದಂತೆ ಒಮ್ಮೆ ರಾಮಲಕ್ಷ್ಮಣರನ್ನು ನೋಡಿದ. ಅವರ ದೀರ್ಘಬಾಹುಗಳು, ಅವರ ವಿಶಾಲವಾದ ನೇತ್ರ, ಧೃಢವಾದ ಮೈಕಟ್ಟು, ಧನುಸ್ಸನ್ನು ಹಿಡಿದಿರುವ ಭಂಗಿ ಒಂದೊಂದು ಸುಗ್ರೀವನಿಗೆ ಭಯವನ್ನುಂಟು ಮಾಡಿತು. ಅಲ್ಲಿಂದ ಛಂಗನೆ ಋಷ್ಯಮೂಕಕ್ಕೆ ಹಾರಿದ. ಆ ಪರ್ವತದ ಶಿಖರಗಳ ಮೇಲೆ ಹಾರತೊಡಗಿದ. ಅಲ್ಲಿ ಅವನ ಅನುಚರರಾದ ನಾಲ್ವರು ಕಪಿ ವೀರರಿದ್ದರು. ಅವರಲ್ಲಿ ಸುಗ್ರೀವನ ಮಂತ್ರಿ ಎನಿಸಿದ ಹನುಮಂತನೂ ಒಬ್ಬ.

ಸುಗ್ರೀವನು "ನೋಡಿ, ಅಲ್ಲಿ ಬರುತ್ತಿರುವ ವೀರರನ್ನು; ಅವರ ದೀರ್ಘವಾದ ತೋಳುಗಳನ್ನು. ಅವರ ಅಗಲವಾದ ಕಣ್ಣುಗಳನ್ನು ನೋಡಿ. ಇವರು ನಿಸ್ಸಂಶಯವಾಗಿ ವಾಲಿಯಿಂದ ಇಲ್ಲಿಗೆ ಕಳುಹಿಸಲ್ಪಟ್ಟಿರಬೇಕು. ನನ್ನನ್ನು ಕೊಲ್ಲುವುದಕ್ಕೇ ಬರುತ್ತಿದ್ದಾರೆ. ವಾಲಿಯು ತಾನೇ ಇಲ್ಲಿಗೆ ಬರಲಾರ. ಮತಂಗಋಷಿಗಳ ಶಾಪ ಅವನಿಗಿದೆ. ಅದಕ್ಕಾಗಿ ಈ ವೀರರನ್ನು ಕಳುಹಿಸಿದ್ದಾನೆ. ಇನ್ನೇನು ಗತಿ !" ಎಂದು ನಿಂತಲ್ಲಿ ನಿಲ್ಲದೆ ಅತ್ತಿಂದಿತ್ತ ಇತ್ತಿಂದತ್ತ ಹಾರತೊಡಗಿದ.

ಸುಗ್ರೀವನ ಮಾತನ್ನು ಕೇಳಿದ ಹನುಮಂತ "ವೃಥಾ ಏಕೆ ಭಯಪಡುವುದು ? ವಾಲಿಯಿಂದ ನಿಮಗೆ ಈ ಪ್ರದೇಶದಲ್ಲಿ ಭಯ ಇಲ್ಲ. ವಾಲಿಯ ಭಯದಿಂದ ಪೀಡಿತರಾಗಿ ಹೀಗೆ ಮಾತಾಡುತ್ತಿರುವಿರಿ" ಎಂದ.

ಸುಗ್ರೀವನು "ಇಲ್ಲ, ಅವರ ವೇಷವನ್ನು ನೋಡಿದರೆ ಇವರು ವಾಲಿಯಿಂದ ಕಳುಹಿಸಲ್ಪಟ್ಟವರೇ ಎಂದು ನನಗೆ ಖಚಿತವಾಗುತ್ತದೆ. ತಾನಾಗಿಯೇ ಬರಲು ಆಗದೆ ಇರುವ ಸ್ಥಳಕ್ಕೆ ತನ್ನವರನ್ನು ಕಳಿಸಿದ್ದಾನೆ. ಅವರ ಧನುಸ್ಸು, ಅವರ ನೀಳವಾದ ಬಾಹುಗಳು, ಅವರು ಬರುತ್ತಿರುವ ರೀತಿ ಇದನ್ನೆಲ್ಲ ನೋಡಿದರೆ ಅವರು ಅಪ್ರತಿಮವೀರರು ಎಂಬುದರಲ್ಲಿ ಸಂಶಯವೇ ಇಲ್ಲ. ನೋಡು ಹನುಮಾನ್, ಅವರ ಕಣ್ಣುಗಳು ಎಷ್ಟು ವಿಶಾಲವಾಗಿವೆ ? ಎಷ್ಟು ತೇಜಸ್ಸಿನಿಂದ ಹೊಳೆಯುತ್ತಿವೆ.

ಇಂಥ ಶ್ರೇಷ್ಠ ಪುರುಷರನ್ನು ನಾವು ಪರಿಚಯ ಮಾಡಿಕೊಳ್ಳಬೇಕು. ಹನುಮಂತ, ನೀನು ಪುರುಷವೇಷವನ್ನು ಧರಿಸಿ ಇವರ ಹತ್ತಿರಹೋಗು. ಅವರ ಚಲನವಲನಗಳನ್ನು ಗಮನಿಸು. ಅವರ ನಡೆನುಡಿಗಳನ್ನು ಪರೀಕ್ಷಿಸು. ಅವರು ಒಳ್ಳೆಯವರು, ವಾಲಿಯ ಕಡೆಯವರಲ್ಲ ಎಂಬುದು ತಿಳಿದುಬಂದರೆ ಅವರ ಮುಂದೆ ನನ್ನ ಗುಣಗಳನ್ನು ಪ್ರಶಂಸಿಸು. ಹೇಗಾದರೂ ನನಗೆ ಅವರೊಡನೆ ಸ್ನೇಹ ಆಗುವಂತೆ ಮಾಡು ಹೋಗು. ವಾಯುಪುತ್ರ, ನೀನೇ ನನಗೆ ದಿಕ್ಕು. ನೀ ಹೋಗಿ ಅವರ ವಿಷಯ ಏನು ಎಂದು ತಿಳಿದು ಬಾ" ಎಂದ.

# ಕಿಷ್ಕಿಂಧಾಕಾಂಡ

ರಮ್ಯವಾದ ಪಂಪಾತೀರವನ್ನು ಸೇರಿದ ರಾಮಲಕ್ಷ್ಮಣರು ಪಂಪಾತೀರದ ಶೋಭೆಯನ್ನು ನೋಡುತ್ತಿದ್ದರು. ಸರ್ವ ಋತುಗಳಲ್ಲೂ ಪಂಪಾತೀರ ಹಸಿರುಡೆಯನ್ನುಟ್ಟು, ಶೋಭಿಸುತ್ತಿತ್ತು. ಪಂಪಾತೀರದ ಒಂದು ವೈಶಿಷ್ಟ್ಯ ಎಂದರೆ ಅಲ್ಲಿ ಎಲ್ಲ ಕಾಲವೂ ವಸಂತ ಕಾಲದಂತೆಯೇ ಭಾಸವಾಗುತ್ತಿತ್ತು

ವಸಂತ ಋತುವಿನಲ್ಲಿರುವಂತೆಯೇ ಎಲ್ಲೆಲ್ಲೂ ತಳಿರು, ಪಕ್ಷಿಗಳ ಕಲಕಲಧ್ವನಿ, ಕೋಗಿಲೆಯ ಇನಿದಾದ ಕೂಗು, ಭ್ರಮರಗಳ ಝೇಂಕಾರ, ಮಂದಮಾರುತ, ಎಲ್ಲೆಲ್ಲೂ ಪುಷ್ಪಭರಿತವಾದ ವೃಕ್ಷಗಳು, ಮಯೂರಗಳ ನರ್ತನ. ಅದರ ಚೆಲುವೇ ಚೆಲುವು.

ಇದನ್ನೆಲ್ಲ ನೋಡಿದ ರಾಮನಿಗೆ ಸೀತೆಯ ವಿರಹವೇದನೆ ಮತ್ತೆ ಕೆರಳಿತು. ಪ್ರಾಕೃತನಂತೆ ಲಕ್ಷ್ಮಣನೊಡನೆ ತನ್ನ ವೇದನೆಯನ್ನು ತೋಡಿಕೊಳ್ಳತೊಡಗಿದ.

''ಲಕ್ಷ್ಮಣಾ, ಪಂಪಾತೀರವೇನೋ ರಮ್ಯವಾಗಿದೆ. ಆದರೆ, ಒಂದೊಂದು ವಸ್ತುವೂ ನನಗೆ ಸೀತೆಯ ನೆನಪನ್ನೇ ಉಂಟುಮಾಡುತ್ತದೆ. ಆ ಪುಷ್ಪಗಳನ್ನೆಲ್ಲ ನೋಡುವಾಗ ''ಸೀತೆ ಇದ್ದಿದ್ದರೆ?" ಎನ್ನಿಸುತ್ತದೆ. ನೋಡು ಆ ನವಿಲುಗಳು ಎಷ್ಟು ಚೆನ್ನಾಗಿ ಜೊತೆ-ಜೊತೆಯಾಗಿ ನರ್ತಿಸುತ್ತಿವೆ ? ಆ ಪಕ್ಷಿಗಳು ಒಂದರೊಡನೆ ಒಂದು ಹೊಂದಿಕೊಂಡು ಎಷ್ಟು ಸೌಖ್ಯವಾಗಿವೆ ? ಮೃಗಗಳು ಸಂತೋಷದಿಂದಿವೆ. ತಿರ್ಯಗ್ ಜಂತುಗಳೂ ಇಷ್ಟು ಆನಂದದಿಂದ ಇರುವಾಗ ನಾನು ಸೀತೆಯ ವಿರಹವನ್ನು ಹೇಗೆ ಸಹಿಸಲಿ? ಲಕ್ಷ್ಮಣಾ, ಆ ತಾವರೆಯನ್ನು ನೋಡು. ಅದನ್ನು ನೋಡುತ್ತಿದ್ದಂತೆ ನನಗೆ ಸೀತೆಯ ನನಪು ಇನ್ನೂ ಕೆರಳುತ್ತದೆ. ಸೀತೆಯ ಮುಖ ತಾವರೆಯಂತಿದೆ. ಅವಳ ಕಣ್ಣುಗಳು ತಾವರೆಯ ಎಸಳಿನಂತೆ ಅಗಲವಾಗಿವೆ. ಆ ವಿಶಾಲಾಕ್ಷಿ ಈಗ ನನ್ನೊಡನೆ ಇದ್ದರೆ ಎಷ್ಟು ಚೆನ್ನಾಗಿತ್ತು. ಅವಳಿಲ್ಲದೆ ನಾ ಪಡುತ್ತಿರುವ ವೇದನೆ ಹೇಳತೀರದು. ಸೌಮಿತ್ರಿ, ಆ ಪುಷ್ಪಭರಿತವಾದ ಲತೆಗಳನ್ನು ನೋಡು ಸೀತೆಗೆ ಹೂವೆಂದರೆ ಹಿಗ್ಗು. ವಿಧವಿಧದ ಹೂಗಳನ್ನು ಆಯುವುದರಲ್ಲಿ ಆಕೆ ಸಮರ್ಥಳು. ಈಗ ಅವಳಿಲ್ಲದೆ ಈ ಹೂಗಳನ್ನು ನೋಡುವ ಸ್ಥಿತಿ ಒದಗಿತಲ್ಲಾ. ಅವಳಾದರೂ ಈಗ ಎಲ್ಲಿರುವಳೋ ? ಅವಳೂ ರಾಕ್ಷಸನ ಕೈಗೆ ಸಿಕ್ಕಿ ನನ್ನಂತೆಯೇ ಪರಿತಪಿಸುತ್ತಿರಬೇಕಲ್ಲವೆ ? ಲಕ್ಷ್ಮಣಾ – ಈ ಕೋಗಿಲೆಯ ಕೂಗನ್ನು ಕೇಳಿದೆಯಾ ಎಷ್ಟು ಇಂಪಾಗಿದೆ. ಸೀತೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದಳು ಬಲ್ಲೆಯಾ.

ಆ ಹೆಣ್ಣು ನವಿಲನ್ನು ನೋಡು ಸೌಮಿತ್ರಿ ! ಎಷ್ಟು ಚೆನ್ನಾಗಿ ಗರಿಗೆದರಿ ನರ್ತಿಸುತ್ತಿದೆ. ಅದರ ನರ್ತನಕ್ಕೆ ಸರಿಯಾಗಿ ತಾಳ ಹಾಕುವಂತೆ ಆ ಗಂಡು ನವಿಲೂ ಹೇಗೆ ಜೊತೆಯಲ್ಲಿ ನರ್ತಿಸುತ್ತಿದೆ ನೋಡು ನರ್ತಿಸುತ್ತಾ ನರ್ತಿಸುತ್ತಾ ಆ ಮಯೂರಿ ಮಯೂರದ ಬಳಿಗೆ ಹೇಗೆ ಹೋಗುತ್ತಿದೆ. ನನ್ನ ಪ್ರಿಯಳಾದ ಸೀತೆ ಈಗ ಇದ್ದಿದ್ದರೆ ನನ್ನನ್ನು ನೋಡಿ ಹೀಗೆಯೇ ನನ್ನ ಬಳಿಗೆ ಬರುತ್ತಿದ್ದಳು ಅಲ್ಲವೇ ಲಕ್ಷ್ಮಣಾ.

ಸುಗಂಧ ಮಿಶ್ರಿತವಾದ ಮಲಯಮಾರುತ ಮಂದವಾಗಿ ಬೀಸುತ್ತಿದೆ. ಅದು ಸೀತೆಯ ಮೇಲೆ ಬೀಸಿ ಇತ್ತ ಬಂದಿರಬೇಕು ಅಲ್ಲವೇ ? ಸೀತೆಯ ಸ್ಪರ್ಶವಾದುದರಿಂದಲೇ ಆ ಮಾರುತ

ಇಷ್ಟೆಲ್ಲ ಶುಭಲಕ್ಷಣಗಳಿದ್ದರೂ ನೀವೇಕೆ ನಾರುಮಡಿಯನ್ನು ಧರಿಸಿದೀರಿ ? ಕಿರೀಟವನ್ನಿಟ್ಟು ಕೊಳ್ಳಬೇಕಾದ ನಿಮ್ಮ ತಲೆ ಏಕೆ ಜಟಾಮಂಡಲದಿಂದ ಶೋಭಿಸುತ್ತಿದೆ. ನಿಮ್ಮ ಕಣ್ಣಿನ ನೋಟ ಸಿಂಹದ ನೋಟದಂತಿದೆ. ನೀವು ನಡೆದುಬರುವ ರೀತಿ ಮದಿಸಿದ ಆನೆ ನಡೆದು ಬರುವಂತಿದೆ. ನೀವು ಇಲ್ಲಿ ನಡೆದು ಬರುತ್ತಿರುವುದರಿಂದ ಈ ಪಂಪಾತೀರಕ್ಕೆ ಹೊಸದಾದ ಕಾಂತಿ ಬಂದಿದೆ. ನೀವೇಕೆ ಇತ್ತ ಬಂದಿರಿ ? ಹೇಳಿ.

ನಾ ಇಷ್ಟು ಹೊತ್ತಿನಿಂದ ನಿಮ್ಮನ್ನು ಪ್ರಶ್ನಿಸುತ್ತಿದ್ದರೂ ನೀವು ಒಂದು ಮಾತನ್ನೂ ಆಡುತ್ತಿಲ್ಲವಲ್ಲ. ಏಕೆ ?

ನನ್ನ ವಿಚಾರವನ್ನು ಹೇಳುತ್ತೇನೆ ಕೇಳಿ. ಸಮೀಪದಲ್ಲಿ ಕಾಣುವ ಋಷ್ಯಮೂಕ ಪರ್ವತದಲ್ಲಿ "ಸುಗ್ರೀವ'' ಎಂಬ ವಾನರ ರಾಜ ಇದಾನೆ. ಅವನ ಮಂತ್ರಿ ನಾನು. ನನ್ನನ್ನು "ಹನುಮಂತ" ಎನ್ನುತ್ತಾರೆ. ನಮ್ಮ ರಾಜ ಸುಗ್ರೀವ ಅವನ ಅಣ್ಣನಾದ ವಾಲಿಯಿಂದ ಹೊರದೂಡಲ್ಪಟ್ಟು ಈ ಋಷ್ಯಮೂಕ ಪರ್ವತದಲ್ಲಿದಾನೆ. ಅವನು ನಿಮ್ಮೊಂದಿಗೆ ಸ್ನೇಹ ಬೆಳೆಸಲು ಆಶೆಪಡುತ್ತಾನೆ. ನಾನು ಅವನ ಪ್ರೇರಣೆಯಿಂದಲೇ ಇಲ್ಲಿಗೆ ಬಂದೆ. ಸ್ವಭಾವತಃ ವಾನರ ಜಾತಿಗೆ ಸೇರಿದವ ನಾನು. ಆದರೆ, ಸುಗ್ರೀವನ ಇಚ್ಛೆಯಂತೆ ಅವನ ಒಳ್ಳೆಯದಕ್ಕಾಗಿ ಈ ಭಿಕ್ಷು ರೂಪವನ್ನು ಧರಿಸಿದ್ದೇನೆ. ನಾನು ವಾಯುವಿನ ಮಗ, ಹನುಮಂತ ಎಂಬ ಹೆಸರಿನ ವಾನರ. ವಾನರನಾದರೂ ಕಾಮರೂಪಿ. ಇಷ್ಟವಾದ ರೂಪವನ್ನು ತೆಗೆದುಕೊಳ್ಳುವ ಸಾಮರ್ಥ್ಯ ನನ್ನಲ್ಲಿ ಉಂಟು. ಇದು ನನ್ನ ವಿಷಯ" ಎಂದು ಹೇಳಿ ಸುಮ್ಮನಾದ.

ಹನುಮಂತ ಸುಗ್ರೀವನಿಂದ ಆಜ್ಞಪ್ತನಾಗಿ ಬಂದುದು ಮೊದಲು ರಾಮ ಲಕ್ಷ್ಮಣರ ವಿಷಯವನ್ನು ತಿಳಿದುಕೊಳ್ಳಲು. ಬಂದಮೇಲೆ ರಾಮಲಕ್ಷ್ಮಣರ ಪ್ರಭಾವಕ್ಕೆ ಒಳಗಾಗಿ ಹನುಮಂತ ತಾನಾಗಿಯೇ ತನ್ನ ಎಲ್ಲ ವಿಷಯವನ್ನೂ ಮೊದಲೇ ಹೇಳಿಬಿಟ್ಟ. ಇದಕ್ಕೆ ವ್ಯಾಖ್ಯಾನ ಮಾಡುತ್ತಾ "ದೈವ ಸಾನ್ನಿಧ್ಯದಲ್ಲಿ ವಂಚನೆ ಸಾಧ್ಯವಾಗದು" ಎಂದಿದಾರೆ ಜ್ಞಾನಿಗಳು. ತಾನು ಏಕೆ ಕಪಿರೂಪವನ್ನು ಬಿಟ್ಟು ಭಿಕ್ಷುರೂಪ ಧರಿಸಿದೆ ಎಂಬುದನ್ನು ಮರೆಮಾಚದೆ ಹೇಳಿಬಿಟ್ಟ, ರಾಮನ ಸಾನ್ನಿಧ್ಯದಲ್ಲಿ ಆಂಜನೇಯ.

ಹನುಮಂತನ ಮಾತುಗಳನ್ನು ಕೇಳುತ್ತಾ ಕುಳಿತಿದ್ದ ರಾಮ. ಹನುಮಂತ ರಾಮನ ತೋಳು ಗಳನ್ನು ಬಹಳವಾಗಿ ವರ್ಣಿಸಿದಾನೆ. ಇದಕ್ಕೆ ಕಾರಣ ಉಂಟು. ಮಹಾ ಬಲಿಷ್ಠನಾದ ವಾಲಿ ಯನ್ನು ನಿಗ್ರಹಿಸುವ ಸಾಮರ್ಥ್ಯ ಈ ದೀರ್ಘ ಬಾಹುವಿಗೆ ಇದೆ ಎಂದೇ ಹನುಮಂತ ಬಾಹುಗಳನ್ನು ಪ್ರಶಂಸಿಸಿದ. ಹನುಮಂತನ ಮಧುರ ವಾಣಿಯನ್ನು ಕೇಳಿದ ರಾಮನ ಮುಖ ಸಂತೋಷದಿಂದ ಅರಳಿತು. ಲಕ್ಷ್ಮಣನನ್ನು ಕುರಿತು "ಸೌಮಿತ್ರೀ, ನೋಡು, ಬಂದಿರುವವ ಮಹಾತ್ಮನಾದ ಸುಗ್ರೀವನ ಮಂತ್ರಿ, ಈ ಮಂತ್ರಿಶ್ರೇಷ್ಠನೊಂದಿಗೆ ನೀನು ಮಾತನಾಡು.

ಲಕ್ಷ್ಮಣಾ, ಇವನ ಮಾತುಗಳನ್ನು ಕೇಳಿದೆಯಾ. ಋಕ್, ಯಜುಸ್, ಸಾಮವೇದ ಗಳನ್ನು ಪೂರ್ಣವಾಗಿ ಅಧ್ಯಯನ ಮಾಡದವ ಹೀಗೆ ಮಾತಾಡಲು ಸಾಧ್ಯವೆ ? ಇವನ ಮಾತು ಗಳನ್ನು ಕೇಳಿದರೆ ಇವನು ಪೂರ್ಣವಾಗಿ ವೇದಾಧ್ಯಯನ ಮಾಡಿದವ ಎನ್ನುವುದು ಸ್ಪಷ್ಟ ವಾಗುತ್ತದೆ.

**ನಾನೃಗ್ವೇದ ವಿನೀತಸ್ಯ ನಾಯಜುರ್ವೇದ ಧಾರಿಣಃ ।**
**ನಾಸಾಮವೇದ ವಿದುಷಃ ಶಕ್ಯಮೇವಂ ಪ್ರಭಾಷಿತುಂ ॥**

ನೋಡು ಇಷ್ಟು ಕಾಲ ಮಾತನಾಡಿದರೂ ಮಾತಿನಲ್ಲಿ ಒಂದಾದರೂ ಅಪಶಬ್ದ ಬಂದಿದೆಯೇ? ನವ ವ್ಯಾಕರಣಗಳನ್ನೂ ಬಲ್ಲವ, ಅವರ ಮರ್ಮವನ್ನು ಅರಿತವನಾದ್ದರಿಂದಲೇ ಹೀಗೆ ಮಾತಾಡಲು ಸಾಧ್ಯ.

ಸೌಮಿತ್ರಿ, ನೋಡು ಇಷ್ಟು ಹೊತ್ತು ಮಾತನಾಡುತ್ತಿದ್ದರೂ ಮುಖದಲ್ಲಿ, ಕಣ್ಣುಗಳಲ್ಲಿ, ಹುಬ್ಬುಗಳಲ್ಲಿ ಏನಾದರೂ ವಕ್ರತೆ ವ್ಯಕ್ತವಾಯಿತೇ? ಒಂದಿನಿತೂ ಮುಖದಲ್ಲಿ ವಿಕಾರವಿಲ್ಲದೆ ಹೇಗೆ ಮಾತನಾಡಿದ!

ಮಾತನಾಡುವಾಗ ತೀರ ನಿಧಾನವೂ ಇಲ್ಲ. ಸ್ಪಷ್ಟವಾಗಿ ಮಧ್ಯಮ ಸ್ವರದಲ್ಲಿ ಮಧುರವಾಗಿ ಕಿವಿಗಿಂಪಾಗುವಂತೆ ಮಾತ್ರವೇ ಅಲ್ಲದೆ ಹೃದಯವನ್ನೂ ಅರಳಿಸುವಂತಹ ಮಾತುಗಳನ್ನು ಆಡುತ್ತಾನೆ ನೋಡಿದೆಯಾ!

ಇವನಾಡುವ ಮಧುರವಾದ, ಹೃದಯವನ್ನು ಗೆಲ್ಲುವ ಮಾತುಗಳನ್ನು ಕೇಳುತ್ತಿದ್ದಂತೆ ಇವನನ್ನು ಕೊಲ್ಲಲು ಕತ್ತಿಯನ್ನು ಹಿರಿದು ಬರುವ ಶತ್ರುವೂ ಕತ್ತಿಯನ್ನು ಕೆಳಗೆ ಹಾಕಿ ಇವನಿಗೆ ಶರಣಾಗುತ್ತಾನೆ. ಹೆಚ್ಚೇಕೆ! ಲಕ್ಷ್ಮಣಾ, ಇಂಥ ಧೀಮಂತನನ್ನು, ವಿದ್ವಾಂಸನನ್ನು, ಬುದ್ಧಿಶಾಲಿಯನ್ನು ದೂತನನ್ನಾಗಿ ಯಾರು ಪಡೆದಿರುವರೋ ನಿಸ್ಸಂಶಯವಾಗಿ ಅವರ ಕಾರ್ಯ ಯಶಸ್ವಿಯಾಗಿಯೇ ತೀರುತ್ತದೆ. ಇಂಥ ಉತ್ತಮನನ್ನು ದೂತನನ್ನಾಗಿ ಪಡೆಯುವವನೇ ಧನ್ಯ!

ಸೌಮಿತ್ರಿ, ಇವನೊಂದಿಗೆ ನೀನು ಮಧುರವಾದ ಸ್ನೇಹಯುಕ್ತವಾದ ಮಾತುಗಳನ್ನು ಆಡು ಎಂದು ರಾಮ ಹನುಮಂತನನ್ನು ಮನಸಾರೆ ಹೊಗಳಿದ.

ರಾಮ, ತಾನೇ ನೇರವಾಗಿ ಹನುಮಂತನೊಡನೆ ಮಾತನಾಡದೆ ಲಕ್ಷ್ಮಣನನ್ನು ಮಾತನಾಡುವಂತೆ ಪ್ರೇರಿಸಿದ ಏಕೆ?" ಎಂಬ ಪ್ರಶ್ನೆ ಏಳುತ್ತದೆ.

ಇದಕ್ಕೆ ಜ್ಞಾನಿಗಳಾದ ಆಚಾರ್ಯರು ಸಮಾಧಾನ ಹೇಳಿದಾರೆ. ಹನುಮಂತ ಸುಗ್ರೀವನ ಮಂತ್ರಿ. ರಾಜಶಾಸ್ತ್ರದಂತೆ ಹನುಮಂತನೊಂದಿಗೆ ತನಗೆ ಮಂತ್ರಿಯಾಗಿರುವ ಲಕ್ಷ್ಮಣನನ್ನು ಮಾತನಾಡುವಂತೆ ಹೇಳಿದ ಮೊದಲಬಾರಿಗೆ.

ಅಲ್ಲದೆ, ವಿದ್ವಜ್ಜನರ ನಡುವಿನ ಮಾತುಕಥೆ ಕೇಳುವುದಕ್ಕೆ ಚೆನ್ನು. ಇಲ್ಲಿ ಹನುಮಂತ ಸಕಲ ವೇದಶಾಸ್ತ್ರಗಳನ್ನು ಬಲ್ಲವನಾಗಿದಾನೆ. ವ್ಯಾಕರಣದ ರಹಸ್ಯವನ್ನೆಲ್ಲ ಅರಿತಿದಾನೆ. ಹಾಗೆಯೇ ಲಕ್ಷ್ಮಣನೂ ಆದಿಶೇಷನ ಅಂಶ ಎನಿಸಿದವ. ಆದಿಶೇಷನೇ ವ್ಯಾಕರಣಶಾಸ್ತ್ರಕ್ಕೆ ಮೂಲ.

ಹೀಗೆ, ಇಬ್ಬರೂ ವಿದ್ವಾಂಸರೂ, ವ್ಯಾಕರಣವಿದರು. ಇವರು ಮಾತನಾಡುವುದನ್ನು ಕೇಳುವುದೇ ಸೊಗಸು. ಆದ್ದರಿಂದ ರಾಮ ಲಕ್ಷ್ಮಣನನ್ನ ಮಾತನಾಡುವಂತೆ ಹೇಳಿದ.

ರಾಮ ಹೇಳಿದಂತೆಯೇ ಲಕ್ಷ್ಮಣ ಹನುಮಂತನನ್ನು ಕುರಿತು "ವಿದ್ವಾಂಸ ಶ್ರೇಷ್ಠನೇ! ನೀನು ಸುಗ್ರೀವನ ಸಚಿವ ಎಂಬುದನ್ನು ತಿಳಿದು ನಮಗೆ ಸಂತೋಷವಾಯಿತು. ಸುಗ್ರೀವನ ಬಗ್ಗೆ ನಾವೂ ಕೇಳಿದ್ದೇವೆ. ಆ ಮಂಗಳಕರನಾದ ಸುಗ್ರೀವನನ್ನು ಹುಡುಕಿಕೊಂಡೇ ನಾವೂ ಇಲ್ಲಿಗೆ ಬಂದೆವು" ಎಂದ.

ಲಕ್ಷ್ಮಣನ ಮಧುರವಾದ ಮಾತುಗಳನ್ನು ಕೇಳಿದ ಹನುಮಂತ ಬಹಳ ಸಂತೋಷಪಟ್ಟ. ರಾಮ, ಲಕ್ಷ್ಮಣನೊಡನೆ ಆಡಿದ ಮಾತುಗಳಿಂದಲೂ, ಲಕ್ಷ್ಮಣ ಸುಗ್ರೀವನ ವಿಚಾರವಾಗಿ ತನ್ನೊಡನೆ ಹೇಳಿದ ಮಾತುಗಳಿಂದಲೂ ಹನುಮಂತ ತೃಪ್ತನಾದ. "ಸುಗ್ರೀವ ಇನ್ನು ಗೆದ್ದ" ಎಂದು

ಕೊಂಡ ಮನಸ್ಸಿನಲ್ಲಿ. ಹರ್ಷದಿಂದ ಹನುಮಂತ ಲಕ್ಷ್ಮಣನನ್ನು "ವೀರರಾದ ನೀವು ದುರ್ಗಮ ವಾದ ಘೋರವಾದ ಅರಣ್ಯಕ್ಕೆ ಬರಲು ಕಾರಣವೇನು ? ನೀವು ಯಾರು ?'' ಎಂದು ಪ್ರಶ್ನಿಸಿದ. ರಾಮನ ಅನುಜ್ಞೆಯಂತೆ ಲಕ್ಷ್ಮಣ "ನಾವು ಇಕ್ಷ್ವಾಕುವಂಶದ ರಾಜಕುಮಾರರು. ಮಹಾಪ್ರತಾಪ ಶಾಲಿಯಾದ ದಶರಥನ ಮಕ್ಕಳು. ಇವನೇ ದಶರಥನ ಹಿರಿಯ ಮಗ. ರಾಮ ಇವನ ಹೆಸರು. ನನ್ನನ್ನು ರಾಮ "ತಮ್ಮ" ಎನ್ನುತ್ತಾನೆ. ಆದರೆ, ನಾನು ರಾಮನ ಗುಣಗಳಿಗೆ ದಾಸನಾಗಿದೇನೆ. ''**ಗುಣೈರ್ದಾಸ್ಯತ್ವಮಾಗತಃ**" ನಾನು ರಾಮನ ದಾಸ" ಎಂದ.

"ಬಂಧುತ್ವವನ್ನು ಅನುಲಕ್ಷಿಸುವಾಗ ನನ್ನನ್ನು ರಾಮನ ತಮ್ಮ ಎನ್ನುತ್ತಾರೆ. ಆದರೆ, ನಿಜವಾಗಿ, ನಾನು ರಾಮನಿಗೆ ದಾಸ. ಏಕೆ ರಾಮನಿಗೆ ದಾಸನಾದೆ ಗೊತ್ತೆ ? ರಾಮನ ಗುಣಗಳು ಅಂಥವು. ರಾಮನ ಸೌಶೀಲ್ಯ, ಸೌಲಭ್ಯಾದಿ ಗುಣಗಳಿಗೆ ಮನಸೋತು ನಾನು ದಾಸನಾದೆ, ರಾಮ ನಿಗೆ "ತಮ್ಮ'' ಎನಿಸಿಕೊಳ್ಳುವುದಕ್ಕಿಂತ ರಾಮನಿಗೆ "ದಾಸ" ಎನಿಸಿಕೊಳ್ಳುವುದರಲ್ಲಿ ನನಗೆ ಹೆಮ್ಮೆ. ಗುಣಗಣಿಯಾದ ರಾಮನಿಗೆ ''ದಾಸ'' ಎನ್ನುವುದಕ್ಕಿಂತ ಹಿರಿದಾದ, ಪದವಿ ಬೇರೊಂದಿಲ್ಲ'' ಎಂದ ಲಕ್ಷ್ಮಣ.

ಇಲ್ಲಿ ಪೆರಿಯವಾಚ್ಚಾನ್ ಪಿಳ್ಳೈ ವ್ಯಾಖ್ಯಾನ ಮಾಡುವಾಗ ಹೇಳುತ್ತಾರೆ. ಲಕ್ಷ್ಮಣ ರಾಮನ ''ತಮ್ಮ'' ರಾಮನ ''ದಾಸ''–ಎಂಬ ಎರಡು ವಿಶೇಷಣಗಳಿಂದ, ಎರಡು ಸಂಬಂಧ ಗಳಿಂದ ಒಪ್ಪುತ್ತಾನೆ. ಇದರಲ್ಲಿ ಯಾವುದು ಸರಿ? ಎನ್ನುವಾಗ ''ದೇವರಿರ್ ವಡಿಯಾಲ್ ತಂಬಿಯೆನ್ರಿರುಕ್ಕುವರ್ ಆನಾಲ್ ಎನ್ ಪಡಿಯಾಲ್ ದಾಸನೆನ್ರಿರುಕ್ಕುವರ್." ರಾಮನ ದೃಷ್ಟಿ ಯಿಂದ ನಾನು "ತಮ್ಮ" – ಆದರೆ ನನ್ನ ದೃಷ್ಟಿಯಿಂದ ನಾನು ರಾಮನಿಗೆ "ದಾಸ" ಎಂದಿದಾರೆ.

ಹೀಗೆ, ಹದಿನಾಲ್ಕು ವರ್ಷ ರಾಮನ ಸೇವೆ ಲಕ್ಷ್ಮಣ ಮಾಡುವುದಕ್ಕೆ ಅವನೇ ಕಾರಣ ಹೇಳಿದ. "ರಾಮನ ಗುಣಗಳಿಗೆ ಮಾರುಹೋಗಿ ಅವನಿಗೆ ದಾಸನಾದೆ" ಎಂದು.

ಮುಂದೆ ಲಕ್ಷ್ಮಣ ಹೇಳುತ್ತಾನೆ. "ವಿದ್ವ, ನಾವು ಕಾಡಿಗೆ ಏಕೆ ಬಂದೆವು? ಎಂದು ಕೇಳಿದೆ ಅಲ್ಲವೆ, ಅದಕ್ಕೆ ಕಾರಣ ಹೇಳುತ್ತೇನೆ ಕೇಳು. ರಾಜಾ ದಶರಥನ ಮಡದಿಯಾದ ನಮ್ಮ ಚಿಕ್ಕಮ್ಮ ಕೈಕೇಯಿ ಕೇಳಿದ ಇಷ್ಟವನ್ನು ಪೂರೈಸುವುದಕ್ಕಾಗಿ, ತಂದೆಯ ಅಪ್ಪಣೆಯಂತೆ ನಾವು ವನವಾಸ ಮಾಡಲು ಬಂದೆವು ವನದಲ್ಲಿ ಹದಿಮೂರು ವರ್ಷಗಳು ಕಳೆದವು. ಒಂದು ದಿನ ದುಷ್ಟನಾದ "ರಾವಣ" ಎಂಬ ರಾಕ್ಷಸ ಆಶ್ರಮದಲ್ಲಿ ನಾವಿಬ್ಬರೂ ಇಲ್ಲದ ಸಮಯವನ್ನು ನೋಡಿ ರಾಮನ ಪತ್ನಿಯಾದ ಸೀತೆಯನ್ನು ಕದ್ದುಕೊಂಡು ಹೋದ. ಆ ಸೀತೆಯನ್ನು ಹುಡುಕುತ್ತಾ ನಾವು ಬರು ತ್ತಿದ್ದೆವು ಆಗ, ಮಾರ್ಗಮಧ್ಯದಲ್ಲಿ ದಿತಿಯ ಪುತ್ರನಾದ "ದನು" ಎಂಬ ರಾಕ್ಷಸ ತನ್ನ ಶಾಪ ವಿಮೋಚನೆ ಆದಮೇಲೆ ಸುಗ್ರೀವನ ಸಖ್ಯ ಮಾಡಿಕೊಳ್ಳುವಂತೆ ಹೇಳಿದ. ಸುಗ್ರೀವನೊಂದಿಗೆ ಸ್ನೇಹ ಮಾಡಿಕೊಂಡರೆ ಸುಗ್ರೀವ ಸೀತೆಯನ್ನು ಹುಡುಕಿಕೊಡುವುದಾಗಿ ಹೇಳಿದ. ಅದರಂತೆ ನಾವು ಸುಗ್ರೀವನನ್ನು ಹುಡುಕುತ್ತಾ ಇಲ್ಲಿಗೆ ಬಂದೆವು. ನಿನ್ನಿಂದ ಸುಗ್ರೀವನ ಬಗ್ಗೆ ಕೇಳಿದೆವು. ಈಗ ನನ್ನ ಅಣ್ಣ ರಾಮ ಆ ಮಹಾತ್ಮನಾದ ಸುಗ್ರೀವನೊಡನೆ ಮಿತ್ರತ್ವವನ್ನು ಇಚ್ಛಿಸುತ್ತಾನೆ. ಯಾವ ರಾಮ ಶರಣಾಗತವತ್ಸಲ ಎನಿಸಿರುವನೋ ಅಂಥ ರಾಮ ಸುಗ್ರೀವನನ್ನು ಶರಣು ಹೋಗುತ್ತಾನೆ.

ಯಾವ ರಾಮ ಎಲ್ಲ ಸಾಧುಗಳಿಗೂ ಅಭಯವನ್ನಿತ್ತನೋ ಅಂಥ ರಾಮ ಈಗ ಸುಗ್ರೀವನ ಅಭಯವನ್ನು ಅಪೇಕ್ಷಿಸುತ್ತಾನೆ. ಯಾವ ರಾಮ ಸರ್ವಲೋಕದವರಿಗೂ ಶರಣ್ಯ ಎನಿಸಿ ಮೆರೆಯು

ವನೋ ಅಂಥ ರಾಮ ಸುಗ್ರೀವನನ್ನು ಶರಣು ಹೋಗುತ್ತಿದ್ದಾನೆ ಈಗ" ಎಂದು ಹೇಳಿದ ಲಕ್ಷ್ಮಣ.

ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ದೀನನಾಗಿ ಲಕ್ಷ್ಮಣ ಹೇಳಿದ ಮಾತುಗಳನ್ನು ಕೇಳಿದ ಹನುಮಂತ.

ವಾಕ್ಚತುರನಾದ ಆ ಮಹಾನುಭಾವ ಹನುಮಂತ, "ಹಾಗಾದರೆ ಬಹಳ ಸಂತೋಷ. ನನ್ನ ಸ್ವಾಮಿಯಾದ ಸುಗ್ರೀವನನ್ನು ಅವನ ಅಣ್ಣನಾದ ವಾಲಿ ಹೊರದೂಡಿದ್ದಾನೆ. ಅವನ ಹೆಂಡತಿಯನ್ನೂ ವಾಲಿ ಅಪಹರಿಸಿದ್ದಾನೆ. ಅವನೂ ದುಃಖಿತನಾಗಿ ನಿಮ್ಮಿಂದ ಸಹಾಯವನ್ನು ಬಯಸುತ್ತಿದ್ದಾನೆ. ಇನ್ನು ತಡವೇಕೆ, ಸುಗ್ರೀವ ಇರುವಲ್ಲಿಗೇ ನಾವು ಹೋಗೋಣ" ಎಂದ

ಅದುವರೆಗೆ ಧರಿಸಿದ್ದ ಭಿಕ್ಷುರೂಪವನ್ನು ತ್ಯಜಿಸಿ ವಾನರ ರೂಪವನ್ನು ಹೊಂದಿದ. ರಾಮನತ್ತ ತಿರುಗಿ "ಹೊರಡೋಣವೇ ಪ್ರಭು" ಎಂದ. ರಾಮ ಅನುಮತಿಸಿದ

"ಇದುವರೆಗೆ ನೀವು ನಡೆದದ್ದು ಸಾಕು. ಇನ್ನು ನಿಮ್ಮ ಕೋಮಲವಾದ ಪಾದಗಳನ್ನು ನನ್ನ ಭುಜದ ಮೇಲೆ ಇಡುವ ಅನುಗ್ರಹಮಾಡಿ, ನಾನು ಧನ್ಯನಾಗುತ್ತೇನೆ" ಎಂದು ಹೇಳಿ, ರಾಮ-ಲಕ್ಷ್ಮಣರನ್ನು ತನ್ನ ಹೆಗಲಿನ ಮೇಲೆ ಕೂಡಿಸಿಕೊಂಡು ಸುಗ್ರೀವನ ಬಳಿಗೆ ಬಂದ.

## ಸುಗ್ರೀವನ ಸಖ್ಯ

ಹನುಮಂತ ರಾಮಲಕ್ಷ್ಮಣರನ್ನು ಕರೆತರುತ್ತಿದ್ದುದನ್ನು ದೂರದಿಂದಲೇ ಕಂಡ, ಬಹಳ ಸಂತೋಷಪಟ್ಟ ಸುಗ್ರೀವ. ರಾಮಲಕ್ಷ್ಮಣರು ಸುಂದರ ರೂಪಿಗಳು. ಅವರು ಬಂದಾಗ, ಅವರ ಮುಂದೆ ಈ ಕಪಿರೂಪದಿಂದ ಇರುವುದು ಚೆನ್ನಲ್ಲ ಎಂದುಕೊಂಡು ಕಾಮರೂಪಿಯಾದ ಸುಗ್ರೀವ ಪ್ರಿಯವಾದ ರೂಪವನ್ನು ಹೊಂದಿದ. ರಾಮಲಕ್ಷ್ಮಣರನ್ನು ಸುಗ್ರೀವನ ಮುಂದೆ ಇಳಿಸಿ ಹನುಮಂತ ಸುಗ್ರೀವನಿಗೆ ಪರಿಚಯ ಮಾಡಿಕೊಟ್ಟ.

ಇಲ್ಲಿ ಆಂಜನೇಯ ಆಚಾರ್ಯಸ್ಥಾನದಲ್ಲಿದ್ದಾನೆ. ಸುಗ್ರೀವ ಕಷ್ಟಕ್ಕೆ ಸಿಲುಕಿರುವ ಜೀವ. ರಾಮಲಕ್ಷ್ಮಣರು ದೈವದ ಪ್ರತೀಕ. ದೈವದ ಒಲುಮೆ, ದೈವಾನುಗ್ರಹ, ದೈವದ ಸಾಕ್ಷಾತ್ಕಾರ ಜೀವನಿಗೆ ಆಚಾರ್ಯನ ಮೂಲಕವೇ ಸಾಧ್ಯ ಎಂಬುದನ್ನು ನಿರೂಪಿಸುತ್ತದೆ ಸುಗ್ರೀವನ ಸಖ್ಯ. ಆಚಾರ್ಯಸ್ಥಾನದಲ್ಲಿದ್ದು ಹನುಮಂತ ಸುಗ್ರೀವನಿಗೂ ರಾಮನಿಗೂ ಅಂದರೆ ಜೀವಾತ್ಮನಿಗೂ ಪರಮಾತ್ಮನಿಗೂ ಸಖ್ಯ ಮಾಡಿಸುತ್ತಾನೆ. ಸಖ್ಯ ಆದಮೇಲೆ ಸುಗ್ರೀವನಿಗೆ ಮಂಗಳ ಆದಂತೆ ಜೀವಾತ್ಮನಿಗೂ ದೈವಾನುಗ್ರಹದಿಂದ ಮಂಗಳವುಂಟಾಗುತ್ತದೆ ಎಂಬುದು ಅಭಿಪ್ರಾಯ.

ಇನ್ನೊಂದು ಅಂಶ ಇಲ್ಲಿ ತಿಳಿಯಬೇಕಾದುದಿದೆ.

ಸುಗ್ರೀವ ರಾಜ್ಯ, ಕೋಶ, ಪತ್ನಿ. ಐಶ್ವರ್ಯ, ಭೋಗಭಾಗ್ಯ ಎಲ್ಲ ಕಳೆದುಕೊಂಡವ. ಆದರೆ ಹನುಮಂತ ಅವನ ಹತ್ತಿರ ಇದ್ದ.

ವಾಲಿ ರಾಜ್ಯ, ಕೋಶ, ಪತ್ನಿ, ಭೋಗಭಾಗ್ಯ, ಬಲ, ಪೌರುಷ, ವೀರ್ಯ, ಪರಾಕ್ರಮ, ತೇಜಸ್ಸು ಎಲ್ಲದರಿಂದ ಕೂಡಿದ್ದ.

ಆದರೆ ಹನುಮಂತ ಅವನ ಹತ್ತಿರ ಇರಲಿಲ್ಲ.

ಅಂದರೆ ಸುಗ್ರೀವ ಆಚಾರ್ಯನ ಅನುಗ್ರಹಕ್ಕೆ ಪಾತ್ರನಾಗಿದ್ದ. ವಾಲಿ ಆಚಾರ್ಯರಹಿತನಾಗಿದ್ದ.

ಆದ್ದರಿಂದ ಎಲ್ಲವನ್ನೂ ಕಳೆದುಕೊಂಡಿದ್ದರೂ ಆಚಾರ್ಯನ ಅನುಗ್ರಹದಿಂದ ದೈವಾನುಗ್ರಹ ಸುಗ್ರೀವನ ಬಳಿಗೇ ರಾಮರೂಪದಲ್ಲಿ ಬಂದಿತು. ಆಚಾರ್ಯನ ಮಹಿಮೆಯೇ ಅಂಥದು.

ಹನುಮಂತ ಸುಗ್ರೀವನಿಗೆ ರಾಮಲಕ್ಷ್ಮಣರ ವಿಷಯ ತಿಳಿಸಿದ. "ಇವರು ಮಹಾರಾಜ ದಶರಥನ ಪುತ್ರರು. ಮಹಾಬಲಿಷ್ಠರು, ಪರಾಕ್ರಮಶಾಲಿಗಳು. ರಾಮ-ಲಕ್ಷ್ಮಣರು ಎಂದು ಹೆಸರು ಇವರಿಗೆ. ದೇವತುಲ್ಯಪರಾಕ್ರಮಿಗಳಾದ ಇವರು ನಿನ್ನ ಭಾಗ್ಯದಿಂದ ಇಲ್ಲಿಯವರೆಗೆ ದಯಮಾಡಿಸಿದ್ದಾರೆ. ಇವರನ್ನು ಪೂಜಿಸು, ಆದರಿಸು, ಗೌರವಿಸು" ಎಂದ. ಹನುಮಂತನ ಮಾತನ್ನು ಕೇಳಿದ ಸುಗ್ರೀವ ಸಂತೋಷದಿಂದ "ರಾಜಪುತ್ರರೇ ನಿಮಗೆ ಸುಸ್ವಾಗತ. ನೀವು ನನ್ನೊಡನೆ ಮೈತ್ರಿಯಿಂದ ಇರಲು ಇಚ್ಛಿಸುತ್ತೀರಿ ಎಂದು ಅರಿತೆ. ಇದರಿಂದ ನನಗೆ ಬಹಳ ಸಂತೋಷ ಆಗುತ್ತಿದೆ. ನಾವಿಬ್ಬರೂ ಮಿತ್ರರಾಗಿರೋಣ. ಆದರೆ ನಾನು ವಾನರ ಜಾತಿಗೆ ಸೇರಿದವ. ನೀವೋ ನರಶ್ರೇಷ್ಠರು. ನಿಮಗೆ ನನ್ನೊಡನೆ ಸಖ್ಯ ಮಾಡಿಕೊಳ್ಳಬೇಕು ಎನಿಸಿದರೆ, ನನ್ನ ಸ್ನೇಹ ನಿಮಗೆ ಹಿಡಿಸುವುದಾದರೆ ನಿನ್ನ ಕೈಯನ್ನು ನೀಡು. ನಾವು ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಮಿತ್ರರಾಗೋಣ. ಮರ್ಯಾದೆಯಿಂದ ಇರೋಣ" ಎಂದ.

"ಸುಗ್ರೀವ ಸಖ್ಯ" ಪ್ರಸಂಗದಲ್ಲಿ ಸುಗ್ರೀವ ರಾಮನನ್ನು ಕುರಿತು

**ರೋಚತೇ ಯದಿ ಮೇ ಸಖ್ಯಂ ಬಾಹುರೇಷಃ ಪ್ರಸಾರಿತಃ ।**
**ಗೃಹ್ಯತಾಂ ಪಾಣಿನಾಪಾಣಿಃ ಮರ್ಯಾದಾ ಬಧ್ಯತಾಂ ಧ್ರುವಾ ॥**

ಎಂದಿದ್ದಾನೆ.

"ರಾಮ, ನಿನ್ನೊಡನೆ ಸಖ್ಯ ಮಾಡಲು ನನಗೆ ಯೋಗ್ಯತೆ ಇಲ್ಲ ನಾನು ಒಪ್ಪಲಾರೆ. ನಿನಗೆ ಇಷ್ಟವಾದರೆ ಇಗೋ ಈ ಕೈಯನ್ನು ನೀಡುವೆನು. ಆದರೆ ನಮ್ಮಿಬ್ಬರಲ್ಲಿ ಮರ್ಯಾದೆ ಉಳಿಯಬೇಕು' ಎಂದನು.

ಇಲ್ಲಿ ಶ್ರೀ ಭಗವದ್ರಾಮಾನುಜರು ವ್ಯಾಖ್ಯಾನ ಮಾಡಿದಾರೆ.

"ಮರ್ಯಾದೆ'' ಎಂದರೆ ಗೌರವ ಎಂದರ್ಥ ಅಲ್ಲ; "ಸ್ವಾಮಿತ್ವ, ದಾಸತ್ವ"ವೇ ಮರ್ಯಾದೆ "ರಾಮ ಸ್ವಾಮಿ; ಸುಗ್ರೀವದಾಸ'' ಸುಗ್ರೀವನ ಸಖ್ಯದಿಂದ ಲಾಭ ಸುಗ್ರೀವನಿಗೆ. ರಾಮನಿಗೆ ಸುಗ್ರೀವನಿಂದ ಆಗಬೇಕಾದುದು ಏನೂ ಇಲ್ಲ. ಇದನ್ನು ರಾಮನೇ ಮುಂದೆ ವಿಭೀಷಣ ಶರಣಾಗತಿಯ ಪ್ರಕರಣದಲ್ಲಿ ಹೇಳುತ್ತಾನೆ. "ಈ ಸಮಸ್ತ ಪ್ರಪಂಚದಲ್ಲಿರುವ ಪಿಶಾಚರು, ಯಕ್ಷರು, ರಾಕ್ಷಸರು, ದೇವತೆಗಳು ಎಲ್ಲರೂ ಒಟ್ಟಾಗಿ ಬಂದು ನನ್ನ ಮೇಲೆ ಬೀಳುವುದಾದರೂ ಆಗಲೂ ನಾನು ಯಾರ ಸಹಾಯವನ್ನೂ ಇಚ್ಛಿಸದೆ, ಏಕಾಕಿಯಾಗಿ, ನನ್ನ ಕಿರುಬೆರಳಿನ ಉಗುರಿನ ಕೊನೆಯಿಂದ ಚಿವುಟಿ ಹಾಕಬಲ್ಲೆ.

**ಅಂಗುಳ್ಯಗ್ರೇಣತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ ।**

ಎಂದು ಸುಗ್ರೀವನಿಗೆ ಹೇಳುತ್ತಾನೆ. ಆದ್ದರಿಂದಲೇ "ಮರ್ಯಾದೆ" ಎಂದರೆ ನಿನ್ನ ಸ್ವಾಮಿತ್ವವೂ ನನ್ನ ದಾಸತ್ವವೂ ಉಳಿಯಬೇಕು. ಅಂಥ ಸಖ್ಯವಾಗಲಿ ಎಂದ.

ಧನಿಕರಾದ ದಂಪತಿಗಳಿದ್ದರು. ಸತಿಗೆ ಪತಿಯೆಂದರೆ ಪರಮಭಕ್ತಿ. ಪತಿಗೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಂಡಿದ್ದಳು, ಇವಳನ್ನು ಹೇಗಾದರೂ ನಾನು ತೃಪ್ತಿಪಡಿಸಬೇಕೆಂದು

ತೋರಿತು ಪತಿಗೆ. ಮಡದಿಯನ್ನು ಕೇಳಿ "ನೋಡು ನಿನ್ನನ್ನು ತೃಪ್ತಿಪಡಿಸುವ ಹಂಬಲವಿದೆ. ನೀನೂ ನಾನೂ ನಮ್ಮ ಪತಿ-ಪತ್ನಿತ್ವವನ್ನು ವ್ಯತ್ಯಾಸಮಾಡಿಕೊಂಡು ಉದ್ಯಾನದಲ್ಲಿ ವಿಹರಿಸಬೇಕು. ಅದನ್ನು ಒಪ್ಪು" ಎಂದ. ಆಗಲಿ ಎಂದಳು ಸತಿ. ಸರಿ. ರೂಪ ವ್ಯತ್ಯಾಸ ಮಾಡಿಕೊಂಡರು, ವಿಹರಿಸಿದರು, ಮನೆಗೆ ಹಿಂತಿರುಗಿದರು. ಗಂಡ ಹೇಳಿದ "ನೀ ಊಟಕ್ಕೆ ಕೂಡು ನಾನು ಬಡಿಸುತ್ತೇನೆ" ಎಂದು. ಅದಕ್ಕೆ ಅವಳು ಒಪ್ಪಲಿಲ್ಲ. ಹೇಳಿದಳು "ಸ್ವಾಮಿ, ವೇಷವೇನೋ ವ್ಯತ್ಯಾಸವಾಗಿದೆ. ಆದರೆ ವಾಸ್ತವವಾಗಿ ತಾವು ಪತಿ. ಮರ್ಯಾದಾ ಖಧ್ಯತಾಧ್ರುವಾ" ಎಂದಳು.

ಸುಗ್ರೀವನ ಮಾತನ್ನು ಕೇಳಿ ಮುಗುಳ್ನಗೆಯಿಂದ ರಾಮ ಬಲಗೈಯನ್ನು ನೀಡಿದ. ನೀಡಿದ ಕೈಯನ್ನು ಸುಗ್ರೀವ ಹಿಡಿದುಕೊಂಡ, ಬಿಗಿಯಾಗಿ. ಆ ಸಮಯದಲ್ಲಿ ಅಲ್ಲಿದ್ದ ಹನುಮಂತ ಒಣಗಿದ ಕಾಷ್ಠವನ್ನು ತಂದು ಬೆಂಕಿಯನ್ನು ಹೊತ್ತಿಸಿದ. ಅಗ್ನಿ ಜ್ವಾಲೆ ಜ್ವಲಿಸತೊಡಗಿತು. ಆಗ, ರಾಮ ಸುಗ್ರೀವರು ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಅಗ್ನಿಯನ್ನು ಪ್ರದಕ್ಷಿಣೆ ಮಾಡಿದರು. ಹೂವುಗಳಿಂದ ವಿಧಿವತ್ತಾಗಿ ಅಗ್ನಿಯನ್ನು ಅರ್ಚಿಸಿದರು. ಅಗ್ನಿಸಾಕ್ಷಿಯಾಗಿ ಕೈಹಿಡಿದ ಅವರು ಪ್ರಮಾಣ ಮಾಡಿದರು "ನಾವಿಬ್ಬರೂ ಪರಸ್ಪರ ಸ್ನೇಹಿತರು" ಎಂದು.

ಸುಗ್ರೀವ "ನಿನ್ನ ಸುಖವೇ ನನ್ನ ಸುಖ. ನಿನ್ನ ದುಃಖವೇ ನನ್ನ ದುಃಖ" ಎಂದ.

ರಾಮ, "ಇಬ್ಬರೂ ಸುಖ ದುಃಖಗಳಲ್ಲಿ ಸಮಭಾಗಿಗಳಾಗಿರೋಣ" ಎಂದ.

ಹೀಗೆ ಪರಸ್ಪರ ಅಗ್ನಿಸಾಕ್ಷಿಯಾಗಿ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಸಖ್ಯ ಮಾಡಿಕೊಂಡರು, ರಾಮ-ಸುಗ್ರೀವರು. ನಂತರ ಇಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ಒಬ್ಬರ ಕೈಯನ್ನು ಒಬ್ಬರು ಮೃದುವಾಗಿ ಹಿಸುಕಿದರು, ಸುಗ್ರೀವ-ರಾಮರ ಈ ಪ್ರಣಯ ಪ್ರಸಂಗದ ಸಮಯಕ್ಕೆ ಸರಿಯಾಗಿ ಮೂವರಿಗೆ ಎಡಗಣ್ಣು ಅದುರಿತು. ಹೆಂಗಸರಿಗೆ ಎಡಗಣ್ಣು ಅದುರಿದರೆ ಶುಭ. ಗಂಡಸರಿಗೆ ಅಶುಭ.

ಸೀತೆಗೆ ಮುಂದೆ ಒಳ್ಳೆಯದಾಗುವುದು ಎಂಬುದನ್ನು ಸೂಚಿಸುತ್ತ, ರಾವಣ ವಾಲಿಯರಿಗೆ ಕೆಡಕಾಗುತ್ತದೆ ಎಂಬುದನ್ನು ಸೂಚಿಸುತ್ತ ಆ ಮೂವರ ಎಡಗಣ್ಣೂ ಸುಗ್ರೀವ-ರಾಮರು ಸಖ್ಯ ಮಾಡಿಕೊಂಡ ಕಾಲಕ್ಕೆ ಸರಿಯಾಗಿ ಅದುರಿತು.

ಸಖ್ಯ ಮಾಡಿಕೊಂಡ ಮೇಲೆ ಸುಗ್ರೀವ ರಾಮನಿಗೆ ಪುಷ್ಪಿತವಾದ ಸಾಲವೃಕ್ಷದ ಶಾಖೆಯನ್ನು ಆಸನವನ್ನಾಗಿ ಹಾಕಿದ. ರಾಮನೊಡನೆ ತಾನೂ ಕುಳಿತ.

ಸುಗ್ರೀವ ರಾಮನಿಗೆ ಸಾಲವೃಕ್ಷದ ಶಾಖೆಯನ್ನು ಆಸನವಾಗಿ ಹಾಕಿದ್ದನ್ನು ಗಮನಿಸಿದ ಹನುಮಂತ ತತ್‌ಕ್ಷಣ ಸ್ವಾಮಿಯ ಹಿತವನ್ನು ಬಯಸಿದ ಅವನು ಚಂದನ ವೃಕ್ಷದ ಶಾಖೆಯನ್ನು ತಂದು ಲಕ್ಷ್ಮಣನಿಗೆ ಕುಳಿತುಕೊಳ್ಳುವಂತೆ ಹೇಳಿದ ಸುಗ್ರೀವ ರಾಮನಿಗೆ ಮಾತ್ರ ಆಸನವನ್ನು ಹಾಕಿದ. ತಾನು ರಾಜ. ರಾಮನೂ ರಾಜ, ಇಬ್ಬರೂ ಸರಿಸಮಾನರು ಎಂದುಕೊಂಡು ಲಕ್ಷ್ಮಣನನ್ನು ಮರೆತೇಬಿಟ್ಟ. ಇದನ್ನು ಗಮನಿಸಿದ ಬುದ್ಧಿವಂತರಲ್ಲಿ ಶ್ರೇಷ್ಠನೆನಿಸಿದ ಆಂಜನೇಯ ಭಾಗವತಾಪಚಾರ ಎಲ್ಲ ಐಶ್ವರ್ಯವನ್ನೂ ನಾಶಮಾಡುತ್ತದೆ. ಸುಗ್ರೀವ ಚೆನ್ನಾಗಿರಬೇಕು ಎಂದುಕೊಂಡು ತಾನೇ ಹೋಗಿ ಚಂದನ ವೃಕ್ಷದ ಶಾಖೆಯನ್ನು ತಂದು ಲಕ್ಷ್ಮಣನಿಗೆ ಹಾಕಿದ. ಆದ್ದರಿಂದಲೇ ರಾಮ ಹೇಳಿದ್ದು "ಇಂಥವನನ್ನು ದೂತನನ್ನಾಗಿ ಪಡೆದವನ ಕಾರ್ಯ ಸಿದ್ಧಿಯಾಗದೇ ಇರುದ ಎಂದು.

ರಾಮನ ಪಕ್ಕದಲ್ಲಿ ಕುಳಿತ ಸುಗ್ರೀವ, ರಾಮನನ್ನೇ ನೋಡುತ್ತ ತನ್ನ ದುಃಖವನ್ನು ತೋಡಿ ಕೊಂಡ ವಾಲಿ ತನ್ನನ್ನು ಓಡಿಸಿದುದು, ತನ್ನ ಹೆಂಡತಿಯನ್ನು ಅಪಹರಿಸಿದುದು ಎಲ್ಲವನ್ನೂ ಹೇಳಿಕೊಂಡ. "ರಾಮಾ, ನಿನ್ನ ದಯೆಯಿಂದ ನನಗೆ ರಾಜ್ಯವೂ, ಕಳೆದುಕೊಂಡ ಪತ್ನಿಯೂ ಸಿಗು ವಂತೆ ಆಗಬೇಕು" ಎಂದ.

ಆಗ ರಾಮ ನಸುನಗುತ್ತಾ, "ಸುಗ್ರೀವ, ಮಿತ್ರರೆಂದ ಮೇಲೆ ಒಬ್ಬರಿಗೊಬ್ಬರು ಉಪಕಾರ ಮಾಡಲೇಬೇಕು. ಕಷ್ಟದಲ್ಲಿ ಸಹಾಯ ಮಾಡುವವನೇ, ನಿಜವಾದ ಮಿತ್ರ. ಉಪಕಾರ ಮಾಡು ವುದು ಮಿತ್ರನಾದವನ ಕರ್ತವ್ಯ. ಅದರಂತೆ ನಾನು ವಾಲಿಯನ್ನು ಕೊಂದು ನಿನ್ನ ರಾಜ್ಯವನ್ನೂ, ಕಳೆದುಕೊಂಡ ನಿನ್ನ ಪತ್ನಿಯನ್ನೂ ಮರಳಿ ಲಭಿಸುವಂತೆ ಮಾಡುತ್ತೇನೆ. ನೋಡು, ನನ್ನ ಬತ್ತಳಿಕೆ ಯಲ್ಲಿ ಸೂರ್ಯನಂತೆ ತೇಜಸ್ಸುಳ್ಳ ಬಾಣಗಳ ಸಮೂಹವೇ ಇದೆ. ಅದರಲ್ಲಿ ಒಂದೇ ಬಾಣ ಸಾಕು, ವಾಲಿಯನ್ನು ಕೊಲ್ಲಲು" ಎಂದು ಆಶ್ವಾಸನೆ ಕೊಟ್ಟ ರಾಮ, ಸುಗ್ರೀವನಿಗೆ.

ರಾಮನ ಮಾತುಗಳನ್ನು ಕೇಳಿ ಸುಗ್ರೀವನಿಗೆ ಸಂತೋಷವಾಯಿತು. "ರಾಮಾ, ನಾನು ನಿನ್ನ ಪತ್ನಿಯಾದ ಸೀತೆಯನ್ನು ಎಲ್ಲಿದ್ದರೂ ಹುಡುಕಿಕೊಡುತ್ತೇನೆ. ಅವಳು ರಸಾತಲದಲ್ಲಿರಲಿ, ಪಾತಾಳದಲ್ಲಿರಲಿ. ಎಲ್ಲೇ ಇರಲಿ ಖಂಡಿತವಾಗಿ ಹುಡುಕಿಕೊಡುತ್ತೇನೆ ಇದರಲ್ಲಿ. ಸಂಶಯವಿಲ್ಲ ಹನುಮಂತ ನಿನ್ನ ಬಗೆಗೆ ಎಲ್ಲವನ್ನೂ ಹೇಳಿದ. ಯಾರೋ ರಾಕ್ಷಸ ನಿನ್ನ ಪತ್ನಿಯನ್ನು ಅಪಹರಿಸಿ ಕೊಂಡು ಹೋದನಂತೆ. ಹ್ಞಾ! ನನಗೆ ಈಗ ಜ್ಞಾಪಕಕ್ಕೆ ಬರುತ್ತಿದೆ. ಕೆಲವು ತಿಂಗಳುಗಳ ಹಿಂದೆ ಯಾರೋ ದುಷ್ಟ ಕರ್ಮಿಯಾದ ರಾಕ್ಷಸ ಒಬ್ಬ ಹೆಣ್ಣು ಮಗಳನ್ನು ಹೊತ್ತುಕೊಂಡು ಹೋಗುತ್ತಿದ್ದ ಆ ಹೆಣ್ಣು ನಾಗಕನ್ನಿಕೆಯಂತೆ ಅವನ ಹಿಡಿತದಲ್ಲಿ ಸಿಕ್ಕಿ ಒದ್ದಾಡುತ್ತಿದ್ದಳು. ಹಾ ರಾಮಾ, ಲಕ್ಷ್ಮಣಾ ಎಂದು ಕೂಗುತ್ತಿದ್ದಳು. ಈಗ ನೋಡಿದರೆ ಅವಳೇ ಸೀತೆ ಇರಬೇಕು ಎನಿಸುತ್ತದೆ. ಅವನೇ ರಾವಣ ಇರಬೇಕು. ನಮ್ಮನ್ನು ನೋಡಿದ ಅವಳು ತನ್ನ ಉತ್ತರೀಯದಲ್ಲಿ ತನ್ನ ಕೆಲವು ಆಭರಣಗಳನ್ನು ಕಟ್ಟಿ ನಮ್ಮ ಕಡೆಗೆ ಹಾಕಿದಳು. ಅದನ್ನು ನಾನು ತೆಗೆದು ಗುಹೆಯಲ್ಲಿ ಭದ್ರವಾಗಿ ಇರಿಸಿದ್ದೇನೆ. ನೀನು ನೋಡು ಆ ಆಭರಣಗಳನ್ನು" ಎಂದ ಸುಗ್ರೀವ.

ಒಡನೆ ರಾಮ "ಸುಗ್ರೀವ, ಶೀಘ್ರವಾಗಿ ಆ ಆಭರಣಗಳನ್ನು ತೆಗೆದುಕೊಂಡು ಬಾ. ಏತಕ್ಕೆ ತಡಮಾಡುತ್ತೀಯೆ ? ಹೋಗು" ಎಂದ. ಸುಗ್ರೀವ ಗುಹೆಯಿಂದ ಆಭರಣಗಳನ್ನು ತಂದು ರಾಮನ ಮುಂದೆ ಇಟ್ಟ. ಗಂಟಿನಿಂದ ಒಂದೊಂದಾಗಿ ಆಭರಣಗಳನ್ನು ತೆಗೆದು ರಾಮ ನೋಡತೊಡಗಿದ ಕಣ್ಣಿನಲ್ಲಿ ನೀರು ತುಂಬಿತು. "ವೈದೇಹಿಯ ಆಭರಣಗಳೇ ಇವು !" ಎಂದು ದೀರ್ಘವಾದ ನಿಟ್ಟುಸಿರುಬಿಟ್ಟ. ಕಣ್ಣಿನಿಂದ ಒರುತ್ತಿದ್ದ ನೀರು ಆಭರಣಗಳನ್ನು ತೊಳೆಯಿತು. ಒಂದೊಂದಾಗಿ ಆಭರಣಗಳನ್ನು ತೆಗೆದು ಕಣ್ಣಿಗೆ ಒತ್ತಿಕೊಂಡ. ಎದೆಗೆ ಒತ್ತಿಕೊಂಡ. ಜಾನಕಿ, ವೈದೇಹಿ, ನೀನಿಲ್ಲದೆ ಈ ಆಭರಣಗಳನ್ನು ನೋಡುತ್ತಿದ್ದೇನಲ್ಲ" ಎಂದು ವಿಲಪಿಸಿದ.

ಒಂದೊಂದಾಗಿ ಆಭರಣಗಳನ್ನು ತೆಗೆದು ಲಕ್ಷ್ಮಣನಿಗೆ ತೋರಿಸುತ್ತಾ "ಸೌಮಿತ್ರಿ, ನೋಡು ಇವು ಸೀತೆಯ ಆಭರಣಗಳೇ ಅಲ್ಲವೇ ? ಎಂದ ಆಗ ಲಕ್ಷ್ಮಣ.

**ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।**
**ನೂಪುರೇತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್ ॥**

"ರಾಮಾ, ನನಗೆ ಈ ಕೇಯೂರ, ತೋಳಿನ ಆಭರಣ ತಿಳಿಯದು. ಕುಂಡಲಗಳನ್ನೂ ಕಂಡರಿಯೆ.

ಆದರೆ, ಕಾಲಿಗೆ ಧರಿಸುವ "ನೂಪುರ" ಮಾತ್ರ ಸೀತೆಯದೇ ಎಂದು ನನಗೆ ಚೆನ್ನಾಗಿ ಗೊತ್ತು ಎಂದ.

ಆಗ ರಾಮ "ಲಕ್ಷ್ಮಣಾ, ಇದೇನು ? ಸೀತೆಯ ಆಭರಣಗಳೆಲ್ಲ ಇರುವಾಗ ನೀನು ಕೇಯೂರ ಕುಂಡಲ, ಇವ್ಯೊಂದೂ ಗೊತ್ತಿಲ್ಲವೆಂದೆ. ಆದರೆ ಕಾಲಿಗೆ ಧರಿಸುವ ಈ ನೂಪುರ, ಮಾತ್ರ ನಿನಗೆ ಸೀತೆಯದೇ ಎಂದು ಹೇಗೆ ಗೊತ್ತು ? ಎಂದ. "ಅಣ್ಣಾ, ಕೇಯೂರ, ಕುಂಡಲ ಇವುಗಳನ್ನು ನಾ ಕಂಡರಿಯೆ. ನಾ ಅವುಗಳನ್ನು ನೋಡಿಯೇ ಇಲ್ಲ. ನೂಪುರ ಮಾತ್ರ ಹೇಗೆ ಗೊತ್ತು ? ಎಂದೆ ಅಲ್ಲವೆ ? ಅಣ್ಣಾ, ಕೇಳು, ದಿನವೂ ಎರಡು ವೇಳೆ ಸಂಧ್ಯಾವಂದನೆ ಮಾಡಿದಮೇಲೆ ಅತ್ತಿಗೆಯ ಕಾಲಡಿಯಲ್ಲಿ ಶಿರವನ್ನಿಟ್ಟು ಪ್ರಣಾಮ ಮಾಡುತ್ತಿದ್ದೆ. ಹಾಗೆ ನಮಸ್ಕರಿಸುವಾಗ ಈ ನೂಪುರ ಕಂಡಿದ್ದೆ. ಆದರಿಂದ ಇದು ಸೀತೆಯದೇ ಎಂದು ಹೇಳಿದೆ" ಎಂದ ಲಕ್ಷ್ಮಣ. ಧನ್ಯ ಲಕ್ಷ್ಮಣ ! ಹದಿನಾಲ್ಕು ವರ್ಷಗಳ ವನವಾಸಕಾಲದಲ್ಲಿ ಒಂದು ದಿನವಾದರೂ ಸೀತೆಯನ್ನು ಪಾದದಿಂದ ಮೇಲಕ್ಕೆ ದೃಷ್ಟಿಸಿ ನೋಡಲಿಲ್ಲ. ಅವನ ಬ್ರಹ್ಮಚರ್ಯನಿಷ್ಠೆ ಅನುಪಮ, ಅಸದೃಶ !

ರಾಮ ನೂಪುರವನ್ನು ತೋರಿಸುತ್ತಾ "ಲಕ್ಷ್ಮಣಾ, ನೋಡು ಸೀತೆ ಕಾಲಿನಲ್ಲಿ ಧರಿಸಿದ್ದಾಗ, ಈ ನೂಪುರ "ಘಲ್, ಘಲ್" ಎಂದು ಮಂಜುಳವಾದ ಶಬ್ದವನ್ನು ಮಾಡುತ್ತಿತ್ತು. ಈಗ ಆ ಶಬ್ದವನ್ನು ಮಾಡುವುದೇ ಇಲ್ಲ. ಅದಕ್ಕೂ ಸೀತೆಯನ್ನಗಲಿದ ದುಃಖವೋ ಏನೋ ! ಅದಕ್ಕೇ ಮೌನವಾಗಿದೆ !" ಎಂದು ಪ್ರಲಾಪಿಸಿದ.

ಕಾಳಿದಾಸನು ಈ ಸನ್ನಿವೇಶವನ್ನು ಬಲು ಅಂದವಾಗಿ ವರ್ಣಿಸಿದ್ದಾನೆ. ಸೀತೆಯೊಂದಿಗೆ ಪುಷ್ಪಕವಿಮಾನವೇರಿ ಮರಳಿ ಬರುತ್ತಾ, ಒಂದೊಂದಾಗಿ ಸ್ಥಳಪರಿಚಯ ಮಾಡಿಸುತ್ತಾ, ಜಾನಕೀ ಇದೇ ಋಷ್ಯಮೂಕ ಪರ್ವತ. ಇದೇ ಸ್ಥಳದಲ್ಲೇ ನಿನ್ನ ನೂಪುರವನ್ನು ನೋಡಿದ್ದು.

**ಸೈಷಾಸ್ಥಲೀಯತ್ರ ವಿಚಿನ್ವತಾ ತ್ವಾಂ ।**
**ಭ್ರಷ್ಟಂ ಮಯಾ ನೂಪುರ ಮೇಕ ಮುರ್ವ್ಯಾಂ ॥**
**ಅದೃಶ್ಯತ ತ್ವಚ್ಚರಣಾರವಿಂದ ।**
**ವಿಶ್ಲೇಷ ದುಃಖಾದಿವ ಬದ್ಧಮೌನಂ – ॥** ಎಂದು

ಅಡಿಗಡಿಗೆ ಆಭರಣಗಳನ್ನು ಎದೆಗೊತ್ತಿಕೊಳ್ಳುವುದು, ಅದನ್ನೇ ದೃಷ್ಟಿಸಿ ನೋಡುವುದು, "ಹಾ–ಸೀತೆ" ಎಂದು ದೀರ್ಘವಾಗಿ ನಿಟ್ಟುಸಿರು ಬಿಡುವುದು, ಹೀಗೆ ರಾಮ ಪ್ರಾಕೃತನಂತೆ ತನ್ನ ವಿರಹವ್ಯಥೆಯನ್ನು ತೋಡಿಕೊಂಡ.

ಕೊನೆಗೆ "ಸುಗ್ರೀವ, ಈಗಿಂದೀಗಲೇ ಆ ಪಾಪಿ ರಾಕ್ಷಸನ ವಂಶವನ್ನೇ ನಿರ್ವಂಶವಾಗಿಸುತ್ತೇನೆ ಎಲ್ಲಿದ್ದಾನೆ ಆ ಪಾಪಿ ರಾಕ್ಷಸ ? ನೀನು ನೋಡಿದೆ ಎಂದೆಯಲ್ಲ ? ಹೇಳು. ಅವನ ಕುಲ, ಗೋತ್ರ, ನಿವಾಸಸ್ಥಾನ ಎಲ್ಲಿದೆ ? ಹೇಳು. ಈಗಲೇ ಅವನನ್ನು ನಾಶಮಾಡಿ ಸೀತೆಯನ್ನು ಪಡೆಯುತ್ತೇನೆ" ಎಂದ.

ಸುಗ್ರೀವ ರಾಜನೀತಿವಿಶಾರದ, ತಂತ್ರಜ್ಞ, ಬುದ್ಧಿವಂತ. ತನ್ನ ಕಾರ್ಯವನ್ನು ಮೊದಲು ಸಾಧಿಸಿಕೊಳ್ಳಬೇಕು ಎಂಬ ಆಸೆ. ಆದರಿಂದ ಪ್ರೇರಿತನಾದ ಸುಗ್ರೀವ ರಾಮನನ್ನು ಸಮಾಧಾನ ಮಾಡತೊಡಗಿದ. "ರಾಮಾ, ಪ್ರಪಂಚದಲ್ಲಿ ಶೋಕ ಎಂಬ ಶತ್ರುವಿಗಿಂತ ಮಿಗಿಲಾದ ಶತ್ರು ಬೇರೊಂದಿಲ್ಲ. ಶೋಕ ಉತ್ಸಾಹವನ್ನು ತಗ್ಗಿಸುತ್ತದೆ. ಸದಾ ದುಃಖಭಾರದಿಂದ, ಶೋಕತಪ್ತನಾಗಿರುವವನು ಯಾವ ಕಾರ್ಯವನ್ನೂ ಸಾಧಿಸುವುದಿಲ್ಲ. ನೀರಿನಿಂದ ತುಂಬಿದ ನೌಕೆ ಮುಳುಗುವಂತೆ ಶೋಕಭಾರದಿಂದ ಪೀಡಿತನಾದವನು ನಾಶ ಹೊಂದುತ್ತಾನೆ.

ಕಷ್ಟಕಾಲದಲ್ಲಿ ಶೋಕವನ್ನು ತ್ಯಜಿಸಿ ಧೈರ್ಯವನ್ನು ತಳೆಯುವವನೇ ನಿಜವಾಗಿ ಸುಖವನ್ನು ಪಡೆಯುತ್ತಾನೆ. ನಾನು ವಾನರ. ನಾನೂ ನಿನ್ನಂತೆ ಪತ್ನಿಯನ್ನು ಕಳೆದುಕೊಂಡಿದೇನೆ. ನಾನೂ ವಿರಹದಿಂದ ತಪ್ತನಾಗಿದೇನೆ. ಆದರೆ ನಾನು ಯಾವಾಗಲೂ ಹೀಗೆ ದುಃಖಿಸುವುದಿಲ್ಲ. ವಾನರ ಎಂದೇ ಚಪಲ ಬುದ್ಧಿಯುಳ್ಳ ನಾನೇ ಹೀಗೆ ಧೈರ್ಯದಿಂದಿರುವಾಗ, ನೀನು ನರಶ್ರೇಷ್ಠ, ಬುದ್ಧಿವಂತ, ಪರಾಕ್ರಮಿ, ತೇಜಸ್ವಿ, ಹೀಗೆ ದುಃಖಿಸುವುದು ತರವಲ್ಲ. ನಾನು ನಿನಗೆ ಉಪದೇಶ ಮಾಡುತ್ತಿದೇನೆ ಎಂದು ತಿಳಿಯಬೇಡ. ಮಿತ್ರಭಾವದಲ್ಲಿರುವಾಗ ಮಿತ್ರನನ್ನು ಸಂತೈಸುವುದು ಕರ್ತವ್ಯ ಎಂದು ಹೇಳುತ್ತಿದೇನೆ. ರಾಮಾ, ಶೋಕಿಸಬೇಡ, ದುಃಖವನ್ನು ಬಿಡು, ಧೈರ್ಯವನ್ನು ತಾಳು" ಎಂದ.

ಸುಗ್ರೀವನ ಮಾತುಗಳನ್ನು ಕೇಳಿ ರಾಮ ಸಂತುಷ್ಟನಾದ. ತನ್ನ ನಾರುಮಡಿಯ ಅಂಚಿನಿಂದ ಕಣ್ಣೀರನ್ನು ಒರಸಿಕೊಂಡ. ಸುಗ್ರೀವ, ಮಿತ್ರ ಅಂದರೆ ನೀನು. ನಿನ್ನ ಮಧುರವಾದ, ಪ್ರಿಯ ವಚನ ನನಗೆ ಶಾಂತಿಯನ್ನುಂಟುಮಾಡಿತು" ಎಂದ.

ಇಬ್ಬರೂ ಬಹಳ ಹೊತ್ತು ಹೀಗೆ ಮಾತಾಡುತ್ತಿದ್ದರು

ಸುಗ್ರೀವ ಮತ್ತೆ ಮತ್ತೆ ಹೇಳಿದ "ರಾಮಾ, ವಾಲಿ ನನ್ನನ್ನು ಹೊರದೂಡಿದ ನನ್ನ ಪತ್ನಿಯನ್ನೂ ಅಪಹರಿಸಿದ. ನೀನು ಅವನನ್ನು ಕೊಂದು ನನ್ನ ಪತ್ನಿಯನ್ನೂ ರಾಜ್ಯವನ್ನೂ ಕೊಡಿಸಬೇಕು."

ರಾಮ ಸುಗ್ರೀವನನ್ನು ಕುರಿತು "ಸುಗ್ರೀವಾ, ನಿಮ್ಮಿಬ್ಬರಿಗೂ ವೈರ ಬರಲು ಕಾರಣ ಹೇಳು ನಾನು ಅದನ್ನು ಕೇಳಲು ಇಚ್ಛಿಸುತ್ತೇನೆ" ಎಂದ.

ಸುಗ್ರೀವ ಹೇಳತೊಡಗಿದ :

"ಋಕ್ಷರಜಸ್ಸೆಂಬ ವಾನರ ಶ್ರೇಷ್ಠನಿಗೆ ನಾನು-ವಾಲಿ ಇಬ್ಬರೂ ಮಕ್ಕಳಾಗಿ ಹುಟ್ಟಿದೆವು. ನನ್ನ ಅಣ್ಣ ವಾಲಿ ಪರಾಕ್ರಮಿ, ತೇಜಸ್ವೀ, ಮಹಾಬಲಿಷ್ಠ. ಋಕ್ಷರಜಸ್ಸಿನ ನಂತರ ಜ್ಯೇಷ್ಠನಾದ ನನ್ನ ಅಣ್ಣನಿಗೆ ಪಟ್ಟ ಆಯಿತು. ನಾನೂ ವಿನೀತನಾಗಿ ನನ್ನಣ್ಣನಿಗೆ ದಾಸನಾಗಿದ್ದೆ. ಅವನು ಹೇಳಿದಂತೆ ಕೇಳುತ್ತಿದ್ದೆ. ಇಬ್ಬರೂ ಅನ್ಯೋನ್ಯವಾಗಿದ್ದೆವು. ಒಂದು ದಿನ ಮಾಯಾವಿ ಎಂಬ ಅಸುರ ಬಂದು ಕಿಷ್ಕಿಂದೆಯ ಹೊರಗೆ ನಿಂತು ಗರ್ಜಿಸಿದ. ಮಾಯಾವಿ ವಾಲಿಯನ್ನು ಯುದ್ಧಕ್ಕೆ ಕರೆದ. ವಾಲಿ ಅವನೊಡನೆ ಸೆಣಸಲು ಹೊರಟ. ಭ್ರಾತೃಸ್ನೇಹದಿಂದ ನಾನೂ ಅವನನ್ನು ಹಿಂಬಾಲಿಸಿದೆ. ವಾಲಿಯನ್ನು ಕಂಡೊಡನೆಯೇ ಮಾಯಾವಿ ಓಡತೊಡಗಿದ. ವಾಲಿಯೂ ಅವನನ್ನು ಹಿಂಬಾಲಿಸಿದ. ಓಡುತ್ತಾ—ಓಡುತ್ತಾ ಒಂದು ಗುಹೆಯೊಳಗೆ ಪ್ರವೇಶಿಸಿದ, ಮಾಯಾವಿ. ವಾಲಿಯೂ ಆ ಗುಹೆಯನ್ನು ಪ್ರವೇಶಿಸಿದ. ನನ್ನನ್ನು ಕುರಿತು ವಾಲಿ "ನಾ ಬರುವವರೆಗೆ ನೀನು ಈ ಗುಹಾದ್ವಾರದಲ್ಲೇ ಕಾಯುತ್ತಾ ಇರು" ಎಂದು ಹೇಳಿ ಹೋದ. ನಾನು ಅದರಂತೆಯೇ ಗುಹಾದ್ವಾರದಲ್ಲಿ ಕಾದಿದ್ದೆ. ಒಂದು ವರುಷ ಕಳೆಯಿತು. ವಾಲಿ ಬರಲಿಲ್ಲ. ಆ ರಾಕ್ಷಸನ ವಿಷಯವೂ ತಿಳಿಯಲಿಲ್ಲ.

ವರುಷ ಕಳೆದಮೇಲೆ ಆ ಗುಹಾದ್ವಾರದಿಂದ ಮಾಂಸಯುಕ್ತವಾದ ರಕ್ತ ಹರಿಯುತ್ತಿದ್ದುದನ್ನು ಕಂಡೆ. ಆ ರಾಕ್ಷಸ ವಾಲಿಯನ್ನು ಕೊಂದಿರಬೇಕು ಎಂದು ಊಹಿಸಿದೆ. "ಆ ರಾಕ್ಷಸ ಹಿಂದಿರುಗಿ ಬರಲು ಆಗದಿರಲಿ" ಎಂದು ಒಂದು ಬಂಡೆಯನ್ನು ಗುಹಾದ್ವಾರದಲ್ಲಿರಿಸಿ ಊರಿಗೆ ಹಿಂದಿರುಗಿದೆ.

ಶೋಕತಪ್ತನಾದ ನಾನು ಮಂತ್ರಿಗಳಿಗೆ ಎಲ್ಲವನ್ನೂ ಹೇಳಿದೆ. ಮಂತ್ರಿಗಳು ''ರಾಜ್ಯವನ್ನು

ಅನಾಯಕವಾಗಿ ಬಿಡಬಾರದು" ಎಂದು ಬಲಾತ್ಕಾರದಿಂದ ನನಗೆ ಪಟ್ಟಾಭಿಷೇಕ ಮಾಡಿದರು. ನಾನು ರಾಜ್ಯವನ್ನು ಪಡೆದೆ, ತಾರೆಯರೊಡನೆ ಹಾಗೂ ನನ್ನ ಪತ್ನಿ ರುಮೆಯೊಡನೆ ಸುಖವಾಗಿದ್ದೆ.

ಒಂದು ದಿನ ಇದ್ದಕ್ಕಿದ್ದಂತೆ ವಾಲಿ ಕಿಷ್ಕಿಂಧೆಗೆ ಬಂದ ನಾನು ಸಿಂಹಾಸನದ ಮೇಲೆ ಕುಳಿತಿದ್ದುದನ್ನು ಕಂಡು ರೋಷಗೊಂಡ. ವಾಲಿಯನ್ನು ಕಂಡೊಡನೆ ನಾನು ಸಿಂಹಾಸನದಿಂದ ಕೆಳಗಿಳಿದೆ. ವಾಲಿಯ ಪಾದಗಳ ಮೇಲೆ ಬಿದ್ದು ಕ್ಷಮೆಯನ್ನು ಯಾಚಿಸಿದೆ. "ತಿಳಿಯದೆ ಅಪರಾಧ ಮಾಡಿದೆ ಕ್ಷಮಿಸು. ಇಗೋ ರಾಜ್ಯ, ಇದನ್ನು ಒಪ್ಪಿಸಿಕೊ. ರಾಜನಾಗು, ನನ್ನನ್ನು ಕಾಪಾಡು" ಎಂದು ಬೇಡಿದೆ.

ವಾಲಿಯ ಮನಸ್ಸು ಕರಗಲಿಲ್ಲ. ಮಂತ್ರಿಗಳೊಡನೆ ವಾಲಿ "ಈ ದುಷ್ಟ ಎಂಥ ಅಪರಾಧ ಮಾಡಿದಾನೆ. ಗುಹಾದ್ವಾರದಲ್ಲಿ ನಾ ಬರುವವರೆಗೂ ಇರು ಎಂದು ಹೇಳಿದೆ. ಇವನು ರಾಜ್ಯದ ಲೋಭದಿಂದ ನನ್ನನ್ನು ಗುಹೆಯಲ್ಲೇ ಬಂಧಿಸಿ ಬಂದಿದಾನೆ ಈ ಪಾಪಿಗೆ ಸರಿಯಾದ ಶಿಕ್ಷೆ ಆಗಬೇಕು" ಎಂದು ಗುಡುಗಿದ.

ಮತ್ತೆ ಮತ್ತೆ ವಾಲಿಯ ಪಾದಗಳ ಮೇಲೆ ಬಿದ್ದು ನಾ ಬೇಡುತ್ತಿದ್ದರೂ ಅವನು ಲಕ್ಷಿಸಲಿಲ್ಲ. ನನ್ನನ್ನು ಒದ್ದು ತಳ್ಳಿದ. ಹೊರದೂಡಿದ. ಅಷ್ಟಲ್ಲದೆ ನನ್ನ ಪತ್ನಿಯಾದ ರುಮೆಯನ್ನೂ ನನ್ನಿಂದ ಬೇರ್ಪಡಿಸಿ ತಾನೇ ಇಟ್ಟುಕೊಂಡ. ವಾಲಿಯ ಭಯದಿಂದ ನಾನು ಎಲ್ಲೆಲ್ಲೂ ಅಲೆದಾಡಿ ಕೊನೆಗೆ ಈ ಋಷ್ಯಮೂಕ ಪರ್ವತದಲ್ಲಿ ಆಶ್ರಯ ಪಡೆದೆ. ಹೀಗಿದೆ ರಾಮಾ ನನ್ನ ದಯನೀಯ ಕಥೆ. ನೀನು ಬೇಗ ಆ ವಾಲಿಯನ್ನು ಕೊಲ್ಲಲೇಬೇಕು" ಎಂದು ಸುಗ್ರೀವ ತನಗೂ, ವಾಲಿಗೂ ವೈರ ಬೆಳೆದ ರೀತಿಯನ್ನು ವರ್ಣಿಸಿದ.

ಎಲ್ಲವನ್ನೂ ಸಾವಧಾನವಾಗಿ ಕೇಳಿದ ರಾಮ ಸುಗ್ರೀವನಿಗೆ ಆಶ್ವಾಸನೆಯನ್ನಿತ್ತ. ತನ್ನ ಬಾಣಗಳು ಅಮೋಘ, ಆದರಿಂದ ವಾಲಿ ಖಂಡಿತವಾಗಿ ಸಾಯುತ್ತಾನೆ ಎಂದು ಹೇಳಿದ. ಸುಗ್ರೀವ ಇದನ್ನು ಕೇಳಿ ಸಂತೋಷವನ್ನೇನೋ ಪಡೆದ. ರಾಮ-ಸುಗ್ರೀವರು ಅಲ್ಲೇ ನಡೆದಾಡುತ್ತಿದ್ದಂತೆ ಜಾಜಿಯ ಬಳ್ಳಿ ರಾಮನ ತೋಳನ್ನು ಆವರಿಸಿತು. ಅದರಿಂದ ಬಿಡಿಸಿಕೊಂಡ ರಾಮ. ಅವನ ತೋಳುಗಳು ಕೆಂಪಗೆ ಆದವು. ಇದನ್ನು ಕಂಡ ಸುಗ್ರೀವ. ಮೊದಲೇ ಸಂಶಯ ಪಡುತ್ತಿದ್ದ ಅವನ ಮನಸ್ಸು ಮತ್ತೂ ಸಂಶಯಕ್ಕೆ ಪುಷ್ಟಿಕೊಟ್ಟಿತು. ರಾಮ ಕೋಮಲವಾದ ಕಾಯವುಳ್ಳವನು ಈ ಸುಕುಮಾರನ ತೋಳು ಜಾಜಿಯ ಬಳ್ಳಿಯನ್ನು ಸೋಕಿದ ಮಾತ್ರದಲ್ಲಿ ಕೆಂಪಗಾಯಿತು. ಇಂಥ ಕೋಮಲ ಶರೀರಿಯಾದ ರಾಮ ವಜ್ರದೇಹಿಯಾದ ವಾಲಿಯನ್ನು ಕೊಲ್ಲುವನೇ? ಇದು ಅವನಿಂದ ಸಾಧ್ಯವೆ ? ಎಂದು ಯೋಚಿಸಿದ – ಶಂಕಿಸಿದ.

ರಾಮ ಸುಗ್ರೀವನ ಅಂತರ್ಯವನ್ನು ಅರಿತುಕೊಂಡು "ಸುಗ್ರೀವ – ಏನು ? ಏನು ಯೋಚಿಸುತ್ತಿದೀಯೇ ?" ಎಂದ.

ಸುಗ್ರೀವ, "ರಾಮ, ಏನೂ ಇಲ್ಲ. ವಾಲಿಯನ್ನು ಕೊಲ್ಲುತ್ತೇನೆ ಎಂದೆ ನೀನು. ಆದರೆ, ವಾಲಿ ಸಾಮಾನ್ಯನಲ್ಲ, ಮಹಾಪರಾಕ್ರಮಿ. ಬೆಳಗಿನ ಜಾವ ಅವನು ಎದ್ದು ಸಂಧ್ಯಾವಂದನೆಗಾಗಿ ನಾಲ್ಕು ಸಮುದ್ರಗಳನ್ನೂ ಸುತ್ತಿ ಬರುತ್ತಿದ್ದ. ದೊಡ್ಡ ದೊಡ್ಡ ಪರ್ವತದ ಶಿಖರಗಳನ್ನು ಚೆಂಡಿನಂತೆ ಅನಾಯಾಸವಾಗಿ ಮೇಲೆತ್ತಿ ಕೈಯಲ್ಲಿ ಹಿಡಿಯುತ್ತಿದ್ದ. ಇಗೋ ನೋಡು, ಘನವಾದ ಆ ಏಳು ಸಾಲವೃಕ್ಷಗಳನ್ನು ಒಂದೇ ಕೈಯಿಂದ ಆಡಿಸಿ ಅದರಲ್ಲಿ ಒಂದು ಎಲೆಯೂ ಇಲ್ಲದಂತೆ ಮಾಡಿ ಬಿಡುತ್ತಿದ್ದ. ರಾಮ, ವಾಲಿ ಅಸಾಮಾನ್ಯ ಪರಾಕ್ರಮಿ – ಹೇಳುತ್ತೇನೆ ಕೇಳು.

ದುಂದುಭಿ ಎಂಬ ರಾಕ್ಷಸ ಇದ್ದ. ಅವನು ವರಬಲದಿಂದ ಮತ್ತನಾಗಿದ್ದ. ಕೊಬ್ಬಿದ ಅವನು ತನ್ನೊಡನೆ ಯಾರಾದರೂ ಯುದ್ಧ ಮಾಡಬೇಕು ಎಂದು ಇಚ್ಛಿಸುತ್ತಿದ್ದ. ಕೊನೆಗೆ ಸಾಗರವನ್ನು ಕುರಿತು "ಸಮುದ್ರವೇ ! ನನ್ನೊಡನೆ ಯುದ್ಧಕ್ಕೆ ಬಾ" ಎಂದು ಕರೆದ. ಅದಕ್ಕೆ ಸಮುದ್ರ "ನಾನು ನಿನ್ನೊಡನೆ ಹೋರಾಡಲಾರೆ. ನಿನ್ನೊಡನೆ ಹೋರಾಡಲು ಉತ್ತರದಲ್ಲಿರುವ ಹಿಮವಂತನೇ ಸರಿ. ಅವನ ಬಳಿಗೇ ಹೋಗು" ಎಂದ.

ಅದರಂತೆ ದುಂದುಭಿ ಈಶ್ವರನ ಮಾವನಾದ ಹಿಮವಂತನ ಬಳಿಗೆ ಹೋದ. "ನನ್ನೊಡನೆ ಯುದ್ಧಕ್ಕೆ ಬಾ" ಎಂದು ಅವನನ್ನು ಕರೆದ.

ಹಿಮವಂತ ಅದಕ್ಕೆ "ಅಯ್ಯಯ್ಯೋ ! ನಿನ್ನೊಡನೆ ನಾನು ಸೆಣಸುವುದು ಎಂದರೇನು ! ನೀ ಎಲ್ಲಿ ! ನಾ ಎಲ್ಲಿ ! ನಿನ್ನ ಅಪ್ರತಿಮ ಪೌರುಷಕ್ಕೆ ನಾ ಎಂದೂ ಸಾಟಿಯಾಗಲಾರೆ. ನನ್ನನ್ನು ಕಾಡಬೇಡ – ಬಿಡು" ಎಂದ.

ದುಂದುಭಿ "ಹಾಗೆಲ್ಲ ನನ್ನೊಡನೆ ನೆವ ಹೇಳಿ ನುಣುಚಿಕೊಳ್ಳಲು ನಾ ಬಿಡುವುದಿಲ್ಲ. ನೀನೇ ಯುದ್ಧಕ್ಕೆ ಬಾ. ಇಲ್ಲವೆ ನನ್ನೊಡನೆ ಯುದ್ಧ ಮಾಡಬಹುದಾದ ಪರಾಕ್ರಮಿಯನ್ನಾದರೂ ತೋರಿಸು'' ಎಂದ. ಹಿಮವಂತ "ನಿನ್ನೊಡನೆ ಸೆಣಸುವ ವೀರ ಎಂದರೆ ವಾಲಿ ಒಬ್ಬನೇ. ಅವನು ಕಿಷ್ಕಿಂದೆಗೆ ರಾಜನಾಗಿದ್ದಾನೆ. ಅವನನ್ನು ಯುದ್ಧಕ್ಕೆ ಕರೆ. ನಿನಗೆ ಸರಿಯಾದ ಜೊತೆ ಅವನು" ಎಂದ.

ಅದರಂತೆ ದುಂದುಭಿ ಕಿಷ್ಕಿಂಧೆಗೆ ಬಂದ. ಕಿಷ್ಕಿಂಧೆಯ ದ್ವಾರದಲ್ಲಿ ನಿಂತುಕೊಂಡು ಕೂಗಿದ ವಾಲಿಯನ್ನು. ಯುದ್ಧಕ್ಕೆ ಬರುವಂತೆ ಗರ್ಜಿಸಿದ. ಆಗ ವಾಲಿ ತನ್ನ ಸ್ತ್ರೀಯರೊಂದಿಗೆ ವಿಹರಿಸುತ್ತಿದ್ದ. ಗರ್ಜನೆಯನ್ನು ಕೇಳಿದ ವಾಲಿ "ನೀನು ಯಾರು ?'' ಎಂದ.

"ನಾನು ದುಂದುಭಿ ಮಾಯಾವಿಯ ಸಹೋದರ. ನೀನು ಈಗ ಸ್ತ್ರೀಯರೊಂದಿಗೆ ಇದೀಯೆ. ಪಾಪ ! ಬೆಳಗಿನವರೆಗೆ ಅವರೊಂದಿಗೆ ಸುಖವಾಗಿರು. ಅಲ್ಲಿಯವರೆಗೆ ನಾನು ನಿನಗೆ ಅವಕಾಶ ಕೊಡುತ್ತೇನೆ. ಬೆಳಿಗ್ಗೆ ಯುದ್ಧಕ್ಕೆ ಬರುವಾಗ ಕೊನೆಯ ಬಾರಿಗೆ ಎಲ್ಲರನ್ನು ನೋಡಿ ಹೇಳಿ ಬಂದುಬಿಡು. ನನ್ನೊಡನೆ ಯುದ್ಧಕ್ಕೆ ಬಂದಮೇಲೆ ನೀ ಉಳಿಯಲಾರೆ" ಎಂದ.

ಇದನ್ನು ಕೇಳಿದ ವಾಲಿಗೆ ಸಹಿಸಲಾಗದ ಕೋಪ ಬಂತು. ತಕ್ಷಣ ಅಲ್ಲಿಂದ ಎದ್ದ. ಇಂದ್ರದತ್ತವಾದ ಕಾಂಚನಮಾಲೆಯನ್ನು ಕೊರಳಿಗೆ ಹಾಕಿಕೊಂಡು ದುಂದುಭಿಯ ಬಳಿಗೆ ಯುದ್ಧಕ್ಕಾಗಿ ಬಂದ. ದುಂದುಭಿ ಮಹಿಷರೂಪವನ್ನು ಧರಿಸಿ ಬಂದಿದ್ದ. ವಾಲಿಗೂ ದುಂದುಭಿಗೂ ಘೋರವಾದ ಕಾಳಗ ನಡೆಯಿತು. ಮಹಾಬಲಿಯಾದ ವಾಲಿ ಆ ಮಹಿಷದ ಎರಡು ಕೊಂಬುಗಳನ್ನೂ ಹಿಡಿದ. ಒಂದು ಕೈಯಿಂದ ಆ ಎರಡು ಕೊಂಬುಗಳನ್ನು ಹಿಡಿದು ಗಿರಗಿರ ತಿರುಗಿಸಿ ಅಪ್ಪಳಿಸಿದ. ಮಾಂಸವು ಮುದ್ದೆಯಾಗಿ ರಕ್ತದ ಸಮೇತ ಹರಿಯಿತು. ದುಂದುಭಿ ಸತ್ತ. ಸತ್ತಮೇಲೆ ಆ ಮಹಿಷದ ಎರಡು ಕಾಲುಗಳನ್ನು ಹಿಡಿದು ದೂರಕ್ಕೆ ಎಸೆದ. ಅದು ಒಂದು ಯೋಜನ ದೂರ ಹೋಗಿ ಬಿತ್ತು. ಆ ದೇಹ ಬಿದ್ದ ಸ್ಥಳದಲ್ಲಿ ಮತಂಗ ಮಹರ್ಷಿಗಳು ತಪಸ್ಸು ಮಾಡುತ್ತಿದ್ದರು. ರಕ್ತಸಿಕ್ತವಾಯಿತು, ಆ ಪವಿತ್ರವಾದ ಪ್ರದೇಶವೆಲ್ಲ.

ತಪಸ್ಸು ಮಾಡುತ್ತಿದ್ದ ಋಷಿಗಳಿಗೆ ಕೋಪ ಬಂದಿತು. ತಪೋಭೂಮಿಯನ್ನು ಪವಿತ್ರವಾದ ಪ್ರದೇಶವನ್ನು ಅಪವಿತ್ರಗೊಳಿಸಿದವ ಯಾರು ?'' ಎಂದು ಕೋಪದಿಂದ ಕೇಳಿದರು. ತಮ್ಮ ಜ್ಞಾನದೃಷ್ಟಿಯಿಂದ ಇದು ವಾಲಿಯ ಕೆಲಸ ಎಂದು ತಿಳಿದರು. ಒಡನೆ ಶಾಪ ಕೊಟ್ಟರು.

ಅನಾಯಕವಾಗಿ ಬಿಡಬಾರದು" ಎಂದು ಬಲಾತ್ಕಾರದಿಂದ ನನಗೆ ಪಟ್ಟಾಭಿಷೇಕ ಮಾಡಿದರು. ನಾನು ರಾಜ್ಯವನ್ನು ಪಡೆದೆ, ತಾರೆಯರೊಡನೆ ಹಾಗೂ ನನ್ನ ಪತ್ನಿ ರುಮೆಯೊಡನೆ ಸುಖವಾಗಿದ್ದೆ.

ಒಂದು ದಿನ ಇದ್ದಕ್ಕಿದ್ದಂತೆ ವಾಲಿ ಕಿಷ್ಕಿಂಧೆಗೆ ಬಂದ ನಾನು ಸಿಂಹಾಸನದ ಮೇಲೆ ಕುಳಿತಿದ್ದುದನ್ನು ಕಂಡು ರೋಷಗೊಂಡ. ವಾಲಿಯನ್ನು ಕಂಡೊಡನೆ ನಾನು ಸಿಂಹಾಸನದಿಂದ ಕೆಳಗಿಳಿದೆ. ವಾಲಿಯ ಪಾದಗಳ ಮೇಲೆ ಬಿದ್ದು ಕ್ಷಮೆಯನ್ನು ಯಾಚಿಸಿದೆ. "ತಿಳಿಯದೆ ಅಪರಾಧ ಮಾಡಿದೆ ಕ್ಷಮಿಸು. ಇಗೋ ರಾಜ್ಯ, ಇದನ್ನು ಒಪ್ಪಿಸಿಕೊ. ರಾಜನಾಗು, ನನ್ನನ್ನು ಕಾಪಾಡು" ಎಂದು ಬೇಡಿದೆ.

ವಾಲಿಯ ಮನಸ್ಸು ಕರಗಲಿಲ್ಲ. ಮಂತ್ರಿಗಳೊಡನೆ ವಾಲಿ "ಈ ದುಷ್ಟ ಎಂಥ ಅಪರಾಧ ಮಾಡಿದಾನೆ. ಗುಹಾದ್ವಾರದಲ್ಲಿ ನಾ ಬರುವವರೆಗೂ ಇರು ಎಂದು ಹೇಳಿದೆ. ಇವನು ರಾಜ್ಯದ ಲೋಭದಿಂದ ನನ್ನನ್ನು ಗುಹೆಯಲ್ಲೇ ಬಂಧಿಸಿ ಬಂದಿದಾನೆ ಈ ಪಾಪಿಗೆ ಸರಿಯಾದ ಶಿಕ್ಷೆ ಆಗ-ಬೇಕು" ಎಂದು ಗುಡುಗಿದ.

ಮತ್ತೆ ಮತ್ತೆ ವಾಲಿಯ ಪಾದಗಳ ಮೇಲೆ ಬಿದ್ದು ನಾ ಬೇಡುತ್ತಿದ್ದರೂ ಅವನು ಲಕ್ಷಿಸಲಿಲ್ಲ. ನನ್ನನ್ನು ಒದ್ದು ತಳ್ಳಿದ. ಹೊರದೂಡಿದ. ಅಷ್ಟಲ್ಲದೆ ನನ್ನ ಪತ್ನಿಯಾದ ರುಮೆಯನ್ನೂ ನನ್ನಿಂದ ಬೇರ್ಪಡಿಸಿ ತಾನೇ ಇಟ್ಟುಕೊಂಡ. ವಾಲಿಯ ಭಯದಿಂದ ನಾನು ಎಲ್ಲೆಲ್ಲೂ ಅಲೆದಾಡಿ ಕೊನೆಗೆ ಈ ಋಷ್ಯಮೂಕ ಪರ್ವತದಲ್ಲಿ ಆಶ್ರಯ ಪಡೆದೆ. ಹೀಗಿದೆ ರಾಮಾ ನನ್ನ ದಯನೀಯ ಕಥೆ. ನೀನು ಬೇಗ ಆ ವಾಲಿಯನ್ನು ಕೊಲ್ಲಲೇಬೇಕು" ಎಂದು ಸುಗ್ರೀವ ತನಗೂ, ವಾಲಿಗೂ ವೈರ ಬೆಳೆದ ರೀತಿಯನ್ನು ವರ್ಣಿಸಿದ.

ಎಲ್ಲವನ್ನೂ ಸಾವಧಾನವಾಗಿ ಕೇಳಿದ ರಾಮ ಸುಗ್ರೀವನಿಗೆ ಆಶ್ವಾಸನೆಯನ್ನಿತ್ತ. ತನ್ನ ಬಾಣಗಳು ಅಮೋಘ, ಆದರಿಂದ ವಾಲಿ ಖಂಡಿತವಾಗಿ ಸಾಯುತ್ತಾನೆ ಎಂದು ಹೇಳಿದ. ಸುಗ್ರೀವ ಇದನ್ನು ಕೇಳಿ ಸಂತೋಷವನ್ನೇನೋ ಪಡೆದ. ರಾಮ-ಸುಗ್ರೀವರು ಅಲ್ಲೇ ನಡೆದಾಡುತ್ತಿದ್ದಂತೆ ಜಾಜಿಯ ಬಳ್ಳಿ ರಾಮನ ತೋಳನ್ನು ಆವರಿಸಿತು. ಅದರಿಂದ ಬಿಡಿಸಿಕೊಂಡ ರಾಮ. ಅವನ ತೋಳುಗಳು ಕೆಂಪಗೆ ಆದವು. ಇದನ್ನು ಕಂಡ ಸುಗ್ರೀವ. ಮೊದಲೇ ಸಂಶಯ ಪಡುತ್ತಿದ್ದ ಅವನ ಮನಸ್ಸು ಮತ್ತೂ ಸಂಶಯಕ್ಕೆ ಪುಷ್ಟಿಕೊಟ್ಟಿತು. ರಾಮ ಕೋಮಲವಾದ ಕಾಯವುಳ್ಳವನು ಈ ಸುಕುಮಾರನ ತೋಳು ಜಾಜಿಯ ಬಳ್ಳಿಯನ್ನು ಸೋಕಿದ ಮಾತ್ರದಲ್ಲಿ ಕೆಂಪಗಾಯಿತು. ಇಂಥ ಕೋಮಲ ಶರೀರಿಯಾದ ರಾಮ ವಜ್ರದೇಹಿಯಾದ ವಾಲಿಯನ್ನು ಕೊಲ್ಲುವನೇ? ಇದು ಅವನಿಂದ ಸಾಧ್ಯವೆ ? ಎಂದು ಯೋಚಿಸಿದ – ಶಂಕಿಸಿದ.

ರಾಮ ಸುಗ್ರೀವನ ಅಂತರ್ಯವನ್ನು ಅರಿತುಕೊಂಡು "ಸುಗ್ರೀವ – ಏನು ? ಏನು ಯೋಚಿಸುತ್ತಿದೀಯೇ ?" ಎಂದ.

ಸುಗ್ರೀವ, "ರಾಮ, ಏನೂ ಇಲ್ಲ. ವಾಲಿಯನ್ನು ಕೊಲ್ಲುತ್ತೇನೆ ಎಂದೆ ನೀನು. ಆದರೆ, ವಾಲಿ ಸಾಮಾನ್ಯನಲ್ಲ, ಮಹಾಪರಾಕ್ರಮಿ. ಬೆಳಗಿನ ಜಾವ ಅವನು ಎದ್ದು ಸಂಧ್ಯಾವಂದನೆಗಾಗಿ ನಾಲ್ಕು ಸಮುದ್ರಗಳನ್ನೂ ಸುತ್ತಿ ಬರುತ್ತಿದ್ದ. ದೊಡ್ಡ ದೊಡ್ಡ ಪರ್ವತದ ಶಿಖರಗಳನ್ನು ಚೆಂಡಿನಂತೆ ಅನಾಯಾಸವಾಗಿ ಮೇಲೆತ್ತಿ ಕೈಯಲ್ಲಿ ಹಿಡಿಯುತ್ತಿದ್ದ. ಇಗೋ ನೋಡು, ಘನವಾದ ಆ ಏಳು ಸಾಲವೃಕ್ಷಗಳನ್ನು ಒಂದೇ ಕೈಯಿಂದ ಅಡಿಸಿ ಅದರಲ್ಲಿ ಒಂದು ಎಲೆಯೂ ಇಲ್ಲದಂತೆ ಮಾಡಿ ಬಿಡುತ್ತಿದ್ದ. ರಾಮ, ವಾಲಿ ಅಸಾಮಾನ್ಯ ಪರಾಕ್ರಮಿ – ಹೇಳುತ್ತೇನೆ ಕೇಳು.

ರಾಮ, ನೀ ಏನೋ ದುಂದುಭಿಯ ದೇಹವನ್ನು ಹತ್ತುಯೋಜನ ಚಿಮ್ಮಿದೆ ನಿಜ. ಆದರೆ, ವಾಲಿ, ಆ ದೇಹವನ್ನು ಎಸೆಯುವಾಗ ಅದು ರಕ್ತಮಾಂಸದಿಂದ ಕೂಡಿತ್ತು. ಹಸಿಯಾಗಿ, ಭಾರವಾಗಿತ್ತು. ಈಗ ಬಹಳಕಾಲ ಕಳೆದುಹೋಗಿದೆ. ಮಾಂಸ, ರಕ್ತ ಒಂದೂ ಇಲ್ಲದೆ ಬರೀ ಎಲುಬಿನ ಪಂಜರವಾಗಿದೆ ಅದು. ಅದನ್ನು ಅಷ್ಟುದೂರ ಚಿಮ್ಮಿದ್ದು ಹೆಚ್ಚಲ್ಲ. ನೋಡು ಈ ಸಾಲ ವೃಕ್ಷಗಳನ್ನು. ಇವುಗಳನ್ನು ನಿನ್ನ ಬಾಣದಿಂದ ಹೊಡಿ" ಎಂದ ಸುಗ್ರೀವ.

ರಾಮ ಸುಗ್ರೀವನ ಪರೀಕ್ಷೆಗೆ ಒಪ್ಪಿದ.

ನೀನೋ ವಾನರ. ನನ್ನನ್ನೇನು ಪರೀಕ್ಷಿಸಬಲ್ಲೆ ! ಎನ್ನಲಿಲ್ಲ. ಆಳ್ವಾರುಗಳು ರಾಮನ ಸೌಶೀಲ್ಯವನ್ನು ವರ್ಣಿಸುತ್ತಾ ಹೇಳುತ್ತಾರೆ. "ಒಂದು ಕಪಿ ನಿನ್ನನ್ನು ಪರೀಕ್ಷಿಸಿದಾಗಲೂ ನೀನು ಕೋಪಿಸದೆ ಅದರ ಪರೀಕ್ಷೆಗೂ ಒಳಗಾದೆ. ನಿನ್ನಂಥ ಸೌಲಭ್ಯಗುಣವುಳ್ಳ ಗುಣನಿಧಿಯನ್ನು ನಾ ಕಾಣೆ'' ಎಂದು. ಬತ್ತಳಿಕೆಯಿಂದ ಸೂರ್ಯನಂತೆ ತೇಜಸ್ಸುಳ್ಳ ಒಂದು ಬಾಣವನ್ನು ತೆಗೆದ. ಆಕರ್ಣಾಂತವಾಗಿ ಸೆಳೆದು ಒಂದು ಸಾಲವೃಕ್ಷಕ್ಕೆ ಗುರಿಯಿಟ್ಟು ಹೊಡೆದ. ಆ ರಾಮಬಾಣ ಅಲ್ಲಿಂದ ವೇಗವಾಗಿ ಹೋಗಿ ಆ ಸಾಲವೃಕ್ಷವನ್ನು ಬೇರುಸಮೇತ ಕತ್ತರಿಸಿತು. ಇನ್ನೊಂದು ವೃಕ್ಷವನ್ನೂ ಅದೇರೀತಿ ಬುಡಸಹಿತ ನಾಶಮಾಡಿತು. ಹೀಗೆ ಏಳು ವೃಕ್ಷಗಳನ್ನೂ ನಿರ್ಮೂಲ ಮಾಡಿತು. ಅಷ್ಟಕ್ಕೇ ನಿಲ್ಲಲಿಲ್ಲ. ಪಾತಾಳದವರೆಗೆ ಹೋಗಿ ಸಪ್ತಸಾಗರಗಳನ್ನೂ ಹೊಕ್ಕು ಮತ್ತೆ ನಿಮಿಷಾರ್ಧದಲ್ಲಿ ರಾಮನ ಬತ್ತಳಿಕೆಯನ್ನು ಬಂದು ಸೇರಿತು.

ಇದನ್ನೆಲ್ಲ ಎವೆಯಿಕ್ಕದೆ ನೋಡುತ್ತಿದ್ದ ಸುಗ್ರೀವ. ರಾಮನ ಅಪ್ರತಿಮ ವೀರ್ಯವನ್ನು ಕಣ್ಣಾರೆ ಕಂಡ. ಮೈನವಿರೆದ್ದಿತು. ರಾಮನ ಪಾದಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. "ಪ್ರಭೋ, ಇಕ್ಷ್ವಾಕು ಕುಲತಿಲಕ ! ಇಂದ್ರನೊಡಗೂಡಿದ ಸಮಸ್ತ ದೇವತೆಗಳನ್ನೂ ಕ್ಷಣಾರ್ಧದಲ್ಲಿ ಸಂಹರಿಸುವ ಸಾಮರ್ಥ್ಯ ನಿನಗುಂಟು. ಅಂದಮೇಲೆ ಈ ವಾಲಿಯ ಪಾಡೇನು ! ವಾಲಿ ಹತನಾದಂತೆಯೇ ಸರಿ. ಅರಿಯದೆ ನಿನ್ನನ್ನು ಪರೀಕ್ಷಿಸಿದೆ, ಕ್ಷಮಿಸು" ಎಂದು ಪ್ರಾರ್ಥಿಸಿದ.

ರಾಮ, ಸುಗ್ರೀವನ ಬೆನ್ನು ಸವರಿ "ಅದಿರಲಿ, ಸುಗ್ರೀವ: ಮುಂದಿನ ಕೆಲಸ ನೋಡಬೇಕು ನಾವು. ಹೋಗು, ವಾಲಿಯನ್ನು ಯುದ್ಧಕ್ಕೆ ಕರೆ'' ಎಂದ.

ಅದರಂತೆ ಸುಗ್ರೀವ, ಹನುಮಂತ ರಾಮ-ಲಕ್ಷ್ಮಣರೊಡನೆ ಕೂಡಿ ಕಿಷ್ಕಿಂಧೆಯತ್ತ ಹೋದ. ಕಿಷ್ಕಿಂಧೆಯ ಹೊರಗಿದ್ದ ದೊಡ್ಡ ಕಾಡಿನಲ್ಲಿ ರಾಮ ಲಕ್ಷ್ಮಣರು ಹನುಮಂತ ಮರಗಳ ಮರೆಯಲ್ಲಿ ಮೈಗರೆದರು.

ಕಿಷ್ಕಿಂಧೆಯ ಗುಹಾದ್ವಾರಕ್ಕೆ ಬಂದು ಸುಗ್ರೀವ ಗರ್ಜಿಸಿದ. ಸುಗ್ರೀವನ ಗರ್ಜನೆಯನ್ನು ಕೇಳಿದ ಒಡನೆಯೇ ವಾಲಿ ಕೋಪದಿಂದ ಹೊರಬಂದ.

ಇಬ್ಬರೂ ಮದಿಸಿದ ಆನೆಗಳಂತೆ, ಕೊಬ್ಬಿದ ಗೂಳಿಗಳಂತೆ ಒಬ್ಬರ ಮೇಲೊಬ್ಬರು ಬಿದ್ದು ಹೊಡೆದಾಡಿದರು. ವಾಲಿ-ಸುಗ್ರೀವ ಇವರಿಬ್ಬರಲ್ಲಿ ಯಾರು ವಾಲಿ ? ಯಾರು ಸುಗ್ರೀವ ? ಎಂದು ಕಂಡುಹಿಡಿಯುವುದೇ ಕಷ್ಟವಾಯಿತು. ಬರುಬರುತ್ತಾ ವಾಲಿಯ ಹೊಡೆತ ಜೋರಾಯಿತು

ಸುಗ್ರೀವನನ್ನು ಮುಷ್ಟಿಯಿಂದ ಬಲವಾಗಿ ಹೊಡೆದ ವಾಲಿ. ಆವನ ಪ್ರಹಾರಕ್ಕೆ ಜರ್ಝರಿತನಾದ ಸುಗ್ರೀವ. ಬಾರಿಬಾರಿಗೂ ಹಿಂದಿರುಗಿ ನೋಡುತ್ತಿದ್ದ "ಸಹಾಯ ಬರುತ್ತಿದೆಯೇನೋ" ಎಂದು. ಸಹಾಯ ನಿರೀಕ್ಷಿಸಿದಂತೆ ಒದಗಲಿಲ್ಲ. ವಾಲಿ ಯಮನಂತೆ ಮೇಲೆ ಬಿದ್ದು-ಸುಗ್ರೀವನ

ಎದೆಗೆ ಬಲವಾಗಿ ಪ್ರಹಾರಮಾಡಿದ. ಸುಗ್ರೀವನ ಸರ್ವ ಚೈತನ್ಯವೂ ಉಡುಗಿತು. ಇನ್ನರೆಕ್ಷಣ ಅಲ್ಲಿ ನಿಂತರೆ ಪ್ರಾಣವೇ ಹೋಗುವುದು ಎಂಬುದನ್ನು ಮನಗಂಡ ಸುಗ್ರೀವ ಅಲ್ಲಿಂದ ಮತಂಗಾಶ್ರಮಕ್ಕೆ ಓಡಿದ. "ಬದುಕಿದೆ ಈ ಸಲಕ್ಕೆ" ಎನ್ನುತ್ತಾ ವಾಲಿ ಕಿಷ್ಕಿಂಧೆಗೆ ನಡೆದ.

ರಾಮ-ಲಕ್ಷ್ಮಣರು ಸುಗ್ರೀವನನ್ನನುಸರಿಸಿ ಬಂದರು. ರಾಮನನ್ನು ನೋಡಿದ ಸುಗ್ರೀವ "ರಾಮಾ, ಸಾಕು. ನಿನ್ನೊಡನೆ ಸ್ನೇಹ ಮಾಡಿದ್ದಕ್ಕೆ ಸರಿಯಾಗಿ ಮಾಡಿದೆ. ನನ್ನ ಪಾಡಿಗೆ ನಾನಿರುತ್ತಿದ್ದೆ. ನನ್ನನ್ನು ವೃಥಾ ಹೊಡೆತ ತಿನ್ನುವಂತೆ ಮಾಡಿದೆ, ಇರಲಿ, ಇನ್ನು ನನ್ನ ಪಾಡಿಗೆ ನಾನು ಇರುತ್ತೇನೆ. ಉಪಕಾರ ಪಡೆದದ್ದು ಸಾಕು" ಎಂದ. ರಾಮ ಸುಗ್ರೀವನನ್ನು ಸಮಾಧಾನಪಡಿಸುತ್ತಾ "ಸುಗ್ರೀವಾ, ಕೇಳು. ನಾನು ವಾಲಿಯನ್ನು ಕೊಲ್ಲದೆ ಇರಲು ಕಾರಣ ಹೇಳುತ್ತೇನೆ. ನಾನು ವಾಲಿಯನ್ನು ಮೊದಲು ನೋಡಿರಲಿಲ್ಲ. ನೀನು, ವಾಲಿ ಇಬ್ಬರೂ ಹೋರಾಡುತ್ತಿರುವಾಗ ನನಗೆ ವಾಲಿ ಯಾರು ? ಸುಗ್ರೀವ ಯಾರು ? ಎಂದೇ ತಿಳಿಯಲಿಲ್ಲ. ಇಬ್ಬರೂ ಸಮಾನ ಆಕಾರ ಉಳ್ಳವರು, ಸಮಾನ ವೇಷ, ಸಮಾನವಾದ ಕಾಂತಿ, ಒಂದೇ ರೀತಿಯ ಭೂಷಣ, ಒಂದೇ ಮೈಕಟ್ಟು. ಹೋರಾಡುವ ಕ್ರಮವೂ ಒಂದೇ ಯಾವುದರಲ್ಲೂ ಇಬ್ಬರಿಗೂ ವ್ಯತ್ಯಾಸವೇ ಕಾಣಲಿಲ್ಲ. ಒಂದು ವೇಳೆ ತಿಳಿಯದೆ "ವಾಲಿ" ಎಂದುಕೊಂಡು ಬಾಣ ಬಿಟ್ಟು, ಅದು ನಿನ್ನನ್ನು ತಾಗಿ ನೀನು ಪ್ರಾಣ ಬಿಟ್ಟರೆ ನನಗೆ ಮಿತ್ರದ್ರೋಹದ ಪಾತಕ ಬರುತ್ತದಲ್ಲಾ ಎಂದು ಹೆದರಿ ಬಾಣ ಬಿಡದೆ ಇದ್ದೆ. ಈಗ ಎರಡನೆಯ ಸಲ ನೀನು ಹೋಗಿ ವಾಲಿಯನ್ನು ಆಹ್ವಾನಿಸು. ಈಗ ಖಂಡಿತವಾಗಿ ವಾಲಿಯನ್ನು ಕೊಲ್ಲುತ್ತೇನೆ" ಎಂದ. ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಸುಗ್ರೀವನ ಕೊರಳಿಗೆ ಆ ಗಜಪುಷ್ಪದ ಮಾಲೆಯನ್ನು ಹಾಕು, ಆಗ ಚೆನ್ನಾಗಿ ಸುಗ್ರೀವನ ಗುರುತು ಗೊತ್ತಾಗುತ್ತದೆ" ಎಂದ. ಅದರಂತೆ ಲಕ್ಷ್ಮಣ ಸುಗ್ರೀವನ ಕೊರಳಿಗೆ ಗಜಪುಷ್ಪದ ಮಾಲೆ ಹಾಕಿದ.

ರಾಮ ಸುಗ್ರೀವನನ್ನು ಹುರಿದುಂಬಿಸುತ್ತಾ "ನೋಡು, ಈಗ ನೀನು ಹೇಗೆ ಕಾಣುವಿ ? ಕಾಂಚನ ಮಾಲೆಯನ್ನು ಹಾಕಿಕೊಂಡ ಇಂದ್ರನಂತೆ ಶೋಭಿಸುತ್ತಿರುವಿ ಹೋಗು. ವಾಲಿಯನ್ನು ಕರೆ. ನಾನು ಈ ಸಲ ಸತ್ಯವಾಗಿ ವಾಲಿಯನ್ನು ಕೊಲ್ಲುತ್ತೇನೆ ಎಂದ.

ರಾಮನು ಆತನ ಮೈದಡವಿದ. ಅದರಿಂದ ಸುಗ್ರೀವನ ಮೈಮೇಲೆ ಆದ ಗಾಯಗಳೆಲ್ಲ ಮಾಗಿದವು. ಮೊದಲಿಗಿಂತ ಉತ್ಸಾಹ ಇಮ್ಮಡಿ ಆಯಿತು ಸುಗ್ರೀವನಿಗೆ. ಎರಡನೆಯ ಬಾರಿ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಲು ಹೊರಟ.

ಈ ಪ್ರಕರಣದಲ್ಲಿ ಸಾಮಾನ್ಯವಾಗಿ ಒಂದು ಸಂಶಯ ಉಂಟಾಗುತ್ತದೆ. ಇದುವರೆಗೆ ರಾಮನನ್ನು "ಪರತತ್ವ" ಎಂದು ವರ್ಣಿಸಿ ಈಗ ಮಾನುಷನೆಲೆಯಲ್ಲಿ ರಾಮ ಇರುವಂತೆ ಏಕೆ ವರ್ಣಿಸಬೇಕು ? ನಿಜವಾಗಿ ರಾಮನಿಗೆ ಸುಗ್ರೀವನಿಗೂ ವಾಲಿಗೂ ವ್ಯತ್ಯಾಸ ತಿಳಿಯಲಿಲ್ಲವೆ ? ತಿಳಿದಿದ್ದರೆ ವಾಲಿಯನ್ನ ಏಕೆ ಕೊಲ್ಲಲಿಲ್ಲ ಮೊದಲ ಬಾರಿಗೇ ? ಅಲ್ಲದೆ ಲಕ್ಷ್ಮಣನನ್ನು ಸುಗ್ರೀವನ ಕೊರಳಿಗೆ ಗಜಪುಷ್ಪ ಮಾಲೆ ಹಾಕುವಂತೆ ಏಕೆ ಹೇಳಿದ ? ಇದರ ವೈಶಿಷ್ಟ್ಯವೇನು ? ಪಕ್ಕದಲ್ಲೇ ಆಂಜನೇಯ ಇದ್ದನಲ್ಲ. ಅವನನ್ನು ಹಾಕು ಎನ್ನಬಾರದಿತ್ತೆ ? ಇಲ್ಲ, ತಾನೇ ಹಾಕಬಾರದಿತ್ತೆ ? ಲಕ್ಷ್ಮಣನ ಕೈಯಿಂದಲೇ ಏಕೆ ಹಾಕಿಸಿದ ? ಈ ಎಲ್ಲ ಪ್ರಶ್ನೆಗಳೂ ಈ ಸಂದರ್ಭದಲ್ಲಿ ಏಳುತ್ತವೆ.

ಈ ಎಲ್ಲ ಪ್ರಶ್ನೆಗಳಿಗೂ ಸೂಕ್ತವಾದ ಸಮಾಧಾನವನ್ನು ಜ್ಞಾನಿಗಳು ತಿಳಿಸಿದ್ದಾರೆ.

ರಾಮನಿಗೆ ವಾಲಿ-ಸುಗ್ರೀವರಲ್ಲಿ ವ್ಯತ್ಯಾಸ ತಿಳಿಯಲಿಲ್ಲ ಎನ್ನುವುದು ರಾಮನನ್ನು ಮನುಷ್ಯನನ್ನಾಗಿ ಭಾವಿಸುವಾಗ ಮಾತ್ರ.

ದೈವತ್ವದ ನೆಲೆಯಲ್ಲಿ ರಾಮನನ್ನು ನೋಡುವಾಗ ರಾಮನಿಗೆ ವಾಲಿಸುಗ್ರೀವರಲ್ಲಿ ವ್ಯತ್ಯಾಸ ತಿಳಿದೇ ಇತ್ತು. ಹಾಗಾದರೂ ಏಕೆ ವಾಲಿಯನ್ನು ಕೊಲ್ಲಲಿಲ್ಲ ? ಹೀಗನ್ನುವಾಗಲೇ ರಾಮನ ಸಮದರ್ಶತ್ವ ವ್ಯಕ್ತವಾಗುತ್ತದೆ

ಸುಗ್ರೀವನೇನೋ ವಾಲಿಯಬಗ್ಗೆ ಆರೋಪಣೆ ಮಾಡಿದ. ಆದರೆ, ನಿಜವಾಗಿ ವಾಲಿ ಸುಗ್ರೀವನಲ್ಲಿ ಸುಗ್ರೀವ ಹೇಳುವಂತೆ ದ್ವೇಷ ಸಾಧಿಸಿದ್ದನೆ, ಎಂಬುದನ್ನು ಪ್ರತ್ಯಕ್ಷವಾಗಿ ನೋಡಲು ರಾಮ ಆ ಸಂಧಿಯನ್ನು ಉಪಯೋಗಿಸಿಕೊಂಡ. ಅಲ್ಲದೆ, ಬಹುಕಾಲ ಕಳೆದಮೇಲೆ ವಾಲಿಗೆ ಸುಗ್ರೀವನ ಮೇಲಿದ್ದ ವೈರಬುದ್ಧಿ ಹೋಗಿ ಸದ್ಭಾವನೆ ಉಂಟಾಗಬಹುದೋ ಎಂದೂ ನಿರೀಕ್ಷಿಸಿದ್ದ. ಅದಕ್ಕೇ ಮೊದಲು ಅವಕಾಶಕೊಟ್ಟ. ಲಕ್ಷ್ಮಣನಿಂದ ಗಜಪುಷ್ಪಮಾಲೆ ಹಾಕಿಸಿದ್ದೂ ಒಂದು ಕಾರಣಕ್ಕಾಗಿ. ಸುಗ್ರೀವ ಲಕ್ಷ್ಮಣನಿಗೆ ಅಪಚಾರ ಎಸಗಿದ್ದ. ಸಖ್ಯ ಮಾಡಿಕೊಂಡಮೇಲೆ ರಾಮನಿಗೆ ಮಾತ್ರ ಆಸನವನ್ನಿತ್ತು ಲಕ್ಷ್ಮಣನನ್ನು ಅಲಕ್ಷಿಸಿದ್ದ. ಯಾರಲ್ಲಿ ಅಪಚಾರವೆಸಗಿದನೋ ಅವನಿಂದಲೇ ಅನುಗ್ರಹ ಆಗಬೇಕು ಎಂದು ರಾಮ ಲಕ್ಷ್ಮಣನಿಂದಲೇ ಸುಗ್ರೀವನಿಗೆ ಮಾಲೆಯನ್ನು ಹಾಕಿಸಿದ. ವಾಲ್ಮೀಕಿ ಹಲವಾರುಬಾರಿ ಹೇಳಿದಾರೆ. ''ಲಕ್ಷ್ಮಣೋ ಲಕ್ಷ್ಮಿ ಸಂಪನ್ನಃ" ಎಂದು. ಲಕ್ಷ್ಮೀ ಸಂಪನ್ನನಾದ ಲಕ್ಷ್ಮಣನಿಂದ ವಿಜಯ ಮಾಲಿಕೆಯನ್ನು ಮೊದಲು ಹಾಕಿಸಿದ. ಅದರಿಂದಲೇ ಸುಗ್ರೀವನಿಗೆ ರಾಜ್ಯವೂ, ಕಳೆದುಕೊಂಡಿದ್ದ ಪತ್ನೀಲಾಭವೂ ಆಯಿತು.

## ತಾರೆಯ ಬುದ್ಧಿವಾದ

ಕಿಷ್ಕಿಂಧೆಯ ಗುಹಾದ್ವಾರದಲ್ಲಿ ನಿಂತು ಸುಗ್ರೀವ ಸಿಂಹನಾದ ಮಾಡಿದ. ಅವನ ಉತ್ಸಾಹಪೂರ್ಣವಾದ ಮಹತ್ಸಿಂಹನಾದಕ್ಕೆ ಕಿಷ್ಕಿಂಧೆಗೆ ಕಿಷ್ಕಿಂಧೆಯೇ ನಡುಗಿತು. ಕಾಡೆಲ್ಲ ಅವನ ಸಿಂಹನಾದದಿಂದ ಪ್ರತಿಧ್ವನಿಸಿತು. ಸುಗ್ರೀವನ ಭಯಂಕರವಾದ ಆ ಸಿಂಹನಾದವನ್ನು ಕೇಳಿದ ವಾಲಿ. ಆಗ ವಾಲಿ ಅಂತಃಪುರದಲ್ಲಿದ್ದ. ಮದದಿಂದ ಕೂಡಿದ್ದ. ಸುಗ್ರೀವನ ಸಿಂಹನಾದವನ್ನು ಕೇಳಿದ ಒಡನೆಯೇ ಅವನ ಮದವೆಲ್ಲ ಇಳಿಯಿತು. ತಡೆಯಲಾರದಷ್ಟು ಕೋಪ ಬಂದಿತು. ಒಡನೆ ಇಂದ್ರದತ್ತವಾದ ಕಾಂಚನಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು ಹೊರಡಲು ಸಿದ್ಧನಾದ.

ವಾಲಿ ಯುದ್ಧಕ್ಕೆ ಹೊರಡಲು ಸಿದ್ಧನಾಗುತ್ತಿದ್ದ ಸಮಯ ವಾಲಿಯ ಪತ್ನಿ ತಾರೆ ಅವನನ್ನು ತಡೆದಳು ''ನಾಥ, ಈಗ ಹೋಗವುದು ಬೇಡ'' ಎಂದಳು. ವಾಲಿ ಲಕ್ಷಿಸದೆ ಮುಂದೆ ಹೆಜ್ಜೆಯಿಡುತ್ತಿದ್ದುದನ್ನು ಕಂಡ ತಾನೂ ಮುಂದು ವರಿದು ವಾಲಿಯ ಕೈಗಳನ್ನು ಹಿಡಿದುಕೊಂಡು ''ನನ್ನ ಮಾತನ್ನು ಸ್ವಲ್ಪ ಕೇಳ ಬೇಕು. ಈಗ ಸುಗ್ರೀವನೊಡನೆ ಯುದ್ಧ ಮಾಡುವುದು ಸರಿಯಲ್ಲ. ಮೊದಲ ಬಾರಿ ಸುಗ್ರೀವ ಬಂದು ನಿಮ್ಮಿಂದ ತಾಳಲಾಗದಂಥ ಹೊಡೆತವನ್ನು ತಿಂದು ಇದೇ ತಾನೇ ಹೋಗಿದಾನೆ. ಇನ್ನೂ ಆ ಗಾಯ ಆರಿಯೇ ಇಲ್ಲ. ಅಷ್ಟರೊಳಗೇ ಮತ್ತೆ ಬಂದು ಯುದ್ಧಕ್ಕೆ ಕರೆಯುತ್ತಿದಾನೆ. ಇದರಿಂದ ಅವನಿಗೆ ಯಾವುದೋ ''ಪಕ್ಕಬಲ'' ಒದಗಿದೆ ಎಂದು ತಿಳಿಯುತ್ತದೆ. ಅಸಾಮಾನ್ಯವಾದ ಪಕ್ಷಬಲವನ್ನು ಹೊಂದಿರುವುದರಿಂದಲೇ ಈಗ ಸುಗ್ರೀವ ಧೈರ್ಯವಾಗಿ ನಿಮ್ಮನ್ನು ಎರಡನೆಯ ಬಾರಿ ಯುದ್ಧಕ್ಕೆ ಕರೆಯುತ್ತಿದಾನೆ. ಇನ್ನೂ ಒಂದು ವಿಷಯ ಹೇಳುತ್ತೇನೆ ಕೇಳಿ.

ನಿನ್ನೆ ಕುಮಾರ ಅಂಗದ ವನಪ್ರದೇಶದಲ್ಲಿ ಸುತ್ತಾಡಿ ಬಂದ. ಯಾರೋ ದಶರಥನ ಮಕ್ಕಳಂತೆ. ರಾಮಲಕ್ಷ್ಮಣರು ಎಂದು ಅವರ ಹೆಸರಂತೆ. ವಿಶಾಲಾಕ್ಷರೂ, ದೀರ್ಘಬಾಹುಗಳೂ, ಮಹಾಪರಾಕ್ರಮಿಗಳೂ ಆಗಿರುವರಂತೆ. ಅಲ್ಲದೆ ನಿವಾಸ ವೃಕ್ಷಃ ಸಾಧೂನಾಂ ಆಪನ್ನಾನಾಂ

ಪರಾಗತಿಃ । ಸಾಧುಗಳಿಗೆ ಆಶ್ರಯ ಕೊಡುವ ವೃಕ್ಷದಂತೆ ಬೆಳಗುತ್ತಿದ್ದಾರಂತೆ. ಇಂಥ ಪರಾಕ್ರಮಿ ಗಳು ಸುಗ್ರೀವನಿಗೆ ಸ್ನೇಹಿತರಾಗಿದ್ದಾರೆ. ಅವರ ಬೆಂಬಲ ಅವನಿಗಿದೆ. ಆದ್ದರಿಂದ ಹೋಗಬೇಡಿ'' ಎಂದು ಪ್ರಾರ್ಥಿಸಿದಳು ತಾರೆ.

ರಾಮಾಯಣದಲ್ಲಿ ಬರುವ ಅನೇಕ ಮುಖ್ಯವಾದ ಪ್ರಕರಣಗಳಲ್ಲಿ ತಾರೆ ವಾಲಿಗೆ ಬುದ್ಧಿವಾದ ಹೇಳುವ ಪ್ರಕರಣವೂ ಒಂದು. ಮಹರ್ಷಿ ವಾಲ್ಮೀಕಿ ರಾಮನ ಅನಂತ ಕಲ್ಯಾಣಗುಣಗಳನ್ನು ಒಂದು ವಾನರಿಯ ಬಾಯಿಂದ ಹೇಳಿಸಿದ್ದಾನೆ.

ತಾರೆ ಹೇಳುತ್ತಾಳೆ "ರಾಮ ಸಾಧುಗಳಿಗೆಲ್ಲ ಆಶ್ರಯಕೊಡುವಂಥ ಧೀರ. ಆಪನ್ನರ ಪರಮಗತಿ ಅವನು. ಆರ್ತರನ್ನು ಕಾಪಾಡುವುದರಲ್ಲಿ ಸಮರ್ಥ'' ಎಂದು. ''ಸಾಧುರಕ್ಷಣೆ, ದುಷ್ಟಶಿಕ್ಷಣ" ಅವತಾರದ ಉದ್ದೇಶ. ಇದನ್ನೇ ತಾರೆ ವಿವರಿಸುತ್ತಾಳೆ. ಸಾಧುಗಳೆಲ್ಲರಿಗೆ ನಿವಾಸಸ್ಥಾನ ರಾಮ. ಕಷ್ಟಕ್ಕೊಳಗಾಗದವರು ''ಆಪನ್ನರು'' – ಅಂಥ ಕಷ್ಟಕ್ಕೊಳಗಾದವರಿಗೆ ರಾಮನೇ ಪರಮಗತಿ. ಕಷ್ಟಕ್ಕೆ ಒಳಗಾಗುವ ಸ್ಥಿತಿಯಲ್ಲಿರುವವರು ''ಆರ್ತರು''. ಆರ್ತರಾದ ವರು ರಾಮನನ್ನು ಆಶ್ರಯಿಸಿದರೆ ಅವರನ್ನು ರಕ್ಷಿಸಿಯೇ ತೀರುತ್ತಾನೆ. ಅಂಥ ಧರ್ಮಜ್ಞ, ಶರಣಾಗತವತ್ಸಲ, ಸುಗ್ರೀವನಿಗೆ ಸ್ನೇಹಿತನಾಗಿ ಅವನ ಬೆಂಬಲಕ್ಕಿರುವಾಗ ನೀವು ಸುಗ್ರೀವನನ್ನು ಜಯಿಸಲು ಸಾಧ್ಯವಿಲ್ಲ'' ಎನ್ನುತ್ತಾಳೆ ತಾರೆ.

ಮುಂದುವರೆದು ತಾರೆ ವಾಲಿಗೆ ಹೇಳುತ್ತಾಳೆ ; ''ಸುಗ್ರೀವನೊಂದಿಗೆ ವೈರ ಬೇಡ. ಎಷ್ಟಾದರೂ ತಮ್ಮ. ಅವನನ್ನು ಕರೆದು ಅವನಿಗೆ ಯುವರಾಜ ಪಟ್ಟವನ್ನು ಕಟ್ಟಿ. ಅಣ್ಣ-ತಮ್ಮಂದಿರು ಸೌಖ್ಯವಾಗಿ ಇರಿ. ಸುಗ್ರೀವನೊಂದಿಗೆ ಸಮಾಧಾನ ಮಾಡಿಕೊಳ್ಳುವುದರಿಂದ ರಾಮನೂ ನಿಮಗೆ ಸ್ನೇಹಿತನಾಗುತ್ತಾನೆ. ನಾ ಹೇಳುವುದನ್ನು ಕೇಳಿ. ನಾನು ನಿಮ್ಮ ಹಿತವನ್ನೇ ಸದಾ ಬಯಸುವವಳು. ಆದ್ದರಿಂದ ಹೇಳುತ್ತಿದ್ದೇನೆ. ಸುಗ್ರೀವನೊಂದಿಗೆ ದ್ವೇಷವನ್ನು ಬಿಟ್ಟು ಬಿಡಿ. ಸೌಹಾರ್ದದಿಂದ ಅವನನ್ನು ನಡೆಸಿಕೊಳ್ಳಿ. ಇದರಿಂದ ನಾನೂ ಸಧವೆಯಾಗುತ್ತೇನೆ. ಕುಮಾರ ಅಂಗದನೂ ತಂದೆಯನ್ನು ಹೊಂದಿದವನಾಗುತ್ತಾನೆ. ದಯೆಯಿಟ್ಟು ನಾ ಹೇಳುವುದನ್ನು ಕೇಳಿ'' ಎಂದಳು ತಾರೆ.

ತಾರೆಯ ಮಾತುಗಳು ಪಥ್ಯವಾಗಿದ್ದವು. ತುಂಬ ಅರ್ಥವುಳ್ಳದ್ದಾಗಿದ್ದವು. ಅಲ್ಲದೆ, ಲಾಭದಾಯಕವಾದ ಮಾತುಗಳಾಗಿದ್ದವು. ಮೇಲಾಗಿ ವಾಲಿಗೆ ಹಿತವನ್ನುಂಟುಮಾಡಬಹುದಾದಂಥ ಮಾತುಗಳಾಗಿದ್ದುವು.

ಇಷ್ಟಾದರೂ ವಾಲಿಗೆ ತಾರೆಯ ಮಾತುಗಳು ರುಚಿಸಲಿಲ್ಲ. ವಿನಾಶಕಾಲ ಒದಗಿದವನಿಗೆ ಬುದ್ಧಿ ವಿಪರೀತವಾಗುವಂತೆ, ಮರಣೋನ್ಮುಖನಾದವನಿಗೆ ಪಥ್ಯ ರುಚಿಸದಂತೆ, ಕಾಲವಶ ನಾಗುತ್ತಿದ್ದ ವಾಲಿಗೆ ತಾರೆಯ ಮಾತುಗಳು ಇಷ್ಟವಾಗಲಿಲ್ಲ. ಅದರಂತೆ ಅವನು ನಡೆಯಲು ಇಚ್ಛಿಸಲೂ ಇಲ್ಲ.

''ತಾರೇ, ನೀ ವ್ಯರ್ಥವಾಗಿ ಇಲ್ಲದ ಸಂಶಯವನ್ನು ಇಟ್ಟುಕೊಳ್ಳಬೇಡ. ಆ ಸುಗ್ರೀವನ ಕೊಬ್ಬನ್ನು ಈಗ ಪೂರ್ಣವಾಗಿ ಇಳಿಸಿ ಬರುತ್ತೇನೆ. ಇನ್ನೊಮ್ಮೆ ಆ ಸುಗ್ರೀವ ನನ್ನ ಹೆಸರೆತ್ತದಂತೆ ಅವನ ಗರ್ವವನ್ನು ಮುರಿದು ಬರುತ್ತೇನೆ. ನೀ ಏನೋ ಹೇಳಿದೆ. "ರಾಮ ಇಕ್ಷ್ವಾಕು ಕುಲದ ಅರಸುಕುಮಾರ, ಸುಗ್ರೀವನಿಗೆ ಗೆಳೆಯನಾಗಿದ್ದಾನೆ" ಎಂದೆ. ರಾಮ ಸುಗ್ರೀವನಿಗೆ ಸ್ನೇಹಿತನಾದರೆ ನನಗೇನು ? ನಾನು ಸುಗ್ರೀವನೊಡನೆ ಯುದ್ಧಮಾಡಲು ಹೋಗುತ್ತಿದ್ದೇನೆ. ರಾಮ ನನ್ನನ್ನು

ಕೊಲ್ಲುವುದಿಲ್ಲ. ಇನ್ನೊಬ್ಬರೊಡನೆ ಹೋರಾಡುತ್ತಿರುವಾಗ ವೀರನಾದವನು ಕೊಲ್ಲುವುದಿಲ್ಲ. ಆದ್ದರಿಂದ ನೀ ಯೋಚಿಸಬೇಡ. ನನಗೇನೂ ಆಗುವುದಿಲ್ಲ ಧೈರ್ಯವಾಗಿರು'' ಎಂದು ತಾರೆಯ ಭುಜವನ್ನು ನೇವರಿಸಿ ಅವಳನ್ನು ಒಳಗೆ ಕಳುಹಿಸಿ ವಾಲಿ ಹೊರಟ. ತಾರೆ ಅಂತಃಪುರದ ಇತರ ಸ್ತ್ರೀಯರೊಡನೆ ಅಳುತ್ತಾ ಒಳಗೆ ಪ್ರವೇಶಿಸಿದಳು.

## ವಾಲಿವಧೆ

ಭೀಮಕಾಯನಾದ ವಾಲಿ ಅತ್ಯಂತ ರೋಷದಿಂದ ಸುಗ್ರೀವನಿಗೆ ಅಭಿಮುಖನಾದ. ಇಬ್ಬರೂ ಕೆರಳಿದ ಸಿಂಹಗಳಂತೆ, ಮದಿಸಿದ ಆನೆಗಳಂತೆ ಒಬ್ಬರೊಡನೆ ಒಬ್ಬರು ಕಾದಾಡತೊಡಗಿದರು. ಒಬ್ಬರೊಡನೊಬ್ಬರು ಅವರು ಯುದ್ಧಮಾಡುತ್ತಿದ್ದಾಗ, ಅವರ ಪಾದಾಘಾತಕ್ಕೆ ಭೂಮಿ ಅದುರುತ್ತಿತ್ತು. ಕಾಂಚನಮಾಲೆಯಿಂದ ಶೋಭಿತನಾದ ವಾಲಿ, ಗಜಪುಷ್ಪಮಾಲೆಯಿಂದ ಒಬ್ಬರನ್ನೊಬ್ಬರು ಮುಷ್ಟಿಯಿಂದ ಪ್ರಹಾರ ಮಾಡತೊಡಗಿದರು. ಒಮ್ಮೆ ಬಹಳ ಕೋಪದಿಂದ ವಾಲಿ "ಏ ಸುಗ್ರೀವಾ–ಇದೋ ನನ್ನ ಈ ಮುಷ್ಟಿಯ ಪ್ರಹಾರವನ್ನು ತಾಳಿಕೊ. ಇನ್ನು ನೀನು ಜೀವದೊಂದಿಗೆ ಇರಲಾರೆ, ನೋಡು" ಎನ್ನುತ್ತಾ ತನ್ನ ಬಲವಾದ ಮುಷ್ಟಿಯಿಂದ ಸುಗ್ರೀವನನ್ನು ಘಾತಿಸಿದ.

ಆ ಬಲವಾದ ಪ್ರಹಾರಕ್ಕೆ ಸುಗ್ರೀವ ಥರಗುಟ್ಟಿದ. ಮೂಗಿನಿಂದ, ಬಾಯಿಂದ ರಕ್ತ ಹರಿಯಲು ಪ್ರಾರಂಭವಾಯಿತು. ಆದರೂ ಜಗ್ಗದೆ, "ಹೇ ವಾಲೀ, ಇದೋ ಈಗಲೇ ನಿನ್ನನ್ನು ಇದರಿಂದ ಯಮಸದನಕ್ಕಟ್ಟುತ್ತೇನೆ" ಎನ್ನುತ್ತಾ ಅಲ್ಲಿದ್ದ ದೊಡ್ಡ ಸಾಲವೃಕ್ಷವನ್ನು ಕಿತ್ತು ಬಲವಾಗಿ ತಿರುಗಿಸಿ ವಾಲಿಯ ಎದೆಗೆ ಹೊಡೆದ.

ಸುಗ್ರೀವನ ಪ್ರಹಾರವೂ ಸಾಕಷ್ಟು ಬಲವಾಗಿಯೇ ಇತ್ತು. ವಾಲಿಗೆ ಅದರಿಂದ ಬಹಳ ಪೆಟ್ಟಾಯಿತು. ಪೆಟ್ಟಾದುದರಿಂದ ಮತ್ತೂ ಕೋಪಗೊಂಡ. ಕೆಣಕಿದ ಫಣಿಯಂತೆ ಬುಸುಗುಟ್ಟುತ್ತಾ ವಾಲಿ ತನ್ನೆಲ್ಲ ಶಕ್ತಿಯನ್ನೂ ಮುಷ್ಟಿಯಲ್ಲಿ ಕೇಂದ್ರೀಕರಿಸಿದ. ಮುಷ್ಟಿಯನ್ನು ಸುಗ್ರೀವನತ್ತ ತೋರುತ್ತಾ ''ಇಗೋ ಇದರಿಂದ ಒಂದೇ ಪ್ರಹಾರ ಮಾಡುತ್ತೇನೆ. ನಿನ್ನ ಗತಿ ಮುಗಿದಂತೆಯೇ" ಎಂದು ಅತ್ಯಂತ ಬಲಯುತವಾದ ತನ್ನ ದೃಢಮುಷ್ಟಿಯನ್ನು ಮೇಲೆತ್ತಿದ, ಸುಗ್ರೀವನನ್ನು ಹೊಡೆಯಲು.

ಸುಗ್ರೀವ ಭಯದಿಂದ ರಾಮ ಅವಿತಿದ್ದ ಮರವನ್ನೇ ಅಡಿಗಡಿಗೆ ನೋಡುತ್ತಿದ್ದ.

ಘನವಾದ ಮರದ ಮರೆಯಲ್ಲಿದ್ದ ರಾಮ ಸುಗ್ರೀವನ ಸ್ಥಿತಿಯನ್ನು ಗಮನಿಸಿದ. "ಇನ್ನರೆಕ್ಷಣ ಮೌನವಾಗಿದ್ದರೆ ಕಾರ್ಯ ಕೆಡುತ್ತದೆ" ಎಂಬುದು ತಿಳಿಯಿತು.

ಒಡನೆ ತನ್ನ ಧನುಸ್ಸಿಗೆ ನಾಣವನ್ನು ಕಟ್ಟಿ ಟಂಕಾರ ಮಾಡಿದ. ರಾಮನ ಧನುಸ್ಸಿನ ಟಂಕಾರವು ದಶದಿಶೆಗಳನ್ನೂ ವ್ಯಾಪಿಸಿ ಮಾರ್ದನಿಗೊಟ್ಟಿತು. ಸೂರ್ಯನಂತೆ ಹೊಳೆಯುವ ಅಮೋಘವಾದ ಬಾಣವೊಂದನ್ನು ಧನುಸ್ಸಿಗೆ ಹೂಡಿದ. ಆಕರ್ಣಾಂತವಾಗಿ ಸೆಳೆದು ನೇರವಾಗಿ ವಾಲಿಯ ಎದೆಗೆ ಗುರಿಯಿಟ್ಟು ಹೊಡೆದ.

ಹೊಡೆದದ್ದಷ್ಟೇ ಗೊತ್ತು. ಮರುಕ್ಷಣದಲ್ಲಿ ಆ ರಾಮಬಾಣ ವಾಲಿಯ ಎದೆಯನ್ನು ಹೊಕ್ಕಿತು. ಬಾಣ ಎದೆಯಲ್ಲಿ ಹೊಕ್ಕಿದ್ದೇ ತಡ ವಜ್ರಾಘಾತದಿಂದ ಪರ್ವತ ಉರುಳುವಂತೆ ವಾಲಿ ನೆಲದ ಮೇಲೆ ಉರುಳಿದ,

ರಾಮನ ಒಂದೇ ಒಂದು ಬಾಣ ಅಪ್ರತಿಮ ಬಲಾಢ್ಯನಾದ ವಾಲಿಯನ್ನು ಹೊಡೆದು ಕೆಳಗೆ ಉರುಳಿಸಿತು. ಕೆಳಗೆ ತಾನು ಬಿದ್ದದ್ದು ವಾಲಿಗೇ ಆಶ್ಚರ್ಯ!

ಎದೆಯಲ್ಲಿ ನಾಟಿದ್ದ ಬಾಣವನ್ನು ನೋಡಿದ ವಾಲಿ. ಅದರಲ್ಲಿ "ರಾಮ" ಎಂಬ ಅಕ್ಷರಗಳು ಕಂಡುಬಂದವು. "ಹಂ! ರಾಮಬಾಣ; ರಾಮಬಾಣ ನನ್ನನ್ನು ಕೊಂದಿತು!" ಎಂದು ನಿಟ್ಟುಸಿರಿಟ್ಟ ವಾಲಿ. ಬಾಣದಿಂದ ತಾಡಿತನಾಗಿ ವಾಲಿ ಕೆಳಗೆ ಬಿದ್ದುದನ್ನು ನೋಡಿದ ರಾಮ ತಕ್ಷಣ ಧನುಸ್ಸಿನ ನಾಣನ್ನು ಕಳಚಿ ಲಕ್ಷ್ಮಣನೊಡನೆ ವಾಲಿ ಬಿದ್ದಿದ್ದ ಸ್ಥಳಕ್ಕೆ ನಡೆದುಬಂದ. ಧನುಸ್ಸನ್ನು ಕೆಳಗೆ ಊರಿ ಅದರ ತುದಿಯನ್ನು ಗಲ್ಲಕ್ಕೆ ಆತುಕೊಂಡವನಾಗಿ ರಾಮ ವಾಲಿಯ ಇದಿರಿಗೇ ಬಂದು ನಿಂತ.

ಕೆಳಗೆ ಬಿದ್ದಿದ್ದ ವಾಲಿ ರಾಮನನ್ನು ನೋಡಿದ. ಅವನನ್ನು ನೋಡುತ್ತಿದ್ದಂತೆ ವಾಲಿಯ ಮನಸ್ಸಿನಲ್ಲಿ ತುಮುಲ ಎದ್ದಿತು. ರಾಮನನ್ನು ನಿಂದಿಸತೊಡಗಿದ.

''ಇಕ್ಷ್ವಾಕು ಕುಲದಲ್ಲಿ ಜನಿಸಿ ವೀರ ಎನಿಸಿಕೊಂಡ ಹೇ ರಾಮ! ನೀನೇ ಅಲ್ಲವೆ ಮಹಾತ್ಮನಾದ ದಶರಥನ ಹಿರಿಯ ಮಗ! ನೀನೇ ತಾನೇ ಭರತಾಗ್ರಜ, ನಿನ್ನನ್ನೇ ಅಲ್ಲವೇ ಎಲ್ಲರೂ ''ಧರ್ಮಮೂರ್ತಿ" ಎಂದು ಹೊಗಳುವುದು! ನಿನ್ನನ್ನು ಪರಮಧಾರ್ಮಿಕ, ತೇಜಸ್ವಿ, ಕರುಣೆ ಉಳ್ಳವ, ಮಹಾವೀರ. ಅಸಮಪರಾಕ್ರಮಿ, ಸಾಧು ಸಂರಕ್ಷಕ, ಸರ್ವಭೂತದಯಾಪರ, ಜಿತೇಂದ್ರಿಯ, ಯೋಗ್ಯ, ಇಕ್ಷ್ವಾಕು ಕುಲತಿಲಕ ಎಂದೆಲ್ಲ ಹೇಳುತ್ತಾರೆ! ಅಲ್ಲವೆ? ತಾರೆ ನನಗೆ ಎಲ್ಲ ಹೇಳಿದಾಗ ನಾನು "ನಿಜ" ಎಂದು ತಿಳಿದೆ ಆದರೆ, ವಾಸ್ತವದಲ್ಲಿ ನೋಡುವಾಗ ನೀನು ''ಸಾಧು" ಅಲ್ಲ. ಸಾಧುವೇಷಧಾರಿ" ಮಾತ್ರ ಎಂದು ಗೊತ್ತಾಗುತ್ತದೆ. ಬೂದಿ ಮುಚ್ಚಿದ ಕೆಂಡದಂತೆ ಹೊರಗೆ ಮುನಿವೇಷ, ಒಳಗೆ ಕುಟಿಲತೆ ತುಂಬಿದೆ. ಅದಿರಲಿ, ರಾಮಾ! ಇನ್ನೊಬ್ಬರೊಡನೆ ಯುದ್ಧ ಮಾಡುತ್ತಿರುವಾಗ ವೀರ ಎನಿಸಿಕೊಂಡವ ಹೀಗೆ ಹೊಡೆಯಬಹುದೆ? ಅಲ್ಲದೆ, ನಿನ್ನಲ್ಲಿ ನಾ ಏನು ತಪ್ಪು ಮಾಡಿದೆ? ನಿನ್ನ ಗೊಡವೆಗೇ ಬಂದಿಲ್ಲವಲ್ಲ! ನಿನ್ನ ರಾಜ್ಯದ ಪ್ರಜೆ ನಾನಲ್ಲ, ಜಾತಿಯಲ್ಲಿ ವಾನರ ನಾನು. ಆದರೆ ನೀನೋ "ನರಶ್ರೇಷ್ಠ" ಎನಿಸಿಕೊಂಡಿದೀಯೆ? ಎಲ್ಲ ಶಾಸ್ತ್ರಗಳನ್ನೂ ತಿಳಿದಿರುವೆ. ಹಾಗಿದ್ದರೂ ನಿರಪರಾಧಿಯಾದ ನನ್ನನ್ನು ಕೊಂದೆಯಲ್ಲ; ಇದು ಧರ್ಮವೇ?

ನಿನ್ನ ಈ ಕೆಲಸದಿಂದ ಪವಿತ್ರವಾದ ಇಕ್ಷ್ವಾಕು ಕುಲಕ್ಕೇ ಮಸಿ ಬಳಿದಂತೆ ಆಯಿತಲ್ಲ! ನಿರಪರಾಧಿಯನ್ನು ಕೊಂದದ್ದಕ್ಕೆ ನರಕವನ್ನೂ ಹೊಗಬೇಕಾಗುತ್ತದೆ.

ಜಾತಿಯಲ್ಲಿ ನಾನು ವಾನರ. ಎಲ್ಲೋ ಕಾಡಿನಲ್ಲಿ ನನ್ನ ಪಾಡಿಗೆ ನಾನಿದ್ದೆ. ನನ್ನಿಂದ ನಿನಗೇನು ಉಪಯೋಗ? ರಾಜ್ಯ, ಬೇಟೆಗಾಗಿ ಕೊಂದೆ ಎನ್ನುವಿಯಾ? ನಾನು ಕಪಿ. ಕೋತಿಯ ಮಾಂಸ ದೂಷ್ಯವಾದುದು. ಕೋತಿಯ ಚರ್ಮ ಯಾವ ಉಪಯೋಗಕ್ಕೂ ಬರದು. ಉತ್ತಮರಾದ ಮನುಜರು ಕಪಿಯ ಮಾಂಸವನ್ನೇ ಆಗಲಿ, ಚರ್ಮವನ್ನೇ ಆಗಲಿ, ಸ್ಪರ್ಶಿಸುವುದೂ ಇಲ್ಲ. ಹೀಗಿರುವಾಗ, ನನ್ನನ್ನು ಕೊಲ್ಲುವುದರಿಂದ ನಿನಗೇನು ಲಾಭ ಆಯಿತು?

ರಾಮ, ನೀನು ನಿನ್ನ ಹೆಂಡತಿ ಸೀತೆಯನ್ನು ಪಡೆಯುವ ಸಲುವಾಗಿ ಸುಗ್ರೀವನೊಡನೆ ಸಖ್ಯ ಬೆಳೆಸಿದೆ ಎಂದು ಕೇಳಿದೆ. ಇದರಿಂದ ನನಗೇ ನಗು ಬರುತ್ತಿದೆ. ಅಲ್ಪ ವೀರ್ಯನಾದ ಸುಗ್ರೀವನನ್ನು ನೀನು ಸ್ನೇಹ ಮಾಡಿಕೊಳ್ಳುವ ಮೊದಲು ನನಗೆ ಒಂದು ಮಾತು ಹೇಳಿದ್ದರೆ ಸಾಕಿತ್ತು. ಆ ರಾವಣನನ್ನು ಯುದ್ಧಮಾಡದೆ ಹಾಗೆ ಕತ್ತಿಗೆ ಹಗ್ಗ ಕಟ್ಟಿ "ದರದರ" ಎಳೆದುತಂದು ನಿನ್ನಕಾಲಿನಡಿ

ಯಲ್ಲಿ ಹಾಕುತ್ತಿದ್ದೆ. ಹೀಗಿರುವಾಗ, ಬಲಾಢ್ಯನಾದ, ನಿನಗೆ ನೇರವಾಗಿ ಅಪರಾಧ ಒಂದನ್ನೂ ನಾ ಮಾಡದೆ ಇರುವಾಗ ನನ್ನನ್ನು ಹೇಗೆ ಕೊಂದೆ? ಇದಕ್ಕೆಲ್ಲ ಸೂಕ್ತವಾದ ಸಮಾಧಾನ ಹೇಳು. ನೀನು ಶೋರಿಕೆಯ ವೇಷ ಧರಿಸಿದ ಕುಟಿಲಕರ್ಮಿ ಎಂದು ನನಗೆ ಇದೀಗ ತಿಳಿಯಿತು, ಹೇಳು ಇದಕ್ಕೆ ಸಮಾಧಾನವನ್ನು" ಎಂದ ವಾಲಿ.

ವಾಲಿ ಹೇಳುತ್ತಿದ್ದ ಮಾತುಗಳನ್ನೆಲ್ಲ ಆಲಿಸಿದ ರಾಮ. ಆಮೇಲೆ ಧನುಸ್ಸನ್ನು ಊರಿನಿಂತಿದ್ದ ಆ ರಾಮ ನಿಧಾನವಾಗಿ ವಾಲಿಯ ಆರೋಪಗಳಿಗೆಲ್ಲ ಉತ್ತರ ಕೊಡ ತೊಡಗಿದ.

''ವಾನರನೇ! ನೀನು ಅಲ್ಪಬುದ್ಧಿಯಿಂದ, ಚಪಲತೆಯಿಂದ ಮನಸ್ಸಿಗೆ ಬಂದಂತೆ ನನ್ನನ್ನು ನಿಂದಿಸುತ್ತಿರುವೆ. ಧರ್ಮದ ಬಗ್ಗೆ ಏನೇನೋ ಹರಟುತ್ತಿರುವೆ. ಧರ್ಮಸೂಕ್ಷ್ಮ ಅತ್ಯಂತ ಗಹನವಾದುದು. ಅದು ಎಲ್ಲರಿಗೂ ನಿಲುಕುವಂಥದಲ್ಲ. ಅಂದಮೇಲೆ ಚಾಪಲ್ಯವುಳ್ಳ, ನಿನ್ನಂಥ ವಾನರನಿಗೆ ಅದರ ಬಗ್ಗೆ ಸರಿಯಾದ ಅರಿವು ಮೂಡಲು ಸಾಧ್ಯವೆ? ಹೇಳುತ್ತೇನೆ ಕೇಳು, ವಾಲಿ, ನೀ ಕೇಳಿದೆ. ''ನನ್ನನ್ನು ಏಕೆ ಕೊಂದೆ? ನಾ ಏನು ನಿನ್ನ ಪ್ರಜೆಯೆ" ಎಂದು. "ಇಕ್ಷ್ವಾಕೂಣಾಂ ಇಯಂ ಭೂಮಿಃ ಸಶೈಲ ವನಕಾನನಾ"–ಸಮುದ್ರದ ಪರ್ಯಂತವಾಗಿ ಇರುವ ಭೂಮಿ, ಅದರಲ್ಲಿರುವ ಪರ್ವತ, ವನ, ಅರಣ್ಯ, ಬೆಟ್ಟಗುಡ್ಡ–ಈ ಎಲ್ಲ ಪ್ರದೇಶ ಇಕ್ಷ್ವಾಕುವಂಶಕ್ಕೇ ಸೇರಿದೆ. ಈ ವಿಸ್ತಾರವಾದ ಭೂಮಂಡಲವನ್ನು ಮಹಾತ್ಮನಾದ ಭರತ ಪರಿಪಾಲಿಸುತ್ತಿದಾನೆ. ನಾನು ಭರತನ ಆಜ್ಞೆಯಂತೆ ಕಾಡಿನಲ್ಲಿ ಸಂಚರಿಸುತ್ತಿದೇನೆ. ಹಿಂದೆ ಚಿತ್ರಕೂಟದಲ್ಲಿ ಒಪ್ಪಂದ ಮಾಡಿಕೊಂಡಂತೆ ಅರಣ್ಯದ ಮೃಗ–ಪಕ್ಷಿ, ಮರಗಳಿಗೆಲ್ಲ ನಾ ಒಡೆಯ. ನಗರದ ಮನುಷ್ಯರಿಗೆಲ್ಲ ಭರತ ಒಡೆಯನಾಗಿದಾನೆ. ಅದರಂತೆ ಈ ಭೂಮಿಯಲ್ಲಿರುವ ಪಶು ಪಕ್ಷಿಮೃಗಗಳು ಮಾಡುವ ತಪ್ಪಿಗೆ ತಕ್ಕ ದಂಡನೆಯನ್ನು ಕೊಡುವುದು ನನ್ನ ಕರ್ತವ್ಯ. ನಾ ಏನು ತಪ್ಪು ಮಾಡಿದೆ? ಎಂದೆ ಅಲ್ಲವೆ? ವಾಲಿ, ನಿನ್ನ ತಪ್ಪು ಏನು? ಹೇಳುತ್ತೇನೆ ಕೇಳು.

ಮನುಧರ್ಮಶಾಸ್ತ್ರದ ರೀತ್ಯಾ ತಂದೆ, ಹಿರಿಯಣ್ಣ, ವಿದ್ಯೆ ಕಲಿಸಿದ ಗುರು - ಈ ಮೂವರೂ ಪಿತೃಸಮಾನರು. ಅದರಂತೆಯೇ ತಾಯಿ, ಅಣ್ಣನ ಹೆಂಡತಿ, ಗುರುವಿನ ಪತ್ನಿ–ಈ ಮೂವರೂ ಮಾತೃ ಸಮಾನರು.

ಹಾಗೆಯೇ ತಮ್ಮ, ಹೊಟ್ಟೆಯಲ್ಲಿ ಹುಟ್ಟಿದ ಮಗು, ಶಿಷ್ಯ–ಈ ಮೂವರೂ ಪುತ್ರಸಮಾನರು.

ತಮ್ಮನ ಹೆಂಡತಿ, ಪುತ್ರವಧು, ಶಿಷ್ಯನ ಪತ್ನಿ–ಈ ಮೂವರೂ ಪುತ್ರಿ ಸಮಾನರು.

ಹೀಗಿರುವಾಗ, ನೀನು ನಿನ್ನ ತಮ್ಮನ ಹೆಂಡತಿಯನ್ನು ಸೀಕರಿಸಿದೆ. ಅದೂ ನಿನ್ನ ತಮ್ಮ ಜೀವಂತನಾಗಿರುವಾಗ. ಈ ಅಪರಾಧಕ್ಕೆ ಮರಣದಂಡನೆಯೇ ಯೋಗ್ಯವಾದುದು. ಅದಕ್ಕಾಗಿಯೇ ನಿನ್ನನ್ನು ನಾ ಕೊಂದೆ.

ಮನು ಹೇಳುವ ಪ್ರಕಾರ ಅರಸನಾದವನು ತಪ್ಪಿತಸ್ಥನಿಗೆ ಅವನ ತಪ್ಪಿಗೆ ಸರಿಯಾದ ದಂಡನೆಯನ್ನು ಕೊಡಬೇಕು. ಹಾಗೆ ಕೊಟ್ಟರೆ ತಪ್ಪಿತಸ್ಥನೂ ನಿಷ್ಪಾಪನಾಗಿ ಉತ್ತಮಗತಿಯನ್ನು ಹೊಂದುತ್ತಾನೆ. ಅರಸನೂ ತನ್ನ ಕರ್ತವ್ಯವನ್ನು ನೆರವೇರಿಸಿದವನಾಗುತ್ತಾನೆ. ಹಾಗೆ ತಪ್ಪು ಮಾಡಿದವರಿಗೆ ಶಿಕ್ಷೆ ಕೊಡದೆ ಹಾಗೆಯೇ ಬಿಟ್ಟರೆ ರಾಜನಾದವನಿಗೆ ಆ ದೋಷ ಬರುತ್ತದೆ. ನೀನು ಪುತ್ರೀಸಮಾನಳಾದ ನಿನ್ನ ತಮ್ಮನ ಹೆಂಡತಿಯನ್ನು ನಿನ್ನ ತಮ್ಮ ಜೀವಂತನಾಗಿರುವಾಗಲೇ ಕಾಮಿಸಿದೆ.

"ವಾನರ ನಾನು, ನನಗೇಕೆ ಧರ್ಮ" ಎನ್ನುವಿ. ಆದರೆ, ದಿನನಿತ್ಯದಲ್ಲಿ ಸಂಧ್ಯಾವಂದನೆ ಮುಂತಾದ ಕಾರ್ಯ ಮಾಡುವ ನಿನಗೆ ಉಳಿದ ಧರ್ಮ ಅನ್ವಯಿಸುವುದಿಲ್ಲವೆ?

ಧರ್ಮ. ಅರ್ಥ, ಕಾಮ, ಈ ಪುರುಷಾರ್ಥಗಳಿಗೆಲ್ಲ ಧರ್ಮವೇ ಮೂಲವಾಗಿದೆ. ಇದನ್ನು ನೀ ಅರಿಯದೆ ಕೇವಲ ಕಾಮವನ್ನೇ ಆಶಿಸಿದೆ. ಆದರಿಂದ ಘೋರವಾದ ಕರ್ಮವನ್ನು ಮಾಡಿದೆ. ಆ ತಪ್ಪಿಗೆ ಮರಣದಂಡನೆಯೇ ಸರಿಯಾದುದು. ಆದರಿಂದಲೇ ನಾನು ನಿನ್ನನ್ನು ಕೊಂದೆ. ಅಲ್ಲದೆ ನೀನು ಕೇಳಿದೆ "ಮರೆಯಲ್ಲಿ ನನ್ನನ್ನು ಹೊಡೆದೆ, ನನ್ನ ಮಾಂಸ ನಿನಗೆ ಉಪಯೋಗವಿಲ್ಲ. ಹಾಗಿದ್ದರೂ ಏಕೆ ಕೊಂದೆ ?" ಎಂದು.

ರಾಜರು ಆಗಾಗ ಬೇಟೆಯಾಡುತ್ತಾರೆ. ಕ್ಷತ್ರಿಯನಿಗೆ ಬೇಟೆಯಾಡುವುದು ಧರ್ಮಕ್ಕೆ ವಿಹಿತ ವಾಗಿದೆ. ಮಾಂಸಕ್ಕಾಗಿಯೇ ಯಾವಾಗಲೂ ಬೇಟೆಯಾಡುವುದಿಲ್ಲ ಕ್ಷತ್ರಿಯರು. ಅಲ್ಲದೆ ಬೇಟೆ ಯಾಡುವಾಗ ಮರೆಯಲ್ಲಿದ್ದೇ ಗುರಿಯಿಡುತ್ತಾರೆ. ಇದು ಕ್ಷತ್ರಿಯ ಧರ್ಮ. ನೀನು ಶಾಖಾಮೃಗ. ಬೇಟೆಯಾಡಬಹುದು, ನಿನ್ನನ್ನು ಹೊಡೆದೆ. ಅರ್ಥವಾಯಿತೆ ವಾಲಿ? ನಿನ್ನ ತಪ್ಪಿನ ಅರಿವಾಯಿತೆ? ಈಗ ನಿನ್ನ ಪ್ರಶ್ನೆಗೆ ನಾನು ಉತ್ತರ ಕೊಟ್ಟಂತಾಯಿತು ಅಲ್ಲವೆ ?" ಎಂದ ರಾಮ.

ರಾಮ ವಾಲಿಯನ್ನು ಕೊಂದದ್ದಕ್ಕೆ ಹಲವಾರು ಕಾರಣಗಳನ್ನು ಜ್ಞಾನಿಗಳು ವಿವರಿಸುತ್ತಾರೆ.

ವಾಲಿ ರಾಮ ಕಾರ್ಯಕ್ಕೆ ಅನುಕೂಲ ಮಾಡಿಕೊಡುವ ಸಲುವಾಗಿ ಹುಟ್ಟಿದ. ಇಂದ್ರಾಂಶನೇ ವಾಲಿ. ಇಂದ್ರಾದಿ ದೇವತೆಗಳೇ ನಾರಾಯಣನನ್ನು ಪ್ರಾರ್ಥಿಸಿ ರಾವಣನನ್ನು ಕೊಲ್ಲುವಂತೆ ಕೇಳಿ ಕೊಂಡರು.

ಅದರಂತೆ ನಾರಾಯಣನೇ ರಾಮನಾದ. ರಾಮನಿಗೆ ಸಹಾಯಮಾಡಲು ಬ್ರಹ್ಮನ ಆಜ್ಞೆ ಯಂತೆ ಎಲ್ಲ ದೇವತೆಗಳೂ ತಮ್ಮ ತಮ್ಮ ಅಂಶದಿಂದ ವಾನರರನ್ನು ಸೃಷ್ಟಿಸಿದರು. ಅದರಂತೆ ಇಂದ್ರ ತನ್ನ ಅಂಶದಿಂದ ವಾಲಿಯನ್ನು ಸೃಷ್ಟಿಸಿದ.

ವಾಲಿ ತನ್ನ ಬಲವನ್ನು ರಾಮಸೇವೆಗೆ ಮೀಸಲಿಡಬೇಕಿತ್ತು, ಆದರೆ, ಹಾಗೆ ಮಾಡಲಿಲ್ಲ ಮತ್ತನಾದ ವಾಲಿ. ಅದಕ್ಕೆ ಪ್ರತಿಯಾಗಿ ಶತ್ರುವಾದ ರಾವಣನೊಂದಿಗೇ ಅಗ್ನಿಸಾಕ್ಷಿಯಾಗಿ ಸ್ನೇಹ ಮಾಡಿಕೊಂಡ. ದೇವಕಾರ್ಯಕ್ಕೆ ಸಹಾಯ ಮಾಡುವುದಕ್ಕೆ ಬದಲು ದೇವಕಾರ್‍ಯಕ್ಕೆ ಪ್ರತಿಕೂಲ ನಾದ. ಆದರಿಂದಲೇ ರಾಮ ಮೊದಲು ವಾಲಿಗೆ ಶಿಕ್ಷೆ ವಿಧಿಸಿದ.

ರಾಮನ ಮಧುರವಾದ. ಧರ್ಮದಿಂದ ಕೂಡಿದ. ಸತ್ವಯುಕ್ತವಾದ ಮಾತುಗಳನ್ನು ಕೇಳಿದ ವಾಲಿ. ಅವನ ಮೋಹ ಕಳಚಿತು. ಅದುವರೆಗೆ ಅವನಲ್ಲಿ ಮನೆಮಾಡಿಕೊಂಡಿದ್ದ ಮದ, ಅಹಂ-ಕಾರ, ದರ್ಪಗಳು ಆಗ ಮಾಯವಾದವು.

ಭಗವತ್‌ಸಾಕ್ಷಾತ್ಕಾರ ಉಂಟಾದಾಗ ಅಜ್ಞಾನ ತಾನಾಗಿಯೇ ದೂರವಾಗುವಂತೆ ರಾಮನ ಧರ್ಮಯುಕ್ತವಾದ ಮಾತುಗಳನ್ನು ಕೇಳಿದ ವಾಲಿಯ ಅಜ್ಞಾನ ಕಳೆಯಿತು. ತನ್ನ ಎರಡೂ ಕೈಗಳನ್ನು ಜೋಡಿಸಿ ರಾಮನಿಗೆ ನಮಸ್ಕರಿಸಿದ.

"ರಾಮಾ, ನೀ ಇದುವರೆಗೆ ಹೇಳಿದ್ದೆಲ್ಲ ಸರಿ. ನೀ ಹೇಳಿದಂತೆ ನನ್ನ ಅಪರಾಧಕ್ಕೆ ಸರಿಯಾದ ಶಿಕ್ಷೆ ಕೊಟ್ಟೆ ನೀನು. ಬಾಣದ ಹೊಡೆತಕ್ಕೆ ಸಿಕ್ಕಿದ ನಾನು ವ್ಯರ್ಥವಾಗಿ ಧರ್ಮಾತ್ಮನಾದ ನಿನ್ನನ್ನು ನಿಂದಿಸಿದೆ. ನನ್ನನ್ನು ಕ್ಷಮಿಸಿಬಿಡು. ಧರ್ಮವತ್ಸಲಾ, ಕಕುತ್ಸ್ಥಕುಲತಿಲಕ, ರಾಮಾ, ನಿನ್ನಲ್ಲಿ ಒಂದೇ ಪ್ರಾರ್ಥನೆ. ನನಗೆ ಅಂಗದ ಒಬ್ಬನೇ ಮಗ. ಬಹಳ ಮುದ್ದಿನಿಂದ ಬೆಳೆಸಿದ್ದೇನೆ. ಅವನನ್ನು ನೀ ನೋಡಿಕೊಳ್ಳಬೇಕು. ಅವನನ್ನು ರಕ್ಷಿಸುವ ಭಾರ ನಿನ್ನದು" ಎಂದ.

ರಾಮ ಅವನಿಗೆ ಆಶ್ವಾಸನೆಯನ್ನಿತ್ತ. ನನ್ನ ತಮ್ಮ ಲಕ್ಷ್ಮಣನಂತೆ, ಭರತನಂತೆ, ಅಂಗದ ನನಗೆ. ನೀನು ಯೋಚಿಸಬೇಡ" ಎಂದ.

ರಾಮಬಾಣದಿಂದ ಪೀಡಿತನಾಗಿ ವಾಲಿ ಬಹಳ ಸಂಕಟಪಡುತ್ತಿದ್ದ. ನೋವಿನಿಂದ ಹಾಗೇ ಒರಗಿದ.

ವಾಲಿ ಕೆಳಗೆ ಬಿದ್ದುದನ್ನು ಕೇಳಿದ ತಾರೆ ಅಲ್ಲಿಗೆ ಓಡಿಬಂದಳು. ಕೆಳಗೆ ಬಿದ್ದ ವಾಲಿಯ ಮೇಲೆ ತಾನೂ ಬಿದ್ದು ಪ್ರಲಾಪಿಸತೊಡಗಿದಳು. "ನಾ ಮೊದಲೇ ಹೇಳಿದೆ. ಬೇಡ ಯುದ್ಧಕ್ಕೆ ಹೋಗುವುದು ಎಂದೆ. ನೀವು ಕೇಳಲಿಲ್ಲ. ಸಮಸ್ತ ದೇವತೆಗಳನ್ನೂ ನಡುಗಿಸುವಂಥ ಪರಾಕ್ರಮಿಯಾದ ನೀವು ಇಂದು ಒಂದೇ ಬಾಣದಿಂದ ತಾಡಿತರಾಗಿ ಈ ಧೂಳಿನಲ್ಲಿ ಬಿದ್ದಿರುವಿರಿ. ಅಯ್ಯೋ ನಿಮಗತ್ಯಂತ ಪ್ರಿಯಳಾದ ನಾನು ಬಂದು ನಿಮ್ಮನ್ನು ಕೂಗುತ್ತಿದ್ದರೂ ನೀವು ಒಂದು ಮಾತನ್ನೂ ಆಡುವುದಿಲ್ಲವಲ್ಲ. "ಅಂಗದ" ಎಂದರೆ ನಿಮಗೆಷ್ಟು ಹಿಗ್ಗು ! ಆ ನಿಮ್ಮ ಏಕಮಾತ್ರಪುತ್ರ ಅಂಗದ ಈಗ ಬಾಡಿದ ಮುಖವುಳ್ಳವನಾಗಿ ಕಣ್ಣೀರನ್ನು ಸುರಿಸುತ್ತಾ ನಿಂತಿದಾನೆ ನೋಡಿ. ಅವನನ್ನಾದರೂ ಸಂತೈಸುವುದಿಲ್ಲವೆ ?

ನಿಜವಾಗಿ ನನ್ನ ಎದೆ ವಜ್ರದಿಂದ ನಿರ್ಮಿತವಾಗಿರಬೇಕು. ಅದಕ್ಕೇ ನನ್ನ ಪ್ರಾಣಕ್ಕಿಂತ ಪ್ರಿಯನಾದ ಪತಿ ಕೆಳಗೆ ಬಿದ್ದಿರುವಾಗಲೂ ನನ್ನ ಎದೆ ಒಡೆದು ಚೂರಾಗದೆ ಹಾಗೆಯೇ ಇದೆ. ಈ ದುಃಖವನ್ನು ಸಹಿಸುವುದು ನನ್ನಿಂದ ಆಗದು" ಎಂದು ಅಳಲಾರಂಭಿಸಿದಳು.

ಸ್ವಲ್ಪ ಹೊತ್ತಾದ ಮೇಲೆ ವಾಲಿ ಮೆಲ್ಲಗೆ ಕಣ್ತೆರೆದ. ರಾಮನನ್ನು ಕುರಿತು "ರಾಮಾ, ಮತ್ತೊಮ್ಮೆ ಬೇಡುತ್ತೇನೆ. ಮುದ್ದು ಅಂಗದನನ್ನೂ ಸುಗ್ರೀವನನ್ನೂ ನೀನೇ ನೋಡಿಕೊ" ಎಂದು ಸುಗ್ರೀವನ ಕಡೆಗೆ ತಿರುಗಿದ. "ಸುಗ್ರೀವ, ಯಾವುದೋ ಪಾಪವಶದಿಂದ ನಿನ್ನೊಡನೆ ಸೌಹಾರ್ದದಿಂದ ಬಾಳುವಂತಾಗಲಿಲ್ಲ. ಆದದ್ದಾಯಿತು ಇನ್ನು ಯೋಚಿಸುವುದರಲ್ಲಿ ಅರ್ಥವಿಲ್ಲ. ನೀನು ರಾಜನಾಗು. ನೀನು ರಾಜನಾದ ಮೇಲೆ ಎಚ್ಚರಿಕೆಯಿಂದಿರು. ಈ ರಾಜಕುಮಾರರಲ್ಲಿ ಜಾಗರೂಕನಾಗಿ ನಡೆದುಕೊ. ಇವರು ಮಹಾಪರಾಕ್ರಮಿಗಳು. ದೇವತುಲ್ಯತೇಜಸ್ವಿಗಳು. ಇವರ ಕಾರ್ಯವನ್ನು ಮೊದಲು ನಡೆಸಿಕೊಡು.

ಸುಗ್ರೀವಾ, ಇಗೋ ನನ್ನ ಕೊರಳಲ್ಲಿರುವ ಈ ಕಾಂಚನಮಾಲೆ ವಿಜಯಪ್ರದವಾದುದು. ನಿನಗೆ ಮಂಗಳವಾಗಲಿ. ನನ್ನ ಪ್ರಾಣ ಹೋಗುವ ಮೊದಲು ನಿನ್ನ ಕೊರಳಿಗೆ ಹಾಕಿಬಿಡುತ್ತೇನೆ. ಹತ್ತಿರ ಬಾ. ಈ ಮಾಲೆಯನ್ನು ಹಾಕಿಕೊ ಎಂದು ತಾನು ಧರಿಸಿದ್ದ ಕಾಂಚನಮಾಲೆಯನ್ನು ಸುಗ್ರೀವನಿಗೆ ಕೊಟ್ಟ.

ಬಳಿಯಲ್ಲೇ ಕಣ್ಣೀರ್ಗರೆಯುತ್ತಾ ನಿಂತಿದ್ದ ಅಂಗದ. "ಮಗೂ ಅಂಗದ, ಇನ್ನುಮುಂದೆ ನೀ ಎಚ್ಚರದಿಂದ ನಡೆದುಕೊಳ್ಳಬೇಕು. ಇದುವರೆಗೆ ನನ್ನೊಡನೆ ಬಾಲ್ಯ ಚಾಪಲ್ಯದಿಂದ ನಡೆದುಕೊಂಡಂತೆ ಅಲ್ಲ; ತಿಳಿಯಿತೇ. ನಿನ್ನ ಚಿಕ್ಕಪ್ಪ ಸುಗ್ರೀವನನ್ನು ಅನುವರ್ತಿಸು. ರಾಮಲಕ್ಷ್ಮಣರಿಗೆ ದಾಸನಾಗು. ಯಾರಲ್ಲೂ ಹೆಚ್ಚು ಪ್ರೇಮವನ್ನೂ, ಸಲಿಗೆಯನ್ನೂ ಬೆಳಸಿಕೊಳ್ಳಬೇಡ. ಹಾಗೆಂದು ಪ್ರೇಮ ತೋರಿಸದೆಯೂ ಇರಬೇಡ. ಅತಿ ಅಲ್ಲದ ಮಧ್ಯಮ ಮಾರ್ಗವನ್ನು ಅವಲಂಬಿಸು. ನಿನಗೆ ಮಂಗಳವಾಗಲಿ." ಎನ್ನುತ್ತಿದ್ದಂತೆ ನೋವಿನಿಂದ ಹಾ ! ಎಂದ ವಾಲಿ. ಆ ನಿಟ್ಟುಸಿರಿನೊಡನೆ ಅವನ ಪ್ರಾಣವೂ ಹಾರಿಹೋಯಿತು.

ವಾಲಿಯ ದೇಹ ನಿಶ್ಚೇಷ್ಟಿತವಾದ ಕೂಡಲೇ ತಾರೆ, ಅಂಗದ, ಸುಗ್ರೀವ, ಸಮಸ್ತ ವಾನರರೂ ಅಳಲಾರಂಭಿಸಿದರು. ಸುಗ್ರೀವ ರಾಮನನ್ನು ಕುರಿತು "ರಾಮಾ, ವಾಲಿಯನ್ನು ಕೊಲ್ಲುವವರೆಗೆ ಅದೇನೋ ದ್ವೇಷ ಇತ್ತು. ಈಗ, ಅದೆಲ್ಲ ಹೊರಟುಹೋಯಿತು. ಅತ್ಯಂತ ದುಃಖಿತನಾಗಿದೇನೆ ನಾನು. ಅಣ್ಣನ ಸಾವಿಗೆ ನಾನೇ ಕಾರಣನಾದೆ, ಅಣ್ಣನನ್ನು ಕೊಲ್ಲಿಸಿದೆ ಎಂಬ ಅಪಕೀರ್ತಿಗೆ ಆಚಂದ್ರಾರ್ಕವಾಗಿ ಭಾಜನನಾದೆ. ನನಗಿನ್ನು ರಾಜ್ಯವೂ ಬೇಡ, ಕೋಶವೂ ಬೇಡ. ನಾನೂ ವಾಲಿಯೊಡನೆಯೇ ಬೆಂಕಿಯಲ್ಲಿ ಬಿದ್ದು ಸಾಯುತ್ತೇನೆ. ಅನುಮತಿಕೊಡು" ಎಂದು ಗೋಳಿಟ್ಟ ಸುಗ್ರೀವ.

ಪತಿಯನ್ನು ಕಳೆದುಕೊಂಡ ಚಂದ್ರಮುಖಿಯಾದ ತಾರೆ ವಾಲಿಯ ದೇಹವನ್ನು ತೊಡೆಯ ಮೇಲಿರಿಸಿಕೊಂಡು ಅಳತೊಡಗಿದಳು. "ಅತ್ಯಂತ ಪರಾಕ್ರಮಿಯಾದ ಪತಿಯನ್ನು ಕಳೆದುಕೊಂಡ ಮೇಲೆ ನನಗಿನ್ನೇನು ಉಳಿದಿದೆ. ವೀರನಾದ ಪುತ್ರನಿದ್ದರೂ, ಸಕಲ ಭೋಗಭಾಗ್ಯಗಳಿದ್ದರೂ ಪತಿಯನ್ನು ಕಳೆದುಕೊಂಡವಳನ್ನು "ವಿಧವೆ" ಎನ್ನುತ್ತಾರೆ ಎಲ್ಲರೂ. ಇನ್ನು ನನ್ನ ಗತಿಯೇನು ? ಅಂಗದಾ ! ನೋಡು ಅಸಹಾಯಶೂರನೆನಿಸಿದ ನಿನ್ನ ತಂದೆ ಹೇಗೆ ಕೆಳಗೆ ಬಿದ್ದಿದ್ದಾನೆ. ನಮಸ್ಕರಿಸು ನಿನ್ನ ತಂದೆಗೆ ಎಂದಳು.

ಅದರಂತೆ ಅಂಗದ ವಾಲಿಗೆ ನಮಸ್ಕರಿಸಿದ. ಆಗ ತಾರೆ, "ಅಂಗದ ನಿಮಗೆ ಪ್ರೀತಿಪಾತ್ರನಾದ ಮಗು. ಯಾವಾಗಲೂ ಅವನು ನಮಸ್ಕರಿಸುತ್ತಿದ್ದಾಗ "ಚಿರಂಜೀವಿಯಾಗು ಕಂದ" ಎಂದು ಆಶೀರ್ವದಿಸುತ್ತಿದ್ದ ನೀವು ಈಗೇಕೆ ಹಾಗೆ ಆಶೀರ್ವದಿಸುವುದಿಲ್ಲ? ಒಂದೇ ಒಂದು ಮಾತನ್ನಾದರೂ ಆಡುವುದಿಲ್ಲವೆ ಅಂಗದನೊಡನೆ" ಎಂದು ಪ್ರಲಾಪಿಸಿ, ರಾಮನ ಕಡೆಗೆ ತಿರುಗಿದಳು ತಾರೆ. ರಾಮನನ್ನು ಕುರಿತು ಹೇಳಿದಳು.

**ತ್ವಮಪ್ರಮೇಯಶ್ಚ ದುರಾಸದಶ್ಚ ।**
**ಜಿತೇಂದ್ರಿಯಶ್ಚೋತ್ತಮ ಧಾರ್ಮಿಕಶ್ಚ ॥**
**ಅಕ್ಷೀಣ ಕೀರ್ತಿಶ್ಚ ವಿಚಕ್ಷಣಶ್ಚ ।**
**ಕ್ಷಿತಿಕ್ಷಮಾವಾನ್ ಕ್ಷತಜೋಪಮಾಕ್ಷಃ ॥**

ತನ್ನ ಪತಿಯನ್ನು ಕೊಂದ ರಾಮನನ್ನು ಕುರಿತು ತಾರೆ ಹೇಳುವ ಈ ಮಾತುಗಳು ರಾಮನ ಗುಣಕ್ಕೆ ಒರೆಗಲ್ಲಿನಂತಿವೆ. ವಾಲಿಯನ್ನು ಕೊಂದ ರಾಮನನ್ನು ತಾರೆ ನಿಂದಿಸಬೇಕು ಎಂದು ರಾಮನ ಬಳಿಗೆ ಬಂದಳು. ಆದರೆ, ರಾಮನನ್ನು ನೋಡಿದಾಗ ಅವಳಿಗರಿವಿಲ್ಲದಂತೆಯೇ ರಾಮನ ಪ್ರಭಾವಕ್ಕೆ ಒಳಗಾದಳು. ಅದಲ್ಲವೆ ರಾಮನ ಹಿರಿಮೆ ! ನಿಂದಿಸಲು ಬಂದ ತಾರೆ ರಾಮನ ಗುಣಗಳನ್ನು ಪ್ರಶಂಸಿಸುತ್ತಾಳೆ, ಅದೂ ಎಂಥ ಸಮಯದಲ್ಲಿ! ಪತಿ ರಾಮನ ಬಾಣದಿಂದ ಪೀಡಿತನಾಗಿ ಪ್ರಾಣ ಬಿಟ್ಟಿದ್ದಾನೆ. ಅವನ ದೇಹ ಅಲ್ಲಿ ಹಾಗೆಯೇ ಒರಗಿದೆ. ಅಂಥ ಸ್ಥಿತಿಯಲ್ಲಿ ತಾರೆ ರಾಮನ ಗುಣಗಳನ್ನು ಕೀರ್ತಿಸುತ್ತಾಳೆ ಎಂದ ಮೇಲೆ ರಾಮ ಎಂಥ ಗುಣಗಣಿಯಾಗಿರಬೇಕು.

"ರಾಮ. ನೀನು ಅಪ್ರಮೇಯ. ನಿನ್ನನ್ನು ಜಯಿಸುವುದು ಯಾರಿಂದಲೂ ಶಕ್ಯವಿಲ್ಲ. ಉತ್ತಮನಾದ ಧಾರ್ಮಿಕ ನೀನು. ಧರ್ಮವನ್ನು ಬಿಟ್ಟು ಅಗಲದವನು, ಧರ್ಮ ಮಾರ್ಗದಿಂದ ವಿಚಲಿತನಾಗದವನು. ನಿನ್ನ ಕೀರ್ತಿ ಯಾವಾಗಲೂ ವರ್ಧಿಸುವಂಥದೇ ವಿನಾ ಕ್ಷೀಣವಾಗುವಂಥದಲ್ಲ. ಏಕೆಂದರೆ, ಯಾವಾಗಲೂ ಉತ್ತಮವಾದ ಕೆಲಸಗಳನ್ನೇ ಮಾಡುತ್ತಿರುವವನ ಕೀರ್ತಿ

ಬೆಳೆಯುತ್ತಲೇ ಹೋಗುವುದು. ಅದು ಎಂದಿಗೂ ಕುಂದದು. ನೀನು ಅಂಥ ಕೀರ್ತಿಯನ್ನು ಪಡೆದವ; ದೂರದರ್ಶಿ. ಅಲ್ಲದೆ ಕ್ಷಮಾಶೀಲ, ಎಲ್ಲ ಗುಣಗಳೂ ನಿನ್ನಲ್ಲಿವೆ. ನೀನು ಅತ್ಯಂತ ಕ್ಷಮಾಶೀಲನಾದುದರಿಂದಲೇ ನಿನ್ನನ್ನು ಪ್ರಾರ್ಥಿಸುತ್ತೇನೆ. ಆ ಪ್ರಾರ್ಥನೆಯನ್ನು ನಡೆಸಿಕೊಡು.

ರಾಮಾ, ಸೀತೆಯನ್ನಗಲಿದ ವಿರಹವೇದನೆ ಎಂಥದು ಎಂದು ತಿಳಿದಿದೆ. ಈಗ, ವೀರನಾದ ನನ್ನ ಪತಿಯನ್ನಗಲಿ ನಾ ಕ್ಷಣಕಾಲವೂ ಇರಲಾರೆ. ಯಾವ ತೀಕ್ಷ್ಣವಾದ ಬಾಣದಿಂದ ವಾಲಿಯನ್ನು ಕೊಂದೆಯೋ ಅದೇ ಬಾಣದಿಂದ ನನ್ನೆದೆಗೂ ಹೊಡೆ. ನಾನೂ ಸ್ವರ್ಗದಲ್ಲಿ ನನ್ನ ಪತಿಯೊಡನೆ ಸೌಖ್ಯವಾಗಿರುತ್ತೇನೆ. ದಯೆಯಿಟ್ಟು ಅಷ್ಟು ಮಾತ್ರ ಮಾಡು. ನನ್ನನ್ನೂ ಅದೇ ಬಾಣದಿಂದ ಹೊಡೆದುಬಿಡು. ನಾನು ಈ ಅಗಲಿಕೆಯನ್ನು ಸಹಿಸಲಾರೆ" ಎಂದು ರೋದಿಸತೊಡಗಿದಳು.

ರಾಮನೇ ತನ್ನ ಮಧುರವಾದ ಮಾತುಗಳಿಂದ ತಾರೆಯನ್ನು ಸಮಾಧಾನ ಪಡಿಸಿದ. "ಪ್ರಪಂಚದಲ್ಲಿ ಎಲ್ಲ ಆ ವಿಧಾತನ ಅಧೀನ. ಮೂರು ಲೋಕವೂ ಆತನ ಆಜ್ಞೆಗೆ ಅನುಸಾರವಾಗಿಯೇ ನಡೆಯುತ್ತದೆ. ಅದನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ. ನೀನು ವೃಥಾ ಶೋಕಿಸುವುದರಲ್ಲಿ ಅರ್ಥವಿಲ್ಲ. ನೀನು ಪುತ್ರವತಿ. ಅಂಗದನನ್ನು ಸಂತೈಸು, ದುಃಖಿತನಾದ ಅಂಗದನನ್ನು ಸಮಾಧಾನಪಡಿಸು. ವೀರ ಪತ್ನಿಯಾಗಿ ಹೀಗೆ ದುಃಖಿಸಬೇಡ" ಎಂದ.

ರಾಮನ ಮಧುರವಾದ ವಚನವನ್ನು ಕೇಳಿದ ತಾರೆ ಸಮಾಧಾನ ಹೊಂದಿದಳು.

ರಾಮ ಸುಗ್ರೀವನನ್ನೂ ಸಂತೈಸಿದ. ಮುಂದೆ ನಡೆಯಬೇಕಾದ ಕರ್ಮಗಳನ್ನು ನಡೆಸುವಂತೆ ಹೇಳಿದ. ಅದರಂತೆ ವಾಲಿಯ ದೇಹವನ್ನು ಸಿಂಗರಿಸಿ ಯಥೋಚಿತವಾದ ರೀತಿಯಲ್ಲಿ ಶಾಸ್ತ್ರಕ್ಕನುಗುಣವಾಗಿ ಸಂಸ್ಕಾರ ನಡೆಸಿದ್ದಾಯಿತು. ಸಂಸ್ಕಾರ ಕ್ರಿಯೆಗಳೆಲ್ಲ ಸಾಂಗವಾಗಿ ಪೂರೈಸಿದ್ದಾಯಿತು.

## ಸುಗ್ರೀವ ಪಟ್ಟಾಭಿಷೇಕ

ಆ ನಂತರ ಹನುಮಂತ ಕೈಗಳೆರಡನ್ನೂ ಜೋಡಿಸಿಕೊಂಡು ರಾಮಲಕ್ಷ್ಮಣರ ಮುಂದೆ ಬಂದು ನಿಂತು "ಪ್ರಭು, ನಿಮ್ಮ ಅನುಗ್ರಹದಿಂದ ಸುಗ್ರೀವನಿಗೆ ರಾಜ್ಯ ಲಭಿಸಿತು. ನೀವು ಪೂಜಾರ್ಹರು. ರತ್ನಗಳಿಂದಲೂ, ಮಾಲ್ಯಗಳಿಂದಲೂ ವಿಧವಿಧವಾದ ಆಭರಣಗಳಿಂದಲೂ ಪೂಜಿಸಲು ತಕ್ಕವರು. ದಯೆಯಿಟ್ಟು ಕಿಷ್ಕಿಂಧೆಗೆ ಪ್ರವೇಶಮಾಡಿ ಪೂಜೆಯನ್ನು ಕೈಗೊಳ್ಳಬೇಕು" ಎಂದು ಪ್ರಾರ್ಥಿಸಿದ.

ರಾಮ ಪ್ರಸನ್ನಚಿತ್ತನಾಗಿ, "ಹನುಮಂತ, ಪಿತೃವಾಕ್ಯವನ್ನು ಪಾಲಿಸುವ ಸಲುವಾಗಿ ನಾವು ವನವನ್ನು ಪ್ರವೇಶಿಸಿದೆವು. ಹದಿನಾಲ್ಕು ವರ್ಷ ಕಳೆಯುವ ಮೊದಲು ಪುರಪ್ರವೇಶ ಮಾಡುವಂತಿಲ್ಲ. ಸುಗ್ರೀವನಿಗೆ ಪಟ್ಟಾಭಿಷೇಕ ನಡೆಯಲಿ" ಎಂದ. ಸುಗ್ರೀವನನ್ನು ಕುರಿತು "ಸುಗ್ರೀವಾ, ಶ್ರೇಷ್ಠವಾದ ಕಿಷ್ಕಿಂಧೆಯನ್ನು ಸೇರಿ ಪಟ್ಟಾಭಿಷೇಕ ಮಾಡಿಕೊ. ಇನ್ನು ನಾಲ್ಕು ತಿಂಗಳು ಮಳೆಗಾಲ. ಆಗ ಏನೂ ಕೆಲಸ ಸಾಗುವಂತಿಲ್ಲ. ಆ ನಾಲ್ಕು ತಿಂಗಳೂ ಸಂತೋಷವಾಗಿ ಪತ್ನಿಯೊಂದಿಗೆ ರಾಜ್ಯ ಸೌಖ್ಯವನ್ನು ಅನುಭವಿಸು. ಮಳೆಗಾಲ ಕಳೆದಮೇಲೆ ಸೀತೆಯನ್ನು ಹುಡುಕುವ ಯತ್ನ ಮಾಡೋಣ" ಎಂದ.

ರಾಮನ ಅನುಜ್ಞೆಯನ್ನು ಪಡೆದ ಸುಗ್ರೀವ ಮಂತ್ರಿಗಳೊಡನೆ ಕಿಷ್ಕಿಂಧೆಯನ್ನು ಪ್ರವೇಶಿಸಿದ. ಸುಗ್ರೀವನ ಪಟ್ಟಾಭಿಷೇಕಕ್ಕೆ ಎಲ್ಲ ಸಿದ್ಧತೆಗಳೂ ನಡೆದವು. ವಾನರ ವೀರರು ನದೀ ನದ ಸಮುದ್ರ

ಗಳಿಂದ ಶ್ರೇಷ್ಠವಾದ ಜಲವನ್ನು ಪೂರ್ಣಕುಂಭಗಳಲ್ಲಿ ತಂದರು. ಸುಗ್ರೀವನಿಗೆ ಮಂಗಳಸ್ನಾನ ಮಾಡಿಸಿ ಎಲ್ಲ ಆಭರಣಗಳಿಂದ ಅಲಂಕರಿಸಿದರು. ಸಿಂಹಾಸನದ ಮೇಲೆ ಕೂಡಿಸಿದರು.

ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ।
ಮೈಂದಶ್ಚ ದ್ವಿವಿಧಶ್ಚೈವ ಹನುಮಾನ್ ಜಾಂಬವಸ್ತಥಾ ॥
ಅಭ್ಯಷಿಂಚಂತ ಸುಗ್ರೀವಂ ಪ್ರಸನ್ನೇನ ಸುಗಂಧಿನಾ ।
ಸಲಿಲೇನ ಸಹಸ್ರಾಕ್ಷಂ ವಸವೋ ವಾಸವಂ ಯಥಾ ॥

ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ, ಮೈಂದ, ದ್ವಿವಿಧ, ಹನುಮಂತ, ಜಾಂಬವಂತ ಈ ಕಪಿಶ್ರೇಷ್ಠರು ಉತ್ತಮವಾದ ತೀರ್ಥದಿಂದ ಸುಗ್ರೀವನಿಗೆ ಅಭಿಷೇಕ ಮಾಡಿದರು. ಅಷ್ಟವಸುಗಳು ದೇವೇಂದ್ರನಿಗೆ ತ್ರಿಲೋಕಾಧಿಪತ್ಯದಲ್ಲಿ ಅಭಿಷೇಕ ಮಾಡಿದಂತೆ ಹನುಮಂತನೇ ಮೊದಲಾದ ಕಪಿಶ್ರೇಷ್ಠರು ಸುಗ್ರೀವನಿಗೆ ಕಿಷ್ಕಿಂಧಾರಾಜ್ಯದಲ್ಲಿ ಅಭಿಷೇಕ ಮಾಡಿದರು.

ರಾಮನ ಅನುಜ್ಞೆಯಂತೆ ಅಂಗದನಿಗೆ ಯೌವರಾಜ್ಯಾಭಿಷೇಕ ಆಯಿತು. ಎಲ್ಲ ಕಪಿವೀರರೂ ಸಂತೋಷಿಸಿದರು. ಪಟ್ಟಾಭಿಷೇಕ ಆದಮೇಲೆ ಸುಗ್ರೀವ ರಾಮನ ಬಳಿಗೆ ಬಂದು ಪ್ರಣಾಮ ಮಾಡಿದ. ರಾಮನ ಅನುಜ್ಞೆಯಂತೆ ಮಳೆಗಾಲ ಕಳೆಯುವವರೆಗೆ ರುಮಾಸಹಿತನಾಗಿ, ದೇವೇಂದ್ರನಂತೆ ರಾಜ್ಯಭೋಗವನ್ನನುಭವಿಸತೊಡಗಿದ.

ಇತ್ತ ರಾಮ, ಲಕ್ಷ್ಮಣನೊಡನೆ ಮಳೆಗಾಲ ಕಳೆಯುವವರೆಗೆ ಪ್ರಸ್ರವಣಗಿರಿಯ ಗುಹೆಯಲ್ಲಿ ಕಾಲ ಕಳೆಯಲು ನಿಶ್ಚಯಿಸಿದ.

## ಮಳೆಗಾಲದ ವರ್ಣನೆ

ಪ್ರಸ್ರವಣಗಿರಿಯ ಗುಹೆಯಲ್ಲಿ ರಾಮ ಲಕ್ಷ್ಮಣನೊಡನೆ ಮಳೆಗಾಲ ಬರುತ್ತಿರುವುದನ್ನು ಕಂಡು ಮಳೆಗಾಲದ ವೈಖರಿಯನ್ನು ವರ್ಣಿಸಿದ.

ಆಳ್ವಾರುಗಳೂ ಸಹ ಮಳೆಗಾಲದ ಆ ಮಳೆಯನ್ನು ನಾನಾ ವಿಧವಾಗಿ ಅನುಭವಿಸುತ್ತಾರೆ.

ಮಳೆಗಾಲದಲ್ಲಿ ಎಲ್ಲೆಲ್ಲೂ ಮೋಡಗಳು ಕವಿದು ಅಂಧಕಾರಮಯವಾಗುತ್ತದೆ. ಆಕಾಶವನ್ನೆಲ್ಲಾ ನೀಲಮೇಘಶ್ಯಾಮದ ಮೋಡಗಳು ಆವರಿಸುತ್ತವೆ. ಆ ನೀಲಮೇಘಶ್ಯಾಮದ ಮೋಡಗಳನ್ನು ಕಂಡ ಜಾತಕ ಎಂಬ ಪಕ್ಷಿ - ಮಳೆಯನ್ನು ನಿರೀಕ್ಷಿಸುತ್ತಿರುವ ಪಕ್ಷಿ–ಸಂತೋಷಪಟ್ಟು ಕುಣಿದಾಡುತ್ತದೆ. ಹಾಗೆಯೇ ಹೃದಯವೆಂಬ ಆಕಾಶದಲ್ಲಿ ನೀಲಮೇಘಶ್ಯಾಮ ಮೂರ್ತಿ ಎನಿಸುವ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಯೋಗಿಗಳೆಂಬ ಜಾತಕ ಪಕ್ಷಿಗಳೂ ಸಂತೋಷಪಡುತ್ತಾರೆ.

ಮೋಡದಿಂದ ಆವರಿಸಲ್ಪಟ್ಟ ಆಕಾಶ ಧುಮುಗುಟ್ಟುತ್ತದೆ. ಮೋಡಗಳು ಧಾರಾಕಾರವಾಗಿ ಮಳೆ ಸುರಿಸುವುದನ್ನು ಕಂಡಾಗ ಪರಬ್ರಹ್ಮ ತನ್ನ ಕೃಪಾವರ್ಷವನ್ನು ಹೀಗೆಯೇ ಸುರಿಸುತ್ತಾನೆ ಎಂದು ಭಾಸವಾಗುತ್ತದೆ.

ಮಳೆ ಎಲ್ಲ ಕಡೆಯಲ್ಲೂ ಒಂದೇ ಸಮನಾಗಿ ಸುರಿಯುತ್ತದೆ. ಹಾಗೆಯೇ ಭಗವತ್ಕೃಪೆಯೂ ಒಂದೇ ಸಮನಾಗಿ ವರ್ಷಿಸುತ್ತಿದೆ. ಧಾರಾಕಾರವಾಗಿ ಮಳೆ ಎಲ್ಲ ಕಡೆಗಳಲ್ಲೂ ಬೀಳುವಂತೆ ಪರ್ವತದ ಮೇಲೂ ಬೀಳುತ್ತಿದೆ. ಎಷ್ಟೇ ರಭಸದಿಂದ ಮಳೆ ಸುರಿಯುತ್ತಿದ್ದರೂ ಆ ಪರ್ವತ ಮಾತ್ರ ಅಲುಗದೆ ಹಾಗೆಯೇ ಸ್ಥಿರವಾಗಿ ನಿಂತಿದೆ. ಹಾಗೆಯೇ ಪರಮಾತ್ಮನೂ ತನ್ನ ಭಕ್ತರನ್ನು ರಕ್ಷಿಸಲೇ

ಬೇಕು ಎಂಬ ಸ್ಥಿರಚಿತ್ತವನ್ನು ಹೊಂದಿದಾನೆ. ಧಾರಾಕಾರವಾದ ಮಳೆಯಂತೆ ಅಸಂಖ್ಯವಾದ ತಪ್ಪುಗಳನ್ನೇ ಮಾಡಿದರೂ "ಪರಮಾತ್ಮ ಭಕ್ತರನ್ನು ಕೈಬಿಡುವುದಿಲ್ಲ" ಎಂದು ನಿಶ್ಚಲಬುದ್ಧಿಯುಳ್ಳವನಾಗಿದಾನೆ.

ಧಾರಾಕಾರವಾಗಿ ಮಳೆ ಸುರಿದರೂ ಪರ್ವತ ನಿಶ್ಚಲವಾಗಿ ಇರುತ್ತದೆ. ಹಾಗೆಯೇ ಯೋಗಿಯಾದವನೂ ಕಷ್ಟಪರಂಪರೆಯೇ ಬಂದರೂ ಅದರಿಂದ ವಿಚಲಿತನಾಗದೆ ನಿಶ್ಚಲನಾಗಿ ತನ್ನ ಧ್ಯೇಯ ಪತ್ತ ನಾಗುತ್ತಾನೆ.

ಮಳೆ ಬಂದರೆ ಭೂಮಿಯ ತಾಪ ಅಡಗುತ್ತದೆ. ಭೂಮಿ ಶಾಂತವಾಗುತ್ತದೆ. ಹಾಗೆಯೇ ಭಗವತ್ಕೃಪೆಯೆಂಬ ವರ್ಷ ಸುರಿದರೆ ಭಕ್ತರ ತಾಪ ಅಡಗುತ್ತದೆ. ಭಕ್ತರ ಮನಸ್ಸು ಶಾಂತವಾಗುತ್ತದೆ.

ಮಳೆಯಿಂದ ಜೀವಿತದ ರಕ್ಷಣೆ ಆಗುತ್ತದೆ. ಹಾಗೆಯೇ ಭಗವತ್ಕೃಪೆಯಿಂದ ಜೀವಿತವು ಸಫಲವಾಗುತ್ತದೆ.

ಇಂಥ ಮಳೆಗಾಲವನ್ನು ಕಂಡ ರಾಮ, ಲಕ್ಷ್ಮಣನನ್ನು ಕಂಡು "ಲಕ್ಷ್ಮಣಾ, ನೋಡು, ಆಕಾಶ ಮೋಡಗಳಿಂದ ಮುಚ್ಚಿ ಹೋಗಿದೆ. ಎಲ್ಲೆಲ್ಲೂ ನೀರು. ನದಿಗಳಲ್ಲಿ ನೀರು ತುಂಬಿ ಪ್ರವಾಹವಾಗಿ ಹರಿಯುತ್ತಿದೆ. ಎಲ್ಲೆಲ್ಲೂ ಪೈರುಪಚ್ಚೆ ಬೆಳೆಯಲು ಅನುಕೂಲವಾಗುವಂತೆ ನೀರು ನಿಂತಿದೆ. ಜೀವಿಗಳೆಲ್ಲ ವರ್ಷದ ಎಂಟು ತಿಂಗಳುಗಳಲ್ಲಿ ಧಾನ್ಯವನ್ನು ಶೇಖರಿಸಿಕೊಂಡು ಈ ಮಳೆಗಾಲದಲ್ಲಿ ಸೌಖ್ಯವಾಗಿ ಇರುತ್ತಾರೆ. ಸುಗ್ರೀವ ರಾಜ್ಯವನ್ನೂ ಪತ್ನಿಯನ್ನೂ ಪಡೆದು ಆನಂದವಾಗಿ ಸೌಖ್ಯವನ್ನನುಭವಿಸುತ್ತಿದಾನೆ. ನನ್ನನ್ನು ನೋಡು, ಲಕ್ಷ್ಮಣಾ, ರಾಜ್ಯವನ್ನೂ, ಪತ್ನಿಯನ್ನೂ ಕಳೆದುಕೊಂಡು ಈ ಗುಹೆಯಲ್ಲಿ ಕಾಲ ಕಳೆಯುತ್ತಿದೇನೆ" ಎಂದ. ಲಕ್ಷ್ಮಣ ರಾಮನನ್ನು ಸಂತೈಸುತ್ತಾ "ರಾಮ ಇನ್ನೇನು ವರ್ಷಾಕಾಲ ಮುಗಿಯುವುದರಲ್ಲಿದೆ. ಆಕಾಶ ನಿರ್ಮಲವಾಗುತ್ತ ಬಂದಿದೆ. ಆ ವೇಳೆಗೆ ಸುಗ್ರೀವನೂ ಬರುತ್ತಾನೆ. ಸೀತೆಯನ್ನು ಹುಡುಕುವ ಯತ್ನ ಮಾಡುತ್ತಾನೆ. ನೀನು ಯೋಚಿಸಬೇಡ" ಎಂದ.

### ಹನುಮಂತ ಸುಗ್ರೀವನನ್ನು ಎಚ್ಚರಿಸುವುದು

ವರ್ಷಾಕಾಲ ಕಳೆಯುತ್ತ ಬಂದಿತು. ಆಕಾಶ ನಿರ್ಮಲವಾಗುತ್ತ ಬಂದಿತು. ಮೋಡಗಳು ಮರೆಯಾದವು. ಅಂಧಕಾರ ಕಳೆದು ಪ್ರಕಾಶ ಪಸರಿಸಿತು. ನದಿಗಳು ಮೆಲುವಾಗಿ ಹರಿಯತೊಡಗಿದವು. ಶರತ್ಕಾಲ ಬಂದಿತು. ಮಳೆಗಾಲ ಕಳೆದು ಹೋದದ್ದನ್ನು ಗಮನಿಸಿದ, ರಾಜನೀತಿವಿಶಾರದನಾದ ಹನುಮಂತ.

ಸುಗ್ರೀವ ಇನ್ನೂ ಕಾಮಭೋಗದಲ್ಲೇ ಆಸಕ್ತನಾಗಿರುವುದನ್ನೂ ಕಂಡ. ಹೀಗಿದ್ದರೆ 'ಪರಿಣಾಮ ನೆಟ್ಟಗಾಗದು" ಎಂದುಕೊಂಡ. ಸುಗ್ರೀವನ ಸಮೀಪಕ್ಕೆ ಹೋದ. ಸುಗ್ರೀವ ರುಮೆ, ತಾರೆ ಇವರೊಂದಿಗೆ ಇದ್ದ. ಯಥೇಚ್ಛವಾಗಿ ಮಧುವನ್ನು ಪಾನ ಮಾಡಿ ಸ್ವೇಚ್ಛೆಯಾಗಿದ್ದ ಸುಗ್ರೀವನನ್ನು ಹನುಮಂತ ಮಧುರವಾದ ನೀತಿಯುಕ್ತವಾದ, ಶ್ರೇಷ್ಠವಾದ ಮಾತುಗಳಿಂದ ಎಚ್ಚರಿಸಿದ.

"ರಾಜನ್ ನೀ ವಾನರರಿಗೂ, ಕರಡಿಗಳಿಗೂ ದೊರೆ ಎನಿಸಿಕೊಂಡಿರುವೆ. ರಾಜಧರ್ಮವನ್ನು ಸರಿಯಾಗಿ ಅನುಷ್ಠಿಸುವುದು ನಿನ್ನ ಕರ್ತವ್ಯ. ಅದೇ ಸರಿಯಾದುದು. ರಾಜನಾದವನು

ತನ್ನ ದೇಶ, ಕೋಶ, ಸೈನ್ಯ, ಮಿತ್ರ-ಇವರನ್ನು ಸರಿಯಾಗಿ ಪಾಲಿಸಬೇಕು. ಸ್ವಲ್ಪ ಅಜಾಗರೂಕ ನಾದರೂ ಕಾರ್ಯ ಕೆಡುತ್ತದೆ. ದೇಶದ ರಕ್ಷಣೆಗೆ ಕೋಶ., ಸೈನ್ಯ ಹೇಗೆ ಅವಶ್ಯಕವೋ ಹಾಗೆಯೇ ಮಿತ್ರರೂ ಅವಶ್ಯಕ.

ಮಿತ್ರಕಾರ್ಯವನ್ನು ವಿಳಂಬ ಮಾಡದೆ ಮಾಡಬೇಕು. ಹಾಗಾದಲ್ಲಿ ಮಾತ್ರ ಮಿತ್ರರು ಮಿತ್ರ ರಾಗಿಯೇ ಉಳಿಯುತ್ತಾರೆ.

ಮಹಾರಾಜ, ರಘುಕುಲದಲ್ಲಿ ಜನಿಸಿದ ರಾಮನನ್ನು ಸಾಮಾನ್ಯನೆಂದು ತಿಳಿಯಬೇಡ. ದಾನವರು ದೇವತೆಗಳು ಗಂಧರ್ವರು. ಎಲ್ಲರೂ ಒಟ್ಟಾಗಿ ಬಂದರೂ ಅವನು ಕ್ಷಣಾರ್ಧದಲ್ಲಿ ಅವರನ್ನೆಲ್ಲ ನಿಗ್ರಹಿಸಬಲ್ಲ. ಅಂಥ ಸಾಮರ್ಥ್ಯ ಅವನಿಗುಂಟು. ಇನ್ನು ರಾಕ್ಷಸರ ಪಾಡೇನು ? ನೀನೇ ನೋಡಿದಂತೆ ಮಹಾಬಲಿಯಾದ ವಾಲಿಯನ್ನು ಒಂದೇ ಬಾಣದಿಂದ ನಿಗ್ರಹಿಸಿದ. ಇಂಥ ಶಕ್ತಿವಂತನನ್ನು ಮಿತ್ರನನ್ನು ಕೊನೆಯವರೆಗೆ ಮಿತ್ರನನ್ನಾಗಿಯೇ ಉಳಿಸಿಕೊಳ್ಳಬೇಕು. ಅದಕ್ಕಾಗಿ ಮಿತ್ರಕಾರ್ಯವನ್ನು ವಿಲಂಬಿಸದೆ ಮಾಡಬೇಕು. ರಾಮ, ನಿನಗೆ ರಾಜ್ಯವನ್ನೂ ಕಳೆದುಹೋದ ಪತ್ನಿಯನ್ನೂ ದೊರಕಿಸಿಕೊಟ್ಟಿದಾನೆ. ನೀನು ಸಮಸ್ತ ಭೋಗವನ್ನೂ ಅನುಭವಿಸುವಂತೆ ಮಾಡಿದಾನೆ. ಅಂಥ ರಾಮನ ಕಾರ್ಯವನ್ನು ಶೀಘ್ರವಾಗಿ ಮಾಡಬೇಕು. ಕಾಲ ಮೀರಿ ಹೋದು ದನ್ನು ರಾಮನೂ ಅರಿತಿದಾನೆ. ಆದರೆ, ಉತ್ತಮನಾದ್ದರಿಂದ ಸಂಕೋಚವಶದಿಂದ ನಿನ್ನನ್ನು ಈವರೆಗೆ ಎಚ್ಚರಿಸದೆ ಇದಾನೆ. ಅವನು ನಮ್ಮನ್ನು ಎಚ್ಚರಿಸುವ ಮೊದಲೇ, ಪ್ರತಿಜ್ಞೆ ಮಾಡಿ ದಂತೆ, ನಾವು ಅವನ ಕಾರ್ಯವನ್ನು ಆರಂಭಿಸಿಬಿಡಬೇಕು. ಅಲ್ಲದೆ ರಾಮ ನಮ್ಮನ್ನು ಎಚ್ಚರಿಸಿದರೆ "ಆದರಿಂದ ಕಾಲ ಮೀರಿತು." ಎಂದು ಆಗುತ್ತದೆ. ಆದ್ದರಿಂದ, ತ್ವರೆಯಾಗಿ ಮಾಡಬೇಕಾದ ಕಾರ್ಯವನ್ನು ಮಾಡು" ಎಂದು ಸಲಹೆ ಕೊಟ್ಟ.

ಹನುಮಂತನ ನೀತಿಯುಕ್ತವಾದ ಮಾತುಗಳನ್ನು ಕೇಳಿದ ಸುಗ್ರೀವ ಸೇನಾಪತಿ ನೀಲನನ್ನು ಕರೆಕಳುಹಿಸಿದ. "ಭೂಮಿಯಲ್ಲಿರುವ ಸಮಸ್ತ ವಾನರರೂ ಹದಿನೈದು ದಿನಗಳಲ್ಲಿ ಕಿಷ್ಕಿಂಧೆಗೆ ಬಂದು ಸೇರಬೇಕು. ಅಷ್ಟರಲ್ಲಿ ಬರದಿದ್ದರೆ ಅವರ ತಲೆ ಉಳಿಯಲಾರದು'' ಎಂದು ಕಠಿಣವಾದ ಆಜ್ಞೆಯನ್ನು ಹೊರಡಿಸಿದ.

ನೀಲ ಮಹಾ ಬುದ್ಧಿವಂತ, ಕಾರ್ಯವಿಚಕ್ಷಣ. ಅದ್ಭುತವಾದ ಸಾಮರ್ಥ್ಯ ಪಡೆದವನು. ಹಿಡಿದ ಕಾರ್ಯವನ್ನು ಸಾಧಿಸುವ ಕಾರ್ಯ ದುರಂಧರ. ದಶದಿಶೆಗೂ ವಾನರಪ್ರಮುಖರನ್ನು ಕಳುಹಿಸಿ ಎಲ್ಲ ವಾನರರನ್ನೂ ಕಲೆಹಾಕಿದ.

## ರಾಮ, ಲಕ್ಷ್ಮಣನನ್ನು ಸುಗ್ರೀವನ ಬಳಿಗೆ ಕಳುಹಿಸುವುದು

ವರ್ಷಾಕಾಲ ಮುಗಿಯುವುದನ್ನೇ ನಿರೀಕ್ಷಿಸುತ್ತಿದ್ದ ರಾಮ. ಎಲ್ಲೆಲ್ಲೂ ನಿರ್ಮಲವಾದ ವಾತಾವರಣ. ಮೇಲಾಗಿ ತಂಪಾದ ಗಾಳಿ. ಮಂದಗತಿಯಲ್ಲಿ ಹರಿಯುತ್ತಿರುವ ನದಿ. ಮೋಡ ದಿಂದ ರಹಿತವಾದ ಆಕಾಶ. ಸ್ನಿಗ್ಧವಾಗಿ ಎಲ್ಲೆಲ್ಲೂ ಹರಡಿರುವ ಬೆಳದಿಂಗಳು. ಇದನ್ನೆಲ್ಲ ಕಂಡ ರಾಮ. ಸೀತೆಯ ನೆನಪು ಅವನನ್ನು ಬಾಧಿಸತೊಡಗಿತು.

ಚಂದ್ರನನ್ನು ನೋಡುತ್ತಿದ್ದಂತೆ ರಾಮನಿಗೆ ಚಂದ್ರಮುಖಿಯಾದ ಸೀತೆಯ ನೆನಪು ತೀವ್ರ ವಾಯಿತು. ಹಾಲುಚೆಲ್ಲಿದಂತೆ ಎಲ್ಲೆಲ್ಲೂ ಹರಡಿರುವ ಬೆಳದಿಂಗಳನ್ನು ಕಂಡ ರಾಮನಿಗೆ ಸೀತೆಯ ವಿರಹವೇದನೆ ಸಹಿಸಲು ಅಸದಳವಾಯಿತು. ''ಹಾ, ಸೀತೆ ! ಈಗ ನನ್ನಂತೆ ನೀನೂ ತಾಪದಲ್ಲಿ

ಬೇಯುತ್ತಿರಬೇಕು ಅಲ್ಲವೆ? ನೀನು ಸುಕುಮಾರಿ. ತಾಪವನ್ನು ಸಹಿಸಲಾರದವಳು. ಅಂಥ ನೀನು ಈಗ ವಿರಹದ ಅಗ್ನಿಯಲ್ಲಿ ಹೇಗೆ ಬಾಡದೆ ಇರಲು ಸಾಧ್ಯ? ಚಂದ್ರಮುಖಿ, ನೀನು ನನ್ನ ಪಕ್ಕದಲ್ಲಿ ಇಲ್ಲದೆ ಇರುವುದರಿಂದ ಶೀತಲವಾದ ಈ ಬೆಳದಿಂಗಳೂ ನನಗೆ ತಾಪವನ್ನೇ ಉಂಟು ಮಾಡುತ್ತಿದೆ. ನೀನು ನನ್ನೊಡನೆ ಇದ್ದಾಗ ಈ ಚಂದ್ರ ನನಗೆ ಆಹ್ಲಾದಕರನಾಗಿರುತ್ತಿದ್ದ. ಆದರೆ. ಈಗ ಇದೇ ಚಂದ್ರ ತಾಪದಾಯಕವಾಗಿದ್ದಾನೆ. ನೀ ಇಲ್ಲದೆ ನಾನು ಜೀವಿಸಲು ಶಕ್ಯವೆ?" ಎಂದು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಪರಿತಪಿಸಿದ. ಫಲಮೂಲಗಳನ್ನು ಆಯ್ದು ತರಲು ಹೋಗಿದ್ದ ಲಕ್ಷ್ಮಣ ಹಿಂದಿರುಗಿ ಬಂದ. ರಾಮನ ಮುಖ ಚಿಂತಾಕ್ರಾಂತವಾಗಿದ್ದುದನ್ನೂ ರಾಮ ಸೀತೆಯ ವಿರಹವನ್ನು ಸಹಿಸಲಾಗದವನಂತೆ ದೀರ್ಘವಾಗಿ ನಿಟ್ಟುಸಿರು ಬಿಡುತ್ತಿರುವುದನ್ನು ಕಂಡ.

ಹತ್ತಿರ ಬಂದ; ಮೃದುವಾಗಿ "ಅಣ್ಣಾ, ಪುರುಷಶ್ರೇಷ್ಠನೆನಿಸಿದ ನೀನು ಸಾಮಾನ್ಯರಂತೆ ಹೀಗೆ ವ್ಯಥೆಪಡುವುದು ಸರಿಯಲ್ಲ ಶೋಕವು ತೇಜಸ್ಸನ್ನೂ, ಬಲವನ್ನೂ, ಪೌರುಷವನ್ನೂ ಕುಗ್ಗಿಸುತ್ತದೆ. ಶೋಕತಪ್ತನಾದವ, ದುಃಖಭಾರದಿಂದ ಕೂಡಿದವ, ಯಾವ ಕೆಲಸವನ್ನೂ ಮಾಡ ಲಾರ, ಪುರುಷಶ್ರೇಷ್ಠನಾದವನು ಶೋಕವನ್ನು ಬಿಟ್ಟು ಧೈರ್ಯವನ್ನು ಹೊಂದಬೇಕು. ಧೈರ್ಯ ದಿಂದ ಸರ್ವಕಾರ್ಯಗಳೂ ಸಿದ್ಧಿಸುತ್ತವೆ. ನೀನು ಮಹಾಪರಾಕ್ರಮಿ, ತೇಜಸ್ವಿ, ನೀತಿಯನ್ನು ತಿಳಿದವನು. ಆದರೂ ಹೀಗೆ ದುಃಖಿಸುತ್ತಿರುವುದು ಸರಿಯಲ್ಲ. ಸುಮ್ಮನೆ ದುಃಖಿಸುತ್ತಾ ಕುಳಿತರೆ ಕಾರ್ಯವಾಗುತ್ತದೆಯೇ? ಉತ್ಸಾಹದಿಂದ, ಧೃತಿಯಿಂದ ಯತ್ನಮಾಡಬೇಕು. ವರ್ಷಾಕಾಲ ಮುಗಿಯಿತು. ಇನ್ನೇನು ಸುಗ್ರೀವ ಸೀತೆಯನ್ನು ಹುಡುಕಲು ಸಹಾಯ ಮಾಡುತ್ತಾನೆ. ಸೀತೆಯನ್ನು ಹುಡುಕುವ ಯತ್ನವನ್ನು ನಾವೂ ಮಾಡೋಣ" ಎಂದು ಸಂತೈಸಿದ. "ಲಕ್ಷ್ಮಣಾ, ನೀ ಹೇಳುವು ದೆಲ್ಲ ಸರಿ. ಸಮಯಕ್ಕೆ ಸರಿಯಾದ ಮಾತುಗಳನ್ನಷ್ಟೆ ನೀ ಆಡಿದೆ. ಸೌಮಿತ್ರಿ, ನೀ ಹೇಳಿದಂತೆ ವರ್ಷಾಕಾಲವೇನೋ ಮುಗಿಯಿತು. ನಿರಭ್ರವಾದ ಆಕಾಶ ಶರತ್ಕಾಲದ ಆಗಮನವನ್ನು ಸೂಚಿಸು ತ್ತಿದೆ ನೋಡು. ಹೀಗಿದ್ದರೂ ಇನ್ನೂ ಸುಗ್ರೀವ ಸೌಖ್ಯವನ್ನನುಭವಿಸುವುದರಲ್ಲೇ ಮಗ್ನನಾಗಿದ್ದಾನೆ. ಸುಗ್ರೀವ ಇಂಥ ಕೃತಘ್ನ ಎಂದುಕೊಂಡಿರಲಿಲ್ಲ ನಾನು. ನೋಡು, ರಾಜ್ಯವನ್ನು ಪಡೆದ, ಕಳೆದು ಕೊಂಡ ಪತ್ನಿಯನ್ನೂ ಪಡೆದ. ಏನಾದರೂ ಸ್ವಲ್ಪ ಯೋಚನೆ ಇದೆಯೇ ಅವನಿಗೆ? ತನ್ನ ಸ್ವಸುಖದಲ್ಲೇ ನಿರತನಾಗಿದ್ದು ಎಲ್ಲವನ್ನೂ ಮರತೇಬಿಟ್ಟ. ಲಕ್ಷ್ಮಣಾ, ನೀ ಕಿಷ್ಕಿಂಧೆಗೆ ಹೋಗಿ ಸುಗ್ರೀವನನ್ನು ಎಚ್ಚರಿಸು. ಸುಗ್ರೀವನಿಗೆ ಹೇಳು. ವಾಲಿಯನ್ನು ಕಳುಹಿಸಿದ ಬಾಣ ಇನ್ನೂ ರಾಮನಲ್ಲುಂಟು. ವಾಲಿಯ ಮಾರ್ಗವನ್ನು ಅನುಸರಿಸಬೇಡ ಎಂದು ಹೇಳು. ಹೋಗು ಲಕ್ಷ್ಮಣಾ ಕಿಷ್ಕಿಂಧೆಗೆ ಎಂದ ರಾಮ.

ರಾಮನ ಮಾತುಗಳನ್ನು ಕೇಳಿದ ಲಕ್ಷ್ಮಣನಿಗೆ ಸುಗ್ರೀವನ ಮೇಲೆ ಬಹಳ ಕೋಪ ಬಂತು. ಮೊದಲೇ ಸರಿ! ಇನ್ನು ರಾಮನೇ ಹೇಳಿದ ಮೇಲೆ ಕೇಳಬೇಕೆ? ಲಕ್ಷ್ಮಣನು ಆದಿಶೇಷನಂತೆ ಬುಸುಗುಟ್ಟತೊಡಗಿದ. ಕೈಯಲ್ಲಿ ಧನುಸ್ಸನ್ನು ಹಿಡಿದು ''ಅಣ್ಣಾ, ಇಗೋ ಹೊರಟೆ. ಈಗಿಂ ದೀಗಲೇ ಆ ಸುಗ್ರೀವನನ್ನು "ಇಲ್ಲ" ಎನಿಸಿಬಿಡುತ್ತೇನೆ. ಅಂಗದನಿಗೆ ರಾಜ್ಯ ಕೊಡಿಸಿ ಅವನ ಸಹಾಯದಿಂದ ವಾನರ ಸೈನ್ಯವನ್ನು ಕೂಡಿಸಿ ಸೀತೆಯನ್ನು ಹುಡುಕುವ ಯತ್ನ ಮಾಡುತ್ತೇನೆ" ಎಂದು ಹೊರಡಲು ಸಿದ್ಧನಾದ. ಲಕ್ಷ್ಮಣನ ಕೋಪಾವಿಷ್ಟವಾದ ಕಣ್ಣುಗಳು, ಅವನ ಭಾರವಾದ ನಡಿಗೆ ಎಲ್ಲ ಗಮನಿಸಿದ ರಾಮ, ''ಸೌಮಿತ್ರಿ, ಕೋಪಗೊಳ್ಳಬೇಡ. ಕೋಪವನ್ನು ಹಿಡಿತ ದಲ್ಲಿರಿಸಿ ಕಾರ್ಯವನ್ನು ಸಾಧಿಸುವವನೇ ಉತ್ತಮ ಎನಿಸಿಕೊಳ್ಳುತ್ತಾನೆ. "ಸುಗ್ರೀವನನ್ನು ಕೊಲ್ಲು ತ್ತೇನೆ'' ಎಂದೆ. ಇದು ಸರಿಯಲ್ಲ. ಹಾಗೆಲ್ಲ ಮಾಡಬೇಡ. ಮಿತ್ರನಾದ ಸುಗ್ರೀವನನ್ನು

ಸಾಂತ್ವಯುಕ್ತವಾದ ಮಧುರ ವಚನಗಳಿಂದ ಎಚ್ಚರಿಸು. ಕಾಲಮೀರಿತು ಎಂಬುದನ್ನು ಆತನು ಅರಿಯುವಂತೆ ಮಾಡು. ಅದಕ್ಕಿಂತ ಹೆಚ್ಚಾಗಿ ಸುಗ್ರೀವನನ್ನು ದಂಡಿಸಲು ಹೋಗಬೇಡ" ಎಂದು ಲಕ್ಷ್ಮಣನನ್ನು ಸಮಾಧಾನಪಡಿಸಿದ.

''ಸರಿ ಅಣ್ಣಾ" ಎಂದ ಲಕ್ಷ್ಮಣ, ಧನುಸ್ಸನ್ನು ಹಿಡಿದು ಕಿಷ್ಕಿಂಧೆಯತ್ತ ಹೊರಟ.

ಲಕ್ಷ್ಮಣ ಧನುಸ್ಸನ್ನು ಹಿಡಿದು ಬರುತ್ತಿರುವುದನ್ನು ಕಂಡ ವಾನರರೆಲ್ಲರೂ ಭಯದಿಂದ ದಿಕ್ಕಾಪಾಲಾಗಿ ಓಡಿದರು. ಇನ್ನು ಲಕ್ಷ್ಮಣ ಏನುಮಾಡಿ ಬಿಡುತ್ತಾನೋ ಎಂದು ಎಲ್ಲ ಕಪಿಗಳೂ ತಲ್ಲಣಿಸಿದವು.

### ಲಕ್ಷ್ಮಣನ ಕೋಪ–ತಾರೆಯ ಸಮಾಧಾನ

ಅಗ್ನಿಯಂತೆ ದೇದೀಪ್ಯಮಾನವಾಗಿ ಐದು ಹೆಡೆಯ ನಾಗದಂತೆ ಬುಸುಗುಟ್ಟುತ್ತ, ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಿರುವಂತೆ ಧನುಸ್ಸನ್ನು ಹಿಡಿದು ಲಕ್ಷ್ಮಣ ಕಿಷ್ಕಿಂಧೆಯನ್ನು ಪ್ರವೇಶಿಸಿದ. ಲಕ್ಷ್ಮಣನ ಪಾದಾಘಾತದಿಂದ ಸಮೀಪದಲ್ಲಿದ್ದ ವೃಕ್ಷಗಳು ಬುಡಸಹಿತವಾಗಿ ಕಳಚಿಬೀಳುತ್ತಿದ್ದವು. ಭೂಮಿ ಭೂಕಂಪವಾದಂತೆ ಅದುರತೊಡಗಿತು.

ರೋಷಭೀಷಣನಾಗಿ ಕಾಲರುದ್ರನಂತೆ ಬರುತ್ತಿರುವ ಲಕ್ಷ್ಮಣನನ್ನು ಕಂಡ ವಾನರರೆಲ್ಲ ಭಯದಿಂದ ಚೆಲ್ಲಾಪಿಲ್ಲಿಯಾಗಿ ಓಡಿದರು. ಹೀಗೆ ಸುಗ್ರೀವನ ಭವನದ್ವಾರವನ್ನು ಪ್ರವೇಶಿಸಿದ ಲಕ್ಷ್ಮಣ, ಅಲ್ಲಿ ಅಂಗದನನ್ನು ಕಂಡ. ಅಂಗದ ಲಕ್ಷ್ಮಣನನ್ನು ಕಂಡಕೂಡಲೇ ವಿನಯದಿಂದ ಅಭಿವಾದನ ಮಾಡಿದ, ಅಂಗದನನ್ನು ಕುರಿತು ಲಕ್ಷ್ಮಣ, "ವತ್ಸ, ನಾನು ಬಂದಿರುವ ವಿಷಯವನ್ನು ಸುಗ್ರೀವನಿಗೆ ತಿಳಿಸು" ಎಂದ.

ಅದರಂತೆ ಅಂಗದ ಸುಗ್ರೀವನ ಬಳಿಗೆ ಹೋದ. ಅಲ್ಲಿ ಸುಗ್ರೀವ ಸಿಂಹಾಸನದ ಮೇಲೆ ಕುಳಿತಿದ್ದ. ಮಧುಪಾನದಿಂದ ಮತ್ತನಾಗಿದ್ದ. ಸ್ತ್ರೀಯರು ಅವನನ್ನು ಸೇವಿಸುತ್ತಿದ್ದರು. ಅಂಗದ ಹೋಗಿ ಲಕ್ಷ್ಮಣನ ಬರವನ್ನು ತಿಳಿಸಿದ. ಆದರೆ, ಮಧುಪಾನದಿಂದ ಮತ್ತನಾದ ಸುಗ್ರೀವ ಅವನನ್ನು ಲಕ್ಷಿಸಲಿಲ್ಲ. ಮಂತ್ರಿಗಳನ್ನು ಕರೆದು ''ಸುಮಿತ್ರಾನಂದನನಾದ ಲಕ್ಷ್ಮಣ ಕೋಪಿಸಿಕೊಂಡಿದಾನೆ ಎಂದು ಕೇಳಿದೆ. ನಾನು ಅವನಿಗೆ ಕೋಪ ಬರುವಂಥ ಕೆಲಸವನ್ನೇನೂ ಮಾಡಿಲ್ಲ. ನಾನೇನೂ ಅವರು ಮಾಡಿದ ಉಪಕಾರವನ್ನು ಮರೆತಿಲ್ಲ. ಅಲ್ಲದೆ ಅವರಿಗೆ ಯಾವ ಕೆಡಕನ್ನೂ ಬಯಸಿಲ್ಲ. ಹೀಗಿದ್ದೂ ವೃಥಾ ನನ್ನ ಮೇಲೆ ಕೋಪಿಸುತ್ತಿದಾನೆ ಲಕ್ಷ್ಮಣ.

''ನಾನು ಚೆನ್ನಾಗಿ ಬದುಕುವುದನ್ನು ಸಹಿಸದೆ ಯಾರೋ ಶತ್ರುಗಳು ಅವರ ಮನಸ್ಸಿನಲ್ಲಿ ನನ್ನ ಬಗ್ಗೆ ಕೆಟ್ಟ ಭಾವನೆ ಬರುವಂತೆ ಬೋಧಿಸಿರಬೇಕು. ಅದಕ್ಕೇ ಹಾಗೆ ಲಕ್ಷ್ಮಣ ನನ್ನ ಮೇಲೆ ಕುಪಿತನಾಗಿದಾನೆ" ಎಂದ.

ಇದನ್ನು ಕೇಳಿದ ಹನುಮಂತ "ರಾಜನ್, ನೀನು ಹಾಗೆ ಭಾವಿಸುವುದು ಸರಿಯಲ್ಲ. ನೀನು ಅವರಿಗೆ ಯಾವ ಕೆಡುಕನ್ನೂ ಮಾಡಲಿಲ್ಲ ಎನ್ನುವಿ. ರಾಮ ಧರ್ಮಾತ್ಮ. ಅಂಥವನು ವಿನಾಕಾರಣ ಯಾರ ಮೇಲೂ ಕೋಪಗೊಳ್ಳುವುದಿಲ್ಲ. ಈಗ ನಿನ್ನಮೇಲೆ ಸ್ನೇಹ, ವಿಶ್ವಾಸ ಅವನಿಗಿರುವುದರಿಂದಲೇ ಅವನು ತಮ್ಮನಾದ ಲಕ್ಷ್ಮಣನನ್ನು ನಿನಗೆ ಎಚ್ಚರಿಕೆ ಕೊಡುವ ಸಲುವಾಗಿ ಕಳುಹಿಸಿದಾನೆ. ನೀನು ವೃಥಾ ಚಿಂತಿಸಬೇಡ.

ನಿನಗೆ ರಾಜ್ಯವನ್ನೂ, ಕಳೆದುಕೊಂಡ ಪತ್ನಿಯನ್ನೂ ರಾಮ ದೊರಕಿಸಿಕೊಟ್ಟ. ಅದಕ್ಕೆ ಪ್ರತಿಯಾಗಿ ನೀನು ನಿನ್ನ ಕರ್ತವ್ಯವನ್ನು ಮಾಡಬೇಕು. ರಾಮಪತ್ನಿ ಸೀತೆಯನ್ನು ಹುಡುಕಿ ಕೊಡುವ ಕಾರ್ಯದಲ್ಲಿ ನೀನು ವಿಳಂಬ ಮಾಡುತ್ತಿದೀಯೆ. ಇದು ಸಲ್ಲದು. ಅಪರಾಧ ನಿನ್ನದು. ಆದ್ದರಿಂದ, ಮಹಾತ್ಮನಾದ ಲಕ್ಷ್ಮಣನ ಬಳಿ ಹೋಗಿ ಪ್ರಾರ್ಥಿಸು. ಅವನ ಕ್ಷಮೆಯನ್ನು ಯಾಚಿಸು. ಅದೇ ನೀನು ಉಳಿಯಲು ಮಾರ್ಗ ಎಂದನು.

**ಕೃತಾಪರಾಧಸ್ಯಹಿ ತೇ ನಾನ್ಯತ್ ಪಶ್ಯಾಮ್ಯಹಂ ಕ್ಷಮಂ।**
**ಅಂತರೇಣಾಂಜಲಿಂ ಬದ್ಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ॥**

ಹನುಮಂತನ ಮಾತುಗಳನ್ನು ಕೇಳಿದ ಸುಗ್ರೀವನ ಮೋಹ ಸರಿಯಿತು. ಅಷ್ಟರಲ್ಲಿ ಲಕ್ಷ್ಮಣನ ಧನುಸ್ಸಿನ ಟಂಕಾರ ಕೇಳಿಬಂತು. ಸಿಂಹಾಸನದಿಂದ ಕೆಳಗೆ ಬಿದ್ದ ಸುಗ್ರೀವ. ತಾನೇ ಹೋಗಿ ನಿಂತರೆ ಲಕ್ಷ್ಮಣ ಏನು ಮಾಡುತ್ತಾನೋ ಎಂದು ಭಯಪಟ್ಟ. ಹಿತೈಷಿಣಿಯಾದ ತಾರೆ ಯನ್ನು ನೋಡಿ "ತಾರೆ, ನೀ ಮೊದಲು ಹೋಗು. ಕುಪಿತನಾದ ಲಕ್ಷ್ಮಣನನ್ನು ಸಮಾಧಾನ ಪಡಿಸು" ಎಂದ.

ತಾರೆ ಲಕ್ಷ್ಮಣನ ಹತ್ತಿರ ಬಂದಳು. ಮಧುಪಾನ ಮಾಡಿದ್ದರಿಂದ ಅವಳ ಕಣ್ಣುಗಳು ಮತ್ತ ವಾಗಿದ್ದವು. ನಡಿಗೆಯಲ್ಲಿ ಅಸ್ಥಿರತೆ ಎದ್ದು ಕಾಣುತ್ತಿತ್ತು. ಇಂಥ ತಾರೆ ಲಕ್ಷ್ಮಣನ ಸಮೀಪಕ್ಕೆ ಬಂದಳು. ತಾರೆ ಬರುವುದನ್ನು ಕಂಡ ಲಕ್ಷ್ಮಣ ಧನುಸ್ಸಿನ ನಾಣನ್ನು ಕಳಚಿ ಧನುಸ್ಸನ್ನು ನೆಲಕ್ಕೆ ಊರಿ ಅದರ ತುದಿಗೆ ಗಲ್ಲವನ್ನು ಆತುಕೊಂಡು ತಲೆಬಗ್ಗಿಸಿ ನಿಂತ. ಮಾಮಿಯಾರ್ ಕುಳುವಿನಲ್ ವಂದ ಮೈಂದನ್ ಮಾದರಿ ನಿನ್ರಾನ್ "ಅತ್ತೆಯು ಬಂದಾಗ ಅವರೆದುರಿಗೆ ನಾಚಿ ನಿಲ್ಲುವ ಅಳಿಯ ನಂತೆ ನಿಂತ" ಎನ್ನುತ್ತಾರೆ ಕಂಬ ಕವಿ.

ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡದ ಉತ್ತಮ, ಜಿತೇಂದ್ರಿಯ ಲಕ್ಷ್ಮಣ. ತಾರೆ ಬಂದವಳೇ "ಸುಮಿತ್ರಾಕುಮಾರ, ನೀನು ಕುಪಿತನಾದಂತೆ ತೋರುತ್ತಿದೆ. ನಿನ್ನ ಕೋಪಕ್ಕೆ ಕಾರಣ ಏನು ?" ಎಂದಳು. ಲಕ್ಷ್ಮಣ, "ಕೋಪಕ್ಕೆ ಕಾರಣವನ್ನು ಕೇಳುತ್ತಿರುವೆ. ಮಳೆಗಾಲ ಮುಗಿಯಿತು ಶರತ್ಕಾಲ ಬಂದಾಯಿತು. ಇನ್ನೂ ಸುಗ್ರೀವ ತಾನಿತ್ತ ವಚನವನ್ನು ನಡೆಸುವುದರಲ್ಲಿ ಗಮನವನ್ನೆ ಕೊಡುತ್ತಿಲ್ಲ. ತುಚ್ಛವಾದ ಗ್ರಾಮ್ಯ ಭೋಗದಲ್ಲಿ ಆಸಕ್ತನಾಗಿ ಕೊಟ್ಟ ಮಾತನ್ನು ಮರೆತಿದಾನೆ. ಮಾಡಿದ ಉಪಕಾರವನ್ನು ನೆನೆಯದ ಕೃತಘ್ನ ಅವನು. ಶಾಸ್ತ್ರದಲ್ಲಿ ಹೇಳಿದೆ. ಗೋಹತ್ಯೆ, ಬ್ರಹ್ಮಹತ್ಯೆ, ಸ್ತ್ರೀಹತ್ಯೆ, ಶಿಶುಹತ್ಯೆ, ಮುಂತಾದ ಪಾಪ ಮಾಡಿದವನಿಗೂ ಪ್ರಾಯಶ್ಚಿತ್ತ ಉಂಟು. ಆದರೆ, ಮಾಡಿದ ಉಪಕಾರವನ್ನು ಮರೆತ ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ. ಕೃತಘ್ನೇ ನಾಸ್ತಿ ನಿಷ್ಕೃತಿಃ – ಎಂದು. ಸುಗ್ರೀವ ಕುಟಿಲ, ಕಾಮಾತುರ, ಕೃತಘ್ನ, ಸ್ವಾರ್ಥಿ. ಇಂಥವನನ್ನು ಕಂಡು ಕೋಪವೇಕೆ ? ಎಂದು ಕೇಳುತ್ತಿರುವೆ" ಎಂದ. ತಾರೆ ಸೌಮ್ಯವಾದ ಮಾತುಗಳಿಂದ, "ಸುಮಿತ್ರಾ ಕುಮಾರ, ಉತ್ತಮ ಪುರುಷರು ಯಾವಾಗಲೂ ತಮಗಿಂತ ಬಲಹೀನರಾದವರಲ್ಲಿ ತಮ್ಮ ಬಲವನ್ನು ತೋರುವುದಿಲ್ಲ. ನಿನ್ನಂಥ ಉತ್ತಮರು ಸುಗ್ರೀವನಂಥ ವಾನರನ ಮೇಲೆ ಪರಾಕ್ರಮವನ್ನು ತೋರುವುದು ತರವಲ್ಲ. ಇದು ಉಚಿತವಲ್ಲ. ನೀ ಹೇಳುವಂತೆ ಸುಗ್ರೀವ ಕುಟಿಲನಲ್ಲ. ಕಾಮಾತು ರನೂ ಅಲ್ಲ. ನೀವು ಮಾಡಿದ ಉಪಕಾರವನ್ನು ಅವನು ಸ್ಮರಿಸುತ್ತಲೇ ಇದಾನೆ. ಆದ್ದರಿಂದ, ಅವನು ಕೃತಘ್ನನೂ ಅಲ್ಲ.

''ನೀ ಹೇಳಿದಂತೆ ಸುಗ್ರೀವ ವ್ಯರ್ಥವಾಗಿ ಕಾಲ ಕಳೆಯುತ್ತಿಲ್ಲ. ಈಗಾಗಲೇ ಸಹಸ್ರಾರು ವಾನರರನ್ನು ಕಲೆಹಾಕಿದಾನೆ. ಕೋಟಿಸಂಖ್ಯೆಯಲ್ಲಿ ವಾನರರು ದಶದಿಕ್ಕುಗಳಿಂದ ಬಂದು ಸೇರುತ್ತಿದಾರೆ

"ಸೀತೆಯನ್ನು ಕದ್ದೊಯ್ದ ರಾವಣ ಸಾಮಾನ್ಯನಲ್ಲ ಮಹಾಪರಾಕ್ರಮಿ. ಅವನನ್ನು ಅನುಸರಿಸಿ ಕೋಟ್ಯಂತರ ಬಲಿಷ್ಠರಾದ ರಾಕ್ಷಸರಿದ್ದಾರೆ. ಅವರನ್ನೆಲ್ಲ ಗೆಲ್ಲುವುದು ಕಷ್ಟ. ಅದಕ್ಕಾಗಿಯೇ ಸುಗ್ರೀವ ಅಸಂಖ್ಯಾತ ವಾನರರನ್ನು ಒಟ್ಟುಗೂಡಿಸುತ್ತಿದ್ದಾನೆ. ಬಾ, ಸುಗ್ರೀವನನ್ನು ಕಾಣುವೆಯಂತೆ" ಎಂದು ತಾರೆ ಲಕ್ಷ್ಮಣನನ್ನು ಅಂತಃಪುರದೊಳಗೆ ಕರೆದೊಯ್ದಳು.

ಅಲ್ಲಿ ಸುಗ್ರೀವ ಸುವರ್ಣದ ಆಸನದ ಮೇಲೆ ಮತ್ತನಾಗಿ ಮಂಡಿಸಿದ್ದ. ಪಕ್ಕದಲ್ಲಿ ರುಮೆ ಇನ್ನಿತರ ವಾನರಸ್ತ್ರೀಯರಿದ್ದರು. ಮತ್ತನಾದ ಸುಗ್ರೀವನನ್ನು ಅಲ್ಲಿ ಕಂಡಮೇಲೆ ಲಕ್ಷ್ಮಣನ ಕೋಪ ಕೆರಳಿತು. ''ವಾನರ ರಾಜಾ! ಪ್ರಪಂಚದಲ್ಲಿ ಧೈರ್ಯವಂತ, ಕುಲೀನ, ಸತ್ಯವಾದಿ, ಜಿತೇಂದ್ರಿಯನಾದ ರಾಜನೇ ಗೌರವವನ್ನು ಪಡೆಯುತ್ತಾನೆ.

ಆಡಿದ ಮಾತಿಗೆ ಯಾರು ತಪ್ಪುತ್ತಾರೋ ಅವರು ಮರಣದಂಡನೆಗೆ ಅರ್ಹರು. ನೀನು ಸ್ವಾರ್ಥಿಯಾಗಿ ನನ್ನ ಅಣ್ಣ ರಘುವೀರನ ಕಾರ್ಯಕ್ಕೆ ಗಮನಕೊಡದೆ ಅಲ್ಪವಾದ ಗ್ರಾಮ್ಯಭೋಗದಲ್ಲೇ ಆಸಕ್ತನಾಗಿದೀಯೆ. ರಾಜ್ಯವನ್ನೂ, ಪತ್ನಿಯನ್ನೂ ನನ್ನ ಅಣ್ಣನಿಂದ ಪಡೆದೆ. ಆ ಉಪಕಾರಕ್ಕೆ ಕೃತಜ್ಞತೆಯನ್ನು ತೋರಿಸುವಷ್ಟು ಸದ್ಬುದ್ಧಿಯೂ ನಿನಗಿಲ್ಲ. ಉಪಕಾರವನ್ನು ಪಡೆದ ಮೇಲೆ ಉಪಕಾರ ಮಾಡಿದವನನ್ನು ಸಂಪೂರ್ಣವಾಗಿ ಮರೆತೇ ಬಿಟ್ಟೆ. ಇಂಥ ಕೃತಘ್ನನಾದ ನಿನ್ನನ್ನು ಇದೀಗಲೇ ನನ್ನ ಬಾಣ ತುಂಡರಿಸಬಲ್ಲುದು ಸುಗ್ರೀವಾ, ನಿನ್ನ ಅಣ್ಣ ವಾಲಿ ಹೋದ ಮಾರ್ಗ ಇನ್ನೂ ತೆರೆದೇ ಇದೆ. ಅದೇ ಮಾರ್ಗದಲ್ಲಿ ಈಗಲೇ ನಿನ್ನನ್ನೂ ಕಳುಹಿಸಿಬಿಡುತ್ತೇನೆ'' ಎಂದು ಗುಡುಗಿದ.

ಲಕ್ಷ್ಮಣನ ಈ ಕ್ರೂರವಾಕ್ಯಗಳನ್ನು ಕೇಳುತ್ತಿದ್ದಂತೆ ತಾರೆ ಮತ್ತೆ "ಲಕ್ಷ್ಮಣಾ, ಉತ್ತಮರ ಲಕ್ಷಣ ಇದಲ್ಲ. ಉತ್ತಮರಾದವರು ತಮಗಿಂತ ಕಿರಿಯರನ್ನು ತಾಳ್ಮೆಯಿಂದ ನೋಡಿಕೊಳ್ಳುತ್ತಾರೆ. ಅಲ್ಲದೆ ಏನಾದರೂ ಸುಗ್ರೀವ ವಾನರ ರಾಜ. ಅವನನ್ನು ಹೀಗೆಳೆಯುವುದೂ ಸರಿಯಲ್ಲ.

'ಕಾಮ" ಎಂಬುದು ಶರೀರ ಸಹಜವಾದ ಕ್ರಿಯೆ ಅದನ್ನು ತಡೆಗಟ್ಟಲು ಸಾವಿರಾರು ವರ್ಷಗಳವರೆಗೆ ತಪಸ್ಸನ್ನು ಮಾಡಿದ ಋಷಿಗಳಿಗೇ ಸಾಧ್ಯವಾಗಿಲ್ಲ; ಅಂದಮೇಲೆ ಚಪಲನಾದ ವಾನರನಿಗೆ ಸಾಧ್ಯವೇ ? ಹೆಚ್ಚೇಕೆ ? ಲಕ್ಷ್ಮಣಾ, ನಿನ್ನ ಗುರುವಾದ ವಿಶ್ವಾಮಿತ್ರರನ್ನೇ ನೋಡು. ಅನೇಕ ವರ್ಷಗಳು ಅವರು ಜಿತೇಂದ್ರಿಯರಾಗಿ ತಪಸ್ಸು ಮಾಡಿದವರು ಅಂಥ ಸಂಸ್ಕಾರ ಉಳ್ಳ ಮಹರ್ಷಿಗೂ ಮೇನಕೆಯನ್ನು ಕಂಡು ಕಾಮ ಕೆರಳಿತು. ಅವಳೊಡನೆ ಹತ್ತು ವರ್ಷಗಳನ್ನು ಹತ್ತು ದಿನದಂತೆ ಕಳೆದರು. ಏಕೆ ಹೇಳುತ್ತಿರುವೆ ಗೊತ್ತೆ ಸೌಮಿತ್ರಿ ? "ಕಾಮ"ದ ಪ್ರಭಾವವೇ ಅಂಥದು. ಅದರ ಹಿಡಿತಕ್ಕೆ ಸಿಕ್ಕಿದರೆ ದೀರ್ಘಕಾಲವೂ ಕ್ಷಣದಂತೆ ಕಳೆದುಹೋಗುತ್ತದೆ.

"ಮಹಾ ಮಹಾ ಜಿತೇಂದ್ರಿಯರ ಪಾಡೇ ಹಾಗಾಗಿರುವಾಗ ಇನ್ನು ಸುಗ್ರೀವನದೇನು ಲೆಕ್ಕ?

''ಮೊದಲೇ ವಾನರ. ಜೊತೆಗೆ ಬಹಳಕಾಲದಿಂದ ರಾಜ್ಯವನ್ನೂ, ಹೆಂಡತಿಯನ್ನೂ ಕಾಣದೆ ಇದ್ದ. ಇದ್ದಕ್ಕಿದ್ದಂತೆ, ಕಳೆದುಕೊಂಡ ಪತ್ನಿ, ರಾಜ್ಯ, ಭೋಗ ಎಲ್ಲ ಪ್ರಾಪ್ತವಾಗಿದೆ. ಹೀಗಿರುವಾಗ ಅವನು ಕಾಮದಲ್ಲಿ ಆಸಕ್ತನಾದರೆ ತಪ್ಪೇನು ? ಅಲ್ಲದೆ, ಸುಗ್ರೀವ ಒಳ್ಳೆಯದನ್ನೇ ಮಾಡಿದಾನೆ. ರಾಮಸೇವೆಗೆ ಹೊರಡುವಾಗ ತೃಪ್ತನಾಗಿ ಸಂತುಷ್ಟಚಿತ್ತದಿಂದ ಹೊರಡಲು

ಸಹಾಯವಾಗುತ್ತದೆ ಎಂದೇ. ಹೀಗೆ ಮೊದಲು ಭೋಗದಲ್ಲಿ ಆಸಕ್ತನಾಗಿ ತನ್ನ ಚಾಪಲ್ಯವನ್ನು ತೀರಿಸಿಕೊಂಡಿದಾನೆ. ಇನ್ನು ರಾಮಸೇವೆಗೆ ಪೂರ್ಣವಾಗಿ ಸರವಾಗುತ್ತಾನೆ. ಲಕ್ಷ್ಮಣಾ, ಸುಗ್ರೀವ ವೃಥಾ ಕಾಲಕಳೆಯುತ್ತಾನೆ ಎಂದು ಭಾವಿಸಬೇಡ. ಈಗಾಗಲೇ ಪೃಥ್ವಿಯಲ್ಲಿರುವ ಸಮಸ್ತವಾನರ ವೀರರೂ ಬಂದು ಸೇರುವಂತೆ ಆಜ್ಞೆ ಹೊರಡಿಸಿದಾನೆ. ನೋಡು, ಕೋಟಿ ಸಂಖ್ಯೆಯಲ್ಲಿ ವಾನರ ವೀರರು ಬಂದು ಸೇರುತ್ತಿದಾರೆ. ಇನ್ನೇನು, ಸುಗ್ರೀವ ಈ ಎಲ್ಲ ವೀರರೊಂದಿಗೆ ರಾಮಸೇವೆಗೆ ಸಿದ್ಧನಾಗಿಯೇ ಬಿಡುತ್ತಾನೆ. ಸೌಮಿತ್ರಿ, ನೀನು ಕೋಪವನ್ನು ಬಿಡು. ನಿನ್ನ ಕೋಪದಿಂದ ವಾನರ ಸ್ತ್ರೀಯರೆಲ್ಲ ಭಯಗೊಂಡಿದಾರೆ; ಶಾಂತನಾಗು" ಎಂದಳು.

ತಾರೆಯ ಮಾತುಗಳನ್ನು ಕೇಳಿ ಲಕ್ಷ್ಮಣ ಪ್ರಸನ್ನನಾದ. ಲಕ್ಷ್ಮಣನ ಪ್ರಸನ್ನ ಮುಖಮುದ್ರೆಯನ್ನು ಕಂಡ ಸುಗ್ರೀವನಿಗೆ ಹೋದ ಜೀವ ಮರಳಿದಂತಾಯಿತು. ಎರಡನೆಯಸಲ ಮತ್ತೆ ಲಕ್ಷ್ಮಣನ ಪ್ರಸಾದದಿಂದ ರಾಜ್ಯವನ್ನು ಪಡೆದವನಂತೆ ಧೈರ್ಯ ಹೊಂದಿದ. ಸಾವರಿಸಿಕೊಂಡು ಸಿಂಹಾಸನದಿಂದ ಎದ್ದುಬಂದು ಲಕ್ಷ್ಮಣನ ಪಾದಗಳನ್ನು ಮುಟ್ಟಿ ಪ್ರಣಾಮ ಮಾಡಿದ. "ರಾಮಾನುಜ, ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸು. ಸ್ನೇಹದಿಂದ, ವಿಶ್ವಾಸದಿಂದ ತಿಳಿಯದೆ ನನ್ನಿಂದ ಅಪರಾಧ ಆಗಿದ್ದರೆ ದಯವಿಟ್ಟು ಅದನ್ನು ಎಣಿಸದೆ ಪ್ರಸನ್ನನಾಗು. ನಿನ್ನ ಅಣ್ಣ ರಘುಕುಲತಿಲಕ ನನಗೆ ಮಾಡಿರುವ ಉಪಕಾರವನ್ನು ನಾ ಮರೆತಿಲ್ಲ. ಸೀತೆಯ ಅನ್ವೇಷಣೆಗಾಗಿ ಕೋಟಿ ಸಂಖ್ಯೆಯಲ್ಲಿ ವಾನರವೀರರು ಒಟ್ಟುಗೂಡಿದ್ದಾರೆ. ಇವರೆಲ್ಲ ಕಾಮರೂಪಿಗಳು, ಮಹಾ ಪರಾಕ್ರಮಿಗಳು. ಸೀತೆಯನ್ನು ಹುಡುಕುವ ಕಾರ್ಯದಲ್ಲಿ ಇವರೆಲ್ಲ ಸಹಾಯ ಮಾಡುತ್ತಾರೆ. ನಾನೂ ನನ್ನ ಎಲ್ಲ ವಾನರ ವೀರರೊಂದಿಗೆ ರಾಮನ ಸೇವೆಗೆ ಸದಾ ಸಿದ್ಧನಾಗಿದ್ದೇನೆ, ಪ್ರಸನ್ನನಾಗು" ಎಂದು ಪ್ರಾರ್ಥಿಸಿದ.

ಸುಗ್ರೀವನ ಮಾತುಗಳನ್ನು ಕೇಳಿದ ಲಕ್ಷ್ಮಣ ಪ್ರಸನ್ನನಾದ. "ಸುಗ್ರೀವ, ಗೆಳೆಯ ಎಂದರೆ ನೀನೇ ಸರಿ. ನೀನು ಕೃತಜ್ಞ. ನಿನ್ನಂಥವನನ್ನು ಸ್ನೇಹಿತನನ್ನಾಗಿ ಪಡೆದ ರಾಮ ನಿಜವಾಗಿ ಕಾರ್ಯವನ್ನು ಸಾಧಿಸಿಯೇ ತೀರುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಅಣ್ಣನ ಮೇಲಿನ ಪ್ರೇಮದಿಂದ ನಾನೂ ನಿನಗೆ ಪೌರುಷವಾಗಿ ಮಾತಾಡಿದೆ. ಕ್ಷಮಿಸು. ನಿನ್ನ ಸ್ನೇಹಿತ ಸೀತೆಯ ವಿರಹದಿಂದ ಪರಿತಪಿಸುತ್ತಿದಾನೆ. ಅವನಿಗೆ ಸಾಂತ್ವನದ ನುಡಿಗಳನ್ನು ಹೇಳು. ಅವನನ್ನು ಸಮಾಧಾನಪಡಿಸು. ಸುಗ್ರೀವ, ಈಗ ನಾವು ಪ್ರಸ್ರವಣ ಗುಹೆಯಲ್ಲಿರುವ ರಾಮನ ಬಳಿಗೆ ಹೋಗೋಣವೇ ?'' ಎಂದ.

ಭಾಗವತ ಲಕ್ಷಣವನ್ನು ಇಲ್ಲಿ ಈ ಲಕ್ಷ್ಮಣ - ಸುಗ್ರೀವರ ಮಾತಿನಲ್ಲಿ ಬಹಳ ಚೆನ್ನಾಗಿ ಚಿತ್ರಿಸಿದಾರೆ ವಾಲ್ಮೀಕಿ. ಭಕ್ತನೊಬ್ಬ ತನ್ನ ತಪ್ಪನ್ನು ಮನ್ನಿಸಬೇಕು ಎಂದು ಮತ್ತೊಬ್ಬ ಭಕ್ತನನ್ನು ಕೇಳಿದರೆ ಆ ಭಕ್ತ ಒಡನೆ ಅದನ್ನು ಮರೆತುಬಿಡಬೇಕು. ಮಾತ್ರ ಅಲ್ಲ, ಪ್ರತಿಯಾಗಿ ತಾನು ಬೇಸರಪಟ್ಟುಕೊಂಡದ್ದನ್ನು ಮನ್ನಿಸುವಂತೆ ಕೇಳಬೇಕು. ಈ ಪರಸ್ಪರ ಸೌಹಾರ್ದ ಎದ್ದು ಕಾಣುತ್ತದೆ ಈ ಪ್ರಸಂಗದಲ್ಲಿ.

**ಯದಿ ಕಿಂಚಿದತಿಕ್ರಾಂತಂ ವಿಶ್ವಾಸಾತ್ ಪ್ರಣಯೇನ ವಾ ।**
**ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ ॥**
**ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಂ ।**
**ಮಯಾ ತ್ವಂ ಪರುಷಾಣ್ಯುಕ್ತಃ ತಚ್ಚ ತ್ವಂ ಕ್ಷಂತುಮರ್ಹಸಿ ॥**

ಇದನ್ನೇ ಪರಸ್ಪರ ಶೇಷತ್ವವೆನ್ನುವುದು. ಇದೇ ಶ್ರೀವೈಷ್ಣವ ಸಿದ್ಧಾಂತದ ಜೀವಾಳ.

ಲಕ್ಷ್ಮಣನ ಸಮಾಧಾನದ ವಚನಗಳನ್ನು ಕೇಳಿದ ಸುಗ್ರೀವ ಬಹಳ ಸಂತೋಷಪಟ್ಟ. ಪ್ರಮುಖ ವಾನರ ವೀರರೊಡನೆ ರಾಮನ ಬಳಿಗೆ ಹೊರಡಲು ಸಿದ್ಧನಾದ. ಸುಗ್ರೀವ. ಸುವರ್ಣಮಯವಾದ ಪಲ್ಲಕ್ಕಿಯನ್ನು ತರುವಂತೆ ಹೇಳಿದ. ಸೂರ್ಯನಂತೆ ಹೊಳೆಯುವ ಚಿನ್ನದ ಪಲ್ಲಕ್ಕಿಯನ್ನು ವಾನರ ವೀರರು ತಂದರು. ಅದರಲ್ಲಿ ಸುಗ್ರೀವ, ಲಕ್ಷ್ಮಣ ಸಹಿತನಾಗಿ ಆಸೀನನಾದ. ಪ್ರಮುಖ ವಾನರ ವೀರರು ಪಲ್ಲಕ್ಕಿಯನ್ನು ರಾಮನ ಬಳಿಗೆ ಹೊತ್ತು ತಂದರು. ಪಲ್ಲಕ್ಕಿಯಿಂದ ಇಳಿದ ಸುಗ್ರೀವ ನೇರವಾಗಿ ರಾಮನ ಬಳಿಗೆ ಹೋದ. "ತಪ್ಪಾದದ್ದಕ್ಕೆ ಕ್ಷಮಿಸಬೇಕು" ಎಂದು ರಾಮನ ಪಾದಗಳಿಗೆ ನಮಿಸಿದ.

ಪಾದಗಳಿಗೆ ಬಿದ್ದ ಸುಗ್ರೀವನನ್ನು ಹಿಡಿದೆತ್ತಿ ಅಪ್ಪಿಕೊಂಡ ರಾಮ. "ಸುಗ್ರೀವ, ಮಿತ್ರನಾದವನು ಸರಿಯಾದ ಸಮಯದಲ್ಲಿ ಉಪಕಾರಮಾಡಬೇಕು. ಆಗಲೇ ಮಿತ್ರತ್ವ ಉಳಿಯುತ್ತದೆ" ಎಂದ ರಾಮ.

ಸುಗ್ರೀವ, "ಪ್ರಭು, ಇಗೋ ಈ ವಾನರ ವೀರರೆಲ್ಲ ನಿನ್ನ ಕಿಂಕರರು. ನೋಡು, ಕೋಟಿ ಸಂಖ್ಯೆಯಲ್ಲಿ ನೆರೆದಿದ್ದಾರೆ. ಇವರೆಲ್ಲ ಒಬ್ಬೊಬ್ಬರೂ ಬಲಾಢ್ಯರು, ಪರಾಕ್ರಮಿಗಳು, ಹಿಡಿದ ಕಾರ್ಯವನ್ನು ಬಿಡದೆ ನಡೆಸುವವರು. ಮೇಲಾಗಿ ಕಾಮರೂಪಿಗಳು ಇವರೆಲ್ಲ ಒಟ್ಟಾಗಿ ಹೋದರು ಎಂದರೆ ಎಂಥವರನ್ನೂ ಜಯಿಸಬಲ್ಲವರು. ಇಂಥ ವಾನರವೀರರು ನಿನ್ನ ದಾಸರಾಗಿದ್ದಾರೆ ಇವರೊಡನೆ ನಾನೂ ನಿನ್ನ ಸೇವೆಗೆ ಸಿದ್ಧನಾಗಿದೇನೆ. ನೀನು ಎಲ್ಲವನ್ನೂ ಬಲ್ಲವನು. ನೀನು ಇಷ್ಟಪಟ್ಟಂತೆ ಇವರೆಲ್ಲ ನಡೆದುಕೊಳ್ಳುತ್ತಾರೆ ಎಲ್ಲರನ್ನೂ ನಿನಗೆ ಒಪ್ಪಿಸಿದ್ದೇನೆ" ಎಂದ.

ಸುಗ್ರೀವನ ಮಾತುಗಳನ್ನು ಕೇಳಿ ರಾಮ ಸಂತೋಷಿಸಿದ. "ಸುಗ್ರೀವ, ಸೀತೆಯನ್ನು ರಾವಣ ಹೊತ್ತುಕೊಂಡು ಹೋಗಿದ್ದಾನೆ ಎಂದು ಮಾತ್ರ ಈಗ ತಿಳಿದಿದ್ದೇವೆ. ಆದರೆ ಆ ರಾವಣ ಯಾರು? ಅವನ ನಿವಾಸ ಎಲ್ಲಿ? ಅವನ ಬಲ ಎಷ್ಟು? ಸೀತೆ ಎಲ್ಲಿದ್ದಾಳೆ? ಒಂದೂ ಗೊತ್ತಿಲ್ಲ. ಆದ್ದರಿಂದ, ಈ ವಾನರ ವೀರರೆಲ್ಲ ಮೊದಲು ಸೀತೆಯ ನೆಲೆಯನ್ನು ಪತ್ತೆಹಚ್ಚಲಿ. ಆಮೇಲೆ ಮುಂದಿನ ಕೆಲಸ. ನೀನು ವಾನರ ರಾಜ. ನೀನೇ ಇವರೆಲ್ಲರನ್ನೂ ಸೀತಾನ್ವೇಷಣದ ಕಾರ್ಯದಲ್ಲಿ ನಿಯೋಜಿಸು" ಎಂದ ರಾಮ,

ರಾಮನ ಅನುಜ್ಞೆಯಂತೆ ಸುಗ್ರೀವ ಒಬ್ಬೊಬ್ಬ ವಾನರ ಪ್ರಮುಖನನ್ನು ಒಂದೊಂದು ದಿಕ್ಕಿಗೆ ಕೋಟ್ಯಂತರ ವಾನರರೊಡನೆ ನಿಯೋಜಿಸಿದ. ಮಹಾಪರಾಕ್ರಮಿಯಾದ "ವಿನತ" ಎಂಬ ವಾನರ ವೀರನನ್ನು ಪೂರ್ವದಿಕ್ಕಿನಲ್ಲಿ ಸೀತಾನ್ವೇಷಣ ಮಾಡುವಂತೆ ಹೇಳಿದ, ಕಿಷ್ಕಿಂಧೆಯಿಂದ ಉದಯಾದ್ರಿಯವರೆಗೆ ಎಲ್ಲ ಸ್ಥಳಗಳನ್ನೂ ಒಂದೊಂದಾಗಿ ವಿವರಿಸಿ ಅಲ್ಲಿ ಸೀತೆಯನ್ನು ಹುಡುಕಿಕೊಂಡು ಒಂದು ತಿಂಗಳೊಳಗಾಗಿ ಹಿಂದಿರುಗಿ ಬರುವಂತೆ ಆಜ್ಞಾಪಿಸಿದ. ದಕ್ಷಿಣ ದಿಕ್ಕಿಗೆ ಯುವರಾಜನಾದ ಅಂಗದ, ಜಾಂಬವಂತ, ಹನುಮಂತ, ಮೈಂದ, ದ್ವಿವಿದ, ಮುಂತಾದ ಕಪಿವೀರರನ್ನು ನಿಯೋಜಿಸಿದ. ಅವರಿಗೂ ಒಂದು ತಿಂಗಳ ಅವಧಿಯನ್ನಿತ್ತ. ವರುಣನ ದಿಕ್ಪಾಪ ಪಶ್ಚಿಮ ದಿಕ್ಕಿಗೆ ತನ್ನ ಮಾವನಾದ ಸುಷೇಣನೆಂಬ ವಾನರ ಪ್ರಮುಖನನ್ನು ನಿಯೋಜಿಸಿದ. ಅಸಾದ್ರಿಯ ಪರ್ಯಂತ ಸೀತೆಯನ್ನು ಹುಡುಕಿ ಒಂದು ತಿಂಗಳಲ್ಲಿ ಹಿಂದಿರುಗಿ ಬರುವಂತೆ ಆಜ್ಞೆಯನ್ನಿತ್ತ.

ಉತ್ತರದಿಕ್ಕಿಗೆ ''ಶತಬಲಿ'' ಎಂಬ ಕಪಿವೀರನನ್ನು ಕಳುಹಿಸಿದ. ಎಲ್ಲರಿಗೂ ಒಂದು ತಿಂಗಳ ಅವಧಿಯಲ್ಲಿ ಹಿಂದಿರುಗಬೇಕು ಎಂದು ಕಟ್ಟಾಜ್ಞೆಯಿತ್ತ. ಅವಧಿ ಮೀರಿ ಬಂದರೆ ಶಿರಚ್ಛೇಧವೇ ಒದಗನೆ ಎಂದು ವಿಧಿಸಿದ.

ಆದೇಶದಂತೆ ಎಲ್ಲ ಕಪಿವೀರರೂ ತಮ್ಮ ತಮ್ಮ ದಿಕ್ಕುಗಳಿಗೆ ಹೊರಟರು.

ದಕ್ಷಿಣದಿಕ್ಕಿನ ಕಪಿವೀರರ ಪಟ್ಟಿ ಬಹಳ ಪ್ರಭಾವಯುತವಾಗಿತ್ತು. ಮೊದಲಿನಿಂದ ಹನುಮಂತನ ಕಾರ್ಯವಿಚಕ್ಷಣೆಯನ್ನು ಗಮನಿಸುತ್ತಿದ್ದ ರಾಮ ಹೊರಡುವ ಮೊದಲು ಹನುಮಂತ ನನ್ನು ಕರೆದ. ತನ್ನಲ್ಲಿದ್ದ ರಾಮನಾಮಾಂಕಿತವಾದ ಉಂಗುರವನ್ನು ಅವನಿಗೆ ಕೊಟ್ಟು ಸೀತೆಯನ್ನು ಕಂಡಾಗ ಗುರುತಿಗಾಗಿ ಅವಳಿಗೆ ಅದನ್ನು ಕೊಡುವಂತೆ ಹೇಳಿದ. ಹನುಮಂತನಿಗೆ ಸೀತೆಯ ಲಕ್ಷಣ ಗಳ ಬಗ್ಗೆ ಹೇಳಿದ. ಸೀತೆಯನ್ನು ಕಂಡಾಗ ಹೇಳಬೇಕಾದ ಮಾತುಗಳನ್ನು ಹೇಳಿದ. ಹೊರಟ ಎಲ್ಲ ವಾನರವೀರರೂ ಒಂದು ತಿಂಗಳೊಳಗಾಗಿ ಹಿಂದಿರುಗಿ ಬಂದರು. ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಹೋಗಿದ್ದ ವಾನರವೀರರು ಸುಗ್ರೀವ ಹೇಳಿದ ಕಡೆಯೆಲ್ಲೆಲ್ಲ ಸೀತೆಯನ್ನು ಹುಡುಕಿದರು. ಎಲ್ಲೂ ಸೀತೆ ದೊರಕಲಿಲ್ಲ. ಅವರೆಲ್ಲ ಹಿಂದಿರುಗಿ ಬಂದು "ಸೀತೆ ದೊರಕಲಿಲ್ಲ" ಎಂದು ಹೇಳಿಬಿಟ್ಟರು.

ಆದರೆ, ದಕ್ಷಿಣದ ಕಡೆ ಹೋಗಿದ್ದ ಕಪಿವೀರರು ಇನ್ನೂ ಹಿಂದಿರುಗಲಿಲ್ಲ.

ಸುಗ್ರೀವ ಕಪಿವೀರರಿಗೆ ಭೂಮಂಡಲವನ್ನೆಲ್ಲ ಪರಿಚಯ ಮಾಡಿಕೊಟ್ಟದ್ದನ್ನು ಗಮನಿಸಿದ್ದ ರಾಮ. ಸುಗ್ರೀವನ ಜ್ಞಾನಕ್ಕೆ, ಬುದ್ಧಿಶಕ್ತಿಗೆ, ಕಾರ್ಯತತ್ಪರತೆಗೆ ತಲೆದೂಗಿದ.

ಸುಗ್ರೀವ, ಪ್ರಪಂಚದ ಭೂಗೋಳದ ಒಂದೊಂದು ಅಂಶವನ್ನೂ ಇಷ್ಟು ಚೆನ್ನಾಗಿ ತಿಳಿದಿರು ವೆಯಲ್ಲ ಹೇಗೆ ? ಎಂದು ಕೇಳಿದ.

ಅದಕ್ಕೆ ಸುಗ್ರೀವ "ರಾಮಾ, ವಾಲಿಯ ಭಯದಿಂದ ನಾನು ಪ್ರಪಂಚವನ್ನೆಲ್ಲ ತಿರುಗಿದೆ. ಆಗ ಪೃಥ್ವಿಯ ಎಲ್ಲ ಭಾಗದ ಪರಿಚಯ ಆಯಿತು. ಆದರಿಂದ ಎಲ್ಲವನ್ನೂ ತಿಳಿಯುವಂತಾಯಿತು ಎಂದ.

ಸುಗ್ರೀವನ ಜಾಣ್ಮೆಯನ್ನು ರಾಮ ಪ್ರಶಂಸಿಸಿದ. ಸುಗ್ರೀವ ರಾಮನೊಡನೆ ಪ್ರಸ್ರವಣ ಗಿರಿಯಲ್ಲೇ ಉಳಿದ. ದಕ್ಷಿಣ ದಿಕ್ಕಿಗೆ ಹೋದ ವಾನರರನ್ನೇ ನಿರೀಕ್ಷಿಸುತ್ತಿದ್ದರು ಎಲ್ಲರೂ.

## ದಕ್ಷಿಣದಿಕ್ಕಿಗೆ ಹೊರಟ ವಾನರರಿಂದ ಸೀತಾನ್ವೇಷಣೆಯ ಯತ್ನ

ವಿಂಧ್ಯಪರ್ವತದಿಂದ ಹೊರಟ ವಾನರ ಸಮೂಹ ಎಲ್ಲೆಲ್ಲೂ ಸೀತೆಯನ್ನು ಹುಡುಕಿದರು. ಗಿರಿ, ಗುಹೆ, ಪರ್ವತ ಶಿಖರ, ಮರಗಳ ಪೊಟರೆ, ಬಿಲ ಎಲ್ಲ ಕಡೆಯೂ ವಾನರವೀರರು ಸೀತೆ ಯನ್ನು ಹುಡುಕುತ್ತಿದ್ದರು. ಎಲ್ಲೂ ಸೀತೆ ದೊರೆಯಲಿಲ್ಲ. ವನ ಅರಣ್ಯ ಎಲ್ಲವನ್ನೂ ಜಾಲಾಡಿ ದರು. ಹಾಗೇ ಹೋಗುತ್ತಿದ್ದಾಗ ವಾನರರಿಗೆ ಆಯಾಸ ಬಹಳ ಆಯಿತು. ತೀಕ್ಷ್ಣವಾದ ಬಿಸಿಲಿನಲ್ಲಿ ಎಲ್ಲೆಲ್ಲೂ ಸುತ್ತಿ ಅಲೆಯುತ್ತಿದ್ದ ಅವರಿಗೆ ಬಾಯಾರಿಕೆ, ಹಸಿವು ಬಹಳ ಆಯಿತು. ಸೀತೆಯನ್ನೇ ಹುಡುಕುವುದರಲ್ಲಿ ತೊಡಗಿದ್ದ ಅವರು ಈಗ ಆಹಾರ, ನೀರನ್ನು ಹುಡುಕುವ ಪರಿಸ್ಥಿತಿಗೆ ಬಂದರು. ಎಲ್ಲರೂ ಶಾಂತರಾಗಿದ್ದರು. ಎಲ್ಲಾದರೂ ನೀರು ಸಿಕ್ಕೀತೇ ಎಂದು ತಪಿಸುತ್ತಿದ್ದರು. ಆ ವೇಳೆಗೆ ಸರಿಯಾಗಿ ಕೆಲವು ವಾನರರು ಒಂದು ಬಿಲವನ್ನು ಕಂಡರು. ಆ ಬಿಲದಿಂದ ಹಂಸ, ಸಾರಸ, ಮುಂತಾದ ಜಲಪಕ್ಷಿಗಳು ಹೊರಬರುತ್ತಿದ್ದುದನ್ನು ಕಂಡರು. "ಆ ಬಿಲದಲ್ಲಿ ನೀರಿರಬೇಕು" ಎನಿಸಿತು. ಎಲ್ಲರೂ ಆ ಬಿಲದತ್ತ ಹೊರಟರು. ಇಣುಕಿ ನೋಡಿದರೆ ಗಾಢಾಂಧಕಾರ, ಏನೂ ಕಾಣಿಸದು. ಎಲ್ಲ ವಾನರರೂ ಹನುಮಂತನನ್ನು ಮರೆಹೊಕ್ಕರು.

ಹನುಮಂತ ಎಲ್ಲರಿಗಿಂತ ಮುಂದಾಗಿ ಬಿಲದ್ವಾರವನ್ನು ಪ್ರವೇಶಿಸಿದ. ಅವನ ಬಾಲವನ್ನು ಹಿಡಿದ ಒಬ್ಬ ವಾನರವೀರ ತಾನೂ ಬಿಲದ್ವಾರವನ್ನು ಪ್ರವೇಶಿಸಿದ. ಇದರಂತೆ ಒಬ್ಬರ ಬಾಲವನ್ನು ಹಿಡಿದು ಒಬ್ಬ – ಹೀಗೆ ಎಲ್ಲರೂ ಬಿಲವನ್ನು ಪ್ರವೇಶಿಸಿದರು ಹೀಗೆ ಬಹುದೂರ ಹೋದಮೇಲೆ ಪ್ರಕಾಶ ಕಾಣಿಸಿತು. ಅಲ್ಲಿ ನೋಡಿದರೆ ಕಣ್ಣು ಕೋರೈಸುವಂಥ ಕಾಂತಿ ! ಅದು ಒಂದು ದೊಡ್ಡ ಸುವರ್ಣವನ; ಆ ವನದಲ್ಲಿ ಎಲ್ಲಿ ನೋಡಿದರೂ ಬಂಗಾರದ ಮರಗಳು; ಮೌಕ್ತಿಕ ಮಾಲೆಗಳಿಂದ ಶೋಭಿತವಾದ ವೇದಿಕೆ. ಎಲ್ಲಿ ನೋಡಿದರೂ ಪುಷ್ಪಗಳ ರಾಶಿ, ಸುವರ್ಣ, ರತ್ನ. ಬೆಳ್ಳಿಯ ಪಾತ್ರೆಗಳು, ಸ್ಫಟಿಕದಂತೆ ನಿರ್ಮಲವಾದ ಸರೋವರ ಆ ಸರೋವರಕ್ಕೆ ಹವಳದ ಸೋಪಾನಗಳು, ಮುತ್ತಿನ ಅಡಿಕಟ್ಟುಗಳು. ರತ್ನವೇದಿಕೆಯಲ್ಲಿ ಸುವರ್ಣ ಪಾತ್ರೆಯಲ್ಲಿರಿಸಿದ ಬಗೆಬಗೆಯ ಹಣ್ಣುಗಳು.

ರತ್ನದ ಕಾಲುಗಳುಳ್ಳ, ಮುತ್ತುಹಾರಗಳಿಂದ ಅಲಂಕೃತವಾದ ದಿವ್ಯವಾದ ಆಸನಗಳು. ಅವುಗಳ ಕಾಂತಿ ಕಣ್ಣು ಕೋರೈಸುವಂತಹುದು ವೃಕ್ಷಗಳೆಲ್ಲ ಫಲಗಳನ್ನು ಹೊತ್ತಿರುವಂಥವು. ಎಲ್ಲೆಲ್ಲೂ ಸುವರ್ಣಕಾಂತಿ. ಇಂಥ ವಿಸ್ಮಯಕರವಾದ ವನದಲ್ಲಿ ಒಬ್ಬ ತೇಜಸ್ವಿನಿ ನಾರುಡೆ, ಕೃಷ್ಣಾಜಿನವನ್ನು ಧರಿಸಿ ಧ್ಯಾನಾಸಕ್ತಳಾಗಿದ್ದಳು ಎಲ್ಲ ವಾನರರೂ ಅವಳನ್ನು ನೋಡಿ ವಿಸ್ಮಿತರಾದರು.

ಎಲ್ಲರಿಗೂ ಮುಂದಾಳಾಗಿ ಹನುಮಂತ, ಆ ವೃದ್ಧ ತಾಪಸಿಯ ಬಳಿಗೆ ಹೋದ. ಅವಳಿಗೆ ಕೈಮುಗಿದು ನಮಸ್ಕರಿಸಿದ. "ದೇವಿ, ತಾವು ಯಾರು? ಈ ಸುವರ್ಣಮಯವಾದ ವನ ಯಾರದು? ವಾನರರಾದ ನಾವೆಲ್ಲ ಹಸಿವು. ಬಾಯಾರಿಕೆಗಳಿಂದ ಪೀಡಿತರಾಗಿದ್ದೇವೆ. ದಯವಿಟ್ಟು ಇದು ಯಾರದ್ದು ? ತಿಳಿಸು" ಎಂದು ವಿನಯದಿಂದ ಪ್ರಾರ್ಥಿಸಿದ.

ಆ ವೃದ್ಧ ತಾಪಸಿ ಮೆಲ್ಲಗೆ ಕಣ್ತೆರೆದಳು. ಸರ್ವಭೂತಗಳ ಹಿತವನ್ನೇ ಅನುಲಕ್ಷಿಸುವ ಆ ತಪಸ್ವಿನಿ, "ವಾನರಶ್ರೇಷ್ಠ, ಮಯ ಎಂಬ ದಾನವಶಿಲ್ಪಿಯಿಂದ ನಿರ್ಮಿತವಾದದ್ದು ಈ ಸುವರ್ಣವನ ಇದನ್ನು ಬ್ರಹ್ಮದೇವನ ಅನುಗ್ರಹದಿಂದ ದಾನವಶಿಲ್ಪಿ ಮಯ ನಿರ್ಮಿಸಿದ. ಕೆಲಕಾಲದ ನಂತರ ಮಯ ''ಹೇಮ'' ಎಂಬ ಅಪ್ಸರೆಯನ್ನು ಕಾಮಿಸಿದ. ಕ್ರುದ್ಧನಾದ ಇಂದ್ರ ಮಯನನ್ನು ಇಲ್ಲಿಂದ ಹೊಡೆದೋಡಿಸಿದ. ಆಗ ಈ ಸುವರ್ಣಯುಕ್ತವಾದ ವನವನ್ನು ಬ್ರಹ್ಮ ಹೇಮೆಗೆ ಕೊಟ್ಟ.

ನಾನು ಮೇರುಸಾವರ್ಣಿಯ ಮಗಳು ವಾನರರೇ ನೀವೆಲ್ಲ ಹಸಿದಿದ್ದೀರಿ. ಬಾಯಾರಿದ್ದೀರಿ. ಇಲ್ಲಿರುವ ಸ್ವಾದು ಫಲಗಳನ್ನು ತಿಂದು ಭುಜಿಸಿ, ಆ ಸರೋವರದ ನೀರನ್ನು ಕುಡಿಯಿರಿ. ಆಮೇಲೆ ನಿಮ್ಮ ವೃತ್ತಾಂತವನ್ನು ತಿಳಿಸುವಿರಂತೆ" ಎಂದಳು.

ಅದರಂತೆ ವಾನರರೆಲ್ಲ ಮಧುಯುಕ್ತವಾದ ಫಲಗಳನ್ನು ತಿಂದು ಅಮೃತ ಸಮಾನವಾದ ನೀರನ್ನು ಕುಡಿದರು. ಅವರ ಆಯಾಸವೆಲ್ಲ ಪರಿಹಾರವಾಯಿತು.

ಹನುಮಂತ ''ದೇವಿ, ನಿಮ್ಮಿಂದ ಕೊಡಲ್ಪಟ್ಟ ಈ ಫಲ, ನೀರು ನಮ್ಮ ದಣಿವನ್ನು ಆರಿಸಿತು. ನಿಮಗೆ ಧನ್ಯವಾದಗಳು. ನಮ್ಮ ವೃತ್ತಾಂತವನ್ನು ಹೇಳುತ್ತೇನೆ ಕೇಳಿ :

ದಶರಥನೆಂಬ ಚಕ್ರವರ್ತಿಗೆ ರಾಮ ಎಂಬ ಹಿರಿಯ ಮಗ. ಅವನು ತಂದೆಯ ಮಾತಿನಂತೆ ತಮ್ಮ ಲಕ್ಷ್ಮಣನೊಡನೆ, ಪತ್ನಿ ಸೀತೆಯೊಡನೆ ಹದಿನಾಲ್ಕು ವರ್ಷ ಕಾಡಿನಲ್ಲಿರಲು ಬಂದ. ಕಾಡಿನಲ್ಲಿ ರಾಮನ ಪತ್ನಿ ಸೀತೆಯನ್ನು ರಾವಣ ಎಂಬ ರಾಕ್ಷಸ ಅಪಹರಿಸಿದ.

ಸುಗ್ರೀವ ಎಂಬ ವಾನರಶ್ರೇಷ್ಠ ರಾಮನ ಮಿತ್ರ. ಸೀತೆಯನ್ನು ಹುಡುಕುವ ಸಲುವಾಗಿ

ವಾನರ ವೀರರನ್ನು ನಾಲ್ಕು ದಿಕ್ಕಿಗೂ ಕಳುಹಿಸಿದ. ಅದರಂತೆ ನಮ್ಮನ್ನೂ ದಕ್ಷಿಣ ದಿಕ್ಕಿಗೆ ಕಳುಹಿಸಿದ.

ನಾವು ದಕ್ಷಿಣದಿಕ್ಕಿನಲ್ಲಿ ಸೀತೆಯನ್ನು ಹುಡುಕುತ್ತಾ ಬಂದೆವು. ತುಂಬಾ ಆಯಾಸ ಆಯಿತು. ಬಾಯಾರಿಕೆ ಬಹಳ ಆಯಿತು. "ನೀರು ಎಲ್ಲಾದರೂ ಸಿಗುವುದೋ" ಎಂದು ಯೋಚಿಸುತ್ತಿದ್ದಾಗ ಈ ಬಿಲದಿಂದ ಹಂಸ, ಚಕ್ರವಾಕ, ನಾರಸ ಮುಂತಾದ ನೀರಿನ ಹಕ್ಕಿಗಳು ಹೊರಬಂದವು. ಇಲ್ಲಿ ನೀರು ಸಿಕ್ಕೀತು ಎಂಬ ಆಶೆಯಿಂದ ಬಂದೆವು. ನಮಗೆ ನೀವು ಯಥೋಚಿತವಾಗಿ ಸತ್ಕಾರ ಮಾಡಿದಿರಿ. ಇದಕ್ಕೆ ಪ್ರತಿಯಾಗಿ ನಮ್ಮಿಂದ ನಿಮಗೇನಾಗಬೇಕು ತಿಳಿಸಿ ನಾವು ಅದನ್ನು ಮಾಡುತ್ತೇವೆ'' ಎಂದ.

ಹನುಮಂತನ ಮಧುರವಾದ ಮಾತುಗಳನ್ನು ಕೇಳಿದ ಆ ವೃದ್ಧ ತಾಪಸಿ "ನಾನೋ ತಪಸ್ವಿನಿ, ನನಗೆ ನಿಮ್ಮಿಂದ ಏನೂ ಆಗಬೇಕಾಗಿಲ್ಲ" ಎಂದಳು.

ಹನುಮಂತ ವಿನಯದಿಂದ "ದೇವಿ, ಸೀತೆಯನ್ನು ಹುಡುಕಲು ನಮಗೆ ಗೊತ್ತುಮಾಡಿದ್ದ ಕಾಲಾವಧಿ ನಾವು ಇಲ್ಲಿಗೆ ಪ್ರವೇಶಿಸುತ್ತಿದಂತೆಯೇ ಮುಗಿದು ಹೋಗುತ್ತ ಬಂದಿದೆ. ಪುನಃ ನಾವು ಈ ಬಿಲದಿಂದ ಹೊರಗೆ ಹೋಗಲು ಕಷ್ಟ. ದಯವಿಟ್ಟು ನೀವು ನಮ್ಮನ್ನು ಈ ಬಿಲದಿಂದ ಹೊರಗೆ ಕರೆದೊಯ್ಯುವ ಕೃಪೆ ಮಾಡಿ'' ಎಂದು ಪ್ರಾರ್ಥಿಸಿದ.

ಆ ವೃದ್ಧ ತಾಪಸಿ "ಈ ಬಿಲದಿಂದ ಹೊರಗೆ ಹೋಗುವುದು ಕಷ್ಟಸಾಧ್ಯವೇ ಸರಿ. ಆದರೆ, ನನ್ನ ಯೋಗ ಪ್ರಭಾವದಿಂದ ನಿಮ್ಮನ್ನು ಈ ಬಿಲದಿಂದ ಹೊರಗೆ ಕೊಂಡೊಯ್ಯುತ್ತೇನೆ. ನೀವೆಲ್ಲ ನಿಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳಿ ಎಂದಳು. ಅದರಂತೆ ಎಲ್ಲ ಕಪಿಗಳೂ ಕಣ್ಣುಗಳನ್ನು ಮುಚ್ಚಿಕೊಂಡರು. ಆ ತಾಪಸಿ ಬಿಲದ ಹೊರಗೆ ಎಲ್ಲರನ್ನೂ ಕರೆದುತಂದು ಕಣ್ಣನ್ನು ಬಿಡುವಂತೆ ಹೇಳಿದಳು.

"ಇಗೋ ನೋಡಿ, ವಿಂಧ್ಯಪರ್ವತ, ಈ ಕಡೆ ನೋಡಿ, ಸಾಗರ ಭೋರ್ಗರೆಯುತ್ತಿದೆ. ನೀವು ಬಂದ ದಾರಿ ಇದು. ನಿಮಗೆ ಮಂಗಳವಾಗಲಿ. ಇನ್ನು ನಾನು ಬರುತ್ತೇನೆ'' ಎಂದು ತಪಸ್ವಿನಿ ಅದೃಶ್ಯಳಾದಳು.

ನೋಡಿದರು ಕಪಿ ವೀರರೆಲ್ಲ. ಅಗಾಧವಾದ ವಿಂಧ್ಯಪರ್ವತ ಒಂದು ಕಡೆ, ಮತ್ತೊಂದು ಕಡೆ ಭೋರ್ಗರೆಯುತ್ತಿರುವ ಸಾಗರ!

ವಿಂಧ್ಯಪರ್ವತದ ಪ್ರದೇಶದಲ್ಲೆಲ್ಲಾ ಹುಡುಕಿದ್ದಾಯಿತು. ಗಹನವಾದ ಅರಣ್ಯದಲ್ಲಿ ಹೋಗುತ್ತಿದ್ದಾಗ ಒಬ್ಬ ಘೋರನಾದ ರಾಕ್ಷಸನನ್ನು ಕಂಡರು. "ಹೋ, ಇವನೇ ರಾವಣ" ಎಂದುಕೊಂಡು ಅಂಗದ ಮುಷ್ಟಿಯಿಂದ ಗುದ್ದಿದ. ಆ ರಾಕ್ಷಸ ಅಲ್ಲೇ ಸತ್ತುಬಿದ್ದ. ''ಇವನು ರಾವಣನಲ್ಲ, ರಾವಣ ಆಗಿದ್ದರೆ ಒಂದೇ ಏಟಿಗೆ ಸಾಯುತ್ತಿದ್ದನೇ" ಎಂದುಕೊಂಡರು. ಎಲ್ಲ ಕಡೆಯಲ್ಲೂ ಹುಡುಕಿದ್ದಾಯಿತು. ಎಲ್ಲರೂ ಪರ್ವತದ ಪ್ರದೇಶದಲ್ಲಿ ಕುಳಿತರು. "ಮುಂದೇನು ಗತಿ?" ಎಂಬ ಚಿಂತೆ ಎಲ್ಲರನ್ನೂ ಕಾಡುತ್ತಿತ್ತು. ಸ್ವಯಂಪ್ರಭೆಯ ಬಿಲದಲ್ಲೇ ಸುಗ್ರೀವ ಕೊಟ್ಟಿದ್ದ ಅವಧಿ ಮುಗಿದುಹೋಗಿತ್ತು. ಈಗ ಕಿಷ್ಕಿಂಧೆಗೆ ಹೋಗುವುದು ಹೇಗೆ? ಎಂಬ ಚಿಂತೆಯೇ ಪ್ರಬಲವಾಗಿತ್ತು

ಆ ಸಮಯದಲ್ಲಿ ಯುವರಾಜನಾದ ಅಂಗದ ವಾನರರನ್ನು ಕುರಿತು "ವಾನರ ಶ್ರೇಷ್ಠರೆ,

ಸುಗ್ರೀವ ಕೊಟ್ಟ ಕಾಲ ಮುಗಿದುಹೋಯಿತು. ನಾವು ಸೀತೆಯನ್ನು ಕಂಡುಹಿಡಿಯದೆ ಈಗ ಕಿಷ್ಕಿಂಧೆಗೆ ಹಿಂದಿರುಗಿದರೆ ಸುಗ್ರೀವ ನಮ್ಮನ್ನು ಸುಮ್ಮನೆ ಬಿಡುವುದಿಲ್ಲ, ಅವನು ಮಹಾಕ್ರೂರಿ, ರಾಜ್ಯಲೋಭಿ, ವೈರವನ್ನು ಸಾಧಿಸತಕ್ಕವನು. ನನ್ನನ್ನು ನೋಡಿದ ಕೂಡಲೇ ನನ್ನ ತಲೆಯನ್ನು ಕಡಿದುಹಾಕುತ್ತಾನೆ, ಆದ್ದರಿಂದ ಕಿಷ್ಕಿಂಧೆಗೆ ಹೋಗುವುದು ಸಾಧ್ಯವಿಲ್ಲದ ಮಾತು. ಇಲ್ಲೇ ಸಮುದ್ರದ ದಡದಲ್ಲಿ ಪ್ರಾಯೋಪವೇಶ ಮಾಡಿ ಪ್ರಾಣ ಬಿಡುವುದು ಒಳ್ಳೆಯದು ಎಂದು ನಿಶ್ಚಯಿಸಿದ್ದೇನೆ" ಎಂದ. ಅಂಗದನ ಮಾತನ್ನು ಕೇಳಿ ಎಲ್ಲ ವಾನರರೂ ದುಃಖಿಸಿದರು. ತಾರ ಎಂಬ ಕಪಿ ಹೇಳಿದ ''ಕಿಷ್ಕಿಂಧೆಗೆ ಹಿಂದಿರುಗುವುದೂ ಬೇಡ. ಇಲ್ಲಿರುವುದೂ ಬೇಡ. ಉಪವಾಸ ಮಾಡಿ ಸಾಯುವುದೂ ಬೇಡ. ಎಲ್ಲರೂ ಸ್ವಯಂಪ್ರಭೆಯ ಬಿಲಕ್ಕೆ ಹೊರಟು ಹೋಗೋಣ. ತಿನ್ನಲು ಅಲ್ಲಿ ಮಧುರವಾದ ಫಲಗಳು, ಕುಡಿಯಲು ಅಮೃತಸದೃಶವಾದ ನೀರು ಎಲ್ಲ ಇದೆ. ಅಲ್ಲೇ ಸುಖವಾಗಿ ಇದ್ದುಬಿಡೋಣ" ಎಂದ. ಎಲ್ಲ ವಾನರರೂ "ತಾರ ಹೇಳಿದ್ದೇ ಸರಿ. ಹಾಗೆಯೇ ಮಾಡೋಣ" ಎಂದರು.

ವಾನರರಲ್ಲಿ ಒಡಕು ಉಂಟಾಗುತ್ತಿರುವುದನ್ನು ಗಮನಿಸಿದ ಹನುಮಂತ, ಒಗ್ಗಟ್ಟು ಕಾರ್ಯಸಾಧನೆಗೆ ತಳಹದಿ ಎಂದು ಯೋಚಿಸಿ "ಅಂಗದ, ಯುವರಾಜ ಕುಮಾರ, ನೀನು ಹೇಳುವುದು ಸರಿಯಲ್ಲ. ನಾವೆಲ್ಲ ಈ ಗುಹೆಯಲ್ಲಿ ಇದ್ದರೆ ಕ್ಷೇಮ ಎಂದು ಎಲ್ಲರೂ ತಿಳಿದಿರುವಿರಿ. ಅದೂ ಸರಿಯಲ್ಲ. ಲಕ್ಷ್ಮಣನ ತೀಕ್ಷ್ಣವಾದ ಬಾಣಗಳು ಈಗಾಗಲೇ ದೇವೇಂದ್ರನ ವಜ್ರಾಘಾತದಿಂದ ಊನವಾಗಿರುವ ಈ ಬಿಲವನ್ನು ಸಂಪೂರ್ಣವಾಗಿ ನಾಶಮಾಡಿಬಿಡುತ್ತದೆ. ಲಕ್ಷ್ಮಣನ ಬಾಣ ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಎಡೆ ತಡೆಯಿಲ್ಲದೆ ಹೋಗುವಂಥ ಸಾಮರ್ಥ್ಯವುಳ್ಳದ್ದು ಎಂದ ಮೇಲೆ ಈ ಗುಹೆಯಲ್ಲಿ ಎಲ್ಲರೂ ಸುರಕ್ಷಿತವಾಗಿರಲು ಹೇಗೆ ಸಾಧ್ಯ ?

ಅಂಗದ, ನೀ ತಿಳಿದುಕೊಂಡಂತೆ ಸುಗ್ರೀವ ಕ್ರೂರಿ ಅಲ್ಲ. ಅವನು ಧರ್ಮಾತ್ಮ. ನಿನ್ನ ತಾಯಿಗೆ ಪ್ರಿಯವನ್ನುಂಟುಮಾಡಬೇಕು ಎಂದೇ ಇಚ್ಛಿಸುವವನು. ಆದ್ದರಿಂದ ಅವನು ನಿನಗೆ ಯಾವ ಕೆಡಕನ್ನೂ ಮಾಡುವುದಿಲ್ಲ. ಅಲ್ಲದೆ, ಸುಗ್ರೀವನಿಗೆ ಸ್ವಂತ ಮಕ್ಕಳಿಲ್ಲ. ಆದ ಕಾರಣ ಅವನು ನಿನ್ನನ್ನು ಮಗನಂತೆಯೇ ಕಾಣುತ್ತಾನೆ. ಸುಗ್ರೀವನ ನಂತರ ನೀನೇ ವಾನರ ರಾಜ್ಯಕ್ಕೆ ಅಧಿಪತಿ ಆಗುತ್ತೀಯೆ. ಆದ್ದರಿಂದ, ಹಿಂದಿರುಗುವುದೇ ಒಳ್ಳೆಯದು. ಅಲ್ಲದೆ, ಈ ವಾನರರೆಲ್ಲ ಚಪಲಚಿತ್ತರು. ಬಹಳ ಕಾಲ ಪತ್ನೀ ಪುತ್ರರನ್ನು ಅಗಲಿ ಇರರು. ಬಹಳಕಾಲದವರೆಗೆ ಅವರು ನಿನ್ನ ಮಾತನ್ನು ಕೇಳುವಂಥವರೂ ಅಲ್ಲ. ಆದ್ದರಿಂದ, ಹಿಂದಿರುಗುವುದೇ ಸರಿ" ಎಂದ.

ಅಂಗದ, ''ಹನುಮಂತ, ನೀ ಏನೋ ಸುಗ್ರೀವ ಧರ್ಮಾತ್ಮ ಎಂದೆ. ಆದರೆ ಅದನ್ನು ನಾ ಒಪ್ಪುವುದಿಲ್ಲ. ನಮ್ಮ ತಂದೆ ಇದ್ದಾಗಲೇ ಅವನ ಪತ್ನಿಯನ್ನು ಇಚ್ಛಿಸಿದವ ಅವನು. ಏನೇ ಆದರೂ ನಾನು ಕಿಷ್ಕಿಂಧೆಗೆ ಹಿಂದಿರುಗುವುದಿಲ್ಲ ಬೇಕಾದರೆ ನೀವೆಲ್ಲ ಹಿಂದಿರುಗಿ. ಚಿಕ್ಕಪ್ಪನಾದ ಸುಗ್ರೀವನಿಗೂ ಚಿಕ್ಕಮ್ಮ ರುಮೆಗೂ ನನ್ನ ವಿಷಯವನ್ನು ತಿಳಿಸಿ. ತಾಯಿ ತಾರೆಯನ್ನು ಸಮಾಧಾನಗೊಳಿಸಿ. ನಾನು ಇಲ್ಲೇ ದಕ್ಷಿಣಾಗ್ರವಾಗಿ ದರ್ಭೆಯನ್ನು ಹಾಸಿ ಪೂರ್ವಾಭಿಮುಖವಾಗಿ ಕುಳಿತು ಪ್ರಾಯೋಪವೇಶ ಮಾಡಿ ಪ್ರಾಣ ಬಿಡುತ್ತೇನೆ'' ಎಂದು ಹೇಳಿ ಪ್ರಾಯೋಪವೇಶಕ್ಕೆ ಸಿದ್ಧನಾಗಿಯೇ ಬಿಟ್ಟ.

ಅಂಗದ ಪ್ರಾಯೋಪವೇಶ ಮಾಡಲು ಸಿದ್ಧನಾದದ್ದನ್ನು ಕಂಡು ಎಲ್ಲ ವಾನರರೂ ತಾವೂ

ಪೂರ್ವಾಭಿಮುಖವಾಗಿ ಕುಳಿತು ಉಪವಾಸಮಾಡಿ ಪ್ರಾಣ ಬಿಡಲು ನಿಶ್ಚಯಿಸಿದರು.

ಹಾಗೆ ವ್ಯಥಿತರಾಗಿ ಎಲ್ಲರೂ ಇದ್ದಾಗ ಅಂಗದ ಹೇಳತೊಡಗಿದ. ''ಎಲ್ಲೋ ನಮ್ಮ ಪಾಡಿಗೆ ಇದ್ದ ನಾವು ಈಗ ಈ ಸ್ಥಿತಿಗೆ ಬಂದೆವು. ಆ ದಶರಥ ಯಾಗ ಮಾಡಿದ್ದರಿಂದ ರಾಮಾದಿಗಳು ಜನಿಸಿದರು.

ತಂದೆಯ ಆಜ್ಞೆಯನ್ನು ಪಾಲಿಸಲು ಹೊರಟ ರಾಮನನ್ನು ಸೀತೆಯೂ ಅನುಸರಿಸಿದಳು. ಅವಳನ್ನು ರಾವಣ ಅಪಹರಿಸಿದ. ಆದರಿಂದ ಸೀತೆಯನ್ನು ಹುಡುಕುತ್ತಾ ಸುಗ್ರೀವನ ಸಖ್ಯ ಆಯಿತು. ಸುಗ್ರೀವ ನಮ್ಮನ್ನು ಕಳುಹಿಸಿದ. ನಮಗೆ ಈ ಗತಿ ಬಂದಿತು. ಇಷ್ಟಕ್ಕೆಲ್ಲ ಆ ಮಹಾತಾಯಿ ಕೈಕೇಯಿ ವರ ಕೇಳಿದ್ದೇ ಮೂಲ'' ಎಂದ.

ವಾನರರು ಪರಸ್ಪರ ಹೀಗೆ ಮಾತಾಡಿಕೊಳ್ಳುತ್ತಿದ್ದುದನ್ನು ವಿಂಧ್ಯಪರ್ವತದ ಕಂಧರದಲ್ಲಿದ್ದ "ಸಂಪಾತಿ" ಎಂಬ ಹದ್ದು ಗಮನಿಸಿತು. ಬಹಳ ಕಾಲದಿಂದ ಆಹಾರಕ್ಕೆ ಕೊರತೆಯಾಗಿತ್ತು ಅದಕ್ಕೆ. ಇಷ್ಟೊಂದು ವಾನರರನ್ನೂ ತಿನ್ನುವ ಸದವಕಾಶ ದೊರಕಿತಲ್ಲಾ ಎಂದು ಆ ಹದ್ದು ತೆವಳಿಕೊಂಡು ಶಿಖರದ ಮೇಲೆ ಬಂದು ಕುಳಿತುಕೊಂಡಿತು

ಭೀಮಕಾಯದ ಆ ಗೃಧ್ರವನ್ನು ಕಂಡ ವಾನರರು ಭಯಪಟ್ಟರು ಅಂಗದ, "ವಾನರರೇ, ನೋಡಿ. ಯಮದೂತ ಈಗಾಗಲೇ ನಮ್ಮನ್ನು ತಿನ್ನಲು ಬಂದಿದಾನೆ. ಆ ಜಟಾಯು ಪುಣ್ಯವಂತ. ರಾವಣನೊಡನೆ ಹೋರಾಡಿ ರಾಮಸೇವೆಗಾಗಿ ತನ್ನ ಪ್ರಾಣವನ್ನೇ ತೆತ್ತ. ಆ ಜಟಾಯುವಿನಂತೆ ನಾವೂ ಈಗ ಸಾಯಲು ಸಿದ್ಧರಾಗೋಣ !" ಎಂದ.

''ಜಟಾಯು'' ಎಂಬ ಶಬ್ದ ಕೇಳಿದ ಒಡನೆ ಸಂಪಾತಿಯ ಕಿವಿಗಳು ನಿಮಿರಿದವು. ತನ್ನ ಪ್ರೀತಿಯ ತಮ್ಮ ಜಟಾಯುವಿಗೂ ತನ್ನ ಸ್ನೇಹಿತ ದಶರಥನ ಮಗ ರಾಮನಿಗೂ ಹೇಗೆ ಪರಿಚಯ ಆಯಿತು ಎಂದು ಕುತೂಹಲವಾಯಿತು. ಆ ಗೃಧ್ರರಾಜ. "ವಾನರರೇ, ನನ್ನನ್ನು ಈ ಶಿಖರದಿಂದ ಕೆಳಗಿಳಿಸಿ. ನೀವು ಅದೇನೋ ಜಟಾಯುವಿನ ಬಗ್ಗೆ ಹೇಳುತ್ತಿದ್ದೀರಲ್ಲ – ಅದನ್ನು ಕೇಳಲು ಇಚ್ಛಿಸುತ್ತೇನೆ" ಎಂದಿತು.

ಸಂಪಾತಿಯ ಮಾತುಗಳಲ್ಲಿ ಯಾರಿಗೂ ನಂಬಿಕೆ ಬರಲಿಲ್ಲ. "ತಮ್ಮನ್ನು ತಿನ್ನಲು ಈ ಹಂಚಿಕೆ ಹೂಡಿದೆ ಈ ಹದ್ದು" ಎಂದುಕೊಂಡರು ವಾನರರು. ಆದರೂ ಅಂಗದ "ಸಾಯಲು ಹೇಗಿದ್ದರೂ ಸಿದ್ಧವಾಗಿದೇವೆ. ನಮ್ಮ ಇಚ್ಛೆ ಬೇಗ ಪೂರ್ಣವಾದಂತಾಗುತ್ತದೆ" ಎಂದು ಸಂಪಾತಿಯನ್ನು ಕೆಳಗಿಳಿಸಿದ. ಆಗ ಸಂಪಾತಿ, "ಜಟಾಯು ನನ್ನ ತಮ್ಮ. ನೀವೇನೋ ಜಟಾಯುವಿನ ಬಗ್ಗೆ ಹೇಳುತ್ತಿದ್ದಿರಲ್ಲ. ವಿವರವಾಗಿ ಹೇಳಿ" ಎಂದಿತು.

ಅಂಗದ ರಾಮಲಕ್ಷ್ಮಣರು ಸೀತೆಯೊಡನೆ ಕಾಡಿಗೆ ಬಂದದ್ದನ್ನೂ ಅಲ್ಲಿ ಅವರಿಗೆ ಜಟಾಯುವಿನ ಸ್ನೇಹ ಆದದ್ದನ್ನೂ, ಸೀತೆಯನ್ನು ರಾವಣ ಅಪಹರಿಸಿಕೊಂಡು ಹೋದದ್ದನ್ನೂ ಆಗ ಸೀತೆ ಸಹಾಯಕ್ಕಾಗಿ ಕೂಗಿದ್ದನ್ನು ಕೇಳಿ ಜಟಾಯು ರಾವಣನೊಡನೆ ಹೋರಾಡಿ ಪ್ರಾಣ ಬಿಟ್ಟಿದ್ದನ್ನೂ, ಮುಂದೆ ರಾಮ ಸುಗ್ರೀವರ ಸಖ್ಯವನ್ನೂ, ವಾಲಿವಧೆಯನ್ನೂ, ಸುಗ್ರೀವ ನಾಲ್ಕು ದಿಕ್ಕುಗಳಿಗೂ ಸೀತಾನ್ವೇಷಣೆಗಾಗಿ ವಾನರರನ್ನು ಕಳುಹಿಸಿದುದನ್ನೂ ವಿಶದವಾಗಿ ತಿಳಿಸಿದ.

ಜಟಾಯು ಸತ್ತದ್ದನ್ನು ಕೇಳಿದ ಜಟಾಯುವಿನ ಅಣ್ಣ ಸಂಪಾತಿ ತೀವ್ರ ಸಂತಾಪಕ್ಕೊಳಗಾದ. ವಾನರರನ್ನು ಸಮುದ್ರದ ದಂಡೆಗೆ ಕರೆದೊಯ್ಯುವಂತೆ ಬೇಡಿಕೊಂಡ. ಸಮುದ್ರದಲ್ಲಿ ಸ್ನಾನ ಮಾಡಿ

ಜಟಾಯುವಿಗೆ ಜಲತರ್ಪಣ ಕೊಟ್ಟ. ಅನಂತರ ಸಂಪಾತಿ ಸೀತೆ ಇರುವ ಸ್ಥಳವನ್ನೂ ತನ್ನ ವೃತ್ತಾಂತವನ್ನೂ ಹೇಳತೊಡಗಿದ.

"ವಾನರರೇ, ನೀವು ಹೇಳುವಂತೆ ರಾವಣ ಸೀತೆಯನ್ನು ಹೊತ್ತುಕೊಂಡು ಲಂಕೆಯಲ್ಲಿಟ್ಟಿದಾನೆ. ಕೆಲವು ತಿಂಗಳ ಹಿಂದೆ ನಾನು, ಸೂರ್ಯಪ್ರಭೆಯನ್ನು ಹೋಲುವ ಒಬ್ಬ ಸ್ತ್ರೀಯನ್ನು ಒಬ್ಬ ರಾಕ್ಷಸ ಹೊತ್ತುಕೊಂಡು ಹೋಗುತ್ತಿದ್ದುದನ್ನು ಕಂಡೆ. ಆಹಾರಕ್ಕಾಗಿ ಹೋಗಿದ್ದ ನನ್ನ ಮಗನೂ ಅದೇ ರೀತಿಯಲ್ಲೇ ಹೇಳಿದ. ಈಗ ನಾನು ಜ್ಞಾನದೃಷ್ಟಿಯಿಂದ ನೋಡುತ್ತಿದೇನೆ. ಪಕ್ಷಿಗಳಿಗೆ ದೂರದೃಷ್ಟಿ ಉಂಟು. ಸೀತೆ ರಾವಣನ ರಾಜಧಾನಿಯಲ್ಲಿ ಇರುವುದನ್ನು ಕಾಣುತ್ತಿದೇನೆ; ಸೀತೆ ಪೀತವರ್ಣದ ವಸ್ತ್ರವನ್ನು ಧರಿಸಿ ಶೋಕದಿಂದ ಕುಳಿತಿದಾಳೆ. ಅವಳ ಸುತ್ತಲೂ ಭಯಂಕರವಾದ ರಾಕ್ಷಸಿಯರು ಕಾವಲಿದ್ದಾರೆ. ಇಲ್ಲಿಂದ ಲಂಕೆ ನೂರು ಯೋಜನಗಳ ದೂರದಲ್ಲಿದೆ. ಅದು ದಕ್ಷಿಣ ಸಮುದ್ರದಲ್ಲಿಯ ಒಂದು ದ್ವೀಪ. ರಾವಣ ವಿಶ್ರವಸ್ಸಿನ ಮಗ. ಮಹಾಪರಾಕ್ರಮಿ. ಅವನಿಂದ ಪಾಲಿತವಾದ ಲಂಕೆಯಲ್ಲಿ ಸೀತೆ ಇದಾಳೆ. ನೀವು ಯಾರಾದರೂ ಹೋಗಿ ಅವಳನ್ನು ಕಂಡು ಬನ್ನಿ" ಎಂದು ಸಂಪಾತಿ ಸೀತೆ ಇರುವ ಸ್ಥಳವನ್ನು ತಿಳಿಸುತ್ತಿದ್ದಂತೆಯೇ ಆ ಸಂಪಾತಿಯ ಸುಟ್ಟುಹೋದ ರೆಕ್ಕೆಗಳು ಪುನಃ ಮೊಳೆತವು. ಬಲ ಹೆಚ್ಚಾಗುತ್ತ ಬಂದಿತು.

ತನ್ನ ರೆಕ್ಕೆಗಳು ಮೊಳೆತಿದ್ದನ್ನು ಕಂಡ ಸಂಪಾತಿ ಸಂತೋಷದಿಂದ "ವಾನರ ಶ್ರೇಷ್ಠರೆ, ನನ್ನ ವೃತ್ತಾಂತವನ್ನೂ ಹೇಳುತ್ತೇನೆ ಕೇಳಿ. ನಾನು, ಜಟಾಯು ಇಬ್ಬರೂ ಅಣ್ಣತಮ್ಮಂದಿರು. ಮಹಾಪರಾಕ್ರಮಿಗಳು. ನಾವು ಒಂದು ದಿನ ''ಯಾರು ಹೆಚ್ಚು ದೂರ, ಎತ್ತರ ಹಾರುವೆವು ನೋಡೋಣ" ಎಂದು ಪಂಥ ಕಟ್ಟಿಕೊಂಡು ಹಾರತೊಡಗಿದೆವು. ಜಟಾಯು ಬಹಳ ಎತ್ತರ ಹಾರಿದ. ತಮ್ಮನ ಮೇಲಿನ ಪ್ರೀತಿಯಿಂದ, ತಮ್ಮನಿಗೆ ತೊಂದರೆ ಆಗಬಾರದಲ್ಲಾ ಎಂದುಕೊಂಡು ನಾನು ಅವನಿಗಿಂತ ಎತ್ತರ ಹಾರಿ ನನ್ನ ರೆಕ್ಕೆಗಳನ್ನು ಅವನಿಗೆ ನೆರಳಾಗುವಂತೆ ಪಸರಿಸಿದೆ. ಜಟಾಯುವೇನೋ ಸುರಕ್ಷಿತನಾದ. ಆದರೆ, ಸೂರ್ಯನಿಗೆ ಬಹು ಸಮೀಪದಲ್ಲಿ ನಾ ಹೋದೆನಾದ್ದರಿಂದ ನನ್ನ ರೆಕ್ಕೆಗಳು ಸೂರ್ಯನ ಕಿರಣಗಳಿಂದ ಸುಟ್ಟುಹೋದವು. ನಾನು ವಿಂಧ್ಯಪರ್ವತದ ಈ ಕಂದರದಲ್ಲಿ ಜ್ಞಾನಶೂನ್ಯನಾಗಿ ಬಿದ್ದೆ. ಹೀಗೆ ಆರು ದಿನಗಳು ಬಿದ್ದಿದ್ದೆ. ಆಮೇಲೆ ಸ್ವಲ್ಪ ಚೇತರಿಸಿಕೊಂಡು ನಡೆದದ್ದನ್ನು ನೆನಸಿಕೊಂಡೆ. ನನ್ನ ತಮ್ಮ ಜಟಾಯು ಎಲ್ಲಿ ಹೋದನೋ ತಿಳಿಯದೆ ಪರಿತಪಿಸಿದೆ.

ಈ ಪರ್ವತಪ್ರದೇಶದಲ್ಲಿ "ನಿಶಾಕರ"ರೆಂಬ ಮಹರ್ಷಿಗಳಿದ್ದರು. ಅವರನ್ನು ನಮಸ್ಕರಿಸಿ ಪ್ರಾರ್ಥಿಸಿದೆ. ಅವರು ಕರುಣೆಯಿಂದ "ಸಂಪಾತಿ, ನೀನು ಈ ಪ್ರದೇಶದಲ್ಲೇ ಇದ್ದು ಕಾಲವನ್ನು ನಿರೀಕ್ಷಿಸುತ್ತಿರು. ದಶರಥನ ಪುತ್ರ ರಾಮನ ಪತ್ನಿಯಾದ ಸೀತೆಯನ್ನು ಹುಡುಕುತ್ತಾ ವಾನರ ವೀರರು ಇಲ್ಲಿಗೆ ಬರುತ್ತಾರೆ. ಅವರಿಗೆ ನೀನು ಸೀತೆ ಇರುವ ಸ್ಥಳವನ್ನು ತಿಳಿಸಿ ಉಪಕಾರಮಾಡು. ಆ ತಕ್ಷಣವೇ ನಿನ್ನ ರೆಕ್ಕೆಗಳು ಮೊಳೆತು, ನಿನ್ನ ಬಲ ವೃದ್ಧಿಸುತ್ತದೆ" ಎಂದು ಹೇಳಿ ಆ ಮಹರ್ಷಿಗಳು ಪರಲೋಕವನ್ನೈದಿದರು. ಅಂದಿನಿಂದ ನಾನು ಇಲ್ಲೇ ಎಷ್ಟೇ ಕಷ್ಟವಾದರೂ ಆ ಕಾಲವನ್ನು ನಿರೀಕ್ಷಿಸುತ್ತಿದ್ದೆ. ಈಗ, ಆ ಮಹರ್ಷಿ ಹೇಳಿದಂತೆಯೇ ನೀವು ಬಂದಿರಿ. ಅದರಂತೆಯೇ ಸೀತಾ ವೃತ್ತಾಂತವನ್ನು ತಿಳಿಸುತ್ತಲೇ ನನ್ನ ರೆಕ್ಕೆಗಳು ಮೊಳೆತವು. ಇನ್ನು ನಾ ಹೋಗಿಬರುತ್ತೇನೆ. ಕಪಿವೀರರೇ, ನಿಮಗೆ ಮಂಗಳವಾಗಲಿ. ನಿಮ್ಮಲ್ಲಿ ಯಾರಾದರೂ ಈ ಸಮುದ್ರವನ್ನು ದಾಟಿ ಲಂಕೆಯಲ್ಲಿರುವ ಸೀತೆಯನ್ನು ಕಂಡುಬಂದು ರಾಮಸೇವೆಯನ್ನು ಮಾಡಿ. ನಾ ಬರುತ್ತೇನೆ" ಎಂದು ಹೇಳಿ ಸಂಪಾತಿ ಹಾರಿಹೋಯಿತು.

ವಾನರವೀರರೆಲ್ಲ ನೋಡಿದರು. ಬಹಳ ಸಂತೋಷಪಟ್ಟರು. ಸೀತೆಯ ಬಗ್ಗೆ ತಿಳಿದದ್ದರಿಂದ ಬಹಳವಾಗಿ ಆನಂದಪಟ್ಟರು. ಆದರೆ ಅವರ ಆನಂದ ಬಹಳಕಾಲ ಉಳಿಯಲಿಲ್ಲ. ಅವರ ಮುಂದೆ ಅಗಾಧವಾದ ಸಮುದ್ರ ಘೋರ್ಗರೆಯುತ್ತಿತ್ತು. ದುಸ್ಸಾಧ್ಯವಾದ ಈ ಸಾಗರವನ್ನು ದಾಟತಕ್ಕ ಬಲ ಯಾರಿಗುಂಟು ಎಂದು ಎಲ್ಲ ವಾನರರೂ ಚಿಂತಿಸತೊಡಗಿದರು.

ಅಂಗದ, ವಾನರವೀರರನ್ನು ಕೇಳಿದ. ''ನಿಮ್ಮಲ್ಲಿ ಯಾರು ಯಾರಿಗೆ ಎಷ್ಟೆಷ್ಟು ಸಾಮರ್ಥ್ಯ ಇದೆ ತಿಳಿಸಿ" ಎಂದ. ಮಹಾತೇಜಸ್ವಿಯಾದ ಗಜ ಎಂಬ ವಾನರ ಎದ್ದ. ನಾನು "ಹತ್ತು ಯೋಜನ ಹಾರಬಲ್ಲೆ" ಎಂದ, ಗವಾಕ್ಷ ಎಂಬ ಕಪಿವೀರ ನಾನು "ಇಪ್ಪತ್ತು ಯೋಜನ ದಾಟುವೆ" ಎಂದ. ಶರಭ ಎಂಬ ಹರಿಶ್ರೇಷ್ಠ ನಾನು "ಮೂವತ್ತು ಯೋಜನ" ಎಂದ. ಋಷಭ ಎಂಬ ಕಪಿ "ನಾನು ನಲವತ್ತು ಯೋಜನ ಹಾರುತ್ತೇನೆ" ಎಂದ.

ಗಂಧಮಾಧನನೆಂಬ ಮಹಾಕಪಿ "ನಾನು ಐವತ್ತು ಯೋಜನ ಹಾರಬಲ್ಲೆ" ಎಂದ.

ಅಶ್ವಿನೀ ದೇವತೆಗಳ ಅಂಶದಿಂದ ಉತ್ಪನ್ನರಾದವರು, ಮಹಾಬಲಿಗಳಾದ ಮೈಂದ, ದ್ವಿವಿಧರು. ಅವರಲ್ಲಿ ಮೈಂದ "ನಾನು ಅರವತ್ತು ಯೋಜನ ಹಾರಬಲ್ಲೆ" ಎಂದ. ದ್ವಿವಿಧ "ನಾನು ಎಪ್ಪತ್ತು ಯೋಜನ ಹಾರಲು ಶಕ್ತನಾಗಿದೇನೆ" ಎಂದ.

ವೃದ್ಧನಾದ ಜಾಂಬವಂತ ''ನಾನು ಕೃತಯುಗದವನು. ಈಗ ಮುದುಕನಾಗಿ ಬಿಟ್ಟಿದೇನೆ. ಹಿಂದೆ ನಾರಾಯಣನು ತ್ರಿವಿಕ್ರಮಾವತಾರ ಮಾಡಿ ಮೂರು ಲೋಕಗಳನ್ನೂ ಅಳೆದ. ಆಗ ನಾನು ಆ ತ್ರಿವಿಕ್ರಮನನ್ನು ಪ್ರದಕ್ಷಿಣೆ ಮಾಡಿದೆ. ಈಗ ಶಕ್ತಿ ಕುಂದಿದೆ. ಆದರೂ ತೊಂಬತ್ತು ಯೋಜನ ಹಾರಬಲ್ಲೆ" ಎಂದ.

ಯುವರಾಜನಾದ ಅಂಗದ "ನಾನೇನೋ ನೂರು ಯೋಜನಗಳನ್ನು ದಾಟಬಲ್ಲೆ. ಆದರೆ ಹಿಂದಿರುಗಿ ಬರುತ್ತೇನೋ ಇಲ್ಲವೋ ಎಂದು ಸಂದೇಹ" ಎಂದ.

ಜಾಂಬವಂತ "ಯುವರಾಜ ಕುಮಾರ. ನೀನು ನೂರು ಯೋಜನಗಳನ್ನೂ ದಾಟಲೂ ಶಕ್ತ, ಹಿಂದಿರುಗಿ ಬರಲೂ ಸಮರ್ಥನೇ, ಆದರೆ ಭೃತ್ಯರಿರುವಾಗ ಸ್ವಾಮಿಯನ್ನು ಕಳುಹಿಸುವುದು ತರವಲ್ಲ. ಆದ್ದರಿಂದ ನಿನ್ನನ್ನು ಕಳುಹಿಸುವುದು ಉಚಿತವಲ್ಲ" ಎಂದ. ಎಲ್ಲರೂ ಈಗೇನು ಮಾಡುವುದು? ಎಂದು ಚಿಂತಾಕ್ರಾಂತರಾದರು. ಆಗ ಜಾಂಬವಂತ ದೂರದಲ್ಲಿ ಏಕಾಂತದಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದ ಹನುಮಂತನನ್ನು ಕಂಡ. ಹನುಮಂತನ ಬಳಿಗೆ ಹೋಗಿ ಅವನನ್ನು ಪ್ರಾರ್ಥಿಸತೊಡಗಿದ.

''ವೀರಶ್ರೇಷ್ಠ, ಎಲ್ಲರೂ ರಾಮಕಾರ್ಯವನ್ನು ಹೇಗೆ ನಡೆಸುವುದು ಎಂದು ಚಿಂತಾಕ್ರಾಂತರಾಗಿರುವಾಗ ನೀ ಮಾತ್ರ ಏಕಾಂತದಲ್ಲಿ ಕುಳಿತಿರುವೆ ಏಕೆ ? ನೀ ಸಾಮಾನ್ಯನಲ್ಲ, ಹನುಮ. ನಿನ್ನ ಜನ್ಮವೃತ್ತಾಂತವನ್ನು ಹೇಳುತ್ತೇನೆ ಕೇಳು.

"ಪುಂಜಿಕಸ್ಥಲಿ" ಎಂಬ ಅಪ್ರತಿಮ ಸೌಂದರ್ಯವತಿ ಅಪ್ಸರೆಯೇ ಶಾಪವಶದಿಂದ "ಅಂಜನೆ" ಎಂಬ ವಾನರಿಯಾದಳು. ಮಹಾಪರಾಕ್ರಮಿಯಾದ ಕೇಸರಿಯ ಪತ್ನಿ ಅವಳು.

ವಾಯುವಿನ ಮನಸ್ಸಂಕಲ್ಪದಿಂದ ಅಂಜನೆಗೆ ಮಗನಾಗಿ ನೀ ಹುಟ್ಟಿದೆ. ಹುಟ್ಟಿದ ಒಡನೆಯೇ ಉದಯಿಸುತ್ತಿದ್ದ ಸೂರ್ಯನನ್ನು ಕಂಡು "ಫಲ" ಎಂದುಕೊಂಡು ಸೂರ್ಯಮಂಡಲಕ್ಕೇ ಹಾರಿದೆ. ಆಗ ಇಂದ್ರ ವಜ್ರಾಯುಧದಿಂದ ನಿನ್ನನ್ನು ಹೊಡೆದ. ಅದರಿಂದ ನಿನ್ನ ಕೆನ್ನೆ ಒಂದು ಪಕ್ಕಕ್ಕೆ ಊದಿತು. ಆದ್ದರಿಂದ ''ಹನುಮಂತ'' ಎನಿಸಿಕೊಂಡೆ.

ಇಂದ್ರ ನಿನ್ನನ್ನು ಘಾತಿಸಿದ್ದಕ್ಕೆ ವಾಯು ಕುಪಿತನಾದ. ವಾಯುವನ್ನು ಪ್ರಸನ್ನಗೊಳಿಸಲು ಬ್ರಹ್ಮಾದಿ ದೇವತೆಗಳೇ ನಿನಗೆ ವರಕೊಟ್ಟರು. ನೀ ಸಾಮಾನ್ಯನಲ್ಲ. ಅಪ್ರತಿಮ ವೀರ, ಮಹಾ ಬಲಶಾಲಿ. ಅಂಥ ನೀನು ಈ ಸಾಗರವನ್ನು ಸುಲಭವಾಗಿ ದಾಟುವ ಶಕ್ತಿಯನ್ನು ಪಡೆದಿರುವೆ. ಹೀಗಿದ್ದೂ ಸುಮ್ಮನೆ ಏಕೆ ಕುಳಿತಿರುವೆ ? ಏಳು ವೀರವರ, ಸಾಗರವನ್ನು ಲಂಘಿಸಿ ರಾಮಪತ್ನಿಯನ್ನು ಹುಡುಕಿಕೊಂಡು ಬಾ.

ಈ ಕಪಿವೀರರಿಗೆಲ್ಲ ಪ್ರಾಣದಾನ ಮಾಡು. ಪ್ರಾಣದಾತ ಹನುಮಂತ ! ನೀ ನಿಜವಾಗಿ ಈ ಕಾರ್ಯವನ್ನು ಸಾಧಿಸುವ ಸಾಮರ್ಥ್ಯ ಉಳ್ಳವನು. ನೀ ಬರುವವರೆಗೆ ನಾವೆಲ್ಲ ಒಂದೇ ಕಾಲಿನಲ್ಲಿ ನಿಂತು ನಿನ್ನ ಬರವನ್ನೇ ನಿರೀಕ್ಷಿಸುತ್ತಾ ಇರುತ್ತೇವೆ. ನೀನು ಸಮುದ್ರವನ್ನು ಹಾರಿ ಸೀತೆಯ ನಿವಾಸವನ್ನು ಹುಡುಕಿ ಬಾ, ನಿನಗೆ ಮಂಗಳವಾಗಲಿ – ಆಂಜನೇಯ, ವೀರಶ್ರೇಷ್ಠ, ನಮ್ಮೆಲ್ಲರಿಗೂ ಪ್ರಾಣದಾನ ಮಾಡು" ಎಂದ.

ಜಾಂಬವಂತನ ಉತ್ಸಾಹಪೂರಿತವಾದ ಮಾತು ಹನುಮಂತನಿಗೆ ಉತ್ತೇಜನವನ್ನು ಕೊಟ್ಟಿತು ಒಡನೆ ಕುಳಿತಲ್ಲಿಂದ ಎದ್ದ. ಹಿರಿಯರಾದ ಕಪಿವೀರರಿಗೆ ನಮಸ್ಕರಿಸಿದ. ತನ್ನ ಬಲದಲ್ಲಿ ನಂಬಿಕೆ ಬಂದಿತು. ಅಲ್ಲಿದ್ದ ಮಹೇಂದ್ರ ಪರ್ವತವನ್ನು ಹತ್ತಿನಿಂತ. ತನ್ನ ಶರೀರವನ್ನು ಬೆಳೆಸತೊಡಗಿದ. ನೋಡುತ್ತಿದ್ದಂತೆ ತ್ರಿವಿಕ್ರಮನಂತೆ ಬೆಳೆಯತೊಡಗಿದ, ಹನುಮಂತ. ಮಹಾತೇಜಸ್ವಿಯಾಗಿ ಸೂರ್ಯನಂತೆ ಬೆಳಗುತ್ತಿದ್ದ ಆಂಜನೇಯ ಶರೀರವನ್ನು ಹಿಗ್ಗಿಸಿದ. ಮಹೇಂದ್ರ ಪರ್ವತದ ಮೇಲೆ ತನ್ನ ಪಾದಗಳೆರಡನ್ನೂ ಊರಿ ನಿಂತು ಮನಸ್ಸಿನಿಂದಲೇ ಲಂಕೆಯನ್ನು ಸೇರಿದ, ತಾನು ಹೋಗಬೇಕಾದ ಗುರಿಯನ್ನು ಚೆನ್ನಾಗಿ ದೃಢಮಾಡಿಕೊಂಡ. ಮಹೇಂದ್ರ ಪರ್ವತವನ್ನು ಹತ್ತಿ ಮಹದಾಕಾರವಾಗಿ ಬೆಳೆದು ಶತಯೋಜನ ವಿಸ್ತಾರವಾದ ಸಾಗರವನ್ನು ದಾಟಲು ಸಿದ್ಧನಾಗಿ ನಿಂತ.



# ಸುಂದರಕಾಂಡ

## ಸುಂದರಕಾಂಡದ ವೈಶಿಷ್ಟ್ಯ

ವಾಲ್ಮೀಕಿ ರಾಮಾಯಣದ ಎಲ್ಲ ಕಾಂಡಗಳಿಗೂ ಅವಕ್ಕೆ ಸಮನ್ವಯವಾಗುವಂತೆ ಹೆಸರಿಟ್ಟಿದ್ದಾರೆ. ರಾಮನ ಬಾಲ್ಯಕಾಲದಲ್ಲಿ ನಡೆದದ್ದು "ಬಾಲಕಾಂಡ" ಎಂದಾದರೆ, ಅಯೋಧ್ಯೆಯಲ್ಲಿ ನಡೆದ ವಿಷಯಗಳನ್ನೊಳಗೊಂಡ ಎರಡನೆಯ ಕಾಂಡ ಅಯೋಧ್ಯಾಕಾಂಡ ಎಂದು ಹೆಸರಾಯಿತು. ಹಾಗೆಯೇ, ಅರಣ್ಯದಲ್ಲಿ ನಡೆದ ವಿಷಯಗಳನ್ನು ವಿವರಿಸುವ ಕಾಂಡ "ಅರಣ್ಯಕಾಂಡ" ಎಂದೂ, ಕಿಷ್ಕಿಂಧೆಯಲ್ಲಿ ನಡದದ್ದನ್ನು ವರ್ಣಿಸುವ ಕಾಂಡ ''ಕಿಷ್ಕಿಂಧಾಕಾಂಡ'' ಎಂದೂ ಹೆಸರಾದವು. ಯುದ್ಧವನ್ನು ವಿವರಿಸುವ ಕಾಂಡಕ್ಕೆ "ಯುದ್ಧಕಾಂಡ'' ಎಂದು ಹೆಸರುಕೊಟ್ಟರು.

ಆದರೆ ರಾಮಾಯಣದಲ್ಲಿ ಐದನೆಯ ಕಾಂಡಕ್ಕೆ ಸುಂದರಕಾಂಡ ಎಂದು ಹೆಸರಿಟ್ಟರು. ಸುಂದರಕಾಂಡದಲ್ಲಿ ಹನುಮಂತನ ಪ್ರಭಾವವೇ ಹೆಚ್ಚಾಗಿರುವುದರಿಂದ "ಹನುಮಕಾಂಡ ಎಂದಿಡಬೇಕಿತ್ತು. ಅಲ್ಲದೆ ಸುಂದರಕಾಂಡದಲ್ಲಿ ಸೀತೆಯ ವಿಷಯವನ್ನೇ ಹೆಚ್ಚಾಗಿ ಹೇಳುವುದರಿಂದ ''ಸೀತಾಕಾಂಡ" ಎಂದಾದರೂ ಹೇಳಬಹುದಿತ್ತು. ಸುಂದರಕಾಂಡದಲ್ಲಿ ಲಂಕೆಯಲ್ಲಿ ನಡೆದ ವಿದ್ಯಮಾನಗಳೇ ಪ್ರಧಾನ. ಆದ್ದರಿಂದ "ಲಂಕಾಕಾಂಡ" ಎಂದಾದರೂ ಕರೆಯಬಹುದಿತ್ತು. ಇದೆಲ್ಲವನ್ನೂ ಬಿಟ್ಟು ವಾಲ್ಮೀಕಿ ಈ ಕಾಂಡವನ್ನು "ಸುಂದರಕಾಂಡ" ಎಂದು ಕರೆದರು.

ಇದಕ್ಕೆ ಕಾರಣಗಳುಂಟು. ಆ ಕಾರಣಗಳೆಲ್ಲ ಸುಂದರಕಾಂಡದ ವೈಶಿಷ್ಟ್ಯವನ್ನೇ ಎತ್ತಿ ಹಿಡಿಯುತ್ತವೆ. ರಾಮಾಯಣವೆಂಬ ರತ್ನಮಾಲೆಯಲ್ಲಿ ಸುಂದರಕಾಂಡ ಮಧ್ಯದ ವೈಢೂರ್ಯದ ಪದಕದಂತೆ ಶೋಭಿಸುತ್ತಿದೆ. ಸಕ್ಕರೆ ಬೊಂಬೆಯನ್ನು ಮುರಿದು ತಿಂದಾಗ ಅದರ ಎಲ್ಲ ಭಾಗವೂ ಸಿಹಿಯಾಗಿಯೇ ಇರುತ್ತದೆ. ಹಾಗೆಯೇ ಸುಂದರಕಾಂಡದಲ್ಲಿ ಎಲ್ಲವೂ ಸುಂದರ. ನಾನಾ ವಿಧವಾದ ಸೌಂದರ್ಯಗಳೆಲ್ಲ ಸುಂದರಕಾಂಡದಲ್ಲಿ ಅಡಕವಾಗಿವೆ.

ಕಾವ್ಯದಲ್ಲಿ ನಾನಾಬಗೆಯ ಸೌಂದರ್ಯ ಕಾಣಬರುತ್ತದೆ. ''ರಾಮಾಯಣ'' ಎಂಬ ಮಹಾಕಾವ್ಯದಲ್ಲಿ ವಾಲ್ಮೀಕಿ ಕಾವ್ಯಸೌಂದರ್ಯದ ಪರಾಕಾಷ್ಠೆಯನ್ನು ಈ ಸುಂದರಕಾಂಡದಲ್ಲಿ ಚಿತ್ರಿಸಿದ್ದಾರೆ.

ಶಬ್ದಾಲಂಕಾರ, ಅರ್ಥಾಲಂಕಾರ, ಇವು ಕಾವ್ಯಕನ್ನಿಕೆಯ ಎರಡು ಕಣ್ಣುಗಳು. ಅವುಗಳನ್ನು ವಾಲ್ಮೀಕಿ ಸುಂದರಕಾಂಡದಲ್ಲಿ ಅತ್ಯಂತ ಸುಂದರವಾಗಿ ಬಳಸಿದಾರೆ. ಸುಂದರಕಾಂಡದ ಶ್ಲೋಕಗಳು ಒಂದೊಂದೂ ಅತ್ಯುತ್ತಮವಾದ ಶಬ್ದಾಲಂಕಾರ, ಅರ್ಥಾಲಂಕಾರ ಇವೆರಡರಿಂದ ಸಂಯೋಜಿತವಾಗಿವೆ. ಅವುಗಳನ್ನು ಅನುಭವಿಸುತ್ತಿದ್ದಂತೆ ಮೈಮರೆಯುವುದು. ಉದಾಹರಣೆಗೆ ಒಂದೆರಡು ಶ್ಲೋಕಗಳು :

**ಉಷ್ಣಾರ್ದಿತಾಂ ಸಾನುಸೃತಾ ಪ್ರಕಂಠೀಂ।**
**ಪುರ ವರಾಹೋರ್ತ್ತ.ಮ ನಿಷ್ಕಕಂಠೀಂ॥**
**ಸಂಜಾತ ಪಕ್ಷಾಮಭಿರಕ್ತ ಕಂಠೀಂ।**
**ವನೇ ಪ್ರಸೃತ್ತಾಮಿವ ನೀಲಕಂಠೀಂ॥**

ಅವ್ಯಕ್ತರೇಖಾಮಿವ ಚಂದ್ರರೇಖಾಂ।
ಪಾಂಸುಪ್ರದಿಗ್ಧಾವ ಹೇಮರೇಖಾಂ॥
ಕ್ಷತಪ್ರರೂಢಾಮಿವ ಬಾಣರೇಖಾಂ।
ವಾಯುಪ್ರಭಿನ್ನಾಮಿವ ಮೇಘರೇಖಾಂ॥
ಹಂಸೋ ಯಥಾ ರಾಜತಪಂಜರಸ್ಥಃ।
ಸಿಂಹೋ ಯಥಾ ಮಂದರಕಂದರಸ್ಥಃ॥
ವೀರೋ ಯಥಾ ಗರ್ವಿತಕುಂಜರಸ್ಥಃ।
ಚಂದ್ರೋಽಪಿ ಬಭ್ರಾಜ ತದಾಂಬರಸ್ಥಃ॥

ಹೀಗೆ, ಕಾವ್ಯಕನ್ನಿಕೆಯ ಸೊಬಗನ್ನು ಅತ್ಯಂತ ಉನ್ನತ ಮಟ್ಟದಲ್ಲಿ ಚಿತ್ರಿಸಿರುವುದು ಈ ಕಾಂಡದಲ್ಲಿ. ಆದ್ದರಿಂದಲೇ, ಈ ಕಾಂಡಕ್ಕೆ "ಸುಂದರಕಾಂಡ" ಎಂಬ ಹೆಸರು.

ಶೃಂಗಾರ–ಹಾಸ್ಯ–ಕರುಣ–ವೀರ–ರೌದ್ರ–ಭಯಾನಕಾಃ।
ಬೀಭತ್ಸೋದ್ಭುತ ಶಾಂತಾಶ್ಚ ಕಾವ್ಯೇ ನವರಸಾಃ ಸ್ಮೃತಾಃ॥

ಕಾವ್ಯ ಎಂದರೆ ನವರಸಗಳಿಂದ ಪರಿಪೂರ್ಣವಾಗಿರಬೇಕು. ಹಾಸ್ಯ, ಬೀಭತ್ಸ, ಕರುಣ, ವೀರ, ರೌದ್ರ, ಭಯಾನಕ, ಶೃಂಗಾರ ಮುಂತಾದ ನವರಸಗಳೂ ಅಲ್ಲಲ್ಲಿ ತುಂಬಿ ತುಳುಕುತ್ತಿರಬೇಕು. ಕಾವ್ಯವನ್ನು ಓದುವ ಎಲ್ಲರೂ ತಮ್ಮ ಅಭಿರುಚಿಯೇ ಅಭಿವ್ಯಕ್ತವಾಗಿದೆಯೆನ್ನುವಂತೆ ಈ ರಸಗಳನ್ನು ಚಿತ್ರಿಸಿರಬೇಕು. ಆಗಲೇ ಆ ಕಾವ್ಯ "ಉತ್ತಮ ಕಾವ್ಯ" ಎನಿಸಿಕೊಳ್ಳುತ್ತದೆ.

ರಾಮಾಯಣದಲ್ಲಿ ಹಾಸ್ಯರಸವನ್ನು ಶೂರ್ಪನಖಾ ಪ್ರಕರಣದಲ್ಲೂ, ಕಾರುಣ್ಯ ಹಾಗೂ ರೌದ್ರಗಳನ್ನು ಅರಣ್ಯಕಾಂಡದಲ್ಲೂ, ಹೀಗೆ ಅಲ್ಲಲ್ಲಿ ಒಂದೊಂದು ರಸಗಳನ್ನು ಚಿತ್ರಿಸಿದಾರೆ ವಾಲ್ಮೀಕಿ. "ರಸಗಳ ರಾಜ" ಎನಿಸಿವೆ ಶೃಂಗಾರ ರಸ. ಶೃಂಗಾರದಲ್ಲೂ "ವಿಪ್ರಲಂಭಶೃಂಗಾರ" ಬಹಳ ಮಹತ್ವದ್ದು. ನಾಯಕ-ನಾಯಿಕೆಯರು ಅಗಲಿರುವ ಸಮಯದಲ್ಲಿ ಅವರ ವಿರಹವೇದನೆಯನ್ನು ಚಿತ್ರಿಸುವುದೇ "ವಿಪ್ರಲಂಭ ಶೃಂಗಾರ!

ನ ವಿನಾ ವಿಪ್ರಲಂಭೇನ ಸಂಭೋಗಃ ಪುಷ್ಟಿಮಶ್ನುತೇ।

ವಿಪ್ರಲಂಭವಿಲ್ಲದ ಸಂಭೋಗ ಬರಡು.

ಸಂಗೇ ಸೈವ ತಥೈಕಾ ತ್ರಿಭುವನ ಮಪಿ ತನ್ಮಯಂ ವಿರಹೇ

ಸಮಾಗಮದಲ್ಲಿ ಪ್ರೇಯಸಿ ಒಬ್ಬಳೇ; ಆದರೆ ವಿರಹಾವಸ್ಥೆಯಲ್ಲಿ ಮೂಜಗವೂ ಅವಳೇ ಆಗುತ್ತದೆ.

ಈ ಕಾಂಡದಲ್ಲಿ ವಾಲ್ಮೀಕಿ "ವಿಪ್ರಲಂಭಶೃಂಗಾರ"ದ ಚಿತ್ರಣವನ್ನು ಬಹಳ ಸುಂದರವಾಗಿ ಚಿತ್ರಿಸಿದಾರೆ. ಪ್ರಿಯ-ಪ್ರೇಯಸಿಯರು ಪರಸ್ಪರ ಹೇಗೆ ಒಬ್ಬರಲ್ಲೊಬ್ಬರು ಗಾಢವಾಗಿ ಅನುರಕ್ತವಾಗಿದಾರೆ ಎಂಬುದನ್ನು ಅತ್ಯಂತ ಮೋಹವಾಗಿ ಚಿತ್ರಿಸಿದಾರೆ ಈ ಕಾಂಡದಲ್ಲಿ, ಸೀತೆಯ ಹತ್ತಿರ ಹನುಮಂತ ಹೇಳುತ್ತಾನೆ.

ನಿತ್ಯಂ ಧ್ಯಾನಪರೋ ರಾಮೋ ನಿತ್ಯಂ ಶೋಕಪರಾಯಣಃ ।
ನಾನ್ಯತ್ ಚಿಂತಯತೇ ಕಿಂಚಿತ್ ತತ್ಸುಕಾಮವಶಂಗತಃ ॥
ಅನಿದ್ರಃ ಸತತಂ ರಾಮಃ ಸುಪ್ತೋಽಪಿಚ ನರೋತ್ತಮಃ ।
ಸೀತೇತಿ ಮಧುರಾಂ ವಾಣೀಂ ವ್ಯಾಹರ್ನ್ ಪ್ರತಿಬುಧ್ಯತೇ ॥
ದೃಷ್ಟ್ವಾ ಫಲಂ ವಾ ಪುಷ್ಪಂ ವಾ ಯದ್ವಾನ್ಯತ್ಸುಮನೋಹರಂ ।
ಬಹುಶೋ ಹಾ ಪ್ರಿಯೇತ್ಯೇವಂ ಶ್ವಸಂಸ್ತ್ವಾಮಭಿಭಾಷತೇ ॥

''ದೇವಿ ! ನೀವಿಲ್ಲದೆ ರಾಮ ಬಹಳ ವೇದನೆಪಡುತ್ತಿದಾನೆ, ಕಾಲಕಾಲಕ್ಕೆ ಆಹಾರವಿಲ್ಲ, ನಿದ್ರೆಯಿಲ್ಲ. ಹಾಗೆ ಒಂದು ವೇಳೆ ಮಲಗಿದರೂ ನಿಮ್ಮನ್ನೇ ನೆನೆಯುತ್ತಾ "ಹಾ ಸೀತೆ !'' ಎಂದು ನಿಟ್ಟುಸಿರು ಬಿಡುತ್ತಾನೆ. ಒಂದು ಹೂವನ್ನು ನೋಡಿದರೆ, ಒಂದು ಹಣ್ಣನ್ನು ಕಂಡರೆ "ಸೀತೇ" ಎಂದು ನೆನಸಿ ಕೊಳ್ಳುತ್ತಾನೆ. ರಾಮನಿಗೆ ಮೈಮೇಲೆ ಪ್ರಜ್ಞೆಯೇ ಇರದು, ಮೈಮೇಲೆ ಇರುವೆ, ಹುಳು, ಹಾವು, ಹರಿದಾಡುತ್ತಿದ್ದರೂ ಗೊತ್ತಾಗುವುದಿಲ್ಲ. ಸದಾ ನಿಮ್ಮ ಧ್ಯಾನವೇ ಆಗಿದೆ" ಎನ್ನುತ್ತಾನೆ. ಆದನ್ನೇ ವಾಲ್ಮೀಕಿ ಹೇಳುತ್ತಾರೆ.

ಹಾಗೆಯೇ ರಾಮನ ಹತ್ತಿರ ಹನುಮಂತ ಸೀತೆಯ ಬಗ್ಗೆ ಹೇಳುವಾಗ "ರಾಮಾ ! ದೇವಿ ನಿನಗಾಗಿ ಪರಿತಪಿಸುತ್ತಿದಾಳೆ. ಉಗ್ರವಾದ ತಪಸ್ಸನ್ನೇ ಕೈಗೊಂಡಿದಾಳೆ. ಕೃಶಳಾಗಿ ನೆಲದಮೇಲೆ ಆಸೀನಳಾಗಿ ಸದಾ ''ರಾಮ, ರಾಮ'' ಎನ್ನುತ್ತಾ ನಿನ್ನನ್ನೇ ಧ್ಯಾನಿಸುತ್ತಿದ್ದಾಳೆ" ಎಂದು ಸೀತೆಗೆ ರಾಮನ ಮೇಲಿರುವ ಅಂತಃಕರಣವನ್ನು ಸ್ಪಷ್ಟಪಡಿಸುತ್ತಾನೆ.

ಏವಂ ಮಯಾ ಮಹಾಭಾಗಾ ದೃಷ್ಟ್ವಾ ಜನಕನಂದಿನೀ ।
ಉಗ್ರೇಣ ತಪಸಾ ಯುಕ್ತಾ ತ್ವದ್ಭಕ್ತ್ಯಾ ಪುರುಷರ್ಷಭ ॥

ಎನ್ನುವಾಗ ಸೀತೆಯ ನೆಲೆ ಸ್ಪಷ್ಟವಾಗುತ್ತದೆ. ಹೀಗೆ ಕಾವ್ಯಶ್ರೀಯ ಶಿರೋಮಕುಟದಂತಿರುವ ವಿಪ್ರಲಂಭಶೃಂಗಾರದ ಸುಂದರವಾದ ಚಿತ್ರಣ ಈ ಕಾಂಡದಲ್ಲಿ ಚಿತ್ರಿಸಲ್ಪಟ್ಟಿದೆ. ಆದ್ದರಿಂದ ''ಸುಂದರಕಾಂಡ'' ಎನಿಸಿಕೊಂಡಿದೆ.

ನಾಯಕ ನಾಯಕಿಯರು ಅಗಲಿರುವಾಗ ಅವರಿಬ್ಬರನ್ನೂ ಒಟ್ಟುಗೂಡಿಸುವ ಉತ್ತಮಸಂಧಿ ಈ ಕಾಂಡದಲ್ಲಿ ವರ್ಣಿತವಾಗಿದೆ ಸೀತೆಯಬಗ್ಗೆ ರಾಮನಿಗೂ, ರಾಮನಬಗ್ಗೆ ಸೀತೆಗೂ ಸಮಾಚಾರ ಗೊತ್ತಾಗಿ ಇಬ್ಬರ ಮನಸ್ಸೂ ಸ್ವಲ್ಪಮಟ್ಟಿಗೆ ಹರ್ಷವನ್ನು ಹೊಂದಲು ಸಹಾಯಕವಾಗಿರುವುದು ಈ ಕಾಂಡದಲ್ಲಿರುವ ಘಟನೆಗಳು. ಆದ್ದರಿಂದಲೇ ಈ ಕಾಂಡಕ್ಕೆ "ಸುಂದರಕಾಂಡ" ಎಂದು ಹೆಸರು, ರಾಮಾಯಣ ಮೃತಸಂಜೀವಿನಿ ಎನಿಸಿಕೊಂಡಿದೆ. ಸಾಯುವ ಸ್ಥಿತಿಯಲ್ಲಿದ್ದವರನ್ನು ಬದುಕಿಸುವ ಶಕ್ತಿ ರಾಮಾಯಣಕ್ಕಿದೆ. ಅಂಗದ ಪ್ರಾಯೋಪವೇಶಮಾಡಿ ಸಾಯೋಣ ಎಂದು ತೀರ್ಮಾನಿಸಿ ರಾಮಕಥೆಯನ್ನು ವಿವರಿಸಿದ, ನೆನಸಿಕೊಂಡ. ಅದು ಅಮೃತವಾಗಿ ಸಂಪಾತಿಯ ಮೂಲಕ ಸೀತೆಯಬಗ್ಗೆ ವಿಷಯ ತಿಳಿಯಲು ಕಾರಣವಾಗಿ ಎಲ್ಲ ವಾನರರ ಪ್ರಾಣವೂ ಉಳಿಯಿತು. ಅಂಥ ರಾಮಾಯಣವು ಈ ಕಾಂಡದಲ್ಲಿ ಅದುಭುತವಾಗಿ ಕೀರ್ತಿಸಲ್ಪಟ್ಟಿದೆ. ರಾಮಭಕ್ತರಲ್ಲಿ ಅಗ್ರಗಣ್ಯನಾದ ಹನುಮಂತನೇ ಸ್ವತಃ ತನ್ನ ಬಾಯಿಂದ ರಾಮಕಥೆಯನ್ನು ಹೇಳಿದಾನೆ ಈ ಕಾಂಡದಲ್ಲಿ, ಆದಕಾರಣ ಸುಂದರವಾದ ರಾಮಕಥೆ ಮರಳಿ ಮರಳಿ ಸುಂದರವಾಗಿ ವರ್ಣಿಸಲ್ಪಟ್ಟಿದೆ ಆದ್ದರಿಂದ ಇದಕ್ಕೆ "ಸುಂದರಕಾಂಡ" ಎಂದು ಹೆಸರಾಯಿತು.

ಈ ಕಾಂಡದಲ್ಲಿ ಕಥಾನಾಯಕನಾದ ಶ್ರೀರಾಮನ ಅಪ್ರತಿಮ ಸೌಂದರ್ಯದ ಅನುಪಮ ವರ್ಣನೆಯಿದೆ. ಮನ್ಮಥನಿಗೂ ಮನ್ಮಥನೆನಿಸಿದ ಸುಂದರನಾದ ರಾಮನ ಗುಣ, **ಸೌಂದರ್ಯ** ಗಳು, ಇದರಲ್ಲಿ ವರ್ಣಿಸಲ್ಪಟ್ಟಿವೆ. ಆದ್ದರಿಂದ "ಸುಂದರಕಾಂಡ" ಎಂದು ಹೆಸರು. ಸುಂದರಿಯರಲ್ಲಿ ಸುಂದರಿ ಸೀತೆ. **ಸೀತೆಯ ಸೌಂದರ್ಯವು ಈ ಸುಂದರಕಾಂಡದಲ್ಲಿ ಚಿತ್ರಿತವಾಗಿದೆ.** ಬ್ರಹ್ಮಚಾರಿಯಾದ ಹನುಮಂತನೇ "ಇಷ್ಟು ಸೌಂದರ್ಯವತಿಯಾದ ಸೀತೆಯನ್ನು ಪತ್ನಿಯನ್ನಾಗಿ ಪಡೆದ ರಾಮ ಅವಳನ್ನು ಅಗಲಿ ಇನ್ನೂ ಜೀವಿಸಿದ್ದಾನಲ್ಲಾ, ಅವನಷ್ಟು ದುಷ್ಕರವಾದ ಕಾರ್ಯ ಯಾರೂ ಮಾಡಿಲ್ಲ" ಎನ್ನುತ್ತಾನೆ. "ದುಷ್ಕರಂ ಕುರುತೇರಾಮಃ ಹೀನೋಯು ದನಯಾ ಪ್ರಭುಃ" ಅಂತಹ ಲೋಕೋತ್ತರ ಸೌಂದರ್ಯ ನಿಧಿಯೆನಿಸಿದ ಸೀತೆಯ ಸೌಂದರ್ಯ ಚಿತ್ರಿಸಲ್ಪಟ್ಟಿದೆಯಾದ್ದರಿಂದ ''ಸುಂದರಕಾಂಡ'' ಎಂದು ಹೆಸರು.

ನಿಘಂಟಿನಲ್ಲಿ ನೋಡುವಾಗ **"ಸುಂದರ" ಎಂಬುದು ವಾನರಕ್ಕೆ ಹೆಸರು.** ಇಲ್ಲಿ **''ವಾನರ" ಎಂದರೆ ಹನುಮಂತ** ಹನುಮಂತನ ಪ್ರಭಾವವೇ ಈ ಕಾಂಡದಲ್ಲಿ ಹೆಚ್ಚಾಗಿ ವರ್ಣಿಸಲ್ಪಟ್ಟಿದೆ, ಆದ್ದರಿಂದ ಈ ಕಾಂಡಕ್ಕೆ ''ಸುಂದರಕಾಂಡ'' ಎಂದು ಹೆಸರು.

ಎಲ್ಲಕ್ಕಿಂತ ಹೆಚ್ಚಾಗಿ ಈ ಕಾಂಡದಲ್ಲಿ **ಸದಾಚಾರ್ಯನ ಲಕ್ಷಣ,** ಅವನ ಕೆಲಸಗಳು, ಜೀವನವನ್ನು ಆಚಾರ್ಯ ಉದ್ಧರಿಸಲು ಯತ್ನಿಸುವುದು, ಇವೆಲ್ಲ ವಿವರಿಸಲ್ಪಟ್ಟಿವೆ. ಆದ್ದರಿಂದ, ಈ ಕಾಂಡಕ್ಕೆ "ಸುಂದರಕಾಂಡ" ಎಂದು ಹೆಸರು.

**ತತೋ ರಾವಣನೀತಾಯಾಃ ಸೀತಾಯಾಃ ಶತ್ರುಕರ್ಶನಃ ।**
**ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥**

ಸುಂದರಕಾಂಡದ ಈ ಪ್ರಥಮಶ್ಲೋಕ ಸಂಪೂರ್ಣವಾಗಿ ಆಚಾರ್ಯನ ಲಕ್ಷಣಗಳನ್ನು ಪ್ರತಿಪಾದಿಸುತ್ತದೆ. [ಇದಕ್ಕೆ ಅರ್ಥವನ್ನು ಪುಟಪುಟಗಳಲ್ಲಿ ಹೇಳಿದರೂ ಮುಗಿಯದು.] ಆಚಾರ್ಯರು ಈ ಶ್ಲೋಕಕ್ಕೆ ಬಹಳವಾಗಿ ವ್ಯಾಖ್ಯಾನ ಮಾಡಿದಾರೆ.

**ದರ್ಪೋದಗ್ರ ದಶೇಂದ್ರಿಯಾನನ ಮನೋನಕ್ತಂಚರಾಧಿಷ್ಠಿತೇ ।**
**ದೇಹೇಸ್ಮಿನ್ ಭವಸಿಂಧುನಾ ಪರಿವೃತೇ ದೀನಾಂದಶಾ ಮಾಸ್ಥಿತಃ ॥**
**ಅದ್ಯತ್ವೇ ಹನುಮತ್ಸಮೇನ ಗುರುಣಾ ಪ್ರಖ್ಯಾಪಿತಾರ್ಥಃ ಪುಮಾನ್ ।**
**ಲಂಕಾರುದ್ಧ ವಿದೇಹ ರಾಜತನಯಾಸ್ಯಾಯೇನ ಲಾಲಪ್ಯತೇ ॥**

ಸೀತೆ ಪಾರತಂತ್ರ್ಯವನ್ನು ಪ್ರತಿನಿಧಿಸುವವಳು. ಜೀವನೂ ಪರತಂತ್ರ. ಹೀಗೆ ಸೀತೆಯಿಂದ ಉಪಲಕ್ಷಿತನಾದ ಜೀವ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳೆಂಬ ಹತ್ತು ತಲೆಗಳುಳ್ಳ ''ಮನಸ್ಸು" ಎಂಬ ರಾವಣನ ಕೈಗೆ ಸಿಕ್ಕಿ ಮನಸ್ಸು ದುರ್ವಿಷಯಗಳ ಕಡೆಗೆ ಧಾವಿಸಿದಾಗಲೇ ಸಂಸಾರದ ಕಷ್ಟಕ್ಕೆ ಸಿಲುಕಿಕೊಳ್ಳಬೇಕಾಗುತ್ತದೆ. ಶತಯೋಜನ ವಿಸ್ತಾರವುಳ್ಳ ಸಮುದ್ರವೇ ಸಂಸಾರ ಸಾಗರ. ಆ ಸಂಸಾರಸಾಗರ ಕ್ರೂರವಾದ ತಿಮಿಂಗಿಲ, ಮೊಸಳೆ, ಹಾವು, ಇವುಗಳಿಂದ ಕೂಡಿದೆ. ಹಾಗೆಯೇ ಈ ಸಂಸಾರಸಾಗರ ನಾನಾ ವಿಧವಾದ ಕೋಟಲೆಗಳಿಂದ, ಕಷ್ಟಕಾರ್ಪಣ್ಯಗಳಿಂದ, ತಾಪತ್ರಯಗಳಿಂದ ಕೂಡಿದೆ. ಇದೆಲ್ಲವನ್ನೂ ದಾಟಬೇಕಾದರೆ ಬಹಳ ಕಷ್ಟ. ದೇಹವೆಂಬುದೇ ಲಂಕೆ. ಅದರಲ್ಲಿ ಹೃದಯವೇ ಅಶೋಕವನ. ಅಲ್ಲಿ "ಸೀತೆಯಿಂದ ಉಪಲಕ್ಷಿತವಾದ

ಜೀವ ಬಂಧನದಲ್ಲಿದೆ ಅದಕ್ಕೆ ಕಾವಲು ಭಾರ್ಯಾಪುತ್ರಾದಿ ರಾಕ್ಷಸಿಯರು ಇದಾರೆ. ಅವರೋ ಬಹಳ ಕ್ರೂರಿಯರು. ಆ ರಾಕ್ಷಸಿಯರೇ ಕ್ರೂರವಾದ ಕಾಮ, ಕ್ರೋಧ, ಲೋಭ, ಮೋಹ ಗಳೆಂಬ ಕೆಟ್ಟ ಗುಣಗಳು

ಇವರ ಮಧ್ಯೆ ಸಿಲುಕಿಕೊಂಡ ಜೀವ ಇದರಿಂದ ಮುಕ್ತಿಯನ್ನು ಪಡೆಯಲು ಹಾತೊರೆ ಯುತ್ತಿದೆ ಸೀತೆ ರಾಮಧ್ಯಾನದಲ್ಲೇ ಇದಾಳೆ. ಹಾಗೆಯೇ ಜೀವಪರಮಾತ್ಮ ಚಿಂತನೆಯಲ್ಲೇ ಇದ್ದರೆ, ಪರಮಾತ್ಮನೇ ಆ ಜೀವವನ್ನು ಉದ್ಧಾರಮಾಡುವ ಸಲುವಾಗಿ ಕಾರುಣ್ಯದಿಂದ ಆಚಾರ್ಯ ನನ್ನು ಜೀವನ ಬಳಿಗೇ ಕಳುಹಿಸುತ್ತಾನೆ. ಆ ಸದಾಚಾರ್ಯನೇ ಹನುಮಂತ.

ಆಚಾರ್ಯನು ಮಹಾಶಕ್ತಿವಂತನಾಗಿಯೂ, ಯುಕ್ತಿವಂತನಾಗಿಯೂ, ಜ್ಞಾನಿಯಾಗಿಯೂ ಯುಕ್ತಾಯುಕ್ತಗಳನ್ನು ತಿಳಿದವನಾಗಿಯೂ, ಕಾರುಣ್ಯವುಳ್ಳವನಾಗಿಯೂ, ಶತ್ರುಗಳನ್ನು ಸದೆಬಡಿ ಯುವಂಥ ಪರಾಕ್ರಮವುಳ್ಳವನಾಗಿಯೂ, ಮಹಾಮೇಧಾವಿಯಾಗಿಯೂ, ಜಿತೇಂದ್ರಿಯನಾಗಿಯೂ ಯೋಗಿಯಾಗಿಯೂ, ಕಾರ್ಯವನ್ನು ಸಾಧಿಸುವಂಥ ಕಾರ್ಯತತ್ಪರತೆಯುಳ್ಳವನಾಗಿಯೂ ಇರಬೇಕು.

ಅಂಥ ಸಾಮರ್ಥ್ಯವನ್ನು ಪಡೆದಿದ್ದ ಹನುಮಂತ. ಆದಕ್ಕೇ ವಾಲ್ಮೀಕಿ "**ಶತ್ರುಕರ್ಶನಃ**" ಎಂದರು.

ಶತ್ರುಗಳಲ್ಲಿ ಎರಡು ಬಗೆ. ಬಾಹ್ಯಶತ್ರು, ಅಂತಃಶತ್ರು ಎಂದು. ಆಚಾರ್ಯ ಎನಿಸಿ ಕೊಂಡವ ಎರಡೂ ಬಗೆಯ ಶತ್ರುಗಳನ್ನೂ ನಿಗ್ರಹಿಸುವ ಸಾಮರ್ಥ್ಯ ಉಳ್ಳವನಾಗಬೇಕು. ಸಿದ್ಧರು ಚಾರಣರು ಸಾಗುವ ಆಕಾಶಮಾರ್ಗದಲ್ಲಿ ಹೋದ ಹನುಮಂತ.

ಆಚಾರ್ಯ ತಾನೇ ಬೇರೆಯಾದ ಮಾರ್ಗದಲ್ಲಿ ಹೋಗುವುದಿಲ್ಲ. ತನಗಿಂತ ಹಿಂದಿನವರು, ಪೂರ್ವಾಚಾರ್ಯರು, ಜ್ಞಾನಿಗಳು, ಯಾವ ಮಾರ್ಗದಲ್ಲಿ ಹೋದರೋ ಅದೇ ಮಾರ್ಗವನ್ನೇ ತಾನೂ ಅನುಸರಿಸುತ್ತಾನೆ.

"ಮಹಾಜನೋ ಯೇನ ಗತಾಃ ಸಪಂಥಾಃ" ಎಂಬ ಕ್ರಮದಲ್ಲಿ ಮಹಾತ್ಮರು ಅಂದರೆ ಪೂರ್ವಾಚಾರ್ಯರು ಅನುಸರಿಸಿದ ಮಾರ್ಗವನ್ನೇ ತಾನೂ ಅನುಸರಿಸುತ್ತಾನೆ. ಅದನ್ನೇ ವಾಲ್ಮೀಕಿ "**ಚಾರಣಚರಿತೇ ಪಥಿ**" ಎಂಬ ಶಬ್ದದಿಂದ ನಿರೂಪಿಸಿದ್ದಾರೆ. ಚಾರಣರು ಚರಿಸಿದ ಮಾರ್ಗ– ಎನ್ನುವಾಗ ಹಿಂದಿನ ಆಚಾರ್ಯರು ಅನುಷ್ಠಿಸಿದ ಮಾರ್ಗ–ಹಿರಿಯರು ಹಿಡಿದ ಮಾರ್ಗ. ಆ ಹಾದಿಯಲ್ಲೇ ಆಚಾರ್ಯ ಸಾಗುತ್ತಾನೆ. ಅಂಥ ಮಾರ್ಗದಲ್ಲಿ ಸಾಗುವ ಉದ್ದೇಶ ಸೀತೆಯನ್ನು ಕಾಣುವುದು. ಅಂದರೆ, ಜೀವನವನ್ನು ಕಂಡು ಜೀವನ ಉದ್ಧಾರಮಾಡುವುದು ಎಂದು ದುಸ್ಸಾಧ್ಯ ವಾದ ಸಾಗರವನ್ನು ದಾಟಲು ಸಿದ್ಧನಾದ.

ಆಂಜನೇಯನು ಪಕ್ಷಿಗಳು ಸಂಚರಿಸುವ ಆಕಾಶಮಾರ್ಗದಲ್ಲಿ ಹಾರಿದ. ಪಕ್ಷಿಗೆ ಹಾರಲು ಅವಶ್ಯವಾಗಿ ಎರಡು ರೆಕ್ಕೆಗಳಿರಲೇಬೇಕು. ಹಾಗೆಯೇ ಸದಾಚಾರ್ಯನಿಗೆ ಜ್ಞಾನ, ಅನುಷ್ಠಾನ ಎಂಬ ಎರಡು ರೆಕ್ಕೆಗಳಿರಬೇಕು.

ಆಂಜನೇಯ ಹೋಗುವ ಮಾರ್ಗ ಅತ್ಯಂತ ದುರ್ಗಮವಾದುದು, ಜಟಿಲವಾದುದು.

"ದುಷ್ಕರಂ ನಿಷ್ಪ್ರತಿದ್ವಂದ್ವಂ ಚಿಕೀರ್ಷ ಕರ್ಮ ವಾನರಃ" ಎಂದಿದಾರೆ ವಾಲ್ಮೀಕಿ.

ದುಷ್ಕರವಾದ ಮಾರ್ಗವಂತೆ ಆಂಜನೇಯ ಹೋಗುತ್ತಿದ್ದ ಮಾರ್ಗ. ಅಂತೆಯೇ ಆಚಾರ್ಯರು ಸಿದ್ಧಿಯನ್ನು ಪಡೆಯುವ ಮಾರ್ಗ ದುರ್ಗಮವಾದುದು, ದುಷ್ಕರವಾದುದು.

ಇಂಥ ಮಾರ್ಗದಲ್ಲಿ ಆಂಜನೇಯ ಹೊರಡಲು ನಿಶ್ಚಯಿಸಿದ. ಹೊರಡುವ ಮೊದಲು ಹನುಮಂತ ಮಹೇಂದ್ರಪರ್ವತವನ್ನು ಏರಿನಿಂತ. ತನ್ನ ಎರಡೂ ಕಾಲುಗಳನ್ನೂ ಊರಿದ. ಆ ಪರ್ವತ ವೈಢೂರ್ಯದಂತೆ ಹೊಳೆಯುತ್ತಿತ್ತು. ಚಿನ್ನದ ಕಾಂತಿಯನ್ನು ಹೊರಗೆಡಹುತ್ತಿರುವ ಆ ಪರ್ವತ ಅನೇಕ ಧಾತುಗಳಿಗೆ ಆಶ್ರಯ ಸ್ಥಾನವಾಗಿತ್ತು. ಸಿದ್ಧರು, ನಾಗರು, ಕಿನ್ನರರು, ವಿದ್ಯಾಧರರು ಆ ಪರ್ವತದ ಗುಹೆಗಳಲ್ಲಿ, ಪ್ರದೇಶಗಳಲ್ಲಿ ವಿಹರಿಸುತ್ತಿದ್ದರು. ನಾನಾವಿಧವಾದ ಮರಗಳಿಂದಲೂ, ನಾನಾವಿಧವಾದ ಮೃಗಪಕ್ಷಿಗಳಿಂದಲೂ, ಅನೇಕ ವಿಧವಾದ ಸರ್ಪಗಳಿಂದಲೂ ಆವೃತವಾಗಿತ್ತು ಆ ಪರ್ವತ. ಆ ಪರ್ವತದ ಮೇಲೆ ಬಲವಾಗಿ ತನ್ನ ಎರಡು ಕಾಲುಗಳನ್ನೂ ಊರಿ ನಿಂತ ಹನುಮಂತ.

**ಸಸೂರ್ಯಾಯ ಮಹೇಂದ್ರಾಯ ಪವನಾಯ ಸ್ವಯಂಭುವೇ ।**
**ಭೂತೇಭ್ಯಶ್ಚಾಂಜಲಿಂ ಕೃತ್ವಾ ಚಕಾರ ಗಮನೇ ಮತಿಂ ॥**

ಸೂರ್ಯನನ್ನೂ, ವಾಯುವನ್ನೂ, ಚತುರ್ಮುಖನನ್ನೂ, ಸರ್ವಭೂತಗಳನ್ನೂ ನಮಿಸಿ ಹೊರಡಲು ಸಿದ್ಧನಾದ. ಸೂರ್ಯ ಆಂಜನೇಯನ ಆಚಾರ್ಯ. ಸೂರ್ಯನಿಂದ ಸಮಸ ವಿದ್ಯೆಗಳನ್ನೂ ಕಲಿತವನಾದ್ದರಿಂದ ಸೂರ್ಯನಿಗೆ ಮೊದಲು ನಮಸ್ಕಾರ ಮಾಡಿದ. ಅಲ್ಲದೆ, ರಾಮ ಸೂರ್ಯಕುಲೋತ್ಪನ್ನ. ಸೂರ್ಯಕುಲದಲ್ಲಿ ಬಂದವ. ರಾಮಕಾರ್ಯಕ್ಕಾಗಿ ಹೋಗುವ ಮುನ್ನ ಕೂಟಸ್ಥನೆನಿಸಿದ ಸೂರ್ಯನನ್ನು ಮೊದಲು ನಮಸ್ಕರಿಸಿದ.

ಅನಂತರ ದೇವಾಧಿಪತಿಯಾದ ಇಂದ್ರನನ್ನೂ, ತಂದೆಯಾದ ವಾಯುವನ್ನೂ ನಮಿಸಿದ. ಪುನಃ ತಂದೆಯಾದ ವಾಯುವಿಗೆ ಪ್ರತ್ಯೇಕವಾಗಿ ನಮಸ್ಕರಿಸಿದ. ದಕ್ಷಿಣ ದಿಕ್ಕನ್ನು ಕುರಿತು ಹೊರಡಲು ನಿಶ್ಚಯಿಸಿದ. ಮಹಾಕಾಯನಾಗಿ ಬೆಳೆದ ಹತ್ತು ಯೋಜನ ಅಗಲ, ಮೂವತ್ತು ಯೋಜನ ಉದ್ದದ ಮಹಾಕೃತಿಯನ್ನು ತಳೆದ. ಎರಡೂ ಕೈಗಳನ್ನೂ ಹಾರುವ ಸಲುವಾಗಿ ಮುಂದೆ ಚಾಚಿದ. ಉತ್ಸಾಹದಿಂದ ಕೈಗಳನ್ನು ಹಿಗ್ಗಿಸಿದ. ಬಲವಾಗಿ ಮುಂದೆ ನೀಡಿದ. ಪಾದಗಳೆರಡನ್ನು ಬಲವಾಗಿ ಊರಿದ. ಆ ಪಾದಾಕ್ರಾಂತಕ್ಕೆ ಸಿಕ್ಕಿ ಅನೇಕ ವೃಕ್ಷಗಳು ಪುಡಿಯಾದುವು. ಇನ್ನೂ ಅನೇಕ ವೃಕ್ಷಗಳು ಬೇರುಸಹಿತ ಕಿತ್ತು ಸಮುದ್ರದಲ್ಲಿ ಬಿದ್ದವು. ಪಾದಗಳ ಒತ್ತುವಿಕೆಯಿಂದ **ಮಹೇಂದ್ರಪರ್ವತ ಭೂಮಿಯೊಳಗೆ ಕುಸಿಯಿತು.** ಅದು ಹೇಗಿತ್ತು ಎಂದರೆ ಭೂಮಿದೇವಿಯ ಮಗಳಾದ ಸೀತೆ ರಾವಣನ ಗೃಹದಲ್ಲಿ ಬಂಧಿತಳಾಗಿ ದುಃಖಿಸುತ್ತಿದಾಳೆ. ಅವಳು ದುಃಖಿಸುತ್ತಿರುವುದನ್ನು ಕಂಡ ಅವಳ ತಾಯಿ ಭೂದೇವಿಯೂ ಶೋಕಾಕ್ರಾಂತಳಾಗಿದಾಳೆ. ಇದನ್ನು ಕಂಡು ಮಹೇಂದ್ರಪರ್ವತ ಭೂದೇವಿಯ ಕಿವಿಯಲ್ಲಿ "ಅಮ್ಮಾ, ಇನ್ನು ನೀನು ಚಿಂತಿಸಬೇಡ. ನಿನ್ನ ಕಷ್ಟ ತೀರಿತು. ಸೀತೆಯ ದುಃಖವೂ ಹೋಗುವ ಕಾಲ ಬಂದಿತು. ನೋಡು, ಮಹಾತ್ಮನಾದ ಹನುಮಂತ ಸಮುದ್ರವನ್ನು ಹಾರಲು ಸಿದ್ಧನಾಗಿ ನಿಂತಿದಾನೆ, ಇನ್ನು ಸಂತೋಷವಾಗಿರು" ಎಂದು **ಸಮಾಧಾನ ಹೇಳಲು ಭೂಮಿಯು ಒಳಗೆ ಕುಸಿಯಿತೋ ಎಂಬತಿತ್ತು.**

ಪರ್ವತ ಕಂಪನದಿಂದ ಪರ್ವತದ ಗುಹೆಯಲ್ಲಿ ಕ್ರೀಡಿಸುತ್ತಿದ್ದ ವಿದ್ಯಾಧರರು, ಗಂಧರ್ವರು ಎಲ್ಲ ಪರ್ವತದಿಂದ ಹೊರಬಂದರು. ಪರ್ವತದಲ್ಲಿದ್ದ ಹಾವುಗಳೆಲ್ಲ ಭಯದಿಂದ ಅತ್ತಿತ್ತ ಹರಿದಾಡ

ತೊಡಗಿದವು. ಹಾರನೂಪುರಗಳನ್ನು ಧರಿಸಿದ ಗಂಧರ್ವ-ವಿದ್ಯಾಧರ-ಸ್ತ್ರೀಯರು ಆಕಾಶದಲ್ಲಿ ನಿಂತು ವಿಸ್ಮಿತರಾಗಿ ನೋಡುತ್ತಿದ್ದರು

ಹಾಗೆಯೇ ಋಷಿಗಳೂ, ಸಿದ್ಧರು. ಚಾರಣರೂ ಆಕಾಶದಲ್ಲಿ ನಿಂತು "ಅಬ್ಬ, ದುಸ್ತರವಾದ ಈ ಸಾಗರವನ್ನು ಹನುಮಂತ ಹಾರಲು ನಿಶ್ಚಯಿಸಿದಾನೆ ಅವನಂಥ ಮಹತ್ಕಾರ್ಯ ಮಾಡು ವವರು ಯಾರೂ ಇಲ್ಲ" ಎಂದು ತಮ್ಮೊಳಗೇ ಮಾತಾಡಿಕೊಳ್ಳುತ್ತಿದ್ದರು

ಅವರಾಡಿಕೊಳ್ಳುತ್ತಿದ್ದ ಮಾತುಗಳು ಹನುಮಂತನ ಉತ್ಸಾಹವನ್ನು ಮತ್ತೆ ಹೆಚ್ಚಿಸಿದವು. ರೋಮಗಳಿಂದ ಕೂಡಿದ ತನ್ನ ಬಾಲವನ್ನು ಮೇಲಕ್ಕೆ ಎತ್ತಿ ಹಿಡಿದ. ಅವನು ಬಾಲವನ್ನು ಎತ್ತಿ ಹಿಡಿದಿದ್ದ ರೀತಿ, ಮಹಾಬಲಶಾಲಿಯಾದ ಗರುಡ ಮಹಾಸರ್ಪವನ್ನು ಹಿಡಿದಂತೆ ಇತ್ತು.

ಎರಡುಕೈಗಳನ್ನೂ ಮುಂದಕ್ಕೆ ಚಾಚಿದ್ದ ಆ ನಿಲುವು ಐದುಹೆಡೆ ಸರ್ಪದಂತೆ ಶೋಭಿಸುತ್ತಿತ್ತು.

ತೇಜಸ್ಸು, ಸತ್ವ, ವೀರ್ಯ ಇವುಗಳನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡ ವೀರವರನಾದ ಹನುಮಂತ ತಾನು ಹೋಗಬೇಕಾಗಿರುವ ಮಾರ್ಗವನ್ನು ಬಹುದೂರದವರೆಗೆ ನೋಡಿದ. ಪ್ರಾಣವನ್ನು ಹೃದಯದಲ್ಲಿ ಕೇಂದ್ರೀಕರಿಸಿ, ಪಾದಗಳನ್ನು ದೃಢವಾಗಿ ಪರ್ವತದಮೇಲೆ ಊರಿ, ಆಕಾಶದಲ್ಲಿ ತಾನು ಸಾಗಬೇಕಾದ ಮಾರ್ಗವನ್ನು ಚೆನ್ನಾಗಿ ಅವಲೋಕಿಸಿದ. ಹೀಗೆ ಹಾರಲು ಸಿದ್ಧನಾಗಿ ನಿಂತ ಹನುಮಂತ.

ಹನುಮಂತನ ಆಕಾರವನ್ನು, ಅವನ ತೇಜವನ್ನು, ಬಲವನ್ನು, ಪೌರುಷವನ್ನು ಅವನು ನಿಂತಿರುವ ರೀತಿಯನ್ನು ಬೆರಗಾಗಿ ನೋಡುತ್ತ ಎಲ್ಲ ವಾನರವೀರರು ಅವನನ್ನು ಸುತ್ತುಗಟ್ಟಿದ್ದರು. ಅವರನ್ನೆಲ್ಲ ನೋಡಿ ಹೊರಡಲು ಸಿದ್ಧನಾಗಿ ನಿಂತಿದ್ದ ಹನುಮಂತ ಹೇಳಿದ.

**ಯಥಾ ರಾಘವ-ನಿರ್ಮುಕ್ತಃ ಶರಃ ಶ್ವಸನ ವಿಕ್ರಮಃ ।**
**ಗಚ್ಛೇತ್ ತದ್ವತ್ ಗಮಿಷ್ಯಾಮಿ ಲಂಕಾಂ ರಾವಣ-ಪಾಲಿತಾಂ ॥**
**ನಹಿದ್ರಕ್ಷ್ಯಾಮಿ ಯದಿತಾಂ ಲಂಕಾಯಾಂ ಜನಕಾತ್ಮಜಾಂ ।**
**ಅನೇನೈವ ಹಿ ವೇಗೇನ ಗಮಿಷ್ಯಾಮಿ ಸುರಾಲಯಂ ॥**
**ಸರ್ವಥಾ ಕೃತಕಾರ್ಯೋಽಹಂ ಏಷ್ಯಾಮಿ ಸಹ ಸೀತಯಾ ।**
**ಆನಯಿಷ್ಯಾಮಿ ವಾ ಲಂಕಾಂ ಸಮುತ್ಪಾಟ್ಯ ಸರಾವಣಂ ॥**

"ವಾನರಶ್ರೇಷ್ಠರೆ, ಇದೋ ಈಗ ನಾ ಹೊರಡುತ್ತಿದೇನೆ ಹೇಗೆ ಹೊರಡುತ್ತೇನೆ ಬಲ್ಲಿರಾ! ರಾಘವನ ಬಾಣ ಹೇಗೆ ತಡೆಯಿಲ್ಲದೆ ನೇರವಾಗಿ ಲಕ್ಷ್ಯದತ್ತ ಸಾಗುತ್ತದೋ ಹಾಗೆ ನಾನೂ ಹೊರಡುತ್ತಿದೇನೆ. ರಾಮಬಾಣ ಎಂದಿಗೂ ವ್ಯರ್ಥವಾಗದು. ಅದರಂತೆಯೇ ಆಂಜನೇಯನ ಲಕ್ಷ್ಯವೂ ವ್ಯರ್ಥವಾಗದು. ರಾಮಬಾಣ ಉದ್ದೇಶಿಸಿದ ಕಾರ್ಯವನ್ನು ಸಾಧಿಸಿಯೇ ರಾಮನ ಬತ್ತಳಿಕೆಗೆ ಹಿಂದಿರುಗಿ ಬಂದು ಸೇರುತ್ತದೆ ಹಾಗೆಯೇ ನಾನೂ ಈಗ ಕೈಗೊಂಡಿರುವ ಕಾರ್ಯ ವನ್ನು ಸಾಧಿಸಿಯೇ ಹಿಂದಿರುಗುತ್ತೇನೆ.

ವಾನರರೇ ಕೇಳಿ, ಈಗ ನಾನು ಲಂಕೆಗೆ ಹೋಗುತ್ತೇನೆ. ಅಲ್ಲಿ ಸೀತೆಯನ್ನು ಹುಡುಕುತ್ತೇನೆ. ಅಲ್ಲಿ ಸೀತೆ ಇಲ್ಲವಾದರೆ ಸ್ವರ್ಗಕ್ಕೆ ನೇರವಾಗಿ ಹೋಗುತ್ತೇನೆ. ಅಲ್ಲೂ ಸೀತೆ ಇಲ್ಲದಿದ್ದರೆ ಹಾಗೇ ಪಾತಾಳಕ್ಕೆ ಹೋಗಿ ಹುಡುಕುತ್ತೇನೆ. ಸೀತೆಯನ್ನು ಅಲ್ಲೂ ಕಾಣದಿದ್ದರೆ ರಾವಣ ಸಹಿತನಾಗಿ

ಲಂಕೆಯನ್ನೇ ಕಿತ್ತು ತರುತ್ತೇನೆ. ಹೇಗಾದರೂ ಕೃತಕೃತ್ಯನಾಗಿಯೇ ಹಿಂದಿರುಗುತ್ತೇನೆ ಎಂದ' ಆಶ್ವಾಸನೆ ಕೊಟ್ಟು ಹಾರಲು ಸಿದ್ಧನಾದ ಇಲ್ಲಿ ಸದಾಚಾರ್ಯನ ಕಾರುಣ್ಯ, ದೃಢಚಿತ್ತ, ಕಾರ್ಯ ತತ್ಪರತೆ, ಸಾಮರ್ಥ್ಯ ಈ ಗುಣಗಳು ಪ್ರಕಾಶಕ್ಕೆ ಬರುತ್ತವೆ.

ಹಾರಲು ಸಿದ್ಧನಾದ ಹನುಮಂತ ತನ್ನನ್ನು ಗರುಡನಂತೆ, ವಾಯುವಿನಂತೆ, ಪರಾಕ್ರಮಿ, ವೇಗವಂತ ಎಂದು ಭಾವಿಸಿಕೊಂಡು ಹುರುಪನ್ನು ತಾಳಿದ. ಹೀಗೆ ಗರುಡನಂತೆ, ವಾಯುವಿನಂತೆ ಹನುಮಂತ ಹಾರಲು ನಿಶ್ಚಯಿಸಿದ.

ಹಾರಿದ ಹನುಮಂತ. ಹನುಮಂತನನ್ನು ಮಹೇಂದ್ರಪರ್ವತದ ವೃಕ್ಷಗಳು, ಪುಷ್ಪಭರಿತ ವಾದ ಲತೆಗಳು. ಪಕ್ಷಿಗಳು ಅನತಿದೂರದವರೆಗೆ ಹಿಂಬಾಲಿಸಿದುವು. ನಾನಾವರ್ಣದ ಪುಷ್ಪಭರಿತ ವಾದ ಮರಗಳು ಹನುಮಂತನ ವೇಗಕ್ಕೆ ಸಿಕ್ಕಿ ಅವನೊಡನೆ ಸ್ವಲ್ಪದೂರ ಹೋದವು. ಅವು ಹನುಮಂತನನ್ನು ಹಿಂಬಾಲಿಸುತ್ತಿದ್ದುದು ಪ್ರಿಯಬಂಧುಗಳನ್ನು ಮನೆಯಿಂದ ಕಳಿಸುವಾಗ ಸ್ವಬಾಂಧ ವರು ಸ್ವಲ್ಪದೂರದವರೆಗೆ ಅನುಸರಿಸಿ ಬೀಳ್ಕೊಳ್ಳುವಂತೆ ಇತ್ತು.

**ಊರುವೇಗೋತ್ಥಿತಾಃ ವೃಕ್ಷಾಃ ಮುಹೂರ್ತಂ ಕಪಿಮನ್ವಯುಃ ।**
**ಪ್ರಸ್ಥಿತಂ ದೀರ್ಘಮಧ್ವಾನಂ ಸ್ವಬಂಧುಮಿವ ಬಾಂಧವಾಃ॥**

ಹನುಮಂತನ ಊರುವೇಗಕ್ಕೆ ಅವನನ್ನು ಹಿಂಬಾಲಿಸಿದ ಆ ವೃಕ್ಷಗಳು ಸಾಗರದಲ್ಲಿ ಅಲ್ಲಲ್ಲೇ ಬೀಳುತ್ತಿರುವುದನ್ನು ನೋಡುವಾಗ ವಜ್ರಾಯುಧದ ಪೆಟ್ಟಿಗೆ ರೆಕ್ಕೆಗಳನ್ನು ಕಳೆದುಕೊಂಡ ಪರ್ವತ ಗಳು ಸಮುದ್ರದಲ್ಲಿ ಬೀಳುವಂತೆ ಇದ್ದವು.

ಹಾರುತ್ತಿದ್ದ ಆ ಹನುಮಂತನ ರೂಪ ಅನುಪಮವಾಗಿತ್ತು. ತ್ರಿವಿಕ್ರಮನಂತೆ ಮೂವತ್ತು ಯೋಜನ ಉದ್ದ, ಹತ್ತು ಯೋಜನ ಅಗಲವುಳ್ಳ ಮಹಾಕಾಯ. ಅವನ ಕಣ್ಣುಗಳು ಚಂದ್ರ ಸೂರ್ಯರಂತೆ ಹೊಳೆಯುತ್ತಿದ್ದವು ಮುಖ ಕೆಂಪಗೆ ಜ್ವಲಿಸುತ್ತಿತ್ತು. ಚಾಚಿದ ಎರಡು ಕೈಗಳು ಘೋರವಾದ ಐದು ಹೆಡೆ ಸರ್ಪಗಳಂತೆ ಇದ್ದವು. ಮೇಲಕ್ಕೆತ್ತಿದ್ದ ಅವನ ಬಾಲ ಧ್ವಜದಂತೆ ಶೋಭಿಸುತ್ತಿತ್ತು.

ಹನುಮಂತ ಆಕಾಶ ಪಥದಲ್ಲಿ ಹಾರುತ್ತಿದ್ದರೆ ಪಕ್ಷರಹಿತವಾದ ದೊಡ್ಡ ಪರ್ವತ ಹಾರುವಂತೆ ಇತ್ತು. ಹಾರುತ್ತಿದ್ದಾಗ ಹೊರಟ ಗಾಳಿ ದೊಡ್ಡ ಬಿರುಗಾಳಿಯಂತೆ ಸಮುದ್ರವನ್ನು ಕಲಕಿತು. ಆದರಿಂದ ಸಮುದ್ರ ಉಕ್ಕಿದ್ದು ಭೋರ್ಗರೆಯತೊಡಗಿತು. ಬೆಟ್ಟದಂತೆ ಅಲೆಗಳು ಏಳತೊಡಗಿ ದವು. ಹೀಗೆ ಹಾರುತ್ತಿದ್ದ ಹನುಮಂತನನ್ನು ಕಂಡ ಸಮುದ್ರರಾಜ. ತನ್ನಲ್ಲೇ ಯೋಚಿಸಿದ. ಇಕ್ಷ್ವಾಕುವಂಶದ ಅರಸನಾದ ಸಗರಪುತ್ರರಿಂದ ನಾನು ಅಭಿವೃದ್ಧಿಗೆ ಬಂದು ಸಾಗರ ಎನಿಸಿದೆ. ಅದೇ ವಂಶದಲ್ಲೇ ಬಂದ ರಾಮನ ಕಾರ್ಯಕ್ಕಾಗಿ ರಾಮದೂತ ಹೋಗುತ್ತಿದಾನೆ. ಇವನಿಗೆ ಸೇವೆ ಮಾಡುವುದು ನನ್ನ ಧರ್ಮ," ಎಂದುಕೊಂಡು ತನ್ನಲ್ಲಿ ಅಡಗಿದ್ದ ಮೈನಾಕ ಪರ್ವತವನ್ನು ಕುರಿತು "ಮೈನಾಕವೇ, ನೀನೀಗ ಒಂದು ಕೆಲಸ ಮಾಡಬೇಕಾಗಿದೆ. ಇಕ್ಷ್ವಾಕು ವಂಶದವರು ನನಗೆ ಪೂಜ್ಯರು. ಆದ್ದರಿಂದ ನನ್ನಲ್ಲಿ ಆಶ್ರಯ ಪಡೆದ ನಿನಗೆ ಅವರು ಪೂಜ್ಯತಮರು. ಆ ಕುಲದಲ್ಲಿ ಬಂದ ರಾಮ ನಿಗೆ ಸೇವೆ ಮಾಡಲು ಹನುಮಂತ ಹೋಗುತ್ತಿದಾನೆ. ಅವನಿಗೆ ನೀನು ಆತಿಥ್ಯವನ್ನು ನೀಡುವವ ನಾಗು" ಎಂದ.

ಅದರಂತೆ ಮೈನಾಕ ಪರ್ವತ ಮೇಲೆದ್ದಿತು. ಬಂಗಾರದ ಬಣ್ಣದಂತೆ ಹೊಳೆಯುತ್ತಿದ್ದ

ತನ್ನ ಶಿಖರದೊಡನೆ ಹನುಮಂತನಿಗೆ ಅಭಿಮುಖವಾಗಿ ಎದ್ದು ನಿಂತಿತು ಸವಿಯಾದ ಫಲವನ್ನು ತುಂಬಿಕೊಂಡು ಹನುಮಂತನಿಗೆ ಆತಿಥ್ಯವನ್ನು ನೀಡಲು ಸಿದ್ಧವಾಗಿ ನಿಂತಿತು ಹಾರುತ್ತ ಬಂದ ಹನುಮಂತ ನೋಡಿದ. ತನಗೆ ಇದಿರಾಗಿ ಯಾವುದೋ ವಿಘ್ನ ಬಂದಿತು ಎಂದುಕೊಂಡು ತನ್ನ ಎದೆಯಿಂದ ಆ ಪರ್ವತವನ್ನು ಬೀಳಿಸಿ ಮುಂದೆ ಹಾರಿದ.

ಇದನ್ನು ಕಂಡ ಮೈನಾಕ ತನ್ನ ಸ್ವಸ್ವರೂಪದಿಂದ ಪುನಃ ಹನುಮಂತನಿಗಿದಿರಾಗಿ ನಿಂತಿತು. "ವೀರವರ ಹನುಮಂತ, ನಿನ್ನ ಕಾರ್ಯ ಬಹಳ ಕಠಿಣವಾದುದು ನೀನು ಬಹಳ ದೂರ ಹಾರ ಬೇಕಾಗಿದೆ ಆದರಿಂದ ಇಲ್ಲಿ ನನ್ನ ಶಿಖರಪ್ರದೇಶದಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊ. ಮಧು ಯುಕ್ತವಾದ ಫಲಗಳನ್ನು ತಿನ್ನು. ಅನಂತರ ಮುಂದೆ ಹಾರುವಿಯಂತೆ. ಶಾಸ್ತ್ರದಲ್ಲಿ ಹೇಳಿದಂತೆ ಅತಿಥಿಯನ್ನು ಪೂಜಿಸಬೇಕಾದುದು ಧರ್ಮ. ಅಲ್ಲದೆ ನಿನ್ನನ್ನು ಪೂಜಿಸಲು ಇನ್ನೊಂದು ಕಾರಣವೂ ಉಂಟು. ಹೇಳುತ್ತೇನೆ ಕೇಳು.

ಹಿಂದೆ ಕೃತಯುಗದಲ್ಲಿ ಪರ್ವತಗಳಿಗೆಲ್ಲ ರೆಕ್ಕೆಗಳಿದ್ದವು. ಆದರಿಂದ ಪರ್ವತಗಳು ಎಲ್ಲೆಂದರೆ ಅಲ್ಲಿ ಹಾರಿ ಕುಳಿತುಕೊಳ್ಳುತ್ತಿದ್ದವು. ಇದರಿಂದ ಪ್ರಾಣಿಭಯವುಂಟಾಯಿತು ಇದನ್ನು ಕಂಡ ದೇವಾಧಿಪ ಇಂದ್ರ, ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಯನ್ನೆಲ್ಲಾ ಕತ್ತರಿಸುತ್ತಾ ಬಂದ. ನಾನು ಆಗ ಭಯದಿಂದ ಇತ್ತ ಓಡಿ ಬಂದೆ. ಆಗ ನಿನ್ನ ತಂದೆಯಾದ ವಾಯು ನನ್ನನ್ನು ಈ ಸಮುದ್ರದಲ್ಲಿ ಬೀಳುವಂತೆ ಮಾಡಿ ರಕ್ಷಿಸಿದ. ವಾಯು ನನ್ನ ಪ್ರಾಣವನ್ನು ಉಳಿಸಿದ. ಅವನ ಮಗ ನೀನು. ಆದ್ದರಿಂದಲೂ ನಿನಗೆ ಕೃತಜ್ಞತೆ ಅರ್ಪಿಸಬೇಕಾದ್ದು ನನ್ನ ಕರ್ತವ್ಯ. ಮತ್ತೊಮ್ಮೆ ಪ್ರಾರ್ಥಿಸುತ್ತೇನೆ, ಇಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಮುಂದೆ ಹಾರು" ಎಂದು ಹನುಮಂತ ನನ್ನು ಪ್ರಾರ್ಥಿಸಿತು.

ಮೈನಾಕದ ಮಾತುಗಳನ್ನು ಕೇಳಿ ಸಂತೋಷಿಸಿ ಹನುಮಂತ, "ಪರ್ವತರಾಜ, ನಾನು ಕಾರ್ಯವನ್ನು ಸಾಧಿಸುವವರೆಗೆ ಮಾರ್ಗದಲ್ಲಿ ಎಲ್ಲೂ ನಿಲ್ಲುವುದಿಲ್ಲ. ಏನೂ ಸ್ವೀಕರಿಸುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದೇನೆ. ಆದ್ದರಿಂದ ನಿಲ್ಲುವಂತಿಲ್ಲ. ನೀನು ಚಿಂತಿಸಬೇಡ. ನಿನ್ನ ಉಪಕಾರ ಬುದ್ಧಿಯನ್ನು ಕಂಡು ಸಂತೋಷವಾಯಿತು" ಎಂದು ಹೇಳಿ ಕೈಯಿಂದ ಆ ಪರ್ವತವನ್ನು ತಟ್ಟಿ ಮುಂದಕ್ಕೆ ಹಾರಿದ. ಹನುಮಂತನ ಅನುಗ್ರಹಕ್ಕೆ ಪಾತ್ರವಾದ ಆ ಪರ್ವತವನ್ನು ಸಮುದ್ರರಾಜ ಪ್ರಶಂಸಿಸಿದ. ಮೈನಾಕದ ಕೆಲಸಕ್ಕೆ ತುಷ್ಟಿಗೊಂಡ ಇಂದ್ರ ಮೈನಾಕಕ್ಕೆ ತನ್ನಿಂದ ಭಯವಿಲ್ಲದಂತೆ ಅನುಗ್ರಹಮಾಡಿದ.

ಉತ್ತಮರಿಗೆ ಸಹಾಯಮಾಡಬೇಕು, ಒಳ್ಳೆಯದು ಮಾಡಬೇಕು ಎಂದು ಚಿಂತಿಸಿದರೂ ಸಾಕು ಅದರಿಂದ ತನಗೇ ಒಳ್ಳೆಯದಾಗುತ್ತದೆ. ಉತ್ತಮನಾದ ಹನುಮಂತನಿಗೆ ಆತಿಥ್ಯ ನೀಡಬೇಕು ಎಂದು ಮೈನಾಕ ಯೋಚಿಸಿತು, ಅದರಿಂದ ಮೈನಾಕನಿಗೆ ಇನ್ನು ಮುಂದೆ ದೇವೇಂದ್ರ ನಿಂದ ಭಯ ತಪ್ಪಿದಂತಾಯಿತು

ಹನುಮಂತನ ಈ ಮಹತ್ಕಾರ್ಯವನ್ನು ಕಂಡು ದೇವತೆಗಳು, ಸಿದ್ಧರು, ಚಾರಣರು, ಗಂಧರ್ವರು, ಎಲ್ಲರೂ ಸಂತೋಷಿಸಿದರು. ದೇವತೆಗಳೆಲ್ಲ "ಸುರಸೆ" ಎಂಬ ನಾಗಮಾತೆಯನ್ನು ಪ್ರಾರ್ಥಿಸಿದರು. "ದೇವಿ, ಈವರೆಗೆ ಹನುಮಂತನ ಬಲವನ್ನೇನೋ ಪರೀಕ್ಷಿಸಿದ್ದಾಯಿತು ಆದರೆ ಕಾರ್ಯಸಾಧನೆಗೆ ಬಲದ ಜೊತೆಗೆ ಯುಕ್ತಿಯೂ ಇರಬೇಕು. ಈಗ ಹನುಮಂತನಲ್ಲಿ ಅಂಥ

ಯುಕ್ತಿ ಇದೆಯೋ ಎಂದು ನೋಡಬೇಕಾಗಿದೆ. ಆದ್ದರಿಂದ ನೀನು ಅಗಲವಾದ ಬಾಯನ್ನು ತೆರೆದು ನಿನ್ನ ಯೋಗಶಕ್ತಿಯಿಂದ ಒಂದು ಮುಹೂರ್ತಕಾಲದವರೆಗೆ ಹನುಮಂತನಿಗೆ ಮಾರ್ಗದಲ್ಲಿ ವಿಘ್ನ ಮಾಡು. ನೋಡೋಣ, ಹನುಮಂತ ಇದನ್ನು ಹೇಗೆ ಗೆಲ್ಲುತ್ತಾನೆ" ಎಂದು ಬೇಡಿದರು. ದೇವತೆಗಳ ಪ್ರಾರ್ಥನೆಯಂತೆ ಸುರಸೆ ದೊಡ್ಡ ಬಾಯನ್ನು ತೆರೆದುಕೊಂಡು ಹನುಮಂತನಿಗೆದಿರಾಗಿ ನಿಂತಳು. ನರಕಸದೃಶವಾಗಿತ್ತು ಅವಳ ಘೋರವಾದ ವದನ.

ಹಾರುತ್ತ ಬಂದ ಹನುಮಂತ ಅದನ್ನು ಅತಿಕ್ರಮಿಸಲು ಹೊರಟ. ಆಗ ಸುರಸೆ ಅವನನ್ನು ತಡೆದು "ಹನುಮಾನ್, ಹಿಂದೆ ನನಗೆ ಬ್ರಹ್ಮಕೊಟ್ಟ ವರ ಒಂದಿದೆ. ಅದರಂತೆ ಹೀಗೆ ಬಂದ ಎಲ್ಲರೂ ನನ್ನ ಬಾಯನ್ನು ಹೊಕ್ಕೇ ಹೊರಗೆ ಹೋಗಬೇಕು'' ಎಂದಳು.

ಹನುಮಂತ ವಿನಯದಿಂದ ಅವಳಿಗೆ ನಮಸ್ಕರಿಸಿ "ಅಮ್ಮಾ ದಶರಥರಾಮನ ಪತ್ನಿಯನ್ನು ಹುಡುಕುವ ಸಲುವಾಗಿ ಹೋಗುತ್ತಿದ್ದೇನೆ. ಈಗ ತಡೆಯಬೇಡ. ಸೀತೆಯನ್ನು ಹುಡುಕಿ ಆತನಿಗೆ ಸುದ್ದಿಯನ್ನು ತಿಳಿಸಿ ಬರುವಾಗ ನಿನ್ನ ಬಾಯಲ್ಲಿ ಹೋಗುತ್ತೇನೆ. ಇದು ಸತ್ಯ. ಈಗ ದಾರಿ ಬಿಡು" ಎಂದ.

ಆದರೆ ಅವಳು ಅದಕ್ಕೆ ಒಪ್ಪಲಿಲ್ಲ. ಅದೆಲ್ಲ ಆಗದು. ವರ ವ್ಯರ್ಥವಾಗುವಂತಿಲ್ಲ, ನೀನು ಬಾಯೊಳಗೆ ಹೊಕ್ಕೇ ಹೋಗಬೇಕು ಎಂದಳು.

ಹನುಮಂತ ನೋಡಿದ. "ಸರಿ, ನಿನ್ನ ಬಾಯನ್ನು ತೆರೆ. ಅದೆಷ್ಟು ವಿಶಾಲವಾಗಿದೆ ನೋಡುತ್ತೇನೆ" ಎಂದ. ಅವಳು ವಿಶಾಲವಾಗಿ ತೆರೆದಳು ಬಾಯನ್ನು, ಹನುಮಂತ ತನ್ನ ಯೋಗ ಶಕ್ತಿಯಿಂದ ತನ್ನ ದೇಹವನ್ನು ಅವಳ ಬಾಯಿಯ ಆಕಾರಕ್ಕಿಂತ ದೊಡ್ಡದಾಗಿ ಹಿಗ್ಗಿಸಿದ. ಇದನ್ನು ಕಂಡ ಅವಳು ಇನ್ನೂ ದೊಡ್ಡದಾಗಿ ಹಿಗ್ಗಿಸಿದಳು. ಹನುಮಂತ ಅವಳದಕ್ಕಿಂತ ಹೆಚ್ಚಾಗಿ ಹಿಗ್ಗಿಸಿದ. ಹೀಗೆ ನಡೆಯಿತು ಸ್ವಲ್ಪಹೊತ್ತು. ಸುರಸೆಯ ಬಾಯಿ ನರಕದಂತೆ ದೀರ್ಘವಾಗಿ ವಿಶಾಲವಾಗಿತ್ತು. ನೋಡಿದ, ಬುದ್ಧಿವಂತರಲ್ಲಿ ಶ್ರೇಷ್ಠನಾದ ಹನುಮಂತ, ಒಡನೆಯೇ ತನ್ನ ಶರೀರವನ್ನು ನಿಮಿಷಾರ್ಧದಲ್ಲಿ ಹೆಬ್ಬೆಟ್ಟಿನಷ್ಟು ಗಾತ್ರಕ್ಕೆ ಕುಗ್ಗಿಸಿಕೊಂಡು ಸುರಸೆಯ ಬಾಯೊಳಗೆ ಹೊಕ್ಕು ಈಚೆಗೆ ಬಂದ, ಬಂದವನೇ ಅಂತರಿಕ್ಷದಲ್ಲಿ ನಿಂತುಕೊಂಡು "ಅಮ್ಮಾ, ದಾಕ್ಷಾಯಿಣೀ ನಿನಗೆ ನಮಸ್ಕಾರ ನಿನ್ನ ವರ ಸತ್ಯವಾಯಿತಷ್ಟೆ. ನೀ ಹೇಳಿದಂತೆ ನಿನ್ನ ಬಾಯೊಳಗೆ ಹೊಕ್ಕು ಹೊರಬಂದೆ. ಇನ್ನು ಹೊರಡುತ್ತೇನೆ ನಮಸ್ಕಾರ" ಎಂದ.

ಆಗ ಸುರಸೆ "ಕಪಿಶ್ರೇಷ್ಠ. ನೀ ಶಕ್ತಿವಂತ ಮಾತ್ರವಲ್ಲದೆ ಯುಕ್ತಿವಂತನೂ ಆಗಿರುವೆ. ನಿನ್ನ ಕಾರ್ಯ ಸಫಲವಾಗಲಿ. ಹೋಗಿ ಬಾ. ನಿನಗೆ ಮಂಗಳವಾಗಲಿ" ಎಂದು ಹರಸಿದಳು. ದೇವತೆಗಳು ಸಿದ್ಧರು, ಚಾರಣರು. ಋಷಿಗಳು ಎಲ್ಲರೂ ಹನುಮಂತನನ್ನು ಪ್ರಶಂಸಿಸಿದರು.

ಅಲ್ಲಿಂದ ಮುಂದೆ ಹಾರಿದ ಹನುಮಂತ, ಸ್ವಲ್ಪದೂರ ಹೋದಮೇಲೆ ಯಾರೋ ತನ್ನನ್ನು ಕೆಳಗೆ ಹಿಡಿದು ಎಳೆದಂತಾಯಿತು. ನೋಡಿದ. ಕೆಳಗೆ ಸಮುದ್ರದಲ್ಲಿ ''ಸಿಂಹಿಕೆ" ಎಂಬ ಛಾಯಾಗ್ರಾಹಿಯಾದ ರಾಕ್ಷಸಿ ಹನುಮಂತನ ನೆರಳನ್ನು ಹಿಡಿದು ಎಳೆಯುತ್ತಿದ್ದಾಳೆ. ಸುಗ್ರೀವ ಹೇಳಿದ ಮಾತು ನೆನಪಿಗೆ ಬಂದಿತು. ಇವಳು "ಸಿಂಹಿಕೆಯೆಂಬ ರಾಕ್ಷಸಿ" ಎಂದರಿತ. ಆ ರಾಕ್ಷಸಿಯ ಬಾಯಿಗಿಂತ ತನ್ನ ದೇಹವನ್ನು ದೊಡ್ಡದಾಗಿ ಹಿಗ್ಗಿಸಿದ ಅವಳೂ ತನ್ನ ಬಾಯನ್ನು ಇನ್ನೂ ದೊಡ್ಡದಾಗಿ ಹಿಗ್ಗಿಸಿದಳು. ಪುನಃ ಹನುಮಂತ ಸೂಕ್ಷ್ಮರೂಪದಿಂದ ಸಿಂಹಿಕೆಯ ಬಾಯನ್ನು

ಪ್ರವೇಶಿಸಿದ. ಒಳಗೆ ಹೋಗುತ್ತಲೇ ತನ್ನ ದೇಹವನ್ನು ದೊಡ್ಡದಾಗಿ ಹಿಗ್ಗಿಸಿದ. ತನ್ನ ತೀಕ್ಷ್ಣವಾದ ನಖಗಳಿಂದ ಅವಳನ್ನು ಕೊಂದ. ರಾಹುವಿನಿಂದ ಬಿಡುಗಡೆ ಹೊಂದಿದ ಚಂದ್ರನಂತೆ ಸಿಂಹಿಕೆಯ ಬಾಯಿಂದ ಹೊರಬಂದ.

ನರಸಿಂಹ ತನ್ನ ನಖಗಳಿಂದ ಹಿರಣ್ಯಕಶಿಪುವನ್ನು ಕೊಂದಂತೆ ಹನುಮಂತ ತನ್ನ ನಖಗಳಿಂದ ಸಿಂಹಿಕೆಯನ್ನು ಕೊಂದ. ಸಮುದ್ರದ ಮೇಲೆ ಹಾರುವ ಮೃಗಪಕ್ಷಿಗಳು, ಸಿದ್ಧರು, ಚಾರಣರು, ಋಷಿಗಳು ಎಲ್ಲರೂ ಹನುಮಂತನನ್ನು ಕೊಂಡಾಡಿದರು

ಸಾಯಂಕಾಲದ ವೇಳೆಗೆ ಸಮುದ್ರದ ದಡವನ್ನು ಸೇರಿದ. ಮಹೇಂದ್ರಪರ್ವತದಿಂದ ಹೊರಟವ ಸಂಜೆಯ ವೇಳೆಗೆ ತ್ರಿಕೂಟಾದ್ರಿಯನ್ನು ಮುಟ್ಟಿದ. ವಿವಿಧ ದ್ರುಮಗಳಿಂದ ಕೂಡಿದ ಆ ತ್ರಿಕೂಟ ಪರ್ವತವನ್ನೂ, ಅದರಿಂದ ಕಂಗೊಳಿಸುವ ಲಂಕೆಯನ್ನೂ ಕಂಡ.

ಹನುಮಂತ ಸಮುದ್ರವನ್ನು ಹಾರಿದಾಗ ಮೂರು ವಿಧದ ಅಡಚಣೆಗಳು ಬಂದುವು. ಮೈನಾಕ, ಸುರಸೆ, ಸಿಂಹಿಕೆ. ಆಚಾರ್ಯ ಸತ್ಪಥವನ್ನು ದಾಟಬೇಕಾದಾಗ ಈ ರೀತಿಯ ಅಡಚಣೆಗಳು ಒದಗುತ್ತವೆ. ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ಅಡ್ಡಿಗಳು ಸಾಧನೆಯ ಮಾರ್ಗದಲ್ಲಿ ಒದಗುವ ಮೂರು ಅಡ್ಡಿಗಳು. ಮೈನಾಕ ಆಧ್ಯಾತ್ಮಿಕವಾದ ಅಡ್ಡಿ. ಆದರೆ, ಸುರಸೆ ಆಧಿದೈವಿಕವಾದ ಅಡ್ಡಿ. ದೇವತೆಗಳಿಂದ ಪ್ರೇರಿತಳಾಗಿ ಬಂದ ಅವಳು ದೈವಿಕವಾಗಿ ಒದಗಿದ ಅಡ್ಡಿ. ಇನ್ನು ಸಿಂಹಿಕೆ ಆಧಿಭೌತಿಕವಾದ ಅಡ್ಡಿ. ಪಂಚಭೂತಗಳಿಂದ ಸಾಧನೆಯ ಮಾರ್ಗದಲ್ಲಿ ಒದಗಬಹುದಾದ ಅಡ್ಡಿಗೆ ಸಿಂಹಿಕೆಯೇ ನಿದರ್ಶನ. ಆದರೆ, ಸದಾಚಾರ್ಯ ತನ್ನ ಶಕ್ತಿಯಿಂದ, ಯುಕ್ತಿಯಿಂದ, ಕಾರ್ಯನಿಷ್ಠೆಯಿಂದ ಈ ಮೂರು ವಿಧವಾದ ವಿಘ್ನಗಳನ್ನೂ ಎದುರಿಸಿ ತನ್ನ ಗುರಿಯನ್ನು ಮುಟ್ಟುತ್ತಾನೆ.

ಶತಯೋಜನ ವಿಸ್ತಾರವಾದ ಸಾಗರವನ್ನು ಒಂದೇ ಹಾರಿಗೆ ಹಾರಿ ಲಂಕೆಯನ್ನು ಸೇರಿದ ಹನುಮಂತ. ಆದರೂ ಸ್ವಲ್ಪವೂ ಆಯಾಸವಾಗಲಿಲ್ಲ. ಅವನು ಲಂಕೆಯ ಹೊರಪಾರ್ಶ್ವದ ಸೌಂದರ್ಯವನ್ನು ನೋಡಿದ.

ಮಲ್ಲಿಗೆ, ಮಾಲತಿ, ಪುನ್ನಾಗ, ಚಂಪಕ, ವಕುಳ, ಸೇವಂತಿಗೆ, ಜಾಜಿ, ಪಾದರಿ, ಮುಂತಾದ ಸುಗಂಧ ಪುಷ್ಪಗಳಿಂದ ತುಂಬಿದ ವನವನ್ನು ನೋಡಿದ. ನಾನಾ ವಿಧದ ಫಲಗಳಿಂದ ಆವೃತವಾದ ವೃಕ್ಷಗಳನ್ನು ಕಂಡ. ಅಲ್ಲಲ್ಲಿ ಮನೋಹರವಾಗಿ ಇರುವ ಗಿರಿಶೃಂಗಗಳನ್ನು ಕಂಡ.

ತ್ರಿಕೂಟಪರ್ವತದ ಎತ್ತರವಾದ ಶಿಖರದಲ್ಲಿ ಶೋಭಿಸುತ್ತಿರುವ ಲಂಕೆಯನ್ನು ಕಂಡ. ವಾಲ್ಮೀಕಿಯ ಬಾಯಿಂದಲೇ ಕೇಳಬೇಕು. ಆ ವರ್ಣನೆಯನ್ನು !

ಸ ತಸ್ಮಿನ್ನಚಲೇ ತಿಷ್ಠನ್ವನಾನ್ಯುಪವನಾನಿ ಚ ।
ಸ ನಗಾಗ್ರೇ ಸ್ಥಿತಾಂ ಲಂಕಾಂ ದದರ್ಶ ಪವನಾತ್ಮಜಃ ॥
ಸರಲಾನ್ ಕರ್ಣಿಕಾರಾಂಶ್ಚ ಖರ್ಜೂರಾಂಶ್ಚ ಸುಪುಷ್ಪಿತಾನ್ ।
ಪ್ರಿಯಾಲಾನ್ ಮುಚುಲಿಂದಾಂಶ್ಚ ಕುಟಜಾನ್ ಕೇತಕಾನಪಿ ॥
ಪ್ರಿಯಂಗೂನ್ ಗಂಧಪೂರ್ಣಾಂಶ್ಚ ನೀಪಾನ್ ಸಪ್ತಚ್ಛದಾಂಸ್ತಥಾ ।
ಅಸನಾನ್ ಕೋವಿದಾರಾಂಶ್ಚ ಕರವೀರಾಂಶ್ಚ ಪುಷ್ಪಿತಾನ್ ॥

ಸುತ್ತಲೂ ದುರ್ಗಮವಾದ ಆಳವಾದ ಕಂದಕಗಳು ಬ್ರಹ್ಮನ ಆಜ್ಞೆಯಂತೆ ಯೋಗದಿಂದ ದೇವತೆಗಳ ಶಿಲ್ಪಿ ವಿಶ್ವಕರ್ಮ ನಿರ್ಮಿಸಿರುವ ಲಂಕೆ ಅಮರಾವತಿಯಂತೆ ಶೋಭಿಸುತ್ತಿರುವುದನ್ನು ಕಂಡ. ದುರ್ಗಮವಾದ ಕೋಟೆಯನ್ನೂ, ಅದರ ಸುತ್ತಲೂ ವಿಧವಿಧವಾದ ಶೂಲ, ಕತ್ತಿ, ತೋಮರ ಮುಂತಾದ ಆಯುಧಗಳನ್ನು ಹಿಡಿದು ನಿಂತಿರುವ ಬಲಾಢ್ಯರಾದ ರಾಕ್ಷಸರನ್ನೂ ನೋಡಿದ. ದೇವತೆಗಳೂ ಒಳಹೋಗುವುದಕ್ಕೆ ಆಸ್ಪದವಿಲ್ಲ. ಅಷ್ಟೇಕೆ! ಗಾಳಿ ಸಹ ಅನುಮತಿಯಿಲ್ಲದೆ ಒಳಗೆ ನುಸುಳುವಂತಿಲ್ಲ. ಇಂಥ ಸುರಕ್ಷಿತವಾದ ಲಂಕೆಯನ್ನು ಜಯಿಸಲು ಶಕ್ಯವೆ? ಎಂದು ಕ್ಷಣಕಾಲ ಯೋಚಿಸಿದ.

ಆದರೆ, ಮರುಕ್ಷಣದಲ್ಲಿ ರಾಮಲಕ್ಷ್ಮಣರ ಅಪ್ರತಿಮ ಪರಾಕ್ರಮವನ್ನು ನೆನೆಸಿಕೊಂಡು ಸ್ವಲ್ಪ ಸಮಾಧಾನ ಹೊಂದಿದ. ಹೀಗೆ ದುರ್ಗಮವಾಗಿರುವ ಈ ನಗರವನ್ನು ಪ್ರವೇಶಿಸುವುದಾದರೂ ಹೇಗೆ? ಎಂದು ಯೋಚಿಸಿದ.

ಸಾಯಂಕಾಲ ಕಳೆದು ರಾತ್ರಿ ಸಮೀಪಿಸಿತು. ಇನ್ನು ಈ ಭೀಮರೂಪದಲ್ಲಿ ಹೋಗುವುದು ಸಲ್ಲದು ಎಂದು ಒಂದು ಸಣ್ಣ ಬೆಕ್ಕಿನಷ್ಟು ಕಿರಿದಾಗಿ ತನ್ನ ಆಕೃತಿಯನ್ನು ಕುಗ್ಗಿಸಿಕೊಂಡ. ಅಲ್ಲಿಂದ ಮೆಲ್ಲಗೆ ಲಂಕೆಯೊಳಗೆ ನುಸುಳಿಬಿಡೋಣ ಎಂದು ಅಡಿ ಇಡುತ್ತಿದ್ದಂತೆಯೇ "ನೀ ಯಾರು? ನಿಲ್ಲು!" ಎಂಬ ಗರ್ಜನೆ ಕೇಳಿ ನಿಂತ

ನೋಡಿದರೆ ವಿರೂಪಳಾದ ಘೋರ ರಾಕ್ಷಸಿ ಒಬ್ಬಳು ನಿಂತಿದ್ದಾಳೆ. "ಎ ವಾನರ, ಯಾರು ನೀನು? ಏಕೆ ಒಳಗೆ ನುಸುಳುತ್ತಿರುವೆ? ನಿಲ್ಲು" ಎಂದು ಕೂಗಿದಳು.

ಹನುಮಂತ "ನಾನು ವಾನರ! ಏನೋ ಚಪಲ, ಲಂಕೆ ಬಹಳ ಚನ್ನಾಗಿದೆ ಎಂದು ಕೇಳಿದೆ– ಹಾಗೇ ಒಳಗೆ ಹೋಗಿ ಲಂಕೆಯನ್ನೆಲ್ಲ ನೋಡಿ ಬರೋಣ ಎಂದು ಹೋಗುತ್ತಿದ್ದೇನೆ. ಅದಿರಲಿ, ನೀನು ಯಾರು? ಏಕೆ ನನ್ನನ್ನು ತಡೆಯುತ್ತಿದ್ದೀಯೆ" ಎಂದ.

"ನಾನು ಯಾರು? ತಿಳಿದುಕೊಳ್ಳಬೇಕೆ ನೀನು. ನಾನು ಲಂಕಿಣಿ. ಈ ಲಂಕೆಯ ಅಧಿದೇವತೆ. ನನ್ನ ಆಜ್ಞೆಯಿಲ್ಲದೆ ಯಾರೂ ಪೊಳಲ ಒಳಗೆ ಹೋಗುವಂತಿಲ್ಲ ಹೋಗು'' ಎಂದು ಮುಷ್ಟಿಯಿಂದ ಹೊಡೆದಳು.

ಒಡನೆ ಹನುಮಂತ ಕುಪಿತನಾದ. ಕೋಪ ಬಂದಾಗಲೂ "ಸ್ತ್ರೀ" ಎಂದು ಕರುಣೆಯಿಂದ ಎಡಗೈಯಿನ ಕಿರುಬೆರಳಿನಿಂದ ಅವಳನ್ನು ಹೊಡೆದ ಅಷ್ಟು ಮಾತ್ರಕ್ಕೇ ಕೆಳಗೆ ಬಿದ್ದು ಮೂರ್ಛಿತಳಾದಳು ಆಕೆ. ಮೂರ್ಛೆಯಿಂದ ಎಚ್ಚೆತ್ತು ಕಪಿಶ್ರೇಷ್ಠ, ನಿನಗೆ ಮಂಗಳವಾಗಲಿ, ಹಿಂದೆ ಬ್ರಹ್ಮದೇವ ನನಗೆ "ಯಾವಾಗ ವಾನರ ಒಬ್ಬ ಬಂದು ನಿನ್ನನ್ನು ಹೊಡೆಯುತ್ತಾನೋ ಆಗ ನೀನು ಅದರಿಂದ ಬಲಹೀನಳಾಗುತ್ತೀಯೊ ಆಗಲೇ ಲಂಕೆಗೆ ವಿನಾಶಕಾಲ ಒದಗಿತು ಎಂದು ತಿಳಿ.'' ಎಂದು ಹೇಳಿದ್ದ. ಅದರಂತೆಯೇ ನಡೆಯಿತು. ಇನ್ನು ನಾ ಹೋಗುತ್ತೇನೆ. ಇಗೋ ಬಾಗಿಲನ್ನು ತೆರೆದಿದ್ದೇನೆ. ಒಳಗೆ ಹೋಗು. ನಿನ್ನ ಅಭೀಷ್ಟಗಳನ್ನೆಲ್ಲ ನೆರವೇರಿಸಿಕೊಳ್ಳುವವನಾಗು" ಎಂದು ಲಂಕೆಯ ದ್ವಾರವನ್ನು ತೆರೆದು ಹೊರಟಳು ಲಂಕಿಣಿ.

ದ್ವಾರ ತೆರೆದಿದ್ದರೂ ಹನುಮಂತ ಅದರಲ್ಲಿ ಹೋಗಲಿಲ್ಲ. ಒಂದುಗಡೆಯ ಗೋಡೆಯನ್ನು ಹಾರಿ ಲಂಕೆಯೊಳಗೆ ಹಾರಿದ. ಕಪಿರಾಜನಿಗೂ, ರಾಮನಿಗೂ ಹಿತವನ್ನು ಬಯಸುವ ಹನುಮಂತ ರಾವಣನ ಪುರಿಯನ್ನು ಪ್ರವೇಶಿಸುವಾಗ ಎಡಗಾಲನ್ನು ಮುಂದಿಟ್ಟುಕೊಂಡು ಪ್ರವೇಶಿಸಿದ.

ತಿಸ್ಮಾರೇಣ ಸುಗ್ರಾವೀರ್ಯೇಣ ಪ್ರಾಕಾರೆ ಮುಪಪ್ಲುಪ್ಲುವೇ।
ನಿಶಿ ಲಂಕಾಂ ಮಹಾಸತ್ವೋ ವಿವೇಶ ಕಪಿಕುಂಜರಃ॥
ಪ್ರವಿಶ್ಯ ನಗರೀಂ ಲಂಕಾಂ ಕಪಿರಾಜ–ಹಿತಂಕರಃ।
ಚಕ್ರೇಥ ಪಾದಂ ಸವ್ಯಂಚ ಶತ್ರೂಣಾಂ ಸತುಮೂರ್ಧನಿ॥

ಲಂಕೆಯ ಒಳಗೆ ಹೋಗಿ ಯಾರಿಗೂ ತೋರದಂತೆ ಆಗವಂತೆ ಮೆಲ್ಲಗೆ ಒಂದೊಂದಾಗಿ ಮನೆಗಳನ್ನು ಪ್ರವೇಶಿಸಿ ಅವರಲ್ಲಿ ಹುಡುಕತೊಡಗಿದ. ಮೊದಲು ಮಂತ್ರಿಯಾದ ಪ್ರಹಸ್ತನ ಮನೆಯನ್ನು ಪ್ರವೇಶಿಸಿ ಅಲ್ಲಿ ಹುಡುಕಿದ ಅಲ್ಲಿಂದ ಮಹಾಪಾರ್ಶ್ವ, ಮಹೋದರ, ವಿದ್ಯುಜ್ಜಿಹ್ವ, ಜಂಬುಮಾಲಿ, ಸುಮಾಲಿ, ಸೂರ್ಯಶತ್ರು, ನರಾಂತಕ, ದೇವಾಂತಕ, ಕುಂಭಕರ್ಣ, ವಿಭೀಷಣ ಇವರೆಲ್ಲರ ಗೃಹಗಳನ್ನೂ ಒಂದಾದಮೇಲೊಂದರಂತೆ ಒಳಹೊಕ್ಕು ಹುಡುಕಿದ. ಎಲ್ಲೂ ಸೀತೆಯನ್ನು ಕಾಣಲಿಲ್ಲ.

ಹೀಗೆ ಹುಡುಕುತ್ತಿರುವಾಗ ರಾತ್ರಿ ಹೊತ್ತಾಗುತ್ತ ಬಂದಿತು. "ಈಗ ಬೆಳದಿಂಗಳಾದರೂ ಇದ್ದರೆ, ಅದರ ಬೆಳಕಿನಲ್ಲಿ ಹುಡುಕಬಹುದಲ್ಲಾ" ಎಂದುಕೊಳ್ಳುತ್ತಿದ್ದಂತೆ ಆಕಾಶದಲ್ಲಿ ಚಂದ್ರ ಏರಿ ಬಂದ.

"ಸೂರ್ಯವಂಶದಲ್ಲಿ ಹುಟ್ಟಿದ ರಾಮ. ರಾಮನಿಗೆ ಕೂಟಸ್ಥನಾಗಿ ಸೂರ್ಯ ಪ್ರಸಿದ್ಧಿ ಪಡೆದ. ಈಗ, ರಾಮಕಾರ್ಯದಲ್ಲಿ ನೆರವಾಗುವುದರ ಮೂಲಕ ನಾನು ಪ್ರಸಿದ್ಧಿಯನ್ನು ಪಡೆಯುತ್ತೇನೆ" ಎಂದುಕೊಂಡ ಚಂದ್ರ ತನ್ನ ಪ್ರಕಾಶಮಾನವಾದ ಕಿರಣಗಳನ್ನು ಎಲ್ಲ ಕಡೆಯಲ್ಲೂ ಪಸರಿಸಿದ. ಹಂಸ ಬೆಳ್ಳಿಯ ಪಂಜರದಲ್ಲಿದ್ದಂತೆ, ಸಿಂಹ, ಪರ್ವತದ ಕಂದರದಲ್ಲಿದ್ದಂತೆ, ವೀರನಾದವ ಮದಿಸಿದ ಆನೆಯ ಮೇಲೆ ವಿರಾಜಮಾನನಾದಂತೆ ಆಕಾಶದಲ್ಲಿ ಚಂದ್ರ ಕಂಗೊಳಿಸಿದ.

ಹಂಸೋ ಯಥಾ ರಾಜತ–ಪಂಜರಸ್ಥಃ।
ಸಿಂಹೋ ಯಥಾ ಪರ್ವತ–ಕಂದರಸ್ಥಃ॥
ವೀರೋ ಯಥಾ ಗರ್ವಿತ–ಕುಂಜರಸ್ಥಃ।
ಚಂದ್ರೋಪಿ ಬಭ್ರಾಜ ತಥಾಂಬರಸ್ಥಃ॥

ಆ ಬೆಳದಿಂಗಳ ಬೆಳಕಿನಲ್ಲಿ ಇಡೀ ಲಂಕೆಯ ಒಂದೊಂದು ಮನೆಯನ್ನೂ, ಉದ್ಯಾನವನವನ್ನೂ ಹುಡುಕಿದ. ಎಲ್ಲೂ ಸೀತೆ ದೊರಕಲಿಲ್ಲ.

ಹುಡುಕುತ್ತಾ, ಹುಡುಕುತ್ತಾ ರಾವಣನ ಅಂತಃಪುರವನ್ನು ಪ್ರವೇಶಿಸಿದ. ಮಹಾರ್ಹವಾದ ಪುಷ್ಪಕ ವಿಮಾನವನ್ನು ನೋಡಿದ. ವೈಢೂರ್ಯ ರಚಿತವಾದ ಆ ವಿಮಾನವನ್ನು ವಿಶ್ವಕರ್ಮ ಯೋಗಬಲದಿಂದ ನಿರ್ಮಿಸಿದ್ದ. ಕುಬೇರನ ವಿಮಾನ ಅದು. ಕುಬೇರನನ್ನು ಓಡಿಸಿ ರಾವಣ ಅದನ್ನು ಅವನಿಂದ ಪಡೆದ.

ವಿಚಿತ್ರವಾದ ರೀತಿಯಲ್ಲಿ ತನ್ನದೇ ಆದ ಶೋಭೆಯನ್ನು ಪಡೆದಿತ್ತು ಅದು. ಮುಕ್ತಾಹಾರಗಳಿಂದಲೂ, ರತ್ನಸ್ತಂಭಗಳಿಂದಲೂ, ಸ್ವರ್ಣವೇದಿಕೆಗಳಿಂದಲೂ ವಿರಾಜಮಾನವಾಗಿತ್ತು. ಚಿತ್ರ ವಿಚಿತ್ರವಾದ ಅಲಂಕಾರಗಳಿಂದ ಶೋಭಿತವಾಗಿತ್ತು ಅದು. ಮಂದರಪರ್ವತದ ಶೋಭಾಯಮಾನವಾದ ಗುಹೆಯಂತೆ ರತ್ನ, ಸ್ಫಟಿಕ, ವಜ್ರಗಳಿಂದ ನಿರ್ಮಿಸಲ್ಪಟ್ಟ ಆ ವಿಮಾನ ಜ್ವಲಿಸುತ್ತಿತ್ತು.

ಉತ್ತಮವಾದ ಆ ವಿಮಾನವನ್ನು ಪ್ರವೇಶಿಸಿದ ಹನುಮಂತ. ರಾವಣನ ಅಂತಃಪುರ ಅಷ್ಟು ವಿಶಾಲವಾದ ಗೃಹಗಳಿಂದಲೂ. ನಾನಾವಿಧವಾದ ಆಸನಗಳಿಂದಲೂ ಶೋಭಿಸುತ್ತಿತ್ತು. ವಿವಿಧ ಶಾಲೆಗಳಿದ್ದವು ಅದರಲ್ಲಿ ಪಾನಶಾಲೆ, ಪಾಕಶಾಲೆ, ವ್ಯಾಯಾಮ ಶಾಲೆ, ಶಯನಗೃಹ, ಭೋಜನ ಶಾಲೆ, ಕ್ರೀಡಾಗೃಹ ಮುಂತಾದ ವಿವಿಧ ಭಾಗಗಳಿದ್ದವು ಆ ಅಂತಃಪುರದಲ್ಲಿ. ಹನುಮಂತ ಎಲ್ಲಾ ವಸ್ತೂ ತಪ್ಪದೆ ನೋಡಿಕೊಂಡು ಬಂದ.

ರಾವಣನ ಅಂತಃಪುರವನ್ನು ಪ್ರವೇಶಿಸಿದ. ಅಲ್ಲಿ ನಾನಾವಿಧದ ಸ್ತ್ರೀಯರು ಮಲಗಿದ್ದರು. ದೇವಸ್ತ್ರೀ, ಅಪ್ಸರೆ, ಗಂಧರ್ವಿಯರು, ಯಕ್ಷಿಯರು, ನಾಗಕನ್ನಿಕೆಯರು ಎಲ್ಲ ಇದ್ದರು ಅಲ್ಲಿ. ಅವರಲ್ಲಿ ಕೆಲವರು ಬಿಳುಪು ಬಣ್ಣ ಉಳ್ಳವರು, ಕೆಲವರು ಚಿನ್ನದ ಬಣ್ಣದವರು, ಕೆಲವರು ಕೃಷ್ಣ ವರ್ಣದವರು. ಇವರೆಲ್ಲರಿಂದ ರಾವಣನ ಅಂತಃಪುರ ಶೋಭಿಸುತ್ತಿತ್ತು. ನಾನಾಜಾತಿಯ ವೃಕ್ಷಗಳಿಂದ ಶೋಭಿಸುವ ವನದಂತೆ, ನಾನಾಜಾತಿಯ, ರೀತಿಯ, ಸ್ತ್ರೀಯರಿಂದ ರಾವಣನ ಸ್ತ್ರೀ ವನ ರಾರಾಜಿಸುತ್ತಿತ್ತು. ಇದನ್ನೆಲ್ಲ ನೋಡುತ್ತ ಬಂದ ಹನುಮಂತ.

ಒಂದು ಕಡೆ ದೀಪಗಳು ಉರಿಯುತ್ತಿದ್ದವು ನಾಲ್ಕು ಮೂಲೆಗಳಲ್ಲಿ ದೀಪ ಪ್ರಜ್ವಲಿಸುತ್ತಿತ್ತು. ಅಲ್ಲಿ ಯಾರಿರಬಹುದು ? ಎಂದುಕೊಂಡು ಬಂದ ಹನುಮಂತ. ಅಲ್ಲಿ ಸುಪ್ಪತ್ತಿಗೆಯ ಮೇಲೆ ಭುಜಂಗದಂತೆ ಉಸಿರುಬಿಡುತ್ತಾ ಮಲಗಿದ್ದ ರಾವಣನನ್ನು ಕಂಡ. ಹತ್ತು ಹೆಡೆಗಳುಳ್ಳ ಹಬ್ಬಾವಿನಂತಿದ್ದ ಅವನು. ಉದ್ದಿನರಾಶಿ ಬಿದ್ದಿದ್ದರೆ ಹೇಗೋ, ಕರಿಯ ಪರ್ವತ ಬಿದ್ದಿದ್ದರೆ ಹೇಗೋ ಹಾಗೆ ಮಲಗಿದ್ದ ರಾವಣ. ರಾತ್ರಿಯಲ್ಲಿ ರಾಕ್ಷಸ ಸ್ತ್ರೀಯರೊಡನೆ ಭೋಗವನ್ನು ಅನುಭವಿಸಿ ಅವರ ಮಧ್ಯೆ ಮಲಗಿದ್ದ.

ಅವನ ಎದೆಯಲ್ಲಿ ಐರಾವತದ ದಂತದ ತಿವಿತದಿಂದ ಆದ ಗಾಯದ ಗುರುತು ಕಾಣುತ್ತಿತ್ತು. ಯಕ್ಷ, ಕಿನ್ನರ, ಗಂಧರ್ವ, ದೇವತಾಸ್ತ್ರೀಯರನ್ನು ಸಂಕಟಗೊಳಿಸುವಂಥ ಭೀಕರಾಕಾರದ ರಾವಣನನ್ನು ನೋಡಿದ ಅಲ್ಲಿ.

ಮುಂದೆ ರಾವಣನ ಪಕ್ಕದಲ್ಲಿ ಸರ್ವಾಲಂಕಾರಶೋಭಿತಳಾಗಿ, ಅತ್ಯಂತ ಸುಂದರಿಯೆನಿಸಿದ ಒಬ್ಬ ಸ್ತ್ರೀ ಮಲಗಿರುವುದನ್ನು ಕಂಡ. ಅವಳ ರೂಪವನ್ನೂ, ಅವಳ ಯೌವನವನ್ನೂ ನೋಡಿ ಅವಳೇ "ಸೀತೆ ಇರಬೇಕು" ಎಂದು ತರ್ಕಿಸಿದ. ಒಡನೆ ಕಪಿಸ್ವಭಾವವನ್ನು ಪ್ರದರ್ಶಿಸುತ್ತಾ ವಿಮಾನದ ರತ್ನಸ್ತಂಭವನ್ನು ಸರಸರನೆ ಏರಿದ. ಕೆಳಗೆ ಬೇಗ ಇಳಿದ. ತನ್ನ ಬಾಲವನ್ನು ಕೈಯಲ್ಲಿ ಹಿಡಿದುಕೊಂಡು ಅದನ್ನು ಚುಂಬಿಸಿದ. "ಸೀತೆಯನ್ನು ಕಂಡುಹಿಡಿದುಬಿಟ್ಟೆ" ಎಂದು ಆನಂದಪಟ್ಟ. ಆದರೆ, ಆ ಆನಂದ, ಆ ಸಂತೋಷ ಒಂದು ಕ್ಷಣ ಮಾತ್ರ ಇದ್ದಿತು.

ಆಸ್ಫೋಟಯಾಮಾಸ ಚುಚುಂಬ ಪುಚ್ಛಂ
ನನಂದ ಚಿಕ್ರೀಡ ಜಗೌ ಜಗಾಮ ।
ಸ್ತಂಭಾನರೋಹನ್ನಿಪಪಾತಭೂಮೌ
ನಿದರ್ಶಯನ್ ಸ್ವಾಂ ಪ್ರಕೃತಿಂ ಕಪೀನಾಂ ॥

ಮರುಕ್ಷಣ ಯೋಚಿಸಿದ. ಉತ್ತಮ ಪತಿವ್ರತೆಯಾದ ಸೀತೆ ರಾಮನನ್ನು ಅಗಲಿರುವಾಗ ಭೋಗಗಳನ್ನು ಅನುಭವಿಸುವಳೇ ? ನಿದ್ದೆ ಮಾಡುವಳೆ ? ಹೀಗೆ ಸರ್ವಾಲಂಕಾರ ಮಾಡಿಕೊಂಡು

ಪಾನಾದಿಗಳಲ್ಲಿ ಆಸಕ್ತಳಾಗಿರುವಳೆ ? ಇದು ಎಂದಿಗೂ ಇರದು. ಇವಳು ಸೀತೆ ಅಲ್ಲ. ಯಾರೋ ಬೇರೆ" ಎಂದು ತೀರ್ಮಾನಿಸಿ ಮುಂದೆ ಹುಡುಕಲು ಹೊರಟ.

ರಾವಣನ ಸ್ತ್ರೀವನ ಅಸಂಖ್ಯ ಸ್ತ್ರೀಯರಿಂದ ತುಂಬಿತ್ತು. ಅಲ್ಲಿ ಕೆಲವರು ನೆಲದ ಮೇಲೆ ಮಲಗಿ ನಿದ್ರಿಸುತ್ತಿದ್ದರು. ನೃತ್ಯಗಾನಗಳಲ್ಲಿ ಭಾಗವಹಿಸಿದ್ದ ಅವರು ಹಾಗೇ ನಿದ್ರಿಸುತ್ತಿದ್ದರು. ಒಬ್ಬಳು ವೀಣೆಯನ್ನು ಹಾಗೇ ಒರಗಿಕೊಂಡು ನಿದ್ರಿಸುತ್ತಿದ್ದಳು ಚಿರಕಾಲದಿಂದ ಅಗಲಿದ್ದ ಪ್ರಿಯನನ್ನು ಗಾಢವಾಗಿ "ಇನ್ನು ಮುಂದೆ ಬಿಡುವುದಿಲ್ಲ" ಎಂದು ಆಲಂಗಿಸುವಂತೆ ಮತ್ತೊಬ್ಬಳು ಮೃದಂಗವನ್ನು ಅಪ್ಪಿಕೊಂಡು ಹಾಗೇ ಮಲಗಿದ್ದಳು. ಇನ್ನೊಬ್ಬಳು "ಪಣವ" ಎಂಬ ವಾದ್ಯವನ್ನು ಆತುಕೊಂಡು ಹಾಗೇ ಮಲಗಿದ್ದಳು. ಹೀಗೆ ನಾನಾ ಅವಸ್ಥೆಯಲ್ಲಿ ಮಲಗಿದ್ದ ಸ್ತ್ರೀಯರನ್ನು ಕಂಡ. ಎಲ್ಲೂ ಸೀತೆ ಇಲ್ಲ.

ಆಗ, ಹನುಮಂತನ ಮನಸ್ಸಿನಲ್ಲಿ ಒಂದು ಯೋಚನೆ ಬಂದಿತು. "ಮಲಗಿರುವ ಸ್ಥಿತಿಯಲ್ಲಿ ನಾನು ಪರಸ್ತ್ರೀಯರನ್ನು ನೋಡುತ್ತಿರುವೆನಲ್ಲ, ಇದು ಸರಿಯೆ, ಇದರಿಂದ ದೋಷ ಇಲ್ಲವೆ ?" ಎಂದುಕೊಂಡ.

ತಕ್ಷಣ ಅವನ ಸ್ಥಿರಬುದ್ಧಿ ಅವನಿಗೆ ಸಮಾಧಾನ ಹೇಳಿತು "ಎಲ್ಲ ಇಂದ್ರಿಯಗಳ ಪ್ರವರ್ತನೆಗೂ ಮನಸ್ಸೇ ಕಾರಣ. ಮನಸ್ಸು ಪರಿಶುದ್ಧವಾಗಿದ್ದರೆ ಯಾವ ದೋಷವೂ ತಟ್ಟುವುದಿಲ್ಲ. ನನ್ನ ಮನಸ್ಸು ಪರಿಶುದ್ಧವಾಗಿದೆ ಎನ್ನುವುದಕ್ಕೆ ನಾನು ಇಷ್ಟು ಜನ ಸ್ತ್ರೀಯರನ್ನು ಕಂಡಾಗಲೂ ಸ್ವಲ್ಪವಾದರೂ ಮನಸ್ಸು ವಿಕಾರಗೊಳ್ಳದೇ ಇರುವುದೇ ಸಾಕ್ಷಿ. ನನ್ನ ಮನಸ್ಸು ಶುದ್ಧವಾಗಿದೆ. ನನಗೆ ಪಾಪಲೇಪವಿಲ್ಲ."

**ಕಾಮಂ ದೃಷ್ಟ್ವಾ ಮಯಾ ಸರ್ವಾ ವಿಶ್ವಸ್ತಾ ರಾವಣಸ್ತ್ರಿಯಃ |**
**ನತುಮೇ ಮನಸಃ ಕಿಂಚಿತ್ ವೈಕೃತ್ಯಮುಪಪದ್ಯತೇ ||**
**ಮನೋಹಿ ಹೇತುಃ ಸರ್ವೇಷಾಂ ಇಂದ್ರಿಯಾಣಾಂ ಪ್ರವರ್ತನೇ |**
**ಶುಭಾಶುಭಾಸ್ವವಸ್ಥಾಸು ತಚ್ಚ ಮೇಸುವ್ಯವಸ್ಥಿತಂ ||**

ಅದೂ ಅಲ್ಲದೆ ಸ್ತ್ರೀಯನ್ನು ಸ್ತ್ರೀಯರ ಗುಂಪಿನಲ್ಲಿ ತಾನೇ ಹುಡುಕಬೇಕು ? ಹಸುವನ್ನು ಹಸುಗಳ ಗುಂಪಿನಲ್ಲೇ ಹುಡುಕುವಂತೆ ಸೀತೆಯನ್ನು ಸ್ತ್ರೀಯರ ಗುಂಪಿನಲ್ಲಿ ತಾನೇ ಹುಡುಕಬೇಕು" ಎಂದುಕೊಂಡು ಅಲ್ಲಿಂದ ಮುಂದೆ ಹೊರಟ.

ರಾವಣನ ಪಾಕಶಾಲೆಯನ್ನು ನೋಡಿದ. ಅಲ್ಲಿ ವಿಧವಿಧವಾದ ಮಾಂಸಗಳನ್ನೂ, ತರತರದ ಭಕ್ಷ್ಯಗಳನ್ನೂ, ಲೇಹ್ಯವನ್ನೂ, ಪೇಯವನ್ನೂ ಕಂಡ. ಸುವರ್ಣಮಯವಾದ ತಟ್ಟೆಗಳಲ್ಲಿಟ್ಟ ಆ ಮಾಂಸಭೋಜನ ಅರ್ಧ ತಿನ್ನಲ್ಪಟ್ಟದ್ದು, ಮುಕ್ಕಾಲು ತಿನ್ನಲ್ಪಟ್ಟದ್ದು ಆಗಿ ಇದ್ದವು. ಚಿನ್ನದ ಕೊಡಗಳಲ್ಲಿ ನಾನಾ ರೀತಿಯ ಪಾನೀಯಗಳೂ ಇಡಲ್ಪಟ್ಟಿದ್ದವು. ಅದರಿಂದ ಒಂದು ಬಗೆಯ ಗಂಧ ಹೊರಡುತ್ತಿತ್ತು. ಇದನ್ನೆಲ್ಲ ನೋಡಿದ ಹನುಮಂತ. ರಾವಣನ ಅಂತಃಪುರವನ್ನೆಲ್ಲ ಜಾಲಾಡಿದ. ಎಲ್ಲೂ ಸೀತೆಯನ್ನು ಕಾಣದೆ ಚಿಂತಾಕ್ರಾಂತನಾದ.

ಚಿಂತೆಯಿಂದ ಆವರಿಸಲ್ಪಟ್ಟ ಹನುಮಂತ ತನ್ನಲ್ಲೇ ಯೋಚಿಸತೊಡಗಿದ. "ಈಗೇನು ಮಾಡುವುದು ? ನಾನು ಇಲ್ಲಿಂದ ಹೋಗಿ ಸೀತೆ ಇಲ್ಲ–ಕಾಣಲಿಲ್ಲ ಅವಳನ್ನು ಎಂದು ಹೇಳಿದರೆ ಆ

ಪರುಷವಾದ, ದಾರುಣವಾದ, ಮಾತನ್ನು ಕೇಳಿದ ಒಡನೆಯೇ ರಾಮ "ಹಾ, ಸೀತೆ" ಎನ್ನುತ್ತಾ ಪ್ರಾಣಬಿಡುತ್ತಾನೆ. ಇದು ನಿಶ್ಚಯ. ರಾಮ ಅಸು ನೀಗಿದ್ದನ್ನು ಕಂಡ ಲಕ್ಷ್ಮಣ ಜೀವಿಸುವುದು ಅಶಕ್ಯ. ರಾಮಲಕ್ಷ್ಮಣರಿಲ್ಲ ಎಂಬ ವಾರ್ತೆ ಕೇಳಿ ಭರತ ಅಗ್ನಿಯಲ್ಲಿ ಹಾರಿಕೊಂಡು ಪ್ರಾಣಬಿಡು ತ್ತಾನೆ, ಶತ್ರುಘ್ನ ಭರತನನ್ನು ಅನುಸರಿಸುತ್ತಾನೆ. ಮಕ್ಕಳು ಪ್ರಾಣಬಿಟ್ಟಿದ್ದನ್ನು ಕಂಡ ಕೌಸಲ್ಯಾ, ಸುಮಿತ್ರಾ, ಕೈಕೇಯಿಯರು ಪುತ್ರ ಸ್ನೇಹದಿಂದ ತಾವೂ ಪ್ರಾಣ ಬಿಡುತ್ತಾರೆ ರಾಜವಂಶವೇ ಅಳಿದಿದ್ದನ್ನು ಕಂಡು ಅಯೋಧ್ಯೆಯ ಪ್ರಜೆಗಳೂ ದುಃಖಪೀಡಿತರಾಗಿ ಪ್ರಾಣ ಕಳೆದುಕೊಳ್ಳುತ್ತಾರೆ.

ಕೃತಜ್ಞನಾದ, ಸತ್ಯಸಂಧನಾದ ಸುಗ್ರೀವ ಮಿತ್ರನಿಗಾಗಿ ತಾನೂ ಪ್ರಾಣವನ್ನು ಕೊಡುತ್ತಾನೆ. ಅದನ್ನು ಕಂಡ ಅಂಗದನೂ ಸುಗ್ರೀವನನ್ನನುಸರಿಸುತ್ತಾನೆ. ತಾರೆ, ರುಮೆಯರೂ ಜೀವಿಸರು. ರಾಜ, ಯುವರಾಜ ಸತ್ತಿದ್ದನ್ನು ಕಂಡು ವಾನರರು ತಾವೇ ಪ್ರಾಣ ಬಿಟ್ಟುಬಿಡುತ್ತಾರೆ.

ಹೀಗೆ ನಾನು ಹಿಂದಿರುಗಿ ಹೋಗಿ ಸೀತೆಯನ್ನು ಕಾಣಲಿಲ್ಲ ಎಂದು ಹೇಳಿದರೆ ಇಕ್ಷ್ವಾಕುವಂಶ ವಾನರಕುಲ ಎರಡೂ ನಾಶವಾಗುತ್ತದೆ. ಆದ್ದರಿಂದ ನಾ ಹಿಂದಿರುಗಿ ಹೋಗುವುದೇ ಬೇಡ ನಾ ಹೋಗದಿದ್ದರೆ ಹನುಮಂತ ಬರುತ್ತಾನೆ ಎಂಬ ಆಶೆಯಿಂದಲಾದರೂ ಎಲ್ಲರೂ ಜೀವವನ್ನು ಧರಿಸಿರುತ್ತಾರೆ.

ಇಲ್ಲಿದ್ದು ನಾ ಏನು ಮಾಡಲಿ ? ಎಲ್ಲ ಕಡೆಯಲ್ಲಿ ಹುಡುಕಿಯೂ ಸೀತೆ ದೊರೆಯಲಿಲ್ಲವಲ್ಲ, ಅಗ್ನಿಯನ್ನು ಪ್ರತಿಷ್ಠಿಸಿ ಅದರಲ್ಲಿ ಹಾರಿಕೊಳ್ಳಲೇ ? ಅಥವಾ ವಿಷಪಾನ ಮಾಡಲೇ ? ಇಲ್ಲವಿದ್ದರೆ ಸಮುದ್ರದಲ್ಲಿ ಬೀಳಲೇ ? ಏನು ಮಾಡಲಿ ಎಂದು ಚಿಂತಿಸಿದ ಸ್ವಲ್ಪ ಹೊತ್ತಾದಮೇಲೆ ಪ್ರಾಣ ಕಳೆದುಕೊಳ್ಳುವುದು ಹೇಡಿತನ. ಅದು ಸರಿಯಲ್ಲ. ಜೀವಿತ ಇದ್ದರೆ ಜೀವನದಲ್ಲಿ ಒಂದು ದಿನ ವಾದರೂ ಸಂತೋಷವನ್ನು ಕಾಣಬಹುದು, ಇಲ್ಲೇ ಇದ್ದು ಸೀತೆಯನ್ನು ಕಾಣುವವರೆಗೆ ಹುಡುಕು ತ್ತಿರುತ್ತೇನೆ. ಉತ್ಸಾಹವೇ ಸಕಲ ಶ್ರೇಯಸ್ಸಿಗೂ, ಸಂಪತ್ತಿಗೂ, ಯಶಸ್ಸಿಗೂ ಮೂಲ. ನಿರುತ್ಸಾಹಿಯಾದವ ಏನನ್ನೂ ಸಾಧಿಸಲಾರ. ಮಾತ್ರವಲ್ಲ, ಕಾರ್ಯವನ್ನು ಕೆಡಿಸುತ್ತಾನೆ. ಆದ್ದರಿಂದ ಈಗ ನಾನು ಉತ್ಸಾಹವನ್ನು ಕಳೆದುಕೊಳ್ಳದೆ ಇರಬೇಕು. ಧೈರ್ಯದಿಂದ ಮುನ್ನುಗ್ಗಿ ಕಾರ್ಯ ವನ್ನು ಹೇಗಾದರೂ ಬಿಡದೆ ಸಾಧಿಸಿಯೇ ತೀರಬೇಕು ಎಂದು ಉತ್ಸಾಹದಿಂದ ಮತ್ತೆ ಹುಡುಕಲು ಪ್ರಾರಂಭಿಸಿದ. ಮತ್ತೊಮ್ಮೆ ಎಲ್ಲ ಕಡೆಯಲ್ಲೂ ಹುಡುಕಿದ. ಒಂದು ಕಡೆ ಕುಳಿತು ಒಂದು ಮುಹೂರ್ತಕಾಲ ಯೋಚಿಸಿ ತಲೆ ಎತ್ತಿ ನೋಡಿದ. ಆಗ, ದೂರದಲ್ಲಿ ಒಂದು ದೊಡ್ಡ ವನ ಕಾಣಿಸಿತು. ಒಡನೆ ಅರೆ ! ಈ ವನವನ್ನು ಇದುವರೆಗೆ ನಾ ನೋಡಲೇ ಇಲ್ಲವಲ್ಲ ! ಅಲ್ಲಿಗೆ ಹೋಗಿ ಹುಡುಕುತ್ತೇನೆ. ನಿಶ್ಚಯವಾಗಿ ಸೀತೆ ದೊರಕುತ್ತಾಳೆ, ಎಂದುಕೊಂಡ.

ಅಲ್ಲಿಗೆ ಹೋಗುವ ಮೊದಲು ಸೀತಾರಾಮ ಲಕ್ಷ್ಮಣರಿಗೆ ನಮಸ್ಕರಿಸಿದ.

ನಮೋಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಸ್ತು ರುದ್ರೇಂದ್ರಯಮಾನಿಲೇಭ್ಯೋ
ನಮೋಸ್ತು ಚಂದ್ರಾರ್ಕ ಮರುದ್ಗಣೇಭ್ಯಃ ॥

ಮೊದಲು ಆ ರಾಮನಿಗೆ ನಮಸ್ಕಾರ. ಯಾವನ ಕಾರ್ಯವನ್ನು ಮಾಡುವ ಸಲುವಾಗಿ

ಹೊರಟನೋ ಅಂಥ ಶ್ರೀರಾಮನಿಗೆ ಮೊದಲು ನಮಸ್ಕಾರ. ಅವನ ಅನುಗ್ರಹದಿಂದಲೇ ಮುಂದೆ ಅವನ ಕಾರ್ಯ ಸುಗಮವಾಗಿ ಸಿದ್ಧಿಸಬೇಕು.

ಆ ರಾಮಾನುಜನಾದ ಲಕ್ಷ್ಮಣನಿಗೆ ನಮಸ್ಕಾರ. ಜನಕಾತ್ಮಜೆಯೆನಿಸಿದ ಸೀತಾದೇವಿಗೆ ನಮಸ್ಕಾರ. ದೇವಿ, ನಿನ್ನನ್ನು ನಿನ್ನ ಅನುಗ್ರಹದಿಂದಲೇ ಕಾಣಬೇಕಾಗಿದೆ. ನಿನ್ನ ದರ್ಶನಭಾಗ್ಯವನ್ನು ನೀನೇ ಕರುಣಿಸಬೇಕು. ಹಾಗೆಯೇ ರುದ್ರ, ಇಂದ್ರ, ಯಮ ವಾಯು ಈ ದಿಕ್ಪಾಲಕರಿಗೂ ನಮಸ್ಕಾರ. ಚಂದ್ರಸೂರ್ಯರೇ, ಮರುದ್ಗಣಗಳೇ, ನೀವು ಸೀತಾನ್ವೇಷಣೆ ಕಾರ್ಯದಲ್ಲಿ ನಾನು ಯಶಸ್ವಿಯಾಗುವಂತೆ ಸಹಕರಿಸಿ. ಇಗೋ ನಿಮಗೆಲ್ಲ ನಮಸ್ಕಾರ ಎಂದು ಹನುಮಂತ ಅಲ್ಲಿಂದ ಒಂದೇ ನೆಗೆತಕ್ಕೆ ಹಾರಿ ಅಶೋಕವನವನ್ನು ಸೇರಿದ.

ಕಾಂಚನಮಯವಾದ ಅಶೋಕವನದಲ್ಲಿ ಎಲ್ಲೆಲ್ಲೂ ಪುಷ್ಪಗಳಿಂದ, ಫಲಗಳಿಂದ ತುಂಬಿದ ವೃಕ್ಷಗಳು ಕಂಡುಬರುತ್ತಿದ್ದವು. ಅಶೋಕವನದ ಭೂಮಿಯೆಲ್ಲ ರಂಗುರಂಗಿನ ಪುಷ್ಪಗಳಿಂದ ಅಲಂಕೃತವಾಗಿದ್ದು ಭೂದೇವಿ ಬಣ್ಣಬಣ್ಣದ ಉಡುಗೆಯನ್ನು ಉಟ್ಟುಕೊಂಡಂತೆ ಶೋಭಿಸುತ್ತಿತ್ತು. ಅಲ್ಲಲ್ಲಿ ನಿರ್ಮಲವಾದ ಜಲವುಳ್ಳ ಸರೋವರಗಳು. ಆ ಸರೋವರದ ಸೋಪಾನಗಳ ವೇದಿಕೆ ಚಿನ್ನದ ಕಟ್ಟಿನಿಂದ ಅಲಂಕೃತವಾಗಿತ್ತು. ಮೆಟ್ಟಿಲುಗಳನ್ನೂ ಹವಳದಿಂದ ಮಾಡಿತ್ತು. ಅಲ್ಲಲ್ಲಿ ರಮ್ಯವಾದ ಪರ್ವತ ಶಿಖರ. ಅದರಿಂದ ಝರಿ ಹರಿಯುತ್ತಿತ್ತು. ಪರ್ವತಗಳೇನೋ ನಾನಾ ವಿಧವಾದ ವೃಕ್ಷಗಳಿಂದ ಆವೃತವಾಗಿದ್ದುವು. ಪರ್ವತ ರಮ್ಯವಾದ ಅನೇಕ ಶಿಖರಗಳಿಂದ ಶೋಭಿಸುತ್ತಿತ್ತು. ಆ ಪರ್ವತದ ಒಂದು ಭಾಗದಲ್ಲಿ ನದಿ ಪ್ರವಹಿಸುತ್ತಿತ್ತು. ಪರ್ವತದಿಂದ ಇಳಿದು ಬರುತ್ತಿರುವ ಆ ನದಿಯನ್ನು ಕಂಡಾಗ ಪ್ರಿಯನೊಡನೆ ಪ್ರಣಯ ಕಲಹವನ್ನು ಮಾಡಿಕೊಂಡು ಪ್ರಣಯಕೋಪದಿಂದ ಅವನನ್ನು ಬಿಟ್ಟುಹೋಗುವ ಪ್ರಿಯತಮೆಯಂತೆ ಕಾಣುತ್ತಿತ್ತು.

ಪರ್ವತದಿಂದ ಆ ನದಿ ಹರಿದು ಬರುತ್ತಿದ್ದಂತೆ ಪರ್ವತದಲ್ಲಿರುವ ಆ ವೃಕ್ಷಗಳ ಶಾಖೆಗಳು ಆ ನದಿಗೆ ಅಡ್ಡವಾಗಿ ಪ್ರವಾಹ ಮುಂದೆ ಹೋಗದಂತೆ ತಡೆಯುತ್ತಿದ್ದುವು. ತಡೆಯಲ್ಪಟ್ಟ ಆ ನದಿಯ ಪ್ರವಾಹ ಮತ್ತೆ ಹಿಂದಕ್ಕೇ ತಿರುಗಿತು. ಆ ನದಿ ಪುನಃ ಸ್ವಸ್ಥಾನಕ್ಕೆ ಹಿಂದಿರುಗುವುದನ್ನು ಕಂಡಾಗ ಪ್ರಸನ್ನಚಿತ್ತಳಾದ ಪ್ರೇಯಸಿ ಮತ್ತೆ ಪ್ರಿಯನನ್ನು ಸೇರಲು ಹೋಗುವಂತೆ ಭಾಸವಾಗುತ್ತಿತ್ತು. ಅಶೋಕವನದ ಆ ಗಿರಿಪ್ರದೇಶದಲ್ಲಿ ರಮಣೀಯವಾದ ಗುಹೆಗಳೂ, ತಟಾಕಗಳೂ ಇದ್ದವು.

ಸುಗಂಧ ಮಿಶ್ರಿತವಾದ ವಾಯು ಬೀಸುತ್ತಿತ್ತು. ಇದನ್ನೆಲ್ಲ ಕಾಣುತ್ತ ಹನುಮಂತ ಮುಂದುವರೆದ. ಹೋಗುತ್ತಿದ್ದಂತೆ ಒಂದು ದೊಡ್ಡ ಶಿಂಶುಪಾವೃಕ್ಷವನ್ನು ಕಂಡ. ಆ ವೃಕ್ಷದ ಸಮೀಪದಲ್ಲಿ ಪುಣ್ಯಕರವಾದ ನೀರುಳ್ಳ ಒಂದು ನದಿ ಹರಿಯುತ್ತಿದ್ದುದನ್ನು ನೋಡಿದ. ಆ ನದಿಯ ನೀರು ತಾಪಹಾರಕವಾಗಿತ್ತು. ಅದರಲ್ಲಿ ಕಮಲ ಪುಷ್ಪಗಳು ಅರಳಿ ಆ ನದಿಯ ಸೌಂದರ್ಯವನ್ನು ವರ್ಧಿಸುತ್ತಿದ್ದವು. ಅಲ್ಲದೆ ಅದರಲ್ಲಿ ಹಂಸ, ಸಾರಸ, ಮುಂತಾದ ಜಲಪಕ್ಷಿಗಳು ಸಂತೋಷದಿಂದ ಕ್ರೀಡೆಯನ್ನಾಡುತ್ತಿದ್ದವು. ಇದನ್ನು ಕಂಡ ಹನುಮಂತ "ಸೀತೆ ಬದುಕಿದ್ದರೆ ನಿಜವಾಗಿ ಸಂಧ್ಯಾ ಪ್ರಾರ್ಥನೆ ಮಾಡುವ ಸಲುವಾಗಿ ಈ ನದಿಗೆ ಬಂದೇ ಬರುತ್ತಾಳೆ. ಇದರ ನೀರು ಪರಮಪವಿತ್ರವಾಗಿದೆ. ಸಂಧ್ಯಾರ್ಥವಾಗಿ ಆಕೆ ಇಲ್ಲಿಗೆ ಬರುತ್ತಾಳೆ. ಆಗ ನೋಡಲು ಅನುಕೂಲವಾಗುವಂತೆ ನಾನು ಈ ಶಿಂಶುಪಾವೃಕ್ಷದಲ್ಲಿ ಕುಳಿತುಕೊಳ್ಳುತ್ತೇನೆ" ಎಂದುಕೊಂಡು ಎತ್ತರವಾದ ಶಿಂಶುಪಾವೃಕ್ಷವನ್ನು ಹತ್ತಿ ಕುಳಿತ.

ಹನುಮಂತ ಹತ್ತಿದ ಆ ಶಿಂಶುಪಾವೃಕ್ಷ ಆ ವನದಲ್ಲೇ ಅತ್ಯಂತ ಮನೋಹರವಾದ ವೃಕ್ಷ

ವಾಗಿತ್ತು. ಆ ಮರವು ಚಿನ್ನದ ವೇದಿಕೆ, ಹವಳದ ಸೋಪಾನಗಳಿಂದ ಶೋಭಿಸುತ್ತಿತ್ತು. ಆ ವೃಕ್ಷದ ನಿಬಿಡವಾದ ಎಲೆಗಳ ಮರೆಯಲ್ಲಿ ಅಡಗಿ ಕುಳಿತು ಹನುಮಂತ "ಸೀತೆಯನ್ನು ಇಲ್ಲಿಂದ ನೋಡುತ್ತೇನೆ" ಎಂದುಕೊಂಡು ಸುತ್ತಲೂ ನಿಟ್ಟಿಸಿದ ನೋಡುತ್ತ ನೋಡುತ್ತ ಆ ಮರದ ಕೆಳಗೆ ದೃಷ್ಟಿ ಹಾಯಿಸಿದ ಅಲ್ಲಿ ಅವನು ನೋಡಿದ.

ಮಲಿನಾಂಬರವನ್ನು ಧರಿಸಿ, ರಾಕ್ಷಸಿಯರ ಮಧ್ಯದಲ್ಲಿ ಉಪವಾಸದಿಂದ ಕೃಶಳಾಗಿ ನಿಟ್ಟುಸಿರು ಬಿಡುತ್ತಿರುವ ಒಬ್ಬ ಸ್ತ್ರೀಯನ್ನು ಕಂಡ. ಅವಳು ಶುಕ್ಲಪಕ್ಷದ ಚಂದ್ರರೇಖೆಯಂತಿದ್ದಳು. ಹೊಗೆಯಿಂದ ಆವೃತವಾದ ಅಗ್ನಿಯಂತೆ, ಕೆಸರಿನ ಮಧ್ಯೆ ಇರುವ ಕಮಲದಂತೆ ಅಭ್ಯಾಸವಿಲ್ಲದುದರಿಂದ ಶಿಥಿಲವಾದ ಕಲಿತವಿದ್ಯೆಯಂತೆ, ಅಂಗಾರಕನ ಹಿಡಿತಕ್ಕೆ ಸಿಕ್ಕಿ ತಪಿಸುತ್ತಿರುವ ರೋಹಿಣಿಯಂತೆ, ದುಃಖಿತಳಾಗಿ, ಸದಾ ನಿಟ್ಟುಸಿರುಬಿಡುತ್ತಿರುವ. ಕೃಶಳಾದ ಸ್ತ್ರೀಯನ್ನು ನೋಡಿದ.

**ತತೋ ಮಲಿನ ಸಂವೀತಾಂ ರಾಕ್ಷಸೀಭಿಃ ಸಮಾವೃತಾಂ ।**
**ಉಪವಾಸಕೃಶಾಂ ದೀನಾಂ ನಿಶ್ವಸಂತೀಂ ಪುನಃಪುನಃ ॥**
**ದದರ್ಶ ಶುಕ್ಲ ಪಕ್ಷಾದೌ ಚಂದ್ರರೇಖಾಮಿವಾಮಲಾಂ ।**
**ಮಂದ ಪ್ರಖ್ಯಾಯಮಾನೇನ ರೂಪೇಣ ರುಚಿರ ಪ್ರಭಾಂ ॥**
**ಪಿನದ್ಧಾಂ ಧೂಮಜಾಲೇನ ಶಿಖಾಮಿವ ವಿಭಾವಸೋಃ ।**
**ಪ್ರಿಯಂ ಜನಮಪಶ್ಯಂತೀಂ ಪಶ್ಯಂತೀಂ ರಾಕ್ಷಸೀಗಣಂ ॥**
**ಸ್ವಗಣೇನ ಮೃಗೀಂ ಹೀನಾಂ ಶ್ವಗಣೇನಾವೃತಾಮಿವ ॥**

ತಾನು ಕಂಡ ಆ ಸ್ತ್ರೀಯೇ ''ಸೀತೆ'' ಎಂದು ತರ್ಕಿಸಿದ. ಈಗ ಹನುಮಂತ ಅನೇಕ ಕಾರಣಗಳ ಆಧಾರದ ಮೇಲೆ ಇವಳೇ ಸೀತೆ ಎಂದು ನಿರ್ಧರಿಸಿದ.

ಹಿಂದೆ ಮಂಡೋದರಿಯನ್ನು ಕಂಡಾಗ "**ತರ್ಕಯಾಮಾಸ ಸೀತೇತಿ ರೂಪ ಯೌವನ ಸಂಪದಾ**" ಎಂದರು ವಾಲ್ಮೀಕಿ. ರೂಪ, ಯೌವನ, ಸಂಪತ್ತು ಇವುಗಳನ್ನು ಕಂಡು "ಆಗ ಸೀತೆ" ಎಂದು ತರ್ಕಿಸಿದ್ದ ಹನುಮಂತ. ಅದು ನಿರಾಧಾರವಾದ ಕಾರಣಗಳು.

ಇಲ್ಲಿ ಹಾಗಲ್ಲದೆ ಸಾಧಾರವಾದ ಸಕಾರಣಗಳಿಂದ ''ಸೀತೆ'' ಇವಳೇ ಎಂದು ತರ್ಕಿಸಿದ. ಇಲ್ಲಿ ಹೇಳುವಾಗ ವಾಲ್ಮೀಕಿ ''**ಕಾರಣೈರುಪ ಪಾದಿಭಿಃ**" ಎಂದಿದಾರೆ. ಆ ಕಾರಣಗಳೆಂದರೆ, ಇಲ್ಲಿ ಏಕಾಕಿನಿಯಾಗಿ, ರಾಕ್ಷಸಿಯರ ಮಧ್ಯೆ ಇರುವುದು, ಮಲಿನವಾದ ಬಟ್ಟೆಯನ್ನು ಧರಿಸಿರುವುದು, ದುಃಖದಿಂದ ಕಣ್ಣೀರು ಸುರಿಸುತ್ತಾ ನಿಟ್ಟುಸಿರು ಬಿಡುತ್ತಿರುವುದು, ಉಪವಾಸದಿಂದ ಶರೀರ ಕೃಶವಾಗಿರುವುದು, ಆಭರಣ ರಹಿತಳಾಗಿರುವುದು, ಅಶೋಕವನದಲ್ಲಿ ರಮ್ಯವಾದ ಅನೇಕ ದೃಶ್ಯಗಳು ಕಣ್ಣಿಗೆ ಕಾಣಬರುತ್ತಿದ್ದರೂ, ಅವುಗಳ ಕಡೆಗೆ ಕಣ್ಣೆತ್ತಿಯೂ ನೋಡದೆ ಸದಾ "ರಾಮಾ–ರಾಮಾ" ಎಂದು ರಾಮಧ್ಯಾನದಲ್ಲಿ ನಿರತಳಾಗಿರುವುದು ಇದನ್ನೆಲ್ಲ ಗಮನಿಸಿ ಇವಳು "ಸೀತೆಯೇ" ಎಂದು ತರ್ಕಿಸಿದ. ಅಲ್ಲದೆ. ಶಿಂಶುಪಾವೃಕ್ಷದ ಶಾಖೆಯಲ್ಲಿ ಸೀತೆ ತನ್ನ ಆಭರಣಗಳನ್ನು ಗಂಟುಹಾಕಿರುವುದನ್ನು ಕಂಡ.

ತಮ್ಮನ್ನು ಕಂಡಾಗ ಸೀತೆ ಯಾವ ರೀತಿಯ ವಸ್ತ್ರದಲ್ಲಿ ಆಭರಣಗಳನ್ನು ಕಟ್ಟಿ ಎಸೆದಿದ್ದಳೋ ಅದೇ ರೀತಿಯ ವಸ್ತ್ರದಲ್ಲಿ ಅದೇ ರೀತಿಯ ಆಭರಣಗಳನ್ನು ಇಲ್ಲಿಯೂ ಕಂಡ. ಇವಳು "ಸೀತೆಯೇ ಸರಿ" ಎಂದು ನಿಶ್ಚಯಿಸಿದ.

ದೀನತೆಯೇ ಮೂರ್ತಿವೆತ್ತಂತೆ ಕಣ್ಣೀರ್ಗರೆಯುತ್ತಾ, ಏಕವೇಣಿಯಾಗಿ, ಧ್ಯಾನಾಸಕ್ತಳಾಗಿ ನೆಲದಮೇಲೆ ತಪಸ್ವಿನಿಯಂತೆ ಇದ್ದ ಸೀತೆಯನ್ನು ಕಂಡ. ಜನಕರಾಜನ ಸುಪುತ್ರಿಯಾಗಿ, ಮಹಾ ಪ್ರತಾಪಿಯಾದ ದಶರಥನ ಸೊಸೆಯಾಗಿ, ಸರ್ವಶಕ್ತನೆನಿಸಿದ ರಾಮನಿಗೆ ಪತ್ನಿಯಾದ ಸೀತೆಗೇ ಇಂಥ ಗತಿ ಒದಗಿತಲ್ಲಾ ಆ ವಿಧಿಯ ವೈಚಿತ್ರ್ಯ ಎಂಥದೋ ! ಎಂದು ದುಃಖಿಸಿದ.

ಪೂರ್ಣ ಚಂದ್ರನಂತೆ ಸೌಂದರ್ಯವುಳ್ಳ, ರತಿಯಂತೆ ರೂಪವತಿಯಾದ ಸೀತೆಯನ್ನು ಕಂಡ. ಇಂಥ ಸೀತೆಯನ್ನು ಕಳೆದುಕೊಂಡನಲ್ಲ ರಾಮ ! ಎಂದು ರಾಮನ ಕಡೆಗೆ ಮನಸ್ಸು ಹರಿಯಿತು. ರಾಮ ಸೀತೆಯ ವಿಯೋಗದಿಂದ ನಾಲ್ಕು ರೀತಿಯ ಆವೇಗಗಳಿಗೆ ವಶನಾಗಿದಾನೆ.

ಒಬ್ಬ ಸ್ತ್ರೀಯನ್ನು ಕಳೆದುಕೊಂಡದ್ದಕ್ಕೆ ಕರುಣೆ. ಆ ಸ್ತ್ರೀ ತನ್ನ ಆಶ್ರಿತಳಾದ್ದರಿಂದ ದಯೆ. ಅಕಟಾ ನನ್ನ ಆಶ್ರಿತಳಾದವಳು ಅಪಹೃತಳಾದಳಲ್ಲ ಎಂದು. ಆ ಸ್ತ್ರೀ ತನ್ನ "ಪತ್ನಿ" ಎಂದು ಆದಾಗ ಶೋಕ. ಆ "ಪತ್ನಿ" ಪ್ರಿಯಳೂ ಆದಾಗ ವೇದನೆ. ಹೀಗೆ ಕಾರುಣ್ಯ, ದಯೆ, ಶೋಕ, ವೇದನೆ ಇವೆಲ್ಲ ಭಾವಗಳು ರಾಮನಿಗೆ ಸೀತಾ ವಿಯೋಗದಿಂದ ಯುಗಪತ್ ಒದಗಿತಲ್ಲಾ ಎಂದು ದುಃಖಿಸಿದ. ಜೊತೆಗೆ ಸೀತೆಯನ್ನು ತಾನು ಕಂಡದ್ದಕ್ಕೆ ಸಂತೋಷವೂ ಆಯಿತು. ಅಬ್ಬ ! ಇಷ್ಟು ಜನ ವಾನರ ವೀರರಲ್ಲಿ ನನಗೆ ಈ ಭಾಗ್ಯ ಒದಗಿಬಂತಲ್ಲಾ ! ನಾನೇ ಧನ್ಯ ! ವೈದೇಹಿಯ ಈ ಅಪ್ರತಿಮ ಸೌಂದರ್ಯರಾಶಿಯನ್ನು ನೋಡುವ ಪುಣ್ಯ ನನ್ನದಾಯಿತಲ್ಲ ಎಂದು ಹಿಗ್ಗಿದ. ಇಂಥ ಸೌಂದರ್ಯದ ಖನಿಯನ್ನು, ಸೌಶೀಲ್ಯದ ಅಧಿದೇವತೆಯನ್ನು ಪಡೆದ ಇಂಥ ಸೀತೆಯ "ಸ್ವಾಮಿ" ಎನಿಸಿಕೊಂಡ ಆ ರಾಮ ನಿಜಕ್ಕೂ ಧನ್ಯ ! ಎಂದುಕೊಂಡ ಹನುಮಂತ. ಭಕ್ತ ತ್ಯಾಗರಾಜರು ಹೇಳಿದಂತೆ "ನಮ್ಮ ಸೀತೆಯ ಕೈಹಿಡಿದ ಭಾಗ್ಯದಿಂದ ನೀನು ಮಹಾರಾಜನೆನಿಸಿದೆ. ಇಲ್ಲದಿದ್ದರೆ ನಿನಗೆ ಆ ಭಾಗ್ಯ ಎಲ್ಲಿ ಯದು" ಎಂಬ ಭಾವವನ್ನೇ ಹನುಮಂತನೂ ತಳೆದ.

ಸೀತೆಯನ್ನು ಕಂಡ ಹನುಮಂತ ಕಣ್ಣುಗಳನ್ನು ಮುಚ್ಚಿದ. ತನ್ನ ಹೃದಯ ಸಿಂಹಾಸನದ ಮೇಲೆ ದಿವ್ಯದಂಪತಿಗಳಾದ ಸೀತಾ–ರಾಮರನ್ನು ಪಕ್ಕಪಕ್ಕದಲ್ಲಿ ಕೂಡಿಸಿದ. ಇಬ್ಬರನ್ನೂ ಮನ ದಣಿಯೆ ನೋಡುತ್ತ ಆನಂದವನ್ನು ಅನುಭವಿಸತೊಡಗಿದ. ಪರಮ ಪ್ರಶಂಸನೀಯಳಾದ ಸೀತೆ ಯನ್ನೂ ಗುಣಾಭಿರಾಮನಾದ ರಾಮನನ್ನೂ ಹೋಲಿಸಿದ.

ಆಹಾ ! ಕುಲ, ರೂಪ, ಶೀಲ, ವಿದ್ಯೆ, ಅಂತಸ್ತು, ಗುಣ, ಹಣ, ಎಲ್ಲದರಲ್ಲೂ ಎಷ್ಟು ಚೆನ್ನಾಗಿ ಹೊಂದುತ್ತದೆ ಈ ಜೋಡಿ ! ಎಂದು ಆನಂದಪಟ್ಟ.

ಅಯೋಧ್ಯಾಪತಿ ರಾಮನಾದರೆ ಮಿಥಿಲಾಪುರದ ನಾಯಕಿ ಸೀತೆ. ರಘುವಂಶಕ್ಕೆ ಅಲಂಕಾರ ಪ್ರಾಯ ರಾಮನಾದರೆ ನಿಮಿವಂಶವನ್ನು ಬೆಳಗಿಸುವಂಥವಳು ಸೀತೆ.

ಸೂರ್ಯ ಕುಲೋತ್ಪನ್ನ ರಾಮನಾದರೆ ಚಂದ್ರವಂಶದಲ್ಲಿ ಬಂದವಳು ಸೀತೆ. ಪುತ್ರಕಾಮೇಷ್ಟಿ ಯಾಗ ಪ್ರಭಾವದಿಂದ ದಶರಥನಿಗೆ ಮಗನಾದ ರಾಮ. ಆದರೆ, ಸೀತೆಯೋ ಯಾಗಾರ್ಥವಾಗಿ ಭೂಮಿಯನ್ನು ಶೋಧಿಸುವಾಗ ಅಯೋನಿಜೆಯಾಗಿ ಭೂಮಿಯಲ್ಲೇ ತೋರಿದವಳು.

ವಶಿಷ್ಠರನ್ನು ರಾಮ ಅನುಸರಿಸಿದರೆ, ಶತಾನಂದರನ್ನು ಅನುಸರಿಸುವ ಜನಕನ ಮಗಳು ಸೀತೆ.

ಚಂದ್ರಕಾಂತಿಯಂತೆ ಮುಖಕಾಂತಿಯನ್ನು ಪಡೆದವ ರಾಮನಾದರೆ ಚಂದ್ರಮುಖಿ ಎನಿಸಿ ದವಳು ಸೀತೆ.

ಮದಿಸಿದ ಆನೆಯಂತೆ ರಾಮನ ನಡಿಗೆ ಆದರೆ, ಮತ್ತ ಹಂಸದಂತೆ ನಡೆ ಉಳ್ಳವಳು ಸೀತೆ.

ಶರಣಾಗತರನ್ನು ರಕ್ಷಿಸುವವ ರಾಮನಾದರೆ, ಶರಣಾಗತರಲ್ಲದವರನ್ನೂ ರಕ್ಷಿಸುವಂಥ ಕ್ಷಮಾ ಶೀಲೆ ಸೀತೆ.

ಕಾಲಮೇಘದಂತೆ ಶ್ಯಾಮಲ ವರ್ಣದಿಂದ ರಾಮ ಒಪ್ಪುತ್ತಿದ್ದರೆ ಪುಟಕ್ಕೆ ಹಾಕಿದ ಚಿನ್ನದಂತೆ ದೇಹಕಾಂತಿ ಉಳ್ಳವಳು ಸೀತೆ. ಹೀಗೆ ಅನ್ಯೋನ್ಯವಾಗಿ ರೂಪ, ಗುಣ, ಶೀಲ, ಹಣ ಇವುಗಳನ್ನು ಹೊಂದಿರುವ ಸೀತಾರಾಮರನ್ನು ಕೊಂಡಾಡಿದ. ಮನಸಾ ಆ ದಿವ್ಯ ದಂಪತಿಗಳಿಗೆ ನಮಸ್ಕರಿಸಿದ. ಹೀಗೆ ಒಂದು ಮುಹೂರ್ತಕಾಲ ಸೀತಾರಾಮರನ್ನು ಮೊದಲು ತನ್ನ ಹೃದಯ ಸಿಂಹಾಸನದಲ್ಲಿ ಕುಂಡಿಸಿ ತೃಪ್ತಿಪಟ್ಟ. ಆಮೇಲೆ ಸೀತೆಯ ಸ್ಥಿತಿಯನ್ನು ನೆನಸಿಕೊಂಡು ದುಃಖಿಸತೊಡಗಿದ. ಮಾನ್ಯಳೂ, ವಿನೀತಳೂ, ಮಹಾಪ್ರತಾಪಿ ರಾಮನ ಮಡದಿಯೂ ಆದ ಸೀತೆಗೇ ಇಂಥ ಸ್ಥಿತಿ ಒದಗಿದ ಮೇಲೆ ವಿಧಿಯ ಪ್ರಭಾವ ಎಂಥದಿರಬೇಕು ?

ಸೀತೆ ಎಂದರೆ ಸಾಮಾನ್ಯಳೇ! ತ್ರಿಲೋಕಪೂಜ್ಯಳು. ಇವಳ ಕಾರಣದಿಂದಲೇ ರಾಮ ಹದಿನಾಲ್ಕು ಸಾವಿರ ರಾಕ್ಷಸರನ್ನು ಕೊಂದ. ಸುಗ್ರೀವ ರಾಜ್ಯವನ್ನು ಪಡೆದುದೂ ಸೀತೆಯ ಅನುಗ್ರಹದಿಂದಲೇ.

ಸೀತೆಯ ಅನುಗ್ರಹಕ್ಕಿರುವ ಶಕ್ತಿಯನ್ನು ಆಳ್ವಾರುಗಳು ಬಹಳ ಚೆನ್ನಾಗಿ ಅನುಭವಿಸಿದ್ದಾರೆ. ವಾಲಿಯಿಂದ ಪೀಡಿತನಾದ ಸುಗ್ರೀವ ಎಲ್ಲೋ ಋಷ್ಯಮೂಕದಲ್ಲಿ ತಲೆಮರೆಸಿಕೊಂಡಿದ್ದ. ಅವನೇನೂ ಸೀತೆಯನ್ನು ನೋಡಬೇಕು ಎಂದು ನೋಡಲಿಲ್ಲ. ಯಾರೋ ರಾಕ್ಷಸ ಒಬ್ಬ ಹೆಣ್ಣನ್ನು ಹೊತ್ತುಕೊಂಡು ಹೋಗುತ್ತಿರುವುದನ್ನು ಅಕಸ್ಮಾತ್ತಾಗಿ ನೋಡಿದ. ಆಗ ಸೀತೆಯ ಕಟಾಕ್ಷ ಸುಗ್ರೀವನ ಮೇಲೆ ಬಿದ್ದಿತು. ಸೀತೆಯನ್ನು ಸುಗ್ರೀವ ಪ್ರಾರ್ಥಿಸಲಿಲ್ಲ—ಬೇಡಲಿಲ್ಲ—ತಾನಾಗಿಯೇ ಆಭರಣಗಳ ಗಂಟನ್ನು ಹಾಕಿದಳು. ಮೊದಲು ಲಕ್ಷ್ಮಿಯ ಅನುಗ್ರಹ ಸುಗ್ರೀವನಿಗೆ ಆಯಿತು. ಆದ್ದರಿಂದಲೇ ರಾಮ ಸುಗ್ರೀವನಿಗೆ ಸಖ್ಯ ಮಾಡಿಕೊಳ್ಳಲು ಕಾರಣವಾಯಿತು. ರಾವಣನಿಂದ ಗ್ರಹಿಸಲ್ಪಟ್ಟು ದುಃಖಿಸುತ್ತಿದ್ದಾಗ ಸೀತೆ ಸುಗ್ರೀವನನ್ನು ಕಟಾಕ್ಷಿಸಿದಕ್ಕೇ ಸುಗ್ರೀವ ಕಳೆದುಕೊಂಡ ಪತ್ನಿಯನ್ನೂ ರಾಜ್ಯಭೋಗವನ್ನೂ ಅನುಭವಿಸಿದ ಎಂದ ಮೇಲೆ ಇನ್ನು ಸೀತೆ ಸಂತೋಷದಿಂದ ಕಟಾಕ್ಷಿಸಿದವರ ಭಾಗ್ಯ ಎಂಥದಿರಬೇಕು ! ವರ್ಣಿಸಲು ಸಾಧ್ಯವಾಗದು ಎನ್ನುತ್ತಾರೆ ಜ್ಞಾನಿಗಳು.

ಹನುಮಂತನೇ ಹೇಳುತ್ತಾನೆ,

"ಅಸ್ಯಾಃ ಹೇತೋಃ ವಿಶಾಲಾಕ್ಷ್ಯಾಃ ಹತೋ ವಾಲೀ ಮಹಾಬಲಃ" ಎಂದು.

ಹೀಗೆ, ಸುಗ್ರೀವನಿಗೆ ರಾಜ್ಯ ಪ್ರಾಪ್ತಿಯಾಗಲು ಸೀತೆಯೇ ಮೂಲ ಕಾರಣ.

ಸೀತೆ-ಲಕ್ಷ್ಮಿ ಕೇವಲ ಹಣಕ್ಕೆ ಮಾತ್ರ ಅಧಿದೇವತೆ ಅಲ್ಲ. ಉತ್ತಮ ಜ್ಞಾನಕ್ಕೂ ಅಧಿಷ್ಠಾತ್ರಿ ಅವಳು

ಹನುಮಂತ ಸೀತೆಯನ್ನು ಕಾಣುವುದಕ್ಕೆ ಮೊದಲು ನಾನು "ರಾಮದೂತ" ಎನ್ನುತ್ತಿದ್ದ. ಸೀತೆಯನ್ನು ಕಂಡಮೇಲೆ "**ದಾಸೋಹಂ ಕೋಸಲೇಂದ್ರಸ್ಯ**" ಎಂದು ನಾನು ''ರಾಮದಾಸ'' ಎನ್ನಲು ಪ್ರಾರಂಭಿಸಿದ ಹೀಗೆ, ಭಗವತ್-ಶೇಷತ್ವ ಜ್ಞಾನ, ಅಂದರೆ ಭಗವಂತನಿಗೆ "ನಾನು ದಾಸ" ಎಂಬ ಭಾವ, ಅಂಥ ಉತ್ತಮ ಜ್ಞಾನ ಬರುವುದಕ್ಕೂ ಲಕ್ಷ್ಮಿಯೇ ಕಾರಣ.

**ಹನುಮಂತನೇ ಸುಂದರಕಾಂಡದ ಹದಿನಾರನೇ ಸರ್ಗದ ಪೂರ್ತಿ ಸೀತೆಯ ಮಹಿಮೆಯನ್ನು ವರ್ಣಿಸುತ್ತಾನೆ.**

ರಾಮ ಸಮುದ್ರಪರ್ಯಂತವಾದ ಭೂಮಿಯನ್ನು ಆಳುವಂತೆ ಆಗುವುದೂ ಸೀತೆಯಿಂದಲೇ.

ಪಕ್ಷೀಕೆ! ತ್ರೈಲೋಕ್ಯ ರಾಜ್ಯವನ್ನೇ ಒಂದು ಕಡೆ, ಸೀತೆಯನ್ನೇ ಒಂದು ಕಡೆ ಇಟ್ಟು ತೂಗಿದರೂ ಸೀತೆಯ ಕಡೆಯೇ ಭಾರವಾಗುತ್ತದೆ. ಸೀತೆಯ ಕಟಾಕ್ಷ ವೀಕ್ಷಣ ಮಾತ್ರದಿಂದ ತ್ರೈಲೋಕ್ಯ ರಾಜ್ಯವೂ ಸುಲಭವಾಗಿ ಪ್ರಾಪ್ತವಾಗುತ್ತದೆ. "ಇಂಥ ಸೀತೆಗೆ ತೊಂದರೆ ಒದಗಿದ್ದನ್ನು ಕಂಡು ಬ್ರಹ್ಮಚಾರಿಯಾದ ನಾನೂ ಅತೀವ ವೇದನೆಗೆ ಒಳಗಾಗುತ್ತಿದ್ದೇನೆ ಎಂದ ಮೇಲೆ ರಾಮ ದುಃಖಿಸುವುದರಲ್ಲಿ ಹೆಚ್ಚೇನೂ ಇಲ್ಲ" ಎಂದು ಹನುಮಂತ ಬಹಳವಾಗಿ ದುಃಖಿಸುತ್ತಾನೆ.

ಸೀತೆಯನ್ನು ಕಾಣುವ ಮೊದಲು ರಾಮ ಸೀತೆಗಾಗಿ ಹಲುಬುತ್ತಿದ್ದುದನ್ನು ಕಂಡ ಹನುಮಂತ "ಹೀಗೂ ಉಂಟೆ! ಇದು ವಿಪರೀತವಲ್ಲವೆ" ಪತಿವ್ರತ ಶಿಷ್ಯನಾಗಿ ಹೀಗೆ ಹೆಣ್ಣಿನ ಹುಚ್ಚು ಹಿಡಿದು ಹಂಬಲಿಸುತ್ತಿದ್ದಾನಲ್ಲಾ ಇದು ನ್ಯಾಯವೆ, ಎಂದುಕೊಂಡಿದ್ದ. ಆದರೆ, ಸೀತೆಯನ್ನು ಕಂಡಮೇಲೆ ಹನುಮಂತ "ರಾಮ, ಸೀತೆಯನ್ನು ನೆನಸಿಕೊಂಡು ವೇದನೆಪಟ್ಟಿದ್ದು ಏನೇನೂ ಸಾಲದು. ಏನೂ ಪರಿಚಯವಿಲ್ಲದ ಬ್ರಹ್ಮಚಾರಿಯಾದ ನಾನೇ ಸೀತೆಯನ್ನು ನೋಡಿ ಇಷ್ಟು ದುಃಖಪಡುವಾಗ, ಇಷ್ಟು ವ್ಯಥೆಗೆ ಒಳಗಾಗಿರುವಾಗ ರಾಮ ವೇದನೆ ಪಟ್ಟದ್ದು ಏನೇನೂ ಸಾಲದು. ಇಂಥ ಸೌಶೀಲ್ಯದ ಅಧಿದೇವತೆಯನ್ನು ಅಗಲಿ ರಾಮ ಇನ್ನೂ ಜೀವದೊಂದಿಗಿದ್ದಾನಲ್ಲಾ ಅದೇ ದುಷ್ಕರವಾದ ಕೆಲಸ.

ಈ ಶ್ಲೋಕದಲ್ಲಿ ಪ್ರಭು ಎಂಬ ಪದಕ್ಕೆ ವಿಶೇಷಾರ್ಥಕೊಟ್ಟಿದ್ದಾನೆ ಕವಿ. ರಾಮ ರಾಜತಂತ್ರ ವಿಶಾರದನೇ ವಿನಾ ಕಾಮಶಾಸ್ತ್ರದ ಮೊದಲನೇ ಪಾಠವನ್ನೂ ತಿಳಿದವನಲ್ಲ. ಹಾಗೆ ತಿಳಿದಿದ್ದರೆ ಇಂಥ ಮಡದಿಯನ್ನು ಅಗಲಿ ಜೀವಸಹಿತ ಇರುತ್ತಿದ್ದನೇ ಎಂದು ಆಶ್ಚರ್ಯಪಟ್ಟ. ಅರಸುಮನೆತನದವರು ಆನೆ, ಕುದುರೆ ಸವಾರಿ, ಧನುರ್ವಿದ್ಯೆ ಇತ್ಯಾದಿ ಕಾರ್ಯಗಳಲ್ಲಿ ಚತುರರು ಅಷ್ಟೇ ಎಂಬುದು ಅರ್ಥ!

**ದುಷ್ಕರಂ ಕುರುತೇ ರಾಮೋ ಹೀನೋ ಯದನಯಾ ಪ್ರಭುಃ ।**
**ಧಾರಯತ್ಯಾತ್ಮನೋ ದೇಹಂ ನ ಶೋಕೇನಾವಸೀದತಿ ॥**
**ಇಮಾಂ ಅಸಿತಕೇಶಾಂತಾಂ ಶತಪತ್ರ ನಿಭೇಕ್ಷಣಾಂ ।**
**ಸುಖಾರ್ಹಾಂ ದುಃಖಿತಾಂ ದೃಷ್ಟ್ವಾ ಮಮಾಪಿ ವ್ಯಥಿತಂ ಮನಃ ॥**

"ಕಮಲದಳದಂತೆ ಕಣ್ಣುಳ್ಳ, ಸುಖಾರ್ಹಳಾದ ಸೀತೆ ದುಃಖಿತಳಾಗಿರುವುದನ್ನು ಕಂಡು ನಾನೇ ದುಃಖಿಸುತ್ತಿರುವಾಗ, ರಾಮ ದೇಹವನ್ನು ಬಿಡದೆ ಇದ್ದಾನಲ್ಲ – ಆವನು ನಿಜವಾಗಿ ಕಠಿಣನೇ ಸರಿ!" ಎಂದು ಉದ್ಗರಿಸುತ್ತಾನೆ ಹನುಮಂತ.

ಸೀತಾರಾಮರು ಅನ್ಯೋನ್ಯವಾದ ಅನುರಾಗವುಳ್ಳವರು. ಸೀತೆಗೆ ರಾಮನೇ ಪ್ರಾಣ. ರಾಮನಿಗೆ ಸೀತೆಯೇ ಸರ್ವಸ್ವ. ಹೀಗಿದ್ದೂ ಇಬ್ಬರೂ ಒಬ್ಬರನ್ನೊಬ್ಬರು ಅಗಲಿದಾಗ ಹೇಗೆ ಜೀವಿಸಿದ್ದರು? ಎಂದು ಆಶ್ಚರ್ಯಪಟ್ಟ ಹನುಮಂತ. ಒಂದು ಕ್ಷಣ ಯೋಚಿಸಿದ. ಇವರು ಜೀವಿಸಿರಲು ಕಾರಣ ಏನು?" ಎಂದು? ಯೋಚಿಸಿ "ಕಾರಣ ಗೊತ್ತಾಯಿತು" ಎಂದ. ಸೀತೆ ರಾಮನನ್ನು ಬಿಟ್ಟು ಇದ್ದಾಳೆ, ರಾಮ ಸೀತೆಯನ್ನು ಅಗಲಿದ್ದಾನೆ. ಆದರೆ, ರಾಮನ ಮನಸ್ಸು

ಸೀತೆಯಲ್ಲಿದೆ-ಸೀತೆಯ ಮನಸ್ಸು ರಾಮನಲ್ಲಿದೆ-ಹೀಗೆ ಅವರಿಬ್ಬರ ಮನಸ್ಸು ಅವರ ವಶದಲ್ಲಿಲ್ಲದೇ ಇರುವುದರಿಂದ ಅವರು ಪ್ರಾಣ ಬಿಡಲು ಸಾಧ್ಯವಾಗಲಿಲ್ಲ – ಎಂದುಕೊಂಡ.

ಹೀಗೆ ಪರಸ್ಪರ ಅನ್ಯೋನ್ಯವಾಗಿದ್ದ ಸೀತೆ ಈಗ ರಾಕ್ಷಸಿಯರ ಮಧ್ಯೆ ಇರುವಂತಾಯಿತಲ್ಲಾ ಎಂದು ಬಹಳವಾಗಿ ಸಂತಾಪ ಪಟ್ಟ ಹನುಮಂತ.

ಸೀತೆಯನ್ನು ನೋಡಿದ ಬಳಿಕ ಹನುಮಂತ ಸೀತೆಯ ಸುತ್ತಲೂ ಕಾವಲಿದ್ದ ರಾಕ್ಷಸಿಯರನ್ನು ಕಂಡ. ಆ ರಾಕ್ಷಸಿಯರೋ ವಿಚಿತ್ರವಾದ ರೂಪವುಳ್ಳವರಾಗಿದ್ದರು.

ಅವರಲ್ಲಿ ಒಬ್ಬಳಿಗೆ ಒಂದೇ ಕಣ್ಣು, ಇನ್ನೊಬ್ಬಳಿಗೆ ಒಂದೇ ಕಿವಿ, ಒಬ್ಬಳಿಗೆ ಕಿವಿಯೇ ಇಲ್ಲ, ಇನ್ನೊಬ್ಬಳಿಗೆ ಶಂಖದಂತೆ ಕಿವಿ. ಒಬ್ಬ ರಾಕ್ಷಸಿ ಪರ್ವತದಂತೆ ದಪ್ಪನಾಗಿದಾಳೆ. ಇನ್ನೊಬ್ಬಳಿಗೆ ಅತಿ ದೀರ್ಘದೇಹ, ಕುಳ್ಳಿ, ಗಿಡ್ಡಿ, ಮೂಗಿಲ್ಲದವಳು, ತಲೆಯಲ್ಲಿ ಬಾಯುಳ್ಳವಳು, ಗುಡಾಣದಂತೆ ಹೊಟ್ಟೆ ಉಳ್ಳವಳು, ವಿಕಟವಾದ ರೂಪವುಳ್ಳವಳು, ಮುಂತಾದ ವಿಕೃತವಾದ ರಾಕ್ಷಸಿಯರನ್ನು ಕಂಡ. ಆ ರಾಕ್ಷಸಿಯರ ವಿಕೃತರೂಪವನ್ನು ವಾಲ್ಮೀಕಿಯ ವಚನದಿಂದಲೇ ಕೇಳಬೇಕು.

**ಏಕಾಕ್ಷೀಂ ಏಕಕರ್ಣೀಂಚ ಲಂಬಕರ್ಣೀಂ ಅಕರ್ಣಿಕಾಂ।**

**ಅನಾಸಾಂ ಬಹುನಾಸಾಂಚ ವ ಸ್ತಿರ್ಯೋಚ್ಛ್ವಾಸನಾಸಿಕಾಂ॥**

ಈ ರಾಕ್ಷಸಿಯರೆಲ್ಲ ಶೂಲ, ಮುದ್ಗರ, ಕತ್ತಿ, ತೋಮರ ಮುಂತಾದ ಆಯುಧಗಳನ್ನು ಹಿಡಿದು ಸೀತೆಯನ್ನು ಬೆದರಿಸುತ್ತಿದ್ದರು. ಇವರ ಮಧ್ಯೆ ಸೀತೆ ಹುಲಿಗಳ ಮಧ್ಯೆ ಸಿಕ್ಕಿಕೊಂಡ ಜಿಂಕೆಯಂತೆ ಭಯದಿಂದ ಕುಳಿತಿದ್ದಳು.

ಬೆಳಗಾಗಲು ಇನ್ನೊಂದು ಜಾವ ಇದೆ. ಎಂದಾಗ ದೂರದಲ್ಲಿ ಕಲಕಲ ಶಬ್ದ ಕೇಳಿಸಿತು. ಆಗ ತಾನೇ ಎದ್ದ ರಾವಣ ಸೀತೆಯನ್ನು ನೆನಸಿಕೊಂಡವನಾಗಿ ನೂರು ಜನ ತನ್ನ ಅಂತಃಪುರದ ಸ್ತ್ರೀಯರೊಂದಿಗೆ ಅಶೋಕವನದತ್ತ ಬರುತ್ತಿದ್ದ. ಇದನ್ನು ಕಂಡ ಹನುಮಂತ "ಮುಂದೆ ಏನಾಗು ವುದೋ ನೋಡೋಣ ಎಂದುಕೊಂಡು ಆ ವೃಕ್ಷದ ನಿಬಿಡವಾದ ಶಾಖೆಗಳ ಮಧ್ಯೆ ಅಡಗಿ ಕುಳಿತುಕೊಂಡ.

ಸೀತೆಯನ್ನು ಕಂಡ ಸಂತೋಷ ಒಂದು ಕಡೆ. ಮುಂದೆ ಏನಾಗುವುದೋ ಎಂಬ ಕುತೂಹಲ ಇನ್ನೊಂದು ಕಡೆ. ಶಿಂಶುಪಾವೃಕ್ಷದ ಮರೆಯಲ್ಲಿ ಅಡಗಿ ಕುಳಿತು ಮುಂದಾಗುವುದನ್ನು ನೋಡಲು ಸಿದ್ಧನಾಗಿ ಕುಳಿತುಕೊಂಡ ಹನುಮಂತ.

ಮಹೇಂದ್ರನನ್ನು ಅನುಸರಿಸಿ ಸುಂದರಿಯರಾದ ಅಪ್ಸರೆಯರು ಬರುವಂತೆ ನೂರು ಜನ ಆಯ್ದ ಸುಂದರಿಯರು ರಾವಣನನ್ನು ಹಿಂಬಾಲಿಸಿ ಬಂದರು. ದೀಪಗಳನ್ನು ಕೈಯಲ್ಲಿ ಹಿಡಿದು ಅವರೆಲ್ಲ ಅಶೋಕವನವನ್ನು ಪ್ರವೇಶಿಸಿದಾಗ ಇಡೀ ಅಶೋಕವನವೇ ಬೆಳಕಿನಿಂದ ಪ್ರಕಾಶಮಾನ ವಾಯಿತು. ರಾವಣ ಬರುತ್ತಿದ್ದುದನ್ನು ದೂರದಿಂದಲೇ ಅರಿತ ಸೀತೆ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಬಾಳೆಯ ಗಿಡ ನಡುಗುವಂತೆ ನಡುಗಿದಳು. ತನ್ನ ರಡು ಮಂಡಿಗಳ ಮಧ್ಯದಲ್ಲಿ ಮುಖವನ್ನು ಕಾಣದಂತೆ ಹುದುಗಿಸಿ ಅಳಲು ಪ್ರಾರಂಭಿಸಿದಳು.

ತನ್ನನ್ನು ನೋಡಿ ಅಳುತ್ತಿರುವ ಸೀತೆಯನ್ನು ಕಂಡ ರಾವಣ ಅವಳ ಹತ್ತಿರ ಬಂದ. ವಧ್ಯ ಮೃಗ ವಧಾ ಸ್ಥಾನಕ್ಕೆ ಬರುವಂತೆ ವಿನಾಶಕಾಲ ಸನ್ನಿಹಿತವಾಗಿದ್ದ ರಾವಣ ಸೀತೆಯನ್ನು ಬಯಸಿ ಅವಳೆದುರಿಗೆ ಬಂದು ನಿಂತ "ಸೀತೆ, ಅಳುತ್ತಿರುವೆ ಏಕೆ? ನೋಡು, ನಿನಗಾಗಿ ವಿಧವಿಧವಾದ

ಆಭರಣಗಳನ್ನೂ, ಅಮೂಲ್ಯವಾದ ವಸ್ತ್ರಗಳನ್ನೂ, ಪ್ರಶಸ್ತವಾದ ಗಂಧಮಾಲ್ಯಗಳನ್ನೂ ತಂದಿದ್ದೇನೆ. ವೃಥಾ ಶೋಕಿಸುವುದನ್ನು ಬಿಡು. ಅಲಂಕಾರ ಮಾಡಿಕೊ, ರುಚಿಕರವಾದ ಭಕ್ಷ್ಯಗಳನ್ನು ತಿನ್ನು. ಚೆನ್ನಾಗಿ ತಿಂದು, ಅಲಂಕರಿಸಿಕೊಂಡು ನನ್ನೊಡನೆ ವಿಹರಿಸು ಕಲ್ಯಾಣಿ. ಯೌವನವು ಅಶಾಶ್ವತ. ಹೀಗಿರುವಾಗ ವೃಥಾ ಆ ರಾಮನನ್ನು ನೆನೆದು ಏಕೆ ಕೊರಗುತ್ತಿರುವೆ ? ಆ ರಾಮ ಜಟಾಧಾರಿ, ನಾರುಮಡಿಯುಟ್ಟು ಕಾಡಿನಲ್ಲಿ ಅಲೆಯುವವ, ಅಲ್ಪ ವೀರ್ಯ ಉಳ್ಳವ. ಈ ವೇಳೆಗೆ ಅವನು ಸತ್ತೇ ಹೋಗಿರಬೇಕು. ಅಂಥ ಅಲ್ಪ ಮಾನವ ನಿನಗೇನು ಸುಖ ಕೊಟ್ಟಾನು ? ನನ್ನನ್ನು ನೋಡು. ತ್ರಿಲೋಕವನ್ನೂ ಜಯಿಸಿದ ವೀರ ನಾನು. ನನ್ನನ್ನು ನೀ ಪಡೆದರೆ ತ್ರಿಲೋಕೇಶ್ವರಿಯಾಗಿ ಮೆರೆಯಬಹುದು. ನಿನ್ನ ಸೇವೆಗಾಗಿ ಸಾವಿರ ಜನ ಅಪ್ರತಿಮ ಸುಂದರಿಯರನ್ನು ನಿಯಮಿಸುತ್ತೇನೆ. ಹೆಚ್ಚೇಕೆ ! ವೈದೇಹಿ, ಮೂರು ಲೋಕಗಳನ್ನೂ ನಡೆಸತಕ್ಕ ನಾನೇ ಕಿರೀಟದಿಂದ ಅಲಂಕೃತವಾಗಿರುವ ಈ ತಲೆಯನ್ನು ನಿನ್ನ ಪಾದತಲದಲ್ಲಿ ಬಗ್ಗಿಸಿ ಪ್ರಾರ್ಥಿಸುತ್ತೇನೆ. ನನ್ನನ್ನು ಸೇರಿ ಸುಖಿಸು.

ನೀ ಕೇಳುತ್ತೀ. ''ಪರಸ್ತ್ರೀಯನ್ನು ಬಯಸುವುದು ಸರಿಯೇ ?" ಎಂದು. ರಾಕ್ಷಸರಾದ ನಮಗೆ ಪರಸ್ತ್ರೀಯನ್ನು ಬಯಸುವುದೇ ಸ್ವಧರ್ಮ, ಅದರಲ್ಲಿ ತಪ್ಪೇನೂ ಇಲ್ಲ.

ಮೈಥಿಲಿ, ನಿನ್ನ ಅಪ್ರತಿಮ ಸೌಂದರ್ಯ ನನ್ನನ್ನು ಹುಚ್ಚನನ್ನಾಗಿಸಿದೆ. ನಿನ್ನ ಒಂದೊಂದು ಅವಯವವನ್ನು ನೋಡುತ್ತಿದ್ದಂತೆ ನನ್ನ ಕಣ್ಣುಗಳು ಅಲ್ಲೇ ನಾಟಿ ಬಿಡುತ್ತವೆ. ಇಂಥ ಸೌಂದರ್ಯವತಿಯಾದ ನಿನ್ನನ್ನು ಯಾರು ತಾನೇ ಬಯಸುವುದಿಲ್ಲ ? ಸೀತೆ, ನೀನು ನನ್ನವಳಾಗು, ನಿನಗೆ ಬೇಕು ಬೇಕಾದುದನ್ನು ಒದಗಿಸುತ್ತೇನೆ. ನಿನ್ನ ತಂದೆಯಾದ ಜನಕನು ಬಯಸುವ ರಾಜ್ಯವನ್ನು ನಿನಗಾಗಿ ಕೊಡುತ್ತೇನೆ.

ಏಳು, ಚೆನ್ನಾಗಿ ತಿಂದು ಅಲಂಕರಿಸಿಕೊಂಡು ನನ್ನೊಡನೆ ಈ ವನಪ್ರದೇಶದಲ್ಲಿ ವಿಹರಿಸು. ಈಶ್ವರಿಯಾಗು, ನನಗೆ, ಈ ನನ್ನ ರಾಜ್ಯಕ್ಕೆ" ಎಂದು ಹೇಳಿದ.

ರಾವಣನ ಮಾತುಗಳನ್ನು ಕೇಳಿದ ಸೀತೆ ಕುಪಿತಳಾದಳು. ಆದರೂ ಸಮಾಧಾನದಿಂದ ರಾವಣನ ಇದಿರಿಗೆ ಒಂದು ಹುಲ್ಲುಕಡ್ಡಿಯನ್ನಿಟ್ಟು ಮುಗುಳ್ನಗೆಯಿಂದ ಕೂಡಿದವಳಾಗಿ ರಾವಣನಿಗೆ ಬುದ್ಧಿವಾದ ಹೇಳಿದಳು.

ಸೀತೆ ರಾವಣನಿಗೆ ಬುದ್ಧಿವಾದ ಹೇಳುವ ಈ ಪ್ರಕರಣವನ್ನು ಆಚಾರ್ಯರು ಬಹಳ ಆಳವಾಗಿ ವಿಮರ್ಶಿಸಿರುತ್ತಾರೆ.

"ತೃಣಮಂತರಃಕೃತ್ವಾ ಪ್ರತ್ಯುವಾಚ ಶುಚಿಸ್ಮಿತಾ" ಎಂದಿದಾರೆ ವಾಲ್ಮೀಕಿ.

ಸೀತೆ ಮುಗುಳ್ನಗೆಯಿಂದ ಏಕೆ ಮಾತಾಡಿದಳು ? ತನಗೂ ರಾವಣನಿಗೂ ನಡುವೆ ಹುಲ್ಲುಕಡ್ಡಿಯನ್ನೇಕಿಟ್ಟಳು ? ಶ್ರೀ ವೈಷ್ಣವಸಿದ್ಧಾಂತದ ರೀತ್ಯಾ ಸೀತೆ-ಲಕ್ಷ್ಮಿ ಪುರುಷಕಾರ ಸ್ವರೂಪಿಣೀ. ಜೀವನನ್ನೂ, ಪರಮಾತ್ಮನನ್ನೂ ಒಂದುಗೂಡಿಸುವ ಕೆಲಸ ಅವಳದ್ದು. ಜೀವ ಅನೇಕ ತಪ್ಪುಗಳನ್ನು ಮಾಡುತ್ತಿರುವಾಗ ತಾಯಿಯೆನಿಸಿದ ಆ ಸರ್ವ ಲೋಕಮಾತೆ ಕಾರುಣ್ಯದಿಂದ ಕೂಡಿದವಳಾಗಿ ಜೀವನಿಗೆ ಬುದ್ಧಿವಾದ ಹೇಳುತ್ತಾಳೆ ಪರಮಾತ್ಮನ ಕಡೆಗೆ ಮನಸ್ಸನ್ನು ತಿರುಗಿಸಿ ಅವನನ್ನು ಶರಣು ಹೋಗು ಎಂದು ಬೋಧಿಸುತ್ತಾಳೆ.

ಅಲ್ಲದೆ, ಪರಮಾತ್ಮನ ಹತ್ತಿರ ಜೀವನ ಬಗ್ಗೆ ಶಿಫಾರಸ್ಸು ಮಾಡುತ್ತಾಳೆ. ಜೀವ ತಪ್ಪು ಮಾಡಿದ್ದಾನೆ. ಹೇಗೆ ಅವನಿಗೆ ಮೋಕ್ಷ ಕೊಡುವುದು ? ಎಂದು ಪರಮಾತ್ಮ ಕೇಳಿದರೆ ''ತಪ್ಪು ಮಾಡದವರು ಯಾರು ? ತಪ್ಪು ಮಾಡುವುದು ಮಾನವನಿಗೆ ಸಹಜ ಗುಣ ರಕ್ಷಿಸಬೇಕಾದವರು ನೀವೇ ಹೀಗೆ ಹೇಳಿದರೆ ಗತಿಯೇನು ? ಎಂದು ಪರಮಾತ್ಮನನ್ನು ಜೀವನನ್ನು ಸೇರಿಸಿಕೊಳ್ಳುವಂತೆ ಕೇಳಿಕೊಳ್ಳುತ್ತಾಳೆ. ಹೀಗೆ ಜೀವಾತ್ಮ – ಪರಮಾತ್ಮನನ್ನು ಸೇರಿಸುವ ಪುರುಷಕಾರರೂಪಿಣಿ ಸೀತೆ-ಲಕ್ಷ್ಮಿ. ಅನ್ಯಾಯವಾಗಿ "ಜೀವ ಕೆಟ್ಟುಹೋಗುತ್ತಾನಲ್ಲ" ಎಂಬ ಅನುಕಂಪದಿಂದ ಕೂಡಿದವಳಾಗಿ ಜೀವನಿಗೆ ಅಂದರೆ ರಾವಣನಿಗೆ ಬುದ್ಧಿವಾದ ಹೇಳುತ್ತಾಳೆ.

ರಾವಣನಿಗೂ ತನಗೂ ಮಧ್ಯೆ ಹುಲ್ಲುಕಡ್ಡಿಯನ್ನು ಸೀತೆ ಇಟ್ಟಿದ್ದಕ್ಕೆ ಆಚಾರ್ಯರು ಅನೇಕ ಅರ್ಥಗಳನ್ನು ಹೇಳಿದ್ದಾರೆ.

ಪರಪುರುಷನೊಡನೆ ನೇರವಾಗಿ ಮಾತಾಡಬಾರದು ಎಂಬುದು ಆರ್ಯಸ್ತ್ರೀಯರಲ್ಲಿ ಬೆಳೆದು ಬಂದ ಸಂಪ್ರದಾಯ. ''ದುಷ್ಟನಾದ ರಾವಣನೊಡನೆ ನೇರವಾಗಿ ಮಾತೇಕೆ ?" ಎಂದು ಸೀತೆ ಹುಲ್ಲುಕಡ್ಡಿಯನ್ನು ನಡುವೆ ಇಟ್ಟಳು ಎಂದು ಒಂದು ಅರ್ಥ. ಈಗಲೂ ಸಂಪ್ರದಾಯಸ್ಥರ ಮನೆಯಲ್ಲಿ ಮನೆಯ ಯಜಮಾನ ಮನೆಯಲ್ಲಿಲ್ಲದ ವೇಳೆ ಯಾರಾದರೂ ಪುರುಷರು ಬಂದು ಅವರನ್ನು ವಿಚಾರಿಸಿದರೆ, ಗೃಹಿಣಿ ಆದವಳು ಮನೆಯಲ್ಲಿ ಯಾರೂ ಇಲ್ಲದಿದ್ದರೆ ಅವರಿಗೆ ನೇರವಾಗಿ ಉತ್ತರ ಕೊಡುವುದಿಲ್ಲ,

ಯಾರೋ ಮನೆಯಲ್ಲಿ ಇರುವಂತೆ ಭಾವಿಸಿಕೊಂಡೋ ಅಥವಾ ಸಣ್ಣ ಮಗು ಇದ್ದರೆ ಅದಕ್ಕೆ ಹೇಳುವಂತೆಯೋ "ಇಲ್ಲ, ಎಂದು ಹೇಳು" ಎಂದು ಉತ್ತರ ಕೊಡುತ್ತಾಳೆ. ಆದರೆ, ಇಲ್ಲಿ ''ದುಷ್ಟನಾದವನು ರಾವಣ. ಅಂಥವನೊಡನೆ ತಾನು ನೇರವಾಗಿ ಮಾತಾಡುವುದು ಸರಿಯಲ್ಲ" ಎಂದು ಸೀತೆ ಹಾಗೆ ಹುಲ್ಲುಕಡ್ಡಿಯನ್ನು ಮಧ್ಯೆ ಇಟ್ಟಳು.

ಸೀತೆ-ಲಕ್ಷ್ಮಿಯ ಅವತಾರ. ಲಕ್ಷ್ಮಿಯ ಕಟಾಕ್ಷ ಬಿದ್ದಮೇಲೆ ಆ ವ್ಯಕ್ತಿಗೆ ಪರಿಭವ ಇಲ್ಲ. "ತಾನು ರಾವಣನನ್ನು ನೋಡಬಾರದು" ಎಂದು ಹುಲ್ಲುಕಡ್ಡಿಯನ್ನು ನೋಡುತ್ತಾ ರಾವಣನಿಗೆ ಬುದ್ಧಿವಾದ ಹೇಳಿದಳು.

ಹುಲ್ಲುಕಡ್ಡಿಯನ್ನು ಇಟ್ಟಿದ್ದರ ಮತ್ತೊಂದು ಉದ್ದೇಶ, "ರಾವಣ, ನೀ ವರ್ಣಿಸಿದ ಭೋಗ, ಭಾಗ್ಯ ಎಲ್ಲ ನನಗೆ ಈ ಹುಲ್ಲುಕಡ್ಡಿಯ ಸಮಾನ. ನಿನ್ನ ಸಮಸ್ತ ಐಶ್ವರ್ಯವೂ ನನ್ನ ಪಾಲಿಗೆ ಈ ಹುಲ್ಲುಕಡ್ಡಿಯಂತೆ'' ಎಂದು ತೋರಿಸಲು ಹುಲ್ಲುಕಡ್ಡಿಯನ್ನು ಇಟ್ಟಳು.

ಹುಲ್ಲನ್ನು ತಿನ್ನುವುದು ಪಶು, "ರಾವಣ ನೀನು ಬ್ರಹ್ಮ ಕುಲೋತ್ಪನ್ನನಾದರೂ ಹೀನ ಕಾರ್ಯಕ್ಕೆಳಸಿದೆ. ಯುಕ್ತಾಯುಕ್ತ ಜ್ಞಾನ ನಿನಗಿಲ್ಲ. ಹುಲ್ಲುಕಡ್ಡಿಯೇ ಆಹಾರವಾದ ಪಶುವಿನಂತೆ ಗ್ರಾಮ್ಯ ಭೋಗವನ್ನು ಬಯಸುವ ನೀನೂ ಒಂದು ಪಶುವೇ" ಎಂದು ತಿಳಿಸುವ ಸಲುವಾಗಿ ಹುಲ್ಲುಕಡ್ಡಿಯನ್ನು ರಾವಣನ ಮುಂದೆ ಇಟ್ಟಳು.

''ಹಿಂದೆ ಚಿತ್ರಕೂಟದಲ್ಲಿ ಕಾಕಾಸುರ ಹಿಂಸಿಸಿದಾಗ ರಾಮ ಇಂಥದೇ ಹುಲ್ಲುಕಡ್ಡಿಯನ್ನು ಬ್ರಹ್ಮಾಸ್ತ್ರವನ್ನಾಗಿ ಅಭಿಮಂತ್ರಿಸಿ ಅದರ ಮೇಲೆ ಬಿಟ್ಟ. ಆ ಕಾಕವನ್ನು ಮೂರುಲೋಕದಲ್ಲಿ ಯಾರೂ ರಕ್ಷಿಸಲು ಸಮರ್ಥರಾಗಲಿಲ್ಲ. ಈಗಲೂ, ರಾಮನಿಗೆ ಆಯುಧ, ಶಸ್ತ್ರಗಳು, ಸೈನ್ಯ

ಇಷ್ಟೊಂದೂ ಬೇಕಿಲ್ಲ. ಇಂಥದೇ ಹುಲ್ಲುಕಡ್ಡಿಯನ್ನು ಅಭಿಮಂತ್ರಿಸಿ ನಿನ್ನ ಮೇಲೆ ಬಿಟ್ಟರೆ ನೀನು ಉಳಿಯುವಂತಿಲ್ಲ. ಆದ್ದರಿಂದ, ಎಚ್ಚೆತ್ತುಕೊ" ಎಂದು ಎಚ್ಚರಿಕೆ ಕೊಡುವ ಸಲುವಾಗಿ ಹುಲ್ಲು ಕಡ್ಡಿಯನ್ನು ಇಟ್ಟಳು ಸೀತೆ.

"ಹುಲ್ಲುಕಡ್ಡಿ ನಿಂದ್ಯವಾದುದು – ಕೆಳಮಟ್ಟದ್ದು. ನೀನು ಪರಸ್ತ್ರೀಯನ್ನು ಬಯಸುವ ನಿಂದ್ಯವಾದ ಕೆಲಸ ಮಾಡಿರುವೆ. ಆದ್ದರಿಂದ ಈ ಹುಲ್ಲುಕಡ್ಡಿಗಿಂತ ಕಡೆ" ಎಂದು ಸೂಚಿಸಲು ಹುಲ್ಲುಕಡ್ಡಿಯನ್ನು ರಾವಣನ ಮುಂದೆ ಇಟ್ಟಳು.

ಒಮ್ಮೆ ದೇವರಾಜನಾದ ಇಂದ್ರನಿಗೆ, ವಾಯುವಿಗೆ, ಅಗ್ನಿಗೆ ಗರ್ವ ಬಂದಿತು. "ತಮಗಿಂತ ಪ್ರತಾಪಿಗಳು ಯಾರೂ ಇಲ್ಲ" ಎಂಬ ಹೆಮ್ಮೆ ಆವರಿಸಿತು, ಇದನ್ನು ನೋಡಿದ ಪರಮಾತ್ಮ. ''ಇವರ ಗರ್ವವನ್ನು ಇಳಿಸಬೇಕು'' ಎಂದುಕೊಂಡ. ಒಬ್ಬ ಯಕ್ಷನ ವೇಷದಿಂದ ಕಾಣಿಸಿಕೊಂಡ. ಅಗ್ನಿ ಮಹಾಗರ್ವದಿಂದ ಅವನ ಬಳಿಗೆ ಹೋದ. "ನೀನು ಯಾರು ?" ಎಂದು ಯಕ್ಷ ಅಗ್ನಿಯನ್ನು ಕೇಳಿದ.

ಅಗ್ನಿ ಅಟ್ಟಹಾಸ ಮಾಡುತ್ತ "ಏನು ! ನಾನು ಯಾರು ಎಂದು ತಿಳಿಯದೆ ನಿನಗೆ ? ಈ ಸಮಸ್ತ ಬ್ರಹ್ಮಾಂಡವನ್ನೂ ಸುಟ್ಟುಹಾಕಬಲ್ಲ ಅಗ್ನಿ ನಾನು" ಎಂದ.

ಪರಬ್ರಹ್ಮ "ಹಾಗಾದರೆ ಇದನ್ನು ಸುಡು ನೋಡೋಣ" ಎಂದ. ಒಂದು ಹುಲ್ಲುಕಡ್ಡಿಯನ್ನು ಅವನ ಮುಂದಿಟ್ಟ. "ಅಯ್ಯೋ, ಪ್ರಪಂಚವನ್ನೇ ಸುಟ್ಟುಹಾಕುತ್ತೇನೆ ನಾನು ಎಂದರೆ ಈ ಹುಲ್ಲುಕಡ್ಡಿಯನ್ನು ಸುಡು ಎನ್ನುವೆಯಾ. ಇದೇನು ಮಹಾ ! ನೋಡು, ಈಗಲೇ ಇದನ್ನು ಸುಟ್ಟುಬಿಡುತ್ತೇನೆ ಎಂದು ಅಗ್ನಿ ಆ ತೃಣವನ್ನು ಸುಡಲು ಪ್ರಯತ್ನಿಸಿದ. ಆಗಲಿಲ್ಲ. ತನ್ನ ಎಲ್ಲ ಶಕ್ತಿಯನ್ನೂ ಪ್ರಯೋಗಿಸಿದ. ಸಾಧ್ಯವಾಗಲಿಲ್ಲ. ಪೆಚ್ಚಾಗಿ ಗರ್ವವನ್ನು ಬಿಟ್ಟು ತಲೆ ತಗ್ಗಿಸಿದ. ಅಗ್ನಿ ಹೋದ ಸ್ವಲ್ಪ ಹೊತ್ತಿನಲ್ಲಿ ವಾಯು ಬಂದ. ಪರಮಾತ್ಮ ವಾಯುವನ್ನು ಕುರಿತು "ನೀನು ಯಾರು" ಎಂದ. "ನಾನು ಯಾರು ? ಎಂದು ಕೇಳುವೆಯಾ ! ನಾನು ''ವಾಯು" ಈ ಎಲ್ಲಾ ಪ್ರಪಂಚವನ್ನೂ ನನ್ನ ವೇಗದಿಂದ ಹೊಡೆದುಕೊಂಡು ಹೋಗಬಲ್ಲೆ. ಅಂಥ ಸಾಮರ್ಥ್ಯ ನನ್ನದು ಎಂದ. ''ಹಾಗಾದರೆ, ಈ ತೃಣವನ್ನು ಅಲುಗಿಸು'' ಎನ್ನುತ್ತಾ ಭಗವಂತ ವಾಯುವಿನ ಮುಂದೆ ಅದೇ ತೃಣವನ್ನಿಟ್ಟ. "ಇದೇನು ಮಹಾ ! ಬೆಟ್ಟಗುಡ್ಡಗಳನ್ನೇ ಸುಲಭವಾಗಿ ಹಾರಿಸುವ ನನಗೆ ಇದೊಂದು ನಾಟಿಯೆ ?" ಎನ್ನುತ್ತಾ ಬೀಸಿದ, ಆಗಲಿಲ್ಲ. ಆಶ್ಚರ್ಯಪಟ್ಟು, ತನ್ನೆಲ್ಲ ಶಕ್ತಿಯನ್ನೂ ಪ್ರಯೋಗಿಸಿದ. ಆ ಹುಲ್ಲುಕಡ್ಡಿ ಇಟ್ಟಂತೆಯೇ ಇತ್ತು. ಸ್ವಲ್ಪವೂ ಅಲುಗಲಿಲ್ಲ. ವಾಯುವಿನ ಅಹಂಕಾರ ಮಾಯವಾಯಿತು ಅಲ್ಲಿಂದ ಹೋದ.

ಇಂದ್ರ "ನಾನು ಬಹಳ ಸಮರ್ಥ. ಯಾವ ಕಾರ್ಯವನ್ನೇ ಆಗಲಿ ಸಾಧಿಸಿಯೇ ಬಿಡುತ್ತೇನೆ" ಎಂದುಕೊಂಡು ಮಹಾಗರ್ವದಿಂದ ಬಂದ.

ಮದಿಸಿದ ಇಂದ್ರನಿಗೆ ಕಾಣಿಸಿಕೊಳ್ಳಲೇ ಇಲ್ಲ ಭಗವಂತ.

ಸೀತೆ ಅದನ್ನು ನೆನಸಿಕೊಂಡು "ರಾವಣ, ನೀನು ಮಹಾಪರಾಕ್ರಮಿ ಮೂರು ಲೋಕಗಳನ್ನೂ ಜಯಿಸಿದವನು ಎಂದು ಗರ್ವ ಪಡುತ್ತಿರುವೆ. ರಾಮನೊಡನೆ ನೀನು ಯುದ್ಧಮಾಡುವುದಿರಲಿ. ರಾಮ ಹಾಕುವ ಒಂದು ಹುಲ್ಲುಕಡ್ಡಿಯನ್ನೂ ಅಲುಗಿಸುವ ಸಾಮರ್ಥ್ಯ ನಿನಗಿಲ್ಲ, ವೃಥಾ ಏಕೆ

ಗಳಹುತ್ತಿರುವೆ" ಎಂದು ಸೂಚಿಸುವಂತೆ ತೃಣವನ್ನು ರಾವಣನಿಗಿದಿರಾಗಿ ಇಟ್ಟು ಮಾತಾಡತೊಡಗಿದಳು.

**ನಿವರ್ತಯ ಮನೋ ಮತ್ತಃ ಸ್ವಜನೇ ಕ್ರಿಯತಾಂ ಮನಃ॥**

"ಹೇ ರಾವಣ ನೀನು ನನ್ನಲ್ಲಿ ಮನಸ್ಸನ್ನಿಡುವುದು ಸರಿಯಲ್ಲ ನಿನ್ನ ಮನಸ್ಸನ್ನು ತಿರುಗಿಸು "ಮನಃ" ಶಬ್ದವನ್ನು ತಿರುಗಿಸಿದರೆ "ನಮಃ" ಎಂದಾಗುತ್ತದೆ. ನನ್ನನ್ನು ಮಾತೆಯ ರೂಪದಲ್ಲಿ ಕಾಣು. ನನ್ನನ್ನು "ತಾಯಿ" ಎಂದು ನಮಸ್ಕರಿಸು. ಹೀಗೆ ಪರಸ್ತ್ರೀಯನ್ನು ಬಯಸುವುದು ನಿನಗೆ ತರವಲ್ಲ.

ನಿನ್ನ ಸ್ವಸ್ತ್ರೀಯರಲ್ಲಿ ಮನಸ್ಸನ್ನಿಡು. ಯಾವನು ಪರಸ್ತ್ರೀಯನ್ನು ಬಯಸುತ್ತಾನೋ ಅವನು "ಚಪಲ, ಅಜಿತೇಂದ್ರಿಯ" ಎನಿಸಿಕೊಳ್ಳುತ್ತಾನೆ.

ರಾವಣ, ನಾ ಹೇಳುವುದನ್ನು ಕೇಳು. ನೀನು ಬದುಕಲು ಇಚ್ಛಿಸಿದರೆ ನನ್ನನ್ನು ರಾಮನಿಗೆ ಒಪ್ಪಿಸಿ ಅವನಿಗೆ ಶರಣಾಗತನಾಗು. ನಾನೂ ರಾಮನಿಗೆ ನಿನ್ನನ್ನು ರಕ್ಷಿಸುವಂತೆ ಹೇಳುತ್ತೇನೆ.

ದೊಡ್ಡದಾಗಿ ನಿನ್ನನ್ನು "ವೀರ" ಎಂದುಕೊಳ್ಳುತ್ತೀಯಲ್ಲಾ ನಿನಗೆ ನಾಚಿಕೆಯಿಲ್ಲವೆ ? ಎಲವೊ ಪಾಪಿ ! ರಾಮಲಕ್ಷ್ಮಣರು ಆಶ್ರಮದಲ್ಲಿ ಇಲ್ಲದ ವೇಳೆ ಕಳ್ಳನಂತೆ ಬಂದು ಅಪಹರಿಸಿ ಈಗ ಹೆಮ್ಮೆ ಪಡುತ್ತಿರುವೆ.

ರಾಮನು ಸಾಮಾನ್ಯನಲ್ಲ. ಅವನ ಬಾಣಗಳು ನಿನ್ನ ಎದೆಯನ್ನು ಸೀಳಿಬಿಡುತ್ತವೆ. ಇದರಲ್ಲಿ ಸಂಶಯವಿಲ್ಲ. ಅಲ್ಪವಾದ ನೀರನ್ನು ಸೂರ್ಯ ತನ್ನ ಪ್ರಭಾವಯುತವಾದ ಕಿರಣಗಳಿಂದ ಬಹಳ ಬೇಗ ಶೋಷಿಸುವಂತೆ, "ವೈನತೇಯ" ಎನಿಸಿದ, ಮಹಾಬಲಶಾಲಿಯಾದ ಗರುಡ ಸರ್ಪವನ್ನು ಕೊಲ್ಲುವಂತೆ, ಮಹಾಪರಾಕ್ರಮಿಯಾದ ಮೃಗರಾಜನಾದ ಸಿಂಹ, ನಾಯನ್ನು ಸೀಳಿ ಹಾಕುವಂತೆ, ರಘುವೀರನೆನಿಸಿದ ಶ್ರೀರಾಮ ನಿನ್ನನ್ನು ಕೊಂದೇ ತೀರುತ್ತಾನೆ. ಇದರಲ್ಲಿ ಸಂಶಯವಿಲ್ಲ–ಪಾಪಿ! ಏನೆಂದುಕೊಂಡೆ–ನನ್ನನ್ನು – ನಾನೇ ನನ್ನ ತೇಜಸ್ಸಿನಿಂದ ನಿನ್ನನ್ನು ಈವರೆಗೆ ಸುಟ್ಟುಹಾಕಿಬಿಡುತ್ತಿದ್ದೆ ಆದರೆ ರಾಮನ ಆಜ್ಞೆ ಇಲ್ಲದೆ ಇರುವುದರಿಂದಲೂ, ತಪಸ್ಸನ್ನು ಅನುಷ್ಠಿಸುತ್ತಿರುವುದರಿಂದಲೂ ಸುಮ್ಮನೆ ಇದೇನೆ. ವಿಷಯುಕ್ತವಾದ ಅನ್ನವನ್ನು ತಿಂದು ದಕ್ಕಿಸಿಕೊಳ್ಳಲು ಹೇಗೆ ಸಾಧ್ಯವಿಲ್ಲವೋ ಹಾಗೆ ನನ್ನನ್ನು ನೀ ದಕ್ಕಿಸಿಕೊಳ್ಳಲಾರೆ. ನೀನು ಬದುಕಬೇಕಾದರೆ ನನ್ನನ್ನು ರಾಮನಿಗೆ ಒಪ್ಪಿಸು ಹೋಗು" ಎಂದಳು.

ಸೀತೆಯ ಪರುಷವಾದ ಮಾತುಗಳನ್ನು ಕೇಳಿದ ರಾವಣ ಚಂಡರಾವಣನಾದ. ಕೋಪದಿಂದ ಅವನ ದೇಹವೆಲ್ಲ ಕಂಪಿಸಿತು. "ಇದೋ, ನಿನ್ನನ್ನು ಇದೀಗಲೇ ತುಂಡರಿಸಿ ಬಿಡುತ್ತೇನೆ" ಎಂದು ಕತ್ತಿಯನ್ನು ಹಿರಿದು ಮುನ್ನುಗಿದ. ಆಗ, ರಾವಣನ ಪತ್ನಿ ಮಂಡೋದರಿ ರಾವಣನನ್ನು ತಡೆದು "ಅವಳು ಮಾನುಷಿ – ನಿನ್ನನ್ನು ಅವಳು ಬಯಸದೆ ಇರುವಾಗ ಅವಳನ್ನು ನೀನು ಬಲಾತ್ಕರಿಸುವುದು ಸರಿಯಲ್ಲ. ಅಂತಃಪುರಕ್ಕೆ ಹೋಗೋಣ ಬಾ" ಎಂದು ಹೇಳಿದಳು.

ರಾವಣ ಕೋಪದಿಂದ "ಸೀತೆ, ಇನ್ನೆರಡು ತಿಂಗಳು ನಿನಗೆ ಅವಧಿ ಇದೆ. ಆದ್ದರಿಂದ ಸುಮ್ಮನೆ ಇದೇನೆ. ಇಲ್ಲವಾಗಿದ್ದರೆ, ನೀ ಆಡಿದ ಈ ಮಾತುಗಳಿಗೆ ಈಗಲೇ ನಿನ್ನನ್ನು ತುಂಡರಿಸುತ್ತಿದ್ದೆ. ಆ ಅವಧಿಯೊಳಗೆ ಯೋಚಿಸು. ಅಷ್ಟರಲ್ಲಿ ನೀನು ನನ್ನವಳಾಗಬೇಕು. ಇಲ್ಲವಾದರೆ ಆ ಅವಧಿ ಕಳೆದ ಮರುದಿನ ನಿನ್ನನ್ನು ಬೆಳಗಿನ ತಿಂಡಿಗೆ ಉಪಯೋಗಿಸಿಕೊಳ್ಳುತ್ತೇನೆ. ಎಚ್ಚರಿಕೆ"

ಎಂದು ಹೇಳಿ ರಾಕ್ಷಸಿಯರ ಕಡೆ ತಿರುಗಿ "ರಾಕ್ಷಸಿಯರೆ, ಸೀತೆಯನ್ನು ಸಾಮ, ದಾನ, ಭೇದ, ದಂಡ ಗಳಿಂದ ನನ್ನವಳಾಗುವಂತೆ ಮಾಡಿ'' ಎಂದು ಆಜ್ಞಾಪಿಸಿ ಹಿಂದಿರುಗಿದ.

ರಾಕ್ಷಸಿಯರೆಲ್ಲ ಸೀತೆಯನ್ನು ಸುತ್ತುಗಟ್ಟಿ ಒಬ್ಬೊಬ್ಬರಾಗಿ ರಾವಣನ ವಶವಾಗುವಂತೆ ಹಿಂಸಿಸುತ್ತಿದ್ದರು. ಏಕಜಟೆ ಎಂಬ ರಾಕ್ಷಸಿ ''ಸೀತೆ, ರಾವಣ ಸಾಮಾನ್ಯನಲ್ಲ ಪೌಲಸ್ತ್ಯ ವಂಶದಲ್ಲಿ ಹುಟ್ಟಿದವನು. ಮಹಾ ತೇಜಸ್ವಿ, ಮೂರು ಲೋಕಗಳನ್ನೂ ಜಯಿಸಿದವ. "ಇಂಥವನನ್ನು ಪಡೆದರೆ ಸಾಕು," ಎಂದು ಸಾವಿರಾರು ಸ್ತ್ರೀಯರು ಆಸೆ ಪಡುತ್ತಿರುವಾಗ, ರಾವಣ ತಾನಾಗಿಯೇ ನಿನ್ನನ್ನು ಪ್ರಾರ್ಥಿಸುತ್ತಿದ್ದರೂ ನೀ ವಶವಾಗದೆ ಇದ್ದೀಯಲ್ಲ, ಇದು ಮೂರ್ಖತನವೇ ಸರಿ, ಏಳು, ಇದುವರೆಗೆ ರಾಮನನ್ನು ಚಿಂತಿಸಿದ್ದು ಸಾಕು. ಇನ್ನು ರಾವಣನನ್ನು ಭಜಿಸು" ಎಂದಳು.

ಹೀಗೆ ಏಕಜಟೆ, ವಿಕಟಾ ಮುಂತಾದ ರಾಕ್ಷಸಿಯರು ಶೂಲವನ್ನು ತಿರುಗಿಸುತ್ತಾ ಸೀತೆಯನ್ನು ಭಯಪಡಿಸುತ್ತಾ ''ರಾವಣನನ್ನು ಪತಿಯನ್ನಾಗಿ ವರಿಸು" ಎನ್ನುತ್ತಿದ್ದರು. ರಾಕ್ಷಸಿಯರ ಮಾತು ಗಳನ್ನು ಕೇಳಿದ ಸೀತೆ ದುಃಖದಿಂದ" ಮಾನುಷಿಯಾದವಳು ರಾಕ್ಷಸನನ್ನು ವರಿಸಕೂಡದು. ಅಲ್ಲದೆ ನಾನು ರಾಮನನ್ನೇ ಸರ್ವಕಾಲದಲ್ಲೂ ಅನುವರ್ತಿಸುವವಳು. ರಾಮನು ದೀನನಾಗಲಿ, ರಾಜ್ಯ ಹೀನನಾಗಲಿ ಅವನೇ ನನ್ನ ಪತಿ, ಅವನೇ ನನ್ನ ಗುರು. ಅವನನ್ನು ಬಿಟ್ಟು ಉಳಿದವರನ್ನು ಕಣ್ಣೆತ್ತಿಯೂ ನೋಡುವುದಿಲ್ಲ.

ಆರ್ಯ ಸ್ತ್ರೀಯರು ಪತಿಯನ್ನೇ ಸರ್ವಕಾಲದಲ್ಲೂ ಅನುವರ್ತಿಸುವವರು. ಪತಿ ಕಷ್ಟದಲ್ಲಿರಲಿ ನಿರ್ಧನನಾಗಲಿ ಅವನನ್ನೇ ನೆರಳಿನಂತೆ ಅನುವರ್ತಿಸುವುದೇ ಸರಿಯಾದವಳ ಧರ್ಮ.

ಸೂರ್ಯನನ್ನು ಬಿಟ್ಟು ಪ್ರಭೆ ಹೇಗೆ ಬೇರೆಯಾಗಿರಲು ಸಾಧ್ಯವಿಲ್ಲವೋ ಹಾಗೆ ನಾನು ರಾಮ ನನ್ನು ಬಿಟ್ಟು ಬೇರೆಯಾಗಿರಲು ಸಾಧ್ಯವಿಲ್ಲ. "ಅನನ್ಯಾರಾಘವೇಣಾಹಂ". ಶಚೀದೇವಿ ಇಂದ್ರನಿಗೆ ಕಷ್ಟ ಬಂದಾಗಲೂ ಅವನನ್ನೇ ಅನುವರ್ತಿಸಿದಳು.

ವೃತ್ರಾಸುರನನ್ನು ಕೊಂದ ಇಂದ್ರನಿಗೆ ಬ್ರಹ್ಮಹತ್ಯೆ ಬಂದಿತು. ಆಗ ಇಂದ್ರನ ಸ್ಥಾನಕ್ಕೆ ನಹುಷ ಬಂದ. ಇಂದ್ರನ ಜಾಯೆ ಶಚೀದೇವಿಯನ್ನು ಬಯಸಿದ. ಆಗ ಶಚೀದೇವಿಗೆ ಅಭಯ ಕೊಟ್ಟು ಬೃಹಸ್ಪತಿಗಳು ಇಂದ್ರನೊಡನೆ ಸೇರುವಂತೆ ಅವಳಿಗೆ ಅನುಗ್ರಹ ಮಾಡಿದರು. ಶಚೀದೇವಿಗೆ ಬೃಹಸ್ಪತಿ ನಹುಷನನ್ನು ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಬರುವಂತೆ ಹೇಳು ಎಂದರು. ಅದರಂತೆ ಸಪ್ತರ್ಷಿಗಳಿಂದ ಹೊರಲ್ಪಟ್ಟ ಪಲ್ಲಕ್ಕಿಯಲ್ಲಿ ನಹುಷ ಬರುತ್ತಿದ್ದ. ಅಗಸ್ತ್ಯರು ಕುಳ್ಳ ಅವರು ನಿಧಾನವಾಗಿ ಹೋಗುತ್ತಿದ್ದರು, ಆಗ ನಹುಷ "ಸರ್ಪ – ಸರ್ಪ ಬೇಗ ಬೇಗ ನಡಿ" ಎಂದು ಆಜ್ಞಾಪಿಸಿದ. ಕುಪಿತರಾದ ಅಗಸ್ತ್ಯರು ''ನೀ ಸರ್ಪವಾಗು'' ಎಂದು ಶಪಿಸಿದರು ಬಳಿಕ ಶಚಿ ಇಂದ್ರನನ್ನು ಸೇರಿದಳು. ಶಚಿ ಹೇಗೆ ಎಲ್ಲ ಕಾಲದಲ್ಲೂ ಇಂದ್ರನನ್ನು ಅನುವರ್ತಿಸುವಳೋ ಹಾಗೆಯೇ ನಾನೂ ರಾಮನನ್ನು ಅನವರತ ಅನುವರ್ತಿಸುತ್ತೇನೆ.

**ರೋಹಿಣೀ ಶಶಿನಂ ಯಥಾ**

ದಕ್ಷನಿಗೆ ಇಪ್ಪತ್ತೇಳು ಜನ ಕುಮಾರಿಯರು. ಅವರೆಲ್ಲರನ್ನೂ ಅವನು ಚಂದ್ರನಿಗಿತ್ತು ವಿವಾಹ ಮಾಡಿದ, ಚಂದ್ರನಿಗೆ ಎಲ್ಲರಿಗಿಂತ ಕಿರಿಯಳಾದ ರೋಹಿಣಿಯಲ್ಲಿ ಹೆಚ್ಚು ಪ್ರೀತಿ. ಇದನ್ನು ಕಂಡ ಉಳಿದ ಇಪ್ಪತ್ತಾರು ಜನ ತಂದೆಯ ಬಳಿ ಹೋಗಿ ಪತಿಯನ್ನು ದೂರಿದರು. ಆಗ ದಕ್ಷ ಚಂದ್ರನನ್ನು ಕ್ಷಯಿಸುವಂತೆ ಶಪಿಸಿದ.

ಚಂದ್ರ ಕ್ಷಯರೋಗದಿಂದ ಪೀಡಿತನಾದಾಗಲೂ ರೋಹಿಣಿ ಬಿಡದೆ ಅವನನ್ನು ಸೇವಿಸಿದಳು. ರೋಹಿಣಿ ಚಂದ್ರನನ್ನು ಎಡಬಿಡದೆ ಸೇವಿಸಿದಂತೆ ನಾನೂ ರಾಮನನ್ನು ಅನುವರ್ತಿಸುತ್ತೇನೆ.

**ಸುಕನ್ಯಾ ಚ್ಯವನಂ ಯಥಾ**

ಶರ್ಯಾತಿ ರಾಜನ ಮಗಳು ಸುಕನ್ಯೆ. ಒಮ್ಮೆ ರಾಜ ತನ್ನ ಸೈನ್ಯದೊಡನೆ ಬೇಟೆಯಾಡುತ್ತಾ ಒಂದು ಅರಣ್ಯದಲ್ಲಿ ಬೀಡುಬಿಟ್ಟ. ಶರ್ಯಾತಿಯ ಮಗಳು ಸುಕನ್ಯೆ ಆ ವನದಲ್ಲಿ ಸುತ್ತುತ್ತಾ ಬಂದಳು. ಅಲ್ಲಿ ಹುತ್ತ ಬೆಳೆದಿತ್ತು ಒಂದು ಕಡೆ ಬಾಲ್ಯಸಹಜವಾದ ಚಾಪಲ್ಯದಿಂದ ಅದರ ಸಮೀಪಕ್ಕೆ ಬಂದಳು. ಆ ಹುತ್ತದಲ್ಲಿ ಎರಡು ಪ್ರಕಾಶಮಾನವಾದ ಕಣ್ಣುಗಳು ಹೊಳೆಯುತ್ತಿದ್ದವು. ಅಲ್ಲೇ ಬಿದ್ದಿದ್ದ ಮುಳ್ಳನ್ನು ತೆಗೆದು ಅದರಿಂದ ಅವನ್ನು ಚುಚ್ಚಿದಳು. ರಕ್ತ ಹರಿಯ ತೊಡಗಿತು. ಭಯಪಟ್ಟಳು ಸುಕನ್ಯೆ.

ಆ ಆಶ್ರಮ ಚ್ಯವನಮಹರ್ಷಿಗಳದ್ದು. ಚ್ಯವನರು ಬಹಳಕಾಲದಿಂದ ಅಲ್ಲಿ ತಪಸ್ಸು ಮಾಡುತ್ತಿದ್ದುದರಿಂದ ಅವರ ಮೇಲೆ ಹುತ್ತ ಬೆಳೆದಿತ್ತು. ಸುಕನ್ಯೆ ತಿಳಿಯದೆ ಅಪರಾಧ ಮಾಡಿದಳು. ಆದರೂ "ಉತ್ತಮ ದ್ರೋಹ" ಫಲಕೊಡದೆ ಬಿಡದು. ಶರ್ಯಾತಿಯ ಸೈನಿಕರಿಗೆಲ್ಲ ವಾಯು ನಿರೋಧವಾಯಿತು. ಎಲ್ಲರೂ ರಾಜನನ್ನು ಪ್ರಾರ್ಥಿಸಿದರು. ರಾಜನು ಯಾರಾದರೂ ಈ ಪ್ರದೇಶದಲ್ಲಿ ಉತ್ತಮರಿಗೆ ಅಪಚಾರ ಮಾಡಿದಿರೇ ? ಹೇಳಿ ಎಂದ. ಆಗ ಸುಕನ್ಯೆ ತಾನು ಮಾಡಿದ್ದನ್ನು ತಿಳಿಸಿದಳು. ರಾಜ ಸುಕನ್ಯೆಯನ್ನು ಕರೆದುಕೊಂಡು ಚ್ಯವನ ಮಹರ್ಷಿಗಳ ಬಳಿಗೆ ಬಂದು ಅವರನ್ನು ಪ್ರಾರ್ಥಿಸಿದ. ಚ್ಯವನರು ನಿನ್ನ ಮಗಳನ್ನು ನನಗಿತ್ತು ವಿವಾಹಮಾಡುವುದಾದರೆ ನಾನು ಕ್ಷಮಿಸುತ್ತೇನೆ ಎಂದರು. ಸುಕನ್ಯೆ ಒಪ್ಪಿದಳು. ಶರ್ಯಾತಿ ಮಹಾರಾಜ, ಬಾಲೆಯಾದ ಸುಕನ್ಯೆಯನ್ನು ಅತಿ ವೃದ್ಧರಾದ ಚ್ಯವನರಿಗಿತ್ತು ವಿವಾಹಮಾಡಿ ಸುಕನ್ಯೆಯನ್ನು ಚ್ಯವನರ ಬಳಿಯೇ ಬಿಟ್ಟು ಹೊರಟುಹೋದ.

ವೃದ್ಧರಾದ ಚ್ಯವನರನ್ನೇ ಸುಕನ್ಯೆ ಅತ್ಯಂತ ಭಕ್ತಿಯಿಂದ ಸೇವಿಸುತ್ತಿದ್ದಳು. ಅವಳ ಪಾತಿವ್ರತ್ಯದ ಪ್ರಭಾವವೋ ಎಂಬಂತೆ ಮುಂದೆ ಅಶ್ವಿನೀ ದೇವತೆಗಳ ಅನುಗ್ರಹದಿಂದ ವೃದ್ಧರಾದ ಚ್ಯವನರು ಯುವಕರಾದರು.

ಸುಕನ್ಯೆ ರಾಜಕನ್ಯೆ, ಸುರೂಪಿ, ಯುವತಿ. ಚ್ಯವನರೋ ಅತಿ ವೃದ್ಧರು, ಜೀರ್ಣಕಾಯರು ಆದರೂ ಅವಳು ಚ್ಯವನರನ್ನೇ ಸೇವಿಸಿದಳು ಅನನ್ಯ ಚಿತ್ತದಿಂದ. ಹಾಗೆಯೇ ನಾನೂ ರಾಮನನ್ನೇ ಅನವರತ ಸೇವಿಸುವವಳು.

**ಸಾವಿತ್ರೀ ಸತ್ಯವಂತಂಚ ಕಪಿಲಂ ಶ್ರೀಮತೀ ಯಥಾ ।**
**ಸೌದಾಸಂ ಮದಯಂತೀವ ಕೇಶಿನೀ ಸಗರಂ ಯಥಾ ॥**
**ನೈಷಧಂ ದಮಯಂತೀವ ಭೈಮೀಪತಿಮನುವ್ರತಾ ।**
**ತಥಾಹಮಿಕ್ಷ್ವಾಕುಕುವರಂ ರಾಮಂ ಪತಿಮನುವ್ರತಾ ॥**

ಅಲ್ಪಾಯುಸ್ಸುಳ್ಳವ ಸತ್ಯವಂತ ಎಂದು ತಿಳಿದಮೇಲೂ ಸಹ ಸಾವಿತ್ರಿ ಸತ್ಯವಂತನನ್ನು ಅನುವರ್ತಿಸಿ ಅವನಿಗಾಗಿ ತನ್ನ ಸರ್ವಸ್ವವನ್ನೂ ತ್ಯಾಗಮಾಡಿ ಯಮನೊಡನೆಯೇ ಸೆಣಸಿ ತನ್ನ ಪತಿಯನ್ನು ಉಳಿಸಿಕೊಂಡಳು.

ಸಾವಿತ್ರಿ ಸತ್ಯವಂತನನ್ನು ಅನುವರ್ತಿಸಿದಂತೆ ಶ್ರೀಮತಿ ಕಪಿಲನನ್ನೇ ಸತತವಾಗಿ ಸೇವಿಸುವಂತೆ ನಾನು ರಾಮನನ್ನೇ ಅನವರತ ಸೇವಿಸುತ್ತೇನೆ. ಸೌದಾಸ ಎಂಬ ರಾಜನಿಗೆ ಮದಯಂತಿ ಎಂಬ ಪತ್ನಿ. ಅವಳೋ ಪತಿವ್ರತೆ. ಸೌದಾಸ ಶಾಪದಿಂದ ರಾಕ್ಷಸನಾದ. ಪತಿ ರಾಕ್ಷಸರೂಪವನ್ನು ಧರಿಸಿದರೂ ಸಹ ಮದಯಂತಿ ಅವನನ್ನು ಪರಿತ್ಯಜಿಸಲಿಲ್ಲ. ಅವನನ್ನು ಬಿಡಲಿಲ್ಲ. ಹಾಗೆಯೇ ನಾನೂ ಸಹ ರಾಮನು ರಾಜ್ಯಹೀನನಾದರೂ ಅವನನ್ನೇ ಅನುಸರಿಸುತ್ತೇನೆ.

ನಿಷಧದೇಶದ ಅರಸ ನಳಚಕ್ರವರ್ತಿ. ವಿಧರ್ಭರಾಜಪುತ್ರಿ ದಮಯಂತಿ. ಇವರಿಬ್ಬರಿಗೂ ಹಂಸದ ಮೂಲಕ ಪರಸ್ಪರ ಅನುರಾಗ ಬೆಳೆಯಿತು. ದಮಯಂತಿ ನಳನನ್ನೇ ವರಿಸಬೇಕು ಎಂದು ನಿಶ್ಚಯಿಸಿದಳು. ವಿಧರ್ಭಾಧಿಪತಿ ದಮಯಂತಿಯ ಸ್ವಯಂವರವನ್ನು ಏರ್ಪಡಿಸಿದ. ದಮಯಂತಿಯ ಲೋಕೋತ್ತರ ಸೌಂದರ್ಯವನ್ನು ಕಂಡ ಎಲ್ಲ ರಾಜರೂ ಸ್ವಯಂವರಕ್ಕೆ ಬಂದು ಸೇರಿದರು. ದೇವತೆಗಳಿಗೂ ದಮಯಂತಿಯ ಸೌಂದರ್ಯ ಮೆಚ್ಚುಗೆಯಾಯಿತು. ಅವರೂ ಬಂದರು.

ದಮಯಂತಿ ನಳನನ್ನೇ ವರಿಸಬೇಕೆಂದಿರುವುದನ್ನು ತಿಳಿದ ಇಂದ್ರ, ಅಗ್ನಿ, ಯಮ, ವರುಣ, ಈ ದೇವತೆಗಳು ನಳನನ್ನು ಕರೆದು "ನಿನ್ನಿಂದ ನಮಗೆ ಒಂದು ಕೆಲಸ ಆಗಬೇಕಾಗಿದೆ, ಮಾಡುವೆಯಾ" ಎಂದರು.

ದೇವತೆಗಳೇ ತನ್ನನ್ನು ಕೇಳುತ್ತಿರುವುದನ್ನು ಕಂಡ ನಳ "ಆಗಲಿ" ಎಂದು ಒಪ್ಪಿಕೊಂಡ.

ದೇವತೆಗಳು ನಳನಿಗೆ "ದಮಯಂತಿ ನಮ್ಮಲ್ಲಿ ಯಾರನ್ನಾದರೂ ವರಿಸುವಂತೆ ಹೇಳು" ಎಂದರು. ನಳ ತಾನೇ ಸ್ವತಃ ದಮಯಂತಿಯಲ್ಲಿ ಅನುರಕ್ತ. ಹೀಗಿದ್ದರೂ ಕೊಟ್ಟ ಮಾತನ್ನು ನೆರವೇರಿಸಬೇಕೆಂಬ ದೃಢ ಪ್ರತಿಜ್ಞೆಯಿಂದ ದಮಯಂತಿಯ ಬಳಿ ಹೋದ. ದೇವತೆಗಳ ಸಂದೇಶ ವನ್ನು ತಿಳಿಸಿ ನೀನು "ಅವರಲ್ಲಿ ಯಾರನ್ನಾದರೂ ವರಿಸು" ಎಂದ. ಪತಿವ್ರತೆಯಾದ ದಮಯಂತಿ "ನಳನನ್ನು ಹೊರತು ಇನ್ನಾರನ್ನೂ ಕಣ್ಣೆತ್ತಿಯೂ ನೋಡುವುದಿಲ್ಲ" ಎಂದಳು. ಪುನಃ ದೇವತೆ ಗಳಿಗೆ ಆ ಸಂದೇಶವನ್ನು ತಿಳಿಸಿದ. ಸ್ವಯಂವರ ಮಂಟಪದಲ್ಲಿ ದೇವತೆಗಳು ತಾವೂ ನಳನಂತೆಯೇ ರೂಪ ಧರಿಸಿ ಕುಳಿತರು ದಮಯಂತಿಗೆ "ನಳ ಯಾರು?" ಎಂದು ಗುರುತು ಸಿಗಲಿಲ್ಲ. "ದೇವತೆ ಗಳ ಕೃತ್ಯವೇ ಇರಬೇಕು ಇದು" ಎಂದುಕೊಂಡು ಆ ದೇವತೆಗಳನ್ನೇ ಪ್ರಾರ್ಥಿಸಿದಳು. ಸಂತೋಷ ಪಟ್ಟ ದೇವತೆಗಳು ನಳನ ನಿಜರೂಪ, ಅವಳಿಗೆ ಗೋಚರವಾಗುವಂತೆ ಅನುಗ್ರಹಿಸಿದರು.

ನಳನಿಗೂ ವರಗಳನ್ನಿತ್ತು ಹೋದರು.

ನಳ, ದಮಯಂತಿಯರು ಒಂದಾದರು.

ಮುಂದೆ ಕಲಿಯ ಪ್ರಭಾವದಿಂದ ತಮ್ಮನಾದ ಪುಷ್ಕರನೊಡನೆ ನಳ ಜೂಜಾಡಿ ರಾಜ್ಯವನ್ನೆಲ್ಲ ಕಳೆದುಕೊಂಡ.

ಏಕವಸ್ತ್ರದಿಂದ ಕಾಡಿಗೆ ಹೊರಟ. ಆಗ ದಮಯಂತಿಯೂ ಅವನನ್ನು ಅನುಸರಿಸಿದಳು. ನಳ ಎಷ್ಟೋ ಹೇಳಿದ. "ರಾಜಕುಮಾರಿ, ನೀನು ಸುಖವಾಗಿ ಬೆಳೆದವಳು, ನೀ ಕಷ್ಟಪಡಬೇಡ, ನಿನ್ನ ತೌರುಮನೆಗೆ ಹೋಗು" ಎಂದ. ಆದರೆ, ದಮಯಂತಿ ಕಷ್ಟಕಾಲದಲ್ಲೂ ಪತಿಯನ್ನೇ ಅನುಸರಿಸಿದಳು.

ಆಹಾರಕ್ಕಾಗಿ ಪಕ್ಷಿಯನ್ನು ಹಿಡಿಯಲು ಉಟ್ಟ-ವಸ್ತ್ರವನ್ನು ಬಲೆಯಂತೆ ಬೀಸಿದಾಗ ಕಲಿ-ದ್ವಾಪರ ರೂಪದ ಪಕ್ಷಿಗಳು ಆ ವಸ್ತ್ರವನ್ನೂ ಹಾರಿಸಿಕೊಂಡು ಹೋದವು.

ದಮಯಂತಿಯ ವಸ್ತ್ರದಲ್ಲೇ ತಾನು ಪಾಲು ತೆಗೆದುಕೊಂಡು ನಳ ದಮಯಂತಿಯೊಡನೆ ಕಾಡಿನಲ್ಲಿ ಮಲಗಿದ. ರಾಜ್ಯ ಕೋಶ ಎಲ್ಲ ಕಳೆದುಕೊಂಡಿದ್ದರೂ ದಮಯಂತಿಗೆ ಪತಿ ಪಕ್ಕದಲ್ಲಿರುವುದೇ ಸಮಾಧಾನ. ಆದರಿಂದ ನೆಮ್ಮದಿಯಾಗಿ ನಿದ್ರಿಸುತ್ತಿದ್ದಳು. ಆ ವೇಳೆಯಲ್ಲಿ ಮೆಲ್ಲಗೆ ವಸ್ತ್ರವನ್ನು ಹರಿದುಕೊಂಡು ನಳ ಅಲ್ಲಿಂದ ಹೊರಟ.

ಪತಿ ಬಿಟ್ಟುಹೋದಮೇಲೆ ಹೇಗೋ ಬಹಳ ಕಷ್ಟಪಟ್ಟು ತಂದೆಯ ಮನೆ ಸೇರಿದಳು. ಪುನಃ ಬುದ್ಧಿಚಾತುರ್ಯದಿಂದ ನಳನನ್ನು ಪತ್ತೆಹಚ್ಚಿ ಅವನನ್ನೇ ಸೇರಿದಳು. ರಾಜ್ಯವನ್ನು ಪಡೆದಳು.

ದಮಯಂತಿ ನಳ ರಾಜ್ಯವನ್ನು ಕಳೆದುಕೊಂಡಾಗಲೂ ಅವನನ್ನು ಬಿಡಲಿಲ್ಲ. ಹಾಗೆಯೇ ನಾನೂ ರಾಮನನ್ನೇ ಅನುವರ್ತಿಸತಕ್ಕವಳು. ರಾಮನಿಗೆ ರಾಜ್ಯ ಇರಲಿ – ಇಲ್ಲದಿರಲಿ – ಅವನು ದೀನನಾಗಿರಲಿ, ಅನಾಥನಾಗಿರಲಿ – ಅವನೇ ನನ್ನ ಪತಿ–ಅವನ ಭುಜವನ್ನು ಆಶ್ರಯಿಸಿದ ನಾನು ಮತ್ತೊಬ್ಬರನ್ನು ಕಣ್ಣೆತ್ತಿಯೂ ನೋಡುವುದಿಲ್ಲ–ಇದು ನಿಶ್ಚಯ_ರಾಕ್ಷಸಿಯರೇ ಇನ್ನು ನನ್ನನ್ನು ಹಿಂಸಿಸಬೇಡಿ" ಎಂದಳು ಸೀತೆ.

ಸೀತೆಯ ಮಾತನ್ನು ಕೇಳಿದ ರಾಕ್ಷಸಿಯರ ಕೋಪ ನೆತ್ತಿಗೇರಿತು. ಎಲ್ಲರೂ ಶೂಲವನ್ನೂ ಕತ್ತಿಯನ್ನೂ, ಪರಿಘವನ್ನೂ ಹಿಡಿದು ಸೀತೆಯ ಸುತ್ತಲೂ ನಿಂತು "ಏನು ಹೇಳಿದೆ ? ರಾವಣನನ್ನು ವರಿಸುವುದಿಲ್ಲವೆ ? ನೀನು ರಾವಣನನ್ನು ಪತಿಯನ್ನಾಗಿ ಇಚ್ಛಿಸದಿದ್ದರೆ ಇಗೋ ! ಈಗಲೇ ನಿನ್ನನ್ನು ಕೊಂದು ತಿಂದುಬಿಡುತ್ತೇವೆ_ ಬೇಗ ರಾವಣನನ್ನು ಆಶ್ರಯಿಸು. ಇಲ್ಲವಾದರೆ ಇಗೋ ನಾವೆಲ್ಲ ನಿನ್ನನ್ನು ಕಚ್ಚಿ ಕಚ್ಚಿ ತಿಂದು ಹಾಕಿಬಿಡುತ್ತೇವೆ" ಎಂದು ಬೆದರಿಸಿದರು.

ಹುಲಿಗಳ ಮಧ್ಯೆ ಸಿಕ್ಕಿಕೊಂಡ ಹರಿಣಿಯಂತೆ ಸೀತೆ ಭಯದಿಂದ ಅಳತೊಡಗಿದಳು. ಆಗ, ತ್ರಿಜಟೆ ಎಂಬ ರಾಕ್ಷಸಿ ಎದ್ದಳು. ಅವಳು "ರಾಕ್ಷಸಿಯರೇ, ಸೀತೆಯನ್ನು ಹಿಂಸಿಸಬೇಡಿ, ಅವಳನ್ನು ಕೊಲ್ಲಬೇಡಿ. ನಾ ಒಂದು ಭಯಂಕರವಾದ ಮೈ ಜುಮ್ಮೆನ್ನುವ ರೋಮಾಂಚಕರವಾದ ಸ್ವಪ್ನ ಕಂಡಿದೇನೆ" ಎಂದಳು.

ಎಲ್ಲ ರಾಕ್ಷಸಿಯರು ಅದೇನು ಹೇಳು, ನಿನ್ನ ಸ್ವಪ್ನ ಎಂದರು.

ಆಗ ತ್ರಿಜಟೆ ತಾನು ಕಂಡ ಸ್ವಪ್ನ ವೃತ್ತಾಂತವನ್ನು ತಿಳಿಸಿದಳು. "ಎತ್ತರವಾದ ಐರಾವತದ ಮೇಲೆ ಅಂಬಾರಿಯಲ್ಲಿ ರಾಮ ಕುಳಿತಿದ್ದುದನ್ನು ಕಂಡೆ. ಬಿಳಿಯ ವಸ್ತ್ರಗಳಿಂದಲೂ, ಬಿಳಿಯ ಹೂವುಗಳಿಂದಲೂ, ಆಭರಣಗಳಿಂದಲೂ ಅಲಂಕೃತನಾಗಿದ್ದ ರಾಮ ಅವನ ಭುಜವನ್ನು ಒರಗಿ ಶ್ವೇತವಸ್ತ್ರವನ್ನುಟ್ಟು, ಸಕಲಾಭರಣಗಳಿಂದ ಭೂಷಿತಳಾದ ಜಾನಕಿ ನಿಂತಿದ್ದಳು. ನೂರಾರು ಬಿಳಿಯ ಹಂಸಗಳಿಂದ ಕಟ್ಟಲ್ಪಟ್ಟ ದಿವ್ಯವಾದ ವಿಮಾನದಲ್ಲಿ ಸೀತಾರಾಮರು ಕುಳಿತು ಉತ್ತರದಿಕ್ಕನ್ನು ಕುರಿತು ಪ್ರಯಾಣ ಮಾಡಿದಂತೆ ಕಂಡೆ.

ರಾವಣ, ಕುಂಭಕರ್ಣ, ಅವನ ಅನುಚರರು ಎಲ್ಲ ತಲೆಗೆ ಎಣ್ಣೆಯನ್ನು ಹಚ್ಚಿ ಮೈಗೆಲ್ಲಾ ಎಣ್ಣೆಯನ್ನು ಬಳಿದುಕೊಂಡು ರಕ್ತ ವಸ್ತ್ರವನ್ನುಟ್ಟು ಕತ್ತೆಯಮೇಲೆ ಕುಳಿತು ದಕ್ಷಿಣದಿಕ್ಕಿನ ಕಡೆ ಹೋಗುತ್ತಿರುವಂತೆ ಕಂಡೆ. ರಾವಣ ಹೋಗುತ್ತಿದ್ದಂತೆ ಆಳವಾದ ಸಗಣಿಯ ಗುಂಡಿಯಲ್ಲಿ ಬಿದ್ದಂತೆ ಕಂಡೆ.

ವಿಭೀಷಣ ಒಬ್ಬ ಮಾತ್ರ ಬಿಳಿಯ ವಸ್ತ್ರಗಳಿಂದಲೂ, ಬಿಳಿಯ ಪುಷ್ಪಗಳಿಂದಲೂ ಅಲಂಕೃತ

ನಾಗಿ ಸಿಂಹಾಸನದ ಮೇಲೆ ಶ್ವೇತಚ್ಛತ್ರದ ನೆರಳಿನಲ್ಲಿ ಕುಳಿತಂತೆ ಕಂಡೆ. ಅವನ ಸುತ್ತಲೂ ನಾಲ್ಕು ಮಂದಿ ರಾಕ್ಷಸರು ಬಿಳಿಯ ಚಾಮರಗಳನ್ನು ಬೀಸುತ್ತಿದ್ದಂತೆ ಕಂಡೆ.

ಇದರಿಂದ ರಾವಣನಿಗೆ ವಿಪತ್ತಿನ ಕಾಲ ಪ್ರಾಪ್ತವಾಗಿದೆ ಎಂದು ಗೊತ್ತಾಗುತ್ತದೆ. ರಾಮ ಸಾಮಾನ್ಯನಲ್ಲ, ಸಾಕ್ಷಾತ್ ವಿಷ್ಣುವೇ ರಾಮರೂಪದಲ್ಲಿ ಬರುತ್ತಾನೆ. ಅವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ರಾಮ ಬಂದು ರಾವಣನನ್ನು ನಿಗ್ರಹಿಸಿ ಸೀತೆಯೊಡನೆ ಅಯೋಧ್ಯೆ ಯಲ್ಲಿ ಪಟ್ಟಾಭಿಷೇಕ ಮಾಡಿಕೊಳ್ಳುತ್ತಾನೆ. ವಿಜಯ ರಾಮನಿಗೇ ! ಇದು ಖಂಡಿತ. ಆದ್ದರಿಂದ, ರಾಕ್ಷಸಿಯರೇ, ಸೀತೆಯನ್ನು ಹಿಂಸೆಮಾಡಬೇಡಿ.

ನಾವೆಲ್ಲ ಸೀತೆಯನ್ನೇ ಶರಣು ಹೊಂದೋಣ. ಆಗ ಮಾತ್ರ ನಾವು ಉಳಿಯಬಲ್ಲೆವು" ಎಂದಳು ತ್ರಿಜಟೆ.

ವಾಲ್ಮೀಕಿ ಸೃಷ್ಟಿಯ ಅಮೋಘವಾದ ಪಾತ್ರಗಳಲ್ಲಿ ತ್ರಿಜಟೆಯ ಪಾತ್ರವೂ ಒಂದು. ತ್ರಿಜಟೆ ರಾಕ್ಷಸಿ. ಅವಳಿಂದ ವಾಲ್ಮೀಕಿ ರಾಮನ ಪ್ರಭಾವವನ್ನು ಹೇಳಿಸುತ್ತಾರೆ. ತ್ರಿಜಟೆ ಹೇಳುವಂತೆಯೇ ಎಲ್ಲವೂ ಮುಂದೆ ನಡೆಯುತ್ತದೆ.

ತ್ರಿಜಟೆ ರಾಕ್ಷಸಿಯರನ್ನು ಕುರಿತು "ಶರಣಾಗತರಾಗಿ" ಎಂದು ಹೇಳಿದಳು. ಆದರೆ, ರಾಕ್ಷಸಿ ಯರು ಸುಮ್ಮನೇ ಇದ್ದರು. ''ಆಗಲಿ'' ಎಂದು ಹೇಳಲಿಲ್ಲ–"ಇಲ್ಲ" ಎಂದೂ ಹೇಳಲಿಲ್ಲ.

ಆಗ ಸೀತೆ ತಾನಾಗಿಯೇ "ತ್ರಿಜಟೆ! ನೀನು ಹೇಳಿದಂತೆಯೇ ಎಲ್ಲವೂ ನಡೆದರೆ ನಾನು ನಿಮಗೆ ರಕ್ಷಣೆ ಕೊಡುತ್ತೇನೆ" ಎಂದು ಹೇಳಿದಳು.

ದೇವಿಯ ಕಾರುಣ್ಯ ಆಳವಿಲ್ಲದುದು ! ಶರಣಾಗತರನ್ನು ರಕ್ಷಿಸುವವ ರಾಮ. ಆದರೆ, ಶರಣಾಗತರಲ್ಲದವರನ್ನೂ, ತನಗೆ ಹಿಂಸೆ ಕೊಡುತ್ತಿರುವವರನ್ನೂ ರಕ್ಷಿಸುವ ಕ್ಷಮಾಶೀಲೆ, ಕಾರುಣ್ಯ ನಿಧಿ, ಸೀತೆ. ಈ ಕಾರುಣ್ಯವನ್ನು ಪರಾಶರಭಟ್ಟರು ಶ್ರೀಗುಣರತ್ನಕೋಶದಲ್ಲಿ ಅತ್ಯಂತ ಸುಂದರ ವಾಗಿ ಬಣ್ಣಿಸಿದ್ದಾರೆ.

**ಮಾತರ್ಮೈಥಿಲಿ ರಾಕ್ಷಸೀಸ್ತ್ವಯಿ ತದೈವಾರ್ದ್ರಾಪರಾಧಾಃ ತ್ವಯಾ ।**
**ರಕ್ಷಂತ್ಯಾ ಪವನಾತ್ಮಜಾತ್ ಲಘುತರಾ ರಾಮಸ್ಯ ಗೋಷ್ಠೀಕೃತಾ ॥**
**ಕಾಕಂತಂಚ ವಿಭೀಷಣಂ ಶರಣಮಿತ್ಯುಕ್ತಿಕ್ಷಮೌ ರಕ್ಷತಃ ।**
**ಸಾನಸ್ಸಾಂದ್ರ ಮಹಾಗಸಸ್ಸುಖಯತು ಕ್ಷಾಂತಿಸ್ತವಾಕಸ್ಮಿಕೀ ॥**

ತ್ರಿಜಟೆ ಹೇಳಿದ ಮಾತನ್ನು ಕೇಳಿದ ರಾಕ್ಷಸಿಯರೆಲ್ಲ ಸೀತೆಯನ್ನು ಹಿಂಸಿಸುವುದನ್ನು ನಿಲ್ಲಿಸಿ ನಿದ್ದೆ ಮಾಡತೊಡಗಿದರು.

ರಾಕ್ಷಸಿಯರೆಲ್ಲ ನಿದ್ದೆ ಮಾಡುತ್ತಿರುವುದನ್ನು ಕಂಡು ಸೀತೆ ಶಿಂಶುಪಾವೃಕ್ಷದ ಕೊಂಬೆಯ ಕೆಳಗೆ ಬಂದು ನಿಂತು ದುಃಖಿಸಲು ಆರಂಭಿಸಿದಳು.

''ಹಾ ರಾಮಾ ! ಸತ್ಯವ್ರತಾ, ದೀರ್ಘಬಾಹು, ವಿಶಾಲಾಕ್ಷ, ನನ್ನನ್ನು ಮರೆತೆಯೆಂದೇ ಕಾಣುತ್ತದೆ. ಅದಕ್ಕೇ ಇಷ್ಟು ದಿನಗಳಾದರೂ ನೀ ಬರಲಿಲ್ಲ. ನಿನ್ನನ್ನು ಆಶ್ರಯಿಸಿದವಳು ನಾನು. ನನ್ನನ್ನು ರಕ್ಷಿಸುವ ಭಾರ ನಿನ್ನದಲ್ಲವೆ ?

ಹಾ ಲಕ್ಷ್ಮಣಾ, ರಾಮಾನುಜಾ ! ನೀನಾದರೂ ಏಕೆ ಸುಮ್ಮನಿರುವೆ ? ನಾನು ನಿನ್ನನ್ನು ಕ್ರೂರವಾದ ಮಾತುಗಳನ್ನಾಡಿ ನೋಯಿಸಿದೆ ಎಂದು ನಿನಗೆ ಕೋಪವೆ ? ಸೌಮಿತ್ರಿ ! ನೀನೇಕೆ ನಿನ್ನ ಅಣ್ಣನನ್ನು ನನ್ನನ್ನು ರಕ್ಷಿಸುವ ಕಾರ್ಯದಲ್ಲಿ ಹುರಿದುಂಬಿಸದೆ ಇದ್ದೀಯೋ ? ಅಥವಾ ರಾಮ ಲಕ್ಷ್ಮಣರನ್ನು ಮೋಸದಿಂದ ರಾವಣ ಕೊಂದೇ ಬಿಟ್ಟಿರುವನೋ ಏನೋ !

ಛೆ ! ಹಾಗೆಂದಿಗೂ ಆಗದು. ರಾಮ ಸಾಮಾನ್ಯನೇ ! ಮಹಾ ಭಯಂಕರನಾದ ವಿರಾಧ ನನ್ನು ಸಂಹರಿಸಿದ. ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರನ್ನು ಏಕಾಕಿಯಾಗಿ ಮುಹೂರ್ತಾರ್ಧದಲ್ಲಿ ನಾಶಮಾಡಿದ. ದೇವತೆಗಳು, ಯಕ್ಷರು, ಕಿನ್ನರರು, ಎಲ್ಲರೂ ಒಟ್ಟಾಗಿ ಬಂದರೂ ರಾಮನನ್ನು ಇದಿರಿಸಲು ಶಕ್ತರಾಗರು, ಎಂದಮೇಲೆ ಈ ರಾಕ್ಷಸರು ಇದಿರೆ ? ರಾಮಾ ! ನೀ ಏಕೆ ಇನ್ನೂ ಬರಲಿಲ್ಲ.

ನಿನ್ನ ಆ ದೀರ್ಘವಾದ ಬಾಹುಗಳು ಇನ್ನೂ ಸುಮ್ಮನೆ ಇವೆಯೇಕೆ ? ಶರಣಾಗತರನ್ನು ರಕ್ಷಿಸುವ ಸಲುವಾಗಿ ತಾನೇ ಆ ಅಂದವಾದ ತೋಳುಗಳು ನಿನಗಿರುವುದು ? ರಾಮಾ ! ಪುಂಡರೀಕ ದಂತೆ ವಿಶಾಲವಾದ ಆ ನೇತ್ರಗಳನ್ನು ಕಾಣುವ ಭಾಗ್ಯ ನನಗೆ ಯಾವಾಗ ಲಭಿಸುವುದೋ ಕಾಣೆನಲ್ಲಾ ?

ನಿನಗಾಗಿ ನಾನು ತಪಸ್ಸನ್ನು ಮಾಡುತ್ತಾ ನಿಯತವ್ರತಳಾಗಿ ಭೂಮಿಯಲ್ಲಿ ಮಲಗುತ್ತ ನಿಯಮವನ್ನು ಪಾಲಿಸುತ್ತ ಬಂದಿರುವೆ. ಆ ಪಾತಿವ್ರತ್ಯಕ್ಕೆ ಪ್ರಭಾವವೇ ಇಲ್ಲವೆ ? ಹಿಂದೆ ನನ್ನ ತಂದೆಯ ಮನೆಯಲ್ಲಿದ್ದಾಗ ಹಿರಿಯರು, ಜ್ಞಾನಿಗಳು "ಅಮ್ಮಾ, ಜಾನಕಿ. ನೀನು ಸರ್ವಲಕ್ಷಣ ಸಂಪನ್ನೆ, ನೀನು ಚಕ್ರವರ್ತಿನಿ ಆಗುವೆ" ಎಂದಿದ್ದರು. ಅವರ ಮಾತು ಸುಳ್ಳಾಗುವ ಕಾಲ ಬಂದಿತಲ್ಲಾ ! ಅಯ್ಯೋ ! ಯಾರನ್ನು ಹೇಳಿ ಏನು ಉಪಯೋಗ ? ನಾ ಮಾಡಿದ ದುಷ್ಕರ್ಮದ ಫಲ ವನ್ನು ನಾ ಅನುಭವಿಸುತ್ತಾ ಇದೇನೆ. ಇಲ್ಲವಾಗಿದ್ದರೆ, ಸಕಲ ಕಲ್ಯಾಣಗುಣ ಪರಿಪೂರ್ಣನಾದ ರಾಮನು ಪಕ್ಕದಲ್ಲಿರುವಾಗ ಒಂದು ಕ್ಷುದ್ರವಾದ ಚಿನ್ನದ ಜಿಂಕೆಗೆ ಆಸೆ ಪಡುತ್ತಿದ್ದೇನೇ ?

ರಾಘವಾ ! ಚಂದ್ರಬಿಂಬದಂತೆ ಸಂತೋಷವನ್ನುಂಟುಮಾಡುವ ನಿನ್ನ ಮುಖವನ್ನು ಕಾಣದೆ ನಾನು ಜೀವಿಸಿರಲು ಸಾಧ್ಯವಿಲ್ಲ, ನೀನು ತಂದೆಯ ಆಜ್ಞೆಯನ್ನು ಪರಿಪಾಲಿಸಿ ಹಿಂದಿರುಗಿ ಅಯೋಧ್ಯೆಗೆ ಹೋಗುವಿ. ಅಲ್ಲಿ ನಿನಗೇನು ! ಅತ್ಯಂತ ಸುಂದರಿಯರಾದ ಇಂದುಮುಖಿಯರು, ಕಮಲನೇತ್ರೆಯರು ದೊರಕಿಯಾರು. ಅವರನ್ನು ನೀನು ವರಿಸಿ ಸುಖವಾಗಿ ಪಟ್ಟಾಭಿಷೇಕ ಮಾಡಿ ಕೊಂಡು ಭೋಗವನ್ನು ಅನುಭವಿಸು.

ಆದರೆ, ನಾನು ಮಾತ್ರ ಇಲ್ಲಿ ಅನಾಥಯಂತೆ, ಹತಭಾಗಿನಿಯಾಗಿ, ಈ ರಾಕ್ಷಸಿಯರ ಮಧ್ಯೆ ಕಷ್ಟವನ್ನನುಭವಿಸುತ್ತಾ, ಇರಬೇಕಾಗಿದೆ. ಇಲ್ಲ, ರಾಮಾ ನಿನ್ನನ್ನಗಲಿ ನಾ ಇನ್ನು ಒಂದರೆಕ್ಷಣ ಜೀವಿಸುವುದಿಲ್ಲ. ಹೇಗಾದರೂ ಸರಿ. ಈ ವೇದನೆಯನ್ನು ನಾನು ಸಹಿಸಲಾರೆ. ಇದು ನನ್ನನ್ನು ದಹಿಸುತ್ತಿದೆ. ಯಾವ ರೀತಿಯಲ್ಲಾದರೂ ಪ್ರಾಣ ಕಳೆದುಕೊಳ್ಳುತ್ತೇನೆ.

ಅಯ್ಯೋ ಇಲ್ಲಿ ಪ್ರಾಣ ಕಳೆದುಕೊಳ್ಳುವುದಾದರೂ ಹೇಗೆ! ವಿಷವನ್ನಾದರೂ ತಿಂದು ಪ್ರಾಣ ಬಿಡೋಣ ಎಂದರೆ ಇಲ್ಲಿ ನನಗೆ ವಿಷವನ್ನು ಯಾರು ಕೊಡುತ್ತಾರೆ ? ಶಸ್ತ್ರದಿಂದ ಘಾತಿಸಿ ಕೊಳ್ಳೋಣ ಎಂದರೆ ಎಲ್ಲಿಂದ ಶಸ್ತ್ರವನ್ನು ತರುವುದು ?

ಹಾ ! ಹೊಳೆಯಿತು. ಇದೇ ಸರಿಯಾದ ಉಪಾಯ "ನನ್ನ ಈ ನೀಳವಾದ ಕೇಶರಾಶಿಯನ್ನು ಕತ್ತಿಗೆ ಸುತ್ತಿಕೊಂಡು ಅಶೋಕವೃಕ್ಷದ ಶಾಖೆಗೆ ನೇಣುಹಾಕಿಕೊಂಡು ಸಾಯುತ್ತೇನೆ. ಅದೇ ಸರಿ !" ಎಂದು ಬಹಳವಾಗಿ ವಿಲಪಿಸಿ ಸೀತೆ ಶಿಂಶುಪಾವೃಕ್ಷದ ಶಾಖೆಯತ್ತ ನಡೆದಳು. ಅಲ್ಲಿ ನಿಂತು ರಾಮನನ್ನೂ, ರಾಮಾನುಜನಾದ ಲಕ್ಷ್ಮಣನನ್ನೂ ಪುನಃಪುನಃ ಸ್ಮರಿಸಿಕೊಂಡು "ಪ್ರಾಣ ಬಿಡೋಣ" ಎಂದು ಸಿದ್ಧಳಾಗುತ್ತಿದ್ದ ಸಮಯದಲ್ಲಿ ಸೀತೆಗೆ ಅನೇಕ ಶುಭಶಕುನಗಳಾದವು

**ಶುಭಾಂ ನಿಮಿತ್ತಾನಿ ಶುಭಾನಿ ಭೇಜಿರೇ**

**ನರಂ ಶ್ರಿಯಾಜುಷ್ಟಮಿವೋಪಜೀವಿನಃ ।**

ಶುಭಶಕುನಗಳೆಲ್ಲ ಸೀತೆಯನ್ನು ಹಣವಂತನನ್ನು ಸೇವಿಸುವ ಅನುಚರರಂತೆ ಸೇವಿಸತೊಡಗಿದವು.

ಸೀತೆಯ ಎಡಗಣ್ಣು ಅದುರಿತು. ಎಡತೊಡೆ, ಎಡಬಾಹು ಅದುರಿತು. ಈ ಶುಭಶಕುನವನ್ನು ಗಮನಿಸಿದ ಸೀತೆಯ ಮುಖ ರಾಹುವಿನಿಂದ ಮುಕ್ತನಾದ ಚಂದ್ರನಂತೆ ಹೊಳೆಯಿತು.

ಶಿಂಶುಪಾವೃಕ್ಷದಲ್ಲಿ ಅಡಗಿ ಕುಳಿತಿದ್ದ ಹನುಮಂತ ಎಲ್ಲವನ್ನೂ ಗಮನಿಸಿದ. ರಾವಣ ಬಂದು ಹೋದದ್ದು, ರಾಕ್ಷಸಿಯರ ಘರ್ಜನೆ, ಸೀತೆಯ ದುಃಖ, ಎಲ್ಲವನ್ನೂ ನೋಡಿದ.

ಸೀತೆ ಈಗ ದುಃಖಿತಳಾಗಿದ್ದಾಳೆ. ಅವಳನ್ನು ಸಮಾಧಾನಪಡಿಸಬೇಕಾದುದು ನನ್ನ ಧರ್ಮ ಅವಳನ್ನು ಸಮಾಧಾನಪಡಿಸದೆ ಇದ್ದರೆ ಸೀತೆ ಪ್ರಾಣ ಕಳೆದುಕೊಳ್ಳುವುದು ನಿಶ್ಚಯ. ಆಗ ನಾನು ರಾಮನಿಗೆ ಏನೆಂದು ಹೇಳಲಿ ? ''ಸೀತೆ ಇಲ್ಲ'' ಎಂಬ ಮಾತನ್ನು ಕೇಳಿ ರಾಮ ಜೀವಿಸುವನೆ ? ನಾ ಇಲ್ಲಿಗೆ ಬಂದದ್ದೂ ವ್ಯರ್ಥವಾಗುತ್ತದೆ. ಆದ್ದರಿಂದ ಸೀತೆಯನ್ನು ಸಮಾಧಾನಪಡಿಸಲೇ ಬೇಕು.

ಆದರೆ, ಸಮಾಧಾನಮಾಡುವುದಾದರೂ ಹೇಗೆ ? ಈ ರಾಕ್ಷಸಿಯರ ಮಧ್ಯೆ ಮಾತಾಡುವುದು ಸಲ್ಲದು ಎಂದು ಇದುವರೆಗೆ ಸುಮ್ಮನೆ ಇದ್ದೆ. ಈಗ ಇವರೆಲ್ಲ ನಿದ್ರಿಸುತ್ತಿದ್ದಾರೆ. ಸೀತೆಯೋ ನೇಣುಹಾಕಿಕೊಳ್ಳಲು ಸಿದ್ಧಳಾಗುತ್ತಿದ್ದಾಳೆ. **ಈಗ ಯಾವ ಭಾಷೆಯಲ್ಲಿ ಮಾತಾಡಲಿ ? ದ್ವಿಜಾತಿಯ ಭಾಷೆಯಾದ ಸಂಸ್ಕೃತದಲ್ಲಿ** ಮಾತನಾಡಿದರೆ ನನ್ನನ್ನು "ರಾವಣ" ಎಂದುಕೊಂಡಾಳು **ಆದ್ದರಿಂದ ಮಾನುಷ ಪ್ರಚಲಿತ ಭಾಷೆಯಲ್ಲೇ ಮಾತಾಡಬೇಕು** ಹೀಗೆಲ್ಲ ಯೋಚಿಸಿ ಬುದ್ಧಿವಂತರಲ್ಲಿ ಶ್ರೇಷ್ಠನಾದ ಹನುಮಂತ ಮಧುರವಾಗಿ ರಾಮಕಥೆಯನ್ನು ಹೇಳತೊಡಗಿದ.

"ರಾಜಾ, ದಶರಥೋ ನಾಮ ರಥಕುಂಜರ ವಾಜಿಮಾನ್" ಎಂದು ದಶರಥನ ಕೀರ್ತಿಯನ್ನು ಹೇಳಿ, ದಶದಿಶೆಗಳಲ್ಲೂ ತಡೆಯಿಲ್ಲದೆ ರಥವನ್ನು ಬಿಡುವ ಸಾಮರ್ಥ್ಯ ಉಳ್ಳ, ಪುಣ್ಯಶೀಲ, ಮಹಾ ಕೀರ್ತಿವಂತನಾದ ದಶರಥನಿಗೆ ಹಿರಿಯ ಮಗನೆನಿಸಿದ ರಾಮ. ಇಕ್ಷ್ವಾಕುವಂಶದ ಕೀರ್ತಿಯನ್ನು ಅಭಿವೃದ್ಧಿ ಮಾಡುವ ರಾಮ ಚಂದ್ರನಂತೆ ಕಾಂತಿಯುಳ್ಳ ಮುಖವುಳ್ಳವನು, ಧನುರ್ಧಾರಿಗಳಲ್ಲಿ ಶ್ರೇಷ್ಠ, ಸಜ್ಜನರನ್ನು ಯಾವ ತೊಂದರೆಯೂ ಆಗದಂತೆ ರಕ್ಷಿಸುವವನು, ಇಡೀ ಜೀವಲೋಕಕ್ಕೇ ಸ್ವಾಮಿಯೆನಿಸಿಕೊಂಡವ, ಧರ್ಮಜ್ಞ, ಸತ್ಯವಂತ, ಶೀಲಸಂಪನ್ನ—ಇಂಥ ಶ್ರೇಷ್ಠಗುಣಗಳುಳ್ಳ ರಾಮ ತಂದೆಯ ಆಜ್ಞೆಯನ್ನು ಪಾಲಿಸಲು ತಮ್ಮನಾದ ಲಕ್ಷ್ಮಣನೊಡನೆ, ಪತ್ನಿಯಾದ ಸೀತೆಯೊಡನೆ ಅರಣ್ಯಕ್ಕೆ ಬಂದ. ಅಲ್ಲಿ ರಾವಣ ಎಂಬ ರಾಕ್ಷಸ ಸೀತೆಯನ್ನು ಅಪಹರಿಸಲು, ರಾಮ ಲಕ್ಷ್ಮಣನೊಡನೆ ಸೀತೆಯನ್ನು ಹುಡುಕುತ್ತಾ ಬರುತ್ತಿರುವಾಗ ಸುಗ್ರೀವನೆಂಬ ವಾನರ ರಾಜನೊಡನೆ ಸ್ನೇಹವಾಯಿತು. ರಾಮ ಒಂದೇ ಬಾಣದಿಂದ ಸುಗ್ರೀವನ ಅಣ್ಣನಾದ ವಾಲಿಯನ್ನು

ನಿಗ್ರಹಿಸಿ ಸುಗ್ರೀವನಿಗೆ ರಾಜ್ಯವನ್ನು ನೀಡಿದ. ಸೀತೆಯನ್ನು ಹುಡುಕುವ ಸಲುವಾಗಿ ಸುಗ್ರೀವ ದಶದಿಕ್ಕಿಗೂ ವಾನರರನ್ನು ಕಳುಹಿಸಿದ. ದಕ್ಷಿಣ ದಿಕ್ಕಿಗೆ ಹೊರಟ ವಾನರರಲ್ಲಿ ನಾನು ಸಂಪಾತಿಯ ವಚನದಂತೆ ಸಮುದ್ರವನ್ನು ಹಾರಿ ಲಂಕೆಯನ್ನು ಪ್ರವೇಶಿಸಿದೆ. ಲಂಕೆಯಲ್ಲಿ ಸೀತೆಯನ್ನು ಹುಡುಕುತ್ತಾ ಇಲ್ಲಿಗೆ ಬಂದೆ.

ರಘುನಾಥ ಹೇಳಿದಂತೆಯೇ ಲಕ್ಷಣವುಳ್ಳ, ರೂಪವುಳ್ಳ ಆ ದೇವಿಯನ್ನು ನೋಡುತ್ತಿದೇನೆ" ಎಂದು ಹೇಳಿ ಸುಮ್ಮನಾದ,

ಅನಿರೀಕ್ಷಿತವಾದ ಈ ಮಧುರ ವಚನಗಳನ್ನು ಕೇಳಿ ಸೀತೆ ವಿಸ್ಮಿತಳಾದಳು. ಆಶ್ಚರ್ಯದಿಂದ ಆ ಶಬ್ದ ಕೇಳಿಸಿದ ಕಡೆಗೆ ತನ್ನ ಗುಂಗುರು ಕೂದಲನ್ನು ಓರೆ ಮಾಡಿ ನೋಡಿದಳು. ಅಲ್ಲಿ, ಮರದ ಮೇಲೆ ಉದಯಾಚಲದಲ್ಲಿ ಉದಯಿಸುತ್ತಿರುವ ಸೂರ್ಯನಂತೆ ಬೆಳಗುತ್ತಿರುವ ವಾನರಶ್ರೇಷ್ಠ ಹನುಮಂತನನ್ನು ಕಂಡಳು.

ಆಂಜನೇಯ ಮಧುರವಾದ ವಚನಗಳನ್ನು ಹೇಳಿದ. ಸೀತೆ ಅದನ್ನು ಕೇಳಿ ಸಂತೋಷ ಪಟ್ಟಳು.

ಇಲ್ಲಿ, ಆಂಜನೇಯ ಆಚಾರ್ಯಸ್ಥಾನದಲ್ಲಿದಾನೆ. ಆಚಾರ್ಯನಾದವ ಎತ್ತರವಾದ ಪೀಠದಲ್ಲಿ ಕುಳಿತು ಶಿಷ್ಯನಿಗೆ ಮಧುರವಾದ ಭಗವದ್ಗುಣಗಳನ್ನು ವರ್ಣಿಸಿ ಶಿಷ್ಯನ ಮನಸ್ಸಿನ ತಾಪವನ್ನು ಹೋಗಲಾಡಿಸುತ್ತಾನೆ ಎಂದು ತಾತ್ಪರ್ಯ.

ಸೀತೆ ವಾನರಶ್ರೇಷ್ಠನಾದ ಆಂಜನೇಯನನ್ನು ಕಂಡಳು. ತನ್ನಲ್ಲಿ ಯೋಚಿಸತೊಡಗಿದಳು. "ಇದೇನು, ಸ್ವಪ್ನವೇ? ಸ್ವಪ್ನದಲ್ಲಿ ಕಪಿಯನ್ನು ನೋಡಬಾರದು ಎನ್ನುತ್ತಾರಲ್ಲಾ" ಎಂದುಕೊಂಡು ತನ್ನ ಪ್ರಿಯನಾದ ರಾಮನಿಗೆ, ರಾಮಾನುಜನಾದ ಲಕ್ಷ್ಮಣನಿಗೆ ತಂದೆಯಾದ ಜನಕನಿಗೆ ಮಂಗಳವನ್ನು ಕೋರಿದಳು.

ಮತ್ತೆ "ಸ್ವಪ್ನವಲ್ಲಿ ಬಂತು ! ನನಗೆ ಪ್ರಿಯವಿರಹದಿಂದ ನಿದ್ದೆಯೇ ಇಲ್ಲದಿರುವಾಗ ಸ್ವಪ್ನ ಹೇಗೆ ಬಂದೀತು ! ಇದು ಯಾರು_ನಾ ನೋಡಿದ್ದು. ತನ್ನ ಸ್ವರೂಪವನ್ನು ಪ್ರಕಾಶಪಡಿಸಲಿ" ಎಂದುಕೊಂಡು "ನಮೋಸ್ತು ವಾಚಸ್ಪತಯೇ ಸವಜ್ರಿಣೇ, ಸ್ವಯಂಭುವೇ ಚೈವ ಹುತಾಶನಾಯಚ."

ಬೃಹಸ್ಪತಿಯನ್ನೂ, ಇಂದ್ರನನ್ನೂ, ಬ್ರಹ್ಮನನ್ನೂ, ಅಗ್ನಿಯನ್ನೂ ದೇವತೆಗಳನ್ನೂ ನಮಿಸಿದಳು.

ಮೆಲ್ಲಗೆ ಹನುಮಂತ ಇಳಿದು ಸೀತೆಯ ಇದಿರಿನಲ್ಲಿ ಬಂದು ನಿಂತ. ಕೈಗಳನ್ನು ಜೋಡಿಸಿಕೊಂಡು ವಿನೀತ ಭಾವದಿಂದ "ತಾಯಿ. ಪದ್ಮಪಲಾಶಾಕ್ಷಿ ನೀನು ಯಾರು ? ನೀ ಏಕೆ ಅಶೋಕ ವೃಕ್ಷದ ಶಾಖೆಯನ್ನು ಅವಲಂಬಿಸಿ ನಿಂತು ದುಃಖಿಸುತ್ತಿದ್ದೀಯೆ ? ತಾವರೆಯ ಪತ್ರದಿಂದ ನೀರು ಬೀಳುತ್ತಿರುವಂತೆ ನಿನ್ನ ತಾವರೆಯಂಥ ಕಣ್ಣುಗಳಿಂದ ನೀರು ಉದುರಲು ಕಾರಣವೇನು ? ನಿನ್ನ ಸೌಂದರ್ಯ ಅಪ್ರತಿಮವಾದುದು. ನೀನು ದೇವಸ್ತ್ರೀಯೆ ? ನಾಗಸ್ತ್ರೀಯೆ ? ಗಂಧರ್ವಿಯೆ ? ಕಿನ್ನರಿಯೆ ? ಚಂದ್ರನಿಂದ ಬೇರೆಯಾದ ರೋಹಿಣಿಯಂತೆ ನೀ ಇರುವೆಯಲ್ಲ ? ನಿನ್ನನ್ನು ಪತ್ನಿಯನ್ನಾಗಿ ಪಡೆದ ಪುಣ್ಯವಂತ ಯಾರು ? ನೀನು ಯಾರ ಮಗಳು ? ಯಾರ ಸೊಸೆ ? ನಿನ್ನನ್ನು ನೋಡಿದರೆ ನೀನು ದೇವಿಯೇ ಇರಬೇಕು ಎನಿಸುತ್ತದೆ.

ಆದರೆ, ನೀನು ಅಳುತ್ತಿರುವುದರಿಂದಲೂ, ನಿಟ್ಟುಸಿರು ಬಿಡುತ್ತಿರುವುದರಿಂದಲೂ, ಮೇಲಾಗಿ ಭೂಮಿಯನ್ನು ಸ್ಪರ್ಶಿಸಿರುವುದರಿಂದಲೂ ನೀನು ಮಾನವಿಯೇ ಇರಬೇಕು ಎಂದು ಅನಿಸುತ್ತದೆ.

ನಿನ್ನ ಶುಭಲಕ್ಷಣಗಳನ್ನು ನೋಡಿದರೆ ನೀನು ಮಹಾರಾಜನ ಪೃಥಿವಿಪಾಲನ ಮಡದಿಯೇ ಸರಿ ಎನಿಸುತ್ತದೆ. ತಾಯಿ, ರಾವಣನು ಜನಸ್ಥಾನದಿಂದ ಅಪಹರಿಸಿದ ಸೀತೆಯೇ ನೀನಾಗಿರಬಹುದೆ? ತಾಯಿ, ಆ ರಾಮಭದ್ರನ ಮಡದಿಯಾದ ನಿನಗೆ ಮಂಗಳವಾಗಲಿ" ಎಂದು ಹೇಳಿ ನಿಲ್ಲಿಸಿದ.

ವಾಲ್ಮೀಕಿ ಹನುಮಂತನನ್ನು "**ಬುದ್ಧಿಮತಾವರಿಷ್ಠಃ**" ಎಂದಿದಾರೆ. ಬುದ್ಧಿವಂತರಲ್ಲಿ ಮೇಧಾವಿಗಳಲ್ಲಿ ಶ್ರೇಷ್ಠ ವಾಯುಪುತ್ರ, ಸೀತೆಯನ್ನು ಅವನು ಪ್ರಶ್ನಿಸುವ ರೀತಿ ಅದನ್ನು ಎತ್ತಿ ತೋರಿಸುತ್ತವೆ. ಹನುಮಂತನಿಗೆ "ಅವಳು ಸೀತೆಯೇ" ಎಂದು ಚೆನ್ನಾಗಿ ಗೊತ್ತಿತ್ತು. ಆದರೂ, ತಕ್ಷಣ, ಸೀತೆಯೇ ನೀನು ?" ಎಂದು ಕೇಳಿಬಿಡಲಿಲ್ಲ.

ಸೀತೆಯ ಮನಸ್ಸನ್ನು ಅರಿತುಕೊಂಡ. ಅತಿಹೆಚ್ಚು ಸಂತೋಷ, ಅತಿಹೆಚ್ಚು ದುಃಖ ಎರಡೂ ಅಪಾಯಕರ. ಇಷ್ಟೊಂದಿನ ಕಷ್ಟವನ್ನೇ ಅನುಭವಿಸುತ್ತಿರುವ, ರಾಕ್ಷಸಿಯರ ಮಧ್ಯದಲ್ಲಿ ಇರುವ ಸೀತೆಗೆ ಇದ್ದಕಿದ್ದಂತೆ ವಿಷಯವನ್ನು ತಿಳಿಸುವುದಾಗಲೀ, ಅವಳಿಗಿದಿರಾಗಿ ಹೋಗಿ ನಿಲ್ಲುವುದಾಗಲೀ ಸರಿಯಲ್ಲ ಎಂದು ತೀರ್ಮಾನಿಸಿದ, ಮಹಾಪಂಡಿತನಾದ ಆಂಜನೇಯ.

ಮೊದಲು, ಸೀತೆಯ ಲಕ್ಷ್ಯವನ್ನು ತನ್ನತ್ತ ಸೆಳೆದುಕೊಳ್ಳುವುದಕ್ಕಾಗಿ ರಾಮಕಥೆಯನ್ನು ಹೇಳಿದ. ಆ ನಂತರ ಮಧುರವಾದ ನುಡಿಗಳಿಂದ, ವಿನೀತ ಭಾವದಿಂದ ಸೀತೆಯ ಬಗ್ಗೆ ಪ್ರಶ್ನಿಸಿದ.

ಹನುಮಂತನ ಹೃದಯಹಾರಕವಾದ ಮಂಜುಳವಾಣಿಯನ್ನು ಕೇಳಿ ಸೀತೆ ಹರ್ಷಿತಳಾದಳು. ತನ್ನ ವೃತ್ತಾಂತವನ್ನು ಹೇಳಿದಳು. "ಸ್ನುಷಾ ದಶರಥಸ್ಯಾಹಂ ಶತ್ರುಸೈನ್ಯ ಪ್ರತಾಪಿನಃ" ಎಂದಳು ಮೊದಲು "ನಾನು ಶತ್ರುಸೈನ್ಯವನ್ನು ಹೊಡೆದೋಡಿಸುವಂಥ ದಶರಥನ ಸೊಸೆ" ಎಂದು ತನ್ನ ಮಾವನ ವೀರ್ಯವನ್ನು ಪ್ರಶಂಶಿಸಿದಳು. ಅತ್ತೆಮಾವಂದಿರನ್ನು ಕಷ್ಟಕಾಲದಲ್ಲಿ ನೆನಸಿಕೊಂಡಳು ಸೀತೆ. ಕಷ್ಟದಲ್ಲಿರುವಾಗ ಹೊಗಳಿಸಿಕೊಳ್ಳುವ ಆ ಅತ್ತೆಮಾವಂದಿರು ಎಂಥ ಪುಣ್ಯವಂತರೊ ! "ಶತ್ರುಸೈನ್ಯ ಪ್ರತಾಪಿನಃ" ಎಂದು ಮಾವನ ಗುಣಗಳನ್ನು ಹೊಗಳುವಾಗ ಸೀತೆ "ಈಗ, ನನ್ನ ಮಾವ ದಶರಥ ಇದ್ದಿದ್ದರೆ ಸುಮ್ಮನೆ ಇರುತ್ತಿರಲಿಲ್ಲ. ಒಡನೆ ಬಂದು ಶತ್ರುಗಳನ್ನು ನಿಗ್ರಹಿಸಿ ನನ್ನನ್ನು ಬಿಡುಗಡೆ ಮಾಡುತ್ತಿದ್ದ" ಎಂದುಕೊಂಡಳಂತೆ !

"ಜನಕನ ಮಗಳು ನಾನು. "ಸೀತೆ" ಎನ್ನುತ್ತಾರೆ ನನ್ನನ್ನು, ಧೀಮಂತನಾದ ರಾಮನಿಗೆ ಪತ್ನಿ. **ದಶರಥನ ಮನೆಯಲ್ಲಿ ಹನ್ನೆರಡು ವರ್ಷಗಳು ರಾಮನೊಡನೆ** ಸರ್ವಸುಖಗಳನ್ನೂ ಅನುಭವಿಸಿದೆ." ಇಲ್ಲಿ ಸೀತೆ ರಾಮನೊಂದಿಗೆ ಸಕಲಭೋಗವನ್ನೂ ಅನುಭವಿಸಿದೆ ಎನ್ನುವಾಗ ಜೀವ, ಪರಮಾತ್ಮನೊಂದಿಗೆ ಐಕ್ಯವಾಗಿ ಅನುಭವಿಸುವ ಭೋಗ ಎಂದು ತಿಳಿಯಬೇಕು.

ಶ್ರೀ ರಾಮಾನುಜರು ಶ್ರೀರಂಗದಲ್ಲಿದ್ದ ಸಮಯ.

ಒಬ್ಬ ತನ್ನ ಪ್ರೇಯಸಿಗೆ ನಡೆಮುಡಿ ಹಾಸಿ ಅದರ ಮೇಲೆ ಅವಳನ್ನು ನಡೆಸಿಕೊಂಡು, ಅವಳಿಗೆ ಆಯಾಸವಾಗದಿರಲಿ, "ಅವಳಿಗೆ ಬಿಸಿಲು ತಾಗದಿರಲಿ" ಎಂದು ಅವಳಿಗೆ ಕೊಡೆಯನ್ನು ಹಿಡಿದು ಬರುತ್ತಿದ್ದ.

ರಾಮಾನುಜರು ನೋಡಿದರು. ಅವನನ್ನು ಕುರಿತು "ಇದೇನು ? ಇವಳಿಗೆ ಎಷ್ಟೊಂದು ಸೇವೆ ಮಾಡುತ್ತಿರುವೆಯಲ್ಲ" ಎಂದರು.

ಅದಕ್ಕೆ ಅವನು "ಸ್ವಾಮಿಾ ನೋಡಿ, ಇವಳ ಕಣ್ಣಿನ ಸೌಂದರ್ಯ ಎಷ್ಟು ಮೋಹಕವಾಗಿದೆ. ಇಂಥ ಕಣ್ಣು ಯಾರಿಗಾದರೂ ಇದೆಯೇ? ಇವಳ ಈ ಮೋಹಕವಾದ ಕಣ್ಣುಗಳಿಗೇ ನಾನು ಅಡಿಯಾಳಾಗಿದ್ದೇನೆ" ಎಂದ.

ಶ್ರೀ ರಾಮಾನುಜರು "ಇವಳ ಕಣ್ಣುಗಳಿಗಿಂತ ಚೆಂದವಾದ ಕಣ್ಣುಗಳನ್ನೂ, ಅದನ್ನು ಉಳ್ಳವರನ್ನೂ ನಾ ತೋರಿಸುತ್ತೇನೆ" ಎಂದರು. "ಸ್ವಾಮಿಾ, ಅದು ಸಾಧ್ಯವಿಲ್ಲ. ನೀವು ಹಾಗೆ ತೋರಿಸಿದ್ದೇ ಆದರೆ, ನಾನು ಇವಳಿಗೆ ಸೇವೆ ಮಾಡುವುದನ್ನು ಬಿಟ್ಟು ಅವರಿಗೆ ಸೇವೆಮಾಡುತ್ತೇನೆ" ಎಂದು.

"ಹಾಗಾದರೆ ಸರಿ-ಬಾ, ನನ್ನ ಹಿಂದೆ ನೋಡುವೆಯಂತೆ" ಎಂದು ರಾಮಾನುಜರು ಅವನನ್ನು ಕರೆದುಕೊಂಡು ಶ್ರೀ ರಂಗನಾಥನ ಹಳ್ಳಿಗೆ ಹೋದರು. ಶ್ರೀ ರಂಗನಾಥನ ಕಮಲನೇತ್ರಗಳನ್ನು ಅವನಿಗೆ ತೋರಿಸಿದರು. ಅನುಪಮವಾದ ಆ ಕಣ್ಣುಗಳ ಸೌಂದರ್ಯಕ್ಕೆ ಮುಗ್ಧನಾದ ; ಆತ "ಸ್ವಾಮಿಾ ! ಇಂಥ ಲೋಕೋತ್ತರ ಸೌಂದರ್ಯವುಳ್ಳ ಕಣ್ಣುಗಳುಳ್ಳ ಪರಮಾತ್ಮನನ್ನು ತೋರಿಸಿ ಕೊಟ್ಟವರು ನೀವು. ಇಂದಿನಂದ ನಿಮ್ಮ ದಾಸ ನಾನು" ಎಂದು ಅಂದಿನಿಂದ ಶ್ರೀರಾಮಾನುಜರ ಶಿಷ್ಯನಾದ.

ಇಲ್ಲಿ ಗ್ರಹಿಸಬೇಕಾದ ಅಂಶ "ಭಗವಂತನ ಕಣ್ಣುಗಳ ಸೌಂದರ್ಯ ಅಸದೃಶ ವಾದುದು. ಅಂಥವನೊಡನೆ ನಾನು ಹನ್ನೆರಡು ವರ್ಷಗಳವರೆಗೆ ಸರ್ವ ಕಾಮಗಳನ್ನೂ ಅನುಭವಿಸಿದೆ" ಎಂದು ಸೀತೆ ಹೇಳುತ್ತಾಳೆ. ಮುಂದುವರಿದು ಸೀತೆ "ಹದಿಮೂರನೆ ವರ್ಷದಲ್ಲಿ ರಾಮನಿಗೆ ಯೌವರಾಜ್ಯಾಭಿಷೇಕ ಮಾಡಬೇಕು ಎಂದು ದಶರಥ ಯೋಚಿಸಿದ. ಆಗ, ಕೈಕೇಯಿ ರಾಮನಿಗೆ ವನವಾಸ, ಭರತನಿಗೇ ರಾಜ್ಯ ಆಗಬೇಕು ಎಂದು ಪಟ್ಟು ಹಿಡಿದಳು. ರಾಮ ರಾಜ್ಯ ಕಳೆದುಕೊಂಡದ್ದಕ್ಕಾಗಿ ಸ್ವಲ್ಪವೂ ಖಿನ್ನನಾಗದೆ ಕಾಡಿಗೆ ಹೊರಟ. ರಾಮನನ್ನು ಅನುಸರಿಸಿದ ರಾಮಾನುಜ ಲಕ್ಷ್ಮಣ ತಾನೂ ನಾರುಡೆಯನ್ನುಟ್ಟು ರಾಮನಿಗೆ ನಲುವಾಗಿ ಹೊರಟ. ನಾನೂ ರಾಮನನ್ನು ಅನುಸರಿಸಿದೆ. ಕಾಡಿನಲ್ಲಿ ರಾಮಲಕ್ಷ್ಮಣರಿಲ್ಲದ ವೇಳೆಯಲ್ಲಿ ದುಷ್ಟನಾದ ರಾವಣ ನನ್ನನ್ನು ಅಪಹರಿಸಿದ. ಇನ್ನೆರಡು ತಿಂಗಳು ನನ್ನ ಜೀವಿತದ ಅವಧಿ. ಅದು ಕಳೆದ ಮೇಲೆ ನಾನು ಪ್ರಾಣಬಿಡುತ್ತೇನೆ'' ಎಂದು ಹೇಳಿದಳು.

ಸೀತೆಯ ಮಾತುಗಳನ್ನು ಕೇಳಿದ ಹನುಮಂತ. ಕೈಮುಗಿದು ''ತಾಯೇ ನಾನು ರಾಮನ ದೂತ. ಅವನಿಂದ ಆಜ್ಞಪ್ತನಾಗಿ ಬಂದಿದೇನೆ. ರಾಮ ಕುಶಲಿಯಾಗಿದಾನೆ. ನಿನ್ನ ಕುಶಲವನ್ನು ತಿಳಿದು ಬರುವಂತೆ ಹೇಳಿ ಕಳುಹಿಸಿದಾನೆ. ಸುಮಿತ್ರಾನಂದವರ್ಧನನಾದ ಲಕ್ಷ್ಮಣ ನಿನಗೆ ನಮಸ್ಕಾರ ಮಾಡಿ ನಿನ್ನ ಕುಶಲವನ್ನೂ ಕೇಳಿದಾನೆ. ಅವರಿಬ್ಬರೂ ಕುಶಲವಾಗಿದಾರೆ" ಎಂದ.

"ರಾಮಲಕ್ಷ್ಮಣರು ಕುಶಲರಾಗಿದಾರೆ" ಎಂಬ ಮಾತು ಅಮೃತದಂತೆ ಹಿತವಾಯಿತು ವೈದೇಹಿಗೆ. ಪ್ರಾಣವನ್ನಿಟ್ಟುಕೊಂಡಿದ್ದರೆ ಜೀವಿತದಲ್ಲಿ ಒಂದುದಿನ ವಾದರೂ ಸೌಖ್ಯವನ್ನು ಕಾಣಬಹುದು" ಎಂದು ಹೇಳುತ್ತಾರೆ. ನನ್ನ ಪಾಲಿಗೆ ಸತ್ಯವಾಯಿತು ಎಂದುಕೊಂಡಳು.

**ಏತಿ ಜೀವಂತಮಾನಂದಃ ನರಂ ವರ್ಷ ಶತಾದಪಿ ।**

ಮಾತನಾಡುತ್ತ ಸೀತೆಯ ಸಮೀಪಕ್ಕೆ ಬರತೊಡಗಿದ ಹನುಮಂತನನ್ನು ಕಂಡು ಸೀತೆ ಭೀತಿಯಿಂದ ಹಿಂದೆ ಹಿಂದೆ ಸರಿದಳು.

"ನೀನು ರಾವಣನೇ ಸರಿ. ಅಂದು ಸನ್ಯಾಸಿಯ ವೇಷ ಧರಿಸಿ ಜನಸ್ಥಾನದಲ್ಲಿ ನನ್ನನ್ನು ವಂಚಿಸಿದವನೇ ನೀನು. ದೂರ ನಿಲ್ಲು". ಎಂದು ಹೇಳಿ ಮತ್ತೆ "ನಿನ್ನನ್ನು ನೋಡಿದಾಗ ಮನಸ್ಸಿನಲ್ಲಿ ಪ್ರೀತಿ ಹುಟ್ಟಿತು. ಆದರಿಂದ ನೀ ರಾಮದೂತನೇ ಎಂದು ತಿಳಿಯುತ್ತೇನೆ. ನಿಶ್ಚಯವಾಗಿ ನೀನು ರಾಮದೂತನೇ ಆಗಿದ್ದರೆ ನಿನಗೆ ಮಂಗಳವಾಗಲಿ. ನೀನು ರಾಮನ ದೂತನೇ ಆದರೆ ನನಗೆ ಅತ್ಯಂತ ಪ್ರಿಯವಾದ ರಾಮನ ಗುಣಗಳನ್ನು ಕೀರ್ತಿಸು" ಎಂದಳು. ಆಗ ಹನುಮಂತ "ದೇವೀ, ರಾಮ ಆದಿತ್ಯನಂತೆ ವರ್ಚಸ್ಸುಳ್ಳವನು, ಧರ್ಮವನ್ನು ರಕ್ಷಿಸತಕ್ಕವನು. ಸ್ವಜನರ ಹಿತವನ್ನೂ ಸಾಧಿಸತಕ್ಕವನು. ತೇಜಸ್ಸಿನಲ್ಲಿ ಸೂರ್ಯನನ್ನೂ, ಕಾಂತಿಯಲ್ಲಿ ಚಂದ್ರನನ್ನೂ. ಬುದ್ಧಿಯಲ್ಲಿ ಬೃಹಸ್ಪತಿಯನ್ನೂ, ಪ್ರಭುತ್ವದಲ್ಲಿ ಕುಬೇರನನ್ನೂ, ಯಶಸ್ಸಿನಲ್ಲಿ ಇಂದ್ರನನ್ನೂ ಕ್ಷಮೆಯಲ್ಲಿ ಭೂಮಿಯನ್ನೂ, ವಿಕ್ರಮದಲ್ಲಿ ವಿಷ್ಣುವನ್ನೂ, ರೂಪದಲ್ಲಿ ಮನ್ಮಥನನ್ನೂ ಹೋಲತಕ್ಕವನು. ಕಾಮಕ್ರೋಧಗಳನ್ನು ಜಯಿಸಿದವನು, ಮಹಾರಥರಲ್ಲಿ ಶ್ರೇಷ್ಠನು, ಅವನ ತೋಳಿನ ಆಶ್ರಯದಲ್ಲಿರುವ ಸಮಸ್ತ ಭೂಮಿಯೂ ಸಂತೋಷವನ್ನೇ ಅನುಭವಿಸತಕ್ಕುದು. ಅಂಥ ರಾಮ ನಿಮ್ಮನ್ನು ಹುಡುಕುತ್ತಾ ಬಂದಾಗ ಸುಗ್ರೀವ ಎಂಬ ವಾನರರಾಜನೊಂದಿಗೆ ಸ್ನೇಹ ಮಾಡಿಕೊಂಡು ವಾಲಿಯನ್ನು ಕೊಂದು ಸುಗ್ರೀವನಿಗೇ ರಾಜ್ಯವನ್ನು ನೀಡಿದ. ಆ ಸುಗ್ರೀವ ನಿಮ್ಮನ್ನು ಹುಡುಕಲು ಕಳುಹಿಸಿದ ಅಸಂಖ್ಯ ವಾನರರಲ್ಲಿ ನಾನು ಈ ಸಮುದ್ರವನ್ನು ಹಾರಿ ಲಂಕೆಯನ್ನು ಸೇರಿ ನಿಮ್ಮನ್ನು ಕಂಡೆ" ಎಂದ.

ಹನುಮಂತನ ಮಾತುಗಳನ್ನು ಕೇಳಿದ ಸೀತೆ ಸಂತೋಷಪಟ್ಟಳು. ಆದರೂ, ಪೂರ್ತಿಯಾಗಿ ಪರೀಕ್ಷಿಸಬೇಕು ಎಂದು.

**ವಾನರಾಣಾಂ ನರಾಣಾಂಚ ಕಥ ಮಾಸ್ಸಿತ್ಸಮಾಗಮಃ**

"ವಾನರಶ್ರೇಷ್ಠ, ನೀ ಹೇಳುವುದೇಕೋ ಸೋಜಿಗವಾಗಿದೆ. ಸುಗ್ರೀವ ವಾನರ. ರಾಮ ನರಶ್ರೇಷ್ಠ. ವಾನರರಿಗೂ–ನರರಿಗೂ ಹೇಗೆ ಸಮಾಗಮ ಆಯಿತು ? ಅಲ್ಲದೆ ನೀನು "ರಾಮ ದೂತ" ಎನ್ನುತ್ತಿರುವೆ. ನಿಜವಾಗಿ ನೀನು ರಾಮನ ದೂತನೇ ಆದರೆ ರಾಮ ಹೇಗಿದ್ದಾನೆ ? ಅವನ ಬಾಹು–ಊರುಗಳು ಹೇಗಿದೆ ? ಲಕ್ಷ್ಮಣ ಹೇಗಿದ್ದಾನೆ ? ತಿಳಿಸು" ಎಂದಳು.

ಆಚಾರ್ಯನನ್ನೂ ಶಿಷ್ಯನಾದವ ಪರೀಕ್ಷಿಸಿಯೇ ವರಿಸಬೇಕು. ಶಿಷ್ಯನನ್ನು ಆಚಾರ್ಯ ಪರೀಕ್ಷಿಸುವಂತೆ ಆಚಾರ್ಯನನ್ನೂ ಶಿಷ್ಯ, ಇವನು ಸದಾಚಾರ್ಯನೇ ಎಂದು ಮೊದಲು ಕಂಡುಹಿಡಿಯಬೇಕು. ಆದಕ್ಕೇ ಸೀತೆ ಹಾಗೆ ಕೇಳಿದಳು. ನಿಜವಾಗಿ ರಾಮದೂತನಾದರೆ ರಾಮನ ಗುಣ, ರೂಪ ಎಲ್ಲವನ್ನೂ ಕೂಲಂಕುಷವಾಗಿ ತಿಳಿದಿರುತ್ತಾನೆ.

ಭಗವಂತ, ತನ್ನ ಭಕ್ತನಿಗೆ ತನ್ನ ಸರ್ವಸ್ವನ್ನೂ ಅರಿವುಗೊಳಿಸುತ್ತಾನೆ. ಹನುಮಂತ ನಿಜವಾಗಿ ರಾಮನ ಚಿಹ್ನೆಗಳು, ರಾಮನ ಗುಣ ಇವುಗಳನ್ನು ಸರಿಯಾಗಿ ಅರಿತಿರುತ್ತಾನೆ. ಆದ್ದರಿಂದಲೇ ಸೀತೆ ಕೇಳಿದಳು.

ಹನುಮಂತ ತನ್ನ ಎರಡು ಕೈಗಳನ್ನೂ ತಲೆಯಮೇಲೆ ಜೋಡಿಸಿ ನಮಸ್ಕರಿಸಿ ತಾಯೇ, ರಾಮನ ಚಿಹ್ನೆಯನ್ನು ನಾ ಕಂಡಂತೆ ನಿವೇದಿಸಿಕೊಳ್ಳುತ್ತೇನೆ. ಧರ್ಮಮೂರ್ತಿ ಎನಿಸಿ, ಧರ್ಮ ಮಾರ್ಗದಲ್ಲೇ ಸಾಗುವ ಆ ರಾಮ ಅಜಾನು ಬಾಹು. ಅವನ ದೀರ್ಘವಾದ ಆ ಬಾಹುಗಳು ಶರಣಾಗತರ ರಕ್ಷಣೆಗಾಗಿಯೇ ಇವೆ. ಕಮಲದಂತೆ ಕಾಂತಿಯುಳ್ಳವನು ಶ್ಯಾಮಲವರ್ಣವುಳ್ಳವನು. ಸಮಸಮವಾಗಿ ವಿಭಕ್ತವಾದ ಅಂಗಗಳುಳ್ಳವನು. ಎತ್ತರವಾದ ನಿಲುವುಳ್ಳವನು. ಸತ್ಯ ಧರ್ಮಪರ.

ನಿಗ್ರಹಾನುಗ್ರಹ ಸಾಮರ್ಥ್ಯವುಳ್ಳವನು. ಸಾಮುದ್ರಿಕಾ ಶಾಸ್ತ್ರದಲ್ಲಿ ವಿಶದೀಕರಿಸಲ್ಪಟ್ಟಿರುವ ಎಲ್ಲ ಶುಭಲಕ್ಷಣಗಳಿಂದ ಒಪ್ಪುತ್ತಿರುವವನು. ರಾಮನ ತಮ್ಮನಾದ ಲಕ್ಷ್ಮಣನೂ ರೂಪ, ಗುಣ, ಶೀಲ ಎಲ್ಲದರಲ್ಲೂ ರಾಮನನ್ನೇ ಹೋಲುತ್ತಾನೆ. ಒಂದೇ ವ್ಯತ್ಯಾಸ ಎಂದರೆ ರಾಮ ನೀಲಮೇಘಶ್ಯಾಮ. ಲಕ್ಷ್ಮಣ ಪುಟಕ್ಕೆ ಹಾಕಿದ ಚಿನ್ನದಂತೆ ಬಂಗಾರದ ಬಣ್ಣವುಳ್ಳವ. ದೇವಿ, ರಾಮ ಲಕ್ಷ್ಮಣರಿಬ್ಬರೂ ನಿಮ್ಮನ್ನು ಹುಡುಕುತ್ತಾ ಬಂದಾಗ ಸುಗ್ರೀವ ಎಂಬ ವಾನರ ರಾಜನನ್ನು ಕಂಡರು. ವಾನರರಾಜ ಸುಗ್ರೀವನಿಗೂ, ನರರಾಜನಾದ ರಾಮನಿಗೂ ಕುಶಲವಾರ್ತೆ ನಡೆಯಿತು. ಪರಸ್ಪರ ಪ್ರೀತಿಯುಕ್ತವಾದ ಮಾತುಗಳನ್ನಾಡುತ್ತಿದ್ದ ಇಬ್ಬರಿಗೂ ಆ ಅನ್ಯೋನ್ಯವಾದ ಸಲ್ಲಾಪದಿಂದಲೇ ಪ್ರೀತಿ, ಆದರಿಂದ ಸ್ನೇಹ ಉಂಟಾಯಿತು.

ದೇವಿ, ವಾನರರಿಗೂ–ನರರಿಗೂ ಸಮಾಗಮ ಹೇಗಾಯಿತು ಎಂದಿರಿ ಅಲ್ಲವೆ? ಈಗ ನೋಡಿ. ನಾನೂ ವಾನರ. ನಾನು ನಿಮ್ಮೊಂದಿಗೆ ಮಾತಾಡಿದೆ–ನಿಮಗೆ ನನ್ನಲ್ಲಿ ಅಭಿಮಾನ ಮೂಡಿತು. ಈಗ ನಮ್ಮಿಬ್ಬರಲ್ಲಿ ಹೇಗೆ ಸಂಬಂಧ ಬೆಳೆಯಿತೋ ಹಾಗೆಯೇ ಹರಿಶ್ರೇಷ್ಠನಾದ ಸುಗ್ರೀವನಿಗೂ, ನರಶ್ರೇಷ್ಠನಾದ ರಾಮನಿಗೂ ಪರಸ್ಪರ ಪ್ರೀತಿಯುಕ್ತವಾದ ಸಲ್ಲಾಪದಿಂದ ಸಖ್ಯ ಬೆಳೆಯಿತು. ಸುಗ್ರೀವನಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ರಾಮ ವಾಲಿಯನ್ನು ಒಂದೇ ಬಾಣದಿಂದ ಕೊಂದ. ಸುಗ್ರೀವ ವಾನರರಿಗೆಲ್ಲ ರಾಜನಾದ. ಸುಗ್ರೀವನ ಅಪ್ಪಣೆಯಂತೆ ಮಹಾಪರಾಕ್ರಮಿಗಳಾದ ವಾನರರು ನಾಲ್ಕು ದಿಕ್ಕಿಗೂ ಕಳುಹಿಸಲ್ಪಟ್ಟರು. ಅವರಲ್ಲಿ ನಾನೂ ಒಬ್ಬ.

ದಕ್ಷಿಣದ ಕಡೆ ಹೊರಟವರು ನಾವು. ಜಟಾಯುವಿನ ಅಣ್ಣ ಸಂಪಾತಿಯ ವಚನದಂತೆ ನಾನು ಸಮುದ್ರವನ್ನು ಹಾರಿ ಲಂಕೆಯಲ್ಲೆಲ್ಲ ಹುಡುಕಿದೆ. ಇಲ್ಲಿ ನಿಮ್ಮನ್ನು ಕಂಡೆ. ಅಮ್ಮಾ, ರಾಘವ ಕುಶಲಿಯಾಗಿದ್ದಾನೆ, ಲಕ್ಷ್ಮಣನೂ ಕುಶಲಿಯೇ. ನಿಮಗೆ ಕೈಮುಗಿದು ನಮಸ್ಕಾರ ಮಾಡಿ ನಿಮ್ಮ ಕುಶಲವನ್ನು ಕೇಳಿದ್ದಾನೆ. ವಾನರಾಧಿಪತಿ ಸುಗ್ರೀವನೂ ಸಹ ನಿಮಗೆ ಅಭಿವಾದನ ಮಾಡಿ ನಿಮ್ಮ ಕುಶಲವನ್ನು ವಿಚಾರಿಸಿದ್ದಾನೆ, ದೇವಿ, ನನ್ನ ವಿಚಾರ ಸ್ವಲ್ಪ ಹೇಳುತ್ತೇನೆ. ನಾನು ಅಂಜನಾದೇವಿಗೆ ವಾಯುವಿನ ಅನುಗ್ರಹದಿಂದ ಹುಟ್ಟಿದವನು. ನನ್ನ ತಂದೆ ಕೇಸರಿ ಎಂಬ ಮಹಾಕಪಿ. ಹುಟ್ಟಿದ ಒಡನೆಯೇ ಸೂರ್ಯಮಂಡಲಕ್ಕೆ ನಾನು ಹಾರಿದೆನಂತೆ, ಸೂರ್ಯನನ್ನು ಹಣ್ಣು ಎಂದುಕೊಂಡು, ಅದನ್ನು ಹಿಡಿಯಲು. ಆಗ ಇಂದ್ರ ವಜ್ರಾಯುಧದಿಂದ ಹೊಡೆದ. ಆದ್ದರಿಂದ ನನ್ನನ್ನು "ಹನುಮಂತ" ಎಂದರಂತೆ. ಅಮ್ಮಾ, ನನ್ನ ಕಥೆಯನ್ನು ಹೇಳಿಕೊಂಡಿದ್ದು ನಿಮಗೆ ನಂಬಿಕೆ ಬರಲು. ಹೆಮ್ಮೆಗಾಗಿ ಅಲ್ಲ ತಾಯಿ. ನಾನು ಹೇಳಿರುವುದೆಲ್ಲ ಸತ್ಯ. ಒಂದೂ ಸುಳ್ಳಲ್ಲ. ನನ್ನನ್ನು ನೀವು ಪೂರ್ಣವಾಗಿ ನಂಬಿ

ರಾಮ ನಿಮಗಾಗಿ ಬಹಳ ಪರಿತಪಿಸುತ್ತಾನೆ. ನೀವು ಅಂದು ಹಾಕಿದ ಆಭರಣದ ಗಂಟನ್ನು ಸುಗ್ರೀವ ರಾಮನಿಗೆ ಒಪ್ಪಿಸಿದ. ರಾಮ ಅದನ್ನು ನೋಡಿ ಬಹಳ ದುಃಖಿಸಿದ. ಆಗ ಸುಗ್ರೀವ ಸಮಾಧಾನ ಹೇಳಿದ ರಾಮ ನಿಮ್ಮನ್ನು ಯಾವಾಗಲೂ ನೆನಸಿಕೊಳ್ಳುತ್ತಿರುತ್ತಾನೆ. ಇದು ರಾಮನಾಮಾಂಕಿತವಾದ ಉಂಗುರ. ಇದನ್ನು ನಿಮಗೆ ನಂಬಿಕೆ ಬರುವ ಸಲುವಾಗಿಯೇ ರಾಮಚಂದ್ರ ಕೊಟ್ಟು ಕಳುಹಿಸಿದಾನೆ. ನೋಡಿ ತಾಯಿ" ಎಂದು ಹನುಮಂತ ರಾಮನಾಮಾಂಕಿತವಾದ ಉಂಗುರವನ್ನು ಕೈಯಲ್ಲಿಟ್ಟುಕೊಂಡು ತೋರಿಸಿದ.

ಆಚಾರ್ಯಸ್ಥಾನದಲ್ಲಿರುವ ಹನುಮಂತ ಜೀವನಾದ ಸೀತೆಗೆ ಮೊದಲು ಪರಮಾತ್ಮನ ಗುಣಗಳನ್ನೆಲ್ಲ ವರ್ಣಿಸಿ ಜೀವವನ್ನು ಪರಮಾತ್ಮನತ್ತ ಸೆಳೆದುಕೊಳ್ಳುತಾನೆ. ಆಮೇಲೆ ಆಚಾರ್ಯ

ನಲ್ಲಿ ನಂಬಿಕೆ ಹುಟ್ಟುವ ಸಲುವಾಗಿ ಆಚಾರ್ಯನಾದವನು ಭಗವತ್ಸ್ವರೂಪವನ್ನು ವಿವರವಾಗಿ ವರ್ಣಿಸುತ್ತಾನೆ. ಅನಂತರ "ಉಂಗುರ'' ಅದೂ ರಾಮನಾಮಾಂಕಿತವಾದ ಉಂಗುರ–ಅಂದರೆ "ತಿರುಮಂತ್ರ'' ವನ್ನು ಉಪದೇಶಿಸುತ್ತಾನೆ.

ಉಂಗುರ ಗುಂಡಾಗಿದೆ–ಪೂರ್ಣವಾಗಿದೆ. ಹಾಗೆಯೇ ಪರಮಾತ್ಮ ಸಕಲ ಕಲ್ಯಾಣ ಗುಣಪರಿಪೂರ್ಣನಾಗಿದ್ದಾನೆ.

ಉಂಗುರವನ್ನು ಪಡೆದ ಸೀತೆ ರಾಮನನ್ನೇ ಪಡೆದಂತೆ ಆನಂದಪಟ್ಟಳು. ಅಂದರೆ, ತಿರು ಮಂತ್ರದ ಪ್ರಭಾವ ಅಂಥದು.

ಭಗವಂತನ ನಾಮ ಅಂಥ ಪ್ರಭಾವಯುತವಾದದು. ತಿರುಮಂತ್ರದ ಮಹಿಮೆ ಇಷ್ಟು-ಇಷ್ಟು ಎಂದು ವರ್ಣಿಸಲು ಅಸದಳವಾದುದು.

ಉಂಗುರವನ್ನು ಪಡೆದ ಕೆಲವೇ ದಿನಗಳಲ್ಲಿ ಸೀತೆ ರಾಮನನ್ನು ಸೇರಿದಳು.

ಅಂದರೆ ಸದಾಚಾರ್ಯನ ಉಪದೇಶದಿಂದ ಅನುಗ್ರಹಿಸಲ್ಪಟ್ಟ ಜೀವ "ತಿರುಮಂತ್ರ'' ವನ್ನು ಅನುಸಂಧಾನ ಮಾಡುತ್ತಿದ್ದರೆ ಅದರ ಪ್ರಭಾವದಿಂದ ಪರಮಾತ್ಮನನ್ನು ಸೇರಿ ಸುಖಿಸುತ್ತದೆ.

**"ಪಶ್ಯ ದೇವ್ಯಂಗುಳೀಯಕಂ"** ಎಂದಿದಾರೆ ವಾಲ್ಮೀಕಿ. ಹನುಮಂತ ಸೀತೆಯ ಕೈಗೆ ಕೊಡಲಿಲ್ಲ "ದೇವಿ, ನೋಡು ಉಂಗುರವನ್ನು'' ಎಂದ. ಏಕೆ ಕೈಗೆ ಕೊಡಲಿಲ್ಲ ?

ಸೀತೆ, ಸಾಕ್ಷಾತ್ ಲಕ್ಷ್ಮೀಸ್ವರೂಪಿಣಿ, ಸಕಲ ಐಶ್ವರ್ಯಗಳಿಗೆ ಅಧಿಷ್ಠಾತ್ರಿ. ಎಲ್ಲರಿಗೂ ಕೊಡುವಂಥ ಕೈ ಅದು. ಆ ಕೈ ಕೆಳಗಾಗಿ ಬೇಡುವ ಕೈ ಆಗಬಾರದು, ಎಂದು ಹನುಮಂತ ತಾನೇ ಅದನ್ನು ಕೈಯಲಿಟ್ಟುಕೊಂಡು ತೋರಿಸಿದ.

ತೋರಿಸಿದ್ದೇ ತಡ, ವೈದೇಹಿ ಅದನ್ನು ಗುರುತಿಸಿದಳು, ಗ್ರಹಿಸಿದಳು,

**ಗೃಹೀತ್ವಾ ಪ್ರೇಕ್ಷಮಾಣಾಸಾ ಭರ್ತುಃ ಕರವಿಭೂಷಣಂ ।**
**ಭರ್ತಾರಮಿವ ಸಂಪ್ರಾಪ್ತಾ ಜಾನಕೀ ಮುದಿತಾಭವತ್ ॥**

ಪತಿಯ ಕೈಯಲ್ಲಿ ಅಲಂಕೃತವಾಗಿದ್ದ ಆ ಉಂಗುರವನ್ನು ತೆಗೆದುಕೊಂಡಳು. ತನ್ನ ಕೈಯ್ಯಲ್ಲಿಟ್ಟುಕೊಂಡು ಚೆನ್ನಾಗಿ ನೋಡಿದಳು. ರಾಮನ ಉಂಗುರವನ್ನು ನೋಡಿದ ಸೀತೆಗೆ ರಾಮನನ್ನೇ ಪಡೆದಷ್ಟು ಆನಂದವಾಯಿತು. ಅವಳ ಅಂದವಾದ ಮುಖ ರಾಹುಬಿಟ್ಟ ಚಂದ್ರನಂತೆ ಹೊಳೆಯ ತೊಡಗಿತು. ಉಂಗುರವನ್ನು ಕೈಯಲ್ಲಿಟ್ಟುಕೊಂಡ ಅವಳಿಗೆ ರಾಮನೇ ಇದಿರಿಗೆ ಬಂದು ನಿಂತಂ ತಾಯಿತು.

''ರಾಮ'' ಎಂಬ ಹೆಸರನ್ನು ಕೆತ್ತಿದ ಆ ಉಂಗುರವನ್ನು ನೋಡಿದಳು ಸೀತೆ. ತತ್ಕ್ಷಣ ರಾಮ ಅದನ್ನು ಧರಿಸುತ್ತಿದ್ದ ಬೆರಳು ಜ್ಞಾಪಕಕ್ಕೆ ಬಂದಿತು. ಆ ಬೆರಳಿನ ಹಿಂದೆ ರಾಘವನ ಆ ಪುಷ್ಟವಾದ ದೀರ್ಘಬಾಹುಗಳು ನೆನಪಿಗೆ ಬಂದವು. ಯಾವನ ಆ ದೀರ್ಘಬಾಹುಗಳಲ್ಲಿ ತಾನು ಆಶ್ರಯವನ್ನು ಪಡೆದಿದ್ದಳೋ ಆ ಸುಂದರವಾದ ತೋಳುಗಳು ಇದುರಿಗೆ ನಿಂತವು. ಆ ತೋಳಿನ ಹಿಂದೆ ರಾಘವನ ಆ ಸಿಂಹಸ್ಕಂಧ, ಆ ಅಂದವಾದ ಭುಜ. ಶಂಖದಂಥ ಆ ಕೊರಳು. ಅಲ್ಲಿಂದ ಕಮಲದ ಚಂದ್ರಕಾಂತಿಯನ್ನು ಧಿಕ್ಕರಿಸುವ ಆ ಸುಂದರ ವದನಾರವಿಂದ, ಆ ರಕ್ತಾಂತನೇತ್ರಗಳು. ಎತ್ತರವಾದ ಆ ನಿಲುವು, ಸುಂದರವಾದ ಕೇಶಪಾಶ, ಹೀಗೆ ರಾಮನ ಸೌಂದರ್ಯವನ್ನು ಪೂರ್ಣ ವಾಗಿ ಆಸ್ವಾದಿಸತೊಡಗಿದ ಆ ಸೀತೆಗೆ ಇದಿರಿನಲ್ಲಿ ರಾಮ ನಿಂತಂತೆಯೆ ಭಾಸವಾಯಿತು.

ಬಹುಕಾಲ ಅಗಲಿದ್ದ ಪ್ರಿಯನನ್ನು ಆಲಿಂಗಿಸುವಂತೆ ಸೀತೆ ರಾಮನಾಮಾಂಕಿತವಾದ ಆ ಉಂಗುರವನ್ನು ಕೈಗಳಲ್ಲಿ ಬಿಗಿಯಾಗಿ ಹಿಡಿದು ಹೃದಯಕ್ಕೆ ಒತ್ತಿಕೊಂಡಳು, ಕಣ್ಣೀರಿನಿಂದ ಅಭಿಷೇಕ ಮಾಡಿದಳು.

ಗ್ರಹಣ ಬಿಟ್ಟಮೇಲೆ ಚಂದ್ರಬಿಂಬ ಹೊಳೆಯುವಂತೆ ಜಾನಕಿಯ ಮುಖಚಂದ್ರ ಬೆಳಗಿತು. ಹಿಂದಿನ ಮಧುರಸ್ಮೃತಿಗಳು ಚಿತ್ತ ಫಲಕದ ಮೇಲೆ ಒಂದೊಂದಾಗಿ ಹಾದು ಹೋಗತೊಡಗಿದವು. ಶಿವಧನುಸ್ಸನ್ನು ಮುರಿದ ಆ ವೀರನ ಮುದ್ದು ಬೆರಳಿಗೆ ಜನಕ ಪ್ರೀತಿಯಿಂದ ತೊಡಿಸಿದ ಆ ಉಂಗುರ ಅದು.

"ಅಗಲಿದ್ದ ನನ್ನನ್ನೂ ಇಂದು ಇದು ಒಟ್ಟುಗೂಡಿಸಿತಲ್ಲಾ" ಎಂದು ಸಂತೋಷಪಟ್ಟಳು ಜಾನಕಿ. ಇದೇ ರೀತಿ ಅಯೋಧ್ಯೆಯಲ್ಲಿದ್ದಾಗಲೂ ಒಮ್ಮೆ ಸೀತಾರಾಮರನ್ನು ಒಟ್ಟುಗೂಡಿಸಿದ್ದಿತು ಅದೇ ಉಂಗುರ.

ಪ್ರಣಯ ಕೋಪದಿಂದ ಜಾನಕಿ – ರಾಮನೊಡನೆ ಮಾತನ್ನು ಬಿಟ್ಟಿದ್ದಳು. ಒಂದು ದಿನ ಕಳೆಯಿತು, ಎರಡಾಯಿತು: ಇಬ್ಬರೂ ಮಾತಾಡಲಿಲ್ಲ. ರಾಮ ಮೊದಲು ಮಾತಾಡಿಸಲಿ ಎಂದು ಸೀತೆ–ಸೀತೆಯೇ ಮೊದಲು ಮಾತಾಡಿಸಲಿ ಎಂದು ರಾಮ. ಇಬ್ಬರೂ ಸುಮ್ಮನೇ ಕುಳಿತಿದ್ದರು. ನೋಡಿದ ರಾಮ. ಇಬ್ಬರೂ ಕುಳಿತಿದ್ದ ವೇಳೆ ಮೆಲ್ಲಗೆ ಎಲ್ಲೊ ನೋಡುತ್ತ ಉಂಗುರವನ್ನು ಎಲ್ಲೊ ಕಳಚಿ ಹಾಕಿಬಿಟ್ಟ ನಂತರ "ಉಂಗುರ ಎಲ್ಲೋ ಹೋಯಿತು" ಎಂದು ಹುಡುಕತೊಡಗಿದರು. ಕಳಚಿಬಿದ್ದ ಆ ಉಂಗುರ ಸೀತೆಯ ಹತ್ತಿರವೇ ಬಿದ್ದಿತ್ತು. ರಾಮ ಉಂಗುರಕ್ಕಾಗಿ ಹುಡುಕುತ್ತಿದ್ದುದನ್ನು ಕಂಡ ಸೀತೆ ತನ್ನ ಹತ್ತಿರವೇ ಬಿದ್ದಿದ್ದ ಉಂಗುರವನ್ನು ತೆಗೆದು "ಇಲ್ಲೇ ಬಿದ್ದಿತ್ತು" ಎಂದು ಕೊಟ್ಟಳು.

ರಾಮ ನಸುನಕ್ಕು "ಸೀತೆ, ನೀನೇ ಸೋತೆ. ನೀನೇ ಮೊದಲು ಮಾತಾಡಿಬಿಟ್ಟೆ" ಎಂದ.

ಸೀತೆ ''ಏನೂ ಇಲ್ಲ–ನೀವೇ ಮೊದಲು ಉಂಗುರವನ್ನು ಹುಡುಕುತ್ತಾ "ಉಂಗುರ ಎಲ್ಲೋ ಹೋಯಿತು" ಎಂದು ಮಾತಾಡಿಬಿಟ್ಟಿರಿ" ಎಂದಳು.

ಇಬ್ಬರೂ ಒಂದಾದರು,

ಅಯೋಧ್ಯೆಯಲ್ಲಿ ನಡೆದ ಆ ಘಟನೆಯನ್ನು ನೆನಸಿಕೊಂಡ ಸೀತೆ "ಅಂದು ನಮ್ಮನ್ನು ಒಂದಾಗಿಸಿದ ಉಂಗುರವೇ ಇಂದೂ ನಮ್ಮನ್ನು ಸೇರಿಸಿತು" ಎಂದು ಸಂತೋಷಪಟ್ಟಳು. ಸೀತೆ ತನ್ನ ಕಲ್ಯಾಣಕಾಲದಲ್ಲಿ ಸಂತೋಷಪಟ್ಟಿದ್ದಕ್ಕಿಂತ ಹೆಚ್ಚು ಸಂತೋಷವನ್ನು ಆಗ ಹೊಂದಿದಳು.

ದಂಪತಿಗಳಿಗೆ ಮಕ್ಕಳಿರಲಿಲ್ಲ. ಬಹಳ ಕಾಲ ಹರಕೆ ಹೊತ್ತು, ವ್ರತ ಉಪವಾಸ ಎಲ್ಲವನ್ನೂ ಮಾಡಿದರು. ಕೊನೆಗೆ ಒಬ್ಬ ಯೋಗಿಯ ಅನುಗ್ರಹದಿಂದ ಮಗು ಆಯಿತು. ಆ ಮಗು ಸರ್ವ ಲಕ್ಷಣಗಳಿಂದ ಕೂಡಿತ್ತು. ಒಂದು ದಿನ ಆ ಮಗು ಆಟವಾಡುತ್ತಿದ್ದಾಗ ಹಾವು ಕಚ್ಚಿ ಸತ್ತು ಹೋಯಿತು, ದಂಪತಿಗಳ ಗೋಳು ಹೇಳತೀರದು ಬಹಳವಾಗಿ ಸಂಕಟಪಡುತ್ತಿದ್ದ ಆ ದಂಪತಿಗಳ ಬಳಿಗೆ ಒಬ್ಬ ಸಾಧು ಬಂದ. ಅವರ ಗೋಳಾಟಕ್ಕೆ ಕಾರಣ ಕೇಳಿದ. ಒಡನೆ ತನ್ನ ಜೋಳಿಗೆಯಿಂದ ಮೂಲಿಕೆಯನ್ನು ತೆಗೆದು ಅದರ ರಸವನ್ನು ಮಗುವಿಗೆ ಲೇಪಿಸಿದ. ಮಗು ನಿದ್ದೆಯಿಂದ ಎಚ್ಚೆತ್ತಂತೆ ಸುಖವಾಗಿ ಎದ್ದಿತು. ಆಗ ಆ ದಂಪತಿಗಳಿಗೆ ಯಾವ ಆನಂದ ಉಂಟಾಯಿತೋ ಅಂಥ ಆನಂದವನ್ನು ಸೀತೆ ರಾಮನಾಮಾಂಕಿತವಾದ ಉಂಗುರವನ್ನು ಪಡೆದಾಗ ಅನುಭವಿಸಿದಳು.

ನಾಗರಹಾವೊಂದು ತನ್ನ ಫಣೆಯಲ್ಲಿದ್ದ ರತ್ನವನ್ನು ಕಳೆದುಕೊಂಡು ಅದಕ್ಕಾಗಿ ಪರಿತಪಿಸುತ್ತಿದ್ದು ಕೊನೆಗೆ ಆ ರತ್ನ ದೊರೆತಾಗ ಎಷ್ಟು ಸಂತೋಷವಡುವುದೋ ಅಂಥ ಸಂತೋಷವನ್ನು ಸೀತೆ ರಾಮನಾಮಾಂಕಿತವಾದ ಉಂಗುರವನ್ನು ಪಡೆದಾಗ ಅನುಭವಿಸಿದಳು. ಹನುಮಂತನ ಬಗ್ಗೆ ಇದ್ದ ಅನುಮಾನವೆಲ್ಲ ದೂರವಾಯಿತು. ಅವಳಲ್ಲಿ ಪೂರ್ಣ ನಂಬಿಕೆ ಬಂದಿತು. ಇಷ್ಟೊಂದು ಉಪಕಾರ ಮಾಡಿದ ಹನುಮಂತನನ್ನು ಬಾಯಿತುಂಬ ಹೊಗಳಿದಳು.

ವಿಕ್ರಾಂತಸ್ತ್ವಂ ಸಮರ್ಥಸ್ತ್ವಂ ಪ್ರಾಜ್ಞಸ್ತ್ವಂ ವಾನರೋತ್ತಮ "ಹೇ ವಾನರೋತ್ತಮನೇ ನೀನು ಅತ್ಯಂತ ಪರಾಕ್ರಮಿ, ಸಮರ್ಥ, ಪ್ರಾಜ್ಞ. ಹಿಡಿದ ಕಾರ್ಯವನ್ನು ಸಾಧಿಸುವುದರಲ್ಲಿ ನಿನಗೆ ಸಮಾನರು ಯಾರೂ ಇಲ್ಲ. ಬುದ್ಧಿವಂತ ನೀನು. ನಂಬಿಕೆ ಹೇಗೆ ಹುಟ್ಟಿಸಬೇಕು ಎಂಬ ವಿಧಾನವನ್ನು ಅರಿತವನು.

ಇಲ್ಲಿ ವಾಲ್ಮೀಕಿ ಹನುಮಂತನ ಗುಣಗಳನ್ನು ಬಹಳ ಚನ್ನಾಗಿ ಪ್ರಶಂಸಿಸಿದಾರೆ.

ಪ್ರಾಜ್ಞ ಎಂದರೆ ಯಾವ ಕಾರ್ಯವನ್ನು ಯಾವ ಕಾಲದಲ್ಲಿ ಹೇಗೆ ಮಾಡಬೇಕು ಎಂದು ತಿಳಿದವ. ಸೀತೆಗೆ ಹನುಮಂತ ನಂಬಿಕೆ ಹುಟ್ಟಿಸುವ ಸಲುವಾಗಿ ಅನುಸರಿಸಿದ ಕ್ರಮ ಶ್ಲಾಘನೀಯ.

ಮೊದಲು ವಿವರವಾಗಿ ರಾಮನ ಸ್ವರೂಪವನ್ನೂ, ಗುಣವನ್ನೂ ವಿವರಿಸಿ ಆಭರಣಗಳ ಗಂಟನ್ನು ಸುಗ್ರೀವ ಒಪ್ಪಿಸಿದ್ದನ್ನೂ ನಿರೂಪಿಸಿ ಪೂರ್ಣವಾಗಿ ನಂಬಿಕೆ ಹುಟ್ಟಿಸಿ, ನಂತರ ಉಂಗುರವನ್ನು ಕೊಟ್ಟ. ಇದರಿಂದ ಹನುಮಂತನ ಪ್ರಾಜ್ಞತೆ ಎಷ್ಟು ಎಂದು ಗೋಚರವಾಗುತ್ತದೆ. ಆದ್ದರಿಂದಲೇ ಸೀತೆ ಹನುಮಂತನನ್ನು ಮನಃಪೂರ್ವಕವಾಗಿ ಶ್ಲಾಘಿಸುತ್ತಾ "ಹನುಮಂತ, ನೀನು ಮಹಾಪರಾಕ್ರಮಿ, ಧೀಮಂತ, ಬುದ್ಧಿವಂತ, ಶಕ್ತಿವಂತ. ಯಾವ ಕಾರ್ಯವನ್ನೂ ಸಾಧಿಸುವ ಶಕ್ತಿ ಉಳ್ಳವ. ಶತಯೋಜನ ವಿಸ್ತಾರವಾದ ಸಾಗರವನ್ನು ಅತಿ ಸುಲಭವಾಗಿ, ಅನಾಯಾಸವಾಗಿ ದಾಟಿದ ನಿನ್ನ ಬಲ ಅಪ್ರತಿಮವಾದುದ್ದು. ಅಂಜನಾಕುಮಾರ, ನೀನೇನೋ ರಾಮಲಕ್ಷ್ಮಣರು ಕುಶಲರಾಗಿದ್ದಾರೆ ಎಂದೆ. ಆದರೆ. ರಾಮ ಇನ್ನೂ ನನ್ನನ್ನು ಬಿಡಿಸಲು ಏಕೆ ಬರಲಿಲ್ಲ ? ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರನ್ನು ನಿಗ್ರಹಿಸಿದ ರಾಮ ನನ್ನಲ್ಲಿ ಏಕೆ ಇನ್ನೂ ದಯೆ ತೋರಲಿಲ್ಲ? ಸುಮಿತ್ರಾನಂದನನಾದ. ಭ್ರಾತೃವತ್ಸಲನಾದ ಆ ಲಕ್ಷ್ಮಣ ಏಕೆ ಇನ್ನೂ ಸುಮ್ಮನಿದ್ದಾನೆ ? ಅವನು ಅಣ್ಣನನ್ನು ಹುರಿದುಂಬಿಸದೆ ಏಕೆ ಇದ್ದಾನೆ ? ವಾನರಾಧಿಪತಿಯಾದ ಸುಗ್ರೀವ ನನಗಾಗಿ ಸಹಾಯ ಮಾಡುವನೆ ? ಹನುಮಂತ, ಇದಕ್ಕೆ ಉತ್ತರ ಹೇಳು. ರಾಮ ಹೇಗಿದ್ದಾನೆ ? ನನ್ನನ್ನು ನೆನಸಿಕೊಳ್ಳುತ್ತಾನೆಯೇ ? ಅವನ ಪೌರುಷ ಕುಗ್ಗದೆ ಇದೆಯೆ ?" ಎಂದು ಕೇಳಿದಳು.

ಹನುಮಂತ "ದೇವಿ, ರಾಮನಿಗೆ ನೀವಿರುವ ಸ್ಥಳ ಗೊತ್ತಾಗದೆ ಇದುವರೆಗೆ ಸಮ್ಮನಿದ್ದ. ಇನ್ನುಮುಂದೆ ತಡಮಾಡದೆ ನಿಮ್ಮನ್ನು ಈ ಬಂಧನದಿಂದ ವಿಮೋಚನೆಗೊಳಿಸುತ್ತಾನೆ ಹೆದರಬೇಡಿ. ರಾಮನ ತೀಕ್ಷ್ಣವಾದ ಬಾಣಗಳು ರಾವಣನನ್ನು ಬಂಧುಗಳ ಸಮೇತವಾಗಿ ನಾಶಮಾಡುತ್ತವೆ. ವಾನರಾಧಿಪತಿಯಾದ ಸುಗ್ರೀವ ತನ್ನ ಸಮಸ್ತ ಸೈನ್ಯಗಳ ಸಹಾಯದಿಂದ ಬಂದು ಲಂಕೆಯಲ್ಲಿರುವ ರಾಕ್ಷಸರನ್ನೆಲ್ಲ ಪುಡಿಮಾಡುತ್ತಾನೆ.

ರಾಮ ನಿಮ್ಮನ್ನೇ ಸದಾ ನೆನೆಯುತ್ತಿರುತ್ತಾನೆ. ಅವನಿಗೆ ನಿದ್ದೆಯಿಲ್ಲ, ಆಹಾರ ಸರಿಯಾಗಿ ಸೇವಿಸುವುದಿಲ್ಲ. ಯಾವುದೇ ಹಣ್ಣನ್ನೇ ಆಗಲಿ ಕಂಡರೆ ''ಹಾ ಸೀತೆ'' ಎಂದು ನಿಟ್ಟುಸಿರು ಬಿಡುತ್ತಾನೆ. ನಿಮಗಾಗಿ ಬಹಳ ಪರಿತಪಿಸುತ್ತಾನೆ. ನಿಮ್ಮನ್ನು ಪಡೆಯುವ ಮಾರ್ಗವನ್ನೇ ಅನವರತ

ಚಿಂತಿಸುತ್ತಿದಾನೆ. ದೇವಿ, ನಿಮ್ಮ ಧ್ಯಾನದಲ್ಲೇ ರಾಮ ಇದ್ದಾನೆ. ಅವನ ಮೈಮೇಲೆ ಕೀಟ, ಹಾವು ಇವು ಓಡಾಡುತ್ತಿದ್ದರೂ ಅತ್ತ ಲಕ್ಷ್ಯವೇ ಕೊಡುವುದಿಲ್ಲ. ಅವನಿಗೆ ಆದರ ಅರಿವೇ ಆಗದಂತೆ ನಿಮ್ಮ ನೆನಪಿನಲ್ಲೇ ಇದಾನೆ. ನಿಮ್ಮನ್ನು ಶೀಘ್ರವಾಗಿ ಪಡೆಯಬೇಕು ಎಂಬ ಕಾತರವುಳ್ಳವನಾಗಿದಾನೆ" ಎಂದ ಹನುಮಂತ.

**ಅನಿದ್ರಸ್ಸತತಂ ರಾಮಃ ಸುಪ್ತೋಽಪಿ ಚ ನರೋತ್ತಮಃ ।**
**ಸೀತೇತಿ ಮಧುರಾ ವಾಣೀಂ ವ್ಯಾಹರರ್ನ ಪ್ರತಿಬುಧ್ಯತೇ ॥**
**ನೈವದಂಶಾನ್ ನಮಶಕಾನ್ ನ ಕೀಟಾನ್ ನ ಸರೀಸೃಪಾನ್ ।**
**ರಾಘವೋಽಪನಯೇದ್ಗಾತ್ರಾತ್ ತ್ವದ್ಗತೇನಾಂತರಾತ್ಮನಾ ॥**
**ದೃಷ್ಟ್ವಾ ಫಲಂ ವಾ ಪುಷ್ಪಂ ವಾ ಯಚ್ಚಾನ್ಯತ್ಸುಮನೋಹರಂ ।**
**ಬಹುಶೋ ಹಾ ಪ್ರಿಯೇತ್ಯೇವಂ ಶ್ವಸಂಸ್ತ್ವಾಮಭಿಭಾಷತೇ ॥**

ಹನುಮಂತನ ಮಾತುಗಳನ್ನು ಕೇಳಿ ಸೀತೆ "ಆಂಜನೇಯ, ನಿನ್ನ ಮಾತುಗಳನ್ನು ಕೇಳಿ ನನಗೆ ಏಕಕಾಲದಲ್ಲಿ ಸಂತೋಷ, ದುಃಖ ಎರಡೂ ಉಂಟಾಗುತ್ತದೆ. ರಾಮಲಕ್ಷ್ಮಣರು ಕುಶಲರಾಗಿದಾರೆ ಎಂದು ಸಂತೋಷ. ರಾಮ ನನಗಾಗಿ ಕೊರಗುತ್ತಿದಾನಲ್ಲ ಎಂದು ದುಃಖ. ಹನುಮಂತ, ನೋಡಿದೆಯಾ, ವಿಧಿವಿಲಾಸ ಎಂಥ ಸತ್ವಯುತವಾದುದು. ವಿಧಿಯ ಮುಂದೆ ಯಾರ ಆಟವೂ ನಡೆಯದು. ಎಲ್ಲರನ್ನೂ ತನ್ನ ಇಚ್ಛೆಯಂತೆ ಕುಣಿಸುತ್ತದೆ ಆ ವಿಧಿ. ಇದಕ್ಕೆ ನಾನು, ರಾಮ, ಲಕ್ಷ್ಮಣ ದುಃಖಪಡುತ್ತಿರುವುದೇ ಸಾಕ್ಷಿ. ಶೋಕದ ಅಂತ ಯಾವಾಗ ಆಗುವುದೊ ? ಯಾವಾಗ ರಾಮ ಬಂದು ನನ್ನನ್ನು ಈ ಕಷ್ಟದಿಂದ ಪಾರುಮಾಡುವನೋ" ಎಂದಳು. ಸೀತೆ ಈ ರೀತಿ ದುಃಖಿಸುತ್ತಿರುವುದನ್ನು ನೋಡಲಾಗದೆ ಹನುಮಂತ "ದೇವಿ, ಈಗಿಂದೀಗಲೇ ನಿಮ್ಮನ್ನು ರಾಮನ ಬಳಿಗೆ ಕೊಂಡೊಯ್ಯುತ್ತೇನೆ. ಈಗಲೇ ನೀವು ನನ್ನ ಭುಜವನ್ನು ಏರಿಕೊಳ್ಳಿ" ಎಂದ.

ಸೀತೆ "ಹನುಮಂತ. ನಿನ್ನ ಕಪಿಸ್ವಭಾವವನ್ನು ತೋರಿಸಿದೆಯಲ್ಲ. ನೀನೋ ಇಷ್ಟು ಪುಟ್ಟ ರೂಪದಿಂದೀಯೆ. ನನ್ನನ್ನು ಹೇಗೆ ಹೊರಬಲ್ಲೆ" ಎಂದಳು.

ಹನುಮಂತ ಯೋಚಿಸಿದ. ಸೀತೆಗೆ ತನ್ನ ಬಗ್ಗೆ ತಿಳಿಸಬೇಕು ಎಂದು "ತಾಯೆ ನನ್ನ ರೂಪವನ್ನು ನೋಡಿ" ಎಂದು ಹೇಳುತ್ತಾ ತನ್ನ ವಿಶ್ವರೂಪವನ್ನು ತೋರಿದ. ಭಗವಂತನ ವಿಶ್ವರೂಪದಂತೆ ಬೆಳೆಯಿತು, ಹನುಮಂತನ ದಿವ್ಯರೂಪ. ತ್ರಿವಿಕ್ರಮನಂತೆ ಬೆಳೆಯುತ್ತಿರುವ ಹನುಮಂತನನ್ನು ಕಂಡು ಸೀತೆ "ಹನುಮಂತ, ನಿನ್ನ ಬಲ, ತೇಜಸ್ಸು, ಪರಾಕ್ರಮ, ಇವುಗಳನ್ನು ನಾನು ಅರಿತಿದ್ದೇನೆ. ನೀನು ನನ್ನನ್ನು ಕರೆದುಕೊಂಡು ಹೋಗಲು ಸಮರ್ಥನಾಗಿರುವೆ. ಆದರೆ, ನನ್ನನ್ನು ಹೊತ್ತು ಹೋಗುವಾಗ ನಿನ್ನ ವೇಗವನ್ನು ಸಹಿಸದೆ ನಾನು ಸಮುದ್ರದಲ್ಲಿ ಬಿದ್ದರೆ ಏನು ಗತಿ ? ನೀನು ನನ್ನನ್ನು ಹೊತ್ತುಕೊಂಡು ಹೋಗುವಾಗ ರಾಕ್ಷಸರು ನಿನ್ನನ್ನು ಬೆನ್ನಟ್ಟಿ ಬಂದರೆ ಆಗೇನು ಮಾಡುವುದು ? ಅದೆಲ್ಲ ಇರಲಿ. ಮುಖ್ಯವಾಗಿ ನಾನು ರಾಮನನ್ನು ಹೊರತು ಉಳಿದ ಪುರುಷ ದೇಹವನ್ನು ಮುಟ್ಟುವುದಿಲ್ಲ. ಹನುಮಂತ, ರಾವಣ ನಿನ್ನನ್ನು ಮುಟ್ಟಲಿಲ್ಲವೆ ಎನ್ನುವಿಯೇನೋ ? ಆದರೆ, ಆಗ ನಾನು ವಿವಶಳಾಗಿದ್ದೆ, ಏನೂ ಮಾಡಲಾರದವಳಾಗಿದ್ದೆ, ಬಲಾತ್ಕಾರವಾಗಿ ಆ ಪಾಪಿ ನನ್ನನ್ನು ಹೊತ್ತು ತಂದ. ಆದರೆ, ಈಗ, ನಾನಾಗಿಯೇ ಇಚ್ಛಿಸಿ ಬರುವುದು ಅಯುಕ್ತ. ಆದ್ದರಿಂದ ಬರಲಾರೆ. ರಾಮನೇ ಬಂದು ನನ್ನನ್ನು ಬಿಡಿಸಿಕೊಳ್ಳಲಿ.

**ಭರ್ತೃರ್ಭಕ್ತಿಂ ಪುರಸ್ಕೃತ್ಯ ರಾಮಾದನ್ಯಸ್ಯ ವಾನರ ।**
**ನಾಹಂ ಸ್ಪ್ರಷ್ಟುಂ ಸ್ವತೋಗಾತ್ರಂ ಇಚ್ಛೇಯಂ ವಾನರೋತ್ತಮ ॥**
**ಯದಹಂ ಗಾತ್ರಸಂಸ್ಪರ್ಶಂ ರಾವಣಸ್ಯ ಗತಾ ಬಲಾತ್ ।**
**ಅನೀಶಾ ಕಿಂ ಕರಿಷ್ಯಾಮಿ ವಿನಾಥಾ ವಿವಶಾ ಸತೀ ॥**

ರಾಮನಿಗೆ ಹೇಳು. ಒಂದು ತಿಂಗಳು ಮಾತ್ರ ಜೀವವನ್ನು ತಡೆದಿಟ್ಟಿರುತ್ತೇನೆ. ಒಂದು ತಿಂಗಳು ಕಳೆದ ಬಳಿಕ ಜೀವಿಸಲಾರೆ. ಅಷ್ಟರೊಳಗೆ ಬರಬೇಕು ಎಂದು ಹೇಳು" ಎಂದಳು.

ಸೀತೆ ಆಡಿದ ಮಾತುಗಳನ್ನು ಕೇಳಿ ಸಂತೋಷಿಸಿ ಹನುಮಂತ "ದೇವಿ, ನೀವು ಹೇಳುವುದು ಸರಿ. ನೀವು ಹೇಳಿದಂತೆ ರಾಕ್ಷಸರ ಭಯ ನನಗಿಲ್ಲ. ಎಷ್ಟು ಜನ ಬಂದರೂ ಅವರನ್ನು ಸದೆ ಬಡಿಯಬಲ್ಲೆ. ಆದರೆ, ನೀವು ಎರಡನೆಯ ಕಾರಣ ಹೇಳಿದಿರಲ್ಲ. ಅದು ಸರಿಯಾದುದು. ರಾಮಪತ್ನಿಗೆ ತಕ್ಕಂಥ ಮಾತು ಅದು.

ದೇವಿ, ಈಗಲೇ ನಾನು ರಾಮನ ಬಳಿ ಹೋಗುತ್ತೇನೆ ನಿಮ್ಮನ್ನು ಕಂಡಿದ್ದಕ್ಕೆ ಏನಾದರೂ ನೆನಹನ್ನು – ಗುರುತನ್ನು ಕೊಡಿ. ರಾಮನಿಗೆ ಅದನ್ನು ನಿವೇದಿಸುತ್ತೇನೆ" ಎಂದ. ಆಗ ಸೀತೆ, "ಹನುಮಂತ, ಕೇಳು, ಉತ್ತಮವಾದ ಒಂದು ಸಿಹಿ ನೆನಹನ್ನು ಹೇಳುತ್ತೇನೆ. ರಾಮನಿಗೆ ಅದನ್ನು ಜ್ಞಾಪಿಸು. ಚಿತ್ರಕೂಟದಲ್ಲಿ ನಾವಿದ್ದಾಗ ನಡೆದ ಘಟನೆ ಇದು.

ಒಂದು ದಿನ ನಾನು – ರಾಮ ಇಬ್ಬರೇ ನದೀ ತೀರದ ಸುಂದರ ದೃಶ್ಯವನ್ನು ನೋಡುತ್ತಾ ಅಲ್ಲೇ ಕುಳಿತೆವು. ಆಗ ಲಕ್ಷ್ಮಣ ಇರಲಿಲ್ಲ. ಫಲಸಂಗ್ರಹಿಸಲು ಹೋಗಿದ್ದ. ನಾನು ವನದಲ್ಲಿ ನಡೆದು ಆಯಾಸ ಹೊಂದಿದ್ದೆ. ನನ್ನ ಆಯಾಸಗೊಂಡ ಮುಖವನ್ನು ಕಂಡ ರಾಮ ನಸುನಗುತ್ತಾ ಸೀತೆ, ಮಲಗಿಕೊ. ಮಲಗಿ ಸ್ವಲ್ಪ ಆಯಾಸ ಪರಿಹಾರ ಮಾಡಿಕೊ ಎಂದ. ನಾನು ರಾಮನ ತೊಡೆಯ ಮೇಲೆ ತಲೆಯಿಟ್ಟು ಮಲಗಿದೆ. ಸ್ವಲ್ಪ ಹೊತ್ತಾದ ಮೇಲೆ ನಾನು ಎದ್ದುಕುಳಿತೆ. ರಾಮ ನನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ. ಅವನು ಮಲಗಿದ್ದಾಗ ಆ ಸೌಂದರ್ಯ ವರ್ಣಿಸಲು ಅಸದಳವಾದುದು. ನನ್ನ ತೊಡೆಯ ಮೇಲೆ ಮಲಗಿದ ರಾಮನ ಮುಖವನ್ನೇ ನೋಡುತ್ತಾ ಆ ಸೌಂದರ್ಯವನ್ನು ಆಸ್ವಾದಿಸುತ್ತಿದ್ದೆ.

ಆ ಸಮಯದಲ್ಲಿ ಜಯಂತ ಎಂಬ ಇಂದ್ರನ ಮಗ, ಕಾಕಾಸುರನ ರೂಪದಲ್ಲಿ ಬಂದು ನನ್ನನ್ನು ಹಿಂಸಿಸಿದ. ನಾನು ರಾಮನಿಗೆ ಎಚ್ಚರ ಆಗದಂತೆ ಅದನ್ನು ಓಡಿಸಲು ಎಷ್ಟೋ ಯತ್ನಿಸಿದೆ. ಸುಖವಾಗಿ ಮಲಗಿದ ರಾಮನ ನಿದ್ದೆಗೆ ಭಂಗ ತರಬಾರದು ಎಂದು ಪ್ರಯತ್ನಿಸಿದೆ. ಆದರೆ ಆ ಕಾಕ ನನ್ನನ್ನು ಬಲವಾಗಿ ಹಿಂಸಿಸಿತು.

ನನ್ನ ವಕ್ಷಸ್ಥಳದಿಂದ ರಕ್ತ ತೊಟ್ಟಿಕ್ಕಿತು. ಅದರಿಂದ ರಾಮ ಎಚ್ಚೆತ್ತು ನನ್ನನ್ನು ನೋಡಿದ. "ಯಾರು ಈ ರೀತಿ ನಿನ್ನನ್ನು ಹಿಂಸಿಸಿದ್ದು ?" ಎಂದು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನೋಡಿದ. ಎದುರಿಗಿದ್ದ ಕಾಗೆಯನ್ನು ನೋಡಿದ. ಕೋಪದಿಂದ "ಮಹಾಭುಜಂಗದೊಂದಿಗೆ ಸರಸವಾಡುವವರು ಯಾರು ?" ಎಂದು ಹೇಳುತ್ತ ಸುತ್ತಲೂ ನೋಡಿದ.

ಆಗ ರಾಮನ ಕೈಯಲ್ಲಿ ಧನುಸ್ಸಾಗಲೀ, ಬಾಣವಾಗಲೀ. ಕತ್ತಿಯಾಗಲೀ, ಯಾವುದೇ ಆಯುಧವಾಗಲೀ ಇರಲಿಲ್ಲ. ಸಮೀಪದಲ್ಲೆ ಬಿದ್ದಿದ್ದ ದರ್ಬೆಯನ್ನು ತೆಗೆದು ಅದರಲ್ಲಿ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಆ ಕಾಗೆಯ ಮೇಲೆ ಬಿಟ್ಟ. ಕಾಗೆ ಭಯದಿಂದ ಓಡಿತು. ಬ್ರಹ್ಮಾಸ್ತ್ರವೂ

ಬೆನ್ನಟ್ಟಿತು. ಆ ಕಾಗೆ ಮೂರು ಲೋಕಗಳನ್ನೂ ಸುತ್ತಿ ರಕ್ಷಿಸುವಂತೆ ಎಲ್ಲರನ್ನೂ ಪ್ರಾರ್ಥಿಸಿತು. ಇಂದ್ರ, ರುದ್ರ, ಬ್ರಹ್ಮ, ದೇವತೆಗಳು, ಋಷಿಗಳು, ಎಲ್ಲರೂ ಸಾಧ್ಯವಿಲ್ಲ ರಾಮನ ಅಸ್ತ್ರ ಅಮೋಘವಾದುದು ಎಂದು ಆ ಕಾಗೆಯನ್ನು ತಿರಸ್ಕರಿಸಿಬಿಟ್ಟರು.

ಆಗ, ಆ ಕಾಗೆ ರಕ್ಷಕರು ಯಾರೂ ಇಲ್ಲದೆ ಪುನಃ ರಾಮನ ಬಳಿಗೇ ಬಂದು ಓಡಲು ಶಕ್ತಿಯಿಲ್ಲದೆ ಧೊಪ್ಪನೆ ಬಿದ್ದಿತು. ತಪ್ಪು ಮಾಡಿದ್ದರೂ ನಾನು ಅದರ ತಲೆಯನ್ನು ರಾಮನ ಪಾದಗಳತ್ತ ತಿರುಗಿಸಿದೆ. ಶರಣಾಗತವಾದ ಆ ಕಾಗೆ ವಧೆಗೆ ಅರ್ಹವಾಗಿತ್ತು. ಆದರೂ ತನಗೆ ಶರಣಾಗತವಾದದ್ದರಿಂದ ರಾಮ ಅದನ್ನು ಕೃಪೆಯಿಂದ ರಕ್ಷಿಸಿದ.

**ತ್ರೀನ್ ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂ ಗತಃ ।**

**ವಧಾರ್ಹಮಪಿ ತಂ ಕಾಕಂ ಕೃಪಯಾ ಪರ್ಯಪಾಲಯತ್ ॥**

ಬ್ರಹ್ಮಾಸ್ತ್ರ ಅಮೋಘವಾದುದು. ಅದು ವ್ಯರ್ಥವಾಗುವಂಥದಲ್ಲ. ಆದ್ದರಿಂದ, ಆ ಬ್ರಹ್ಮಾಸ್ತ್ರಕ್ಕೆ ಕಾಗೆಯ ಬಲಗಣ್ಣನ್ನು ಆಹುತಿಯಾಗಿ ತೆಗೆದುಕೊಂಡು ಪ್ರಾಣದೊಂದಿಗೆ ಆ ಕಾಗೆಯನ್ನು ರಕ್ಷಿಸಿದ. ಕೃತಜ್ಞತೆಯಿಂದ ಆ ಕಾಕ ರಾಮನನ್ನು ನಮಸ್ಕರಿಸಿ ಹೋಯಿತು.

ಹೀಗೆ, ಚಿತ್ರಕೂಟದಲ್ಲಿದ್ದಾಗ ಕೇವಲ ಒಂದು ಕಾಗೆಯ ಮೇಲೆ ಕುಪಿತನಾಗಿ ರಾಮ ಬ್ರಹ್ಮಾಸ್ತ್ರವನ್ನು ಬಿಟ್ಟ. ಅಂಥ ರಾಮ ನಾನು ಇಷ್ಟು ಕಷ್ಟಪಡುತ್ತಿದ್ದರೂ ಈಗೇಕೆ ಸುಮ್ಮನಿದಾನೆ? ಹ್ನೂ, ರಾಮನನ್ನು ಅನ್ನುವುದರಲ್ಲಿ ಅರ್ಥವಿಲ್ಲ. ನನ್ನ ದುಷ್ಕರ್ಮ ಮಹತ್ತರವಾಗಿದೆ. ಅದಕ್ಕೇ ಇನ್ನೂ ರಾಮ ಬಂದಿಲ್ಲ. . . .

ಹನುಮಂತ, ಇದು ಒಂದು ನೆನಹು, ಇದನ್ನು ರಾಮನಿಗೆ ತಿಳಿಸು.

ಇನ್ನೊಂದು ನೆನಹನ್ನು ಜ್ಞಾಪಿಸುತ್ತೇನೆ. ಅದನ್ನೂ ರಾಮನಿಗೆ ಹೇಳು.

ಒಮ್ಮೆ ನಾನು, ರಾಮ ಇಬ್ಬರೇ ಕಾಡಿನಲ್ಲಿ ವಿಹರಿಸುತ್ತಿದ್ದ ವೇಳೆ. ನನ್ನ ಮುಖದ ತಿಲಕ ಅಳಿಸಿ ಹೋಗಿದ್ದುದನ್ನು ಗಮನಿಸಿದ ರಾಮ, ಸೀತೆ, ಮುಖದ ತಿಲಕ ಅಳಿಸಿ ಹೋಗಿದೆ. ಬಾ, ನಾನು ನಿನಗೆ ಹೊಸದಾಗಿ ತಿಲಕ ಇಡುತ್ತೇನೆ ಎಂದ.

ಕಾಡಿನಲ್ಲಿದ್ದ ಮಣಿಶಿಲೆಯನ್ನು ಅರೆದು ತಿಲಕವನ್ನು ಇಡಲು ಸಿದ್ಧನಾದ.

"ಎಲ್ಲಿ ! ಸರಿಯಾಗಿ ಮುಖವನ್ನು ತೋರಿಸು. ನಾನು ಚೆನ್ನಾಗಿ ತಿಲಕವನ್ನು ಇಡುತ್ತೇನೆ" ಎನ್ನುತ್ತಾ ಹತ್ತಿರಬಂದ. ನಾನು "ರಾಮ ತಿಲಕ ಇಡುತ್ತಾನೆ" ಎಂದು ಮುಖವನ್ನು ಅವನತ್ತ ತಿರುಗಿಸಿದೆ.

ರಾಮ ತನ್ನ ಮೃದುವಾದ ಎಡಗೈಯಿಂದ ನನ್ನ ಗಲ್ಲವನ್ನು ಹಿಡಿದು "ಎಲ್ಲಿ ಹೀಗೆ ತೋರಿಸು" ಎನ್ನುತ್ತಾ ನನ್ನ ಕೆನ್ನೆಯ ಮೇಲೆ ತಿಲಕವನ್ನಿಟ್ಟ.

ಆಗ ನಡೆದದ್ದನ್ನು ರಾಮ ನ್ಮರಿಸಿಕೊಳ್ಳುವಂತೆ ಹೇಳು. ಹನುಮಂತ, ಇದು ನಮ್ಮಿಬ್ಬರ ನಡುವೆಯೇ ನಡದದ್ದು. ನನಗೆ, ರಾಮನಿಗೆ ಇಬ್ಬರಿಗೆ ಮಾತ್ರ ತಿಳಿದ ವಿಷಯ ಇದು. ಇದನ್ನು ರಾಮನಿಗೆ ತಿಳಿಸು.

ಮೂರನೆಯ ಗುರುತನ್ನು ಹೇಳುತ್ತೇನೆ ಕೇಳು. (ಇದು ಕಾಡಿಗೆ ಬರುವುದಕ್ಕೆ ಮೊದಲು ಅಯೋಧ್ಯೆಯಲ್ಲಿ ನಡೆದದ್ದು–ಕಂಬರಾಮಾಯಣದ ವರ್ಣನೆ.) ಅಯೋಧ್ಯೆಯ ಸುಂದರವಾದ

ರಾಜೋದ್ಯಾನದಲ್ಲಿ ನಾನು ರಾಮನ ಬರವನ್ನೇ ನಿರೀಕ್ಷಿಸುತ್ತಿದ್ದೆ. ಅಂದು ಎಷ್ಟು ಹೊತ್ತಾದರೂ ರಾಮ ಬರಲಿಲ್ಲ. ಕಾದು–ಕಾದು ಬೇಸರವಾಯಿತು ರಾಮನ ವಿರಹವನ್ನು ಅನುಭವಿಸುವಾಗ ಒಂದು ನಿಮಿಷವೂ ಒಂದು ಯುಗದಂತೆ ಭಾಸವಾಗುತ್ತಿತ್ತು. ರಾಮ ಸ್ವಲ್ಪ ತಡವಾಡಿ ಬಂದ. ನಾನು ಏಕೆ ಇಷ್ಟು ಹೊತ್ತಾಯಿತು ? ಎಂದು ಕೇಳಿದೆ.

ಕೆಲಸ ಇತ್ತು ವೈದೇಹಿ ಎಂದ.

ನಿಮಗೆ ಈಗ ಏನೂ ಕೆಲಸ ಇರಲಿಲ್ಲ. ಬೇಕೆಂತಲೇ ತಡವಾಡಿ ಬಂದಿರಿ. ಇನ್ನುಮುಂದೆ ನೀವು ಹೀಗೆ ಮಾಡದಂತೆ ನಾನು ಇಲ್ಲೇ ನಿಮ್ಮನ್ನು ಕಟ್ಟಿಹಾಕುತ್ತೇನೆ ಎಂದು ತನ್ನ ತಲೆಯಲ್ಲಿ ಮುಡಿದಿದ್ದ ಮಲ್ಲಿಗೆಯ ಮಾಲೆಯನ್ನು ತೆಗೆದು ಅದರಿಂದ ರಾಮನ ಕೈಗಳನ್ನು ಕಟ್ಟಿದೆ.

ರಾಮನ ಕೈ ತಾವರೆಯಂತೆ ಮೃದು. ಮಲ್ಲಿಗೆಯ ಮಾಲೆಯಿಂದ ಕಟ್ಟಿದ ಮಾತ್ರದಿಂದಲೇ ಅವನ ಕೈಗಳು ಕೆಂಪಗಾದವು.

ಆ ನೆನಹನ್ನೂ ರಾಮನಿಗೆ ತಿಳಿಸು.

ಇದನ್ನೆಲ್ಲ ತಿಳಿಸಿ ಎಲ್ಲಕ್ಕಿಂತ ಶ್ರೇಷ್ಠವಾದ ಈ ಗುರುತನ್ನು ರಾಮನಿಗೆ ಕೊಡು ಎನ್ನುತ್ತಾ ತನ್ನ ವಸ್ತ್ರದಲ್ಲಿ ಕಟ್ಟಿದ್ದ ಚೂಡಾಮಣಿಯನ್ನು ತೆಗೆದು ಹನುಮಂತನಿಗೆ ಕೊಟ್ಟಳು. ಅದನ್ನು ಕೊಟ್ಟು ಸೀತೆ ಹನುಮಂತ, ಇದು ಶ್ರೇಷ್ಠವಾದ ಅಭಿಜ್ಞಾನ. ಇದನ್ನು ಕಂಡಾಗ ರಾಮನಿಗೆ ಮೂವರ ನೆನಪು ಬರುತ್ತದೆ. ವಿವಾಹ ಕಾಲದಲ್ಲಿ ನನ್ನ ತಂದೆಯಾದ ಜನಕ ಇದನ್ನು ದಶರಥನ ಸಮ್ಮುಖದಲ್ಲಿ ನನಗೆ ಕೊಟ್ಟ. ಹನುಮಂತ, ಈ ಚೂಡಾಮಣಿಯನ್ನು ರಾಮನಿಗೆ ಕೊಡು. ರಾಮನಿಗೆ ನನ್ನಲ್ಲಿ ಪ್ರೀತಿ ವರ್ಧಿಸುವಂತೆ ನೀನು ವಾಚಾ ಸಹಾಯಮಾಡು. "ವಾಚಾ ಧರ್ಮ ಮವಾಪ್ನುಹಿ" ಎಂಬಂತೆ ಮಾತಿನಿಂದ ನೀನು ಧರ್ಮವನ್ನು ಗಳಿಸು. ನನ್ನ ಬಗ್ಗೆ ರಾಮನಿಗೆ ಸದಭಿಪ್ರಾಯ ಮೂಡುವಂತೆ ಮಾಡಬೇಕಾದುದು ನಿನ್ನ ಹೊಣೆ. ನಿನ್ನ ಮಾತನ್ನು ಕೇಳಿ ರಾಮ ಲಂಕೆಗೆ ಬಂದು ರಾವಣಾದಿಗಳನ್ನು ನಿಗ್ರಹಿಸಿ ನನ್ನನ್ನು ಕರೆದೊಯ್ಯುವಂತಾಗಬೇಕು. ಹಾಗೆ ಮಾಡುವ ಭಾರ ನಿನ್ನದು ಎಂದಳು. ಸೀತೆಯ ಕರುಣವಾದ ಮಾತುಗಳನ್ನು ಕೇಳಿದ ಹನುಮಂತ; ತಾಯೆ ನಿಮ್ಮಾಣೆಯಾಗಿ ಹೇಳುತ್ತೇನೆ. ರಾಮ ಖಂಡಿತವಾಗಿ ಲಕ್ಷ್ಮಣನ ಸಮೇತ ಬಂದು ರಾಕ್ಷಸ ರನ್ನು ನಿಗ್ರಹಿಸುತ್ತಾನೆ. ಅವನ ಸಹಾಯಕ್ಕೆ ಅಸಂಖ್ಯ ಕಪಿವೀರರೊಡನೆ ಸುಗ್ರೀವನೂ ಬರುತ್ತಾನೆ ಧೈರ್ಯವಾಗಿರಿ ಎಂದು ಆಶ್ವಾಸನೆ ಕೊಟ್ಟ. ಆಗ ಸೀತೆ ಹನುಮಂತ, ನೀ ಹೇಳುವುದೇನೋ ಸರಿ. ಆದರೆ, ನನಗೊಂದು ಅನುಮಾನ. ಶತಯೋಜನ ವಿಸ್ತಾರವಾದ ಈ ಮಹಾಸಾಗರವನ್ನು ವಾಯು ಗರುಡ ಇಬ್ಬರು ದಾಟಲು ಶಕ್ತರು, ಇವರಿಬ್ಬರನ್ನು ಬಿಟ್ಟರೆ ನೀನೊಬ್ಬನೇ ಈ ಸಾಗರ ವನ್ನು ದಾಟಲು ಶಕ್ತ. ಹೀಗಿರುವಾಗ, ಇಷ್ಟು ವಿಸ್ತಾರವಾದ ಸಮುದ್ರವನ್ನು ದಾಟಿ ರಾಮ ಲಕ್ಷ್ಮಣರು, ಕಪಿಗಳೂ ಹೇಗೆ ಲಂಕೆಗೆ ಬರುತ್ತಾರೆ ? ಎಂದು ಕೇಳಿದಳು.

ಹನುಮಂತ ಸೀತೆಗೆ ಧೈರ್ಯವನ್ನುಂಟುಮಾಡುವ ಉದ್ದೇಶದಿಂದ "ದೇವಿ, ವಾನರರು ಎಂದರೆ ಏನೆಂದುಕೊಂಡಿರುವಿರಿ ? ಅವರು ಸಾಮಾನ್ಯರಲ್ಲ. ಸುಗ್ರೀವನ ಸೈನ್ಯದಲ್ಲಿ ಕೋಟ್ಯಂತರ ವಾನರರಿದ್ದಾರೆ. ಅವರಲ್ಲಿ ಒಬ್ಬೊಬ್ಬರೂ ಹತ್ತುಸಾವಿರ ಆನೆಯ ಬಲವುಳ್ಳವರು. ಇಷ್ಟವಾದ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳವರು, ಅವರಿಗೆ ಆಯುಧವೇ ಬೇಕಿಲ್ಲ. ಅವರ ಹಲ್ಲುಗಳು ಉಗುರುಗಳೇ ಅವರಿಗೆ ವಜ್ರಾಯುಧದಂತೆ ಇವೆ. ಅವರು ಸಮುದ್ರವನ್ನು ಹಾರುವುದು ಕಷ್ಟವೇ? ಇನ್ನು ರಾಮಲಕ್ಷ್ಮಣರು ಹೇಗೆ ಬರುತ್ತಾರೆ ಎಂದು ಯೋಚನೆಯೆ ? ಆ ರಾಮಲಕ್ಷ್ಮಣರು ನನ್ನ

ಎರಡೂ ಭುಜಗಳ ಮೇಲೆ ಏರಿಕೊಂಡು ಬರುತ್ತಾರೆ. ತಾಯೇ, ಯೋಚಿಸಬೇಡಿ. ವಾನರರೆಲ್ಲ ಮಹಾವೀರರು. ಹೆಚ್ಚೇಕೆ ? ಸುಗ್ರೀವನ ಸೈನದಲ್ಲಿ ನನಗಿಂತ ಕಡಿಮೆ ಬಲವುಳ್ಳ ವಾನರ ಒಬ್ಬನೂ ಇಲ್ಲ. ನಾನೇ ಎಲ್ಲರಿಗಿಂತ ಕಡೆಯವನು. ಯಾವಾಗಲೂ ಕೆಲಸ ಮಾಡಿಕೊಂಡು ಬರಲು ಸೇವಕ ನನ್ನು ಅಲ್ಲವೆ ಕಳಿಸುತ್ತಾರೆ. ಆದರಂತೆ ನನ್ನನ್ನು, ಎಲ್ಲರಿಗಿಂತ ಕಡೆಯವನಾದ ನನ್ನನ್ನು ನಿಮ್ಮನ್ನು ನೋಡಿಬರಲು ಕಳುಹಿಸಿದ್ದಾರೆ.

**ಮತ್ತಃ ಪ್ರತ್ಯವರಃ ಕಶ್ಚಿತ್ ನಾಸ್ತಿ ಸುಗ್ರೀವ ಸನ್ನಿಧೌ ।**

**ನಹಿ ಪ್ರಕೃಷ್ಟಾಃ ಪ್ರೇಷ್ಯಂತೇ ಪ್ರೇಷ್ಯಂತೇ ಹೀ ತರೇ ಜನಾಃ ॥**

"ನಾನೇ ಸಮುದ್ರವನ್ನು ದಾಟಿ ಬಂದೆ ಎಂದಮೇಲೆ ಉಳಿದವರನ್ನು ಕೇಳಬೇಕೆ ? ಯೋಚಿಸ ಬೇಡಿ. ಇಲ್ಲಿಂದ ನಾನು ಹೋಗುವುದೇ ತಡ. ರಾಮಲಕ್ಷ್ಮಣರನ್ನು ಸೈನ್ಯದೊಂದಿಗೆ ಕರೆದು ತರುತ್ತೇನೆ. ರಾಮನು ತನ್ನ ತೀಕ್ಷ್ಣವಾದ ಬಾಣಗಳಿಂದ ರಾವಣನನ್ನು ಭಾಂದವರ ಸಹಿತವಾಗಿ ನಾಶಮಾಡುತ್ತಾನೆ. ನೀವು ರಾಮನನ್ನು ಸೇರಿ ಸುಖಿಸುತ್ತೀರಿ–ಇದು ಸತ್ಯ. ನೀವು ಅದುವರೆಗೆ ಧೈರ್ಯವಾಗಿರಿ" ಎಂದು ಆಶ್ವಾಸನೆ ಕೊಟ್ಟ.

ಹನುಮಂತ ತಾನು ವಾನರರಲ್ಲೆಲ್ಲ ಶ್ರೇಷ್ಠನಾಗಿದ್ದರೂ "ತನಗಿಂತ ಕಡೆಯುವರು ಯಾರೂ ಇಲ್ಲ" ಎಂದು ಹೇಳಿಕೊಂಡ. ಉತ್ತಮರ ಲಕ್ಷಣವೇ ಅಂಥದು. ಉತ್ತಮರು ಯಾವಾಗಲೂ ಕೀರ್ತಿಗಾಗಲೀ, ಹೆಸರಿಗಾಗಲೀ ಆಸೆ ಪಡುವುದಿಲ್ಲ. ಯಾವಾಗಲೂ ದಾಸರಾಗಿರುವುದರಲ್ಲೆ ಅವರಿಗೆ ತೃಪ್ತಿ. ನಿಜವಾದ ಭಕ್ತನ ಲಕ್ಷಣವೇ ಅದು. ಅದನ್ನೇ ಕುಲಶೇಖರ ಆಳ್ವಾರ್.

**ತ್ವದ್ಭೃತ್ಯಭೃತ್ಯ ಪರಿಚಾರಕ ಭೃತ್ಯಭೃತ್ಯ**

**ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ ।**

"ದೇವಾ, ನಾನು ನಿನ್ನ ಭೃತ್ಯರ ಕೋಟಿಯಲ್ಲಿ ಕಡೆಯವನಾಗಿ ಇರುವಂತೆ ಅನುಗ್ರಹಿಸು" ಎಂಬು ಪ್ರಾರ್ಥಿಸಿದ್ದಾರೆ, ಹನುಮಂತನ ಮಾತಿಗೆ ಸಂತೋಷಗೊಂಡಳು ಸೀತೆ. ಹನುಮಂತ ದೇವಿಯನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿದ. ''ಅಮ್ಮಾ, ಹೋಗಿ ಬರಲೇ'' ಎಂದ.

ಸೀತೆ ಮತ್ತೆ ಮತ್ತೆ, "ಹನುಮಂತ, ಕೌಸಲ್ಯಾಪುತ್ರನಾದ ರಾಮನಿಗೆ ನನ್ನ ನಮಸ್ಕಾರ ತಿಳಿಸು. ಸುಮಿತ್ರಾನಂದವರ್ಧನನಾದ ಸೌಮಿತ್ರಿಯನ್ನು ಕೇಳಿದೆ ಎಂದು ಹೇಳು. ಆ ಲಕ್ಷ್ಮಣ ಬಹಳ ವಿನಯವಂತ, ಸದಾಚಾರಿ, ಶೀಲವಂತ, ಗುಣವಂತ, ಭ್ರಾತೃವತ್ಸಲ. ಸದಾ ರಾಮನನ್ನು ತಂದೆಯಂತೆ ಸೇವಿಸುವವ. ನನ್ನನ್ನು ತಾಯಿಯಂತೆ ಸೇವಿಸಿದ ಮಹಾನುಭಾವ. ಅವನನ್ನು ನನ್ನ ಮೇಲೆ ಕೋಪಿಸಬೇಡ ಎನ್ನು. ಲಕ್ಷ್ಮೀಸಂಪನ್ನನಾದ ಆ ಲಕ್ಷ್ಮಣ ಜಿತೇಂದ್ರಿಯ, ಮಿತಭಾಷಿ. ಹಿರಿಯರನ್ನು ಸೇವಿಸಿದವ. ಅವನನ್ನು ಕೇಳಿದೆ ಎಂದು ಹೇಳು" ಎಂದು ಸೀತೆ ಲಕ್ಷ್ಮಣನ ಗುಣ ಗಳನ್ನು ಬಹಳವಾಗಿ ನೆನಸಿಕೊಂಡಳು. "ಮಹಾಭಾಗವತ ಶಿರೋಮಣಿಯಾದ ಲಕ್ಷ್ಮಣನನ್ನು ಕ್ರೂರವಾದ ವಚನದಿಂದ ನೋಯಿಸಿದ್ದಕ್ಕಾಗಿ ತನಗೆ ಈ ಸ್ಥಿತಿ ಬಂತು'' ಎಂದು ಮನಗಂಡ ಸೀತೆ, ಈಗ ಆ ಭಾಗವತ ಶಿರೋಮಣಿ ಲಕ್ಷ್ಮಣನ ಗುಣಗಳನ್ನು ಹನುಮಂತನ ಎದುರಿನಲ್ಲಿ ಪ್ರಶಂಸಿಸುತ್ತಾಳೆ.

"ಹನುಮಂತ, ವಾನರ ರಾಜನಾದ, ರಾಮನಿಗೆ ಸಖನಾದ ಸುಗ್ರೀವನನ್ನು ಕೇಳಿದೆ ಎಂದು ಹೇಳು. ಹಿರಿಯರಾದ ವಾನರ ವೀರರನ್ನೂ ಒಟ್ಟಿನಲ್ಲಿ ಎಲ್ಲರನ್ನೂ ಕೇಳಿದೆ ಎಂದು ಹೇಳು."

ಹನುಮಂತ, ಮತ್ತೆ ಮತ್ತೆ ರಾಮನಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ನಾನು ನಿನಗೆ ಹೇಳಿದ ನೆನಪುಗಳನ್ನೆಲ್ಲ ರಾಮನಿಗೆ ಜ್ಞಾಪಿಸು. ಈ ಅನರ್ಘ್ಯವಾದ ಚೂಡಾಮಣಿಯನ್ನು ನನ್ನ ಗುರುತಾಗಿ ಕೊಡು. ಮತ್ತೆ ಮತ್ತೆ ನನ್ನ ಸ್ಥಿತಿಯನ್ನು ಚೆನ್ನಾಗಿ ಸ್ಪಷ್ಟಪಡಿಸು. ಇನ್ನು ಒಂದು ತಿಂಗಳು ಮಾತ್ರ ಜೀವಿಸಿರುವುದಾಗಿ ತಿಳಿಸು. ಹನುಮಂತ, ಇನ್ನೆಷ್ಟು ಹೇಳಲಿ ? ಮುಂದಿನ ಎಲ್ಲ ಭಾರವೂ ನಿನ್ನನ್ನು ಅವಲಂಭಿಸಿದೆ.

''ಇಷ್ಟು ದೂರ ಬಂದ ನಿನ್ನನ್ನು ಇಲ್ಲೇ ಎಲ್ಲಾದರೂ ಇದ್ದು ಶ್ರಮ ಪರಿಹಾರ ಮಾಡಿಕೊಂಡು ಹೋಗು ಎಂದು ಹೇಳಲೂ ಅಸಮರ್ಥಳಾಗಿದೇನೆ. ಅಂಥ ಸ್ಥಿತಿಯಲ್ಲಿ ನಾನಿದೇನೆ. ಹನುಮಂತ, ಹೋಗು, ನಿನಗೆ ಮಂಗಳವಾಗಲಿ" ಎಂದು ಹರಸಿ ಹನುಮಂತನನ್ನು ಬೀಳ್ಕೊಟ್ಟಳು ಸೀತೆ. ಹನುಮಂತ ಮತ್ತೆ ಮತ್ತೆ ದೇವಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದ. ಸೀತೆ ಕೊಟ್ಟ ಆ ಚೂಡಾಮಣಿಯನ್ನು ಭದ್ರವಾಗಿಟ್ಟುಕೊಂಡು ಸೀತೆಗೆ ನಮಸ್ಕರಿಸಿ ಅಲ್ಲಿಂದ ಉತ್ತರ ದಿಕ್ಕಿನ ಕಡೆಗೆ ಪ್ರಯಾಣ ಮಾಡಿದ.

ಅಲ್ಲಿಂದ ಹೊರಟು ಅಶೋಕವನದ ಉತ್ತರ ಭಾಗದಲ್ಲಿ ಕುಳಿತು ಯೋಚಿಸಿದ ಹನುಮಂತ. ''ನಾ ಬಂದ ಕಾರ್ಯ ಎಲ್ಲ ಸಾಂಗವಾಗಿ ನೆರವೇರಿತು. ಆದರೆ, ಇನ್ನೂ ಸ್ವಲ್ಪ ಕಾರ್ಯ ಮಾಡಬೇಕಾಗಿದೆ. ರಾತ್ರಿಯಲ್ಲಿ ಲಂಕೆಯನ್ನು ನೋಡಿದೆ. ಮತ್ತೊಮ್ಮೆ ಸರಿಯಾಗಿ ರಾವಣನನ್ನು ನೋಡಿ ಅವನ ಬಲವನ್ನು ಕಂಡುಕೊಳ್ಳಬೇಕು. ಇದಕ್ಕಾಗಿ ಈಗ ಈ ಅಶೋಕವನವನ್ನು ಧ್ವಂಸ ಮಾಡಬೇಕು" ಎಂದುಕೊಂಡು ಹನುಮಂತ ಅಶೋಕವನವನ್ನು ಧ್ವಂಸಮಾಡತೊಡಗಿದ.

ಭೀಮಕಾಯನಾಗಿ ಬೆಳೆದ ಹನುಮಂತ. ಅಶೋಕವನದಲ್ಲಿದ್ದ ಅನೇಕ ವೃಕ್ಷಗಳನ್ನು ಪುಡಿಪುಡಿಮಾಡಿದ. ಪರ್ವತದ ಶಿಖರಗಳನ್ನೆಲ್ಲ ಪುಡಿಮಾಡಿದ. ಪುಷ್ಪ ಫಲಗಳಿಂದ ತುಂಬಿದ ಅನೇಕ ವೃಕ್ಷಗಳು ಬುಡಸಹಿತ ಧರೆಗೆ ಉರುಳಿದವು. ಅಶೋಕವನದಲ್ಲಿದ್ದ ಸರೋವರದ ಕಟ್ಟೆಗಳೆಲ್ಲ ಒಡೆಯಿತು. ಎಲ್ಲೆಲ್ಲಿ ನೋಡಿದರೂ ಒಡೆದ ಸರೋವರದ ಸೋಪಾನಗಳು, ಮುರಿದ ಮರಗಿಡಗಳು ಕಾಣಬರುತ್ತಿದ್ದವು. ಇಂದ್ರನ ನಂದನವನದಂತೆ ಶೋಭಾಯಮಾನವಾಗಿದ್ದ ರಾವಣನ ಅಶೋಕವನ ಕೆಲವೇ ನಿಮಿಷಗಳಲ್ಲಿ ರುದ್ರಭೂಮಿಯಂತಾಯಿತು.

ಹನುಮಂತನ ಸಿಂಹನಾದ ರಾಕ್ಷಸರ ಹೃದಯವನ್ನೇ ಕಂಪನಗೊಳಿಸುವಂತಿತ್ತು. ಲಂಕೆಗೆ ಲಂಕೆಯೇ ವಿಸ್ಮಯಗೊಂಡಿತು. ''ಏನು ! ಏನು !'' ಎಂಬ ಭಯಮಿಶ್ರಿತವಾದ ಉದ್ಗಾರ ಎಲ್ಲರ ಬಾಯಲ್ಲೂ ಕೇಳಿಬರುತ್ತಿತ್ತು.

ಅಶೋಕವನದಲ್ಲಿ ಸೀತೆಗೆ ಕಾವಲಿದ್ದ ರಾಕ್ಷಸಿಯರೂ ಇದನ್ನು ನೋಡಿದರು. ಅವರಿಗೆ ಭೀಮಕಾಯನಾದ ಮಾರುತಿಯನ್ನು ನೋಡಿ ಅಂಜಿಕೆಯಾಯಿತು. ಎಲ್ಲರೂ ಸೀತೆಯ ಬಳಿಗೆ ಓಡಿ ಬಂದರು. ಸೀತೆಯನ್ನು ಕುರಿತು "ಸೀತೆ, ಈ ವನವನ್ನು ಧ್ವಂಸಮಾಡುತ್ತಿರುವ ಆ ಭೀಮಕಾಯದ ವಾನರ ಯಾರು ಹೇಳು ? ನಿನಗೆ ಗೊತ್ತಿರಬೇಕು. ನಿನ್ನೊಡನೆ ಇವನು ಮಾತನಾಡುತ್ತಿದ್ದಂತೆ ಇದ್ದಿತು. ನಿನಗೆ ಗೊತ್ತಿದ್ದರೆ ಹೇಳು" ಎಂದು ಕೇಳಿದರು.

ಅದಕ್ಕೆ ಸೀತೆ, "ಇವನಾರು ಎಂದು ನನ್ನನ್ನು ಕೇಳುತ್ತಿದೀರಿ ನನಗೆ ಇವನಾರೋ ಗೊತ್ತಿಲ್ಲ. ಇವನೂ ರಾಕ್ಷಸನೇ ಇರಬಹುದು. ರಾಕ್ಷಸಿಯರಾದ ನಿಮಗೇ ರಾಕ್ಷಸರ ಮಾಯೆ ತಿಳಿಯುತ್ತದೆ. ಹಾವಿಗೆ ಕಾಲು ಇದೆಯೋ ಇಲ್ಲವೋ ಎಂಬುದು ಹಾವಿಗೆ ಮಾತ್ರವೇ ಗೊತ್ತಾಗುತ್ತದೆ. ಅಹಿರೇವ

ಅಹೇಃ ಪಾರ್ದಾ ವಿಜಾನಾತಿ ನ ಸಂಶಯಃ । ನಾನೂ ಈ ಭೀಮಕಾಯನನ್ನು ಕಂಡು ಭಯಪಡುತ್ತಿದೇನೆ. ಇವನೂ ಕಾಮರೂಪಿಯಾದ ರಾಕ್ಷಸನೇ ಇರಬೇಕು" ಎಂದಳು,

"ಇಲ್ಲಿ ಸೀತೆ ಅಸತ್ಯ ನುಡಿಯಲಿಲ್ಲವೆ ?" ಎಂಬ ಪ್ರಶ್ನೆ ಏಳುವುದು ಸಹಜ,

ಶಾಸ್ತ್ರದ ಪ್ರಕಾರ ಐದು ವಿಧವಾದ ಸಂಕಟ ಸಮಯಗಳಲ್ಲಿ ಅಸತ್ಯ ಹೇಳಿದರೆ ಭಾದಕವಿಲ್ಲ ಎಂದಿದೆ.

ಸಜ್ಜನರ ಪ್ರಾಣ ಉಳಿಸುವುದಕ್ಕಾಗಿ, ಅಸತ್ಯ ನುಡಿಯಬಹುದು ಎಂದಿದೆ.

ಹನುಮಂತನಿಗೆ ಏನಾದರೂ ಆದರೆ ಎಂಬ ಭಯದಿಂದ ಸೀತೆ "ಗೊತ್ತಿಲ್ಲ" ಎನ್ನಲಿಲ್ಲ.

ರಾಕ್ಷಸಿಯರನ್ನು ಕಾಪಾಡುವ ಸಲುವಾಗಿಯೇ ಹಾಗೆ ಹೇಳಿದಳು.

ತ್ರಿಜಟೆಯ ಸ್ವಪ್ನ ವೃತ್ತಾಂತವನ್ನು ಕೇಳಿದ ಮೇಲೆ ರಾಕ್ಷಸಿಯರೂ ಸೀತೆಯಲ್ಲಿ ಶರಣಾಗತಿ ಮಾಡದಿದ್ದಾಗ್ಯೂ ಸಹ ಸೀತೆ "ಭವೇಯಂ ಶರಣಂ ಹಿವಃ" ಎಂದು ರಾಕ್ಷಸಿಯರನ್ನು ಕಾಪಾಡುವುದಾಗಿ ಅಭಯ ನೀಡಿದಳು. ಈಗ, ರಾಕ್ಷಸಿಯರ ಪ್ರಶ್ನೆಗೆ ಸರಿಯಾದ ಉತ್ತರಕೊಟ್ಟರೆ ಈ ರಾಕ್ಷಸಿಯರು ಹಾಗೇ ಹೋಗಿ ಅದನ್ನು ರಾವಣನಿಗೆ ತಿಳಿಸುತ್ತಾರೆ. ಆಗ ರಾವಣ ಮೊದಲು ಈ ರಾಕ್ಷಸಿಯರನ್ನೆಲ್ಲ ಕೊಲ್ಲುವಂತೆ ಆಜ್ಞಾಪಿಸುತ್ತಾನೆ. ಏಕೆಂದರೆ ಸೀತೆಯ ರಕ್ಷಣೆಗಾಗಿಯೇ ರಾವಣ ಅವರನ್ನು ನಿಯಮಿಸಿದ್ದ. ಹೀಗಿದ್ದಾಗ, "ನೀವೇಕೆ ಆ ವಾನರನಿಗೆ ಸೀತೆಯೊಂದಿಗೆ ಮಾತಾಡಲು ಅವಕಾಶಕೊಟ್ಟಿರಿ ? ಆಗ, ನೀವೇನು ಮಾಡುತ್ತಿದ್ದಿರಿ ?" ಎಂದು ಕೇಳಿದರೆ ರಾಕ್ಷಸಿಯರು ಏನು ಹೇಳಬೇಕು ! "ನಿದ್ದೆ ಮಾಡುತ್ತಿದ್ದೆವು" ಎಂದರೆ ತಕ್ಷಣ ಅವರನ್ನು ಕೊಲ್ಲಿಸಲು ಆಜ್ಞಾಪಿಸುತ್ತಾನೆ. ಸೀತೆಯೇ "ನಿಮ್ಮನ್ನು ರಕ್ಷಿಸುತ್ತೇನೆ'' ಎಂದು ತಾನಾಗಿಯೇ ಅಭಯ ನೀಡಿದ್ದಾಳೆ. ಆದ್ದರಿಂದ, ಶರಣಾಗತ ರಕ್ಷಣೆಯೇ ಪರಮಧರ್ಮ ಎಂಬುದನ್ನರಿತ ಸೀತೆ ಗೊತ್ತಿಲ್ಲ ಎಂದು ಹೇಳಿದಳು.

ಹನುಮಂತನ ವಿಶ್ವರೂಪವನ್ನು ನೋಡಿದ್ದ ಸೀತೆಗೆ ಹನುಮಂತನ ಶಕ್ತಿಯ ವಿಷಯದಲ್ಲಿ ಅನುಮಾನವಿರಲಿಲ್ಲ.

ಸೀತೆ ''ಗೊತ್ತಿಲ್ಲ'' ಎಂದು ಹೇಳಿದ ಒಡನೆಯೇ ರಾಕ್ಷಸಿಯರು ರಾವಣನ ಬಳಿಗೆ ಓಡಿದರು "ರಾಜ್ಞ, ಅಶೋಕವನಕ್ಕೆ ಒಂದು ದೊಡ್ಡ ಕಪಿ ಬಂದಿದೆ. ಅದು ನೋಡಲು ಕಪಿಯಂತಿದೆ. ಆದರೆ ಅದರ ಕಾರ್ಯ ಬಹಳ ಭಯಂಕರವಾಗಿದೆ. ವನವನ್ನೆಲ್ಲ ನಾಶಮಾಡುತ್ತಿದೆ. ಸೀತೆ ಕುಳಿತಿದ್ದ ಶಿಂಶುಪಾವೃಕ್ಷವೊಂದನ್ನು ಬಿಟ್ಟು ಉಳಿದದ್ದನ್ನೆಲ್ಲ ಧ್ವಂಸಮಾಡಿದೆ. ಸೀತೆಯ ಮೇಲಿನ ಗೌರವದಿಂದಲೋ ಅಥವಾ ಈ ವನವನ್ನೆಲ್ಲ ಧ್ವಂಸಮಾಡಿದ ಆಯಾಸದಿಂದಲೋ ಸೀತೆ ಕುಳಿತಿರುವ ಆ ಮರವೊಂದನ್ನು ಬಿಟ್ಟು ಉಳಿದದ್ದೆಲ್ಲ ನಾಶವಾಗಿಬಿಟ್ಟಿದೆ. ಕೋಪದ ಕಿಡಿಗಳನ್ನು ಕಾರುವ ತನ್ನ ಇಪ್ಪತ್ತು ಕಣ್ಣುಗಳನ್ನೂ ತಿರುಗಿಸುತ್ತಾ "ರಾಕ್ಷಸಿಯರೆ, ಇದೇನು ನೀವು ಹೇಳುತ್ತಿರುವ ಮಾತು ! ಹೆಚ್ಚಾಗಿ ಕುಡಿದು ಮತಿ ಭ್ರಾಂತವಾಗಿಲ್ಲವಷ್ಟೆ ? ಚೆನ್ನಾಗಿ ನೋಡಿ ಹೇಳಿ" ಎಂದು ಗುಡುಗಿದ.

"ಇಲ್ಲ, ಪ್ರಭು. ನಾವು ಸರಿಯಾಗಿ ನೋಡಿಯೇ ಹೇಳುತ್ತಿದೇವೆ. ಅಬ್ಬ ! ಆ ಭೀಮಕಾಯ ವಾನರನನ್ನು ನೋಡಲೂ ಆಗುತ್ತಿಲ್ಲ. ಏನು ಬಲ ಆತನದು ! ಲೀಲಾಜಾಲವಾಗಿ ಕೆಲವೇ ನಿಮಿಷಗಳಲ್ಲಿ ಇಡೀ ವನವನ್ನೇ ಹಾಳುಮಾಡಿದ. ನೀವೇ ಬಂದು ನೋಡಿ" ಎಂದರು ರಾಕ್ಷಸಿಯರು,

ತನ್ನ ಕಣ್ಣುಗಳಿಂದ ಕೋಪದ ಕಿಡಿಗಳನ್ನು ಉದುರಿಸುತ್ತ ಪಕ್ಕಕ್ಕೆ ತಿರುಗಿದ ರಾವಣ. ಅಲ್ಲಿ ರಾವಣನ ಬಲಕ್ಕೆ ಸಮಾನವಾದ ಬಲವುಳ್ಳ "ಕಿಂಕರ"ರೆಂಬ ಎಂಬತ್ತು ಸಾವಿರ ರಾಕ್ಷಸರಿದ್ದರು.

ಅವರನ್ನೆಲ್ಲ ಆ ಕಪಿಯನ್ನು ನಾಶಮಾಡಿ ಬನ್ನಿ ಎಂದು ಅಪ್ಪಣೆ ಮಾಡಿ ಕಳುಹಿಸಿದ. ಆ ಎಂಬತ್ತು ಸಾವಿರ ಘೋರ ರಾಕ್ಷಸರು ಬಂದರು. ಸೂರ್ಯನಂತೆ ಹೊಳೆಯುವ ರಥಗಳನ್ನೇರಿ, ತೀಕ್ಷ್ಣವಾದ ಬಾಣಗಳನ್ನು ತೊಟ್ಟು, ಪರಿಘ, ತೋಮರ, ಗದೆ ಮುಂತಾದ ಆಯುಧಗಳನ್ನು ಹಿಡಿದುಕೊಂಡು, ಯುದ್ಧದ ಸಕಲ ಸಿದ್ಧತೆಗಳೊಂದಿಗೆ ಹನುಮಂತನತ್ತ ಬಂದರು. ಸಾವಿರಾರು ಪತಂಗಗಳು ಪ್ರಜ್ವಲಿಸುತ್ತಿರುವ ದೀಪದ ಹತ್ತಿರ ಬರುವಂತೆ ಆ ಕಿಂಕರ ರಾಕ್ಷಸರು ಹನುಮಂತನತ್ತ ಬಂದರು.

ಸಾವಿರಾರು ರಾಕ್ಷಸರು ತನ್ನಮೇಲೆ ಯುದ್ಧಕ್ಕೆ ಬರುತ್ತಿರುವುದನ್ನು ಕಂಡ, ವೀರ ಹನುಮಂತ ತನ್ನ ಬಾಲವನ್ನು ವೇಗವಾಗಿ ಒಮ್ಮೆ ನೆಲದಮೇಲೆ ಅಪ್ಪಳಿಸಿದ. ಉತ್ಸಾಹದಿಂದ ನೆಗೆದು ತನ್ನ ಬಲಿಷ್ಠವಾದ ಕೈಯಿಂದ ತನ್ನ ಭುಜವನ್ನೇ ತಟ್ಟಿಕೊಂಡ. ಲಂಕೆಗೆ ಲಂಕೆಯೇ ಪ್ರತಿಧ್ವನಿಸುವಂತೆ ಭಯಂಕರವಾದ ಸಿಂಹನಾದ ಮಾಡಿ ಉಚ್ಚಕಂಠದಲ್ಲಿ ಕೂಗಿದ.

**ಜಯತ್ಯತಿಬಲೋ ರಾಮೋ ಲಕ್ಷ್ಮಣಶ್ಚ ಮಹಾಬಲಃ ।**
**ರಾಜಾ ಜಯತಿ ಸುಗ್ರೀವೋ ರಾಘವೇಣಾಭಿಪಾಲಿತಃ ॥**
**ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ ।**
**ಹನುಮಾನ್ ಶತ್ರುಸೈನ್ಯಾನಾಂ ನಿಹಂತಾ ಮಾರುತಾತ್ಮಜಃ ॥**
**ನ ರಾವಣ ಸಹಸ್ರಂ ಮೇ ಯುದ್ಧೇ ಪ್ರತಿಬಲಂ ಭವೇತ್ ।**
**ಶಿಲಾಭಿಸ್ತು ಪ್ರಹರತಃ ಪಾದಪೈಶ್ಚ ಸಹಸ್ರಶಃ ॥**

``ಮಹಾ ಪರಾಕ್ರಮಿಯಾದ ರಾಮನಿಗೆ ಜಯವಾಗಲಿ. ರಾಮಾನುಜನಾದ ಆ ಧೀರ ಲಕ್ಷ್ಮಣನಿಗೆ ಜಯವಾಗಲಿ. ರಾಘವನಿಂದ ರಕ್ಷಿಸಲ್ಪಡುತ್ತಿರುವ ಮಹಾರಾಜ ಸುಗ್ರೀವನಿಗೆ ಜಯವಾಗಲಿ.

ನಾನು ರಾಮದಾಸ. ಹನುಮಂತ ಎಂಬುದು ಹೆಸರು. ಕೋಸಲೇಂದ್ರ ರಾಮ ಯಾವಾಗಲೂ ಕುತ್ಸಿತ ಕರ್ಮವನ್ನೇ ಮಾಡದವನು. ಅಂಥ ರಾಮನ ದಾಸನಾದ ನಾನು ಈ ಶತ್ರು ಸೈನ್ಯವನ್ನು ಪುಡಿಮಾಡಿಬಿಡುತ್ತೇನೆ. ಸಾವಿರ ರಾವಣರೂ ನನ್ನೊಡನೆ ಯುದ್ಧಕ್ಕೆ ನಿಲ್ಲಲು ಸಮರ್ಥರಾಗರು. ಶತ್ರುಗಳನ್ನೆಲ್ಲ ನಾಶಮಾಡಿ ಲಂಕೆಯನ್ನು ಸುಟ್ಟು, ಸೀತಾದೇವಿಗೆ ನಮಿಸಿ ಎಲ್ಲರೂ ನೋಡುತ್ತಿರುವಂತೆಯೇ ಕೃತಕೃತ್ಯನಾಗಿ ಹಿಂದಿರುಗುತ್ತೇನೆ" ಎಂದು ಯುದ್ಧ ಪ್ರಾರಂಭಿಸುವ ಮೊದಲೇ ತನ್ನ ಸ್ವಾಮಿಯಾದ ರಾಮನಿಗೆ ಜಯಕಾರಮಾಡಿದ, ಧೀರನಾದ ಹನುಮಂತ. ಹನುಮಂತನ ಈ ಸಿಂಹವಾಣಿಯನ್ನು ಕೇಳಿಯೇ ಆ ರಾಕ್ಷಸರು ಎದೆಗುಂದಿದರು. ಆದರೂ ದೀಪದಲ್ಲಿ ಬೀಳಲು ಹಾತೊರೆಯುತ್ತಿರುವ ಪತಂಗಗಳಂತೆ ಹನುಮಂತನ ಮೇಲೆ ಬಾಣದ ಮಳೆಗರೆದರು.

ಅಶೋಕವನದ ಬಾಗಿಲಿಗೆ ಆಸರೆಯಾಗಿದ್ದ ಪರಿಘವನ್ನು ಒಮ್ಮೆ ಬಾಗಿಲನ್ನು ಝಾಡಿಸಿ ಕಿತ್ತುಕೊಂಡ ಹನುಮಂತ. ಗರುಡನು ಸರ್ಪವನ್ನು ಹಿಡಿಯುವಂತೆ ಆ ಪರಿಘವನ್ನು ಕೈಯಲ್ಲಿ ಧರಿಸಿ ಅದನ್ನು ತಿರುಗಿಸುತ್ತಾ ಮುನ್ನುಗ್ಗಿದ. ಸಹಸ್ರಧಾರೆಯುಳ್ಳ ವಜ್ರಾಯುಧವನ್ನು ದೇವೇಂದ್ರ ತಿರುಗಿಸಿ ದೈತ್ಯರನ್ನು ನಾಶಮಾಡುವಂತೆ ಹನುಮಂತ ತನ್ನ ಕೈಯಲ್ಲಿದ್ದ ಪರಿಘವನ್ನು ವೇಗವಾಗಿ ತಿರುಗಿಸಿ ಆ ರಾಕ್ಷಸರ ಮೇಲೆ ಪ್ರಹಾರಮಾಡಿದ.

ಆ ಪ್ರಹಾರಕ್ಕೆ ಸಿಕ್ಕಿದ ಆ ರಾಕ್ಷಸ ಸೈನ್ಯ ನುಚ್ಚುನೂರಾಯಿತು. ರಥಗಳು ಪುಡಿ-ಪುಡಿ

ಯಾದವು. ಆನೆಯ ಕಾಲಿಗೆ ಸಿಕ್ಕಿದ ಇರುವೆಗಳ ಸಮೂಹದಂತೆ ಆ ರಾಕ್ಷಸ ಸೈನ್ಯ ನಿರ್ನಾಮವಾಯಿತು. ದೂರದಲ್ಲಿ ನೋಡುತ್ತಿದ್ದ ಕೆಲ ರಾಕ್ಷಸರು ಪ್ರಾಣಭಯದಿಂದ ಅಲ್ಲಿಂದ ಕಾಲ್ತೆಗೆದರು, ಓಡಿಹೋಗಿ ರಾವಣನಿಗೆ ವಿಷಯವನ್ನೂ ತಿಳಿಸಿದರು.

ಕೋಪದಿಂದ ಕೆಂಪಡರಿದ್ದ ರಾವಣನ ಕಣ್ಣುಗಳು ಮತ್ತಷ್ಟು ಕಾವೇರಿದವು. ಪ್ರಹಸ್ತನ ಮಗನಾದ ಮಹಾಪರಾಕ್ರಮಿ "ಜಂಬುಮಾಲಿ" ಎಂಬುವವನನ್ನು ಕಳುಹಿಸಿದ.

ಆ ಜಂಬುಮಾಲಿ ರೌದ್ರ ಸ್ವಭಾವದ ಪ್ರತೀಕ. ಆದಕ್ಕೆ ತಕ್ಕಂತೆ ಕೆಂಪುವಸ್ತ್ರ, ಕೆಂಪು ಹೂಗಳು, ಕೆಂಪು ಆಭರಣಗಳಿಂದ ಅಲಂಕಾರ ಮಾಡಿಕೊಂಡು ಹನುಮಂತನ ಮೇಲೆ ಯುದ್ಧಕ್ಕೆ ಹೊರಟ.

ಕಿಂಕರರನ್ನು ಕೊಂದ ಬಳಿಕ ಹನುಮಂತ ಯೋಚಿಸಿದ. "ಅಶೋಕವನವನ್ನೇನೋ ಧ್ವಂಸ ಮಾಡಿದ್ದಾಯಿತು. ಆದರೆ, ಈ ಚೈತ್ಯಪ್ರಾಸಾದವನ್ನು ಇನ್ನೂ ಕೆಡವಲಿಲ್ಲ. ಆ ಕಾರ್ಯವನ್ನು ಮಾಡಬೇಕು" ಎಂದುಕೊಂಡು ತಾನು ಕುಳಿತಲ್ಲಿಂದ ಆ ಪ್ರಾಸಾದದ ಮೇಲಕ್ಕೆ ಹಾರಿದ. ಆ ಚೈತ್ಯ ಪ್ರಾಸಾದವೋ ಮೇರುಪರ್ವತದಂತೆ ಎತ್ತರವಾಗಿತ್ತು. ನಾನಾರೀತಿಯ ಸುವರ್ಣಕಂಬಗಳಿಂದಲೂ, ಧ್ವಜಪತಾಕೆಗಳಿಂದಲೂ, ರತ್ನ, ವಜ್ರದ ಕೆತ್ತನೆ ಕಾರ್ಯದಿಂದಲೂ ಶೋಭಿಸುತ್ತಿತ್ತು. ಮುಗಿಲನ್ನು ಮುಟ್ಟುವಂತೆ ಎತ್ತರವಾಗಿದ್ದ ಆ ಚೈತ್ಯಪ್ರಾಸಾದವನ್ನು ತನ್ನ ಪಾದಾಘಾತದಿಂದ ಒದೆದು ಕೆಡವಿದ. ಆ ಪ್ರಾಸಾದದ ಸ್ತಂಭಗಳು, ಗೋಡೆಗಳು ''ಛಟಲ್-ಛಟಲ್" ಎಂಬ ಮಹಾನಾದದಿಂದ ಕೆಳಗೆ ಉರುಳುತ್ತಿರುವುದನ್ನು ಕಂಡ ಪ್ರಾಸಾದರಕ್ಷಕರು ಕೈಯಲ್ಲಿ ವಿಧವಿಧವಾದ ಆಯುಧಗಳನ್ನು ಹಿಡಿದು ಹನುಮಂತನ ಮೇಲೆ ಏರಿಬಂದರು.

ನೂರಾರು ರಾಕ್ಷಸರು ತನ್ನತ್ತ ಬರುತ್ತಿರುವುದನ್ನು ಗಮನಿಸಿದ ಹನುಮಂತ. ಆ ಚೈತ್ಯ ಪ್ರಾಸಾದದ ಊರುಗೋಲಿನಂತಿದ್ದ ದೊಡ್ಡದಾದ, ಸುವರ್ಣಪಟ್ಟಿಯಿಂದ ಅಲಂಕೃತವಾದ, ಸಹಸ್ರ ಧಾರೆಗಳುಳ್ಳ ಒಂದು ಕಂಬವನ್ನು ಕಿತ್ತ. ಆ ಕಂಬವನ್ನು ವೇಗವಾಗಿ ತಿರುಗಿಸಿ ಆ ರಾಕ್ಷಸರನ್ನು ಅದರಿಂದ ಪ್ರಹರಿಸಿ ಅವರನ್ನೆಲ್ಲ ಗತಪ್ರಾಣರನ್ನಾಗಿ ಮಾಡಿದ. ಅನಂತರ ಮೊದಲಿಗಿಂತ ಇಮ್ಮಡಿಯಾದ ಉಚ್ಚಕಂಠದಿಂದ ರಾಮಲಕ್ಷ್ಮಣರಿಗೆ ಜಯಕೋರಿ ಕೂಗಿದ

"ರಾಕ್ಷಸರ, ರಾಮನಿಂದ ಪಾಲಿತನಾದ ಸುಗ್ರೀವನ ಹತ್ತಿರ ನನ್ನಂಥ ಕೋಟ್ಯಂತರ ಮಂದಿ ವಾನರರಿದ್ದಾರೆ. ಅವರಲ್ಲಿ ಕೆಲವರು ಹತ್ತುಸಾವಿರ ಆನೆ ಬಲವುಳ್ಳವರು, ಕೆಲವರು ನೂರುಸಾವಿರ ಆನೆ ಬಲವುಳ್ಳವರು, ಮತ್ತೆ ಕೆಲವರು ವಾಯುವಿಗೆ ಸಮಾನವಾದ ಪರಾಕ್ರಮವುಳ್ಳವರು. ಇನ್ನೂ ಕೆಲವರು ಗರುಡನಂತೆ ಪರಾಕ್ರಮಿಗಳು ಅವರೆಲ್ಲರಿಗೂ ಅವರ ಉಗುರು, ಹಲ್ಲುಗಳೇ ಆಯುಧ. ವಜ್ರದಂತಿರುವ ಆ ಉಗುರು, ಹಲ್ಲುಗಳಿಂದ ನಿಮ್ಮೆಲ್ಲರನ್ನೂ ನಾಶಮಾಡುತ್ತಾರೆ. ಇನ್ನು ಈ ಲಂಕಾಪುರಿ ಉಳಿಯುವುದಿಲ್ಲ. ಆ ರಾವಣನೂ ಉಳಿಯುವುದಿಲ್ಲ. ಬಂದಿತು ನಿಮಗೆಲ್ಲ ಆಳಿಗಾಲ ಎಂದು ಘೋಷಿಸಿ ಕೈಯಲ್ಲಿ ಆ ಸ್ತಂಭವನ್ನು ಹಿಡಿದು ದಂಡವನ್ನು ಹಿಡಿದ ಯಮನಂತೆ ಪ್ರಕಾಶಿಸುತ್ತಿದ್ದ ಆ ಹನುಮಂತ.

ಇಂಥ ಹನುಮಂತನನ್ನು ಕೊಲ್ಲಲು ಪ್ರಹಸ್ತನಮಗ ಜಂಬುಮಾಲಿ ರಥವನ್ನೇರಿ ಬಂದ. ಬರುತ್ತಲೇ ಸೂರ್ಯನಂತೆ ಪ್ರಕಾಶವಾದ. ತೀಕ್ಷ್ಣವಾದ ತನ್ನ ಬಾಣಗಳಿಂದ ಹನುಮಂತನನ್ನು ಮುಚ್ಚಿದ, ಕುಪಿತನಾದ ಹನುಮಂತ ಪಕ್ಕದಲ್ಲೇ ಬಿದ್ದಿದ್ದ ಒಂದು ಪರ್ವತದ ಶಿಖರವನ್ನೇ ತೆಗೆದು ಜಂಬುಮಾಲಿಯತ್ತ ಬೀಸಿದ. ಜಂಬುಮಾಲಿ ತನ್ನ ಬಾಣಗಳಿಂದ ಆದನ್ನು ಪುಡಿಮಾಡಿ ಹನುಮಂತನ

ಎದೆಗೆ ಬಾಣಗಳಿಂದ ಹೊಡೆದ. ಬಾಣಗಳ ಹೊಡೆತದಿಂದ ಹನುಮಂತನ ಎದೆಯಿಂದ ರಕ್ತ ನೋರುತ್ತಿತ್ತು. ಸೂರ್ಯನ ಕಿರಣಗಳಿಂದ ಅರಳಿದ ಕೆಂದಾವರೆಯಂತೆ ಹನುಮಂತನ ಕೆಂಪಾದ ಮುಖ ಶೋಭಿಸುತ್ತಿತ್ತು. ಬಾಣದ ಹೊಡೆತದಿಂದ ಕೋಪಗೊಂಡು ಎತ್ತರವಾಗಿ ಬೆಳದಿದ್ದ ಸಾಲವೃಕ್ಷವನ್ನು ಕಿತ್ತು ಅದನ್ನು ಜಂಬುಮಾಲಿಯ ಮೇಲೆ ಎಸೆದ. ಜಂಬುಮಾಲಿಯು ಶೂರ. ತನ್ನ ಬಾಣಗಳಿಂದ ಸಾಲವೃಕ್ಷವನ್ನು ನಾಲ್ಕು ಚೂರಾಗುವಂತೆ ಮುರಿದು ಹನುಮಂತನ ಭುಜಕ್ಕೆ, ಎದೆಗೆ ನಾಟುವಂತೆ ಹತ್ತಾರು ಬಾಣಗಳನ್ನು ಹೊಡೆದ. ಆಗ ಹನುಮಂತನು ಪರಿಘವನ್ನು ವೇಗ ವಾಗಿ ತಿರುಗಿಸಿ ಜಂಬುಮಾಲಿಯು ಎದೆಗೆ ಗುರಿಯಿಟ್ಟು ಎಸೆದ. ಪರಿಘದ ಹೊಡೆತಕ್ಕೆ ಸಿಕ್ಕಿದ ಜಂಬುಮಾಲಿಯು ದೇಹ ಗುರುತು ಸಿಗದಂತೆ ಜಜ್ಜಿಹೋಯಿತು. ರಥದಿಂದ ಕೆಳಗುರುಳಿದ ಆತ ಗತಪ್ರಾಣನಾದ.

ಜಂಬುಮಾಲಿ ಹತನಾದ ಮೇಲೆ ರಾವಣ ಮಹಾಬಲಾಢ್ಯರಾದ ಏಳುಜನ ಮಂತ್ರಿಪುತ್ರರನ್ನು ಮಹಾಸೈನ್ಯದೊಡನೆ ಕಳುಹಿಸಿದ. ಅವರಲ್ಲಿ ಕೆಲವರನ್ನು ಹನುಮಂತ ಮುಷ್ಟಿಯಿಂದ, ಕೆಲವರನ್ನು ಪಾದದ ಒದೆತದಿಂದ, ಕೆಲವರನ್ನು ಕೈಯಿಂದ ಅಪ್ಪಳಿಸುವುದರಿಂದಲೇ ನಾಶಮಾಡಿದ. ಉಳಿದ ಸೈನ್ಯವನ್ನು ಆ ಸೈನ್ಯದಿಂದಲೇ ನಾಶಮಾಡಿದ. ಅವರ ರಥದ ಕುದುರೆಯನ್ನು ಎತ್ತಿ ತಿರುಗಿಸಿ ಅದರಿಂದ ಉಳಿದ ಕುದುರೆಗಳನ್ನು ಅಪ್ಪಳಿಸುತ್ತಿದ್ದ. ಹೀಗೆಯೇ ಆನೆಗಳನ್ನು ಆನೆಗಳಿಂದ ರಥಗಳನ್ನು ರಥಗಳಿಂದಲೇ ಹೊಡೆದು ಬಡಿದು ಪುಡಿಪುಡಿಮಾಡಿದ.

ಮುಂದೆ ರಾವಣ ಐದುಜನ ಸೇನಾಪತಿಗಳನ್ನು ದೊಡ್ಡ ಸೈನ್ಯದೊಡನೆ ಕಳುಹಿಸಿದ. ವಿರೂ ಪಾಕ್ಷ, ಯೂಪಾಕ್ಷ, ದುರ್ಧರ, ಪ್ರಘಸ, ಭಾಸಕರ್ಣ. ಎಂಬ ಮಹಾಪರಾಕ್ರಮಿಗಳೂ, ರಣಶಾಸ್ತ್ರ ಪಂಡಿತರೂ ವಿಚಕ್ಷಣರೂ ಆದ ಐದುಜನ ಸೇನಾಪತಿಗಳನ್ನು ಕರೆದು ರಾವಣ ಹೇಳಿದ :

" ನೀವು ಬಹಳ ಎಚ್ಚರಿಕೆಯಿಂದ ಆ ಕಪಿಯೊಡನೆ ಕಾದಬೇಕು. ಆಕಾರದಲ್ಲಿ ಅದು ಕಪಿ ಯಂತೆ ತೋರುತ್ತಿದ್ದರೂ ಅದು ಮಹಾಬಲವುಳ್ಳದ್ದಾಗಿದೆ. ಆದ್ದರಿಂದ, ದೇವತೆಗಳೋ, ಋಷಿ ಗಳೋ, ತಪೋಬಲದಿಂದ ನನ್ನನ್ನು ನಾಶಮಾಡಲು ಈ ವಾನರನನ್ನು ಸೃಷ್ಟಿಸಿರಬೇಕು. ಇಲ್ಲವಾದರೆ ಈ ವಾನರಕ್ಕೆ ಇಷ್ಟು ಬುದ್ಧಿ, ಬಲ, ತೇಜಸ್ಸು, ಪೌರುಷ, ಶಕ್ತಿ ಇರುತ್ತಿರಲಿಲ್ಲ. ನಾನೂ ಅನೇಕ ವಾನರವೀರರನ್ನು ನೋಡಿದೇನೆ. ವಾಲಿ, ಸುಗ್ರೀವ, ಜಾಂಬುವಂತ, ನೀಲ ಮುಂತಾದ ಕಪಿವೀರ ರನ್ನು ನೋಡಿದೇನೆ. ಆದರೆ ಯಾರಿಗೂ ಈ ವಾನರನಂತೆ ಬಲ, ಶೌರ್ಯ, ಬುದ್ಧಿ, ಶಕ್ತಿ, ತೇಜಸ್ಸು ಇರುವುದನ್ನು ಕಂಡಿಲ್ಲ. ಆದ್ದರಿಂದ, ಈ ವಾನರನನ್ನು ಇಂದ್ರನೇ ಕಳುಹಿಸಿದಾನೋ ಅಥವಾ ತಪೋಬಲದಿಂದಲೇ ಈ ಕಪಿ ಸೃಷ್ಟವಾಗಿದೆಯೋ, ತಿಳಿಯದು. ಆದ್ದರಿಂದ, ನೀವು ಸಾಮಾನ್ಯವಾದ " ಕಪಿ" ಎಂದು ಅಲಕ್ಷಿಸದೆ ಯುದ್ಧಮಾಡಿ ಅದನ್ನು ನಿಗ್ರಹಿಸಿ " ಎಂದು ಎಚ್ಚರಿಕೆ ಕೊಟ್ಟ.

ಅದರಂತೆ ಆ ರಾಕ್ಷಸ ಸೇನಾಪತಿಗಳು ಸರ್ವಸನ್ನದ್ಧರಾಗಿ ಯುದ್ಧಕ್ಕೆ ಹೊರಟರು, ಸೈನ್ಯದೆಂದಿಗೆ.

ದುರ್ಧರ ಯಂಬ ರಾಕ್ಷಸ ಹನುಮಂತನ ಮೇಲೆ ಐದು ಬಾಣಗಳನ್ನು ಬಿಟ್ಟ. ಅವನನ್ನು ಅನು ಸರಿಸಿ ಬಂದ ಉಳಿದವರೂ ಹನುಮಂತನಮೇಲೆ ಶರವೃಷ್ಟಿಗೈದರು. ದುರ್ಧರ ಬಹಳ ವೇಗವಾಗಿ ಬಾಣ ಬಿಟುತ್ತಿದ್ದುದನ್ನು ಕಂಡು ಹನುಮಂತ ಒಂದೇ ನೆಗೆತಕ್ಕೆ ಆಕಾಶಕ್ಕೆ ಹಾರಿದ. ಅಲ್ಲಿಂದ ಮತ್ತೆ ದುರ್ಧರನ ರಥಕ್ಕೆ ನೆಗೆದ. ಬರಸಿಡಿಲು ಎರಗಿದಂತಾಗಿ ದುರ್ಧರನ ರಥ, ಸಾರಥಿ, ಕುದುರೆಗಳು

ಎಲ್ಲಿ ಅಪ್ಪಚ್ಚಿಯಾದವು. ದುರ್ಧರ ಹನುಮಂತನ ಭಾರವನ್ನು ಸಹಿಸಲಾರದೆ ಧರೆಗೆ ಉರುಳಿಬಿದ್ದು ಸತ್ತ. ದುರ್ಧರ ಸತ್ತದ್ದನ್ನು ಕಂಡ ವಿರೂಪಾಕ್ಷ ಯೂಪಾಕ್ಷರು ಬಹಳವಾಗಿ ಕೋಪಗೊಂಡು ಹನುಮಂತನನ್ನು ನಾನಾ ವಿಧವಾದ ಅಸ್ತ್ರ–ಶಸ್ತ್ರಗಳಿಂದ ಘಾತಿಸತೊಡಗಿದರು. ಅಲ್ಲಿದ್ದ ಒಂದು ದೊಡ್ಡ ಸಾಲವೃಕ್ಷವನ್ನು ಕಿತ್ತುಕೊಂಡು ಹನುಮಂತ ಅದನ್ನು ವೇಗವಾಗಿ ಅವರ ಮೇಲ ಬೀಸಿದ. ಅದರ ಹೊಡೆತಕ್ಕೆ ಸಿಕ್ಕಿದ ವಿರೂಪಾಕ್ಷ ಯೂಪಾಕ್ಷರು ಯಮಸದನವನ್ನೈದಿದರು. ಇದನ್ನು ಕಂಡ ಪ್ರಘಸ ಭಾಸಕರ್ಣರಿಬ್ಬರೂ ಮಹಾಕೋಪದಿಂದ ಹನುಮಂತನ ಮೇಲೆ ಬೀಳಲು ಬಂದರು. ಅವರಿಬ್ಬರನ್ನೂ ತೀರಿಸುವ ಸಲುವಾಗಿ ಹನುಮಂತ ಅಲ್ಲಿದ್ದ ಪರ್ವತ ಶಿಖರವನ್ನು ತೆಗೆದು ಬೀಸಿ ಎಸೆದ. ಶಿಖರದ ಅಡಿಗೆ ಸಿಕ್ಕಿ ನುಚ್ಚುನೂರಾದ ಅವರು ಅಲ್ಲೇ ಗತಪ್ರಾಣರಾದರು. ಅಳಿದುಳಿದ ಸೈನ್ಯವೂ ಹನುಮಂತನ ಪದಾಘಾತಕ್ಕೆ ಸಿಕ್ಕಿನಾಶವಾಯಿತು. ಪಂಚಸೇನಾಪತಿಗಳನ್ನೂ ನಾಶಮಾಡಿ ಹನುಮಂತ ಕಾಲನಂತೆ ಪ್ರಕಾಶಿಸತೊಡಗಿದ.

ಐದುಜನ ಸೇನಾಪತಿಗಳೂ ಅಸುನೀಗಿದ ವಾರ್ತೆ ರಾವಣನ ಕಿವಿಗೆ ಮುಟ್ಟಿತು. ಉರಿಯುವ ಅಗ್ನಿ ಜ್ವಾಲೆಗೆ ತುಪ್ಪ ಹೊಯ್ದಂತಾಯಿತು. ಸಭೆಯಲ್ಲಿ ತನ್ನ ದೃಷ್ಟಿಯನ್ನು ಹರಿಸಿದ ರಾವಣ. ರಾವಣನ ಸಮೀಪದಲ್ಲಿಯೇ ಕುಳಿತಿದ್ದ ಅಕ್ಷಕುಮಾರ–ರಾವಣನ ಪುತ್ರ–ತಂದೆಯ ದೃಷ್ಟಿ ತನ್ನತ್ತ ಬೀಳುವುದನ್ನೇ ನಿರೀಕ್ಷಿಸುತ್ತಿದ್ದ. ರಾವಣನ ದೃಷ್ಟಿ ಬಿದ್ದೊಡನೆಯೇ ಎದ್ದು ನಿಂತು ತಾನು ಹೋಗಿ ಗೆದ್ದು ಬರುವುದಾಗಿ ಹೇಳಿ ರಾವಣನಿಗೆ ವಂದಿಸಿ ಹನುಮಂತನಿಗಿದಿರಾಗಿ ಹೊರಟ.

ತಪಸ್ಸಿನಿಂದ ಪಡೆದ ಶುದ್ಧಕಾಂಚನ ರಥವನ್ನೇರಿ, ಮೊನಚಾದ ಅಲುಗುಳ್ಳ ಬಾಣಗಳಿಂದ ಯುಕ್ತನಾಗಿ, ಇಂದ್ರಧನುಸ್ಸಿನಂತೆ ಶ್ರೇಷ್ಠವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ಸೂರ್ಯನಂತೆ ರಥವನ್ನೇರಿ ಹೊರಟ. ತನ್ನ ಬಲದಲ್ಲಿ ನಂಬಿಕೆ ಅವನಿಗೆ. ಬಲದಲ್ಲಿ ತನಗಿಂತ ಯಾರೂ ಇಲ್ಲ ಎಂಬ ಗರ್ವ. ಹೀಗೆ ಸರ್ವಾಲಂಕಾರ ಭೂಷಿತನಾಗಿ, ಎಂಟು ಕುದುರೆಗಳನ್ನು ಕಟ್ಟಿದ ದಿವ್ಯರಥವನ್ನೇರಿ ಇಂದ್ರನ ಮಗ ಜಯಂತನಂತೆ ಹನುಮಂತನೊಡನೆ ಹೋರಾಡಲು ಹೊರಟ ಅಕ್ಷಕುಮಾರ ಬಂದವನೇ ಪುಂಖಾನುಪುಂಖವಾಗಿ ಬಾಣಗಳ ಮಳೆಗರೆದ. ಘನವಾದ ಮೇಘ ತನ್ನ ವೃಷ್ಟಿಧಾರೆಯಿಂದ ಪರ್ವತವನ್ನು ಮುಚ್ಚುವಂತೆ ಹನುಮಂತನನ್ನು ಶರವೃಷ್ಟಿಯಿಂದ ಮುಚ್ಚಿದ. ಮೋಡಗಳನ್ನು ಭೇದಿಸಿ ಹೊರಬರುವ ಮಿಂಚಿನಂತೆ ಹನುಮಂತ ಆ ಬಾಣಗಳ ಪಂಜರದಿಂದ ಹೊರಬಂದು ಅಕ್ಷಕುಮಾರನ ಮೇಲೆ ಎರಗಿದ. ಸ್ವಲ್ಪ ಹೊತ್ತು ಇಬ್ಬರಿಗೂ ಘೋರವಾದ ಯುದ್ಧನಡೆಯಿತು. ಇಂದ್ರ–ವೃತ್ರಾಸುರರು ಹೋರಾಡುತ್ತಿರುವಂತೆ ಹನುಮಂತ, ಅಕ್ಷಕುಮಾರರು ಯುದ್ಧಮಾಡುತ್ತಿದ್ದರು. ಅಕ್ಷಕುಮಾರನ ಬಲ ಹೆಚ್ಚುತ್ತಿದ್ದುದನ್ನು ಗಮನಿಸಿದ ಹನುಮಂತ "ಇನ್ನು ತಡಮಾಡುವುದರಲ್ಲಿ ಅರ್ಥವಿಲ್ಲ" ಎಂದುಕೊಂಡು ಸಿಡಿಲಿನಂತೆ ಅಕ್ಷಕುಮಾರನ ರಥದ ಮೇಲೆ ಎರಗಿದ. ತನ್ನ ಕೈಗಳಿಂಧ ಅವನ ರಥದ ಕುದುರೆಗಳನ್ನು ಅಪ್ಪಳಿಸಿ ಕೊಂದ. ರಥವನ್ನು ಒಡೆದು ಪುಡಿಮಾಡಿದ. ರಥ ಕುದುರೆಗಳನ್ನು ಕಳೆದುಕೊಂಡ ಅಕ್ಷಕುಮಾರ ಆಕಾಶಕ್ಕೆ ಹಾರಿದ.

ಹನುಮಂತನೂ ಅವನನ್ನನುಸರಿಸಿ ನೆಗೆದ ಅಂಬರಕ್ಕೆ, ನೆಗೆದವನೇ ಅಕ್ಷಕುಮಾರನ ಎರಡು ಕಾಲುಗಳನ್ನೂ ಹಿಡಿದುಕೊಂಡು ಗರಗರ ತಿರುಗಿಸಿ ಅಪ್ಪಳಿಸಿದ, ಹನುಮಂತ ಅಪ್ಪಳಿಸಿದ ವೇಗಕ್ಕೆ ಅಕ್ಷಕುಮಾರನ ತಲೆ, ಕೈ, ಕಾಲುಗಳು ಚೂರ್ಣೀಕೃತವಾದವು. ಅಕ್ಷಕುಮಾರನನ್ನು ಸಂಹರಿಸಿ ಲೋಕವನ್ನೇ ನಡುಗಿಸುವ ರಾವಣನ ಮನಸ್ಸಿನಲ್ಲೂ ಭಯವನ್ನು ಉಂಟುಮಾಡಿದ. ಪ್ರಳಯಕಾಲದ ರುದ್ರನಂತೆ ಪುನಃ ಯುದ್ಧವನ್ನು ನಿರೀಕ್ಷಿಸುತ್ತಾ ವಾಟಿಕೆಯ ಬಾಗಿಲನ್ನೇರಿ ಕುಳಿತ ಹನುಮಂತ.

ಪ್ರಿಯಪುತ್ರನಾದ ಅಕ್ಷಕುಮಾರನೂ ಹತನಾದವನ್ನು ನೋಡಿ ರಾವಣ ಮಹಾಪರಾಕ್ರಮಿಯಾದ ತನ್ನ ಇನ್ನೊಬ್ಬ ಮಗನಾದ ಇಂದ್ರಜಿತುವನ್ನು ನೋಡಿ, "ಬಲಿಷ್ಠರಲ್ಲಿ ಬಲಿಷ್ಠನೆನಿಸುವ ಮೇಘನಾದ, ಆ ವಾನರನನ್ನು ನಿಗ್ರಹಿಸಲು ನೀನೇ ಸಮರ್ಥ. ಬ್ರಹ್ಮನಿಂದ ವರವನ್ನು ಪಡೆದು ತಪಸ್ವಿಗಳಲ್ಲಿ ಮೇಲಾದವನಾದೆ. ಇಂದ್ರನನ್ನು ಜಯಿಸಿ "ಇಂದ್ರಜಿತ್" ಎಂಬ ಹೆಸರು ಪಡೆದೆ. ನಿನ್ನಂತ ಪರಾಕ್ರಮಿಗೆ ಸಾಟಿ ಯಾರೂ ಇಲ್ಲ. ನೋಡು ಈಗಾಗಲೇ ಕಿಂಕರರು, ಜಂಬುಮಾಲಿ, ಮಂತ್ರಿಪುತ್ರರು, ಐದು ಜನ ಸೇನಾಪತಿಗಳು, ಕೊನೆಗೆ ಪುತ್ರನಾದ ಅಕ್ಷಯು, ಎಲ್ಲರೂ ಆ ವಾನರನಿಂದ ಹತರಾದರು. ಆ ಕಪಿ ಸಾಮಾನ್ಯನಲ್ಲ ಅವನಿಂದ ನನ್ನ ಸೈನ್ಯ ನಾಶವಾಗುತ್ತಿದೆ. ಆದ್ದರಿಂದ ನೀನೆ ಈಗ ಹೋಗಿ ಅವನನ್ನು ಜಯಿಸಿಬಾ, ಬುದ್ಧಿಯಲ್ಲಿ, ಶಕ್ತಿಯಲ್ಲಿ, ತಪಸ್ಸಿನಲ್ಲಿ ನನಗೆ ಸಮಾನನಾದ ಮಗ ಎಂದರೆ ನೀನೇ. ಈಗ ಹೋಗಿ ಆ ವಾನರನನ್ನು ಜಯಿಸು" ಎಂದ ಆಜ್ಞಾಪಿಸಿದ.

ತಂದೆಯ ಮಾತಿನಂತೆ ಮಹಾಪರಾಕ್ರಮಿಯಾದ ಇಂದ್ರಜಿತು ರಥವನ್ನೇರಿ ಹೊರಟ.

ರಾಕ್ಷಸರಾಜಪುತ್ರನಾದ ಇಂದ್ರಜಿತ್ತಿಗೂ, ವಾನರರಾಜನ ಮಂತ್ರಿಯಾದ ಹನುಮಂತನಿಗೂ ಘೋರವಾದ ಯುದ್ಧ ಜರುಗಿತು. ಬುದ್ಧಿವಂತನಾದ ಇಂದ್ರಜಿತು ಹನುಮಂತ ಯಾವ ಅಸ್ತ್ರಕ್ಕೂ ಒಳಗಾಗತಕ್ಕವನಲ್ಲ ಎಂಬುದನ್ನು ಕಂಡುಕೊಂಡ. ಯೋಚನೆಮಾಡಿ ಈ ಕಪಿಯನ್ನು ನಿಗ್ರಹಿಸಲು ಬ್ರಹ್ಮಾಸ್ತ್ರವೇ ಸರಿ ಎಂದುಕೊಂಡು ತನ್ನ ಧನುಸ್ಸಿಗೆ ಅಮೋಘವಾದ ಬ್ರಹ್ಮಾಸ್ತ್ರವನ್ನೇ ಹೂಡಿದ. ಇಂದ್ರಜಿತು ಬ್ರಹ್ಮಾಸ್ತ್ರವನ್ನು ತನ್ನಮೇಲೆ ಅಭಿಮಂತ್ರಿಸಿರುವುದನ್ನು ಹನುಮಂತನೂ ಕಂಡ. ಬ್ರಹ್ಮಾಸ್ತ್ರ ತನ್ನನ್ನು ಏನೂ ಮಾಡದು ಎಂದು ಗೊತ್ತು ಹನುಮಂತನಿಗೆ. ಬ್ರಹ್ಮನೇ ಹಿಂದೆ ಹನುಮಂತನಿಗೆ ವರವನ್ನು ಕೊಟ್ಟು ನನ್ನ ಅಸ್ತ್ರದಿಂದ ನಿನಗೇನೂ ಆಗದು. ಆದರೂ ಸ್ವಲ್ಪ ನನ್ನ ಅಸ್ತ್ರ ಎಂದು ಗೌರವ ಕೊಡು ಎಂದಿದ್ದುದನ್ನು ನೆನಪಿಕೊಂಡ.

ಈಗ ಬರುತ್ತಿರುವ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಂತೆ ನಟಿಸಬೇಕು ಎಂದುಕೊಂಡ.

ಮತ್ತೆ ಯೋಚಿಸಿದ ಹನುಮಂತ. ಈಗ ಈ ಅಸ್ತ್ರಕ್ಕೆ ಕಟ್ಟುಬಿದ್ದಂತೆ ನಟಿಸಿದರೆ ನನ್ನನ್ನು ರಾವಣನ ಇದಿರಿಗೆ ಕರೆದುಕೊಂಡು ಹೋಗುತ್ತಾರೆ. ಆಗ ರಾವಣನೊಡನೆ ಮಾತಾಡುವ ಅವಕಾಶ ಸಿಗುತ್ತದೆ. ಆದ್ದರಿಂದ ಬ್ರಹ್ಮಾಸ್ತ್ರಕ್ಕೆ ಕಟ್ಟುಬೀಳುವುದೇ ಸರಿ ಎಂದುಕೊಂಡ.

ಇಂದ್ರಜಿತು ಪ್ರಯೋಗಿಸಿದ ಬ್ರಹ್ಮಾಸ್ತ್ರಕ್ಕೆ ಹನುಮಂತ ಕೈಕಾಲು ಆಡಿಸದೆ ನಿಶ್ಚೇಷ್ಟಿತನಾದ. ಮರದ ತುಂಡಿನಂತೆ ಅಚಲನಾಗಿ ಬಿದ್ದಿದ್ದ ಕಪಿಯನ್ನು ಕಂಡು ರಾಕ್ಷಸರು ಹಗ್ಗವನ್ನು ತಂದು ಅದರಿಂದ ಹನುಮಂತನನ್ನು ಕಟ್ಟಿದರು. ಹಗ್ಗದಿಂದ ಹನುಮಂತನನ್ನು ಕಟ್ಟುತ್ತಿರುವಂತೆ ಹನುಮಂತ ಬ್ರಹ್ಮಾಸ್ತ್ರದಿಂದ ಬಿಡುಗಡೆ ಹೊಂದಿದ.

ಬ್ರಹ್ಮಾಸ್ತ್ರದಿಂದ ವಿಮುಕ್ತನಾದರೂ ಹಗ್ಗದಿಂದ ಬಂಧಿತನಾಗಿ ಸುಮ್ಮನೆ ಬಿದ್ದುಕೊಂಡಿದ್ದ ಕಪಿಯನ್ನು ನೋಡಿದ ಇಂದ್ರಜಿತು. "ಅಯ್ಯೋ, ನಾ ಸಾಧಿಸಿದ ಮಹತ್ಕಾರ್ಯವನ್ನು ಈ ರಾಕ್ಷಸರು ಹಾಳುಮಾಡಿದರಲ್ಲ ! ಬ್ರಹ್ಮಾಸ್ತ್ರ ಇರುವಾಗ ಅದಕ್ಕೆ ಪ್ರತಿಯಾಗಿ ಹಗ್ಗದಿಂದ ಕಟ್ಟಿ ಆ ಅಸ್ತ್ರಕ್ಕೆ ಅವಜ್ಞೆಮಾಡಿದರು ಈ ರಾಕ್ಷಸರು. ಅದರಿಂದ ಬ್ರಹ್ಮಾಸ್ತ್ರ ಬಿಟ್ಟುಹೋಯಿತು. ಬ್ರಹ್ಮಾಸ್ತ್ರದಿಂದ ಮುಕ್ತನಾದಾಗ್ಯೂ ಈ ವಾನರ ಬಂಧನದಲ್ಲಿರುವಂತೆ ನಟಿಸುತ್ತಿದೆ. ಹೇಗಾದರೂ ಆಗಲಿ. ಈ ವಾನರನನ್ನು ರಾವಣನ ಹತ್ತಿರ ಕರೆದೊಯ್ಯುವುದು ನನ್ನ ಕೆಲಸ ಎಂದುಕೊಂಡು ಇಂದ್ರಜಿತು ಹನುಮಂತನನ್ನು ಎಳೆದುಕೊಂಡು ರಾವಣನ ಮುಂದೆ ನಿಲ್ಲಿಸಿದ.

ಶ್ರೀವೈಷ್ಣವ ಸಿದ್ಧಾಂತದಲ್ಲಿ ಇದನ್ನು ಬ್ರಹ್ಮಾಸ್ತ್ರನ್ಯಾಯ ಎನ್ನಲಾಗಿದೆ. ಶರಣಾಗತಿಯಾದ ಮೇಲೆ, ಪ್ರಪತ್ತಿಯಾದಮೇಲೆ ಬ್ರಹ್ಮಾಸ್ತ್ರದಲ್ಲಿ ಬಂಧಿತನಾದ ಹನುಮಂತನನ್ನು ಹಗ್ಗದಿಂದ ಬಿಗಿದ ಕೂಡಲೇ ಬ್ರಹ್ಮಾಸ್ತ್ರದ ಬಂಧನ ಹೇಗೆ ಕಳಚಿಹೋಯಿತೋ ಹಾಗೇ ಪ್ರಪತ್ತಿಯಾದಮೇಲೆ ಮೋಕ್ಷಕ್ಕೆ ಬೇರಾವ ಉಪಾಯವನ್ನು ಅನುಸರಿಸಿದರೂ ಪ್ರಪತ್ತಿಯು ನಿಷ್ಫಲವಾಗಿಬಿಡುತ್ತದೆ.

ಇತ್ತ ರಾವಣನ ಸಭೆ ಸೇರಿತ್ತು. ಅಲ್ಲಿ ರಾವಣ ಉನ್ನತವಾದ ಸಿಂಹಾಸನದ ಮೇಲೆ ಕುಳಿತಿದ್ದ. ಅವನ ತಲೆಗಳಲ್ಲಿದ್ದ ಕಿರೀಟದ ಕಾಂತಿ ಇಡೀ ಸಭಾಭವನವನ್ನೇ ಬೆಳಗುತ್ತಿತ್ತು. ಅವನ ಪಕ್ಕದಲ್ಲಿ ಪ್ರಹಸ್ತ, ಕುಂಭ, ನಿಕುಂಭ, ಮಹೋದರ ಮುಂತಾದ ನಾಲ್ವರು ಮಂತ್ರಿಗಳು ನಾಲ್ಕು ಸಮುದ್ರಗಳಂತೆ ಮುಡಿಸಿದ್ದರು. ಸೇನಾಪತಿಗಳು, ಅಮಾತ್ಯರು, ಇತರ ಪುರಪ್ರಮುಖರಿಂದ ಕೂಡಿದ್ದ ಆ ರಾವಣನ ಸಭೆ ಇಂದ್ರನ ಸಭೆಯಂತೆ ಶೋಭಿಸುತ್ತಿತ್ತು.

ರಾವಣನ ಇದಿರಿಗೆ ನಿಂತ ಹನುಮಂತ ಒಮ್ಮೆ ರಾವಣನನ್ನು ನೋಡಿದ.

**ಅಹೋ ರೂಪಂ ಅಹೋ ಧೈರ್ಯಂ ।**
**ಅಹೋ ಸತ್ವಂ ಅಹೋ ದ್ಯುತಿಃ ।**
**ಅಹೋ ರಾಕ್ಷಸ ರಾಜಸ್ಯ ಸರ್ವಲಕ್ಷಣಯುಕ್ತತಾ ॥**

"ಅಬ್ಬ ! ಏನು ರೂಪ ರಾವಣನದು ! ಅದೆಂಥ ಧೈರ್ಯ ! ಎಂಥ ತೇಜಸ್ಸು! ಸರ್ವಲಕ್ಷಣಗಳಿಂದ ಯುಕ್ತನಾಗಿರುವ ರಾವಣ ಇಂದ್ರನಂತೆ ಬೆಳಗುತ್ತಿದಾನಲ್ಲ ! ಇಂಥ ಸಮರ್ಥನನ್ನು ಕೊಲ್ಲುವುದಿರಲಿ; ಇದಿರಿಸಲು ತಾನೇ ಆರಿಗೆ ಸಾಧ್ಯ ! ಅಬ್ಬ ! ನಿಜವಾಗಿ ರಾವಣನಂಥ ತೇಜಸ್ವಿ, ಪರಾಕ್ರಮಿ, ಐಶ್ವರ್ಯವಂತ, ತಪಸ್ವಿ ಇನ್ನಿಲ್ಲ.

"ಆದರೆ . . . ಆದರೆ, ಅವನ ರೂಪ, ತಪಸ್ಸು, ಬಲ, ಕೀರ್ತಿ, ಐಶ್ವರ್ಯ, ಗೌರವ, ಅಂತಸ್ತು, ಎಲ್ಲದಕ್ಕೂ ಮಸಿ ಹಚ್ಚುವಂಥ ಹೀನಕಾರ್ಯವೆಸಗಿದ್ದಾನೆ. ಪರಸ್ತ್ರೀಯನ್ನು ಬಯಸುವ ಕಳಂಕ ಒಂದು ರಾವಣನಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಅವನನ್ನು ಜಯಿಸಲು ಮೂರು ಲೋಕದಲ್ಲಿ ಯಾರಿಗೂ ಸಾಧ್ಯವಾಗುತ್ತಿರಲಿಲ್ಲ.

**ಯದ್ಯಧರ್ಮೋ ನಬಲವಾನ್ ಸ್ಯಾದಯಂ ರಾಕ್ಷಸೇಶ್ವರಃ ।**
**ಸ್ಯಾದಯಂ ಸುರಲೋಕಸ್ಯ ಸಶಕ್ರಸ್ಯಾಪಿ ರಕ್ಷಿತಾ ॥**

ಎಂದು ಉದ್ಗರಿಸಿದ, ರಾವಣನ ವೈಭವವನ್ನು ಕಂಡ ಹನುಮಂತ,

ಹನುಮಂತನೇ ರಾವಣನ ಪ್ರತಿಭೆಗೆ, ವೈಭವಕ್ಕೆ, ತೇಜಸ್ಸಿಗೆ, ಶಕ್ತಿಗೆ, ಐಶ್ವರ್ಯಕ್ಕೆ, ಪರಾಕ್ರಮಕ್ಕೆ, ತಲೆದೂಗಿದ ಎಂದಮೇಲೆ ರಾವಣ ಎಂಥವನಿದ್ದಿರಬೇಕು ! ಎನಿಸುತ್ತದೆ.

ರಾವಣನಂತೆ ಬಾಳಿದವರಿಲ್ಲ. ಆದರೂ, ಅವನಲ್ಲಿ ಇಷ್ಟೆಲ್ಲ ಒಳ್ಳೆಯತನವಿದ್ದರೂ ಹಾಲು ತುಂಬಿದ ಕೊಡದಲ್ಲಿ ಒಂದು ಬಿಂದು ಹಾಲಾಹಲ ಸೇರಿಸಿದಂತೆ ಪರಸ್ತ್ರೀಯನ್ನು ಬಯಸುವ ಕೆಟ್ಟ ಚಟ ಅವನಲ್ಲಿ ಇದ್ದಿದ್ದರಿಂದ ಅವನ ಸಮಸ್ತವೂ ನಾಶವಾಗಿ ನಿಷ್ಪ್ರಯೋಜಕವಾಯಿತು.

ಲೋಕದಲ್ಲೇ ಕುತ್ಸಿತವಾದ ಇಂಥ ಕಾರ್ಯವನ್ನು ಮಾಡದಿದ್ದಲ್ಲಿ ರಾವಣನಿಗೆ ಸಮನಾರು ಎನಿಸುತ್ತದೆ. ಹಾಗಿತ್ತು ರಾವಣನ ವೈಭವದ ಸ್ಥಿತಿ.

ರಾವಣನ ತೇಜಸ್ಸನ್ನು ನೋಡಿ ಹನುಮಂತ ಮೆಚ್ಚಿದ. ಹಾಗೆಯೇ ರಾವಣನೂ ತನಗಿದಿರಾಗಿ ನಿಂತಿದ್ದ ವಾನರನನ್ನು ನೋಡಿದ. ಹನುಮಂತನ ತೇಜಸ್ಸು ರಾವಣನ ಹೃದಯವನ್ನೂ ಥರಗುಟ್ಟಿಸಿತು. ಮನಸ್ಸಿನಲ್ಲೇ ಯೋಚಿಸಿದ !

"ಈ ವಾನರ ಯಾರಾಗಿದ್ದಿರಬಹುದು !" ಎಂದು.

"ಇಂದ್ರನಿಂದ ಕಳುಹಿಸಲ್ಪಟ್ಟವನೋ ! ಬ್ರಹ್ಮನಿಂದ ಕಳುಹಿಸಲ್ಪಟ್ಟ ದೂತನೋ ! ಅಥವಾ ಸಾಕ್ಷಾತ್ ವಿಷ್ಣುವಿನ ದೂತನೋ ! ಅಥವಾ

**ಕಿಮೇಷ ಭಗವಾನ್ ನಂದೀ ಭವೇತ್ಸಾಕ್ಷಾದಿಹಾಗತಃ |**
**ಯೇನಶಪ್ತೋಽಸ್ಮಿ ಕೈಲಾಸೇ ಮಯಾ ಸಂಚಾಲಿತೇ ಪುರಾ ||**

ನನ್ನನ್ನು ಹಿಂದೆ ಕೈಲಾಸದಲ್ಲಿ ಶಪಿಸಿದ್ದ ನಂದಿಯೇ ಈ ರೂಪದಲ್ಲಿ ಬಂದಿದಾನೋ ! ಇವನ ತೇಜಸ್ಸನ್ನು ನೋಡಿದರೆ ಹಾಗೆಯೇ ಇದೆ!" ಎಂದು ಆಲೋಚಿಸಿದ. ರಾವಣ ಒಮ್ಮೆ ಕೈಲಾಸಕ್ಕೆ ಹೋಗಿದ್ದ. ದ್ವಾರದಲ್ಲಿ ಮಹಾನಂದಿ ಇದ್ದ. ಅವನನ್ನು ನೋಡಿ ಹಾಸ್ಯಮಾಡಿದ "ನಿನ್ನ ಮೋರೆ ಕಪಿ ಮೋರೆಯಂತಿದೆ" ಎಂದು. ಕುಪಿತನಾದ ನಂದಿ "ಹಾಗೆಯೇ ಆಗಲಿ ! ನನ್ನಂಥ ಕಪಿ ಮೋರೆಯುಳ್ಳವರಿಂದಲೇ ನೀನು, ನಿನ್ನ ಲಂಕೆ, ಎಲ್ಲ ನಾಶವಾಗಲಿ !" ಎಂದು ಶಪಿಸಿದ್ದ.

ರಾವಣನಿಗೆ ಆ ನಂದಿಯ ಶಾಪ ಈಗ ನೆನಪಿಗೆ ಬಂತು. "ಅಂದು ಕೈಲಾಸದಲ್ಲಿ ನನ್ನನ್ನು ಶಪಿಸಿದ್ದ ನಂದಿಯೇ ಇಂದು ಈ ವಾನರರೂಪಿನಿಂದ ಬಂದಿರಬೇಕು. ಇಲ್ಲವಾದರೆ ಈ ಧೈರ್ಯ, ತೇಜಸ್ಸು, ಶಕ್ತಿ, ಬುದ್ಧಿ, ಪರಾಕ್ರಮ, ಸಾಮಾನ್ಯ ಕಪಿಗೆ ಇರದು ಎಂದುಕೊಂಡು ಮಂತ್ರಿಯಾದ ಪ್ರಹಸ್ತನ ಕಡೆಗೆ ತಿರುಗಿ ''ಈ ವಾನರನ ಕುಲಗೋತ್ರಗಳನ್ನು ಕೇಳು. ಎಲ್ಲಿಂದ ಬಂದೆ ಏತಕ್ಕಾಗಿ ಬಂದೆ ಯಾರು ಕಳುಹಿಸಿದರು ? ಎಂದು ವಿಚಾರಿಸು ಎಂದು ಆಜ್ಞಾಪಿಸಿದ.

ರಾಜನೀತಿ ವಿಶಾರದ ರಾವಣ. ಬಂದವನೊಡನೆ ನೇರವಾಗಿ ತಾನೇ ಮಾತಾಡಬಾರದೆಂಬ ರಾಜ ಧರ್ಮವನ್ನನುಸರಿಸಿ ಮಂತ್ರಿ ಪ್ರಹಸ್ತನನ್ನು ವಿಚಾರಿಸುವಂತೆ ಹೇಳಿದ.

ರಾವಣನ ಅಪ್ಪಣೆಯಂತೆ ಪ್ರಹಸ್ತ ಎದ್ದು ಹನುಮಂತನನ್ನು ಕುರಿತು ''ಹೇ ವಾನರನೇ ! ನೀನು ರೂಪಮಾತ್ರದಿಂದ ವಾನರನಂತೆ ತೋರುತ್ತಿರುವೆ. ಆದರೆ ಕರ್ಮದಲ್ಲಿ ನೀನು ವಾನರನಂತೆ ತೋರುತ್ತಿಲ್ಲ. ನೀನು ಯಾರು ? ನಿಜವಾಗಿ ತಿಳಿಸು, ಇಂದ್ರನಿಂದ ಕಳುಹಿಸಲ್ಪಟ್ಟ ದೂತನೆ? ವರುಣನ ದೂತನೆ ? ಕುಬೇರನ ದೂತನೆ ? ಬ್ರಹ್ಮನ ದೂತನ ? ಅಥವಾ ವಿಷ್ಣುದೂತನೆ ? ಯಾರು ಹೇಳು. ಸುಳ್ಳಾಡಿದೆ ಎಂದರೆ ಈಗಲೇ ನಿನ್ನ ತಲೆಯನ್ನು ಕತ್ತರಿಸುತ್ತೇನೆ ಎಚ್ಚರಿಕೆ ! ನಿಜವನ್ನು ಹೇಳು, ನೀನು ಯಾರು ? ಏತಕ್ಕಾಗಿ ಅಶೋಕವನವನ್ನು ನಾಶಮಾಡಿದೆ ? ರಾಕ್ಷಸರನ್ನೆಲ್ಲ ಕೊಂದುದೇಕೆ ? ತಿಳಿಸು" ಎಂದು ಗರ್ಜಿಸಿದ.

ಪ್ರಹಸ್ತನ ಮಾತಿಗೆ ಉತ್ತರವಾಗಿ ಹನುಮಂತ ''ನೀನು ಕೇಳುವಂತೆ ನಾನು ಇಂದ್ರನ ದೂತನೂ ಅಲ್ಲ, ವರುಣನ ದೂತನೂ ಅಲ್ಲ, ವಾಯುವಿನ ದೂತನೂ ಅಲ್ಲ, ವಿಷ್ಣುದೂತನೂ ಅಲ್ಲ. ನಾನು ಮಹಾತೇಜಸ್ವಿಯಾದ ರಾಮದೂತ. ರಾವಣನನ್ನು ನೋಡಬೇಕು ಎಂಬ ಇಚ್ಛೆಯಿಂದ ವನವನ್ನು ನಾಶಮಾಡಿದೆ. ಆಗ ರಾಕ್ಷಸರು ನನ್ನನ್ನು ಕೊಲ್ಲಲು ಬಂದರು. ಆತ್ಮರಕ್ಷಣೆಗಾಗಿ ಅವರನ್ನೆಲ್ಲ ಕೊಂದೆ. "ಮತ್ತೊಮ್ಮೆ ಹೇಳುತ್ತೇನೆ, ನಾನು ರಾಘವನ ದೂತ." ಇಷ್ಟು

ಹೇಳಿ ರಾವಣನ ಕಡೆಗೆ ತಿರುಗಿ "ರಾವಣ, ನಾನು ವಾನರ. ಹನುಮಂತ ಎಂದು ನನ್ನ ಹೆಸರು. ನಾನು ರಾಮನಿಂದ ಕಳುಹಿಸಲ್ಪಟ್ಟ ದೂತ. ನಿನಗೆ ಕೆಲವು ಪಥ್ಯವಾದ ಹಿತವಾದ ಮಾತುಗಳನ್ನು ಹೇಳಲು ಬಂದೆ. ಅವನ್ನು ಕೇಳು" ಎಂದು ರಾವಣನಿಗೆ ಹಿತವಾಕ್ಯವನ್ನು ಹೇಳಲು ಪ್ರಾರಂಭಿಸಿದ ಹನುಮಂತ.

ಹಿಂದೆಯೇ ಹೇಳಿದಂತೆ ಹನುಮಂತ ಆಚಾರ್ಯನ ಪ್ರತೀಕ. "ಲಂಕೆ" ಎಂಬ ದೇಹದಲ್ಲಿ ಹತ್ತು ಇಂದ್ರಿಯಗಳಿಂದ ಕೂಡಿದ ಮನಸ್ಸು ಎಂಬುದೇ ರಾವಣ. ಮನಸ್ಸನ್ನು ಹತೋಟಿಯಲ್ಲಿ ಇಡಬೇಕಾದುದು ಭಗವತ್ಕೃಪೆಗೆ ಮೊದಲ ಹೆಜ್ಜೆ. ಮನಸ್ಸು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಮುಂತಾದ ನಾನಾ ವಿಧವಾದ ದುರ್ವಿಷಯಗಳತ್ತ ಧಾವಿಸುತ್ತಿರುತ್ತದೆ. ಆಚಾರ್ಯನಾದವನು ಜೀವನ ಮೇಲ್ಮೆಯನ್ನು ಬಯಸಿ ಮನಸ್ಸಿನ ಈ ದುರ್ವೃತ್ತಿಗಳನ್ನು ನಿಗ್ರಹಿಸುತ್ತಾನೆ. ಹನುಮಂತನು ಜಂಬುಮಾಲಿ, ಪ್ರಘಸ, ಭಾಸಕರ್ಣ, ದುರ್ಧರ, ಯೂಪಾಕ್ಷ, ವಿರೂಪಾಕ್ಷ, ಅಕ್ಷಕುಮಾರ ಮುಂತಾದ ರಾಕ್ಷಸರನ್ನು ನಿಗ್ರಹಿಸಿದ ಎನ್ನುವಾಗ ಸದಾಚಾರ್ಯನಾದವ ಮನಸ್ಸಿನ ದುರ್ವಿಷಯಗಳಾದ ಆಸೆ, ಕೋಪ, ಮಾತ್ಸರ್ಯ, ಲೋಭ, ಅಹಂಕಾರ ಮುಂತಾದುವುಗಳನ್ನು ನಿಗ್ರಹಿಸುತ್ತಾನೆ ಎಂದು ತಾತ್ಪರ್ಯ.

ಆಚಾರ್ಯನು ಯಾವಾಗಲೂ ಅನುಕಂಪೆಯುಳ್ಳವನು. ಜೀವನು ಅನ್ಯಾಯವಾಗಿ ದುರ್ವಿಷಯಗಳಲ್ಲಿ ಆಸಕ್ತನಾಗಿ ಕೆಟ್ಟುಹೋಗುತ್ತಾನಲ್ಲಾ ಎಂಬ ಕಾರುಣ್ಯದಿಂದ ಜೀವನನು ಮೇಲೆತ್ತಲು ಮನಸ್ಸನ್ನು ಶುದ್ಧಿಗೊಳಿಸಲು ತನ್ನ ಉಪದೇಶವೆಂಬ ಜ್ಞಾನಾಮೃತವನ್ನು ವರ್ಷಿಸುತ್ತಾನೆ.

ಅದರಂತೆಯೇ ರಾವಣ, ವೈಭವ, ಯಶಸ್ಸು, ಪದವಿ, ಶಕ್ತಿ–ಸಾಮರ್ಥ್ಯಗಳನ್ನು ನೋಡಿದ ಹನುಮಂತ ಪರಸ್ತ್ರೀಯನ್ನು ಬಯಸುವುದರಿಂದ ಅನ್ಯಾಯವಾಗಿ ಇವನು ನಾಶವಾಗಿ ಹೋಗುತ್ತಾನಲ್ಲಾ ಎಂದು ಅನುಕಂಪೆಯಿಂದ ರಾವಣನಿಗೆ ಬುದ್ಧಿವಾದ ಹೇಳುತ್ತಾನೆ.

ಆಚಾರ್ಯನಾದವ ಧರ್ಮಾಧರ್ಮಗಳನ್ನು ವಿವೇಚಿಸಿ ಶಿಷ್ಯನಾದವನಿಗೆ ಯಾವುದು ಗ್ರಾಹ್ಯ ಯಾವುದು ತ್ಯಾಜ್ಯ ಎಂಬುದನ್ನು ತಿಳಿಸುತ್ತಾನೆ. ಅಲ್ಲದೆ ಸ್ವಯಂ ಯೋಗಿಯಾದ ಸದಾಚಾರ್ಯ ಪರಬ್ರಹ್ಮ ಸ್ವರೂಪವನ್ನು ಮನಸ್ಸಿಗೆ ನಾಟುವಂತೆ ವಿವರಿಸಿ ಆ ಪರತತ್ವದ ನೆಲೆಯನ್ನು ಪರಿಚಯ ಮಾಡಿಕೊಡುವುದರ ಮೂಲಕ ಜೀವ ಯಾವ ಹಾದಿಯಲ್ಲಿ ಸಾಗಿದರೆ ಒಳಿತು ? ಎಂಬುದನ್ನು ವಿಶದೀಕರಿಸುತ್ತಾನೆ.

ಅದರಂತೆ ಹನುಮಂತನೂ ರಾವಣನಿಗೆ ಧರ್ಮ–ಅಧರ್ಮದ ಸ್ವರೂಪಗಳನ್ನು ಸ್ಪಷ್ಟಪಡಿಸಿ, ರಾಮನ ನಿಜವಾದ ಶಕ್ತಿ ಏನು ? ಎಂಬುದನ್ನು ವಿವರಿಸಿ ರಾವಣನನ್ನು ಸನ್ಮಾರ್ಗಕ್ಕೆ ಹಚ್ಚುವ ಪ್ರಯತ್ನ ಮಾಡುತ್ತಾನೆ. ಇವೆಲ್ಲವನ್ನು ಆಚಾರ್ಯನಿಗೆ ಸಹಜವಾದ ದಯೆ, ಅನುಕಂಪೆಯಿಂದಲೇ ಮಾಡುತ್ತಾನೆ. ಹನುಮಂತ ರಾವಣನಿಗೆ ಹೇಳುತ್ತಾನೆ ''ಮಹಾಪರಾಕ್ರಮಿಯಾದ ದಶರಥನ ಹಿರಿಯ ಮಗ ರಾಮ ತನ್ನ ತಂದೆಯ ಮಾತನ್ನು ನಡೆಸುವುದಕ್ಕಾಗಿ ತನ್ನ ತಮ್ಮನಾದ ಲಕ್ಷ್ಮಣನೊಡನೆಯೂ, ಸತಿಯಾದ ಸೀತೆಯೊಡನೆಯೂ ಅರಣ್ಯವನ್ನು ಪ್ರವೇಶಿಸಿದ. ಅಲ್ಲಿ ರಾಮನ ಸತಿಯಾದ ಸೀತೆ ಅಪಹರಿಸಲ್ಪಟ್ಟಳು. ಅಲ್ಲಿಂದ ರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಸುಗ್ರೀವನ ಬಳಿಗೆ ಬಂದರು. ಅಲ್ಲಿ ಸುಗ್ರೀವನೊಂದಿಗೆ ರಾಮ ಸಖ್ಯವನ್ನು ಮಾಡಿಕೊಂಡು ಒಂದೇ ಬಾಣದಿಂದ ಮಹಾಪರಾಕ್ರಮಿಯಾದ ವಾಲಿಯನ್ನು ಕೊಂದ.

"ವಾಲಿಯನ್ನು ಕೊಂದ" ಎನ್ನುವಾಗ ಹನುಮಂತ ವಿಶೇಷವಾಗಿ ಎಂದಿದಾನೆ.

ತ್ವಯಾ ವಿಜ್ಞಾತ ಪೂರ್ವಶ್ಚ ವಾಲೀ ವಾನರ ಪುಂಗವಃ ।
ರಾಮೇಣ ನಿಹತಸ್ಸಂಖ್ಯೇ ಶರೇಣೈಕೇನ ವಾನರಃ ॥

ರಾವಣಾ, ವಾಲಿ ಯಾರು ಎಂಬುದನ್ನು ನೀ ಚೆನ್ನಾಗಿ ಬಲ್ಲೆ. ಹಿಂದಿನಿಂದ ನಿನಗೆ ಅವನು ಪರಿಚಿತ, ಅಂಥ ನಿನಗೆ ಗೊತ್ತಿದ್ದ ಬಲಿಷ್ಠ ವಾಲಿಯನ್ನು ಒಂದೇ ಬಾಣದಿಂದ ಹೊಡದು ಕೊಂದ" ಎಂದ.

ರಾವಣ, ದಿಗ್ವಿಜಯಾರ್ಥ ಹೊರಟ ಸಮಯ. ವಾಲಿ ಮಹಾಪರಾಕ್ರಮಿ ಎಂದು ಕೇಳಿ ಅವನೊಡನೆ ಸೆಣಸಬೇಕೆಂದು ಕಿಷ್ಕಿಂಧೆಗೆ ಬಂದ. ಆಗ ವಾಲಿ ಸಮುದ್ರತೀರಕ್ಕೆ ಸಂಧ್ಯಾವಂದನೆ ಮಾಡುವ ಸಲುವಾಗಿ ತೆರಳಿದ್ದ. ರಾವಣನೂ ವಾಲಿ ಇದ್ದಲ್ಲಿಗೇ ಬಂದ. ವಾಲಿ ಜಪ ಮಾಡುತ್ತಾ ಪರ್ವತದಂತೆ ನಿಶ್ಚಲನಾಗಿ ಕುಳಿತಿದ್ದ. ಹಿಂದಿನಿಂದ ಬಂದು ಅವನನ್ನು ಹಿಡಿಯಬೇಕು ಎಂದು ರಾವಣ ಬಂದ. ಇದನ್ನು ಅರಿತ ವಾಲಿ ಕುಳಿತಲ್ಲಿಂದಲೇ ತನ್ನ ಬಾಲವನ್ನು ಬೀಸಿ ರಾವಣನನ್ನು ಕಟ್ಟಿದ. ಸಮುದ್ರದಲ್ಲಿ ಅದ್ದಿ ಅದ್ದಿ ಹೊರತೆಗೆದ. ಒಂದು ಸಮುದ್ರದಲ್ಲಿ ಮಾತ್ರವೇ ಅಲ್ಲ. ನಾಲ್ಕು ಸಮುದ್ರಗಳಲ್ಲೂ ಹೀಗೆಯೇ ಅದ್ದುವುದು, ಹೊರತೆಗೆಯುವುದು ಮಾಡುತ್ತಿದ್ದ, ಕಿಷ್ಕಿಂಧೆಗೆ ಬಂದಮೇಲೆ ಬಂಕುಳಿನಿಂದ ಹೊರಗೆಬಿಟ್ಟ. ರಾವಣನನ್ನು ಕುರಿತು ನೀನು ಯಾರು ? ಎಂದು ಕೇಳಿದ. ರಾವಣ ಅನುನಯದಿಂದ ವಾಲಿಯೊಂದಿಗೆ ಸ್ನೇಹವನ್ನು ಯಾಚಿಸಿದ. ವಾಲಿ ಅದಕ್ಕೊಪ್ಪಿದ. ರಾವಣ–ವಾಲಿ ಇಬ್ಬರೂ ಅಗ್ನಿಸಾಕ್ಷಿಯಾಗಿ ಸ್ನೇಹಮಾಡಿಕೊಂಡರು.

ಆ ವೃತ್ತಾಂತವನ್ನು ಜ್ಞಾಪಿಸುತ್ತಾ ಹನುಮಂತ ಹೇಳುತ್ತಾನೆ "ಯಾವ ವಾಲಿ ನಿನ್ನನ್ನು ಸುಲಭವಾಗಿ ಕಟ್ಟಿ ನಾಲ್ಕು ಸಮುದ್ರಗಳಲ್ಲೂ ಮುಳುಗಿಸಿದನೋ ಅಂಥ ಮಹಾಪರಾಕ್ರಮಿಯಾದ ವಾಲಿಯನ್ನೇ ರಾಮ ಒಂದೇ ಒಂದು ಬಾಣದಿಂದ ಹೊಡೆದು ಕೊಂದ. ವಾಲಿ ಸತ್ತಮೇಲೆ ಸುಗ್ರೀವನಿಗೆ ಪಟ್ಟವಾಯಿತು. ಸುಗ್ರೀವ ಸೀತೆಯನ್ನು ಹುಡುಕುವ ಸಲುವಾಗಿ ನಾಲ್ಕೂ ದಿಕ್ಕಿಗೆ ವಾನರರನ್ನು ಅಟ್ಟಿದ. ಅವರಲ್ಲಿ ನಾನೂ ಒಬ್ಬ. ಹನುಮಂತ ಎಂದು ನನ್ನ ಹೆಸರು. ನಾನು ಸಮುದ್ರವನ್ನು ಹಾರಿ ಲಂಕೆಯಲ್ಲಿ ಸೀತೆಯನ್ನು ಹುಡುಕುತ್ತಾ ಬಂದೆ. ನಿನ್ನ ಅಶೋಕವನದಲ್ಲಿ ಸೀತೆಯನ್ನು ಕಂಡೆ."

"ರಾವಣ, ಹೇಳುತ್ತೇನೆ ಕೇಳು, ಪರಸ್ತ್ರೀಯರನ್ನು ಬಯಸುವುದು ಬಹಳ ಹೇಯವಾದ ಕೃತ್ಯ. ನೀ ತಿಳಿದಿರಬಹುದು. ನಾನು ಮಹಾತಪಸ್ಸನ್ನು ಮಾಡಿದೇನೆ. ಆ ತಪೋಬಲ ಈ ಪಾಪವನ್ನು ಮರೆಸುತ್ತದೆ ಎಂದು. ನೀನು ಹಾಗೆ ತಿಳಿಯಬೇಡ.

"ಧರ್ಮವಾಗಲಿ, ಅಧರ್ಮವಾಗಲಿ, ಅದರ ಫಲಾಫಲವನ್ನು ಅನುಭವಿಸಿಯೇ ತೀರಬೇಕು. "ಧರ್ಮದಿಂದ ಅಧರ್ಮವನ್ನು ಮುಚ್ಚುತ್ತೇನೆ" ಎಂದರೆ ಅದು ಆಗದ ಕೆಲಸ. ಧರ್ಮದ ಫಲವೇ ಬೇರೆ–ಅಧರ್ಮದ ಫಲವೇ ಬೇರೆ. ಇಲ್ಲಿ ಹನುಮಂತನ ಮಾತಿನ ಚಮತ್ಕಾರವನ್ನು ಗಮನಿಸಬೇಕು. ನೀನು ಸೀತೆಯನ್ನು ಕದ್ದುತಂದೆ ಎನ್ನಲಿಲ್ಲ. ನಿನ್ನ ವನದಲ್ಲಿ ಸೀತೆಯನ್ನು ಕಂಡೆ ಎನ್ನುತ್ತಾನೆ. ರಾಜನೀತಿಜ್ಞನ ಮಾತು ಅಲ್ಲವೆ ? ನೀ ಮಾಡಿದ ತಪಸ್ಸಿನ ಫಲವಾಗಿ ಇಷ್ಟು ದಿನ ವೈಭವದಿಂದ ಮೆರೆದೆ. ಇದೇ ಜನ್ಮದಲ್ಲಿ ಧರ್ಮ ಮಾಡಿ ಅದರ ಫಲವನ್ನು ಇದೇ ಜನ್ಮದಲ್ಲಿ

ಅನುಭವಿಸಿದೆ. ನಿನ್ನ ತಪಸ್ಸಿನ ಫಲ ಮುಗಿಯುತ್ತಾ ಬಂದಿದೆ. ಈಗ ನೀ ಮಾಡಿದ ಅಧರ್ಮವು ಫಲ ಕೊಡಲು ಪ್ರಾರಂಭಿಸಿದೆ. ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರ ವಧೆ, ವಾಲಿವಧೆ, ಇವೇ ಅದಕ್ಕೆ ನಿದರ್ಶನಗಳು.

''ಈಗಲೂ ರಾವಣ, ನೀ ಬದುಕಲು ದಾರಿಯನ್ನು ಹೇಳುತ್ತೇನೆ ಕೇಳು. ಸೀತೆಯನ್ನು ರಾಮನಿಗೆ ಒಪ್ಪಿಸಿ ಅವನಿಗೆ ಶರಣಾಗು. ಸೀತೆಯನ್ನು ನೀನು ಹೆಣ್ಣು ಎಂದು ತಿಳಿದಿರುವೆ. ಆದರೆ, ನೀ ತಿಳಿದಂತೆ ಸೀತೆ ಹೆಣ್ಣಲ್ಲ.

**ಕಾಳರಾತ್ರೀತಿ ತಾಂ ವಿದ್ಧಿ ಸರ್ವಲಂಕಾವಿನಾಶಿನೀಂ ।**
**ತದಲಂ ಕಾಲಪಾಶೇನ ಸೀತಾವಿಗ್ರಹರೂಪಿಣಾ ॥**

"ಕಾಳರಾತ್ರಿಯಂತೆ ಭಯಂಕರಳು ಸೀತೆ. ಸೀತೆಯು ನಿಟ್ಟುಸಿರು ಇಡೀ ಲಂಕೆಯನ್ನೇ ನಾಶ ಮಾಡುತ್ತದೆ. ಇದರಲ್ಲಿ ಸಂಶಯವಿಲ್ಲ. ವಿಷಯುಕ್ತವಾದ ಅನ್ನವನ್ನು ತಿಂದು ಜೀರ್ಣಿಸಿ ಕೊಳ್ಳುವುದು ಹೇಗೆ ಅಸಾಧ್ಯವೋ ಹಾಗೆ ಸೀತೆಯನ್ನು ನೀ ದಕ್ಕಿಸಿಕೊಳ್ಳಲಾರೆ, ಇದು ನಿಶ್ಚಯ. ನಾ ಹೇಳುವುದನ್ನು ಕೇಳು.

"ರಾಮ ಸಾಮಾನ್ಯನಲ್ಲ. ತನ್ನ ಸಾಮರ್ಥ್ಯದಿಂದ ಮೂರು ಲೋಕಗಳನ್ನೂ ಅಳಿಸಬಲ್ಲ. ಪುನಃ ಸೃಷ್ಟಿಸಲೂ ಬಲ್ಲ. ಪ್ರಪಂಚದಲ್ಲಿರುವ ಸಮಸ್ತ ಪಿಶಾಚರು, ದೈತ್ಯರು ದಾನವರು, ದೇವತೆಗಳು ಎಲ್ಲರೂ ಒಟ್ಟಾಗಿ ರಾಮನನ್ನು ಇದಿರಿಸಿದರೂ ರಾಮ ಒಬ್ಬನೇ ಎಲ್ಲರನ್ನೂ ಕ್ಷಣಾರ್ಧದಲ್ಲಿ ನಾಶಮಾಡಿಬಿಡುತ್ತಾನೆ ಎಂದಮೇಲೆ ರಾಕ್ಷಸರಾದ ನಿಮ್ಮ ಪಾಡೇನು ?

**ಬ್ರಹ್ಮಾ ಸ್ವಯಂಭೂ ಶ್ಚತುರಾನನೋವಾ ।**
**ರುದ್ರಸ್ತ್ರಿಣೇತ್ರ ಸ್ತ್ರಿಪುರಾಂತಕೋವಾ ॥**
**ಇಂದ್ರೋ ಮಹೇಂದ್ರಸ್ಸುರನಾಯಕೋವಾ ।**
**ತ್ರಾತುಂ ನ ಶಕ್ತಾ ಯುಧಿ ರಾಮ ವಧ್ಯಂ ॥**

"ಹೆಚ್ಚೇಕೆ ! ರಾವಣ, ಈ ಸಮಸ್ತ ಬ್ರಹ್ಮಾಂಡವನ್ನೂ ಸೃಷ್ಟಿಮಾಡಿದ ಆ ಬ್ರಹ್ಮನೇ ಆಗಲಿ, ಯಾವ ಬ್ರಹ್ಮ ನಾರಾಯಣನ ನಾಭಿಯಿಂದ ಉದ್ಭವಿಸಿದ ಕಾರಣದಿಂದ "ಸ್ವಯಂಭು" ಎನಿಸಿಕೊಳ್ಳುತ್ತಾನೋ ಆ ಸ್ವಯಂಭುವೇ ಆಗಲಿ, ಅಥವಾ ಯಾವ ಬ್ರಹ್ಮ ನಾಲ್ಕು ತಲೆಗಳುಳ್ಳವನಾಗಿ, ಆ ನಾಲ್ಕು ತಲೆಗಳಿಂದ ನಾಲ್ಕು ವೇದಗಳನ್ನು ಪಠಿಸುತ್ತಾ "ಚತುರಾನನ" ಎನಿಸಿಕೊಂಡಿದಾನೋ ಅಂಥ ಚತುರಾನನ, ಸ್ವಯಂಭು, ಬ್ರಹ್ಮ, ಇವನೇ ಬಂದರೂ ಸರಿ.

''ಅಥವಾ ಕಾಲ ಎನಿಸಿಕೊಂಡು ಸರ್ವರನ್ನೂ ಸಂಹಾರಮಾಡುವ ಆ ರುದ್ರನೇ ಬರಲಿ. ಪ್ರಳಯ ಕಾಲದಲ್ಲಿದ್ದ ತನ್ನ ಮೂರನೆಯ ಕಣ್ಣನ್ನು ಬಿಡುವುದರಿಂದ ಸಮಸ್ತ ಪ್ರಪಂಚವನ್ನೂ ನಾಶ ಮಾಡುವ ಆ ''ತ್ರಿಣೇತ್ರ–ಮೂರು ಕಣ್ಣುಳ್ಳವನಾದರೂ ಬರಲಿ. ಇಲ್ಲವೆ ವರದಿಂದ ಅಜೇಯರಾದ ತ್ರಿಪುರ ರಾಕ್ಷಸರನ್ನು ಸಂಹರಿಸಿದ ಆ ತ್ರಿಪುರಾರಿಯೇ ಬರಲಿ. ರುದ್ರ, ತ್ರಿಣೇತ್ರ ಹಾಗೂ ತ್ರಿಪುರಾಂತಕನೆನಿಸಿದ ಆ ಪರಮಶಿವನೇ ಬಂದರೂ ರಾಮನನ್ನು ಇದಿರಿಸಿ ನಿಲ್ಲಲು ಸಾಧ್ಯವಾಗದು. ಅಥವಾ ದೇವತೆಗಳಿಗೆಲ್ಲ ಒಡೆಯನಾದ ಮಹೇಂದ್ರನೇ ಬರಲಿ, ಇಲ್ಲ ದಿಕ್ಪಾಲಕರ ಅಧಿಪತಿಯಾದ ಇಂದ್ರನಾದರೂ ಸರಿ. "ಸುರನಾಯಕ" ಎನಿಸಿಕೊಂಡ ಆ ದೇವೇಂದ್ರನಾದರೂ ಸರಿ.

ಇಲ್ಲವೆ, ಉಪೇಂದ್ರನ ಅಣ್ಣನಾದ ಮಹೇಂದ್ರ, ದಿಕ್ಪಾಲಕರ ಪತಿಯಾದ ಇಂದ್ರ, ದೇವತೆಗಳಿಗೆಲ್ಲ ಅಧಿಪತಿಯಾದ ಸುರನಾಯಕ, ಈ ಮೂರು ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿರುವ ಆ ದೇವೇಂದ್ರನೇ ಸಾಕ್ಷಾತ್ತಾಗಿ ಬಂದರೂ ಸರಿ, ರಾಮನನ್ನು ಎದುರಿಸಿ ನಿಲ್ಲಲಾರ.

"ಅಲ್ಲದೆ ಹೇ ರಾವಣಾ ! ಕೇಳು. ಚತುರ್ಮುಖ, ಸ್ವಯಂಭು, ಬ್ರಹ್ಮ, ರುದ್ರ, ಮುಕ್ಕಣ್ಣ, ತ್ರಿಪುರಾಂತಕ, ಇಂದ್ರ, ಮಹೇಂದ್ರ, ಸುರನಾಯಕ ಇಷ್ಟು ಜನವೂ ಒಟ್ಟಾಗಿ ರಾಮನೊಡನೆ ಸೆಣ ಸಲು ನಿಂತರೂ ಅವರು ರಾಮನನ್ನು ಜಯಿಸಲಾರರು, ಇದು ಸತ್ಯ. ಮೇಲಾಗಿ, ರಾಮ ಯಾರು ಎಂದು ತಿಳಿದಿರುವೆ ? ಸಾಕ್ಷಾತ್ ವಿಷ್ಣುವೇ ರಾಮನಾಗಿ ಬಂದಿದಾನೆ. ಮಹಾಬಲಶಾಲಿಯಾದ ಗರುಡನು ಸರ್ಪವನ್ನು ಲೀಲಾಮಾತ್ರದಿಂದ ಹಿಡಿದು ಕೊಲ್ಲುವಂತೆ ರಾಮ ನಿನ್ನನ್ನು ಕೊಂದುಬಿಡು ತ್ತಾನೆ. ಸೂರ್ಯಸದೃಶವಾದ ರಾಮಬಾಣ, ಹಿಡಿದ ಕಾರ್ಯವನ್ನು ಸಾಧಿಸದೆ ಬಿಡದು. ಆದ್ದರಿಂದ ಆ ರಾಮಬಾಣ ಬರುವುದಕ್ಕೆ ಮುನ್ನ ಸೀತೆಯನ್ನು ರಾಮನಿಗೆ ಒಪ್ಪಿಸಿ ಶರಣಾಗತನಾಗು. ಲಂಕೆಯು ಉಳಿಯುತ್ತದೆ. ನಿನ್ನ ಬಾಂಧವರೂ ಉಳಿಯುತ್ತಾರೆ. ನಾನು ಸಾಮಾನ್ಯ ಎಂದುಕೊಂಡು ನನ್ನ ಮಾತನ್ನು ಅಲಕ್ಷಿಸಬೇಡ

**ರಾಮದಾಸಸ್ಯ ದೂತಸ್ಯ ವಾನರಸ್ಯ ವಿಶೇಷತಃ |**
**ಸರ್ವಾನ್ ಲೋಕಾನ್ ಸುಸಂಹೃತ್ಯ ಸಭೂತಾನ್ ಸಚರಾಚರಾನ್ ||**
**ಪುನರೇವ ತಥಾ ಸ್ರಷ್ಟುಂ ಶಕ್ತೋರಾಮೋ ಮಹಾಯಶಾಃ |**
**ದೇವಾಸುರ ನರೇಂದ್ರೇಷು ಯಕ್ಷರಕ್ಷೋಗಣೇಷು ಚ ||**
**ವಿದ್ಯಾಧರೇಷು ನಾಗೇಷು ಗಂಧರ್ವೇಷು ಮೃಗೇಷು ಚ |**
**ಸಿದ್ಧೇಷು ಕಿನ್ನರೇಂದ್ರೇಷು ಪತತ್ರಿಷು ಚ ಸರ್ವತಃ ||**
**ಸರ್ವಭೂತೇಷು ಸರ್ವತ್ರ ಸರ್ವಕಾಲೇಷು ನಾಸ್ತಿ ಸಃ |**
**ಯೋ ರಾಮಂ ಪ್ರತಿಯುಧ್ಯೇತ ವಿಷ್ಣುತುಲ್ಯ ಪರಾಕ್ರಮಂ ||**
**ಸರ್ವಲೋಕೇಶ್ವರ ಸ್ಯೇಹ ಕೃತ್ವಾ ವಿಪ್ರಿಯಮೀದೃಶಂ |**
**ರಾಮಸ್ಯ ರಾಜಸಿಂಹಸ್ಯ ದುರ್ಲಭಂ ತವ ಜೀವಿತಂ ||**

"ರಾಮದಾಸನಾಗಿ, ರಾಮದೂತನಾಗಿ, ವಿಶೇಷವಾಗಿ ವಾನರನಾಗಿ ಈ ಮಾತನ್ನು ಹೇಳುತ್ತಿ ದೇನೆ. ವಿಷ್ಣುವಿನಂತೆ ಪರಾಕ್ರಮವುಳ್ಳ ರಾಮನನ್ನು ಎದುರಿಸಿ ಬದುಕಲಾರೆ! ಎಚ್ಚರಿಕೆ !" ಎಂದು ರಾವಣನಿಗೆ ಬುದ್ಧಿವಾದವನ್ನು ಹೇಳಿದ ಹನುಮಂತ.

ಹನುಮಂತನ ಮಾತುಗಳನ್ನು ಕೇಳಿದ ರಾವಣ ಕೋಪಾವಿಷ್ಟನಾಗಿ ತನ್ನ ದೂತರಿಗೆ "ಈ ಕಪಿಯನ್ನು ಈಗಲೇ ಕೊಂದುಬಿಡಿ" ಎಂದು ಆಜ್ಞಾಪಿಸಿದ.

ಆಗ ಬುದ್ಧಿವಂತರಲ್ಲಿ ಶ್ರೇಷ್ಠನಾದ ಧರ್ಮಜ್ಞನಾದ ವಿಭೀಷಣ ಎದ್ದುನಿಂತು "ಲಂಕೇಶ್ವರ, ರಾಕ್ಷಸೇಂದ್ರ, ನನ್ನ ಮಾತನ್ನು ಲಾಲಿಸು. ಯಾವಾಗಲೂ ದೂತನನ್ನು ವಧಿಸುವುದು ರಾಜ ಧರ್ಮಕ್ಕೆ ವಿರುದ್ಧವಾದುದು. ದೂತವಧೆ ನಿಂದ್ಯವಾದುದು. ಆದ್ದರಿಂದ ಈ ವಾನರನನ್ನು ಕೊಲ್ಲ ಬೇಡ. ಕೇಶಾಘಾತ, ಮುಂಡನ ಮುಂತಾದುವಲ್ಲಿ ಯಾವುದಾದರೂ ಶಿಕ್ಷೆಯನ್ನು ವಿಧಿಸಬೇಕೇ ವಿನಾ ದೂತವಧೆ ಕೂಡದು" ಎಂದು ಹೇಳಿದ.

ವಿಭೀಷಣನ ಮಾತನ್ನು ಕೇಳಿದ ರಾವಣ ಹಾಗಾದರೆ, ಈ ಕಪಿಗೆ ಯಾವ ಶಿಕ್ಷೆ ಕೊಡುವುದು? ಎಂದು ಕ್ಷಣಕಾಲ ಯೋಚಿಸಿದ. ನಂತರ ಹೊಳೆಯಿತು. "ಕಪಿಗಳಿಗೆಲ್ಲ ಭೂಷಣ ಪ್ರಾಯವಾದುದು ಬಾಲ. ಆದ್ದರಿಂದ, ಬಾಲಕ್ಕೆ ಬೆಂಕಿಯನ್ನು ಹಚ್ಚಿ" ಎಂದು ಆಜ್ಞಾಪಿಸಿದ.

ಆದರಂತೆ ರಾಕ್ಷಸರು ಜೀರ್ಣವಾದ ಬಟ್ಟೆಗಳನ್ನು ತೈಲದಲ್ಲಿ ಅದ್ದಿ ಹನುಮಂತನ ಬಾಲಕ್ಕೆ ಕಟ್ಟಿದರು. ಹನುಮಂತ ತನ್ನ ಬಾಲವನ್ನು ಬೆಳಸಿದ. ಉದ್ದಕ್ಕೂ ಬಟ್ಟೆಯನ್ನು ಕಟ್ಟಿ ತೈಲದಲ್ಲಿ ಅದ್ದಿ ಬಾಲಕ್ಕೆ ಬೆಂಕಿಯನ್ನು ಹಚ್ಚಿದರು. ರಾಕ್ಷರರೆಲ್ಲ ಸಂತೋಷದಿಂದ ಚಪ್ಪಾಳೆ ತಟ್ಟುತ್ತಾ ಡಮರು, ಡೋಲು, ಕೊಂಬು, ಕಹಳೆ, ಭೇರಿ, ಶಂಖ, ಮುಂತಾದ ವಾದ್ಯಗಳನ್ನು ಬಾರಿಸುತ್ತಾ ಕಪಿಯನ್ನು ರಾಜಮಾರ್ಗದಲ್ಲಿ ಮೆರವಣಿಗೆ ಮಾಡಿಸುವ ನಲುವಾಗಿ ಕರೆದು ತಂದರು.

ಪ್ರಳಯಾಗ್ನಿಯಂತೆ ಹನುಮಂತನ ಬಾಲದ ಅಗ್ನಿ ಪ್ರಜ್ವಲಿಸುತ್ತಿತ್ತು. ರಾಕ್ಷಸಿಯರೆಲ್ಲ ಸಂತೋಷದಿಂದ ಸೀತೆಯ ಬಳಿಗೆ ಓಡಿ ಹೋಗಿ "ಸೀತೆ, ನಿನ್ನ ಜೊತೆಯಲ್ಲಿ ಮಾತಾಡುತ್ತಿತ್ತಲ್ಲ ಆ ಕೆಂಪು ಮುಖದ ವಾನರ, ಅದರ ಬಾಲಕ್ಕೆ ಬೆಂಕಿ ಹಚ್ಚಿದಾರೆ. ಅದು ಉರಿಯುತ್ತಿದೆ" ಎಂದು ಹೇಳಿದರು.

ಆತ್ಮಘಾತಕವಾದ ಈ ಕ್ರೂರ ವಾಕ್ಯವನ್ನು ಕೇಳಿದ ತಕ್ಷಣ ಸೀತೆ ಪೂರ್ವಾಭಿಮುಖವಾಗಿ ಕುಳಿತು ಅಗ್ನಿ ದೇವನನ್ನು ಪ್ರಾರ್ಥಿಸಿದಳು ರಾಮನು **ಏಕಪತ್ನೀ ವ್ರತಸ್ಥನಾಗಿದ್ದರೆ,** ನಾನು **ಪತಿವ್ರತೆಯಾಗಿದ್ದರೆ** ಹೇ ಅಗ್ನಿದೇವ, ಹನುಮಂತನಿಗೆ ತೊಂದರೆಮಾಡದೆ ಶಾಂತನಾಗು. ನಾನು ಭಾಗ್ಯವತಿಯಾಗಿರುವುದು ನಿಶ್ಚಯವೇ ಆದರೆ, ಹೇ ಅಗ್ನಿದೇವ, ನೀನು ಶೀತಲನಾಗು.

ರಾಮ ಸತ್ಯಸಂಧನಾಗಿದ್ದು, ಸುಗ್ರೀವನೊಡನೆ ಬಂದು ನನ್ನನ್ನು ಬಿಡಿಸಿಕೊಳ್ಳುವುದು ಸತ್ಯವಾಗುವುದಾದರೆ ಹೇ ಅಗ್ನಿಯೇ ನೀನು ಶಾಂತನಾಗು" ಎಂದು ಬೇಡಿದಳು.

ಅಗ್ನಿ ಸೀತೆಯ ಪ್ರಾರ್ಥನೆಗೆ ಓಗೊಟ್ಟನೋ ಎಂಬಂತೆ ಪ್ರದಕ್ಷಿಣಾಕಾರವಾಗಿ ಸುತ್ತತೊಡಗಿತು.

ಇತ್ತ ಹನುಮಂತನ ಬಾಲದಲ್ಲಿ ಜ್ವಾಲೆ ಉರಿಯತೊಡಗಿತು. ಆದರೂ ಅದು ಹನುಮಂತನಿಗೆ ಸ್ವಲ್ಪವೂ ತಾಪಕೊಡಲಿಲ್ಲ. ಹನುಮಂತನ ಬಾಲ ಚಂದನದಂತೆ ಶೀತಲವಾಗಿತ್ತು. ಹನಮಂತನಿಗೇ ಇದು ಆಶ್ಚರ್ಯವೆನಿಸಿತು ! ಇದೇನು ! ಇಷ್ಟೊಂದು ಪ್ರಖರವಾಗಿ ಉರಿಯುತ್ತಿದ್ದರೂ ಅಗ್ನಿ ನನ್ನನ್ನು ಸುಡದೆ ಇದೆಯಲ್ಲ. ಇದಕ್ಕೆ ಕಾರಣವೇನಿರಬಹುದು ! ರಾಮನ ಪ್ರಭಾವವು ಕಾರಣವೋ ಅಥವಾ ಸೀತೆಯ ಪಾತಿವ್ರತ್ಯದ ಮಹಿಮೆಯೋ ? ಇಲ್ಲ, ನನ್ನ ತಂದೆಯಾದ ವಾಯುವಿನ ಅನುಗ್ರಹವೋ, ವಾಯು–ಅಗ್ನಿ ಇಬ್ಬರೂ ಒಬ್ಬರಿಗೊಬ್ಬರು ಗೆಳೆಯರು. ಅಗ್ನಿ ತನ್ನ ಗೆಳೆಯನ ಪುತ್ರ ಹನುಮಂತ ಎಂದುಕೊಂಡು ಸುಡದೆ ಶೀತಲವಾಗಿದಾನೆಯೋ ಏನೋ ! ಎಂದುಕೊಂಡು ಸೀತಾ-ರಾಮರಿಗೆ ವಂದಿಸಿದ.

ರಾಕ್ಷಸರು ಹನುಮಂತನನ್ನು ಬಂಧಿಸಿ ವಾದ್ಯಗಳನ್ನು ಬಾರಿಸುತ್ತಾ ಪುರದ ಪ್ರಮುಖವೀಧಿಗಳಲ್ಲಿ ಮೆರವಣಿಗೆ ತರುತ್ತಿದ್ದರು. ಆಗ, ಹನುಮಂತ ತನ್ನ ರೂಪವನ್ನು ಸಂಕುಚಿತವಾಗಿಸಿಕೊಂಡು ಬಂಧನದಿಂದ ಬಿಡಿಸಿಕೊಂಡು ಅಲ್ಲಿಂದ ಭವನದ ಮೇಲೆ ಹಾರಿದ. ರಾಕ್ಷಸರೆಲ್ಲ ಭಯದಿಂದ ದಿಕ್ಕೆಟ್ಟರು. ಭವನದ ಮೇಲೆ ಕುಳಿತ ಹನುಮಂತ ಯೋಚಿಸಿದ. "ಅಗ್ನಿ ನನಗೆ ಸ್ವಲ್ಪವೂ ಬಾಧೆಯಾಗದಂತೆ ಸಹಾಯಮಾಡಿದಾನೆ. ಅವನಿಗೆ ನಾನು ಅವಶ್ಯವಾಗಿ ಸಂತರ್ಪಣೆಯನ್ನು ಮಾಡಿಸಲೇಬೇಕು" ಎಂದುಕೊಂಡ. ಅಲ್ಲದೆ, ಹಿಂದೆ ಕತ್ತಲಿನಲ್ಲಿ ಲಂಕೆಯನ್ನು ನೋಡಿದೆ. ಈಗ ಚೆನ್ನಾಗಿ

ಬೆಳಕಿನಲ್ಲಿ ಅದರ ದುರ್ಗಗಳನ್ನೂ, ರಾವಣನ ಬಲವನ್ನೂ ನೋಡಬೇಕು ಎಂದುಕೊಂಡು ಅಲ್ಲಿಂದ ಹಾರಿದ. ಪ್ರಹಸ್ತನ ಮನೆಗೆ ಮೊದಲು ತನ್ನ ಬಾಲದಿಂದ ಬೆಂಕಿಯನ್ನಿಟ್ಟ. ಅಲ್ಲಿಂದ ಮುಂದೆ ವಿದ್ಯುಜ್ಜಿಹ್ವ, ವಿದ್ಯುನ್ಮಾಲಿ, ವಜ್ರದಂಷ್ಟ್ರ, ಶುಕ, ಸಾರಣ, ಇಂದ್ರಜಿತು, ನರಾಂತಕ, ದೇವಾಂತಕ ಕುಂಭಕರ್ಣ, ಕುಂಭ, ನಿಕುಂಭ, ಮಹೋದರ. ಮಹಾಪಾರ್ಶ್ವ ಮುಂತಾದ ಎಲ್ಲ ರಾಕ್ಷಸರ ಭವನ ಗಳಿಗೂ ಬೆಂಕಿ ಹಚ್ಚಿದ. ಮಹಾತ್ಮನಾದ ವಿಭೀಷಣನ ಗೃಹ ಒಂದನ್ನು ಬಿಟ್ಟು ಉಳಿದ ಎಲ್ಲರ ಮನೆಗಳಿಗೂ ಬೆಂಕಿ ಇಟ್ಟ. ಎಲ್ಲದಕ್ಕೂ ಬೆಂಕಿ ಹಚ್ಚಿದ ನಂತರ ರಾವಣನ ಗೃಹಕ್ಕೆ ಬಂದ. ಲಕ್ಷ್ಮೀವಂತನಾದ ಹನುಮಂತ ರಾವಣನ ಗೃಹವನ್ನೂ ಸುಟ್ಟ. ಲಂಕೆಗೆ ಲಂಕೆಯೇ ಹತ್ತಿ ಉರಿಯು ತ್ತಿತ್ತು. ಎತ್ತರದ ಪ್ರಾಸಾದಗಳು ಛಟ–ಛಟ, ಎಂದು ಅಂಬರದಿಂದ ಪುಣ್ಯಕ್ಷೀಣವಾಗಿ ಬೀಳುವ ನಕ್ಷತ್ರಗಳಂತೆ ಬೀಳುತ್ತಿದ್ದವು.

ಲಂಕೆಯಲ್ಲಿದ್ದ ಸ್ತ್ರೀಯರು, ಪುರುಷರು, ಮಕ್ಕಳು ಎಲ್ಲರೂ ಎಲ್ಲವನ್ನೂ ಕಳೆದುಕೊಂಡು ಪ್ರಾಣದ ಮೇಲಿನ ಆಸೆಯಿಂದ ಹೊರಗೋಡಿ ಬಂದರು. ಅಯ್ಯೋ! ಇದೇನು ! ಇದು ಸಾಮಾನ್ಯ ಕಪಿ ಅಲ್ಲ ! ದೇವೇಂದ್ರನ ದೂತನೇ ಆಗಿರಬೇಕು ! ಹಾ ! ಯಮನೇ ಈ ವಾನರರೂಪದಲ್ಲಿ ಬಂದಿದಾನೆ ಎಂದು ಎದೆ ಒಡೆದುಕೊಂಡು ಪ್ರಲಾಪಿಸತೊಡಗಿದರು.

ವಜ್ರ ವೈಢೂರ್ಯ, ಗೋಮೇಧಕ ಮುಂತಾದ ರತ್ನಗಳಿಂದ ಕಟ್ಟಲ್ಪಟ್ಟ ಭವನಗಳು ಕ್ಷಣ ಮಾತ್ರದಲ್ಲಿ ಬೂದಿಯಾದವು. ಮಾರ್ಗ ಮಾರ್ಗದಲ್ಲೂ ಹನುಮಂತನ ಸಿಂಹನಾದ ಜಯಕಾರ ಕೇಳಿಬರುತ್ತಿತ್ತು. ಲಂಕೆಯ ಒಂದೊಂದು ಬೀದಿಯಲ್ಲೂ ಹನುಮಂತ ''ಜಯತ್ಯತಿ ಬಲೋ ರಾಮೋ ಲಕ್ಷ್ಮಣಶ್ಚ ಮಹಾ ಬಲಃ" ಎಂದು ಘೋಷಿಸುತ್ತಿದ್ದ.

ಲಂಕಾಪುರಿಯಲ್ಲಿದ್ದ ಒಂದೊಂದು ಜೀವಕ್ಕೂ ಹನುಮಂತ ಎಂದರೆ ಸಿಂಹಸ್ವಪ್ನವಾಗುವಂತೆ ಮಾಡಿಬಿಟ್ಟ. ಎಲ್ಲರೂ ಗೋಳಿಡಲು ಮೊದಲಿಟ್ಟರು. "ಅಯ್ಯೋ! ಇದು ಕಪಿಯಂತು ಅಲ್ಲವೇ ಅಲ್ಲ. ಸಾಮಾನ್ಯ ಕಪಿಯಾದರೆ ಇಂಥ ಸಾಹಸ ಎಲ್ಲಿ ಬರಬೇಕು ? ಆ ಕಾಲರುದ್ರನೇ ಈ ವಾನರ ನಾಗಿ ಬಂದಿದಾನೆ, ಕಾಲಾಗ್ನಿಯೇ ಹನುಮಂತನ ಬಾಲದ ಅಗ್ನಿಯಾಗಿದೆ. ಈ ತಾಪವನ್ನು ಸಹಿಸಲಾರೆವು ಸಹಿಸಲಾರೆವು !" ಎಂದು ಆಕಂದ್ರನ ಮಾಡತೊಡಗಿದರು ಲಂಕೆಯಲ್ಲಿದ್ದ ಎಲ್ಲ ಜನರೂ. ಹೀಗೆ ಇಡೀ ಲಂಕೆಯನ್ನು, ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಅಮರಾವತಿಯಂಥ ಲಂಕೆಯನ್ನು ಲಾಂಗೂಲಾಗ್ನಿಯಿಂದ ಸುಟ್ಟು ನಾಶಮಾಡಿದ ನಂತರ ಸಮುದ್ರದಲ್ಲಿ ತನ್ನ ಬಾಲವನ್ನು ಅದ್ದಿ ಅಗ್ನಿಯನ್ನು ಶಾಂತಪಡಿಸಿದ. ತ್ರಿಪುರಾಂತಕನಾದ ರುದ್ರನಂತೆ ಲಂಕೆಯನ್ನು ಸುಟ್ಟ ಹನುಮಂತ ಪ್ರಕಾಶಿಸಿದ. ಹನುಮಂತ ಲಂಕೆಯನ್ನು ಸುಟ್ಟಿದ್ದನ್ನು ಕಂಡ ದೇವತೆಗಳು, ಗಂಧರ್ವರು, ಋಷಿ ಗಳು, ಸಿದ್ಧರು, ಚಾರಣರು ಎಲ್ಲರೂ ಸಂತೋಷಪಟ್ಟರು ಲಂಕೆಯನ್ನು ಸುಟ್ಟ ಬಳಿಕ ಹನುಮಂತ ಯೋಚಿಸಿದ. ಲಂಕೆಯನ್ನೇನೋ ಸುಟ್ಟೆ. ಆದರೆ, ಜೊತೆಗೆ ಸೀತೆಯೂ ಸುಟ್ಟುಹೋಗಿದ್ದರೆ ಗತಿಯೇನು ! ಎಂದು.

"ಕೋಪ ಎನ್ನುವುದು ಬಹಳ ಕೆಟ್ಟದು. ಕೋಪ ಬಂದಾಗ ಯುಕ್ತಾಯುಕ್ತ ವಿವೇಚನಾ ಶಕ್ತಿಯೇ ಇರುವುದಿಲ್ಲ. ಕೋಪದ ಆವೇಗದಲ್ಲಿ ಗುರುವನ್ನೇ ಬೇಕಾದರೂ ಕೊಂದುಬಿಡಬಹುದು ನಿಜವಾಗಿ ಯೋಚಿಸಿದರೆ ಕೋಪಕ್ಕೆ ವಶರಾಗದ ಜಿತೇಂದ್ರಿಯರಾದ ಮಹಾಋಷಿಗಳೇ ಧನ್ಯರು. ನಾನು ಹೀಗೆ ಕೋಪಕ್ಕೆ ವಶನಾಗಿ ಎಂಥ ಅಕಾರ್ಯ ಮಾಡಿಬಿಟ್ಟೆ! ಈಗ, ರಾಮನಿಗೆ ಹೇಗೆ ಮುಖ

ತೋರಿಸುವುದು ? ಇಕ್ಷ್ವಾಕುಕುಲ, ವಾನರಕುಲ, ಎರಡನ್ನೂ ನಾಶಮಾಡಿಬಿಟ್ಟೆನಲ್ಲಾ" ಎಂದು ಒಂದು ಮುಹೂರ್ತಕಾಲದವರೆಗೆ ಚಿಂತಿಸಿದ.

ಮತ್ತೆ ಯೋಚಿಸಿದ. "ಒಂದು ವೇಳೆ ಸೀತೆ ಬದುಕಿದ್ದರೂ ಬದುಕಿರಬಹುದು. ಕಾಲಾಗ್ನಿಯಂತೆ ಪ್ರಜ್ವಲಿಸುತ್ತಿದ್ದ ಅಗ್ನಿ ನನ್ನನ್ನೇ ಏನೂ ಮಾಡಲಿಲ್ಲ. ನನ್ನ ಬಾಲವೇ ಸುಡದೆ ಶೀತಲವಾಗಿದ್ದಿತು. ಹೀಗಿರುವಾಗ ಸೀತೆ ಸುಟ್ಟುಹೋಗಿರಲಾರಳು. ಪಾತಿವ್ರತ್ಯದ ಪ್ರಭಾವದಿಂದ ಜೀವದೊಂದಿಗೆ ಅಪಾಯವಾಗದೆ ಇರಬಹುದು."

**ಅಪಿಸಾ ನಿರ್ದಹೇದಗ್ನಿಂ ನತಾಮಗ್ನಿಃ ಪ್ರದಕ್ಷ್ಯತಿ ।**

ಹೀಗೆ ಹನುಮಂತ ಯೋಚಿಸುತ್ತಿದ್ದಂತೆ ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಚಾರಣರು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು. "ಆಹಾ! ಇದೇನು ಆಶ್ಚರ್ಯ! ಸೀತೆ ಮಾತ್ರ ಸುರಕ್ಷಿತಳಾಗಿ ಇದ್ದಾಳೆ. ಇದೆಂಥ ಆಶ್ಚರ್ಯ!"

ಚಾರಣರು ಆಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳಿ ಹನುಮಂತ ಸಂತೋಷಪಟ್ಟ. ತಾನೇ ನೇರವಾಗಿ ಮತ್ತೊಮ್ಮೆ ನೋಡಿಬಿಡೋಣ ಎಂದುಕೊಂಡು ಅಶೋಕವನಕ್ಕೆ ಹಾರಿದ. ಅಲ್ಲಿ ಸುರಕ್ಷಿತಳಾಗಿದ್ದ ಸೀತೆಯನ್ನು ಕಂಡು ಪ್ರದಕ್ಷಿಣೆಮಾಡಿ ನಮಸ್ಕಾರ ಮಾಡಿದ. ಸೀತೆ ಸಂತೋಷದಿಂದ ಹನುಮಂತನನ್ನು ಮತ್ತೆ ಮತ್ತೆ ನೋಡುತ್ತ "ಹನುಮಂತ, ರಾಮನಿಗೆ ಬೇಗ ನನ್ನ ವಿಷಯವನ್ನು ತಿಳಿಸಿ ನನ್ನನ್ನು ಈ ಸೆರೆಯಿಂದ ವಿಮೋಚನೆ ಮಾಡಿಸು" ಎಂದು ಹೇಳಿದಳು.

"ಅಮ್ಮಾ, ನೀವು ಹೇಳುವುದನ್ನೆಲ್ಲ ನಾನು ಹಾಗೆಯೇ ರಾಮನಲ್ಲಿ ತಿಳಿಸುತ್ತೇನೆ ಅಂಜದಿರಿ. ರಾಮನು ಲಕ್ಷ್ಮಣನೊಡನೆ ಧನುರ್ಧಾರಿಯಾಗಿ ನನ್ನ ಭುಜಗಳ ಮೇಲೆ ಕುಳಿತು ಲಂಕೆಗೆ ಬರುತ್ತಾನೆ ಅವನ ಸಹಾಯಕ್ಕೆ ಸುಗ್ರೀವ ಸಮಸ್ತ ವಾನರ ಸೈನ್ಯದೊಡನೆ ಬರುತ್ತಾನೆ. ರಾವಣನನ್ನು ಅವನ ಬಂಧು ಬಾಂಧವರೊಡನೆ ನಿಗ್ರಹಿಸಿ ರಾಮ ನಿಮ್ಮನ್ನು ಅಯೋಧ್ಯೆಗೆ ಕರೆದೊಯ್ದು ಪಟ್ಟಾಭಿಷೇಕ ಮಾಡಿಕೊಳ್ಳುತ್ತಾನೆ. ನಾ ಬರುತ್ತೇನೆ" ಎಂದು ಸೀತೆಗೆ ಆಶ್ವಾಸನೆ ಕೊಟ್ಟು ಅಲ್ಲಿಂದ ಒಂದೇ ನೆಗೆತಕ್ಕೆ ಹಾರಿ ಮಹೇಂದ್ರಪರ್ವತದತ್ತ ಬಂದ ಹನುಮಂತ.

ಇತ್ತ ಮಹೇಂದ್ರಪರ್ವತದ ತಪ್ಪಲಿನಲ್ಲಿ ಹನುಮಂತನನ್ನೇ ನಿರೀಕ್ಷಿಸುತ್ತಾ ನಿಂತಿತ್ತು ವಾನರ ಸಮೂಹ. ದೂರದಲ್ಲಿ ಹನುಮಂತ ಬರುವುದನ್ನೇ ನಿರೀಕ್ಷಿಸುತ್ತಿದ್ದ ಜಾಂಬುವಂತ ಥಟ್ಟನೆ ಹೇಳಿದ, ನೋಡಿ ಹನುಮಂತ ಬರುತ್ತಿದ್ದಾನೆ. ಅವನು ಬರುತ್ತಿರುವ ರೀತಿ, ವೇಗ, ಶಬ್ದ ನೋಡಿದರೆ ಕಾರ್ಯವನ್ನು ಸಾಧಿಸಿಕೊಂಡೇ ಹಿಂದಿರುಗಿದ್ದಾನೆ ಎನಿಸುತ್ತದೆ ಎಂದ.

ಜಾಂಬವಂತನ ಮಾತನ್ನು ಕೇಳುತ್ತಿದ್ದಂತೆ ವಾನರರೆಲ್ಲ ತಲೆಯೆತ್ತಿ ನೋಡಿದರು. ಹನುಮಂತ ಸಂತೋಷದ ನಾದವನ್ನು ಮಾಡುತ್ತ ಬಂದವನೇ ಮಹೇಂದ್ರ ಪರ್ವತದಲ್ಲಿ ಇಳಿದ. ಎಲ್ಲ ವಾನರರೂ ಅವನನ್ನು ಮುತ್ತಿದರು. "ಸೀತೆಯನ್ನು ಕಂಡೆ" ಎಂದು ಸಂತೋಷಕರವಾದ ವಾರ್ತೆಯನ್ನು ಸಂಕ್ಷೇಪವಾಗಿ ಮೊದಲು ತಿಳಿಸಿದ. ಈ ವಾರ್ತೆ ಎಲ್ಲ ವಾನರರ ಕಿವಿಗೂ ಅಮೃತದಂತೆ ಹಿತಕರವಾಗಿತ್ತು.

ಈ ಮಾತನ್ನು ಕೇಳಿದ ಒಡನೆಯೇ ಎಲ್ಲ ವಾನರರೂ ನೆಗೆದರು, ನರ್ತಿಸಿದರು, ಕುಣಿದಾಡಿದರು. ಹನುಮಂತನನ್ನು ತಮ್ಮ ತಲೆಯ ಮೇಲೆ ಎತ್ತಿ ಕೂಡಿಸಿಕೊಂಡರು. ಬಗೆಬಗೆಯ ಹಣ್ಣು

ಗಳನ್ನು ತಂದು ಅವನ ಮುಂದೆ ಹಿಡಿದರು. ವಾನರರ ಸಂತೋಷ ಹೇಳತೀರದು. ಅವರು ಬ್ರಹ್ಮಾನಂದದಲ್ಲಿ ಮುಳುಗಿದ್ದರು. ಹನುಮಂತ ಒಬ್ಬನಿಂದ ಇಡೀ ವಾನರ ಕುಲವೇ ಉಳಿಯಿತು, ಉದ್ಧಾರವಾಯಿತು.

ಯುವರಾಜ ಅಂಗದನಿಗೆ, ಹಿರಿಯನಾದ ಜಾಂಬವಂತನಿಗೆ, ಉಳಿದ ವಾನರ ವೀರರಿಗೆ ನಮಸ್ಕರಿಸಿದ ಹನುಮಂತ. ಅಂಗದ ಹನುಮಂತನನ್ನು ತೋಳಿನಲ್ಲಿ ಎತ್ತಿಕೊಂಡ. ಜಾಂಬವಂತ, ನಳ, ನೀಲ, ಅಂಗದ ಎಲ್ಲರೂ ನೇರಿ ಹನುಮಂತನನ್ನು ಎತ್ತರವಾದ ಆಸನದಲ್ಲಿ ಕುಳ್ಳಿರಿಸಿ ಸುತ್ತಲೂ ತಾವು ನಿಂತರು. ಎಲ್ಲ ವಾನರ ವೀರರ ಮಧ್ಯದಲ್ಲಿ ಆಗ ಹನುಮಂತ ದೇವತೆಗಳ ಸಮೂಹದಲ್ಲಿ ಕುಳಿತ ಇಂದ್ರನಂತೆ ಶೋಭಿಸುತ್ತಿದ್ದ. ತಮ್ಮೆಲ್ಲರ ನಡುವ ಹನುಮಂತನನ್ನು ಕೂಡಿಸಿಕೊಂಡು ಜಾಂಬವಂತನನ್ನು ಕುರಿತು ಅದುವರೆಗೆ ನಡೆದದ್ದನ್ನು ವಿಸ್ತಾರವಾಗಿ ಹೇಳುವಂತೆ ಪ್ರಾರ್ಥಿಸಿದ.

ಸೀತೆಯ ವೃತ್ತಾಂತವನ್ನು ಹೇಳಬೇಕು ಎಂದೊಡನೆ ಹನುಮಂತ ಸಂತೋಷಪಟ್ಟ. ಮೊದಲು ಸೀತಾದೇವಿಗೆ ನಮಸ್ಕರಿಸಿ ಅದುವರೆಗೆ ನಡೆದ ಕಥೆಯನ್ನೆಲ್ಲ ವಿಸ್ತಾರವಾಗಿ ಹೇಳಿದ. ಸಮುದ್ರವನ್ನು ದಾಟುವಾಗ ಮಧ್ಯೆ ಬಂದ ಮೈನಾಕ. ಸುರಸೆ, ಸಿಂಹಿಕೆಯರ ವೃತ್ತಾಂತವನ್ನು ತಿಳಿಸಿದ. ಲಂಕೆಯಲ್ಲಿ ಸೀತೆ ಅಶೋಕವನದಲ್ಲಿ ರಾಕ್ಷಸಿಯರ ಮಧ್ಯೆ ಕಷ್ಟಪಡುತ್ತಿರುವ ನೆಲೆಯನ್ನು ವಿವರಿಸಿದ. ರಾವಣನಿಗೆ ಸೀತೆ ಬುದ್ಧಿವಾದ ಹೇಳಿದ್ದನ್ನೂ, ಸೀತೆಯನ್ನು ತಾನು ಕಂಡು ಉಂಗುರ ವನ್ನು ಕೊಟ್ಟು ಚೂಡಾಮಣಿಯನ್ನು ಪಡೆದುಕೊಂಡದ್ದನ್ನೂ ಹೇಳಿದ. ಮುಂದೆ ತಾನು ಅಶೋಕ ವನವನ್ನು ಧ್ವಂಸಮಾಡಿದ್ದನ್ನೂ, ಕಿಂಕರ, ಜಂಬುಮಾಲಿ, ಏಳುಜನ ಅಮಾತ್ಯಪುತ್ರರು, ಐದುಜನ ಸೇನಾಪತಿಗಳು. ಅಕ್ಷಕುಮಾರ ಇವರನ್ನೆಲ್ಲ ನಿಗ್ರಹಿಸಿದ್ದನ್ನೂ ಹೇಳಿದ. ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಂತೆ ನಟಿಸಿ ರಾವಣನ ಸಭೆಯನ್ನು ಹೊಕ್ಕಿದ್ದನ್ನೂ ಅಲ್ಲಿ ರಾವಣನಿಗೆ ಬುದ್ಧಿವಾದ ಹೇಳಿ ದ್ದನ್ನೂ, ರಾವಣ ಕೋಪಗೊಂಡು ಕೊಲ್ಲಲು ಆಜ್ಞಾಪಿಸಿದಾಗ ವಿಭೀಷಣ ತಡೆದದ್ದನ್ನೂ ವಿವರಿ ಸಿದ. ಮುಂದೆ ಬಾಲಕ್ಕೆ ಬೆಂಕಿ ಹಚ್ಚಿದಾಗ ತಾನು ತನ್ನ ಬಾಲಕ್ಕೆ ಹಚ್ಚಿದ ಬೆಂಕಿಯಿಂದ ಲಂಕೆಯನ್ನೇ ಸುಟ್ಟುಹಾಕಿದ್ದನ್ನೂ, ಲಂಕೆ ಸುಟ್ಟಂತೆ ಸೀತೆಯೂ ದಗ್ಧವಾಗಿರಬಹುದು ಎಂಬ ಚಿಂತೆ ಬಂದದ್ದನ್ನೂ ಆ ನಂತರ ಚಾರಣರ ಮಾತನ್ನು ಕೇಳಿ ಸಮಾಧಾನ ಹೊಂದಿ ಪುನಃ ಸೀತೆಯನ್ನು ಕಂಡು ನಮಸ್ಕ ರಿಸಿ ಅಲ್ಲಿಂದ ಹಾರಿ ಮಹೇಂದ್ರಪರ್ವತವನ್ನು ಸೇರಿದ್ದನ್ನೂ ವಿವರಿಸಿದ.

ರಾವಣ ಹನುಮಂತನನ್ನು ಸುಡಬೇಕು ಎಂದು ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿಸಿದ. ಆದರೆ, ತಾನು ಹಚ್ಚಿಸಿದ ಬೆಂಕಿಯಿಂದಲೇ ತನ್ನ ಲಂಕೆ ಸುಟ್ಟು ಹಾಳಾಯಿತು. ಅದಕ್ಕೇ ಯಾವಾಗಲೂ ಶಾಸ್ತ್ರದಲ್ಲಿ ಇತರರಿಗೆ ಒಳ್ಳೆಯದನ್ನು ಬಯಸಬೇಕು ಎಂದು ಹೇಳಿರುವುದು. ಪರರಿಗೆ ಕೆಟ್ಟದ್ದನ್ನು ಬಯಸಿದರೆ, ಕೆಟ್ಟದ್ದನ್ನು ಮಾಡಿದರೆ ಅದು ತನಗೇ ತಟ್ಟುವುದು ಎಂಬು ದಕ್ಕೆ ರಾವಣನೇ ನಿದರ್ಶನ. ಲಂಕೆ ಚೆನ್ನಾಗಿ ಉರಿದು ಭಸ್ಮೀಭೂತವಾಯಿತು. ಅಗ್ನಿ ಇಷ್ಟು ಚೆನ್ನಾಗಿ ಹೇಗೆ ಪ್ರಜ್ವಲಿಸಿತು ಎಂಬುದಕ್ಕೆ ಕಾರಣ ಕೊಡುತ್ತಾ ಜ್ಞಾನಿಗಳು ಹೇಳುತ್ತಾರೆ.

ಸೀತೆ ಮೊದಲೇ "ನತ್ವಾಂ ಕುರ್ಮಿದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾ'' ಎಂಬಂತೆ ಲಂಕೆ ಆಗಲೇ ಸುಟ್ಟು ಹಾಳಾಗಬೇಕಿತ್ತು. ಸೀತೆಯ ಪಾತಿವ್ರತ್ಯಾಗ್ನಿ ಹೊಗೆಯಾಡುತ್ತಲೇ ಇತ್ತು. ಅದಕ್ಕೆ ಹನುಮಂತ ನೆಪಮಾತ್ರ ಕಾರಣನಾದ. ಹನುಮಂತ ಎಲ್ಲವನ್ನೂ ಹೇಳಿ ಕೊನೆಯಲ್ಲಿ ವಿನಯದಿಂದ ಇದುವರೆಗೆ ನನ್ನ ಕೈಲಾದಷ್ಟು ಕಾರ್ಯವನ್ನು ಮಾಡಿದೇನೆ. ಇನ್ನು ಮುಂದೆ ನೀವು ಹೇಳುವಂತೆ ನಡೆಯಲು ಸಿದ್ಧನಾಗಿದೇನೆ ಎಂದ.

ಹನುಮಂತನ ಮಾತುಗಳನ್ನು ಕೇಳಿ ಎಲ್ಲ ವಾನರರೂ ಬಹಳ ಸಂತೋಷಪಟ್ಟರು. ಅಬ್ಬ ! ದೂತ ಎಂದರೆ ನೀನೇ ಸರಿ. ಸ್ವಾಮಿ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ. ನಮಗೆಲ್ಲ ಪ್ರಾಣ ಕೊಟ್ಟು ಪ್ರಾಣದಾತ ಎನಿಸಿಕೊಂಡೆ. ಧನ್ಯ ಹನುಮ ! ನಿನ್ನಂಥ ದೂತ ಒಬ್ಬನಿದ್ದರೆ ಯಾವ ಕಾರ್ಯತಾನೇ ಅಸಾಧ್ಯ ! ಈಗ ಸುಗ್ರೀವ ಕೃತಕೃತ್ಯನಾದ ಎಂದು ಅಂಗದನೇ ಮೊದಲಾದ ವಾನರವೀರರು ಹನುಮಂತನನ್ನು ಮುಕ್ತಕಂಠದಿಂದ ಪ್ರಶಂಸಿಸಿದರು.

ಕೆಲವು ವಾನರರು, ಅದೆಲ್ಲ ಸರಿ ! ಈಗಲೇ ಹೋಗಿ ನಾವು ರಾವಣನನ್ನು ಕೊಂದೇ ಸೀತೆಯನ್ನು ಕರೆದುತಂದುಬಿಡೋಣ. ಸೀತೆಯನ್ನು ನೇರವಾಗಿ ರಾಮನ ಬಳಿಯೇ ಕೊಂಡೊಯ್ದು ಬಿಡೋಣ ಎಂದರು.

ಹನುಮಂತನು, ರಾವಣ ಸಾಮಾನ್ಯನಲ್ಲ ಅವನ ಬಲ ಅಪಾರವಾಗಿದೆ. ಅದಕ್ಕೆ ತಕ್ಕಂತೆ ನಮ್ಮಲ್ಲೂ ಶೂರರಿದ್ದಾರೆ. ಆದರೆ, ಜಾನಕಿಯ ಆಜ್ಞೆಯ ಮೇರೆಗೆ ರಾಮಲಕ್ಷ್ಮಣರೇ ಇಲ್ಲಿಯವರೆಗೆ ಧನುರ್ಧಾರಿಗಳಾಗಿ ಬಂದು ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿಕೊಂಡು ಹೋಗುವುದೇ ಸರಿ ಎಂದ.

ಅಂಗದ, ಸರಿ ! ಇನ್ನು ಕಾಲಹರಣ ಮಾಡುವುದು ಸಲ್ಲದು. ಈಗಿಂದೀಗಲೇ ನಾವು ರಾಮಲಕ್ಷ್ಮಣರ ಹತ್ತಿರ ಹಿಂದಿರುಗೋಣ. ಅಲ್ಲಿ ನಾವು ಹೇಳಬೇಕಾದುದು ಎಂದರೆ "ಸೀತೆಯನ್ನು ಕಂಡೆವು" ಎಂದು ಮಾತ್ರ ಎಂದು ಸ್ಪಷ್ಟಪಡಿಸಿದ.

ಅದರಂತೆ ಹನುಮತ್ಪ್ರಮುಖರನ್ನೊಳಗೊಂಡ ವಾನರರು ಕಿಷ್ಕಿಂಧಾಭಿಮುಖವಾಗಿ ತೆರಳಿದರು

ಹಾರುತ್ತ, ಕುಣಿಯುತ್ತ, ಜಿಗಿಯುತ್ತ, ನೆಗೆಯುತ್ತ ಬರುತ್ತಿದ್ದರು ವಾನರರು. ಕಿಷ್ಕಿಂಧೆಗೆ ಸಮೀಪವಾಗುತ್ತಿದ್ದಂತೆ ಅಲ್ಲಿ ಮಧುವನವನ್ನು ನೋಡಿದರು. ಮಧುಭರಿತವಾದ ಫಲಗಳಿಂದ ತುಂಬಿತ್ತು ಆ ವನ. ದೇವತೆಗಳಿಗೂ ಎಟುಕದಂಥ ಆ ಮಧುವನ ರಾಜರಿಗೆ ಮಾತ್ರ ಮೀಸಲಾದುದು. ಅದಕ್ಕೆ ಮಹಾರಾಜನಾದ ಸುಗ್ರೀವನೇ ಯಜಮಾನ. ಇತರ ವಾನರರು ಆ ವನವನ್ನು ಪ್ರವೇಶಿಸುವುದಿರಲಿ, ಕಣ್ಣಿನಿಂದ ನೋಡುವಂತೆಯೂ ಇರಲಿಲ್ಲ. ಅಷ್ಟು ಚೆನ್ನಾಗಿ ಆ ವನವನ್ನು ರಕ್ಷಿಸುತ್ತಿದ್ದರು. ಸುಗ್ರೀವ ಆ ಮಧುವನವನ್ನು ರಕ್ಷಿಸಲು "ದಧಿಮುಖ" ಎಂಬ ವಾನರನನ್ನು ನಿಯಮಿಸಿದ್ದ.

ದಧಿಮುಖನಿಗೆ ಮೊಸರು ಇಷ್ಟ. ಆದರೆ ಮಧುವನವನ್ನು ಕಂಡರೆ ಆಗದು ಅವನಿಗೆ. ಮಧುಭರಿತವಾದ ಫಲಗಳನ್ನು ಸರಿಯಾಗಿ ನೋಡಿಕೊಳ್ಳಲು ಸುಗ್ರೀವ ಆ ಫಲಗಳಲ್ಲಿ ಆಸೆಯೇ ಇಲ್ಲದ ದಧಿಮುಖನನ್ನೇ ನಿಯಮಿಸಿದ್ದ. ಸುಗ್ರೀವನಂತೆಯೇ ಚಮತ್ಕಾರವಾಗಿ ಎಲ್ಲ ಇಲಾಖೆಗಳಿಗೂ ಅಧಿಕಾರಿಗಳನ್ನು ನಿಯಮಿಸಿದರೆ ರಾಜ್ಯ ಸುಭಿಕ್ಷವಾಗಿದ್ದೀತು ! ಹಣದಲ್ಲಿ ಆಸ್ಥೆಯೇ ಇಲ್ಲದವನನ್ನು ಹಣಕಾಸಿನ ಮಂತ್ರಿಯನ್ನಾಗಿ ಮಾಡಿದರೆ ಹೇಗೆ ಕ್ಷೇಮವೋ ಹಾಗೆ ಮಧುಫಲದಲ್ಲಿ ಆಸಕ್ತಿಯೇ ಇಲ್ಲದ "ದಧಿಮುಖ" ಎಂಬ ವಾನರನನ್ನು ಸುಗ್ರೀವ ಮಧುವನದ ರಕ್ಷಕನನ್ನಾಗಿ ನಿಯಮಿಸಿದ್ದ.

ದಕ್ಷಿಣ ದಿಕ್ಕಿನಿಂದ ಹಿಂದಿರುಗುತ್ತಿದ್ದ ವಾನರ ಸೈನ್ಯ ಮಧುವನವನ್ನು ನೋಡಿತು. ಜೇನು ತೊಟ್ಟಿಕ್ಕುತ್ತಿದ್ದ ರಸಯುಕ್ತವಾದ ಫಲಗಳು. ಅವುಗಳನ್ನು ಕಂಡ ಕಪಿಗಳ ಬಾಯಲ್ಲಿ ನೀರೂರಿತು. ಬಹಳ ಕಾಲದವರೆಗೆ ಸರಿಯಾದ ಆಹಾರವಿಲ್ಲದ ಪಾಡು ಒಂದು ಕಡೆ, ಮಹೇಂದ್ರಪರ್ವತದಿಂದ

ಇದುವರೆಗೆ ನಡೆದು ಬಂದ ಮಾರ್ಗಾಯಾಸ ಒಂದು ಕಡೆ. ಜೊತೆಗೆ, ಹಿಡಿದ ಕಾರ್ಯವನ್ನು ಸಾಧಿಸಿದ್ದೇವೆ ಎಂಬ ಧೈರ್ಯ. ಇದರಿಂದ ವಾನರರೆಲ್ಲ ಅಂಗದನನ್ನೂ, ಹನುಮಂತನನ್ನೂ ಮಧು ವನಕ್ಕೆ ಪ್ರವೇಶಿಸಲು ಅನುಮತಿಯನ್ನು ಬೇಡಿದರು. ಅಂಗದ ಅನುಮತಿಸಿದನೋ ಇಲ್ಲವೋ ವಾನರಪಡೆ ನುಗ್ಗಿತು ಮಧುವನದೊಳಗೆ. ವಾಲ್ಮೀಕಿ ಹೇಳುತ್ತಾರೆ !

**ಗಾಯಂತಿ ಕೇಚಿತ್ ಪ್ರಹಸಂತಿ ಕೇಚಿತ್ ।**
**ನೃತ್ಯಂತಿ ಕೇಚಿತ್ ಪ್ರಣಮಂತಿ ಕೇಚಿತ್ ॥**
**ಪತಂತಿ ಕೇಚಿತ್ ಪ್ರಚರಂತಿ ಕೇಚಿತ್ ।**
**ಪ್ಲವಂತಿ ಕೇಚಿತ್ ಪ್ರಲಪಂತಿ ಕೇಚಿತ್ ॥**

ಕೆಲವು ಕಪಿಗಳು ಹಣ್ಣನ್ನು ತಿನ್ನುತ್ತಾ ಹಾಡುತ್ತಿದ್ದವು, ಮತ್ತೆ ಕೆಲವು ನರ್ತಿಸತೊಡಗಿದವು, ಇನ್ನೂ ಕೆಲವು ನೆಗರುತ್ತಿದ್ದವು. ಮತ್ತೆ ಕೆಲವು ಸರಸರನೆ ಮರವನ್ನೇರುವುದು ಇಳಿಯುವುದು ಮಾಡುತ್ತಿದ್ದವು. ಇನ್ನೂ ಕೆಲವು ಕಪಿಗಳು ತಮ್ಮಷ್ಟಕ್ಕೆ ತಾವೇ ನಗುತ್ತಿದ್ದವು. ಮತ್ತೆ ಕೆಲವು ತಮಗೆ ತಾವೇ ನಮಸ್ಕಾರ ಮಾಡಿಕೊಳ್ಳುತ್ತಿದ್ದವು, ಇನ್ನೂ ಕೆಲವು ಕಪಿಗಳು ತಮ್ಮೊಳಗೇ ಅದೇನೋ ವಾದ–ವಿವಾದ ನಡೆಸುತ್ತಿದ್ದವು. ಹೀಗೆ ತಮ್ಮ ತಮ್ಮಲ್ಲೇ ಹಾಡುತ್ತ, ಕುಣಿಯುತ್ತಾ ಕೂಗುತ್ತ, ನಲಿಯುತ್ತಾ, ನರ್ತಿಸುತ್ತಾ, ಕೇಕೆಹಾಕಿ ನಗುತ್ತಾ ಪರಸ್ಪರ ಸಂತೋಷವಾಗಿದ್ದವು. ಮಧುವನದಲ್ಲಿದ್ದ ಅಪೂರ್ವವಾದ ಫಲಗಳನ್ನೆಲ್ಲ ತಿಂದು ಮರದ ಎಲೆಗಳನ್ನೆಲ್ಲ ಉದುರಿಸಿ ಹಾಕಿ ವನವನ್ನೇ ಹಾಳುಗೆಡವಿದವು

ವಾನರರ ಈ ವಿಧ್ವಂಸಕ ಕೃತ್ಯಗಳನ್ನು ಕಂಡ ದಧಿಮುಖ ತನ್ನ ಅನುಚರರನ್ನು ಕಳುಹಿಸಿ ತಡೆಯುವಂತೆ ಹೇಳಿದರೆ ಈ ವಾನರರು ವನಪಾಲಕರನ್ನು ಹಿಡಿದು ಒದೆದು, ಗುದ್ದಿ, ಅವರನ್ನು ಅವಮಾನ ಪಡಿಸಿದರು, ಅಣಕಿಸಿದರು.

ಇದನ್ನು ಕಂಡ ದಧಿಮುಖ "ಇದೇನು ! ರಾಜಾಜ್ಞೆಯನ್ನು ಉಲ್ಲಂಘಿಸಿದ ಅಪರಾಧಕ್ಕಾಗಿ ಈಗಲೇ ನಿಮಗೆ ಶಿಕ್ಷೆ ಮಾಡಿಸುತ್ತೇನೆ" ಎಂದು ಗುಡುಗಿ ಸುಗ್ರೀವನಲ್ಲಿಗೆ ಬಂದ. ಸುಗ್ರೀವ ರಾಮ ಲಕ್ಷ್ಮಣರೊಡನೆ ದಕ್ಷಿಣ ದಿಕ್ಕಿಗೆ ಹೋಗಿದ್ದ ವಾನರರನ್ನೇ ನಿರೀಕ್ಷಿಸುತ್ತಿದ್ದ. ಆ ಸಮಯಕ್ಕೆ ನರಿ ಯಾಗಿ ಯಾರೋ ತನ್ನ ಕಾಲನ್ನು ಹಿಡಿದು ನಮಸ್ಕರಿಸುತ್ತಿರುವುದನ್ನು ಕಂಡ ಸುಗ್ರೀವ "ಯಾರು ಅದು ನನ್ನ ಕಾಲನ್ನು ಹಿಡಿದುಕೊಂಡಿರುವವರು ! ಅಭಯ ಕೊಟ್ಟಿದೇನೆ ! ಧೈರ್ಯವಾಗಿ ಏಳು!" ಎಂದ.

ಸುಗ್ರೀವನ ಅಭಯ ವಚನವನ್ನು ಕೇಳಿದ ದಧಿಮುಖ ಎದ್ದುನಿಂತು ಕೈ ಜೋಡಿಸಿ ನಡೆದದ್ದ ನ್ನೆಲ್ಲ ವಿಜ್ಞಾಪಿಸಿದ. ಸುಗ್ರೀವ ಇದನ್ನು ಕೇಳಿದ. ದಕ್ಷಿಣ ದಿಕ್ಕಿಗೆ ಹೋಗಿದ್ದ ವಾನರರು ಕಾರ್ಯ ಸಿದ್ಧಿ ಮಾಡಿಕೊಂಡು ಹಿಂದಿರುಗಿದ್ದಾರೆ ಎಂದುಕೊಂಡ. ' ದಧಿಮುಖ, ವಾನರರು ವನವನ್ನು ಹಾಳುಮಾಡಿದ್ದು ನನಗೆ ಸಂತೋಷವೇ ! ಅವರನ್ನು ಶೀಘ್ರವಾಗಿ ಬರಹೇಳು !" ಎಂದ.

ದಧಿಮುಖನ ದೀನವಾದ ಮುಖವನ್ನು ಕಂಡ ಲಕ್ಷ್ಮಣ, ಸುಗ್ರೀವನನ್ನು ಕುರಿತು ಇವನು ಯಾರು ? ಏಕೆ ದುಃಖಿಸುತ್ತಾನೆ ಎಂದು ಕೇಳಿದ.

ಲಕ್ಷ್ಮಣನ ಮಾತಿಗೆ ಉತ್ತರವಾಗಿ ಸುಗ್ರೀವ "ಸುಮಿತ್ರಾಕುಮಾರ, ಇವನು ದಧಿಮುಖ

ಎಂಬ ವಾನರ. ಮಧುವನದ ರಕ್ಷಕ. ಅಂಗದ ಪ್ರಮುಖರು ಹಿಂದಿರುಗಿದಾರೆ. ವನವನ್ನು ವಾನರರೆಲ್ಲ ಸೇರಿ ಹಾಳುಮಾಡುತ್ತಿದಾರೆ ಎಂದು ಹೇಳಲು ಬಂದಿದಾನೆ" ಎಂದ. ಪುನಃ ದಧಿಮುಖನನ್ನು ಕುರಿತು "ಹೋಗು, ಶೀಘ್ರವಾಗಿ. ವಾನರ ಪ್ರಮುಖರನ್ನು ಬರುವಂತೆ ಹೇಳು. ವನ ಹೋದದ್ದು ನನಗೆ ಸಂತೋಷವೇ" ಎಂದ.

ದಧಿಮುಖ ಸುಗ್ರೀವನಿಗೂ, ರಾಮಲಕ್ಷ್ಮಣರಿಗೂ ನಮಸ್ಕರಿಸಿ ಅಲ್ಲಿಂದ ಹೊರಟ.

ದಧಿಮುಖ ಹೊರಟಮೇಲೆ ಸುಗ್ರೀವ ರಾಮನನ್ನು ಕುರಿತು ಕೌಸಲ್ಯಾ ಸುಪ್ರಜಾ ರಾಮ, ನಿನ್ನ ಕಾರ್ಯ ಸಿದ್ಧಿಯಾಗಿದೆ. ಹನುಮಂತ ಹೋದಮೇಲೆ ಕಾರ್ಯ ಸಿದ್ಧಿಯೇ. ಇಲ್ಲವಾದರೆ ವಾನರರು ಕಾಲವನ್ನು ಅತಿಕ್ರಮಿಸಿ ಹಿಂದಿರುಗುತ್ತಿರಲಿಲ್ಲ. ರಾಮ, ಅಲ್ಲದೆ ಸೀತೆಯನ್ನು ಕಂಡಿರದಿದ್ದರೆ ಮಧುವನವನ್ನು ಹೋಗುವ ಧೈರ್ಯವೂ ಇರುತ್ತಿರಲಿಲ್ಲ. ರಾಮ, ಇನ್ನು ನಿನ್ನ ಕಷ್ಟ ಪರಿಹಾರವಾದಂತೆಯೇ. ಎಲ್ಲಿ ಕಾರ್ಯತತ್ಪರನಾದ ಯುವರಾಜ ಕುಮಾರ ಅಂಗದ ಇದಾನೆಯೋ. ಉಪಾಯ ಶಾಲಿಯಾದ ಜಾಂಬವ ಎಲ್ಲಿ ಇರುವನೋ, ಬುದ್ಧಿವಂತನಾದ ಹನುಮಂತ ಯಾವ ಗುಂಪಿನಲ್ಲಿವಾನೋ ಅಲ್ಲಿ ಜಯ ಸಿದ್ಧವೇ ಸರಿ.

**ಜಾಂಬವಾನ್ ಯತ್ರನೇತಾಸ್ಯಾತ್ ಅಂಗದಶ್ಚ ಮಹಾಬಲಃ ।**
**ಹನುಮಾಂಶ್ಚಾಪ್ಯಧಿಷ್ಠಾತಾನ ತತ್ರ ಗತಿರನ್ಯಥಾ ॥**

ಎಂದ. ಕಿವಿಗೆ ಸುಖವನ್ನೀಯುವ ಈ ಮಂಗಳಕರವಾದ ಮಾತುಗಳನ್ನು ಕೇಳಿದ ರಾಮನ ಮುಖ ಸೂರ್ಯನ ಕಿರಣಗಳಿಂದ ಅರಳುವ ತಾವರೆಯಂತೆ ಅರಳಿತು.

ಇತ್ತ ಸುಗ್ರೀವನಿಂದ ಆಜ್ಞಪ್ತನಾದ ದಧಿಮುಖ ನೇರವಾಗಿ ಅಂಗದನ ಬಳಿಗೆ ಬಂದ. ಯುವರಾಜಕುಮಾರ, ತನ್ನ ತಪ್ಪನ್ನು ಕ್ಷಮಿಸಬೇಕು. ಎಷ್ಟೆಂದರೂ ನೀವು ಯುವರಾಜರು. ವನದ ಸ್ವಾಮಿತ್ವ ನಿಮ್ಮದು. ತಿಳಿಯದೆ ನಿಮ್ಮನ್ನು ಅವಮಾನಪಡಿಸಿದೆ. ನಿಮ್ಮ ತಂದೆಯಾದ ಸುಗ್ರೀವನಲ್ಲಿಗೆ ಹೋಗಿ ವಿಜ್ಞಾಪಿಸಿದೆ. ನಿಮ್ಮ ಚಿಕ್ಕತಂದೆ ವನ ನಾಶವಾದುದಕ್ಕೆ ಸ್ವಲ್ಪವೂ ಕುಪಿತರಾಗಿಲ್ಲ. ಬದಲಾಗಿ ಸಂತೋಷವನ್ನೇ ಹೊಂದಿದಾರೆ, ನಿಮ್ಮೆಲ್ಲರನ್ನೂ ಶೀಘ್ರವಾಗಿ ಬರುವಂತೆ ಆಜ್ಞಾಪಿಸಿದ್ದಾರೆ ಎಂದ

ದಧಿಮುಖನ ಮಾತನ್ನು ಕೇಳಿದ ಅಂಗದ ಎಲ್ಲ ವಾನರರಿಗೂ ಶೀಘ್ರವಾಗಿ ರಾಮನ ಬಳಿಗೆ ಹೋಗುವಂತೆ ಆಜ್ಞಾಪಿಸಿದ. ಸುಗ್ರೀವ ಎಷ್ಟಾದರೂ ನನ್ನ ಪಿತೃ ಸ್ಥಾನದಲ್ಲಿರುವವ. ಅವನೇ ನನ್ನ ಗುರುವೂ ಆಗಿರುವನು. ತ್ವರೆಯಾಗಿ ಅವನಲ್ಲಿಗೆ ಹೋಗುವುದೇ ಯುಕ್ತ ಎಂದ. ಅಂಗದನ ಮಾತುಗಳನ್ನು ಕೇಳಿದ ವಾನರರು ಸಾಧು–ಸಾಧು ಎಂದು ಅವನ ಮಾತುಗಳನ್ನು ಅನುಮೋದಿಸಿದರು.

ಕೆಲವು ಹಿರಿಯ ವಾನರರು ಅಂಗದ, ನಿನ್ನ ಮಾತು ಯೋಗ್ಯವಾದುದು. ಐಶ್ವರ್ಯಮದದಿಂದ, ಪದವಿಯ ವ್ಯಾಮೋಹದಿಂದ ಕೂಡಿದವರು ಹಿರಿಯರನ್ನೇ ಧಿಕ್ಕರಿಸುತ್ತಾರೆ. ನನಗೆ ಸಮಾನರೇ ಇಲ್ಲ। ಎಂದು ಮೆರೆಯುತ್ತಾರೆ. ಆದರೆ, ಯುವರಾಜಕುಮಾರ, ನೀನು ಹಾಗಲ್ಲ. ನಿನಗೆ ಯುವರಾಜ ಎಂಬ ಗರ್ವ ಸ್ವಲ್ಪವೂ ಇಲ್ಲ. ಹಿರಿಯರನ್ನು ಗೌರವಿಸುವಂಥ ನಿನ್ನ ಉದಾರ ಬುದ್ಧಿ ಶ್ಲಾಘನೀಯವೇ ಸರಿ ಎಂದು ಅಂಗದನನ್ನು ಪ್ರಶಂಸಿಸಿದರು.

ಅಲ್ಲಿಂದ ಎಲ್ಲ ವಾನರರೂ ರಾಮನ ಬಳಿಗೆ ಹೊರಟರು. ರಾಮನನ್ನು ಸುಗ್ರೀವ ನಂತೈಸುತ್ತಿದ್ದ. ರಾಮ, ನಿನ್ನನ್ನು ಹೆತ್ತ ಆ ಕೌಸಲ್ಯೆಯ ಪುಣ್ಯ ಅದೆಂಥದೋ! ಪಡೆದ ಮಗನನ್ನು ಲೋಕಹಿತಕ್ಕಾಗಿ ವಿನಿಯೋಗಿಸಿದ ಮಹಾತಾಯಿ ಅವಳು. ನಿನ್ನ ಕಷ್ಟದ ದಿನಗಳು ಕಳೆದವು. ಹನುಮಂತ ಇನ್ನೇನು ಬರುತ್ತಾನೆ. ಸೀತೆ ಇರುವ ಸ್ಥಳವನ್ನು ತಿಳಿಸುತ್ತಾನೆ. ಆಮೇಲೆ ನೀನು ರಾವಣನನ್ನು ನಿಗ್ರಹಿಸಿ ಸೀತೆಯೊಡನೆ ಸೌಖ್ಯವಾಗಿ ಇರುತ್ತೀ ಎಂದು ಹೇಳುತ್ತಿದ್ದಂತೆ ಕಿಲ-ಕಿಲ ಶಬ್ದ ಕೇಳಿಸಿತು.

ಆಕಾಶದಲ್ಲಿ ಒಂದಿನಿತೂ ಸ್ಥಳವಿಲ್ಲದಂತೆ ವಾನರರೆಲ್ಲ ಅಂಬರವನ್ನು ಆಚ್ಛಾದಿಸಿದ್ದರು. ಎಲ್ಲರೂ ರಾಮನ ಸನ್ನಿಧಿಯಲ್ಲಿ ಬಂದು ನಿಂತರು.

**ಹನುಮಂತ ವಿನಯದಿಂದ, (ಕಂಡೆ, ಸೀತೆಯನ್ನು)**–ಎಂದು ರಾಮನಲ್ಲಿ ವಿಜ್ಞಾಪಿಸಿದ. ಆಗ ಹನುಮಂತನನ್ನು ಬಹುಮಾನಿಸುವ ನೇತ್ರಗಳಿಂದ ರಾಮಲಕ್ಷ್ಮಣ ಸುಗ್ರೀವರು ಪುನಃ ಪುನಃ ನೋಡಿದರು.

ರಾಮನ ಸಾನ್ನಿಧ್ಯದಲ್ಲಿ ಬಂದು ನಿಂತಿದ್ದ ವಾನರರಿಗೆಲ್ಲ ಉತ್ಸಾಹವೋ ಉತ್ಸಾಹ. ಎಲ್ಲರೂ ತಾ ಮುಂದು_ನಾ ಮುಂದು ಎಂದು ಮುನ್ನುಗ್ಗಿ ರಾಮನ ಮುಂದೆ ಬಂದು ನಿಂತು "ರಾವಣನ ಅಂತಃಪುರದಲ್ಲಿ ಶೋಕದಿಂದ ಪೀಡಿತಳಾದ ಸೀತೆ ಇದ್ದಳು" ಎಂದು ಹೇಳತೊಡಗಿದವು.

ಸೀತೆಯ ಬಗ್ಗೆ ಹೇಳಲು ಪ್ರತಿ ಒಂದು ಕಪಿಗೂ ಆತುರ. ಒಂದು ಕೋತಿ ರಾಮನ ಮುಂದೆ ನಿಂತು "ರಾಮಾ! ಸೀತೆ ರಾವಣನ ಅಂತಃಪುರದಲ್ಲಿ ಇದಾಳೆ" ಎಂದರೆ ಆ ಕಪಿಯನ್ನು ಹಿಡಿದು ಎಳೆದು ಅದರ ಮುಂದೆ ಮತ್ತೊಂದು ಕಪಿ ಬಂದು ನಿಂತು ರಾಮಾ! ಸೀತೆಯ ಬಗ್ಗೆ ನಾ ಹೇಳುವುದನ್ನು ಕೇಳು. ಸೀತೆ ರಾವಣನ ಅಂತಃಪುರದಲ್ಲಿ ಇದಾಳೆ ಎನ್ನುತ್ತಿತ್ತು.

ಹೀಗೆ ಸಹಸ್ರಾರು ಕಪಿಗಳೂ ಒಂದರ ಮೇಲೊಂದು ಬಿದ್ದು ರಾಮನ ಮುಂದೆ ಸೀತೆಯ ಬಗ್ಗೆ ಹೇಳಲು ಕಾತರಿಸುತ್ತಿದ್ದವು. ವಾಸ್ತವದಲ್ಲಿ ಸೀತೆಯನ್ನು ಕಂಡಿದ್ದ ಹನುಮಂತ ಎಲ್ಲ ವಾನರರ ಹಿಂದೆ ಅಡಗಿ ವಿನಯದಿಂದ ನಿಂತಿದ್ದ. ಎಲ್ಲ ವಾನರರೂ ನುಗ್ಗುತ್ತ ಇರುವುದನ್ನು ಕಂಡ ರಾಮ. "ವಾನರರೇ, ಸೀತೆಯನ್ನು ಎಲ್ಲಿ ನೋಡಿದಿರಿ? ಅವಳು ಹೇಗಿದಾಳೆ? ನನ್ನ ಬಗ್ಗೆ ಅವಳು ಏನು ಹೇಳಿದಳು? ಹೇಳಿ ಎಲ್ಲವನ್ನೂ" ಎಂದ.

ಸೀತೆಯ ಬಗ್ಗೆ ವಿವರವನ್ನು ಕೇಳಿದ ಒಡನೆ ಎಲ್ಲ ಕಪಿಗಳೂ ಹಿಂಜರಿದವು. ಎಲ್ಲ ಕೋತಿಗಳೂ ಹನುಮಂತನನ್ನು ಬಂದು ನೇರಿದವು. ಸೀತಾ ವೃತ್ತಾಂತಕೋವಿದ ನೆನಿಸಿದ ಹನುಮಂತನನ್ನು "ನೀ ಹೇಳು –ನೀ ಹೇಳು" ಎಂದು ಪ್ರಚೋದಿಸಿದವು. ಆಗ, ಸೀತೆಯ ವೃತ್ತಾಂತವನ್ನು ಕೂಲಂಕಷವಾಗಿ ಅರಿತ ಮಾರುತಿ ರಾಮನ ಮುಂದೆ ಬಂದು ನಿಂತ. ಮೊದಲು, ಸೀತೆಯ ಬಗ್ಗೆ ಹೇಳುವ ಮುನ್ನ ಸೀತೆ ಇರುವ ದಿಕ್ಕನ್ನು ನೋಡಿ ಕೈ ಮುಗಿದ. ಅನಂತರ ರಾಮನಿಗೆ ಹೇಳಿದ. "ಸಂಪಾತಿಯ ವಚನದಂತೆ ಶತಯೋಜನ ವಿಸ್ತಾರವಾದ ಸಮುದ್ರವನ್ನು ದಾಟಿ ಲಂಕೆಯಲ್ಲೆಲ್ಲಾ ದೇವಿಯನ್ನು ಹುಡುಕಿದೆ. ಲಂಕೆಯ ಆಶೋಕವನದಲ್ಲಿ ಶೋಕವೇ ಮೂರ್ತಿವೆತ್ತಂತಿರುವ ಸೀತೆಯನ್ನು ಕಂಡೆ. ನೀನು ಹೇಳಿದ್ದನ್ನು ತಿಳಿಸಿ ಸೀತೆಗೆ ಉಂಗುರವನ್ನು ಕೊಟ್ಟು, ಅವಳಿಂದ ಈ ಚೂಡಾಮಣಿಯನ್ನು ಪಡೆದೆ. ರಾಮಾ, ಸೀತೆ ಕೊಟ್ಟಿರುವ ಈ ಚೂಡಾಮಣಿಯನ್ನು ನೋಡು" ಎಂದು ಸೀತೆ ತನಗೆ ಕೊಟ್ಟಿದ್ದ ಚೂಡಾಮಣಿಯನ್ನು ರಾಮನಿಗೆ ಸಮರ್ಪಿಸಿದ ಹನುಮಂತ,

ಚೂಡಾಮಣಿಯನ್ನು ಕೈಯಲ್ಲಿ ತೆಗೆದುಕೊಂಡು ದೃಷ್ಟಿಸಿ ನೋಡಿದ ರಾಮ, ವೇದನೆಯಿಂದ "ಲಕ್ಷ್ಮಣಾ! ನೋಡು, ಸೀತೆ ಇಲ್ಲದೆ ಈ ಚೂಡಾಮಣಿಯನ್ನು ನೋಡುತ್ತಿದ್ದೇನೆ. ಈ ಚೂಡಾ ಮಣಿಯನ್ನು ನೋಡುವಾಗ ಮೂವರ ನೆನಪು ಬರುತ್ತದೆ. ಇದನ್ನು ವೈದೇಹಿಯ ವಿವಾಹ ಕಾಲದಲ್ಲಿ ಜನಕ ಸೀತೆಗೆ ಕೊಟ್ಟ. ಆಗ ನಮ್ಮ ತಂದೆಯೂ ಇದ್ದು ಇದನ್ನು ಸ್ವೀಕರಿಸಿದರು. ಈಗ ಈ ಚೂಡಾಮಣಿಯನ್ನು ನೋಡಿದಾಗ ಇದನ್ನು ತಲೆಯಲ್ಲಿ ಧರಿಸಿ ನನ್ನ ಬಳಿಗೆ ಬರುತ್ತಿದ್ದ ಸೀತೆಯು ನೆನಪಾಗುತ್ತದೆ. ಸೀತೆಗೆ ಈ ಮಣಿ ಎಂದರೆ ಬಹಳ ಪ್ರೀತಿ. ಇದನ್ನು ಯಾವಾಗಲೂ ತಲೆಯಲ್ಲಿ ಧರಿಸುತ್ತಿದ್ದಳು. ಹಾಗಿದ್ದ ಈ ಮಣಿಯನ್ನು ಇಂದು ಸೀತೆ ಇಲ್ಲದೆಯೇ ನೋಡಬೇಕಾಗಿದೆಯಲ್ಲ. ಈ ಮಣಿಯನ್ನು ನೋಡುತ್ತಿದ್ದಂತೆ ನನ್ನೆದೆ ಬೆಂದು ಹೋಗುತ್ತಿದೆ ಲಕ್ಷ್ಮಣಾ. ತನ್ನ ಕರುವನ್ನು ನೆನೆನೆನೆದು ಹಸು ಪ್ರಸ್ನುತಸ್ತನಿಯಾಗುವಂತೆ ನಾನೂ ಕಳೆದುಕೊಂಡ ಸೀತೆಯನ್ನು ನೆನೆಯುತ್ತಾ ಆರ್ದ್ರ ಹೃದಯನಾಗಿದ್ದೇನೆ.

**ಯಥೈವ ಧೇನುಃ ಸ್ರವತಿ ಸ್ನೇಹಾದ್ವತ್ಸಸ್ಯ ವತ್ಸಲಾ ।**
**ತಥಾ ಮಮಾಪಿ ಹೃದಯಂ ಮಣಿಶ್ರೇಷ್ಠಸ್ಯ ದರ್ಶನಾತ್ ॥**

ಸುಗ್ರೀವ, ಸೀತೆ ಹೇಳಿದ್ದನ್ನು ಕೇಳಿದೆಯಾ? ಇನ್ನು ಒಂದು ತಿಂಗಳು ಮಾತ್ರವೇ ಅವಳು ಜೀವಿಸಿ ರುತ್ತಾಳಂತೆ. ನನ್ನನ್ನಗಲಿ ಸೀತೆ ಒಂದು ತಿಂಗಳು ಬದುಕಬಲ್ಲಳಂತೆ! ಸೌಮಿತ್ರಿ! ಅಬ್ಬ! ಸೀತೆ ನಿಜವಾಗಿ ಧೈರ್ಯವಂತಳೇ ಸರಿ! ನನ್ನನ್ನು ಅಗಲಿ ಇನ್ನೂ ಒಂದು ತಿಂಗಳು ಬದುಕಿರಬಲ್ಲೆ! ಎಂಬ ಧೈರ್ಯ ಅವಳಿಗಿದೆ. ಆದರೆ. ಆದರೆ, ನನ್ನ ಸ್ಥಿತಿ ಹಾಗಿಲ್ಲ. ನಾನು ಆ ವಿಶಾಲಾಕ್ಷಿಯನ್ನು ಬಿಟ್ಟು ಒಂದರೆಕ್ಷಣವೂ ಇರಲಾರೆ. "ಎಂದು ವಿಲಪಿಸಿದ.

**ಚಿರಂ ಜೀವತಿ ವೈದೇಹೀ ಯದಿಮಾಸಂ ಧರಿಷ್ಯತಿ ।**
**ಕ್ಷಣಂ ವೀರ ನಜೀವೇಯಂ ವಿನಾ ತಾ ಮಸಿತೇಕ್ಷಣಾಂ ॥**

ಮತ್ತೆ ರಾಮ ಹನುಮಂತನ ಕಡೆ ತಿರುಗಿ "ಹನುಮನ್, ಸೀತೆ ಏನು ಹೇಳಿದಳು ಹೇಳು. ಯಾವಾ ಗಲೂ ಅವಳು ಮಧುರವಾಗಿ ಮಾತಾಡತಕ್ಕವಳು. ಗಟ್ಟಿಯಾಗಿ ಮಾತಾಡಿದವಳೇ ಅಲ್ಲ. ಅಂಥ ಮಧುರಭಾಷಿಣಿ ನನ್ನ ಪ್ರಿಯೆಯಾದ ಸೀತೆ, ಅವಳು ಈಗ ತನ್ನ ಮಧುರವಾಣಿಯಲ್ಲಿ ಏನು ಹೇಳಿ ದಳು ಹೇಳು. ಹನುಮಂತ, ಸೀತೆ ಆ ರಾಕ್ಷಸಿಯರ ಮಧ್ಯೆ ಇನ್ನೂ ಹೇಗಿದ್ದಾಳೆ ಹೇಳು. ಹುಲಿ ಗಳ ಮಧ್ಯೆ ಸಿಕ್ಕಿಕೊಂಡ ಹುಲ್ಲೆಯಂತೆ ರಾಕ್ಷಸಿಯರ ಮಧ್ಯೆ ಸಿಕ್ಕಿಕೊಂಡ ಸೀತೆ ಹೇಗಿದ್ದಾಳೆ. ಸೀತೆ ಹೇಳಿದ್ದನ್ನೆಲ್ಲ ಬಿಡದೆ ಹೇಳು. ರೋಗಿಯಾದವನಿಗೆ ಔಷಧ ಪಥ್ಯವಾಗುವಂತೆ ನನಗೆ ಸೀತೆಯ ಮಾತುಗಳು ಪಥ್ಯವಾಗಿವೆ. ಹನುಮಂತ, ಸೀತೆ ಏನು ಹೇಳಿದಳು ಹೇಳು" ಎಂದು ರಾಮ ಹನು ಮಂತನನ್ನು ಮತ್ತೆ ಕೇಳಿದ.

ಹನುಮಂತ ಪುನಃ ಸೀತೆ ಇದ್ದ ದಿಕ್ಕಿಗೆ ತಿರುಗಿ ನಮಸ್ಕರಿಸಿ ಸೀತೆ ಕಳುಹಿಸಿದ ಸಂದೇಶ ವನ್ನು ಹಾಗೆಯೇ ವಿವರಿಸಿದ. ಕಾಕಾಸುರ ವೃತ್ತಾಂತವನ್ನೂ, ಮಣಿಶಿಲೆಯಿಂದ ರಾಮ ಸೀತೆಗೆ ತಿಲಕವಿಟ್ಟ ಪ್ರಕರಣವನ್ನೂ ನೆನಪುಗೊಟ್ಟ. ಸೀತೆ ಹೇಳಿದಾಳೆ, ಒಂದು ತಿಂಗಳು ಮಾತ್ರ ಜೀವಿಸಿರ ಬಲ್ಲೆ. ಅಷ್ಟರಲ್ಲಿ ಬಂದು ರಾವಣನನ್ನು ನಿಗ್ರಹಿಸಿ ನನ್ನನ್ನು ಕರೆದೊಯ್ಯಬೇಕು" ಎಂದು ತಿಳಿಸಿದ.

"ರಾವಣನ ಅಶೋಕವನದಲ್ಲಿ ಸಿಂಹಗಳ ಮಧ್ಯೆ ಸಿಕ್ಕಿಕೊಂಡ ಹೆಣ್ಣಾನೆಯಂತೆ, ಹುಲಿಗಳ ಮಧ್ಯದಲ್ಲಿ ಇರುವ ಜಿಂಕೆಯಂತೆ ಸೀತೆ ದುಃಖಿತಳಾಗಿದಾಳೆ. ಒಂದು ಹೂವನ್ನಾಗಲೀ, ಹಣ್ಣನ್ನಾ

ಗಲೀ, ಕಣ್ಣೆತ್ತಿನೋಡುವುದಿಲ್ಲ. ಯಾವಾಗಲೂ ರಾಮಾ, ನಿನ್ನ ಧ್ಯಾನವೇ ಅವಳಿಗೆ. ಉಪವಾಸ ದಿಂದ ಬಳಲಿದ್ದಾಳೆ, ಕೃಶವಾಗಿದ್ದಾಳೆ. ಒಟ್ಟಿನಲ್ಲಿ ಶೋಕವೇ ಮೂರ್ತಿವೆತ್ತಂತೆ, ದೀನತೆಯೇ ರೂಪ ತಳೆದಂತೆ ಇದ್ದಾಳೆ. ಮಹಾವಿಷ್ಣುವಿನ ವಕ್ಷಸ್ಥಲದಲ್ಲಿರುವ ಲಕ್ಷ್ಮಿಯಂತೆ, ಚತುರ್ಮುಖನ ವದನದಲ್ಲಿರುವ ಸರಸ್ವತಿಯಂತೆ, ಶಿವನ ವಾಮಭಾಗದಲ್ಲಿ ಶೋಭಿಸುವ ಶಿವೆಯಂತೆ, ಚಂದ್ರನ ಮಡದಿಯಾದ ರೋಹಿಣಿಯಂತೆ, ವಶಿಷ್ಠರ ಧರ್ಮಪತ್ನಿಯಾದ ಅರುಂಧತಿಯಂತೆ ಸೀತೆ ಶೋಭಿಸುತ್ತಿದ್ದಾಳೆ. ತಪಸ್ಸೇ ಮೂರ್ತಿವೆತ್ತಂತೆ ಯಾವಾಗಲೂ ಧ್ಯಾನಪರಳಾಗಿಯೇ ಇದ್ದಾಳೆ. ಯಾವಾಗಲೂ ಶೋಕಿಸುತ್ತಲೇ ಇದ್ದಾಳೆ.

ರಾಮ, ನಿನ್ನನ್ನು ಒಂದು ತಿಂಗಳ ಅವಧಿಯಲ್ಲಿ ಬರುವಂತೆ ಪ್ರಾರ್ಥಿಸಿದ್ದಾಳೆ. ಸುಮಿತ್ರಾ ಕುಮಾರನಾದ ಲಕ್ಷ್ಮಣನನ್ನೂ ಬಹಳವಾಗಿ ಕೇಳಿದ್ದಾಳೆ. ನಾನು ಸೀತೆಯನ್ನು ಸಮಾಧಾನ ಮಾಡು ತ್ತಾ ಹೇಳಿದೆ. "ರಾಮನು ಲಕ್ಷ್ಮಣನೊಡನೆ ಬಂದು ರಾವಣನನ್ನು ಬಂಧು–ಬಾಂಧವರೊಡನೆ ನಿಗ್ರಹಿಸಿ ನಿನ್ನನ್ನು ಅಯೋಧ್ಯೆಗೆ ಕರೆದೊಯ್ದು ಪಟ್ಟಾಭಿಷೇಕ ಮಾಡಿಕೊಳ್ಳುತ್ತಾನೆ" ಎಂದೆ.

"ಇದನ್ನೆಲ್ಲ ಸೀತೆ ಕೇಳಿದರೂ ನಿನ್ನ ಚಿಂತೆಯೇ ಅವಳನ್ನು ಆವರಿಸಿದೆ. ನನ್ನ ಆಶ್ವಾಸನೆ ಯಿಂದ ಸ್ವಲ್ಪ ಮಟ್ಟಿಗೆ ಸಮಾಧಾನ ಹೊಂದಿದರೂ ನಿನ್ನನ್ನೇ ಸತತವಾಗಿ ಚಿಂತಿಸುತ್ತಾ ನಿನ್ನ ಧ್ಯಾನದಲ್ಲೇ ಇದ್ದಾಳೆ" ಎಂದು ಸೀತೆಯ ಮನಸ್ಸನ್ನು ರಾಮನಿಗೆ ಮನದಟ್ಟಾಗುವಂತೆ ವಿವರಿಸಿದ, ಹನುಮಂತ.

ಈ ಸಂದರ್ಭದಲ್ಲಿ ಹನುಮಂತ ಆಚಾರ್ಯನ ಲಕ್ಷಣವನ್ನು ಚೆನ್ನಾಗಿ ನಿರ್ವಹಿಸಿದ್ದಾನೆ. ಜೀವಾತ್ಮನಾದ ಸೀತೆಗೆ ಪರಮಾತ್ಮನಾದ ರಾಮನ ಸಂದೇಶವನ್ನು ತಿಳಿಸಿ, ರಾಮನ ದಿವ್ಯ ಮಂತ್ರ ವನ್ನು ಉಪದೇಶಿಸಿ ಜೀವವನ್ನು ಉದ್ಧರಿಸಿ ಮರಳಿ ಪರಮಾತ್ಮನ ಬಳಿಗೆ ಆಚಾರ್ಯನಾದವನು "ಜೀವ, ನಿನ್ನನ್ನೇ ನಂಬಿದೆ. ಅದನ್ನು ಕೈಬಿಡದೆ ಕಾಪಾಡಬೇಕು. ದಯೆ ತೋರಬೇಕು" ಎಂದು ಜೀವನ ಪರವಾಗಿ ಪರಮಾತ್ಮನನ್ನು ಪ್ರಾರ್ಥಿಸುತ್ತಾನೆ. ಸೀತೆ ಹೇಳಿದ್ದಳು "ಹನುಮಂತ, ನನ್ನ ಮುಂದಿನ ಆಗುಹೋಗುಗಳು ನಿನ್ನ ಮಾತುಗಳನ್ನೇ ಅವಲಂಬಿಸಿವೆ" ಎಂದು. ಹನುಮಂತನು ಸೀತೆ ಯಾವ ನೆಲೆಯಲ್ಲಿದ್ದಾಳೆ; ರಾಮನನ್ನೇ ಹೇಗೆ ಅನವರತ ಚಿಂತಿಸುತ್ತಿದ್ದಾಳೆ ಎಂದು ರಾಮನಿಗೆ ಚೆನ್ನಾಗಿ ವಿವರಿಸಿದ.

ಜೀವಾತ್ಮ–ಪರಮಾತ್ಮರನ್ನು ಒಟ್ಟುಗೂಡಿಸುವುದು ಆಚಾರ್ಯನ ಕೆಲಸ. ಹನುಮಂತ ಅದನ್ನು ಈ ಕಾಂಡದಲ್ಲಿ ಸಾಧಿಸಿದ. ಆದ್ದರಿಂದಲೇ ಈ ಕಾಂಡ "ಸುಂದರಕಾಂಡ" ಎಂದು ಕರೆ ಯಲ್ಪಟ್ಟಿದೆ.

ಜೀವಾತ್ಮ ಪರಮಾತ್ಮರ ಸಮ್ಮಿಲನವೇ ಕಲ್ಯಾಣ, ಅದೇ ಮೋಕ್ಷ. ಅದನ್ನು ಸಾಧಿಸುವವನೇ ಸದಾಚಾರ್ಯ. ಹತ್ತು ತಿಂಗಳುಗಳಿಂದ ಅಗಲಿದ್ದ ಸೀತಾರಾಮರನ್ನು ಪುನಃ ಒಟ್ಟುಗೂಡಿಸಿದ ವನು ಮಹಾನುಭಾವನಾದ ಆಂಜನೇಯ. ಅಲ್ಲದೆ, ಸದಾಚಾರ್ಯನಾದವನು ಜೀವಾತ್ಮನ ಹಿತ ಚಿಂತನೆಯಲ್ಲೇ ಗಮನ ಇಟ್ಟಿರುತ್ತಾನೆ. ಅವನಿಗೆ ಅಹಂಕಾರ, ಗರ್ವ, ಡಾಂಭಿಕತನ, ಹೊಗಳಿಕೆ ಯಲ್ಲಿ ಪ್ರೀತಿ, ಈ ಯಾವ ದುರ್ಗುಣವೂ ಇಲ್ಲ. ಹನುಮಂತ ರಾಮನ ಹತ್ತಿರ ವಿಜ್ಞಾಪಿಸಿಕೊಳ್ಳು ವಾಗ ಸೀತೆಯ ಬಗ್ಗೆ ಎಲ್ಲವನ್ನೂ ಹೇಳುತ್ತಾನೆ. ಸೀತೆ ಹೇಳಿದ ಎಲ್ಲ ವಿಷಯಗಳನ್ನೂ ರಾಮನಿಗೆ ತಿಳಿಸುತ್ತಾನೆ. ರಾಮನನ್ನು ಒಡನೆಯೇ ಸೀತೆಯನ್ನು ಬಂಧನದಿಂದ ಬಿಡಿಸಲು ತೊಡಗುವಂತೆ ಪ್ರೇರೇಪಿಸುತ್ತಾನೆ. ಇಷ್ಟೆಲ್ಲ ಆದರೂ, ತನ್ನ ಬಗ್ಗೆ ತಾನು ಏನೂ ಹೇಳಿ ಕೊಳ್ಳುವುದಿಲ್ಲ.

ಸಮುದ್ರ ಹಾರುವಾಗ ಒದಗಿದ ವಿಘ್ನಗಳ ಬಗ್ಗೆಯಾಗಲೀ, ತಾನು ರಾಕ್ಷಸರನ್ನು ಕೊಂದುದರ ಬಗ್ಗೆಯಾಗಲೀ, ಯಾವುದೇ ವಿಧದಲ್ಲೂ ತನ್ನ ಹೆಗ್ಗಳಿಕೆಯನ್ನಾಗಲೀ ಹೇಳಿಕೊಳ್ಳಲಿಲ್ಲ. "ಸರ್ವಾಚಾರ್ಯನ ನಿಜವಾದ ದಾಸನ ಲಕ್ಷಣಗಳಿವು" ಎಂಬುದನ್ನು ತನ್ನ ನಡೆಯಿಂದ ತೋರಿಸಿಕೊಟ್ಟ ಹನುಮಂತ. ತನಗೆ ಒಪ್ಪಿಸಿದ ಕಾರ್ಯವನ್ನು ಯಶಸ್ವಿಯಾಗಿ ಇಷ್ಟು ಸುಂದರವಾದ ರೀತಿಯಲ್ಲಿ ನಿರ್ವಹಿಸಿದುದರಿಂದಲೇ ಈ ಕಾಂಡ "ಸುಂದರಕಾಂಡ" ಎಂದು ಕರೆಯಲ್ಪಟ್ಟಿತು. ರಾಮನ ಮಹತ್ವದ ಜೊತೆಗೆ ಸೀತೆಯ ಪಾತಿವ್ರತ್ಯ ಪ್ರಭಾವವೂ ಬೆಳಕಿಗೆ ಬಂದಿತು ಇಲ್ಲಿ.

ಹನುಮಂತ ಮತ್ತೆ ಮತ್ತೆ ರಾಮನಲ್ಲಿ ಸೀತೆಯ ಬಗ್ಗೆ ಹೇಳಿದ. ಭೂಮಿಯಲ್ಲಿ, ಏಕವೇಣಿಯಾಗಿ, ಕೊಳೆಯಾದ ವಸ್ತ್ರವನ್ನು ಧರಿಸಿದವಳಾಗಿ, ಉಪವಾಸದಿಂದ ಕೃಶಳಾಗಿ, ಸದಾ ರಾಮಾ, ನಿನ್ನ ಧ್ಯಾನದಲ್ಲೇ ಇದ್ದಾಳೆ ಸೀತೆ" ಎಂದು ಹೇಳಿದ.

"ನನ್ನ ಆಶ್ವಾಸನೆಯಿಂದ ಸ್ವಲ್ಪ ಮಟ್ಟಿಗೆ ಸಮಾಧಾನ ಹೊಂದಿದರೂ ನಿನ್ನ ಧ್ಯಾನದಿಂದ ಶೋಕಪೀಡಿತಳಾಗಿಯೇ ಇದ್ದಾಳೆ" ಎಂದ.



# ಯುದ್ಧಕಾಂಡ

ಹನುಮಂತ ರಾಮನ ಸನ್ನಿಧಾನದಲ್ಲಿ ಸೀತೆಯ ಪ್ರಭಾವವನ್ನು ವಿವರಿಸಿದ. ಕಂಬರು ಹೇಳುತ್ತಾರೆ. "ರಾಮಾ, ಸೀತೆ ಸಾಮಾನ್ಯಳಲ್ಲ. ಸಾಕ್ಷಾತ್ ದೇವೀಸ್ವರೂಪಿಣಿ ಅವಳು. ನನ್ನ ಕುಲವನ್ನು ಉಳಿಸಿದವಳು ಅವಳು. ಬಾಲಕ್ಕೆ ಬೆಂಕಿ ಹಚ್ಚಿದಾಗ, ತನ್ನ ಪಾತಿವ್ರತ್ಯಾಗ್ನಿಯಿಂದ ನನ್ನ ಬಾಲದ ಬೆಂಕಿಯನ್ನು ಶಾಂತಗೊಳಿಸಿದವಳು. ಪಾತಿವ್ರತ್ಯ ಮಹಿಮೆಯಿಂದ ನಿನ್ನ ಕುಲವಾದ ರಘುವಂಶವನ್ನೂ, ತಂದೆಯಾದ ಜನಕನ ಕುಲವನ್ನೂ ಉದ್ಧರಿಸಿದವಳು. ಸೀತೆಯೊಬ್ಬಳಿಂದ ವಾನರಕುಲ, ಜನಕನಕುಲ, ರಘುಕುಲ ಈ ಮೂರೂ ಕೀರ್ತಿಯನ್ನು ಪಡೆಯುವಂತಾಯಿತು. ಅಂಥಾ ದೇವಿಯನ್ನು ಶೀಘ್ರವಾಗಿ ಪಡೆಯಲು ಯತ್ನಿಸು" ಎಂದನಂತೆ ಹನುಮಂತ. ವಾಸ್ತವದಲ್ಲಿ ಇಂದಿಗೂ ಕಪಿಗಳ ಕುಲಕ್ಕೆ ಹನುಮಂತರಾಯನಕುಲ ಎಂದೇ ಹೆಸರಾಗಿದೆ. ಸೀತೆ ಅಗ್ನಿಯನ್ನು ಪ್ರಾರ್ಥಿಸಿ, ಹನುಮಂತನನ್ನು ಅಗ್ನಿಯಿಂದ ಸಂರಕ್ಷಿಸಿದುದರಿಂದಲೇ ಹನುಮಂತರಾಯನಕುಲ ಉಳಿಯಲು ಕಾರಣವಾಯಿತು. ಇದನ್ನೇ ಕಂಬರು ''ಎನ್‌ಕುಲಂ ಎನಕ್ಕು ತಂದಾಳ್" ಎಂದಿದಾರೆ.

ಹಮುವಂತ ಹೇಳಿದ ಮಾತುಗಳನ್ನೆಲ್ಲ ಕೇಳಿದ ರಾಮ. ಬಹಳ ಸಂತೋಷ ಪಟ್ಟ. ಅತ್ಯಂತ ಪ್ರೀತಿಯಿಂದ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿಕೊಂಡು ಬಂದ ಹನುಮಂತನನ್ನು ಪ್ರಶಂಸಿಸಿದ.

ಹನುಮಂತ ಮಾಡಿರುವ ಕಾರ್ಯ ಸಾಮಾನ್ಯವಾದುದಲ್ಲ. ನೂರುಯೋಜನ ವಿಸ್ತಾರವಾದ ಸಾಗರವೆಲ್ಲಿ? ಅದನ್ನು ದಾಟುವುದೆಲ್ಲಿ? ಇಂಥ ಮಹತ್ಕಾರ್ಯವನ್ನು ಸಾಧಿಸಿದ ಹನುಮಂತ ಅದ್ವಿತೀಯ ಪರಾಕ್ರಮಿಯೇ ಸರಿ! ಲೋಕದಲ್ಲಿ ವಾಯು, ಗರುಡ, ಇಬ್ಬರನ್ನು ಬಿಟ್ಟರೆ ಸಮುದ್ರವನ್ನು ಇಷ್ಟು ವೇಗವಾಗಿ ಹಾರಲು ಹನುಮಂತನಲ್ಲದೆ ಮತ್ತಾರಿಗೆ ಸಾಧ್ಯವಾದೀತು? ಹನುಮಂತ ಸಾಧಿಸಿರುವ ಕಾರ್ಯ ಉತ್ತಮದೂತ ಸಾಧಿಸುವಂಥ ಕಾರ್ಯವೇ ಸರಿ. ಲೋಕದಲ್ಲಿ ದೂತರಲ್ಲಿ ಮೂರು ಬಗೆ ಉಂಟು. ಸ್ವಾಮಿ ಹೇಳಿದ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿ ಒಡೆಯನ ಲಾಭವನ್ನು ಅನುಲಕ್ಷಿಸಿ ಯಜಮಾನ ಹೇಳಿದ್ದಕ್ಕಿಂತ ಹೆಚ್ಚಾಗಿ ಕಾರ್ಯ ಸಾಧಿಸಿಕೊಂಡು ಬರುವಂತ ದೂತ ಉತ್ತಮದೂತ ಎನಿಸಿಕೊಳ್ಳುತ್ತಾನೆ,

ಸ್ವಾಮಿ ಹೇಳಿದಷ್ಟನ್ನು ಮಾತ್ರ ಮಾಡಿಕೊಂಡು ಬರುವಂಥವ ಮಧ್ಯಮ ದೂತ ಎನಿಸಿಕೊಳ್ಳುತ್ತಾನೆ.

ಸ್ವಾಮಿ ಹೇಳಿದ ಕಾರ್ಯವನ್ನೂ ಸರಿಯಾಗಿ ಸಾಧಿಸದೆಯೇ ಹಿಂದಿರುಗುವವ ಅಧಮದೂತನೆನಿಸುತ್ತಾನೆ.

ಹನುಮಂತ ಉತ್ತಮೋತ್ತಮ ದೂತನಾಗಿದಾನೆ. ಸ್ವಾಮಿಯ ಹಾಗೂ ತನ್ನ ಪ್ರತಿಷ್ಠೆಗೆ ಸ್ವಲ್ಪವೂ ಕುಂದಾಗದಂತೆ ಕಾರ್ಯವನ್ನೂ ಸಾಧಿಸಿ, ಅದಕ್ಕಿಂತ ಹೆಚ್ಚಾಗಿ ಗೌರವವನ್ನು ಹೆಚ್ಚಿಸಿಕೊಂಡು ಹಿಂದಿರುಗಿದ್ದಾರೆ. ಇಂಥ ಉತ್ತಮದೂತ ಹನುಮಂತನಿಂದ ಸುಗ್ರೀವನ ಕುಲ, ರಘುಕುಲ ಎರಡೂ ಶಾಶ್ವತವಾಗಿ ಬೆಳಗುವಂತಾಯಿತು. "ಕುಲದೀಪಕ ಎಂದರೆ ಹನುಮಂತ, ನೀನೇ"

ಎಂದು ಬಾಯ್ತುಂಬ ಹೊಗಳಿದ ರಾಮ ಹನುಮಂತನನ್ನು, ಪುನಃ ನೋಡಿ "ಹನುಮರ್, ಇಂಥ ಮಹತ್ಕಾರ್ಯವನ್ನು ಸಾಧಿಸಿ ಮಹದುಪಕಾರ ಮಾಡಿದೆ ನನಗೆ. ಇದಕ್ಕೆ ಪ್ರತಿಯಾಗಿ ನಾನು ಏನು ಮಾಡಲಿ ? ನಾನು ನಿನಗೆ ಏನೂ ಮಾಡಲಾಗದ ಸ್ಥಿತಿಯಲ್ಲಿರುವೆನಲ್ಲಾ ಎಂಬುದೇ ನನಗೆ ಚಿಂತೆಯಾಗಿದೆ. ಹನುಮಂತ, ನೀನು ಸಮುದ್ರವನ್ನು ಹಾರಿ, ಸೀತೆಯನ್ನು ಕಂಡು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿರುವೆ. ಇದಕ್ಕೆ ಪ್ರತಿಫಲವಾಗಿ ನಿನಗೆ ನಾ ಏನೂ ಮಾಡುವಂತಿಲ್ಲ. ಆದರೆ, ಇದಕ್ಕೆ ಪ್ರತಿಯಾಗಿ ನನ್ನ ಈ ದೇಹವನ್ನೇ ನಿನಗೆ ಕೊಡುತ್ತೇನೆ. ಬಾ, ಹನುಮಂತ, ಹತ್ತಿರ ಬಾ" ಎನ್ನುತ್ತಾ ರಾಮ ತನ್ನ ಅತ್ಯದ್ಭುತವಾದ ಶರೀರದಿಂದ "ಏಷ ಸರ್ವಸ್ವ ಭೂತೋ ಮೇ ಪರಿಷ್ವಂಗೋ ಹನೂಮತಃ" ಎಂದು ಹನುಮಂತನನ್ನು ಬಾಚಿ ತಬ್ಬಿಕೊಂಡ. ಹೀಗೆ ಕೃತಕೃತ್ಯನಾಗಿ ಹಿಂದಿರುಗಿದ ಹನುಮಂತನನ್ನು ಮಹಾತ್ಮನಾದ ರಾಮ ಗಾಢವಾಗಿ ಆಲಿಂಗಿಸಿದ.

ಈ ಪ್ರಕರಣವನ್ನು ಆಳ್ವಾರ್‌ಗಳು, ಆಚಾರ್ಯರು ಬಹಳವಾಗಿ ಅನುಭವಿಸಿದಾರೆ. ರಾಮ ಸಾಮಾನ್ಯನಲ್ಲ, ಸಾಕ್ಷಾತ್ ಭಗವಂತನ ಅವತಾರವೇ. ಹೀಗಿರುವಾಗ ತನ್ನ ಅಪ್ರಾಕೃತದೇಹದಿಂದ ಹನುಮಂತನನ್ನು ಆಲಂಗಿಸಿದ ಎಂದ ಮೇಲೆ ಹನುಮಂತನಿಗೆ ಅದರಿಂದ ಆದ ಆನಂದ ವರ್ಣಿಸಲು ಅಶಕ್ಯ ! ರಾಮ–ಕೃಷ್ಣರ ಅವತಾರಗಳಲ್ಲಿ ಭಗವಂತನ ಸೌಂದರ್ಯ ಬಹಳ ವಿಶೇಷವಾಗಿ ಕೊಂಡಾಡಲ್ಪಟ್ಟಿದೆ.

ರಾಮನ ಸೌಂದರ್ಯವನ್ನು ವಾಲ್ಮೀಕಿ ಹಲವಾರುಬಾರಿ ವರ್ಣಿಸಿದಾರೆ. "ಪುಂಸಾಂ ದೃಷ್ಟಿ ಚಿತ್ತಾಪಹಾರಿಣಿ" ಎಂಬ ರೀತಿಯಲ್ಲಿ ರಾಮನ ಸೌಂದರ್ಯಕ್ಕೆ ಆಕರ್ಷಿತರಾಗದವರೇ ಇಲ್ಲ. ಅರಣ್ಯದಲ್ಲಿ ರಾಮ ಬರುತ್ತಿದ್ದಾಗ ಋಷಿಗಳು, ತಪಸ್ವಿಗಳು, ಮೃಗಗಳು, ಪಕ್ಷಿಗಳು, ಆದಿಯಾಗಿ ಎಲ್ಲ ಜೀವ ಜಂತುಗಳು ರಾಮನ ಸೌಂದರ್ಯವನ್ನೇ ಪಾನಮಾಡುತ್ತಿದ್ದವು. ಋಷಿಗಳೆಲ್ಲ ರಾಮನ ಸೌಂದರ್ಯಕ್ಕೆ ಮನಸೋತವರಾಗಿ ರಾಮನನ್ನು ಆಲಿಂಗಿಸಬೇಕು ಎಂದು ಆಸೆಪಟ್ಟರು. ಹೀಗೆ ಪುರುಷರೇ ಪುರುಷೋತ್ತಮನಾದ ರಾಮನ ರೂಪವನ್ನು ಕಂಡು ಮೋಹಿಸಿದರು ಎಂದಮೇಲೆ ರಾಮನ ಸೌಂದರ್ಯ ಎಂಥದಿರಬೇಕು.

ಪುರಾಣಗಳಲ್ಲಿ ಹೇಳಲ್ಪಡುವಂತೆ, ಅರಣ್ಯದಲ್ಲಿ ರಾಮನ ಸೌಂದರ್ಯವನ್ನು ಆಸ್ವಾದಿಸಬೇಕು ಎಂದು ಆಸೆಪಟ್ಟ ಋಷಿಗಳೇ ಮುಂದೆ ದ್ವಾಪರಯುಗದಲ್ಲಿ ಕೃಷ್ಣಾವತಾರಕಾಲದಲ್ಲಿ ಗೋಪಿಯರಾಗಿ, ಹಸುಗಳಾಗಿ, ಕರುಗಳಾಗಿ, ಜನ್ಮವೆತ್ತಿದರು. ಆಗ, ಮನಮೋಹಕನಾದ ಕೃಷ್ಣನ ಸ್ಪರ್ಶಸುಖವನ್ನು ಅನುಭವಿಸಿದರು. ಆದ್ದರಿಂದಲೇ, ಕೃಷ್ಣಾವತಾರ ಕಾಲದಲ್ಲಿ ಶ್ರೀಕೃಷ್ಣ ಗೋಪಿಯರಿಗೆ ರಾಸಕ್ರೀಡೆಯ ಆನಂದವನ್ನು ಕರುಣಿಸಿದ.

ಎಲ್ಲರೂ ಬಯಸುವಂಥ ಮನಮೋಹಕ ಶರೀರ ರಾಮನದು. ರಾಕ್ಷಸಿಯಾದ ಶೂರ್ಪಣಖಿಯೇ ರಾಮನನ್ನು ಬಯಸಿದಳು ಎಂದಮೇಲೆ ಉಳಿದವರ ಪಾಡೇನು !

ರಾಮನು ಸೀತಾ ಮಾತ್ರ ಸುಲಭವಾದ ಶರೀರದಿಂದ ಈಗ ಹನುಮಂತನನ್ನು ಅಪ್ಪಿಕೊಂಡ. "ಈ ಭಾಗ್ಯವನ್ನು ಪಡೆದ ಹನುಮಂತ ಅದೆಂಥ ಧನ್ಯನೋ !" ಎಂದಿದಾರೆ ಆಚಾರ್ಯರು.

ಹನುಮಂತನೂ ರಾಮನ ಅಪ್ಪುಗೆಯನ್ನು ಅನುಭವಿಸಿದ. ಪರಮಾನಂದ ಭರಿತನಾದ. ಹನುಮಂತನ ಪಾಲಿಗೆ ಎಂದೆಂದಿಗೂ ಮರೆಯಲಾಗದಂಥ ಚಿರಸ್ಮರಣೀಯ ನೆನಪಾಗಿ ಉಳಿಯಿತು, ಆ ಆಲಿಂಗನ. ಆದಕ್ಕೇ ಉತ್ತರಕಾಂಡದಲ್ಲಿ ರಾಮ ವೈಕುಂಠಕ್ಕೆ ಹೋಗುವ ಮೊದಲು ಹನುಮಂತನನ್ನು ಕುರಿತು "ಹನುಮರ್, ಮೋಕ್ಷಕ್ಕೆ ಬರುತ್ತೀಯಾ ?" ಎಂದು ಕೇಳಿದ.

"ಇಲ್ಲ, ಪ್ರಭು, ನಾ ಮೋಕ್ಷಕ್ಕೆ ಬರುವುದಿಲ್ಲ" ಎಂದ ಹನುಮಂತ.

"ಇದೇನು ? ಸ್ವಾರಸ್ಯವಾಗಿದೆಯಲ್ಲ ! ಎಲ್ಲರೂ ಮೋಕ್ಷವನ್ನೇ ಗುರಿಯಾಗಿಟ್ಟು ತಪಸ್ಸು, ಸಾಧನೆ ಮಾಡುತ್ತಾರೆ. ನಿನಗೆ ನಾನಾಗಿಯೇ ಮೋಕ್ಷ ಕೊಡುತ್ತಿದ್ದೇನೆ ಬಾ'' ಎಂದರೂ ಬರುವುದಿಲ್ಲ ಎನ್ನುವಿ; ಏಕೆ ?

''ಹಾಗಲ್ಲ ಪ್ರಭು. ಮೋಕ್ಷಕ್ಕೆ ಇದೇ ದೇಹದಿಂದ ಬರುವಂತಿಲ್ಲ. ಆದ್ದರಿಂದ ಬೇಡ ಎಂದೆ. ಈ ದೇಹ ನಿಮ್ಮ ಅಪೂರ್ವವಾದ ಆಲಿಂಗನದಿಂದ ಪವಿತ್ರವಾಗಿದೆ. ಆದ್ದರಿಂದ, ಈ ದೇಹ ನನಗೆ ಪ್ರಿಯವಾಗಿದೆ. ಮೋಕ್ಷಕ್ಕೆ ಬಂದರೆ ಈ ದೇಹ ಹೋಗಿಬಿಡುತ್ತದೆ. ನಿಮ್ಮ ಶರೀರದ ಸ್ಪರ್ಶವನ್ನು ಪಡೆದ ಈ ದೇಹವನ್ನು ಕಳೆದುಕೊಳ್ಳುವ ಇಚ್ಛೆ ನನಗಿಲ್ಲ. ಆದ್ದರಿಂದ, ನನಗೆ ಮೋಕ್ಷವೇ ಬೇಡ ಎಂದೆ" ಎಂದ ಹನುಮಂತ !

''ಮೋಕ್ಷದಲ್ಲಿ ನಾಲ್ಕು ಬಗೆ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಎಂದು.

''ಸಾಲೋಕ್ಯ'' ಭಗವಂತನ ಲೋಕದಲ್ಲೇ ವಾಸ, ''ಸಾಮೀಪ್ಯ'' ಭಗವತ್ ಸಾಮೀಪ್ಯ ಇರುವುದು. ''ಸಾರೂಪ್ಯ'' ಎಂದರೆ ಭಗವಂತನಂತೆಯೇ ರೂಪವನ್ನು ತಳೆಯುವುದು. ''ಸಾಯುಜ್ಯ'' ಭಗವಂತನ ಶರೀರದಲ್ಲಿ ಐಕ್ಯನಾಗಿ ಪರಮಾನಂದವನ್ನು ಅನುಭವಿಸುವುದು.

ಶರೀರಧಾರಿಯಾಗಿರುವಾಗಲೇ ಹನುಮಂತನು ಸಾಯುಜ್ಯವನ್ನು ಪಡೆದ, ರಾಮನ ಆಲಿಂಗನದಿಂದ ಹನುಮಂತ ರಾಮನಲ್ಲಿ–ರಾಮ ಹನುಮಂತನಲ್ಲಿ ಐಕ್ಯವಾದರು, ಅದರಿಂದರೇ ಸಾಮಾನ್ಯವಾಗಿ ಲೋಕದಲ್ಲಿ "ಹನುಮನ ಮತವೇ ಹರಿಯ ಮತ, ಹರಿಯ ಮತವೇ ಹನುಮನ ಮತ', ಎಂಬ ಉಕ್ತಿ ಪ್ರಚಲಿತದಲ್ಲಿದೆ.

ರಾಮ ಹನುಮಂತನನ್ನು ಸಂತೋಷದಿಂದ ಆಲಿಂಗಿಸಿದ. ಆ ನಂತರ ರಾವಣನ ಬಲವನ್ನು ನೆನೆದು ಶತಯೋಜನವಿಸ್ತಾರವಾದ ಸಮುದ್ರವನ್ನು ದಾಟುವುದು ಹೇಗೆ ? ಎಂದು ಚಿಂತಿಸತೊಡಗಿದ. "ಸುಗ್ರೀವ, ನೂರುಯೋಜನ ವಿಸ್ತಾರ ಉಳ್ಳ ಸಮುದ್ರವನ್ನು ಹೇಗೆತಾನೇ ದಾಟಲು ಸಾಧ್ಯ" ಎಂದು ಶೋಕಿಸತೊಡಗಿದ. ಆಗ ಸುಗ್ರೀವ ರಾಮನನ್ನು ಸಂತೈಸುತ್ತಾ ರಾಘವ, ಇದೇನು, ಸೂರ್ಯವಂಶದಲ್ಲಿ ಜನಿಸಿ, ಅಪ್ರತಿಮ ವೀರನೆನಿಸಿದ ನೀನು ಈ ರೀತಿ ಶೋಕಿಸುವುದೆ ? ಪ್ರಾಕೃತರಾದ ಅಲ್ಪರು ದುಃಖಿಸುವಂತೆ ದುಃಖಿಸುತ್ತಿರುವೆಯಲ್ಲಾ ! ನಿನ್ನ ಒಂದು ಬಾಣದ ಇದಿರು ಸಮಸ್ತ ರಾಕ್ಷಸರೂ ನಿಲ್ಲಲಾರರು. ಈಗ ಶೋಕಿಸುವುದರಲ್ಲಿ ಅರ್ಥವಿಲ್ಲ. ಶೋಕವು ಧೈರ್ಯವನ್ನು ಹಾಳುಮಾಡುತ್ತದೆ. ಶೋಕದಿಂದ ಕಾರ್ಯಹಾನಿಯೇ ಪ್ರಾಪ್ತ. ಆದ್ದರಿಂದ, ವ್ಯರ್ಥವಾದ ಈ ಶೋಕವನ್ನು ಬಿಡು. ಧೈರ್ಯವನ್ನು ಹೊಂದು. ನಾವೆಲ್ಲ ಇದೇವೆ. ಜಾಂಬವಂತ, ನಳ, ನೀಲ, ಅಂಗದ, ಮೈಂದ, ದ್ವಿವಿಧ, ಸುಷೇಣ, ಹನುಮಂತ ಈ ಕಪಿವೀರರೆಲ್ಲ ಇದಾರೆ. ಎಲ್ಲರೂ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಯೇ ದಾಟೋಣ. ಸುಮ್ಮನೆ ಕಾಲಹರಣ ಮಾಡುವುದು ಸರಿಯಲ್ಲ. ಕ್ಷಿಪ್ರವಾಗಿ ಹೊರಟುಬಿಡೋಣ ಎಂದ.

ಸುಗ್ರೀವನ ಮಾತುಗಳನ್ನು ಕೇಳಿ ರಾಮ ತಲೆದೂಗಿದ. "ಸುಗ್ರೀವ, ನೀ ಹೇಳುವುದು ಸರಿ. ನಾವು ಶೀಘ್ರವಾಗಿ ಹೋಗಬೇಕು" ಎಂದು ಹನುಮಂತನ ಕಡೆ ತಿರುಗಿ ''ಹನುಮಂತ,

ಲಂಕೆಗೆ ಹೋದೆಯಲ್ಲ, ರಾವಣನ ಬಲ ಎಷ್ಟು, ಅವನ ಸೈನ್ಯ ಎಷ್ಟಿದೆ ? ದುರ್ಗಗಳು ಹೇಗಿವೆ ? ಎಲ್ಲಾ ನೋಡಿ ಬಂದೆಯಾ ?" ಎಂದ.

ರಾಮನ ಮಾತುಗಳನ್ನು ಹನುಮಂತ ಕೇಳಿದ. ಮಾತಾಡುವುದರಲ್ಲಿ ಗಟ್ಟಿಗನಾದ, ಮರ್ಮವನ್ನರಿಯುವುದರಲ್ಲಿ ನಿಷ್ಣಾತನಾದ ಹನುಮಂತ ರಾಮನ ಪ್ರಶ್ನೆಗೆ ಉತ್ತರಕೊಡುತ್ತಾ "ರಾಘವ ! ನಾನು ಲಂಕೆಯ ದುರ್ಗಗಳನ್ನೂ, ದ್ವಾರಗಳನ್ನೂ, ಶಸ್ತ್ರಾಗಾರಗಳನ್ನೂ ಯಾವ ಕ್ರಮದಲ್ಲಿ ನೋಡಿದೆನೋ ಅದೇ ಕ್ರಮದಲ್ಲೇ ಹೇಳುತ್ತೇನೆ ಕೇಳು.

"ಲಂಕಾಪುರಿಯ ಜನ ಯಾವಾಗಲೂ ಮುದದಿಂದ ಕೂಡಿರುತ್ತಾರೆ. ಆಮೋದ ಪ್ರಮೋದಗಳಲ್ಲೇ ತಮ್ಮ ಕಾಲವನ್ನು ಕಳೆಯುತ್ತಾರೆ. ಆದರೆ, ಜನರು ಮಧುಪಾನ ಮಾಡಿದರೂ, ಸುಖ ಸಂತೋಷಗಳಲ್ಲಿ ನಿರತರಾಗಿದ್ದರೂ, ದುರ್ಗದ ರಕ್ಷಣೆಯ ಕಾರ್ಯವನ್ನು ರಾವಣ ಬಹಳ ಚೆನ್ನಾಗಿ ಮಾಡಿದ್ದಾನೆ.

"ಶತಯೋಜನ ವಿಸ್ತಾರವುಳ್ಳ ಸಾಗರದ ಮಧ್ಯದಲ್ಲಿ ತ್ರಿಕೂಟ ಪರ್ವತದ ಶಿಖರಾಗ್ರದಲ್ಲಿ ಲಂಕಾಪಟ್ಟಣ ಇದೆ. ಇದನ್ನು ಸ್ವಯಂ ವಿಶ್ವಕರ್ಮನೇ ಯೋಗಶಕ್ತಿಯಿಂದ ನಿರ್ಮಿಸಿದ್ದಾನೆ. ಲಂಕಾಪುರಿ ನಾಲ್ಕು ಮಹಾದ್ವಾರಗಳನ್ನುಳ್ಳದು. ಸುತ್ತಲೂ ಎತ್ತರವಾದ ಕೋಟೆಯ ಗೋಡೆ ಇದೆ. ಆ ಗೋಡೆಯ ಮೇಲೆ "ಶತಘ್ನ" "ಪರಿಘ" ಮುಂತಾದ ಯಂತ್ರಗಳನ್ನಿಟ್ಟಿದಾರೆ. ಸತತವಾಗಿ ಬಾಣದ ಮಳೆ ಆ ಯಂತ್ರಗಳಿಂದ ಸುರಿಯುತ್ತಿದೆ. ಆದುದರಿಂದ ಶತ್ರು ಒಳಗೆ ಹೋಗಲು ಸಾಧ್ಯವೇ ಇಲ್ಲ. ಬಾಗಿಲುಗಳಲ್ಲಿ, ಕೋಟೆಯಗೋಡೆಯ ಮೇಲೆ ಶೂಲ, ತೋಮರ, ಕತ್ತಿ, ಶಕ್ತಿ ಮುಂತಾದ ಆಯುಧಗಳನ್ನು ಹಿಡಿದು ಘೋರ ರಾಕ್ಷಸರು ಸದಾ ಕಾವಲಿರುತ್ತಾರೆ.

"ರಘುನಾಥ, ಲಂಕೆಯ ನಾಲ್ಕು ಕಡೆಗಳಲ್ಲಿ ದುರ್ಗಮವಾದ ಕಂದಕಗಳಿವೆ. ಆ ಕಂದಕಗಳು ಬಹಳ ಆಳವಾಗಿದ್ದು ದಾಟಲು ಅಶಕ್ಯವಾಗಿವೆ. ಲಂಕೆಯ ಸುತ್ತಲೂ ನದಿ, ಪರ್ವತ, ವನ, ಕಂದಕಗಳೆಂಬ ನಾಲ್ಕು ಅಗಮ್ಯವಾದ ದುರ್ಗಗಳಿವೆ. ಆ ಭಯಂಕರವಾದ ಕಂದಕಗಳಲ್ಲಿ ಬಹಳ ಘೋರವಾದ ಮೀನುಗಳೂ ಮೊಸಳೆಗಳೂ ಇವೆ. ಆದ್ದರಿಂದ, ಲಂಕೆಯನ್ನು ಹೊಗುವುದು ಬಹಳ ಕಷ್ಟಸಾಧ್ಯವೇ ಸರಿ.

"ರಾಘವ, ರಾವಣ ತನ್ನ ಪುರಿಯ ರಕ್ಷಣಾ ಕಾರ್ಯವನ್ನು ಚೆನ್ನಾಗಿ ನಿರ್ವಹಿಸುತ್ತಾನೆ. ಲಂಕೆಯಲ್ಲಿ ನಾಲ್ಕು ಮಹಾದ್ವಾರಗಳಿವೆ. ಲಂಕೆಯ ಪೂರ್ವದ್ವಾರದಲ್ಲಿ ಹತ್ತು ಸಾವಿರ ರಾಕ್ಷಸರು ಶೂಲಪಾಣಿಗಳಾಗಿ ಸತತವಾಗಿ ಕಾವಲಿರುತ್ತಾರೆ. ಲಂಕೆಯ ದಕ್ಷಿಣ ದ್ವಾರದಲ್ಲಿ ಒಂದು ಲಕ್ಷ ರಾಕ್ಷಸರು ಪರಿಘ, ತೋಮರ, ಮುಂತಾದ ಆಯುಧಗಳನ್ನು ಹಿಡಿದು ಕಾವಲಿದ್ದಾರೆ. ಲಂಕೆಯ ಪಶ್ಚಿಮ ದ್ವಾರದಲ್ಲಿ ಖಡ್ಗ, ಪ್ರಾಸ, ಮುಂತಾದ ಆಯುಧಗಳನ್ನು ಹಿಡಿದು ಹತ್ತು ಲಕ್ಷ ರಾಕ್ಷಸರು ಕಾವಲಿದಾರೆ. ಲಂಕೆಯ ಉತ್ತರ ದ್ವಾರದಲ್ಲಿ ಹತ್ತು ಕೋಟಿ ರಾಕ್ಷಸರು ಎವೆಯಿಕ್ಕದೆ ನಾನಾವಿಧವಾದ ಆಯುಧಗಳನ್ನೂ, ಶಕ್ತಿಗಳನ್ನೂ ಹಿಡಿದು ಸಿದ್ಧವಾಗಿ ನಿಂತಿದಾರೆ. ಲಂಕೆಯ ಮಧ್ಯಭಾಗದಲ್ಲಿ ನೂರಾರು ಸಹಸ್ರ ರಾಕ್ಷಸರನ್ನು ಕಂಡೆ ನಾನು. ಒಟ್ಟಿನಲ್ಲಿ ಲಂಕೆಯಲ್ಲಿ ರಾವಣನ ಬಲ ದುರ್ದಮ್ಯವಾದುದಾಗಿದೆ. ಲಂಕೆಯ ಸುತ್ತಲೂ ಗೋಡೆಗಳ ಮೇಲೆ ಪರಿಘ, ಶತಘ್ನ ಮುಂತಾದ ಯಂತ್ರಗಳನ್ನು ಸಿದ್ಧವಾಗಿಟ್ಟಿದಾರೆ. ಶತ್ರುವಿನ ಆಗಮನವಾದೊಡನೆಯೇ ಈ ಯಂತ್ರಗಳು ಅಗ್ನಿಜ್ವಾಲೆಯನ್ನು ಕಕ್ಕಿ ಅವರನ್ನು ಧ್ವಂಸಮಾಡಿಬಿಡುತ್ತದೆ. ಹೀಗೆ ಲಂಕೆಯು ದೇವತೆಗಳಿಂದಲೂ ಜಯಿಸಲು ಅಸಾಧ್ಯವಾದುದಾಗಿದೆ.

"ಆದರೆ ರಾಮಾ, ನಿನ್ನ ಅನುಗ್ರಹದಿಂದ ಈ ಅಭೇದ್ಯವಾದ ಲಂಕೆಯನ್ನು ಹೊಕ್ಕು ರಾಕ್ಷಸರ ಬಲದಲ್ಲಿ ಕಾಲುಭಾಗದಷ್ಟು ಸೈನ್ಯವನ್ನು ನಾಶಮಾಡಿದ್ದೇನೆ. ರಾವಣನ ಪುರಿಗೆ ಬೆಂಕಿಹಚ್ಚಿ ಪಾಳು ಗೆಡವಿದ್ದೇನೆ. ಯೋಚಿಸಬೇಡ ರಾಘವ ! ಲಂಕೆ ಅಭೇದ್ಯವಾದುದು ನಿಜ. ಆದರೆ, ನಿನ್ನ ಬಾಣಕ್ಕೆ ಅದು ಇದಿರಾಗದು. ಅಂಗದ, ಜಾಂಬವಂತ, ಮೈಂದ, ದ್ವಿವಿಧ, ನೀಲ, ನಳ, ನಾನು ಇಷ್ಟೇ ಜನ ಸಾಕು, ಲಂಕೆಯನ್ನು ಸಂಪೂರ್ಣವಾಗಿ ನಾಶಪಡಿಸಲು. ಅಂಗದನೇ ಮುಂತಾದ ವಾನರ ವೀರರು ಸಮುದ್ರವನ್ನು ಹಾರಿಯೇ ಲಂಕೆಯನ್ನು ಪೊಗಬಲ್ಲರು. ಆದ್ದರಿಂದ ರಘೋತ್ತಮಾ, ಬೇಗ ಸೈನ್ಯದೊಂದಿಗೆ ಲಂಕೆಯತ್ತ ವಿಜಯ ಪ್ರಯಾಣವನ್ನು ಬೆಳಸುವುದು ಯುಕ್ತವೆಂದು ನನಗನಿಸುತ್ತದೆ. ಕಾಲ ವಿಳಂಬಮಾಡದೆ ಈಗಲೇ ಸೈನ್ಯ ಸಮೇತನಾಗಿ ಲಂಕೆಯತ್ತ ಸಾಗುವುದೇ ಲೇಸು" ಎಂದ.

ಹನುಮಂತ ಹೇಳಿದುದನ್ನೆಲ್ಲ ರಾಮ ಕೇಳಿದ. ಅನಂತರ ಸತ್ಯಪರಾಕ್ರಮಿಯಾದ ಮಹಾ ತೇಜಸ್ವಿ ಎನಿಸಿದ ಶ್ರೀರಾಮ ಸುಗ್ರೀವನನ್ನೂ, ಲಕ್ಷ್ಮಣನನ್ನೂ, ಇತರ ವಾನರರನ್ನೂ ಕುರಿತು ಇಂದೇ ನಾವು ವಿಜಯ ಯಾತ್ರೆಗಾಗಿ ಹೊರಡೋಣ. ಇಂದು ಉತ್ತರಫಲ್ಗುನೀ ನಕ್ಷತ್ರ. ಅಲ್ಲದೆ ಸೂರ್ಯ ಈಗ ನಡುನೆತ್ತಿಯಮೇಲೆ ಪ್ರಕಾಶಿಸುತ್ತಿದ್ದಾನೆ. ಈಗಿನ ಮುಹೂರ್ತ ವಿಜಯ ಮುಹೂರ್ತವೆನಿಸಿದೆ. ಜೊತೆಗೆ ನನ್ನ ಬಲಗಣ್ಣಿನ ಮೇಲುರೆಪ್ಪೆ ಹಾರುತ್ತಿದೆ. ಇನ್ನೂ ಅನೇಕ ರೀತಿಯ ಶುಭ ಶಕುನಗಳು ತೋರುತ್ತಿವೆ. ಇದೆಲ್ಲ ನನಗೆ ಖಂಡಿತವಾಗಿ ಜಯ ಸಿದ್ಧ ಎಂದು ತೋರಿಸುತ್ತವೆ. ಆದ್ದರಿಂದ ಸುಗ್ರೀವ ಈಗಲೇ ನಾವು ವಿಜಯಯಾತ್ರೆಯನ್ನು ಪ್ರಾರಂಭಿಸೋಣ" ಎಂದ. ರಾಮನ ಮಾತನ್ನು ಸುಗ್ರೀವ ಸಂತೋಷದಿಂದ ಅನುಮೋದಿಸಿದ. ಮತ್ತೆ ನೀತಿವಿಶಾರದನಾದ ರಾಮಚಂದ್ರ, ಸುಗ್ರೀವನನ್ನು ಕುರಿತು ಸೈನ್ಯ ಯಾವ ಕ್ರಮದಲ್ಲಿ ಹೋಗಬೇಕು ಎಂಬುದನ್ನು ವಿವರಿಸಿದ.

ವಾಲ್ಮೀಕಿ ರಾಮಾಯಣ, ಧರ್ಮಗ್ರಂಥ. ಇದರಲ್ಲಿ ಹೇಳದ ಧರ್ಮವಿಲ್ಲ. ರಾಜನೀತಿ, ಯುದ್ಧನೀತಿ, ಕೌಟುಂಬಿಕನೀತಿ, ಎಲ್ಲವನ್ನೂ ವಾಲ್ಮೀಕಿ, ರಾಮಾಯಣದಲ್ಲಿ ವಿಶದೀಕರಿಸಿದ್ದಾರೆ. ಯುದ್ಧಕಾಂಡದಲ್ಲಿ ಯುದ್ಧ ಮಾಡುವಾಗ ದೇಶದ ನಾಯಕ ಯಾವರೀತಿ ಸೈನ್ಯವನ್ನು ಸಂಗ್ರಹಿಸಿಕೊಳ್ಳಬೇಕು ? ಯಾವ ಕ್ರಮದಲ್ಲಿ ಮಾಡಬೇಕು ? ಇದನ್ನೆಲ್ಲ ವಿವರಿಸಿದ್ದಾರೆ.

ರಾಮ ಸುಗ್ರೀವನನ್ನು ಕುರಿತು "ಸುಗ್ರೀವ, ಸೇನಾಧಿಪತಿಯಾದ, ಮಹಾಬುದ್ಧಿವಂತನಾದ ನೀಲ ಲಕ್ಷಸೈನ್ಯದೊಡನೆ ಮುಂದೆ ಮಾರ್ಗವನ್ನು ಶೋಧಿಸುತ್ತಾ ಹೋಗಲಿ. ನೀಲ ಮಹಾಬಲರಾದ ವಾನರರೊಡನೆ ಫಲಮೂಲಗಳಿಂದ ಯುಕ್ತವಾದ, ಮರಗಳ ನೆರಳಿರುವ, ಕುಡಿಯಲು ಯಥೇಚ್ಛವಾಗಿ ನೀರಿನ ಸೌಕರ್ಯವುಳ್ಳ ದಾರಿಯಲ್ಲೇ ಸಾಗಲಿ. ಹೋಗುವಾಗ ತಟಾಕಗಳನ್ನೂ, ಫಲಗಳಿಂದ ತುಂಬಿದ ವನಗಳನ್ನೂ ಎಚ್ಚರಿಕೆಯಿಂದ ಗಮನಿಸುತ್ತಿರಲಿ. ಒಂದು ವೇಳೆ ದುಷ್ಟರಾದ ರಾಕ್ಷಸರು ವಾನರರು ತಿನ್ನುವ ಫಲಗಳಲ್ಲಿ, ಕುಡಿಯುವ ನೀರಿನಲ್ಲಿ ವಿಷ ಬೆರಸಿದ್ದಾರು ! ನೀಲ ಇದನ್ನೆಲ್ಲ ಗಮನಿಸುತ್ತಾ ಮಾರ್ಗವನ್ನು ಶೋಧಿಸುತ್ತಾ ಸಾಗಲಿ. ಅವರಿಗೆ ಸಹಾಯಕರಾಗಿ ನಿರ್ಭೀತರಾದ, ಬಲವಂತರಾದ ಲಕ್ಷ ವಾನರರು ಸೈನ್ಯಕ್ಕೆ ಮಾರ್ಗದರ್ಶಕರಾಗಿ ಹೋಗಲಿ.

"ಹೋಗುತ್ತಿರುವಾಗ ವಾನರರು ಗಿರಿಗಳನ್ನೂ, ಗುಹೆಗಳನ್ನೂ, ಪೊದೆಗಳನ್ನೂ ಚೆನ್ನಾಗಿ ಗಮನಿಸುತ್ತಾ ಹೋಗಲಿ. ಒಂದು ವೇಳೆ ರಾಕ್ಷಸರು ಈ ಗಿರಿ, ಕಂದರ, ಗುಹೆ, ಪೊದೆ, ಇವುಗಳಲ್ಲಿ ಅವಿತಿದ್ದು ಹಿಂದಿನಿಂದ ಮೇಲೆ ಬಿದ್ದಾರು. ಎಚ್ಚರದಿಂದ ಅವರು ಮುಂದೆ ಮುಂದೆ ಹೋಗಲಿ."

ಮಹಾಬಲಾಢ್ಯನೆನಿಸಿದ ಗಜ, ಪರಾಕ್ರಮಿಯಾದ ಗವಯ ಮತ್ತು ಮದಿಸಿದ ಆನೆಯಂತೆ ಬಲವುಳ್ಳ ಗವಾಕ್ಷ ಲಕ್ಷಾಂತರ ವಾನರರೊಂದಿಗೆ ಸೈನ್ಯದ ಮುಂಭಾಗದಲ್ಲಿ ಹೋಗಲಿ. ನೆಗೆಯುವುದರಲ್ಲಿ ಹಾರುವುದರಲ್ಲಿ ಪ್ರಚಂಡನೆನಿಸಿದ ಋಷಭ, ಮಹಾ ಪರಾಕ್ರಮಿಯಾದ ಕುಮುದ–ಈ ವಾನರವೀರರು ಲಕ್ಷಾಂತರ ಕಪಿಗಳೊಂದಿಗೆ ಸೈನ್ಯದ ಬಲಭಾಗವನ್ನು ರಕ್ಷಿಸುತ್ತ ಬರಲಿ.

ದುರ್ಜಯನಾಗಿಯೂ, ಮಹಾವೇಗಶಾಲಿಯಾಗಿಯೂ ಇರುವ ಗಂಧಮಾಧನ ತನ್ನ ಸೈನ್ಯದೊಂದಿಗೆ ಎಡಭಾಗದಲ್ಲಿ ಬರಲಿ. ನಾನು ಐರಾವತವನ್ನೇರಿದ ಇಂದ್ರನಂತೆ ಹನುಮಂತನ ಹೆಗಲನ್ನೇರಿ ಸೈನ್ಯದ ಮಧ್ಯಭಾಗದಲ್ಲಿರುತ್ತೇನೆ. ಸಾರ್ವಭೌಮ ಎಂಬ ಮಹಾಗಜವನ್ನೇರಿದ ಕುಬೇರನಂತೆ ಕಾಲಾಂತರನೆನಿಸಿದ ಲಕ್ಷ್ಮಣ ಅಂಗದನ ಹೆಗಲನ್ನೇರಿ ಬರಲಿ, ಮಹಾವೀರ್ಯವುಳ್ಳ ಜಾಂಬವಂತ, ಸುಷೇಣ, ವೇಗದರ್ಶಿ ಈ ವಾನರವೀರರು ಸೇನೆಯದ್ದು ರಕ್ಷಿಸುತ್ತಾ ಅದರ ಹಿಂಭಾಗದಲ್ಲಿ ಬರಲಿ.

ಸುಗ್ರೀವಾ, ನೀನು ಇದರಂತೆ ಆಜ್ಞೆ ನೀಡು ಎಂದ ರಾಮ.

ಮೊದಲಿನಿಂದ ರಾಮ ವಾನರರನ್ನು ಆಜ್ಞಾಪಿಸು ಎಂದು ಸುಗ್ರೀವನಿಗೇ ಹೇಳುತ್ತಾ ಬಂದಿದಾನೆ. ಸುಗ್ರೀವ ತಾನಾಗಿಯೇ ಸಮಸ್ತ ವಾನರವೀರರನ್ನೂ ರಾಮನ ಸೇವಾಕಾರ್ಯಕ್ಕಾಗಿ ಅರ್ಪಿಸಿದ್ದಾನೆ. ಹೀಗಿದ್ದರೂ, ರಾಮ ತಾನೇ ನೇರವಾಗಿ ಆಜ್ಞಾಪಿಸದೆ ಸುಗ್ರೀವನಿಗೇ ಆ ಹಕ್ಕನ್ನು ಕೊಟ್ಟಿದಾನೆ. ರಾಮನ ಹೃದಯವೈಶಾಲ್ಯ ರಾಜನೀತಿಯನ್ನು ಅರಿತ ಆ ಮುತ್ಸದ್ದಿತನ ಇದರಿಂದ ವ್ಯಕ್ತವಾಗುತ್ತದೆ.

ಸುಗ್ರೀವ ಎಷ್ಟೆಂದರೂ ವಾನರರ ರಾಜ; ಅವನಿಗೆ ತಾನೇ ರಾಜ್ಯ ಕೊಟ್ಟಿದಾನೆ. ವಾನರರೆಲ್ಲ ಸುಗ್ರೀವನನ್ನ ಅನುವರ್ತಿಸಿ ನಡೆಯಬೇಕು ಎಂಬುದೇ ರಾಮನ ಇಚ್ಛೆ. ಆದ್ದರಿಂದ ವಾನರರಾಜನಾದ ಸುಗ್ರೀವನನ್ನೇ ಸೈನ್ಯಕ್ಕೆ ಆಜ್ಞಾಪಿಸು ಎಂದ.

ರಾಮ ಹೇಳಿದಂತೆಯೇ ಸುಗ್ರೀವ ತನ್ನ ಸೈನ್ಯಕ್ಕೆ ಎಚ್ಚರಿಕೆ ಕೊಟ್ಟ. ರಾಮನ ವಿಜಯಯಾತ್ರೆಯಲ್ಲಿ ಹೋರಾಟ ಕೋಟ್ಯನುಕೋಟಿ ವಾನರರಲ್ಲಿ ಎಲ್ಲರೂ ಬಲಶಾಲಿಗಳೇ. ರಾಮನೆ ಹೇಳಿದ್ದಂತೆ ವೃದ್ಧರು ಬಾಲರು, ಕೈಲಾಗದವರು, ಅಶಕ್ತರು, ಹೇಡಿಗಳು, ಆ ಸೈನ್ಯದಲ್ಲಿರಲಿಲ್ಲ. ಒಬ್ಬೊಬ್ಬರೂ ಮಹಾ ಪರಾಕ್ರಮಿಗಳೇ, ಮಹಾತೇಜಸ್ವಿಗಳೇ. ರಾಮನಾಜ್ಞೆಯಂತೆ ವಾನರಸೈನ್ಯ ವಿಜಯ ಮುಹೂರ್ತದಲ್ಲಿ ವಿಜಯಯಾತ್ರೆಯನ್ನು ಆರಂಭಿಸಿತು. ಎಲ್ಲ ವಾನರರಿಗೂ ಉತ್ಸಾಹವೋ ಉತ್ಸಾಹ! ಕೆಲವು ವಾನರರು ಕುಣಿಯುತ್ತ ಹೋದರು. ಮತ್ತೆ ಕೆಲವರು ನೆಗೆಯುತ್ತ ಹೋದರು. ಇನ್ನೂ ಕೆಲವರು ಹಾರುತ್ತ ಹೋದರು. ಸಂತೋಷದಿಂದ ಒಬ್ಬರನ್ನೊಬ್ಬರು ಎತ್ತಿಕೊಂಡು ಹೋದರು ಕೆಲವರು. ಕುಣಿಯುತ್ತಾ–ಕುಪ್ಪಳಿಸುತ್ತಾ, ಹಾರುತ್ತಾ–ನೆಗೆಯುತ್ತಾ, ನಗುತ್ತಾ–ನಲಿಯುತ್ತಾ, ಕೂಗುತ್ತಾ–ಕೆಲೆಯುತ್ತಾ, ಸಂತೋಷ ಸಂಭ್ರಮದಿಂದ "ರಾವಣನನ್ನೂ ಸಮಸ್ತ ರಾಕ್ಷಸರನ್ನೂ ನಿರ್ಮೂಲಮಾಡಿ ಬಿಡುತ್ತೇವೆ" ಎಂದು ಗರ್ಜಿಸುತ್ತ ರಾಮನ ಸೈನ್ಯ, ದಕ್ಷಿಣದಿಕ್ಕಿಗೆ ಅಭಿಮುಖವಾಗಿ, ಲಂಕೆಯತ್ತ ಹೊರಟಿತು.

ರಾಮನು ಲಕ್ಷ್ಮಣ ಸುಗ್ರೀವರೊಡಗೂಡಿ ಸೈನ್ಯದ ಮಧ್ಯಭಾಗದಲ್ಲಿ ಹೊರಟ. ರಾಮನ ಸುತ್ತಲೂ ಸಾಗರದಂತೆ ಸೈನ್ಯ ಹೊರಟಿತು. ಮಾರ್ಗದಲ್ಲಿ ನಾನಾ ರೀತಿಯ ಫಲಪುಷ್ಪಗಳಿಂದ ಕೂಡಿದ್ದ ವನದ ಮಾರ್ಗವಾಗಿ ನಾಗಿತು ಸೈನ್ಯ. ರಾಮನ ಕಠೋರವಾದ ಆಜ್ಞೆಯ ಅಂಜಿಕೆಯಿಂದ

ಶಿಸ್ತಿನಿಂದ ನಾಗಿತು ವಾನರ ಸೈನ್ಯ. ರಾಮ, ಶಿಸ್ತಿನಿಂದ ಆಜ್ಞೆಯನ್ನು ಹೊರಡಿಸಿದ್ದ, "ಸೈನ್ಯ ಹೊರಡುವಾಗ ಯಾರಿಗೂ ಉಪದ್ರವ, ತೊಂದರೆ, ಏರ್ಪಡಬಾರದು, ನಗರದ ಜನರಿಗಾಗಲೀ ದೇಶವಾಸಿಗಳಿಗಾಗಲೀ ಲೇಶಮಾತ್ರವೂ ಸೈನ್ಯದಿಂದ ತೊಂದರೆ ಆಗಬಾರದು. ಆದಷ್ಟೂ ದೇಶ, ನಗರದ ಸಮೀಪವನ್ನೇ ವರ್ಜಿಸಬೇಕು" ಎಂದು. ಅದರಂತೆಯೇ ವಾನರ ಸೈನ್ಯ ಅರಣ್ಯದ ಮಾರ್ಗದಲ್ಲೇ ಹೋಗುತ್ತಿತ್ತು.

ರಾಮನೊಡನೆ ಹೊರಟ ಲಕ್ಷ್ಮಣ. ಶುಕ್ರ, ಬೃಹಸ್ಪತಿಗಳಿಂದ ಯುಕ್ತರಾದ ಸೂರ್ಯ ಚಂದ್ರರಂತೆ ಹನುಮಂತ, ಅಂಗದರ ಮೇಲೆ ರಾಮಲಕ್ಷ್ಮಣರು ಹೊರಟರು. ಹೀಗೆ ಹೋಗು ತ್ತಿದ್ದ ಸಮಯ ಲಕ್ಷ್ಮಣ ರಾಮನನ್ನು ಕುರಿತು ''ಅಣ್ಣಾ, ನೋಡು. ನಾವು ಹೊರಡುತ್ತಿರುವಾಗ ಅನೇಕ ಶುಭಶಕುನಗಳು ಕಾಣುತ್ತಿವೆ. ಇವೆಲ್ಲ ನಿನಗೆ ಮಂಗಳಸೂಚಕಗಳಾಗಿವೆ. ಕ್ಷಿಪ್ರದಲ್ಲೇ ನೀನು ರಾವಣನನ್ನು ಕೊಂದು ಸೀತೆಯೊಡನೆ ಅಯೋಧ್ಯೆಯನ್ನು ನೇರಿ ಪಟ್ಟಾಭಿಷೇಕ ಮಾಡಿಕೊಳ್ಳುವೆ ಎಂಬುದನ್ನು ಈ ಶುಭಲಕ್ಷಣಗಳು ಸೂಚಿಸುತ್ತವೆ.

''ರಾಮಾ, ನೋಡು. ನಮ್ಮ ಹಿಂದಿನಿಂದ ಮಂದವಾದ ಸುಗಂಧಯುಕ್ತವಾದ ಮಾರುತ ಬೀಸುತ್ತಿದೆ. ದಿಕ್ಕುಗಳೆಲ್ಲ ಪ್ರಕಾಶಮಾನವಾಗಿವೆ. ನಮ್ಮ ಇಕ್ಷ್ವಾಕು ವಂಶದ ಮುಖ್ಯ ಪುರುಷ ತ್ರಿಶಂಕು ಆಕಾಶದಲ್ಲಿ ಪ್ರಜ್ವಲಿಸುತ್ತಿದಾನೆ. ಅಲ್ಲದೆ, ಇಕ್ಷ್ವಾಕು ವಂಶಕ್ಕೇ ಶೋಭಾಯಮಾನವಾದ ವಿಶಾಖಾ ನಕ್ಷತ್ರ ಪ್ರಕಾಶಮಾನವಾಗಿ ಬೆಳಗುತ್ತಿದೆ. ಇದು ವಿಜಯವನ್ನು ಸೂಚಿಸುತ್ತಿದೆ. ರಾಕ್ಷಸರ ನಕ್ಷತ್ರವಾದ ' ಮೂಲಾ" ಧೂಮಕೇತುವಿನಿಂದ ಆವೃತವಾಗಿದೆ. ಇದು ರಾಕ್ಷಸ ಕುಲಕ್ಕೇ ಅನಿಷ್ಟ ವನ್ನು ಸೂಚಿಸುತ್ತಿದೆ. ಇದನ್ನೆಲ್ಲ ಗಮನಿಸಿದರೆ, ರಾಘವ! ಜಯಲಕ್ಷ್ಮಿ ನಿನ್ನನ್ನೇ ಒಲಿಯುತ್ತಾಳೆ. ಇದರಲ್ಲಿ ಸಂಶಯವೇ ಇಲ್ಲ" ಎಂದ.

ಲಕ್ಷ್ಮಣನ ಶುಭವಾಣಿಯನ್ನು ಕೇಳಿ ರಾಮ ಸಂತೋಷಪಟ್ಟ. ಲಕ್ಷ್ಮಣನ ಮಂಗಳವಾಣಿ ವಾನರ ಸೈನ್ಯವನ್ನು ಮತ್ತಷ್ಟು ಉತ್ಸಾಹಗೊಳಿಸಿತು. ವಾನರರೆಲ್ಲ ಸಿಂಹನಾದ ಮಾಡುತ್ತ ಕೇಕೆ ಹಾಕುತ್ತಾ, ಗರ್ಜಿಸುತ್ತಾ, ಹೊರಟರು. ಅವರ ಪಾದ ತಾಡನದಿಂದ ಎದ್ದ ಧೂಳು ಸೂರ್ಯ ಮಂಡಲವನ್ನು ಮುಟ್ಟುವಂತಿತ್ತು. ಎಲ್ಲಿ ನೋಡಿದರೂ ಕಪಿಗಳು. ಹೀಗೆ ಉತ್ಸಾಹಭರಿತರಾಗಿ ಗಿರಿ, ಕಾನನವನ್ನೂ, ನದಿಯನ್ನೂ ದಾಟುತ್ತ ವಾನರರೆಲ್ಲ ಮಹೇಂದ್ರಪರ್ವತವನ್ನು ತಲಪಿದರು. ಅಲ್ಲಿಂದ ಮುಂದೆ ಆ ವಾನರ ಸೈನ್ಯ ಭೋರಿಡುತ್ತಿದ್ದ ಸಾಗರವನ್ನು ಕಂಡು ನಿಂತಿತು. ಸಾಗರವನ್ನು ನೋಡಿದ ವಾನರರು ಜೋರಾಗಿ ಶಬ್ದ ಮಾಡತೊಡಗಿದರು.

ಕೋಟ್ಯಂತರ ವಾನರರ ಆ ಶಬ್ದ ಸಾಗರದ ಅಲೆಗಳ ಶಬ್ದವನ್ನೂ ತಗ್ಗಿಸಿತು. ಸಾಗರಕೆ ಪ್ರತಿಯಾಗಿ ವಾನರಸಾಗರವೇ ಇದಿರಾಗಿ ನಿಂತಿತು.

ರಾಮನು ಲಕ್ಷ್ಮಣ ಸುಗ್ರೀವರೊಡನೆ ಮಹೇಂದ್ರ ಪರ್ವತದಲ್ಲಿ ತಂಗಿದ. ಕಪ್ಪೆ, ಮೀನು, ತಿಮಿಂಗಿಲ, ಮೊಸಳೆ, ಹಾವು ಇವುಗಳಿಂದ ಕೂಡಿದ ಆ ಮಹಾಸಾಗರವನ್ನು ಕಂಡು ರಾಮ, ಸುಗ್ರೀವ, ಸೈನ್ಯ ಇಲ್ಲೇ ನಿಲ್ಲಲಿ. ಆಯಾ ಭಾಗದ ಸೇನಾಧಿಪತಿಗಳು ತಮ್ಮ ತಮ್ಮ ಭಾಗದ ಸೈನ್ಯ ದೊಂದಿಗೆ ಎಲ್ಲೂ ಹೋಗದೆ ಅಲ್ಲಲ್ಲೇ ಉಳಿಯಲಿ. ಎಚ್ಚರದಿಂದ ಸೈನ್ಯವನ್ನು ಕಾಯ್ದುಕೊಳ್ಳು ವಂತೆ ಆಜ್ಞಾಪಿಸು. ಮುಂದೆ ನಾವು ಸಾಗರವನ್ನು ದಾಟುವವರೆಗೆ, ದಾಟಲು ಉಪಾಯವನ್ನು ಕಂಡುಹಿಡಿಯುವವರೆಗೆ ಸೈನ್ಯ ಇಲ್ಲೇ ಇರಬೇಕಾಗುತ್ತದೆ, ಅದರಂತೆ ಆಜ್ಞಾಪಿಸು, ಎಂದ.

ಸಮಸ್ತ ವಾನರರೂ ಮಹೇಂದ್ರ ಪರ್ವತದ ತಪ್ಪಲಿನಲ್ಲಿ ಸಮುದ್ರದ ತೀರದಲ್ಲಿ ತಂಗಿದರು.

ರಾಮನು ಮಹೇಂದ್ರಪರ್ವತದ ಶಿಖರವನ್ನೇರಿ ಸಾಗರವನ್ನು ನೋಡಿದ. ಭಯಂಕರವಾದ ಅಲೆಗಳಿಂದ ಸಾಗರ ಘೋರ್ಗರೆಯುತ್ತಿತ್ತು. ಕಣ್ಣಿನ ದೃಷ್ಟಿ ಹೋಗುವವರೆಗೆ ಸಾಗರವನ್ನು ಕಾಣ ಬಹುದಿತ್ತು. ವಿಶಾಲವಾದ ಆ ಸಮುದ್ರ ವಿಶಾಲವಾದ ಆಕಾಶವನ್ನೇ ಹೋಲುತ್ತಿತ್ತು. ದಿಗಂತ ದಲ್ಲಿ ಸಮುದ್ರ, ಆಕಾಶ ಎರಡೂ ಒಂದನ್ನೊಂದು ತಾಗುತ್ತಿರುವಂತಿತ್ತು. ಆಕಾಶವು ತಾರೆಗಳಿಂದ ಪ್ರಕಾಶಮಾನವಾಗಿದ್ದರೆ ಸಮುದ್ರವು ಮುತ್ತುಗಳಿಂದ ಶೋಭಿಸುತ್ತಿತ್ತು, ಆಕಾಶವೂ ಅಂತವಿಲ್ಲದ್ದು. ಸಮುದ್ರವೂ ಅಂತವಿಲ್ಲದ್ದು. ಆಕಾಶ ಘನವಾದ ಮೇಘಗಳಿಂದ ಆವರಿಸಲ್ಪಟ್ಟಿದ್ದರೆ ಸಾಗರ ಭಯಂಕರವಾದ ಅಲೆಗಳಿಂದ ಕೂಡಿತ್ತು.

ಹೀಗೆ ಅನ್ಯೋನ್ಯಸಾದೃಶ್ಯದಿಂದ ಇದ್ದ ಆಕಾಶವನ್ನೂ, ಸಮುದ್ರವನ್ನೂ ನೋಡಿದ ರಾಮ "ಈ ದುಸ್ಸಾಧ್ಯವಾದ ಸಮುದ್ರವನ್ನು ದಾಟುವುದಾದರೂ ಹೇಗೆ?" ಎಂದು ಯೋಚಿಸ ತೊಡಗಿದ. ಪಕ್ಕದಲ್ಲಿದ್ದ ಲಕ್ಷ್ಮಣನನ್ನು ಕುರಿತು ರಾಮ "ಸೌಮಿತ್ರಿ, ನೋಡಿದೆಯಾ, ಸಾಗರ ಹೇಗೆ ಭೀಮ ಘೋಷವನ್ನು ಮಾಡುತ್ತಿದೆ? ಈ ಸಾಗರವನ್ನು ದಾಟುವ ಬಗೆ ಹೇಗೆ? ಲಕ್ಷ್ಮಣಾ, ಲೋಕದಲ್ಲಿ ಶೋಕ ಎನ್ನುವುದು ಕಾಲ ಹೋದಂತೆ ಕಡಿಮೆಯಾಗುತ್ತಾ ಹೋಗುವುದು. ಆದರೆ, ನನ್ನ ವಿಷಯದಲ್ಲಿ ಕಾಲ ಹೋದಂತೆ ಶೋಕವೂ ಅಭಿವೃದ್ಧಿಯಾಗುತ್ತಲೇ ಇದೆ. ಇದಕ್ಕೆ ಕಾರಣ ತಿಳಿದಿದೆಯೇ ನಿನಗೆ? ಶುಭಲಕ್ಷಣಗಳುಳ್ಳ ಲಕ್ಷ್ಮಣಾ, ಕೇಳು, ಸೀತೆಯನ್ನು ಅಗಲಿದ್ದ ಆ ವಿರಹ ವೇದನೆ ನನ್ನೆದೆಯನ್ನು ಸುಡುತ್ತಿದೆ. ನನ್ನ ಹೃದಯವೇ ಅಗ್ನಿಕುಂಡವಾಗಿದೆ. ಸೀತೆಯನ್ನು ಅಗಲಿ ದುದರಿಂದ ಆಗುತ್ತಿರುವ ಆ ವೇದನೆಯೇ ಅಗ್ನಿ. ಶೋಕಜ್ವಾಲೆಯಿಂದ ಕೂಡಿದ ಆ ಪ್ರೇಮಾಗ್ನಿ ವಿಷದಂತೆ ನನ್ನ ಇಡೀ ದೇಹವನ್ನೇ ದಹಿಸುತ್ತಿದೆ. ಈಗೇನು ಮಾಡಲಿ! ಲಕ್ಷ್ಮಣಾ, ನೋಡು, ಈ ಮಂದವಾದ ಮಲಯ ಮಾರುತ ಬೀಸುತ್ತಿದೆ. ಇದು ಸೀತೆಯನ್ನ ಸ್ಪರ್ಶಿಸಿ ಇತ್ತ ಬರುತ್ತಿದೆ. ದಕ್ಷಿಣದ ಮಲಯ ಪರ್ವತದಿಂದ ಬೀಸುತ್ತಿರುವ ಈ ಮಂದಮಾರುತ ನನ್ನನ್ನೂ ಸ್ಪರ್ಶಿಸು ವಂತಾಗಲಿ, ಸೀತೆಯಮೇಲೆ ಬೀಸಿ ಅವಳ ಸ್ಪರ್ಶವನ್ನು ಹೊಂದಿದ ಈ ಮಾರುತ ನನ್ನನ್ನು ಸ್ಪರ್ಶಿಸುವುದರಿಂದಲಾದರೂ ನನ್ನ ವೇಗ ಸ್ವಲ್ಪ ಶಾಂತ ವಾಗಲಿ."

**ವಾಹಿ ವಾತ ಯತಃ ಕಾಂತಾ ತಾಂ ಸ್ಪೃಷ್ಟ್ವಾ ಮಾಮಪಿ ಸ್ಪೃಶ।**
**ತ್ವಯಿಮೇ ಗಾತ್ರ ಸಂಸ್ಪರ್ಶಃ ಚಂದ್ರೇ ದೃಷ್ಟಿ ಸಮಾಗಮಃ ||**

"ಸೌಮಿತ್ರಿ, ನನಗೆ ಅತ್ಯಂತ ಶೋಕದಾಯಕವಾದ ಸಂಗತಿ ಎಂದರೆ, ನನ್ನ ಪ್ರಿಯೆಯಾದ ಆ ಸೀತೆ ಕೃಶಳಾಗಿ ರಾವಣನ ಅತಃಪುರದಲ್ಲಿ ನೆಲದಮೇಲೆ ಇರುವುದು. ಸುಕುಮಾರಳಾದ ಅವಳು ಈ ಕಷ್ಟವನ್ನು ಅದು ಹೇಗೆ ತಾನೇ ಸಹಿಸಿಕೊಂಡಳೋ! ಪಾಪಿಯಾದ ರಾವಣ ಅವಳನ್ನು ಅಪ ಹರಿಸುವಾಗ "ಹಾ. ನಾಥ" ಎಂದು ನನ್ನನ್ನು ಕೂಗಿದ ಆ ಸೀತೆಯ ವಾಣಿ ನನ್ನನ್ನು ಕೊರಲಗಿ ನಿಂದ ಇರಿಯುವಂತಿದೆ.

"ಲಕ್ಷ್ಮಣಾ, ನಾನೂ ಹೋಗಿ ಈ ಸಮುದ್ರದ ದಡದಲ್ಲಿ ಮಲಗುತ್ತೇನೆ. ಸಮುದ್ರದ ಒಳ ಗಿನ ಭೂಮಿಯ ಮೇಲೆ ನಾನು ಮಲಗುವುದರಿಂದಲಾದರೂ ನನ್ನ ಒಳಗಿನ ವೇದನೆ ಸ್ವಲ್ಪವಾದರೂ ಶಮನವಾದೀತೇನೋ. ನಾನೂ ಭೂಮಿಯಮೇಲೆ ಮಲಗುವುದರಿಂದ ಸೀತೆಯೂ ಅಶೋಕ

ವನದಲ್ಲಿ ಭೂಮಿಯಮೇಲೆ ಮಲಗುವುದರಿಂದ ಸೀತೆಯೂ ಅಶೋಕವನದಲ್ಲಿ ಭೂಮಿಯ ಮೇಲೆ ಮಲಗಿರುವುದರಿಂದ ಸ್ವಲ್ಪಮಟ್ಟಿಗಾದರೂ ನಮ್ಮಿಬ್ಬರ ಸಂಸರ್ಗವುಂಟಾಗುತ್ತದೆ. ಭೂಸಂಸರ್ಗ ದಿಂದಲಾದರೂ ನನ್ನ ವಿರಹವ್ಯಥೆ ಸ್ವಲ್ಪಮಟ್ಟಿಗಾದರೂ ಶಾಂತವಾದೀತೇನೋ!

"ಸುಮಿತ್ರಾಕುಮಾರ, ಎಂದಿಗೆ ದುಷ್ಟನಾದ ರಾವಣನನ್ನು ಕೊಂದು ಆ ಕಮಲನಯನೆ ಯಾದ ಸೀತೆಯನ್ನು ಪಡೆಯುವೆನೋ ಎನಿಸಿದೆ. ಮೇಲಿಂದಮೇಲೆ ಆ ಸೀತೆಯ ಮುಖಾರವಿಂದ, ಅವಳ ಆ ಕಮಲದಂಥ ಕಣ್ಣುಗಳು, ಮಂದಹಾಸವನ್ನು ಬೀರುವ ಆ ವದನ, ಲತೆಯಂತೆ ಬಳ ಕುವ ಅವಳ ಶರೀರ, ಮಿಂಚಿನಂತೆ ಹೊಳೆಯುವ ಅವಳ ತೇಜ ಇವೆಲ್ಲ ಕಣ್ಣಿಗೆ ಕಟ್ಟಿದಂತಿವೆ. ಯಾವಾಗ ಈ ದುಷ್ಪಾರವಾದ ಸಾಗರವನ್ನು ದಾಟಿ, ರಾವಣನನ್ನು ಸಂಹರಿಸಿ ಆ ನನ್ನ ಜಾನಕಿ ಯೊಂದಿಗೆ ಮತ್ತೆ ಸೇರುವೆನೋ ಎನಿಸಿಬಿಟ್ಟಿದೆ" ಎಂದು ರಾಮ ವಿಲಪಿಸಿದ. ಆ ವೇಳೆಗೆ ಸರಿ ಯಾಗಿ ಸೂರ್ಯ ಅಸ್ತಾಚಲವನ್ನು ಮುಟ್ಟುತ್ತಿದ್ದ. ಲಕ್ಷ್ಮಣ ರಾಮನಿಗೆ ಧೈರ್ಯತುಂಬಿದ. ಲಕ್ಷ್ಮಣನ ಸಾಂತ್ವವಚನವನ್ನು ಕೇಳಿದ ರಾಮ, ಎದ್ದು ಸಂಧ್ಯಾವಂದನೆಯನ್ನು ಮಾಡಿದ. ಮನಸ್ಸಿ ನಲ್ಲಿ ಸೀತೆಯ ಬಗ್ಗೆ ನೆನೆಯುತ್ತಲೇ ಇದ್ದ. ಹೀಗೆ, ರಾಮನು ಲಕ್ಷ್ಮಣ ಸುಗ್ರೀವರೊಡನೆ, ಸಮಸ್ತ ವಾನರ ಸೈನ್ಯದೊಂದಿಗೆ ಸಮುದ್ರ ತೀರದಲ್ಲಿ ಆ ರಾತ್ರಿ ತಂಗಿದ.

ನೀಲನ ಸೇನಾಧಿಪತ್ಯದಲ್ಲಿ, ಋಷಭ, ಗಂಧಮಾದನ, ಮೈಂದ, ದ್ವಿವಿದರ ಮೇಲ್ವಿಚಾ ರಣೆಯಲ್ಲಿ ವಾನರ ಸೈನ್ಯ ಸುರಕ್ಷಿತವಾಗಿತ್ತು.

### ರಾವಣನ ಮಂತ್ರಾಲೋಚನೆ, ವಿಭೀಷಣನ ಬುದ್ಧಿವಾದ

ಹನುಮಂತ ಸಮಸ್ತ ಲಂಕೆಯನ್ನೂ ಸುಟ್ಟು ಹೋದ ಮೇಲೆ ರಾವಣ ಮಂತ್ರಾಲೋಚನೆ ಗಾಗಿ ಸಭೆಯನ್ನು ಕುರಿತು ''ರಾಕ್ಷಸ ವೀರರೆ, ಕೇವಲ ''ಹನುಮಂತ'' ನೆಂಬ ಒಬ್ಬ ವಾನರ ಬಂದು ಇಡೀ ಲಂಕೆಯನ್ನು ನಾಶಮಾಡಿ ಹೋಗಿದ್ದಾನೆ. ಇದು ನಾವೆಲ್ಲರೂ ಸೇರಿ ಯೋಚಿಸಬೇಕಾದ ವಿಷಯ. ಈಗ, ನಾನು ನಿಮ್ಮೆಲ್ಲರನ್ನೂ ಉತ್ತಮವಾದ ಸಲಹೆ ನೀಡಲು, ಮಂತ್ರಾಲೋಚನೆ ಮಾಡಲು ಕರೆದಿದೇನೆ. ದೇಶದ, ರಾಷ್ಟ್ರದ, ಆಗುಹೋಗುಗಳು ಮಂತ್ರಿಗಳ ಮಂತ್ರಾಲೋಚನೆಯನ್ನು ಅವಲಂಬಿಸಿರುತ್ತವೆ. ಉತ್ತಮರಾದ, ಶ್ರೇಷ್ಠರಾದ, ದೂರದರ್ಶಿಗಳಾದ ಮಂತ್ರಿಗಳು ನಡೆಸುವ ಮಂತ್ರಾಲೋಚನೆಯಿಂದ, ಕೊಡುವ ಉತ್ತಮವಾದ ಸಲಹೆಯಿಂದ, ರಾಷ್ಟ್ರವು ಅಭಿವೃದ್ಧಿಯನ್ನು ಪಡೆಯುತ್ತದೆ. ಪುರುಷರಲ್ಲಿ ಮೂರು ಬಗೆ. ಉತ್ತಮ, ಮಧ್ಯಮ, ಅಧಮ ಎಂದು.

"ಯಾವ ಪುರುಷ ತಾನು ಕೈಗೊಳ್ಳುವ ಕಾರ್ಯದ ಬಗ್ಗೆ ಉತ್ತಮರೊಡನೆ, ಹಿರಿಯ ರೊಡನೆ, ಮೇಲಾಗಿ ತನ್ನ ಹಿತವನ್ನು ಬಯಸುವವರೊಡನೆ ಸೇರಿ ಆಲೋಚಿಸಿ, ನಿಜವಾಗಿ ತನ್ನ ಹಿತವನ್ನು ಬಯಸುವವರು ಕೊಟ್ಟ ಸಲಹೆಯನ್ನು, ದೈವದಲ್ಲಿ ಶ್ರದ್ಧೆಯನ್ನಿಟ್ಟು, ಅನುಸರಿಸಿ ಕಾರ್ಯವನ್ನು ಸಾಧಿಸುತ್ತಾನೋ ಅವನು ಉತ್ತಮಪುರುಷ ಎನಿಸಿಕೊಳ್ಳುತ್ತಾನೆ.

"ಯಾವ ಪುರುಷ ತನ್ನ ಯಾವುದೇ ಕಾರ್ಯವನ್ನು ತಾನೇ ಯೋಚಿಸಿ, ಇತರರಿಂದ ಯಾವ ವಿಧವಾದ ಸಲಹೆಯನ್ನೂ ಕೇಳದೆ, ತಾನೇ ದೈವದ ಮೇಲೆ ಭಾರಹಾಕಿ ಮಾಡುತ್ತಾನೋ ಅವನು ಮಧ್ಯಮಪುರುಷ ಎನಿಸುತ್ತಾನೆ. ಯಾರು ದೈವವನ್ನೂ ನಂಬದೆ, ತನ್ನ ಹಿತವರನ್ನೂ ಕೇಳದೆ,

ತಾನೇ ಆರಂಭಿಸಿ ಮಧ್ಯದಲ್ಲೇ ಅದನ್ನು ಕೈಬಿಡುತ್ತಾನೋ ಅವನು ಅಧಮನೆನಿಸಿಕೊಳ್ಳುತ್ತಾನೆ.

"ಹೀಗೆ ಪುರುಷರಲ್ಲಿ ಉತ್ತಮ, ಮಧ್ಯಮ, ಅಧಮ ಎಂದು ಇರುವಂತೆ ಮಂತ್ರದಲ್ಲೂ ಅಂದರೆ ಮಂತ್ರಾಲೋಚನೆಯಲ್ಲೂ ಮೂರು ವಿಧವುಂಟು. ಅದನ್ನೂ ಹೇಳುತ್ತೇನೆ, ಕೇಳಿ : ಯಾವ ಮಂತ್ರಾಲೋಚನೆ ಶಾಸ್ತ್ರ ಸಮ್ಮತವಾಗಿರುವುದೋ, ಯಾವ ಅಭಿಪ್ರಾಯ ಎಲ್ಲ ಉತ್ತಮ ಮಂತ್ರಿಗಳಿಗೂ ಒಪ್ಪಿಗೆಯಾಗಿ ಏಕಾಭಿಪ್ರಾಯವಾಗಿರುವುದೋ, ಯಾವುದು ಎಲ್ಲರಿಗೂ ಹಿತವೋ ಅದು ಉತ್ತಮರೀತಿಯ ಮಂತ್ರಾಲೋಚನೆ ಎನಿಸುತ್ತದೆ.

ಯಾವ ಮಂತ್ರಾಲೋಚನೆಯಲ್ಲಿ ಪ್ರಾರಂಭದಲ್ಲಿ ಭಿನ್ನಾಭಿಪ್ರಾಯವುಂಟಾಗಿ, ಅಂತ್ಯದಲ್ಲಿ ಕರ್ತವ್ಯ ನಿರ್ವಹಣೆಯನ್ನು ಅನುಲಕ್ಷಿಸಿ ಅಭಿಪ್ರಾಯ ಒಂದೇ ಆಗುತ್ತದೋ ಅದು ಮಧ್ಯಮ ರೀತಿಯ ಮಂತ್ರಾಲೋಚನೆ ಎನಿಸುತ್ತದೆ.

"ಯಾವ ಮಂತ್ರಾಲೋಚನೆಯಲ್ಲಿ ಸ್ಪರ್ಧಾಮನೋಭಾವವೇರ್ಪಟ್ಟು, ಭಿನ್ನಾಭಿಪ್ರಾಯ ಉಂಟಾಗುವುದೋ, ಯಾವ ಮಂತ್ರಾಲೋಚನೆಯಲ್ಲಿ ಕೊನೆಯಲ್ಲಿ ಏಕಾಭಿಪ್ರಾಯಕ್ಕೆ ಬಂದರೂ ಅಂಥ ಅಭಿಪ್ರಾಯದಿಂದ ದೇಶದ ಕಲ್ಯಾಣ, ಆಗುವುದಿಲ್ಲವೋ ಅದು ಅಧಮ ಮಂತ್ರಾಲೋಚನೆ ಯಾಗುತ್ತದೆ.

"ನೀವೆಲ್ಲ ಬುದ್ಧಿವಂತರು. ರಾಷ್ಟ್ರ ಉಳಿಯಬೇಕಾಗಿದೆ ಈಗ. ರಾಮನು ಸಮಸ್ತ ವಾನರ ಸೈನ್ಯದೊಂದಿಗೆ ಸಮುದ್ರತೀರದಲ್ಲಿ ಬೀಡುಬಿಟ್ಟಿದಾನೆ. ಇನ್ನೇನು ! ಸಾಗರವನ್ನು ದಾಟಿ ಲಂಕೆ ಯನ್ನೂ ಮುತ್ತುತ್ತಾನೆ. ರಾಮ ಮಹಾಪರಾಕ್ರಮಿ. ಸಮುದ್ರವನ್ನು ಶೋಷಿಸಿಯೋ ಅಥವಾ ಇನ್ನಾವ ಉಪಾಯದಿಂದಲೋ ವಾನರವೀರರೊಂದಿಗೆ ಲಂಕೆಯನ್ನು ಆಕ್ರಮಿಸುವುದು ಖಂಡಿತ. ಹೀಗಿರುವಾಗ, ರಾಮನಿಂದ ಲಂಕೆಗೆ ಭಯ ಸನ್ನಿಹಿತವಾಗಿದೆ ಎಂಬುದು ನಿಶ್ಚಯ. ಈ ಮಹಾ ಭಯವನ್ನು ನಿವಾರಿಸಿಕೊಳ್ಳುವ ಸಲುವಾಗಿ ಸೂಕ್ತವಾದ ಮಂತ್ರಾಲೋಚನೆಯನ್ನು ನೀಡಿರಿ. ಇದ ರಿಂದ ರಾಷ್ಟ್ರ, ಜನತೆ, ಉಳಿಯುವಂತಾಗಲಿ. ಅದಕ್ಕಾಗಿಯೇ ನಿಮ್ಮನ್ನು ಕರೆಸಿ ಸಭೆ ನೇರಿಸಿದೆ" ಎಂದ ರಾವಣ.

ವಾಲ್ಮೀಕಿ ಯುದ್ಧ ಕಾಂಡದ ಆರನೇ ಸರ್ಗದಲ್ಲಿ ರಾವಣನು ಎಂಥ ರಾಜಶಾಸ್ತ್ರ ವಿಶಾರದ ಎಂದು ಪರಿಚಯಮಾಡಿಕೊಟ್ಟಿದಾರೆ. ರಾವಣನೇನೂ ಮೂಢನಲ್ಲ. ರಾಮನ ಹಿರಿಮೆಯನ್ನು ತಿಳಿಯದವನೂ ಅಲ್ಲ. ನಿಜವಾಗಿ ಹೇಳುವುದಾದರೆ, ರಾವಣನೇ ರಾಮನ ಬಲವನ್ನು ಸರಿಯಾಗಿ ಅಳೆದವನು ಎನ್ನ ಬಹುದು. ಮುಂದೆ ರಾಮನಿಂದ ಪರಾಜಿತನಾದಾಗ ಇದೇ ರಾವಣ "ತಂ ಮನ್ಯೇ ರಾಘವಂ ವೀರಂ ನಾರಾಯಣ ಮನಾಮಯಂ" ರಾಮ ಸಾಕ್ಷಾತ್ ನಾರಾಯಣನೇ ಎಂದು ತಿಳಿಯು ತ್ತಾನೆ. ಇಷ್ಟೆಲ್ಲ ಬುದ್ಧಿ ಇದ್ದೂ ರಾವಣ ಏಕೆ ವಿಭೀಷಣನ ಮಾತನ್ನು ಕೇಳಲಿಲ್ಲ ಎನ್ನುವಾಗ ವಾಲ್ಮೀಕಿ ಅಡಿಗಡಿಗೆ ಹೇಳುತ್ತಾರೆ. "ರಾವಣಃ ಕಾಲಚೋದಿತಃ" ಎಂದು. ಕಾಲಪಾಶಕ್ಕೆ ಸಿಲು ಕಿದ ರಾವಣನಿಗೆ ಪಥ್ಯ ಅಪಥ್ಯವಾಯಿತು, ಅಮೃತ ವಿಷವಾಯಿತು.

ರಾವಣನ ಮಾತುಗಳನ್ನು ಕೇಳಿದರು ರಾಕ್ಷಸರು. ಆ ರಾಕ್ಷಸರು ಶಾರೀರಕ ಬಲವನ್ನೇನೋ ಪಡೆದಿದ್ದರು. ಆದರೆ ಅವರಿಗೆ ನೀತಿಯ ಬಲವಾಗಲೀ, ಆತ್ಮಬಲವಾಗಲೀ ಇರಲಿಲ್ಲ. ನೀತಿಯ ಮಾರ್ಗವನ್ನೇ ಕಂಡರಿಯದವರು ಅವರು. ಅಂಥ ನೀಚರನ್ನು ರಾವಣ ಸಲಹೆ ಕೇಳಿದ. ಆ ದುಷ್ಟ ರಾಕ್ಷಸರೆಲ್ಲ ಒಟ್ಟಾಗಿ "ಮಹಾಪ್ರಭು, ಇದೇನು ? ವಾನರರಿಗೆ ತಾವಿಷ್ಟು ಬೆದರಬೇಕೇ ? ಅಂಜ

ಬೇಕೆ ? ನೀವೇನು ಸಾಮಾನ್ಯರೇ? ಧನಾಧಿಪನಾದ ಕುಬೇರನನ್ನೇ ಸೋಲಿಸಿ ಕೈಲಾಸ ಶಿಖರದಿಂದ ಪುಷ್ಪಕ ವಿಮಾನವನ್ನು ತಂದ ಮಹಾ ಪರಾಕ್ರಮಿಗಳಲ್ಲವೇ ? ದಾನವ ರಾಜನಾದ ಮಯ ನಿಮ್ಮ ಸಾಮರ್ಥ್ಯಕ್ಕೆ ಅಂಜಿ ತನ್ನ ಮಗಳನ್ನು ನಿಮಗಿತ್ತು ವಿವಾಹಮಾಡಲಿಲ್ಲವೆ ? ಮಹಾ ಪರಾಕ್ರಮಿಯಾದ ಮಧು ಎಂಬ ರಾಕ್ಷಸ ನಿಮಗೆ ಅಡಿಯಾಳಾಗಿ ಇಲ್ಲವೆ ? ಪಾತಾಳ ಲೋಕದಲ್ಲಿರುವ ವಾಸುಕಿ, ಶಂಖ ಮುಂತಾದ ನಾಗರನ್ನೇ ಸೋಲಿಸಿದ ನಿಮಗೆ ಈ ವಾನರರು ಯಾವ ಲೆಕ್ಕ ? ಮೃತ್ಯುಪಾಶವನ್ನೇ ಹರಿದು ಹಾಕಿ, ಮೃತ್ಯುದೇವತೆಯಾದ ಯಮನನ್ನೇ ಅಂಜಿಸಿದ ವಿಜಯಿಯಲ್ಲವೆ ನೀವು ? ನಿಮ್ಮ ಅನುಚರರಾದ ಒಬ್ಬೊಬ್ಬ ರಾಕ್ಷಸನೇ ಸಾಕು, ಈ ವಾನರರನ್ನೆಲ್ಲ ಅಂಜಿಸಿ ಕೊಲ್ಲಲು. ಮಹಾ ಪರಾಕ್ರಮಿಯಾದ ಬ್ರಹ್ಮನಿಂದ ವರವನ್ನು ಪಡೆದ ವೃತ್ರಾಸುರನನ್ನು ಕೊಂದ ಮಹೇಂದ್ರನನ್ನೂ ಜಯಿಸಿದ ನಿಮ್ಮ ಪುತ್ರ ಇಂದ್ರಜಿತ್ ಒಬ್ಬನೇ ಸಾಕು, ಸಮಸ್ತ ವಾನರರನ್ನೂ ಕೊಲ್ಲಲು. ನೀವು ಇಲ್ಲಿಯೇ ಇದ್ದುಕೊಂಡು ನಿಮ್ಮ ಪುತ್ರನಾದ ಇಂದ್ರಜಿತುವನ್ನು ಕಳುಹಿಸಿಕೊಡಿ. ಈಗಿಂದೀಗಲೇ ಅವನು ಸಮುದ್ರವನ್ನು ದಾಟಿ ರಾಮ ಲಕ್ಷ್ಮಣರನ್ನೂ, ನಮಸ್ತ ವಾನರ ಸೈನ್ಯವನ್ನೂ ನಾಶಮಾಡಿ ಬಂದುಬಿಡುತ್ತಾನೆ. ಇಂಥ ಶೂರನಾದ ಮಗ ಇರುವಾಗ ನಿಮಗೇಕೆ ಚಿಂತೆ? ನೀವು ನಿಶ್ಚಯವಾಗಿ ರಾಮನನ್ನೂ ಕೊಲ್ಲುವಿರಿ. ಇದರಲ್ಲಿ ಸಂಶಯವೇ ಇಲ್ಲ" ಎಂದರು.

ಅನಂತರ ನೀಲಮೇಘದಂತೆ ಶ್ಯಾಮಲವರ್ಣವುಳ್ಳ ಸೇನಾಧಿಪತಿ ಪ್ರಹಸ್ತ ಎದ್ದು ರಾವಣನನ್ನು ವಂದಿಸಿ "ಮಹಾಪ್ರಭು, ನೀವು ಚಿಂತಿಸುವ ಕಾರಣವೇ ಇಲ್ಲ. ದೇವತೆಗಳು, ದಾನವರು, ಯಕ್ಷರು, ಗಂಧರ್ವರು, ಕಿನ್ನರರು ಇವರನ್ನೆಲ್ಲ ಜಯಿಸಿದ ನಮಗೆ ಆ ಇಬ್ಬರು ಹುಲುಮನುಜರಿಂದ ಅಪಾಯವೇ ? ಈಗಲೇ ಹೋಗಿ ಅವರೆಲ್ಲರನ್ನೂ ಧ್ವಂಸಮಾಡಿ ಬರುತ್ತೇನೆ. ಆ ಹನುಮಂತ ಎಂಬ ವಾನರ ಬಂದಾಗ ನಾವು ಅಜಾಗರೂಕರಾಗಿದ್ದೆವು. ನಾವು ಸರಿಯಾಗಿ ಸಿದ್ಧರಾಗಿರಲಿಲ್ಲ. ಇಲ್ಲದಿದ್ದರೆ ಆ ಕಪಿಯನ್ನು ನಾನು ಹಾಗೆಯೇ ಬಿಡುತ್ತಿದ್ದನೇ ! ಈಗಲೂ ರಾಕ್ಷಸರಾಜ, ನಿನ್ನ ಆಜ್ಞೆಯಂತೆ ಪರ್ವತ, ಕಾನನ ಎಲ್ಲ ಕಡೆಯಲ್ಲಿರುವ ವಾನರರನ್ನೂ ನಾಶಮಾಡಿ ಈ ಭೂಮಿಯನ್ನೇ ವಾನರರಹಿತವನ್ನಾಗಿಸುತ್ತೇನೆ. ಇದಕ್ಕಾಗಿ ನೀ ಏಕೆ ಚಿಂತಿಸಬೇಕು ? ಅಪ್ಪಣೆಯಾಗಲಿ ಸಾಕು" ಎಂದ.

ಪ್ರಹಸ್ತನ ನಂತರ ದುರ್ಮುಖ ಎಂಬ ರಾಕ್ಷಸ ಎದ್ದು, "ಮಹಾಪ್ರಭು, ಇದು ಅನ್ಯಾಯ, ಶುದ್ಧ ಅನ್ಯಾಯ. ಅಲ್ಲ ! ಒಬ್ಬ ವಾನರನಿಂದ ನಮ್ಮ ಇಡೀ ರಾಕ್ಷಸಕುಲಕ್ಕೇ ಅಪಮಾನ ಆಯಿತು. ನಮ್ಮ ಲಂಕೆಯೇ ಹಾಳಾಯಿತು, ಒಂದು ಕಪಿಯಿಂದ. ಆದ್ದರಿಂದ ನಾವು ಈ ಅಪಮಾನಕೆ ಪ್ರತೀಕಾರವನ್ನು ಕೈಗೊಳ್ಳಲೇ ಬೇಕು. ಕಪಿಯಿಂದ ಅಪಮಾನಿಸಲ್ಪಟ್ಟ ನಾವು ಇಡೀ ಕಪಿಕುಲವನ್ನೇ ನಿರ್ಮೂಲವಾಗಿಸಬೇಕು. ಅಪ್ಪಣೆಯಾಗಲಿ, ನಾ ಒಬ್ಬನೇ ಹೋಗಿ ಸಮಸ್ತ ವಾನರರನ್ನೂ ನೆಲಸಮ ಮಾಡಿಬಿಡುತ್ತೇನೆ. ನನಗೆ ಅಂಜಿ ಅವರು ಭಯದಿಂದ ಎಲ್ಲೇ ಅಡಗಿಕೊಳ್ಳಲಿ, ಸುಮ್ಮನೆ ಬಿಡುವವನಲ್ಲ. ರಸಾತಲ. ಪಾತಾಳ–ಎಲ್ಲಿ ಅಡಗಿದರೂ ನಾನು ಅವರನ್ನು ಹಿಡಿದು ಕೊಂದು ಹಾಕಿ ಬರುತ್ತೇನೆ, ಅಪ್ಪಣೆಗಾಗಿ ಕಾಯುತ್ತಿದೇನೆ" ಎಂದ.

ಅವನು ಕುಳಿತಮೇಲೆ ವಜ್ರದಂಷ್ಟ್ರ ಎಂಬ ಮಹಾಬಲಿಷ್ಠನಾದ ರಾಕ್ಷಸ ಮಾಂಸ ರಕ್ತದಿಂದ ಆವೃತವಾದ ಪರಿಘವನ್ನು ತಿರುಗಿಸುತ್ತಾ ಎದ್ದ. "ರಾಜ, ಅಪ್ಪಣೆಮಾತ್ರದಲ್ಲಿ ಇದೇ ಪರಿಘದಿಂದ ಕೊಂದು ಬರುತ್ತೇನೆ.ಆ ಹನುಮಂತ ಯಾವಲೆಕ್ಕ ನನ್ನ ಈ ಪರಿಘಕ್ಕೆ !

"ರಾವಣೇಶ್ವರಾ, ಕೇಳಬೇಕು ಕಾರ್ಯವನ್ನು ಕೆಲವುಸಲ ಯುಕ್ತಿಯಿಂದ ಸಾಧಿಸಬೇಕು. ನಮ್ಮಲ್ಲಿ ಕೆಲ ರಾಕ್ಷಸರು ಮನುಷ್ಯರಂತೆ ರೂಪು ಧರಿಸಿ ರಾಮನ ಬಳಿಗೆ ಹೋಗಲಿ. "ನಿನ್ನ ತಮ್ಮ ನಾದ ಭರತ ನಮ್ಮನ್ನು ಕಳುಹಿಸಿದ" ಎಂದು ಹೇಳಿ ರಾಮನ ಸೈನ್ಯದೊಡನೆ ಸೇರಿಕೊಂಡು ಲಂಕೆಗೆ ಬರಲಿ. ಮಾರ್ಗಮಧ್ಯದಲ್ಲಿ ನಾವೆಲ್ಲ ಸೇರಿ ಶಕ್ತಿ, ತೋಮರ. ಗದೆ, ಇವುಗಳಿಂದ ವಾನರರನ್ನೂ, ರಾಮ ಲಕ್ಷ್ಮಣರನ್ನೂ ಕೊಂದುಹಾಕೋಣ, ಸುಲಭವಾಗಿ ಜಯ ಕರಗತವಾಗುತ್ತದೆ. ಹೇಗಿದೆ ನನ್ನ ಯೋಚನೆ ?" ಎಂದ.

ಕುಂಭಕರ್ಣನ ಮಗನಾದ ಮಹಾಪರಾಕ್ರಮಿ ನಿಕುಂಭ ಎದ್ದು "ಮಹಾರಾಜಾ, ನನ್ನೊಬ್ಬ ನನ್ನೇ ಕಳಿಸು. ನಾ ಒಬ್ಬನೇ ಏಕಾಕಿಯಾಗಿ ಸಮಸ್ತ ವಾನರ ಸೈನ್ಯವನ್ನೂ, ರಾಮಲಕ್ಷ್ಮಣರನ್ನೂ ನಿಗ್ರಹಿಸಿ ಬರುತ್ತೇನೆ ನನ್ನಂಥ ಬಲಿಷ್ಠ ಇರುವಾಗ ನಿಮಗೇನುಭಯ ? ಎಂದ

ವಜ್ರಹನು ಎಂಬ ಭೀಮಕಾಯನಾದ ರಾಕ್ಷಸ ಎದ್ದು "ಪ್ರಭೋ ರಾವಣೇಶ್ವರಾ, ಏಕೆ ಇದೆಲ್ಲ ಚಿಂತೆ! ನೀವೆಲ್ಲ ನಿಮ್ಮ ಪಾಡಿಗೆ ಸ್ವಸ್ಥರಾಗಿ ಮಾಂಸವನ್ನು ತಿಂದು ಮದ್ಯವನ್ನು ಸೇವಿಸಿ ಸುಖವಾಗಿರಿ. ನನ್ನೊಬ್ಬನನ್ನು ಕಳಿಸಿ. ನಾ ಎಲ್ಲ ನೋಡಿಕೊಳ್ಳುತ್ತೇನೆ. ನೀವು ನಿಶ್ಚಿಂತರಾಗಿರಿ" ಎಂದ. ಇದಾದ ನಂತರ ನಿಕುಂಭ, ಕುಂಭ, ಸೂರ್ಯಶತ್ರು, ನರಾಂತಕ, ದೇವಾಂತಕ, ದುರ್ಜಯನಾದ ಅಗ್ನಿ ಕೇತು, ರಶ್ಮಿಕೇತು, ಮಹಾಬಲಿಯೂ, ರಾವಣಕುಮಾರನಾದ ಇಂದ್ರಜಿತು, ಸೇನಾಧಿಪತಿ ಪ್ರಹಸ್ತ, ವಿರೂಪಾಕ್ಷ, ವಜ್ರದಂಷ್ಟ್ರ, ಧೂಮ್ರಾಕ್ಷ, ಅತಿಕಾಯ, ದುರ್ಮುಖ ಮುಂತಾದ ರಾಕ್ಷಸವೀರರು ಕೈಗಳಲ್ಲಿ ಶಕ್ತಿ, ತೋಮರ, ಪರಿಘ, ಮುಸಲಾಯುಧ, ಖಡ್ಗ, ಚಕ್ರ, ಶೂಲ ಮುಂತಾದ ಆಯುಧಗಳನ್ನು ಹಿಡಿದು ಒಟ್ಟಾಗಿ ರಾಕ್ಷಸ ರಾಜನಾದ ರಾವಣನ ಮುಂದೆನಿಂತು "ಮಹಾಪ್ರಭು, ಅಪ್ಪಣೆಯಾಗಲಿ. ಈಗಿಂದೀಗಲೇ ನಾವೆಲ್ಲ ಹೋಗಿ ಆ ರಾಮಲಕ್ಷ್ಮಣರನ್ನು ಕೊಂದು, ಸಮಸ್ತವಾನರ ಸೈನ್ಯವನ್ನೂ ನಾಶಮಾಡಿ ಬರುತ್ತೇವೆ" ಎಂದರು.

ಯುದ್ಧಕ್ಕೆ ಹೊರಡಲು ಸಿದ್ಧರಾಗಿ ಕೈಯಲ್ಲಿ ಆಯುಧಗಳನ್ನು ಹಿಡಿದುನಿಂತ ಆ ರಾಕ್ಷಸರನ್ನು ತಡೆದು ಧರ್ಮಜ್ಞನಾದ, ಸರ್ವಶಾಸ್ತ್ರ ಕೋವಿದನಾದ ವಿಭೀಷಣ ಎರಡು ಕೈಗಳನ್ನೂ ಜೋಡಿಸಿ ರಾವಣನನ್ನು ಕುರಿತು, "ಅಗ್ರಜ, ನನ್ನ ಮಾತನ್ನು ಲಾಲಿಸಬೇಕು. ನೀತಿಶಾಸ್ತ್ರದಲ್ಲಿ ಸಾಮ, ದಾನ, ಭೇದ ಈ ಮೂರು ಉಪಾಯಗಳಿಂದ ಸಾಧಿಸಲಾಗದೆ ಇರುವ ಕಾರ್ಯಕ್ಕೆ ದಂಡವನ್ನು ಉಪ ಯೋಗಿಸಬೇಕು ಎಂದು ಹೇಳಿದೆ. ಆದೂ ದಂಡೋಪಾಯವನ್ನು ಕೈಗೊಳ್ಳುವಾಗ ಚೆನ್ನಾಗಿ ಯೋಚಿಸಬೇಕು. ದಂಡೋಪಾಯವನ್ನು ಯಾರಮೇಲೆ ಪ್ರಯೋಗಿಸುತ್ತೇವೆಯೋ ಅವನ ಬಲಾ ಬಲವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಶತ್ರು ಬಲಹೀನನಾಗಿದ್ದರೆ, ಆಗ ನಿರ್ಭಯವಾಗಿ ಜಯ ವನ್ನು ಪಡೆಯಬಹುದು ಎಂದು ನಿರ್ಧರಿಸಬಹುದು. ರಾಮ ಹಾಗಲ್ಲ. ಮಹಾಪರಾಕ್ರಮಿ, ಧರ್ಮಾತ್ಮ. ಇಂಥವನಮೇಲೆ ದಂಡೋಪಾಯ ವ್ಯರ್ಥವೇಸರಿ. ಒಬ್ಬ ಕಪಿ ಹನುಮಂತ ನದೀನದ ಗಳ ಪತಿಯೆನಿಸಿದ ಭಯಂಕರವಾದ ಸಮುದ್ರವನ್ನು ದಾಟಿ ಎಲ್ಲರೂ ನೋಡುತ್ತಿರುವಂತೆಯೇ ಲಂಕೆ ಯನ್ನು ನಾಶಮಾಡಿ ಹೋದ ಎಂದಮೇಲೆ ಅಸಂಖ್ಯ ಕಪಿವೀರರಿಂದ ಯುಕ್ತನಾಗಿ ಬಂದಿರುವ ರಾಮನು ದುರ್ಜಯನಾಗಿರುವಾಗ ಅಂಥವನಮೇಲೆ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಯುದ್ಧಕ್ಕೆ ಹೋದರೆ, ಅದು ಮೂರ್ಖತನವಾದೀತು. ಅಣ್ಣ, ಯಾವಾಗಲೂ ಶತ್ರುವಿನ ಬಲವನ್ನು ತಿಳಿ ಯದೇ ಮುನ್ನುಗ್ಗಬಾರದು. ಅಲ್ಲದೆ, ಶತ್ರುವಿನ ಬಲವನ್ನು ನಾವು ತಗ್ಗಿಸಿ ಮಾತನಾಡುವುದೂ ಸರಿಯಲ್ಲ.

"ಇಷ್ವಕ್ಕೂ, ಅಣ್ಣಾ, ರಾಮನೊಡನೆ ನಮಗೇಕೆ ಯುದ್ಧ? ರಾಮ ನಮಗೆ ಏನೂ ಅಪರಾಧ ಮಾಡಿದವನಲ್ಲ. ಅದಕ್ಕೆ ಬದಲಾಗಿ ನೀನೇ ರಾಮಪತ್ನಿಯನ್ನು ಅಪಹರಿಸಿ ಅವನಿಗೆ ಅಪಚಾರ ಮಾಡಿರುವೆ. ಖರನನ್ನು ಜನಸ್ಥಾನದಲ್ಲಿ ಕೊಂದಿದ್ದಕ್ಕಾಗಿ ರಾಮಪತ್ನಿಯನ್ನು ಅಪಹರಿಸಿದೆ ಎನ್ನುವಿಯೇನೋ. ಆದರೆ ಅದು ವಿಹಿತವಾದುದಲ್ಲ. ಖರನು ಧರ್ಮಕ್ಕೆ ವಿರುದ್ಧವಾಗಿ ತಾನಾಗಿಯೇ ರಾಮನನ್ನು ಇದಿರಿಸಿದ. ಆತ್ಮರಕ್ಷಣೆಯು ಸಲುವಾಗಿಯೇ ರಾಮ ಖರನನ್ನು ನಿಗ್ರಹಿಸಿದ ಆದ್ದರಿಂದ ವ್ಯರ್ಥವಾಗಿ ಸೀತೆಯನ್ನು ಕದ್ದು ತಂದಿರುವುದು ಸರಿಯಲ್ಲ.

ಅಣ್ಣಾ, ನಾನು ನಿನ್ನ ಬಂಧುವಾಗಿ, ತಮ್ಮನಾಗಿ, ನಿನ್ನ ಹಿತೈಷಿಯಾಗಿ ಹೇಳುತ್ತಿದೇನೆ, ನನ್ನ ಮಾತನ್ನು ಕೇಳು.

**ಪ್ರಸಾದಯೇತ್ವಾಂ ಬಂಧುತ್ವಾತ್ ಕುರಷ್ವ ವಚನಂ ಮಮ ।**

**ಹಿತಂ ತಥ್ಯಂ ತ್ವಹಂ ಬ್ರೂಮಿ ದೀಯತಾಮಸ್ಯ ಮೈಥಿಲೀ ॥**

ನಾ ಹೇಳುವುದು ಹಿತ, ಪಥ್ಯವಾದುದು. ಅನ್ಯಥಾ ಭಾವಿಸದೆ ಮೈಥಿಲಿಯನ್ನು ರಾಮನಿಗೆ ಒಪ್ಪಿಸಿಬಿಡು.

ಆನೆ, ಕುದುರೆ, ರತ್ನ, ವೈಢೂರ್ಯ, ಐಶ್ವರ್ಯದಿಂದ ತುಂಬಿದ ಈ ಲಂಕೆ ಎಲ್ಲವೂ ರಾಮಬಾಣಕ್ಕೆ ಸಿಕ್ಕಿ ಸುಟ್ಟುಹೋಗುವ ಮುನ್ನ ರಾವಣಾ, ಸೀತೆಯನ್ನು ದಾಶರಥಿಗೆ ಒಪ್ಪಿಸಿಬಿಡು. ಅತ್ಯಂತ ಭಯಂಕರವಾದ, ವಿಶಾಲವಾದ, ದುರ್ಜಯವಾದ ವಾನರ ಸೈನ್ಯ ಲಂಕೆಯನ್ನು ಮುತ್ತುವಮೊದಲು ಅಣ್ಣಾ ! ಸೀತೆಯನ್ನು ಒಪ್ಪಿಸಿಬಿಡು.

"ನೀನು ಸೀತೆಯನ್ನು ಒಪ್ಪಿಸದಿದ್ದ ಪಕ್ಷದಲ್ಲಿ ರಾಮಬಾಣವು ಸಮಸ್ತ ರಾಕ್ಷಸರನ್ನೂ, ಈ ಲಂಕೆಯನ್ನೂ ನಾಶಮಾಡಿಯೇ ತೀರುತ್ತದೆ, ಇದರಲ್ಲಿ ಸಂಶಯವೇ ಇಲ್ಲ. ಅಣ್ಣಾ, ನೀನು ನನಗೆ ಹಿರಿಯ ಅಣ್ಣ, ತಂದೆಗೆ ಸಮಾನ. ಬೇಡುತ್ತಿದೇನೆ. ನಿನ್ನ ಹಿತಕ್ಕಾಗಿಯೇ ಈ ಮಾತುಗಳನ್ನು ಹೇಳುತ್ತಿದೇನೆ. ದಯವಿಟ್ಟು ನನ್ನ ಮಾತನ್ನು ಕೇಳು. ದುಷ್ಟರಾದ ಈ ರಾಕ್ಷಸರ ಮಾತನ್ನು ಕೇಳಬೇಡ. ಅಣ್ಣಾ ! ಸೀತೆಯನ್ನು ರಾಮನಿಗೆ ಒಪ್ಪಿಸು, ಲಂಕೆಯನ್ನು ಉಳಿಸು. ನೀನೂ ಅನುಗಾಲ ಚೆನ್ನಾಗಿ ಬಾಳು. ನೀನೇನಾದರೂ ಸೀತೆಯನ್ನು ಒಪ್ಪಿಸದಿದ್ದರೆ ಶರತ್ಕಾಲದ ಸೂರ್ಯನ ಕಿರಣಗಳಂತೆ ತೇಜಸ್ವಿಯಾದ ರಾಮಬಾಣ ಲಂಕೆಯನ್ನೂ ಸಮಸ್ತ ರಾಕ್ಷಸರನ್ನೂ ಖಂಡಿತವಾಗಿ ನಾಶಮಾಡಿಬಿಡುತ್ತದೆ. ಹಾಗೆ ಲಂಕೆ ನಾಶವಾಗುವ ಮುನ್ನ ಮೈಥಿಲಿಯನ್ನು ದಾಶರಥಿಗೆ ಅರ್ಪಿಸು. ಕೇಳು ನನ್ನ ಮಾತನ್ನು. ಅಣ್ಣಾ ! ಕಾಮ, ಕ್ರೋಧಕ್ಕೆ ವಶನಾಗಿ ವ್ಯರ್ಥವಾದ ಮಾಡಬೇಡ. ಕೋಪವು ಎಲ್ಲ ದುಃಖಕ್ಕೂ ಮೂಲ. ಅದೇ ಧರ್ಮದ ಬುಡವನ್ನು ಅಲುಗಿಸುತ್ತದೆ. ದಯೆಯಿಟ್ಟು ಶಾಂತನಾಗಿ ಯೋಚಿಸು.

**ಪ್ರಸೀದ ಜೀವೇಮ ಸಪುತ್ರ ಬಾಂಧವಾಃ ।**

**ಪ್ರದೀಯತಾಂ ದಾಶರಥಾಯ ಮೈಥಿಲೀ ॥**

"ಅಣ್ಣಾ, ನೀ ಒಬ್ಬನು ಶಾಂತನಾದರೆ, ನೀನೊಬ್ಬ ಪ್ರಸಾದಿಸಿದರೆ ಇಡೀ ಲಂಕೆಯೇ ಉಳಿದುಕೊಳ್ಳುತ್ತದೆ. ಎಲ್ಲರೂ ಪುತ್ರ ಬಂಧು–ಬಾಂಧವರೊಡನೆ ಬದುಕಲು ಸಹಾಯವಾಗುತ್ತದೆ. ಅಣ್ಣಾ! ಕಾಲಿಗೆ ಬಿದ್ದು ಬೇಡುತ್ತೇನೆ. ಮೈಥಿಲಿಯನ್ನು ದಶರಥರಾಮನಿಗೆ ಒಪ್ಪಿಸಿ ಲಂಕೆಯನ್ನು ಉಳಿಸು" ಎಂದು ಪರಿಪರಿಯಾಗಿ ರಾವಣನಿಗೆ ಬುದ್ಧಿವಾದ ಹೇಳಿದ.

ವಿಭೀಷಣನ ಮಾತನ್ನು ಕೇಳಿದ ರಾವಣನು ಸಭೆಯನ್ನು ಮುಂದುವರೆಸಲು ಇಚ್ಛಿಸದೆ ಅಷ್ಟಕ್ಕೇ ವಿಸರ್ಜಿಸಿ ತನ್ನ ಅರಮನೆಗೆ ಹಿಂದಿರುಗಿದ.

ಇರುಳು ಕಳೆಯಿತು, ಹಗಲು ಹರಿಯಿತು. ಮಹಾತ್ಮನಾದ ವಿಭೀಷಣನಿಗೆ ರಾತ್ರಿಯೆಲ್ಲ ಒಂದೇ ಚಿಂತೆ. "ಅನ್ಯಾಯವಾಗಿ ರಾವಣ ಹಾಳಾಗುತ್ತಾನಲ್ಲಾ" ಎಂದು. ಅವನನ್ನು ಹೇಗಾದರೂ ಕಾಪಾಡ ಬೇಕು ಎಂದು ಯೋಚಿಸಿದ. ''ಸಭೆಯಲ್ಲಿ ಎಲ್ಲರ ಇದಿರಿನಲ್ಲಿ ಹೇಳುವುದಕ್ಕಿಂತ ಏಕಾಂತದಲ್ಲಿ ವಿಷಯವನ್ನು ವಿವರಿಸಿ ರಾವಣನ ಮನಸ್ಸನ್ನು ತಿರುಗಿಸಲು ಯತ್ನಿಸಬೇಕು," ಎಂದು ನಿರ್ಧರಿಸಿದ. ಅದರಂತೆ ಬೆಳಗಾಗುತ್ತಿದ್ದಂತೆ ಧರ್ಮ, ಅರ್ಥ, ಈ ಎರಡರ ರಹಸ್ಯವನ್ನು ಚೆನ್ನಾಗಿ ಅರಿತ ಮಹಾ ಮೇಧಾವಿಯಾದ ವಿಭೀಷಣ ರಾವಣನ ಗೃಹಕ್ಕೆ ಬಂದ.

ರಾವಣನ ಮಹಲು ಅಸಾಮಾನ್ಯವಾಗಿತ್ತು. ಅನೇಕ ಪ್ರಾಸಾದಗಳಿಂದ ಕೂಡಿದ್ದ ರಾವಣನ ಭವನ ಪರ್ವತದ ಎತ್ತರವಾದ ಶಿಖರವನ್ನೂ ನಾಚಿಸುವಂತಿತ್ತು.

ರಾವಣನ ಅರಮನೆಯಲ್ಲಿ ನಾನಾ ವಿಭಾಗಗಳಿದ್ದವು. ವಿಶ್ವಾಸಕ್ಕೆ ಪಾತ್ರರಾದ, ಮಹಾಬಲಿ ಗಳಾದ ರಾಕ್ಷಸರು ಅಲ್ಲಲ್ಲೇ ನಿಂತಿದ್ದರು. ಚಿನ್ನದ ಬಾಗಿಲುಗಳಿಂದ, ಮುತ್ತುಹವಳದ ದ್ವಾರ ಅಲಂಕೃತವಾಗಿತ್ತು. ರಾವಣನ ಅಂತಃಪುರದಲ್ಲಿದ್ದ ರತ್ನರಾಶಿ ನಾಗಲೋಕವೋ ಇದು! ಎಂದು ಭ್ರಾಂತಿಗೊಳಿಸುತ್ತಿತ್ತು.

ಮಹಾಮೇಘದ ಮಧ್ಯೆ ಸೂರ್ಯ ಪ್ರವೇಶಿಸುವಂತೆ ವಿಭೀಷಣ ರಾವಣನ ಅರಮನೆಯನ್ನು ಪ್ರವೇಶಿಸಿದ. ಅಲ್ಲಿ ಬೆಳಗಿನಜಾವ ರಾವಣನ ಮೇಲ್ಮೆಗಾಗಿ ಬ್ರಾಹ್ಮಣರು ಹೇಳುತ್ತಿದ್ದ ಸ್ತುತಿ, ಪುಣ್ಯಾಹವಾಚನ, ವೇದಮಂತ್ರವನ್ನೂ, ಗಂಭೀರವಾದ ಮಂತ್ರಘೋಷವನ್ನೂ ಕೇಳಿದ. ರಾಕ್ಷಸ ರಿಂದ ಸೇವ್ಯನಾಗಿ ಸಿಂಹಾಸನದಮೇಲೆ ಮಂಡಿಸಿದ್ದ ರಾವಣನನ್ನು ಕಂಡ. ವಿನಯದಿಂದ ವಂದಿಸಿ ರಾಜೋಚಿತವಾದ ಪ್ರಶಂಸಾವಾಕ್ಯಗಳಿಂದ ರಾವಣನ ಮನಸ್ಸನ್ನು ತೃಪ್ತಿಪಡಿಸಿದ.

ಕೈಮುಗಿದು ಪಕ್ಕದಲ್ಲಿ ನಿಂತ. ರಾವಣ ತನ್ನ ಕಣ್ಣಿನಿಂದ ಒಂದು ಆಸನವನ್ನು ನೋಡಿದ ಮೇಲೆ ರಾವಣನಿಗೆ ಮತ್ತೆ ಕೈಮುಗಿದು ಆ ಆಸನದಲ್ಲಿ ಕುಳಿತ ವಿಭೀಷಣ.

ರಾವಣನ ಚಿತ್ತವನ್ನು ಪ್ರಸನ್ನವಾಗಿಸಿ ವಿಭೀಷಣ ವಿನಯದಿಂದ ಮೃದುವಾದ ಸ್ವರದಲ್ಲಿ ''ಶತ್ರುಗಳಿಗೆ ದುರ್ಜಯನಾದ ರಾವಣೇಶ್ವರಾ, ನಿನ್ನ ಶಕ್ತಿ ಅಪಾರವಾದುದು. ಆದರೆ, ನಾ ಒಂದು ಮಾತು ಹೇಳುತ್ತೇನೆ. ಯಾವಾಗಿನಿಂದ ಸೀತೆ ಲಂಕೆಗೆ ಬಂದಳೋ ಆವಾಗಿನಿಂದ ಲಂಕೆಯಲ್ಲಿ ಅನೇಕ ಅಶುಭ ಶಕುನಗಳು ಕಾಣಬರುತ್ತಿವೆ. ಹೋಮಕುಂಡದಲ್ಲಿ ಅಗ್ನಿಯನ್ನು ಎಷ್ಟೇ ಪ್ರಜ್ವಲಿಸಿದರೂ ಅದು ಕಾಂತಿ ಹೀನವಾಗಿದೆ. ಹೊಗೆಯಿಂದ ಕೂಡಿದೆ. ಪಾಕಶಾಲೆ, ಅಗ್ನಿಶಾಲೆ, ವೇದಾಧ್ಯಯನದ ಶಾಲೆ, ಇಲ್ಲೆಲ್ಲಾ ಭಯಂಕರವಾದ ಸರ್ಪಗಳು ಹರಿದಾಡುತ್ತಿವೆ. ಹವಿಸ್ಸನ್ನು ಇರುವೆಗಳು ಮುತ್ತಿವೆ.

"ಪುಷ್ಟಿಕರವಾದ ಹಸುಗಳಲ್ಲಿಯೂ ಹಾಲು ಇಂಗಿಹೋಗಿದೆ. ದೊಡ್ಡದೊಡ್ಡ ಆನೆಗಳೂ ಬಲಹೀನವಾಗಿವೆ. ಕುದುರೆಗಳಿಗೆ ಅದೆಷ್ಟೇ ಉತ್ತಮವಾದ ಆಹಾರ ಕೊಟ್ಟಾಗ್ಯೂ ದೀನವಾಗಿ ಹೇಷಾರವ ಗೈಯುತ್ತಿವೆ.

''ಎಲ್ಲ ಪ್ರಾಣಿಗಳ ಕಣ್ಣುಗಳಲ್ಲೂ ನೀರು ಧಾರಾಕಾರವಾಗಿ ಸುರಿಯುತ್ತಿರುತ್ತದೆ. ಯಾವುದೇ ಚಿಕಿತ್ಸೆ ನಡೆಸಿದರೂ ಫಲಕಾರಿಯಾಗುತ್ತಿಲ್ಲ.

"ಲಂಕಾಪುರಿಯ ಮೇಲೆ ಗುಂಪುಗುಂಪಾಗಿ ಕ್ರೂರಸ್ವಭಾವದ ಹದ್ದುಗಳೂ, ಕಾಗೆಗಳೂ ವಿಚಿತ್ರವಾದ ಧ್ವನಿಮಾಡುತ್ತಾ ಹಾರಾಡುತ್ತಿವೆ. ಮಾಂಸವನ್ನು ಭಕ್ಷಣೆಮಾಡುವ ಕ್ರೂರಮೃಗಗಳು ಭಯಂಕರವಾದ ಧ್ವನಿಮಾಡುತ್ತ ಲಂಕೆಯ ನಾಲ್ಕು ಬಾಗಿಲುಗಳಲ್ಲಿ ಸಂಚರಿಸುತ್ತಿವೆ.

"ಬೆಳಿಗ್ಗೆ, ಸಂಜೆ, ಎರಡು ವೇಳೆಯಲ್ಲೂ ನರಿಗಳು ಅಸಹ್ಯವಾಗಿ ಕೂಗುತ್ತಿವೆ.

"ಈ ಎಲ್ಲ ಅಪಶಕುನಗಳನ್ನು ಗಮನಿಸಿದರೆ ಸೀತೆ ಲಂಕೆಯಲ್ಲಿದ್ದರೆ ನಮಗೆಲ್ಲ ಉಳಿಗಾಲವಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಆದ್ದರಿಂದ, ಅಣ್ಣಾ, ಲಂಕೇಶ್ವರನಾದ ನಿನ್ನ ತಮ್ಮನಾಗಿ, ಬಂಧುವಾಗಿ ಹೇಳುತ್ತಿದ್ದೇನೆ. ನನ್ನ ಮಾತನ್ನು ಕೇಳಿ ಉಚಿತವಾದುದನ್ನು ಮಾಡು" ಎಂದ.

ವಿಭೀಷಣನ ಹಿತಕರವಾದ, ಯುಕ್ತಿಸಂಗತವಾದ, ಮಹಾಲಾಭವನ್ನು ಉಂಟುಮಾಡುವ ಕಾರ್ಯಸಾಧಕವಾದ ಮಾತುಗಳು ರಾವಣನಿಗೆ ರುಚಿಸಲಿಲ್ಲ.

"ವಿಭೀಷಣಾ, ಸೀತೆಯಿಂದ ನಮಗೆ ಯಾವ ಭಯವೂ ಇಲ್ಲ. ಆ ರಾಮನು ದೇವತೆಗಳ ಒಡೆಯನಾದ ಇಂದ್ರನಿಂದಲೇ ಸಹಾಯವನ್ನು ಪಡೆದು ಬಂದರೂ ಸಹ ನನ್ನ ಇದಿರಿಗೆ ನಿಲ್ಲಲಾರ. ಆ ರಾಮನನ್ನು ಹೊಸಕಿ ಹಾಕುವುದು ಎಷ್ಟರ ಕೆಲಸ. ಇರಲಿ–ಈಗ ನೀನು ಹೋಗು" ಎಂದು ರಾವಣ ವಿಭೀಷಣನನ್ನು ಕಳಿಸಿದ. ರಾವಣನ ಮನಸ್ಸು ಅಶಾಂತಿಯಿಂದ ಕುದಿಯುತ್ತಿತ್ತು. ಅತ್ಯಂತ ಕಾಮಮೋಹಿತನಾದ ಆ ರಾವಣ ಯುದ್ಧಕಾಲ ಸನ್ನಿಹಿತವಾದಾಗ ಮಾಡಬೇಕಾದುದನ್ನು ನಿರ್ಣಯಿಸುವ ಸಲುವಾಗಿ ಸುವರ್ಣಮಯವಾದ ರಥದಲ್ಲಿ ಕುಳಿತು ಸಭಾಭವನದತ್ತ ತೆರಳಿದ. ಹತ್ತು ತಲೆಗಳಲ್ಲೂ ದೇದೀಪ್ಯಮಾನವಾದ ರತ್ನಕಿರೀಟ ಜ್ವಲಿಸುತ್ತಿತ್ತು. ತಲೆಯಮೇಲೆ ಚಿನ್ನದ ಹಿಡಿಯುಳ್ಳ ಬೆಳ್ಗೊಡೆ ವಿರಾಜಿಸುತ್ತಿತ್ತು. ಅಕ್ಕಪಕ್ಕದಲ್ಲಿ ಚಾಮರ, ವ್ಯಜನ ಬೀಸಲ್ಪಡುತ್ತಿತ್ತು.

ರಾವಣ ಸಭಾಭವನದತ್ತ ಹೋದಾಗ ಅವನ ಮುಂದೆ ಹಿಂದೆ ಸಹಸ್ರಾರು ರಾಕ್ಷಸರು ಹೋಗುತ್ತಿದ್ದರು.

ಮಾರ್ಗದಲ್ಲಿ ಅವನನ್ನು ಕಂಡ ರಾಕ್ಷಸರೆಲ್ಲ ಕೈಮುಗಿದು ಅಭಿವಾದನ ಮಾಡುತ್ತಿದ್ದರು. ಹೀಗೆ ಎಲ್ಲರಿಂದ ಸೇವ್ಯನಾಗಿ ರಾವಣ ವಿಶ್ವಕರ್ಮನಿಂದ ನಿರ್ಮಿತವಾದ ಸಭಾಭವನವನ್ನು ಪ್ರವೇಶಿಸಿದ.

ಆ ಸಭೆ ವಜ್ರ ವೈಢೂರ್ಯ, ರತ್ನ, ಗೋಮೇಧಿಕ, ಪುಷ್ಯರಾಗ, ಮರಕತ ಮುಂತಾದ ನವರತ್ನಗಳಿಂದ ನಿರ್ಮಿಸಲ್ಪಟ್ಟಿತ್ತು. ಅದನ್ನು ಪ್ರವೇಶಿಸಿದ ರಾವಣ, ಸಭಾಮಧ್ಯದಲ್ಲಿ ಅತ್ಯಂತ ಸುಂದರವಾಗಿ ನಿರ್ಮಿಸಿದ್ದ ವೈಢೂರ್ಯಮಯವಾದ ಆಸನದಲ್ಲಿ ಮಂಡಿಸಿದ. ಸುತ್ತಲೂ ಇದ್ದ ರಾಕ್ಷಸರನ್ನು ಕುರಿತು, "ಅತಿಶೀಘ್ರವಾಗಿ ಮಂತ್ರಾಲೋಚನೆಗಾಗಿ ರಾಕ್ಷಸಪ್ರಮುಖರನ್ನು ಇಲ್ಲಿಗೆ ಬರಮಾಡಿ" ಎಂದು ಆಜ್ಞಾಪಿಸಿದ.

ಅದರಂತೆ ರಾಕ್ಷಸರು ರಾವಣನ ಆಜ್ಞೆಯನ್ನು ಲಂಕೆಯ ಬೀದಿ ಬೀದಿಯಲ್ಲೂ ಸಾರಿದರು.

ರಾವಣನ ಆಜ್ಞೆಯನ್ನು ಕೇಳಿದ್ದೇ ತಡ ಎಲ್ಲ ರಾಕ್ಷಸರೂ ತಂಡ ತಂಡವಾಗಿ ಸಭಾ ಭವನ್ನವನ್ನು ಪ್ರವೇಶಿಸತೊಡಗಿದರು. ಕೆಲವರು ಸುವರ್ಣಮಯವಾದ ರಥವೇರಿ ಬಂದರು. ಇನ್ನೂ ಕೆಲವರು ಕುದುರೆಯನ್ನೇರಿ ಬಂದರು. ಇನ್ನಿತರರು ಕಾಲುನಡಿಗೆಯಲ್ಲಿ ಬಂದರು. ಎಲ್ಲರೂ ರಾವಣನಿಗೆ ವಂದಿಸಿ ತಮ್ಮತಮ್ಮ ಆಸನದಲ್ಲಿ ಕುಳಿತರು.

ಸುವರ್ಣಮಯವಾದ ರಥದಲ್ಲಿ ಕುಳಿತು ವಿಭೀಷಣನೂ ಆಗಮಿಸಿದ. ಸಭೆಯನ್ನು ಪ್ರವೇಶಿಸಿ ವಿನಯದಿಂದ ಧರ್ಮಾತ್ಮನಾದ ವಿಭೀಷಣ ರಾವಣನ ಕಾಲುಗಳನ್ನು ಮುಟ್ಟಿ "ನಾನು ವಿಭೀಷಣ, ನಮಸ್ಕರಿಸುತ್ತಿದೇನೆ" ಎಂದು ಅಭಿವಾದನ ಮಾಡಿದ.

ರಾವಣನಿಂದ ಕೊಡಲ್ಪಟ್ಟ ಆಸನದಲ್ಲಿ ಕುಳಿತ. ರಾವಣನ ಸುತ್ತಲೂ ಪ್ರಹಸ್ತ, ಶುಕ, ಸಾರಣ, ಇಂದ್ರಜಿತ್ ಮುಂತಾದ ರಾಕ್ಷಸ ವೀರರು ಅವರವರ ಆಸನಗಳಲ್ಲಿ ಕುಳಿತರು.
ಅಷ್ಟವಸುಗಳ ಮಧ್ಯೆ ಕುಳಿತ ದೇವೇಂದ್ರನಂತೆ ರಾವಣನು ರಾಕ್ಷಸರ ನಡುವೆ ಕುಳಿತಿದ್ದ.

ರಾಕ್ಷಸರಿಂದ ಸೇವ್ಯನಾಗಿ ಕುಳಿತ ರಾವಣನು ಸಭೆಗೆ ಎಲ್ಲರೂ ಬಂದಿರುವುದನ್ನು ಕಂಡು ಎದ್ದು ನಿಂತ. ಸೀತಾ ನಿಮಿತ್ತವಾದ ವೇದನೆ ಅವನನ್ನು ಹಿರಿಯುತ್ತಿತ್ತು. ಕಾಮಕ್ಕೆ ವಶನಾದ ಆ ರಾವಣ, "ಸಭಾಸದರೆ, ಧರ್ಮ, ಅರ್ಥ, ಕಾಮ, ಈ ಮೂರನ್ನೂ ಸರಿಯಾದ ಕ್ರಮದಲ್ಲಿ ಸಾಧಿಸಬೇಕಾದುದು ಧರ್ಮವಾಗಿದೆ. ಇದುವರೆಗೆ ನಿಮ್ಮಿಂದ ಸಹಾಯ ಹೊಂದಿದ ನಾನು ಯಶಸ್ವಿಯಾಗಿ ಕಾರ್ಯವನ್ನೆಲ್ಲ ನಿರ್ವಹಿಸಿದ್ದೇನೆ. ಈಗ ನಮ್ಮ ಮುಂದೆ ಬಂದಿರುವ ಸಮಸ್ಯೆಯನ್ನು ವಿಚಾರಿಸಬೇಕಾಗಿದೆ. ಇದಕ್ಕೆ ಮುನ್ನ ನಾ ಹಿಂದೆ ಮಾಡಿದ ಕೆಲಸವನ್ನು ನಿಮಗೆ ತಿಳಿಸಬೇಕಾಗಿದೆ. ಈ ಮೊದಲೇ ಅದನ್ನು ತಿಳಿಸಬೇಕು ಎಂದಿದ್ದೆ. ಆದರೆ ಮಹಾಬಲಿಯಾದ ನನ್ನ ತಮ್ಮ ಕುಂಭಕರ್ಣ ಮಲಗಿದ್ದ. ಈಗ ಆರು ತಿಂಗಳು ಪೂರ್ಣ ನಿದ್ರೆಯನ್ನು ಮುಗಿಸಿ ಇದೀಗ ಅವನೂ ಸಭೆಗೆ ಬಂದಿದಾನೆ. ಆದ್ದರಿಂದ, ಈಗ ನನ್ನ ವಿಷಯವನ್ನು ನಿಮ್ಮ ಮುಂದೆ ಹೇಳುವುದು ಸರಿಯಾಗುತ್ತದೆ.

"ಈಗ ಕೆಲವು ತಿಂಗಳುಗಳ ಹಿಂದೆ ರಾಮಪತ್ನಿಯಾದ ಸೀತೆಯನ್ನು ಜನಸ್ಥಾನದಿಂದ ಕರೆತಂದೆ. ಅವಳಂಥ ಸೌಂದರ್ಯವತಿಯನ್ನು ನಾ ಎಲ್ಲೂ ಕಂಡಿಲ್ಲ. ಅವಳಲ್ಲಿ ನನ್ನ ಮನಸ್ಸು ನೆಟ್ಟಿದೆ. ಆದರೆ, ಸೀತೆಯೇ ನನ್ನನ್ನು ವರಿಸಲು ಇಚ್ಛಿಸುವುದಿಲ್ಲ. ನಾನು ಅವಳನ್ನು ಬಿಡಲಾರೆ. ಸಾಕ್ಷಾತ್ ಮಯನ ಮಾಯೆಯೇ ಸೀತೆಯ ರೂಪನ್ನು ಧರಿಸಿದೆಯೋ ಎಂಬಂತಿದೆ ಆಕೆಯ ರೂಪ. ಈ ಮಧ್ಯೆ ನಾನು ಸೀತೆಯನ್ನು ಅದೆಷ್ಟೋ ಸಾರಿ ಕೇಳಿಕೊಂಡೆ. ಆದರೆ ಅವಳು ಒಪ್ಪಲಿಲ್ಲ. ಸೀತೆ ಕೇಳಿದಂತೆಯೇ ನಾನು ಅವಳಿಗೆ ಒಂದು ವರ್ಷ ಅವಧಿಯನ್ನು ಕೊಟ್ಟಿದೇನೆ. . . , "

ಇಲ್ಲಿ ರಾವಣ ತನ್ನ ತಪ್ಪನ್ನು ಮುಚ್ಚಿಕೊಳ್ಳುವ ಸಲುವಾಗಿ ಸುಳ್ಳು ಹೇಳುತ್ತಿದಾನೆ. ಸೀತೆ ಯಾವಾಗಲೂ ರಾವಣನನ್ನು "ಒಂದು ವರ್ಷ ಅವಧಿ ಕೊಡು !" ಎಂದು ಕೇಳಿಲ್ಲ. ರಾವಣನೇ ಅರಣ್ಯಕಾಂಡದಲ್ಲಿ, ಸುಂದರಕಾಂಡದಲ್ಲಿ, ಹೇಳಿದಂತೆ ಸೀತೆಗೆ ಒಂದು ವರ್ಷ ಅವಧಿಯನ್ನು ಕೊಟ್ಟು, ಅಷ್ಟರಲ್ಲಿ ನನ್ನವಳಾಗದಿದ್ದರೆ ನಿನ್ನನ್ನು ಕೊಂದು ತಿನ್ನುತ್ತೇನೆ" ಎಂದು ಹೇಳಿದ್ದ.

ಇಲ್ಲಿ ರಾವಣ ಅಸತ್ಯವನ್ನು ಹೇಳಿದ, ತನ್ನ ತಪ್ಪನ್ನು ಮುಚ್ಚಿಕೊಳ್ಳುವ ಸಲುವಾಗಿ.

ಮುಂದುವರೆದು ರಾವಣ"ಸಭಾಸದರೆ, ಈಗ ರಾಮನು ಸೈನ್ಯದೊಂದಿಗೆ ಸಮುದ್ರತೀರದಲ್ಲಿ ಬೀಡು ಬಿಟ್ಟಿದಾನೆ. ಅವನು ನನಗೆ ಯಾವ ವಿಧದಲ್ಲೂ ಸಾಟಿಯಲ್ಲ. ಆದರೂ, ಯುದ್ಧ ಒದಗುವ ಪ್ರಸಂಗ ಬಂದಾಗ, ನಿಮ್ಮ ಅಭಿಪ್ರಾಯವನ್ನು ಕೇಳಲು ಈ ಸಭೆಯನ್ನು ಸೇರಿಸಿದೆ.

"ಹಿಂದೆ ದೇವತೆಗಳೊಡನೆ ಯುದ್ಧಮಾಡುವಾಗಲೂ ಇದೇ ರೀತಿ ನಿಮ್ಮ ಸಲಹೆಯನ್ನು ಕೇಳಿಯೇ ಯುದ್ಧಮಾಡಿದೆ. ಅದರಂತೆ ನಾನು ವಿಜಯಿಯಾದೆ. ಹಾಗೆಯೇ ಈಗಲೂ ನಿಮ್ಮನು ಕೇಳುತ್ತಿದೇನೆ. ಸೂಕ್ತವಾದ ಸಲಹೆಯನ್ನು ಕೊಡಿ" ಎಂದ ರಾವಣ

ರಾವಣನ ಮಾತನ್ನು ಕೇಳಿದ ಕುಂಭಕರ್ಣನಿಗೆ ಸಹಿಸಲಸಾಧ್ಯವಾದ ಕೋಪಬಂದಿತು. ಕ್ರುದ್ಧನಾದ ಆತ "ಅಣ್ಣಾ, ನೀ ಹೇಳುತ್ತಿರುವುದನ್ನು ಕೇಳಿದೆ. ನಿನ್ನ ಮಾತುಗಳು ಸರಿಯಾಗಿಲ್ಲ. ಮೊದಲು ಮಾಡಬೇಕಾದ ಕಾರ್ಯವನ್ನು ಆಮೇಲೆ ಮಾಡಿ, ಆಮೇಲೆ ಮಾಡುವಂಥ ಕಾರ್ಯವನ್ನು ಮೊದಲು ಮಾಡಿರುವೆ. ನೀನು ಜನಸ್ಥಾನದಿಂದ ಸೀತೆಯನ್ನು ಕದ್ದು ತರುವಾಗಲೇ ಏಕೆ ನಮ್ಮೆಲ್ಲರೊಡನೆ ಮಂತ್ರಾಲೋಚನೆ ನಡೆಸಲಿಲ್ಲ. ಆಗ ನಮ್ಮನ್ನು ಕೇಳದೆ ನಿನ್ನ ಮನ ಬಂದಂತೆ ನಡೆದುಕೊಂಡೆ. ಈಗ ಮಂತ್ರಾಲೋಚನೆ ಕೇಳುತ್ತಿರುವೆ. ಅಣ್ಣಾ ! ರಾಮನು ಸಾಮಾನ್ಯನಲ್ಲ. ಮಹಾಪರಾಕ್ರಮಿ. ಅವನನ್ನು ಜಯಿಸುವವರು ಯಾರೂ ಇದುವರೆಗೆ ಹುಟ್ಟಿಲ್ಲ. ತೀಕ್ಷ್ಣವಾದ ರಾಮಬಾಣಗಳು ಖಂಡಿತವಾಗಿ ಲಂಕೆಯನ್ನು ನಾಶಮಾಡಿಯೇ ತೀರುತ್ತವೆ" ಎಂದ.

ಅದುವರೆಗೆ ಕುಂಭಕರ್ಣ ಸಾತ್ವಿಕ ಸ್ವಭಾವವನ್ನು ಹೊಂದಿದ್ದ. ಆದ್ದರಿಂದ ರಾವಣನಿಗೆ ಸರಿಯಾದ ಕ್ರಮದಲ್ಲಿ ತಿಳಿಸಿ ಹೇಳಿದ. ವಾಸ್ತವದಲ್ಲಿ ಕುಂಭಕರ್ಣ ತಮೋಗುಣದ ಪ್ರತೀಕ. ಸ್ವಲ್ಪ ಕಾಲದ ನಂತರ ಆ ತಮೋಗುಣ ಅವನಲ್ಲಿ ತಲೆದೋರಿತು. ಆಗ ಕುಂಭಕರ್ಣ, "ರಾವಣ, ರಾಮನು ಸಮರದಲ್ಲಿ ದುರ್ಜಯ ಎಂಬುದೇನೋ ಸರಿ. ಆದರೆ ನನ್ನ ಇದಿರಿಗೆ ಅವನು ನಿಲ್ಲಲಾರ. ನಾ ಒಬ್ಬನೇ ಹೋಗಿ ರಾಮ, ಲಕ್ಷ್ಮಣ, ಸುಗ್ರೀವರನ್ನೂ, ಸಮಸ್ತವಾನರ ಸೈನ್ಯವನ್ನೂ ನಿರ್ಮೂಲ ಮಾಡಿ ಬರುತ್ತೇನೆ. ನಾನು ರಾಮನನ್ನು ಇದಿರಿಸಲು ಹೋದರೆ ರಾಮ ಒಂದು ಬಾಣವನ್ನು ಬಿಡುತ್ತಾನೆ. ರಾಮ ಮತ್ತೊಂದು ಬಾಣವನ್ನು ತೆಗೆಯುವಷ್ಟರಲ್ಲಿ ಅವನ ಮೇಲೆ ಹಾರಿ ಅವನನ್ನು ಕೊಂದು ಬರುತ್ತೇನೆ. ನೀನು ನಿಶ್ಚಿಂತನಾಗಿ ಮಾಂಸವನ್ನು ತಿಂದು, ವಾರುಣಿಯನ್ನು ಸೇವಿಸಿ ಸುಖಿಸು. ನಾನು ಇರುವಾಗ ನಿನಗೆ ಭಯ ಎಂಬುದೇ ಬೇಡ" ಎಂದು ಹೇಳಿದ.

ವಿಭೀಷಣ, ರಾವಣ. ಕುಂಭಕರ್ಣ—ಈ ಮೂವರೂ ಕ್ರಮವಾಗಿ ಸತ್ವ, ರಜಸ್, ತಮೋಗುಣಗಳ ಪ್ರತೀಕರಾಗಿದ್ದಾರೆ. ವಿಭೀಷಣ ಶುದ್ಧ ಸತ್ವಗುಣವುಳ್ಳವ. ಯಾವ ಕಾಲದಲ್ಲೂ ಅವನ ಮನಸ್ಸು ಸತ್ಯದಿಂದ, ಧರ್ಮಮಾರ್ಗದಿಂದ ವಿಚಲಿತವಾಗದು.

ರಾವಣನೋ ಅಹಂಕಾರ, ದರ್ಪ, ಡಾಂಭಿಕತನದ ಸ್ವರೂಪ ; ರಜೋಗುಣದ ನೆಲೆಯೇ ಅವನು.

**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಂ**

ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳಿದಂತೆ ದೀರ್ಘನಿದ್ರೆ, ಆಲಸ್ಯ, ಮೋಹ ಇವುಗಳಿಂದ ಕೂಡಿದ ಕುಂಭಕರ್ಣ ತಮೋಗುಣದ ಪ್ರತೀಕವೆನಿಸಿದ್ದಾನೆ. ಆದ್ದರಿಂದಲೇ, ಅವನಿಗೆ ರಾಮನ ಬಗ್ಗೆ ತಿಳಿದಿದ್ದರೂ, ರಾಮ ಶ್ರೇಷ್ಠ, ಅವನಿಗೆ ಸಮಾನರಿಲ್ಲ ಎಂಬ ಜ್ಞಾನವಿದ್ದರೂ, ಆ ಜ್ಞಾನ ತಮಸ್ಸು ಅಂದರೆ ಅಜ್ಞಾನದಿಂದ ಆವೃತವಾಗಿತ್ತು. ಆದ್ದರಿಂದಲೇ ವಿಭೀಷಣನಂತೆ ಅವನು ರಾಮನಪಕ್ಷ ಸೇರಲಿಲ್ಲ.

ರಾವಣನನ್ನು ಪ್ರಸನ್ನ ಗೊಳಿಸುವ ಸಲುವಾಗಿ ಮಹಾಪಾರ್ಶ್ವನೆಂಬ ರಾಕ್ಷಸ ಎದ್ದ. "ಮಹಾಪ್ರಭು, ಪ್ರಪಂಚವನ್ನೇ ಆಳುತ್ತಿರುವ ನಿಮ್ಮ ಇದಿರಿಗೆ ಯಾರು ನಿಲ್ಲಲು ಸಾಧ್ಯ ? ನೀವು ಮಹಾಪರಾಕ್ರಮಿಗಳಲ್ಲವೇ ? ನಿಮ್ಮ ಇಷ್ಟಕ್ಕೆ ಯಾರು ಅಡ್ಡಿ ಮಾಡುವರು ? ಆ ಸೀತೆಗಾಗಿ ಏಕೆ ಇಷ್ಟು ಕಾಯಬೇಕು ? ಈಗಲೇ ಹೋಗಿ ಅವಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ರಮಿಸಿ,

ರಾಮಲಕ್ಷ್ಮಣರನ್ನು ನಾವು ನೋಡಿಕೊಳ್ಳುತ್ತೇವೆ. ಅತಿಬಲಿಗಳಾದ ಇಂದ್ರಜಿತು, ಕುಂಭಕರ್ಣ ಇವರು ನಿಮ್ಮ ಸಹಾಯಕ್ಕಿರುವಾಗ ಯೋಚಿಸುವ ಅಗತ್ಯವೇ ಇಲ್ಲ. ಹೋಗಿ ಸೀತೆಯನ್ನು ಬಲಾತ್ಕಾರದಿಂದಲಾದರೂ ಭೋಗಿಸು" ಎಂದ.

ಮಹಾಪಾರ್ಶ್ವನ ಮಾತನ್ನು ಕೇಳಿದ ರಾವಣ "ಮಂತ್ರಿಗಳೆ. ಇದುವರೆಗೆ ನನ್ನ ಜೀವನದಲ್ಲಿ ನಡೆದ ಒಂದು ಘಟನೆಯನ್ನು ರಹಸ್ಯವಾಗಿಟ್ಟಿದ್ದೆ ಈಗ ಅದನ್ನು ನಿಮ್ಮ ಎದುರಿಗೆ ಹೇಳುತ್ತೇನೆ, ಕೇಳಿ. ಹಿಂದೆ ಪುಂಜಿಕಸ್ಥಲಿ ಎಂಬ ರೂಪವತಿಯಾದ ಅಪ್ಸರೆ ಬ್ರಹ್ಮಲೋಕಕ್ಕೆ ಹೋಗುತ್ತಿದ್ದಳು. ಮಾರ್ಗದಲ್ಲಿ ನಾನು ಅವಳನ್ನು ತಡೆದೆ. ಬಲಾತ್ಕಾರದಿಂದ ಅವಳೊಡನೆ ರಮಿಸಿದೆ. ಅನಂತರ ಪುಂಜಿಕಸ್ಥಲಿ ಆನೆಯಿಂದ ಕಿತ್ತೊಗೆಯಲ್ಪಟ್ಟ ಕಮಲಿನಿಯಂತೆ ಬ್ರಹ್ಮನ ಬಳಿಗೆ ಹೋದಳು. ಬ್ರಹ್ಮದೇವನು ಅಪ್ಸರೆಯ ಶೋಚನೀಯ ಸ್ಥಿತಿಯನ್ನು ಕಂಡು ಕುಪಿತನಾಗಿ ನನಗೆ ಶಾಪಕೊಟ್ಟ. "ಇನ್ನು ಮುಂದೆ ಬಲಾತ್ಕಾರದಿಂದ ನೀನು ಯಾವಸ್ತ್ರೀಯೊಡನೆಯೂ ಸಮಾಗಮ ಮಾಡಕೂಡದು. ಹಾಗೆ ಮಾಡಿದರೆ ನಿನ್ನ ತಲೆ ನೂರು ಹೋಳಾಗಿ ಸಿಡಿದುಹೋಗುವುದು" ಎಂದು ಶಪಿಸಿದ. ಅಂದಿನಿಂದ ನಾನು ಬ್ರಹ್ಮನ ಶಾಪಕ್ಕೆ ಅಂಜಿ ಯಾವ ಸ್ತ್ರೀಯನ್ನೂ ಬಲಾತ್ಕಾರವಾಗಿ ಭೋಗಿಸುವಂತಿಲ್ಲ.

"ಆ ರಾಮ ನನ್ನನ್ನು ಸಾಮಾನ್ಯ ರಾಕ್ಷಸ ಎಂದು ತಿಳಿದಿರುವಂತಿದೆ. ಎಂತೆಂಥವರನ್ನೋ ಜಯಿಸಿದ ನನಗೆ ಈ ಮಾನುಷರು ಎಷ್ಟು ಮಾತ್ರ! ನನ್ನ ಪರಾಕ್ರಮವನ್ನು ಅರಿತಿದ್ದರೆ ರಾಮ ಇಲ್ಲಿಯವರೆಗೆ ಬರುವ ಸಾಹಸವನ್ನೇ ಮಾಡುತ್ತಿರಲಿಲ್ಲ. ಈಗಲೂ ಬರಲಿ ಅವನು ನಾ ನೋಡಿಕೊಳ್ಳುತ್ತೇನೆ'' ಎಂದ ರಾವಣ.

ರಾವಣನ ಡಾಂಭಿಕಮಾತುಗಳನ್ನು ಕೇಳಿದ, ವಿಭೀಷಣ. ಅವನಿಂದ ಇನ್ನು ಸಹಿಸಲಾಗಲಿಲ್ಲ. ಎದ್ದು ನಿಂತು ರಾವಣನಿಗೆ ನಮಿಸಿ "ರಾಜನ್, ಸೀತೆಯನ್ನು ಸ್ತ್ರೀ ಎಂದು ತಿಳಿದಿರುವೆಯಾದರೆ ಅದು ತಪ್ಪು. ಸೀತೆ ನಿಜವಾಗಿ ಕಾಲಸರ್ಪ, ಘೋರವಾದ ಕಾಲಸರ್ಪವೇ ಸೀತೆಯ ರೂಪದಲ್ಲಿದೆ ಎಂದು ತಿಳಿ. ಸೀತೆಯ ಚಿಂತೆಯೇ ವಿಷ. ಆಕೆಯ ಉಚ್ಛ್ವಾಸ, ನಿಶ್ವಾಸವೇ ಸರ್ಪದ ಬುಸುಗುಟ್ಟುವಿಕೆ. ಆಕೆಯ ಐದು ಬೆರಳುಗಳೇ ಐದು ಹೆಡೆಗಳು. ಇಂಥ ಕ್ರೂರವಾದ ಸರ್ಪದೊಡನೆ ನೀನು ಸರಸವಾಡಲು ಹೊರಟಿರುವೆ. ಎಷ್ಟುಬೇಗ ಈ ಸರ್ಪವನ್ನು ಬಿಡುಗಡೆ ಮಾಡುವೆಯೋ ಅಷ್ಟೂ ನಿನಗೆ ಒಳ್ಳೆಯದು. ನಾ ಹೇಳುವುದನ್ನು ಕೇಳು ನಖದಂಷ್ಟ್ರಾಯುಧಗಳಿಂದ ಕೂಡಿದ ವಾನರಸೈನ್ಯ ಲಂಕೆಯನ್ನು ಮುಟ್ಟುವ ಮೊದಲು ಸೀತೆಯನ್ನು ರಾಮನಿಗೆ ಒಪ್ಪಿಸಿಬಿಡು.

ರಾಮಬಾಣದಿಂದ ನೀನು ಭೂಮಿಗೆ ಉರುಳುವ ಮೊದಲೇ ವಿವೇಕವನ್ನು ತಂದುಕೊಂಡು ಸೀತೆಯನ್ನು ದಾಶರಥಿಗೆ ಅರ್ಪಿಸು. ಈ ಕುಂಭಕರ್ಣ, ಮಹಾಪಾರ್ಶ್ವ, ನಿಕುಂಭ, ಇಂದ್ರಜಿತ್, ಪ್ರಹಸ್ತ ಇವರು ಯಾರೂ ನಿನ್ನನ್ನು ರಾಮಬಾಣದಿಂದ ಉಳಿಸಲಾರರು, ಇದು ಖಂಡಿತ. ನನ್ನ ಮಾತನ್ನು ಕೇಳಿ ಶೀಘ್ರವಾಗಿ ರತ್ನವನ್ನೂ, ಒಡವೆಯನ್ನೂ, ಚಂದನ, ಅಗರು ಮುಂತಾದ ಸುಗಂಧ ದ್ರವ್ಯಗಳನ್ನೂ, ವಿವಿಧವಾದ ವಸ್ತ್ರಗಳನ್ನೂ ಜೊತೆಯಲ್ಲಿ ತೆಗೆದುಕೊಂಡು ಸೀತೆಯನ್ನು ರಾಮನಿಗೆ ಒಪ್ಪಿಸಿ ಜೀವಲಾಭವನ್ನು ಪಡೆ" ಎಂದು ವಿಭೀಷಣ ಸಾರ್ಥಕವೂ, ಹಿತಕರವೂ ಆದ ಮಾತುಗಳಿಂದ ತಿಳಿಯಪಡಿಸಿದ.

ಮತ್ತೆ ಹೇಳಿದ, ''ರಾಜನ್, ನಿನ್ನನ್ನು ಈ ರಾಕ್ಷಸರು ರಾಮನಿಂದ ರಕ್ಷಿಸುತ್ತಾರೆ ಎಂದು ತಿಳಿದುಕೊಂಡಿದ್ದರೆ ಅದು ಶುದ್ಧ ತಪ್ಪಾದೀತು. ಈ ರಾಕ್ಷಸರು ನಿನ್ನನ್ನು ಸರ್ವಥಾ ರಾಮನಿಂದ

ಕಾಪಾಡಲಾರರು. ಸಾಕ್ಷಾತ್ ಸೂರ್ಯನೇ ನಿನ್ನನ್ನು ಕಾಪಾಡಲು ಬಂದರೂ, ಸಮಸ್ತ ದೇವತೆಗಳೇ ನಿನ್ನ ಬೆಂಬಲಕ್ಕೆ ಬಂದರೂ, ನೀನು ಆಕಾಶದಲ್ಲಾಗಲೀ, ಪಾತಾಳದಲ್ಲಾಗಲೀ ಅಡಗಿದರೂ ಆ ರಾಮ ಬಾಣ ನಿನ್ನನ್ನು ಸುಮ್ಮನೆ ಬಿಡದು. ಆದ್ದರಿಂದ ವ್ಯರ್ಥವಾದ ಕಾರ್ಯವನ್ನು ಮಾಡುವುದರಿಂದ ಲಾಭವಿಲ್ಲ. ರಾಮನು ತನ್ನ ಧನುಸ್ಸಿನಲ್ಲಿ ಬಾಣವನ್ನು ಹೂಡುವ ಮೊದಲೇ ನೀನು ಸೀತೆಯನ್ನು ರಾಮನಿಗೆ ಒಪ್ಪಿಸಿಬಿಡು" ಎಂದು ರಾವಣ ಬದುಕುವ ದಾರಿಯನ್ನು ತೋರಿಸಿದ.

ವಿಭೀಷಣನ ಮಾತನ್ನು ಕೇಳಿದ ಪ್ರಹಸ್ತ ನಾವು ಇದುವರೆಗೆ ದೇವತೆಗಳನ್ನೂ, ದಾನವರನ್ನೂ, ಯಕ್ಷರನ್ನೂ, ಗಂಧರ್ವರನ್ನೂ ಎದುರಿಸಿದ್ದೇವೆ. ಅಂಥವರನ್ನೇ ನಾವು ಸೋಲಿಸಿರುವಾಗ ಸಾಮಾನ್ಯ ಮಾನವರಾದ ರಾಮ ಲಕ್ಷ್ಮಣರ ಪಾಡೇನು ? ಇದುವರೆಗೆ ನಾವು ಭಯವನ್ನೇ ಕಂಡರಿಯವು. ಆದ್ದರಿಂದ, ನಾವು ರಾಮನಿಗಾಗಿ ಭಯಪಡುವ ಅಗತ್ಯವಿಲ್ಲ ಎಂದ

ವಿಭೀಷಣ, "ಪ್ರಹಸ್ತಾ ನೀನು ಯುಕ್ತಾಯುಕ್ತವನ್ನು ವಿವೇಚಿಸದೆ ಮಾತನಾಡುತ್ತಿರುವೆ ? ಪಾಪಿಯಾದವನಿಗೆ ಹೇಗೆ ಸ್ವರ್ಗಪ್ರವೇಶವೇ ಅಶಕ್ಯವೋ ಹಾಗೆ ರಘುವೀರನ ಬಲವನ್ನು ತಿಳಿಯಲು ನೀನು ಅಸಮರ್ಥನಾಗಿರುವೆ.

"ಇದುವರೆಗೆ ರಾಮನ ತೀಕ್ಷ್ಣವಾದ ಸೂರ್ಯಸಮಾನ ಬಾಣಗಳು ನಿನ್ನ ದೇಹವನ್ನು ಹೊಕ್ಕಿಲ್ಲ. ಆದುದರಿಂದಲೇ ಹೀಗೆ ವ್ಯರ್ಥವಾಗಿ ಬಡಬಡಿಸುತ್ತಿರುವೆ. ನೀ ಹೇಳುವಂತೆ ಕುಂಭಕರ್ಣನೇ ಆಗಲಿ, ಮೇಘನಾದನೇ ಅಗಲಿ, ದೇವಾಂತಕ, ನರಾಂತಕ. ಅತಿಕಾಯ, ಕುಂಭ, ನಿಕುಂಭ ಮುಂತಾದ ಯಾವ ರಾಕ್ಷಸರೇ ಆದರೂ ರಾಮನನ್ನು ಕೊಲ್ಲುವುದಿರಲಿ, ರಾಮನನ್ನು ಇದಿರಿಸಲೇ ಅಶಕ್ತರು.

"ಮಹಾರಾಜನಾದ ಈ ರಾವಣ ಈಗ ಕಾಮವ್ಯಸನದಲ್ಲಿ ಸಿಲುಕಿದ್ದಾನೆ. ಅಂಥವನನ್ನು ಆ ವ್ಯಸನದಿಂದ ಬಿಡಿಸಬೇಕಾದುದು ಅವನ ಹಿತೈಷಿಗಳಾದ ನಮ್ಮೆಲ್ಲರ ಕರ್ತವ್ಯ. ಪ್ರಹಸ್ತ, ಸರಿಯಾದ ನೀತಿಯನ್ನು ಹೇಳುತ್ತೇನೆ ಕೇಳು. ಇದು ವರೆಗೆ ನೀವೆಲ್ಲ ರಾವಣನ ಉಪ್ಪನ್ನು ತಿಂದು ನಿಮ್ಮ ಶರೀರವನ್ನು ಬೆಳಸಿಕೊಂಡಿದೀರಿ. ಈಗ ನೀವು ಸರಿಯಾದ ಕಾಲದಲ್ಲಿ ರಾಜನಿಗೆ ಹಿತವನು ಮಾಡಬೇಕು ಮಹಾರಾಜನಾದ ರಾವಣ ರಾಮವೈರವೆಂಬ ಕ್ರೂರವಾದ ಸರ್ಪದ ಪಾಶಕ್ಕೆ ಸಿಕ್ಕಿಬಿದ್ದಿದಾನೆ, ಅವನನ್ನು ಆ ಸರ್ಪಪಾಶದಿಂದ ಬಿಡಿಸುವುದು ನಿಮ್ಮೆಲ್ಲರ ಕರ್ತವ್ಯ. ವ್ಯರ್ಥವಾದ ರಾಮವೈರವೆಂಬ ಆಳವಾದ ಸಮುದ್ರದಲ್ಲಿ ರಾವಣ ಮುಳುಗುತ್ತಿದಾನೆ. ಅವನು ಮುಳುಗದಂತೆ ಮೇಲೆತ್ತಬೇಕಾದುದು ನಮ್ಮೆಲ್ಲರ ಹೊಣೆಯಾಗಿದೆ. ರಾವಣನನ್ನು ಈ ಮಹಾವ್ಯಸನದಿಂದ ಪಾರು ಮಾಡಬೇಕಾದರೆ ಒಂದೇ ಉಪಾಯ. ಸೀತೆಯನ್ನು ರಾಮನಿಗೆ ಸಮರ್ಪಿಸುವುದೇ ಅದು.

"ಪ್ರಹಸ್ತ, ನೀವೆಲ್ಲ ರಾವಣನನ್ನು ಬಲಾತ್ಕಾರದಿಂದಲಾದರೂ ಈ ಉಪಾಯಕ್ಕೆ ಒಪ್ಪಿಸಿ ಅವನ ಪ್ರಾಣ ಉಳಿಯುವಂತೆ ಮಾಡಿ.

"ಪ್ರಹಸ್ತ, ನೀನು ಮಂತ್ರಿಯಾಗಿರುವೆ. ಮಂತ್ರಿ ಎನಿಸಿಕೊಂಡವ ಸೂಕ್ಷ್ಮವಾಗಿ ಶತ್ರುವಿನ ಹಾಗೂ ತನ್ನ ಬಲವನ್ನು ಪರಿಶೀಲಿಸಬೇಕು. ಎರಡೂ ಪಕ್ಷಗಳ ಸ್ಥಿತಿಯನ್ನೂ, ಹಾನಿಯನ್ನೂ, ವೃದ್ಧಿಯನ್ನೂ ಕೂಲಂಕಷವಾಗಿ ವಿಚಾರಿಸಿ ನಿರ್ಧಾರಕ್ಕೆ ಬರಬೇಕು. ಅದೂ ಧರ್ಮಯುತವಾಗಿರಬೇಕು.

" ರಾಮನು ಧರ್ಮ, ಅರ್ಥ, ಕಾಮ, ಈ ಮೂರನ್ನೂ ಅವುಗಳ ರಹಸ್ಯವನ್ನೂ ಸರಿಯಾಗಿ ಅರಿತವನು. ಎಲ್ಲ ಪುರುಷಾರ್ಥಗಳಿಗೂ ಧರ್ಮವೇ ಮೂಲ ಎಂದು ಅರಿತು ಧರ್ಮದಲ್ಲೇ ನಾಗು ವಂಥ ಧರ್ಮಮೂರ್ತಿ. ಅವನನ್ನು ಇದಿರಿಸಿ ನಿಲ್ಲಲು ದೇವಾಧಿದೇವರಿಂದಲೂ ಸಾಧ್ಯವಿಲ್ಲ. ರಾಕ್ಷಸರಿಂದ ಸಾಧ್ಯವೇ ? ನೀವೆಲ್ಲ ರಾಜನಿಗೆ ಇದನ್ನು ಚೆನ್ನಾಗಿ ತಿಳಿಸಿ ಹೇಳಿ ಅವನನ್ನು ಉದ್ಧರಿಸಿ. ಅವನ ಉಪ್ಪನ್ನು ತಿಂದು ಅವನಿಗೇ ಎರಡು ಬಗೆಯ ಬೇಡಿ " ಎಂದ.

ವಿಭೀಷಣನ ಮಾತುಗಳನ್ನು ಕೇಳಿದ ಇಂದ್ರಜಿತು ವಿಭೀಷಣನನ್ನು ಕುರಿತು " ಚಿಕ್ಕಪ್ಪ, ನೀವು ರಾಮನಿಗೆ ಬಹಳ ಭಯಪಟ್ಟಿರುವಂತಿದೆ. ಆದ್ದರಿಂದಲೇ ಹೀಗೆ ಅಂಜಿಸುವ ಮಾತುಗಳನ್ನಾಡಿ ನಮ್ಮನ್ನು ಭಯಪಡಿಸಲು ತೊಡಗಿದ್ದೀರಿ. ವೀರ್ಯವಂತರಾದ ರಾಕ್ಷಸರ ಕುಲದಲ್ಲಿ ಜನಿಸಿದ ಯಾವ ರಾಕ್ಷಸನೂ ಇಂಥ ಭಯಹುಟ್ಟಿಸುವಂಥ ಹೇಡಿತನದ ಮಾತುಗಳನ್ನಾಡನು " ಎಂದು ಹೇಳಿ ಪುನಃ ರಾವಣನ ಕಡೆಗೆ ತಿರುಗಿ " ಅಪ್ಪಾಜಿ ! ಈ ವಿಭೀಷಣ ನಮ್ಮಕುಲದಲ್ಲಿ ತಪ್ಪಿ ಹುಟ್ಟಿದ ! ಬಲ ವೀರ್ಯ, ಪರಾಕ್ರಮ, ಧೈರ್ಯ, ಶೌರ್ಯ, ತೇಜಸ್ಸು ಇಲ್ಲದ ರಾಕ್ಷಸ ಎಂದರೆ ಈ ವಿಭೀಷಣ ಒಬ್ಬನೇ. ಆಗಿನಿಂದ ನಾನು ಒಂದೇ ಸಮನಾಗಿ ನೋಡುತ್ತಿದ್ದೇನೆ; ಆ ಹುಲು ಮನುಜರ ಪ್ರತಾಪ ವನ್ನೇ ಸ್ತೋತ್ರಮಾಡುತ್ತ ಬಂದಿದಾನೆ.

"ನನ್ನನ್ನು ಸಾಮಾನ್ಯ ಎಂದುಕೊಳ್ಳಬೇಡಿ. ಸಾಕ್ಷಾತ್ ದೇವರಾಜನಾದ ಇಂದ್ರನನ್ನು ಸೋಲಿಸಿ '' ಇಂದ್ರಜಿತ್ " ಎಂಬ ಖ್ಯಾತಿ ಪಡೆದೆ. ಇಂದ್ರನ ಆನೆಯಾದ ಐರಾವತದ ಎರಡು ದಂತಗಳನ್ನೂ ಮುರಿದು ಸ್ವರ್ಗದಿಂದ ಕೆಳಗೆ ಬೀಳುವಂತೆ ಮಾಡಿದೆ. ಸಮಸ್ತ ದೇವತೆಗಳೂ ದಾನವರೂ ನನ್ನನ್ನು ಕಂಡರೆ ಗಡಗಡನೆ ನಡುಗುತ್ತಿರುವಾಗ ರಾಕ್ಷಸರಿಗೆ ಆಹಾರಪ್ರಾಯರಾದ ಈ ಹುಲುಮಾನವರು ಒಂದು ಲೆಕ್ಕವೆ ನನಗೆ ? " ಎಂದು ತನ್ನ ಪರಾಕ್ರಮವನ್ನು ಹೊಗಳಿಕೊಂಡ, ಇಂದ್ರಜಿತು.

ಇಂದ್ರಜಿತ್ತಿನ ಮಾತುಗಳನ್ನು ಕೇಳಿದ ವಿಭೀಷಣ ಪುನಃ ಅವನನ್ನು ಕುರಿತು '' ಇಂದ್ರಜಿತು, ನೀ ಇನ್ನೂ ಬಾಲಕ. ರಾವಣನ ಮಗ ಎನಿಸಿಕೊಂಡು ನೀನೂ ಇತರ ರಾಕ್ಷಸರಂತೆಯೇ ಮೇಲು ನೋಟಕ್ಕೆ ಮಿತ್ರತ್ವದ ಸೋಗುಹಾಕಿ ಒಳಗೆ ರಾವಣನನ್ನು ನಾಶಮಾಡಲು ಯೋಚಿಸುತ್ತಿದ್ದೀಯೆ. ಆದ್ದರಿಂದಲೇ ಮಹಾಪರಾಕ್ರಮಿಯಾದ ರಾಘವನ ವಿಕ್ರಮವನ್ನು ಅರಿಯದೆ ಉಳಿದ ಮೂಢ ರಾಕ್ಷಸರಂತೆ ನೀನೂ ರಾವಣನ ವಿನಾಶವನ್ನೇ ಬಯಸುವ ಮಾತುಗಳನ್ನೇ ಅನುಮೋದಿಸು ತ್ತಿದ್ದೀಯ.

ಇಂದ್ರಜಿತ್, ನೀನು ಇನ್ನೂ ಎಳೆಯ. ನಿನ್ನ ಬುದ್ಧಿ ಇನ್ನೂ ಪಕ್ವವಾಗಿಲ್ಲ. ಸರಿಯಾಗಿ ಯಾವುದನ್ನು ಮಾಡಬೇಕು ಯಾವುದನ್ನು ಬಿಡಬೇಕು ಎಂಬುದನ್ನು ನಿರ್ಧರಿಸುವ ಯೋಗ್ಯತೆ ನಿನ್ನ ಲ್ಲಿಲ್ಲ. ಧೂರ್ತ, ಜಂಬಗಾರ, ತೀಕ್ಷ್ಣ ಬುದ್ಧಿಯಲ್ಲಿ ಬಾಲಿಶನಾದ ನಿನ್ನನ್ನು ಅಂದು ಪ್ರಯೋಜನವಿಲ್ಲ. ನಿನ್ನಂಥ ಅಪರಿಪಕ್ವಮತಿಯನ್ನು ಮಂತ್ರಾಲೋಚನೆಯ ಸಭೆಗೆ ಸೇರಿಸಿದವರ ಶಿರಚ್ಛೇದನ ಮಾಡ ಬೇಕು " ಎಂದು ಇಂದ್ರಜಿತ್ತನ್ನು ಧಿಕ್ಕರಿಸಿ ಪುನಃ ವಿಭೀಷಣ ರಾವಣನ ಕಡೆಗೆ ತಿರುಗಿ '' ರಾಜಾ, ಯಮದಂಡದಂತೆ, ಮೃತ್ಯುವನ್ನು ತರುವ, ಬ್ರಹ್ಮದಂಡದಂತೆ ತೀಕ್ಷ್ಣವಾದ ತೇಜಸ್ಸುಳ್ಳ ರಾಮ ಬಾಣ ಲಂಕೆಯನ್ನೂ, ನಿನ್ನನ್ನೂ ಅಳಿಸುವ ಮುನ್ನ ನಾ ಹೇಳುವಂತೆ ಕೇಳು. ವಿವಿಧವಾದ ಮಣಿ ಗಳನ್ನೂ, ರತ್ನಗಳನ್ನೂ, ಆಭರಣಗಳನ್ನೂ ಮಹಾರ್ಹವಾದ ವಸ್ತ್ರಗಳನ್ನೂ ಧನವನ್ನೂ ತೆಗೆದು ಕೊಂಡು, ಅದರೊಂದಿಗೆ ಸೀತೆಯನ್ನು ರಾಮನಿಗೆ ಒಪ್ಪಿಸಿ ಕೃತಾರ್ಥನಾಗು. ಜೀವವನ್ನು ಉಳಿ

ಸಿಕೊ, ಲಂಕಾಜನರನ್ನೂ ಉಳಿಸು, ಲಂಕೆಯನ್ನೂ ಉಳಿಸು. ನಾ ಹೇಳುವುದನ್ನು ಕೇಳು " ಎಂದು ಹುತ್ತೆ ಮತ್ತೆ ಬುದ್ಧಿ ಹೇಳಿದ.

ರಾವಣನ ಮಂತ್ರಾಲೋಚನೆಯ ಪ್ರಕರಣದಲ್ಲಿ ವಾಲ್ಮೀಕಿ ರಾಜನೀತಿಯನ್ನು ಬಹಳ ಚೆನ್ನಾಗಿ ನಿರೂಪಿಸಿದ್ದಾರೆ. ರಾಜನಾದವ ಹೇಗಿರಬೇಕು ? ಮಂತ್ರಿಗಳು ಯಾವ ಯೋಗ್ಯತೆಯನ್ನು ಪಡೆದವರಾಗಿರಬೇಕು ? ಎಂತೆಂಥವರು ಮಂತ್ರಾಲೋಚನಾ ಸಭೆಗೆ ಅರ್ಹರು ? ಇದೆಲ್ಲವನ್ನೂ ವಿಭೀಷಣನ ಮಾತುಗಳಿಂದ ತಿಳಿಯಪಡಿಸುತ್ತಾರೆ, ವಾಲ್ಮೀಕಿ.

ಸಾಮಾನ್ಯವಾಗಿ ಬಹುಮತ ನಿರ್ಣಯವನ್ನು (ಮೆಜಾರಿಟಿ) ಒಪ್ಪಿ ಅದರಂತೆ ಶಾಸನ ನಡೆಸುವುದು ಈಗ ಲೋಕದಲ್ಲಿ ವಿದಿತವಾಗಿದೆ. ಬಹುಮತ ನಿರ್ಣಯದಂತೆ ಶಾಸನ ನಡೆಸುವುದು " ಮೆಜಾರಿಟಿ ಆಳ್ವಿಕೆ " ಎಂದು ಹೆಸರು ಪಡೆದಿದೆ.

ಆದರೆ ಈ ಬಹುಮತನಿರ್ಣಯ ಯಾವಾಗ ಉಚಿತವಾದೀತು ಎಂದು ಯೋಚಿಸಬೇಕು. ಶಾಸನಸಭೆಯ ಸದಸ್ಯರು ಯೋಗ್ಯರಾದಾಗ, ಬುದ್ಧಿವಂತರಾದಾಗ, ಸತ್ಯಸಂಧರಾದಾಗ ಈ ಬಹುಮತನಿರ್ಣಯ ಜನತೆಗೆ ಉಪಯುಕ್ತವಾದೀತು ಎಂದು ! ಇಲ್ಲವಾದರೆ ಅದು ಜನತೆಗೆ ಅನರ್ಥಕಾರಿಯೇ ಸರಿ !

ಮೂರ್ಖರಾದ, ಡಾಂಭಿಕರಾದ, ಹಣದಾಸೆಯುಳ್ಳ ಅಸಂಖ್ಯಾತ ಸದಸ್ಯರ ಮತವನ್ನು ಆಚರಣೆಯಲ್ಲಿ ತರುವುದು ಪ್ರಾಣಕ್ಕೆ ಅಪಾಯ ತಂದೀತು !

ಅದೇ ವಿವೇಕಿಯಾಗಿ, ಜಿತೇಂದ್ರಿಯನಾಗಿ, ಮಹಾಬುದ್ಧಿಶಾಲಿಯಾಗಿ, ಸತ್ಯವಂತನಾಗಿ, ಧೀಮಂತನಾಗಿ ಇರುವ ಒಬ್ಬ ಮಂತ್ರಿಯ ಮಂತ್ರಾಲೋಚನೆಯೂ, ಅನುಸರಿಸಿದಲ್ಲಿ ಅತ್ಯಂತ ಫಲಕಾರಿಯಾದೀತು. ಇದಕ್ಕೆ ರಾವಣನೇ ನಿದರ್ಶನ !

ರಾವಣನ ಸಭೆಯಲ್ಲಿದ್ದ ಮಂತ್ರಿಗಳೂ, ಸೇನಾಪತಿಗಳೂ, ಸಭಾಸದರೂ ರಾಮನೊಡನೆ " ಯುದ್ಧಮಾಡೋಣ " ಎಂದು ಏಕಾಭಿಪ್ರಾಯ ಪಟ್ಟರು.

ವಿಭೀಷಣ ಒಬ್ಬ ಸಾರ್ಥಕವಾದ, ಹಿತಕಾರಿಯಾದ ಮಾತನ್ನಾಡಿ " ಸೀತೆಯನ್ನು ರಾಮನಿಗೆ ಒಪ್ಪಿಸು " ಎಂದು ಹೇಳಿದ. ರಾವಣ ಬಹುಮತದ ನಿರ್ಣಯವನ್ನು ಅನುಸರಿಸಿ ತಾನೂ ಸತ್ತು ತನ್ನನ್ನು ನಂಬಿದವರನ್ನೂ ಸಾಯುವಂತೆ ಮಾಡಿದ.

ಆದ್ದರಿಂದಲೇ ಭಗವಾನ್ ವಾಲ್ಮೀಕಿ ಹೇಳಿದರು "ಮೂರ್ಖರಾದ, ಪಂಡಿತ ಮಾನಿಗಳಾದ, ಲುಬ್ಧರಾದ, ಹಣದಾಸೆಯುಳ್ಳ, ಅವಿದ್ಯಾವಂತರಾದ ಸಾವಿರ ಮಂತ್ರಿಗಳಿಗಿಂತ ವಿವೇಕಿಯಾದ, ಸರ್ವಶಾಸ್ತ್ರಕೋವಿದನಾದ, ಯುಕ್ತಾಯುಕ್ತ ವಿವೇಚನಾಸಾಮರ್ಥ್ಯವುಳ್ಳ, ದೂರದರ್ಶಿಯಾದ, ಜಿತಕ್ರೋಧನಾದ, ಜಿತೇಂದ್ರಿಯನಾದ, ಹಣ-ಪದವಿ-ಅಧಿಕಾರ-ಇವುಗಳಲ್ಲಿ ಆಸೆಯಿಲ್ಲದ, ಪ್ರಜೆಗಳ ಹಿತವನ್ನೇ ಬಯಸುವ, ನಿಸ್ವಾರ್ಥಿಯಾದ ಒಬ್ಬ ಮಂತ್ರಿಯೇ ಉತ್ತಮ. ಲೇಸನ್ನು ಬಯಸತಕ್ಕವನು ಮೂರ್ಖತನದ ಬಹುಮತ ನಿರ್ಣಯವನ್ನು ಲಕ್ಷಿಸದೆ ವಿವೇಕಿಯಾದ ಒಬ್ಬ ಮಂತ್ರಿಯ ಮತವನ್ನು ಅನುಸರಿಸುವುದೇ ಯೋಗ್ಯವಾದುದು.

ರಾವಣ ರಾಮ—ಇಬ್ಬರೂ ಈ ದಿಶೆಯಲ್ಲಿ ತಮ್ಮ ತಮ್ಮ ನಿಲುವನ್ನು ತೋರಿ ಜಗತ್ತಿಗೆ ಮಾರ್ಗದರ್ಶಕರಾಗಿದ್ದಾರೆ. ರಾವಣನು ವಿಭೀಷಣನ ಸತ್ವಯುತವಾದ ಮಾತುಗಳನ್ನು ಕೇಳದೆ

ನಾಶವಾದ. ತಾನು ಮಾತ್ರ ಅಲ್ಲ, ಇಡೀ ರಾಕ್ಷಸ ಕುಲವನ್ನೇ ಹಾಳುಮಾಡಿದ. ಆದರೆ, ರಾಮ ವಿಭೀಷಣನನ್ನು ಸೇರಿಸಿಕೊಳ್ಳುವುದೇ, ಬೇಡವೇ ಎಂಬ ಪ್ರಕರಣದಲ್ಲಿ ತನ್ನದೇ ಆದ ನಿರ್ಣಯ ವನ್ನು ಕೈಗೊಂಡ. ಅಲ್ಲಿನ ಸಹ ವಾನರವೀರರೆಲ್ಲ ರಾಮನಿಗೆ ವಿಭೀಷಣನನ್ನು ಸೇರಿಸಿಕೊಳ್ಳುವುದು ಬೇಡ" ಎಂದು ಹೇಳಿದರು. ಆದರೆ, ರಾಮ ಧರ್ಮಜ್ಞ, ವಿವೇಕಿ, ಯುಕ್ತಾಯುಕ್ತವನ್ನು ತಿಳಿದ ವನು. ಆದ್ದರಿಂದಲೇ, ಬಹುಮತನಿರ್ಣಯವನ್ನು ಬದಿಗೊತ್ತಿ ತನ್ನ ಉತ್ತಮಬುದ್ಧಿಗೆ ನಿಲುಕಿದ ಕ್ರಮವನ್ನು ಕೈಗೊಂಡ. ಅದರಿಂದ ಲಾಭವನ್ನೂ ಪಡೆದ.

ಆದಕಾರಣವೇ ವಾಲ್ಮೀಕಿರಾಮಾಯಣ ಇಂದಿಗೂ ನಿತ್ಯನೂತನವಾಗಿ ಉಳಿದಿರುವುದು. ವಾಲ್ಮೀಕಿಯು ರಾಮಾಯಣವನ್ನು ಎಂದೋ ರಚಿಸಿದರು. ಆದರೆ, ಅದು ಇಂದಿಗೂ ಚಿರನೂತನ ವಾಗಿ ಉಳಿದಿದೆ. ಕೇಳಿದಷ್ಟು, ಓದಿದಷ್ಟು, ಹೇಳಿದಷ್ಟು ಮತ್ತೆ ಮತ್ತೆ ಕೇಳಬೇಕು, ಓದಬೇಕು, ಹೇಳಬೇಕು ಎನಿಸುತ್ತದೆ. ಇದಕ್ಕೆ ಮಹತ್ವಾದ ಕಾರಣ ಎಂದರೆ ರಾಮಾಯಣದಲ್ಲಿ ಅಡಗಿರುವ ತತ್ತ್ವವು ಗತಿಸಿದ ಆ ತ್ರೇತಾಯುಗಕ್ಕೆ ಮಾತ್ರ ಅನ್ವಯಿಸುವಂಥದಲ್ಲ–ಎಲ್ಲ ಯುಗಗಳಲ್ಲೂ, ಎಲ್ಲಾ ಕಾಲಗಳಲ್ಲೂ, ಎಲ್ಲ ದೇಶಗಳಲ್ಲೂ ಅನುಸರಿಸಬೇಕಾದ ಉತ್ತಮೋತ್ತಮ ತತ್ತ್ವಗಳು ರಾಮಾಯಣ ದಲ್ಲಿ ಅಡಕವಾಗಿದೆ. ಹಾಗೆ ಅದರಲ್ಲಿ ಅಡಕವಾಗಿರುವ ಉತ್ತಮ ತತ್ತ್ವಗಳನ್ನು ಆಚರಣೆಯಲ್ಲಿ ತಂದರೆ ಮಾತ್ರ ರಾಜ್ಯ ರಾಮರಾಜ್ಯ ಆದೀತು. ಇಲ್ಲವಾದರೆ ಅದು "ರಾವಣರಾಜ್ಯ" ಆಗಿ ವಿನಾಶದ ಹಾದಿಯನ್ನು ತುಳಿದೀತು.

ವಿಭೀಷಣ ರಾವಣನಿಗೆ ಬಹಳವಾಗಿ ಹೇಳಿದ. ಆದರೆ, ವಿಭೀಷಣನ ಪಥ್ಯವಾದ ಮಾತುಗಳು ಕಾಲಕ್ಕೆ ವಶನಾದ ರಾವಣನಿಗೆ ರುಚಿಸಲಿಲ್ಲ. ರಾವಣ ಆಗಲೇ ಕಾಲನ ಪಾಶದಲ್ಲಿ ಸಿಕ್ಕಿಬಿದ್ದಿದ್ದ. ಹಾಗಿರುವಾಗ ಅವನಿಗೆ ವಿಭೀಷಣನ ಮಾತುಗಳು ಹಿಡಿಸೀತೆ ? ಆದ್ದರಿಂದ ವಿಭೀಷಣನ ಮಾತು ಗಳನ್ನು ಕೇಳಿದ ರಾವಣ ಕೋಪದಿಂದ ಕೂಡಿದ ಕಠೋರವಾಣಿಯಲ್ಲಿ ಹೇಳಿದ-"ವಿಭೀಷಣ, ಬಾಯಿ ಮುಚ್ಚು. ನಿನ್ನ ಸಹವಾಸ ಸರಿಯಲ್ಲ. ನೀನು ನನ್ನ ಜ್ಞಾತಿ ಎಂದು ಚೆನ್ನಾಗಿ ತಿಳಿದಿದ್ದೇನೆ. ಶತ್ರುವಿನ ಜೊತೆಯಲ್ಲಿ ಬಾಳಬಹುದು, ವಿಷಯುಕ್ತವಾದ ಸರ್ಪದೊಂದಿಗೆ ವಾಸ ಮಾಡಬಹುದು. ಆದರೆ, ಜ್ಞಾತಿಗಳೊಡನೆ ಬಾಳುವುದು ಮಹಾಕಷ್ಟ. ಯಾವಾಗಲೂ ದಾಯಾದಿ ಎನಿಸಿಕೊಂಡ ವನು ಮೇಲೆ ಹಿತವನ್ನು ಕೋರುವಂತೆ ನಟಿಸುತ್ತಾನೆ. ಜೊತೆಯಲ್ಲೇ ಇದ್ದುಕೊಂಡು ಸಮಯ ಸಿಕ್ಕಾಗ ಸ್ವಾರ್ಥವನ್ನು ಸಾಧಿಸಿ ಕೊಳ್ಳುತ್ತಾನೆ. ಕುಟುಂಬದಲ್ಲಿ ಹಿರಿಯನಾದವನು ಅಧಿಕಾರಕ್ಕೆ ಬಂದರೆ, ಪದವಿಯನ್ನು ಪಡೆದರೆ, ಐಶ್ವರ್ಯವಂತನಾದರೆ ಅವನ ದಾಯಾದಿಗಳು ಅವನನ್ನು ನೆಲಕ್ಕೆ ಬೀಳಿಸಲು ಸಮಯ ಕಾಯುತ್ತಲೇ ಇರುತ್ತಾರೆ. ವಿಭೀಷಣಾ, ನೀನೂ ಹಾಗೆಯೇ. ನನ್ನ ಅಧಿಕಾರ, ಅಂತಸ್ತು, ಗೌರವ, ಐಶ್ವರ್ಯ, ಬಲ ಇವುಗಳನ್ನು ಕಂಡು ಸಹಿಸದೆ ಶತ್ರುವನ್ನು ಪ್ರಶಂಸಿಸುತ್ತ, ನನ್ನನ್ನು ಧಿಕ್ಕರಿಸುತ್ತಾ ಇದೀಯೆ. ದಾಯಾದಿಗಳ ಸ್ವಭಾವವೇ ಅಂಥದು.

ವಿದ್ಯತೇ ಗೋಷು ಸಂಪನ್ನಂ ವಿದ್ಯತೇ ಜ್ಞಾತಿತೋ ಭಯಮ್ । ವಿದ್ಯತೇ ಸ್ತ್ರೀಷು ಚಾಪಲ್ಯಂ, ವಿದ್ಯತೇ ಬ್ರಾಹ್ಮಣೇ ತಪಃ ॥ "ಗೋವುಗಳು ಇರುವ ಕಡೆಯಲ್ಲಿ ಸಂಪತ್ತಿರುವುದು ಸಹಜ, ಸ್ತ್ರೀಯರಲ್ಲಿ ಚಾಪಲ್ಯ ಸಹಜಗುಣ. ಬ್ರಾಹ್ಮಣನಲ್ಲಿ ತಪಸ್ಸು ಸಹಜ. ಯಾವನು "ಬ್ರಾಹ್ಮಣನೋ" ಅವನು ನಿಜವಾಗಿ ತಪಸ್ವಿಯಾಗಿಯೇ ಇರುತ್ತಾನೆ, ಹಾಗೆಯೇ ಜ್ಞಾತಿ ಗಳಿಂದ ಭಯವೂ ಸಹಜವೇ.

"ದಾಯಾದಿಗಳನ್ನು ಯಾವಾಗಲೂ ನಂಬಬಾರದು. ಯಾವ ಕಾಲಕ್ಕೆ ಏನು ಮಾಡಿಯಾರೋ ಹೇಳಲು ಬರುವಂತಿಲ್ಲ. ಜತೆಯಲ್ಲೇ ಇದ್ದುಕೊಂಡು ಸಮಯದಲ್ಲಿ ಹಾಳು ಮಾಡುವಂಥವರು, ಜ್ಞಾತಿಗಳು.

"ವಿಭೀಷಣಾ, ನೀನೂ ನನ್ನ ಜ್ಞಾತಿ. ನನ್ನ ಏಳಿಗೆಯನ್ನು ಕಂಡು ಸಹಿಸದೆ ಹೀಗೆ ಶತ್ರುವನ್ನೇ ಪ್ರಶಂಸಿಸುತ್ತಿರುವೆ; ಎಲೆ ಅನಾರ್ಯ! ಕಮಲಪತ್ರದಲ್ಲಿ ನೀರಿನ ಬಿಂದು ಹೇಗೆ ಅಂಟಿಕೊಳ್ಳು ವುದಿಲ್ಲವೋ ಹಾಗೆ ನಿನ್ನ ಹೃದಯದಲ್ಲಿ ನನ್ನ ಬಗ್ಗೆ ಸೌಹಾರ್ದ ಎನ್ನುವುದು ಅಂಟಿಯೇ ಇಲ್ಲ. ದುಂಬಿ ಹೂವಿನ ರಸವನ್ನು ಕುಡಿದೂಸಹ ಹೂವನ್ನು ಸೇವಿಸುವುದಿಲ್ಲ. ಹಾಗೆಯೇ ವಿಭೀಷಣಾ ನೀನೂ ನನ್ನ ಉಪ್ಪನ್ನೇ ತಿಂದು ನನ್ನನ್ನು ಸೇವಿಸದೆ ನನಗೆ ದ್ರೋಹ ಬಗೆಯುತ್ತಿರುವೆ.

**ಯೋನ್ಯಸ್ತ್ವೇವಂವಿಧಂ ಬ್ರೂಯಾತ್ ವಾಕ್ಯ ಮೇತನ್ನಿಶಾಚರ ।**
**ಅಸ್ಮಿನ್ ಮುಹೂರ್ತೇ ನಭವೇತ್ ತ್ವಾಂತು ಧಿಕ್ ಕುಲಪಾಂಸನಂ ॥**

ಅನಾರ್ಯ! ಇನ್ನೊಬ್ಬರು ಈರೀತಿ ನನ್ನೆದುರಿನಲ್ಲಿ ನಿಂತು ಮಾತಾಡಿದ್ದರೆ ಅವರನ್ನು ಈಗಾಗಲೇ "ಇಲ್ಲ" ಎನ್ನಿಸಿಬಿಡುತ್ತಿದ್ದೆ. ನೀನಾಗುವ ಹೊತ್ತಿಗೆ ಸುಮ್ಮನಿದ್ದೇನೆ–ಹೋಗು! ಕುಲಘಾತಕ! ನಿನಗೆ ಧಿಕ್ಕಾರ, ಧಿಕ್ಕಾರ!" ಎಂದ.

ವಿಭೀಷಣ ನ್ಯಾಯವಾದಿ. ರಾವಣನ ಕ್ರೂರವಾದ, ಅವಮಾನಕರವಾದ ವಚನವನ್ನು ಕೇಳಿ ಅಲ್ಲಿ ಒಂದು ಕ್ಷಣವೂ ನಿಲ್ಲಲಾರನಾದ. ಆ ನೆಲವೆಲ್ಲ ಅವನ ಪಾಲಿಗೆ ದೂಷ್ಯವಾಯಿತು. ಒಡ ನೆಯೇ ಅಲ್ಲಿಂದ ಗದಾಪಾಣಿಯಾಗಿ, ತನ್ನ ಅನುಚರರಾದ ನಾಲ್ಕು ರಾಕ್ಷಸರೊಡಗೂಡಿ ಆಕಾಶಕ್ಕೆ ಹಾರಿದ. ಆಕಾಶದಲ್ಲಿ ನಿಂತು ಧರ್ಮಾತ್ಮನಾದ ವಿಭೀಷಣ ಕೊನೆಯಬಾರಿ ರಾವಣನನ್ನು ಕುರಿತು "ರಾಕ್ಷಸರಾಜಾ, ನನಗೆ ನೀನು ಅಣ್ಣ, ಏನುಬೇಕಾದರೂ ಬೈಯಬಹುದು. ನೀನು ಹಿರಿಯ; ತಂದೆಗೆ ಸಮಾನ. ಆದರೆ ಧರ್ಮಮಾರ್ಗವನ್ನು ಮೀರಿದೀಯೇ. ಕಾರಣ ನಿನಗೆ ಬುದ್ಧಿ ಭ್ರಾಂತ ವಾಗಿದೆ. ಕಾಲನ ದವಡೆಗೆ ಸಿಲುಕಲು ಸಿದ್ಧವಾಗಿರುವವರಿಗೆ ಹಿತವಾದ ಮಾತುಗಳೇ ಅಹಿತ ವಾಗುತ್ತವೆ.

**ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ ।**
**ಅಪ್ರಿಯಸ್ಯಚ ಪಥ್ಯಸ್ಯ ವಕ್ತಾ ಶ್ರೋತಾಚ ದುರ್ಲಭಃ ॥**

"ರಾಜನ್, ಯಾರು ಸುಲಭವಾಗಿ ಸಿಗುತ್ತಾರೆ ನಿನಗೆ ಬಲ್ಲೆಯಾ ? ಯಾವಾಗಲೂ ಪ್ರಿಯ ವನ್ನೇ ಆಡುತ್ತಾ ಒಡೆಯನ ಹಿತವನ್ನು ಕಡೆಗಣಿಸಿ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವಂಥ ಸ್ವಾರ್ಥಿಗಳು ಯಾವಾಗಲೂ ಮಧುರವಾದ, ಕಿವಿಗಿಂಪಾದ ಮಾತುಗಳನ್ನೇ ಆಡುತ್ತಿರುತ್ತಾರೆ. ಅಂಥ ವರು ಪ್ರಪಂಚದಲ್ಲಿ ಸುಲಭರು. ಆದರೆ, ಅಪ್ರಿಯವಾದರೂ ಪಥ್ಯವಾದ, ಹಿತವಾದ, ಪರಿಣಾಮ ದಲ್ಲಿ ಮಂಗಳವನ್ನುಂಟುಮಾಡುವ ಮಾತುಗಳನ್ನಾಡುವವರು, ಮತ್ತು ಅಂಥ ಅಪ್ರಿಯವಾದ, ಪರಿಣಾಮದಲ್ಲಿ ಹಿತವನ್ನೂ, ಪ್ರಿಯವನ್ನೂ ಉಂಟುಮಾಡುವ ಮಾತುಗಳನ್ನು ಕೇಳುವವರೂ ದುರ್ಲಭರು.

ಸಾಮಾನ್ಯವಾಗಿ ಎಲ್ಲರೂ ಪ್ರಿಯವಾದ ಮಾತಿಗೇ ಬಲಿಯಾಗುತ್ತಾರೆ. ನಾನು ನಿನ್ನ ಹಿತವನ್ನು ಬಯಸಿ, ಹೇಳಿದೆ. ಅಗ್ನಿಯಿಂದ ಆವೃತ್ತವಾದ ಗೃಹದಲ್ಲಿ ಸಿಕ್ಕಿಕೊಂಡಂತೆ ಇರುವೆ ನೀನು. ಇಂಥ

ಸಂದರ್ಭದಲ್ಲಿ ಎಚ್ಚರಿಸುವುದು ವಿಹಿತ. ನಿನ್ನನ್ನು ರಕ್ಷಿಸುವ ಸಲುವಾಗಿಯೇ ಹೇಳಿದೆ.

ಶ್ರೀರಾಮನ ಸುವರ್ಣಭೂಷಿತವಾದ ಅಗ್ನಿ ಸದೃಶವಾದ ಬಾಣಗಳಿಂದ ನಿನ್ನನ್ನು ಕಾಪಾಡಲು ಹಾಗೆ ಹೇಳಿದೆ. ರಾಕ್ಷಸರಾಜ! ಮತ್ತೊಮ್ಮೆ ಹೇಳುತ್ತೇನೆ. ಹಿರಿಯ ಅಣ್ಣ, ತಂದೆಗೆ ಸಮಾನ ಎಂದುಕೊಂಡು ಸ್ವಾತಂತ್ರ್ಯದಿಂದ ನಿನ್ನ ಹಿತವನ್ನೇ ಅನುಲಕ್ಷಿಸಿ ನಾನು ನಿನಗೆ ಹೇಳಿದೆ. ನಿನಗೆ ಅದು ಹಿತವಾಗದಿದ್ದರೆ ನನ್ನನ್ನು ಕ್ಷಮಿಸಿಬಿಡು. ರಾಕ್ಷಸ ವೀರರೊಂದಿಗೆ ನಿನಗೆ ಇಷ್ಟಬಂದಂತೆ ಆಲೋಚಿಸಿ ಲಂಕೆಯನ್ನು ಕಾಯ್ದುಕೊ.

ನಿನ್ನಿಂದ ತಿರಸ್ಕೃತನಾದ ನಾನು ಇಲ್ಲಿರಲು ಇಷ್ಟಪಡುವುದಿಲ್ಲ ನಾನು ಹೋಗುತ್ತೇನೆ. ನಿನಗೆ ಕಲ್ಯಾಣವಾಗಲಿ. ನಾನು ಹೋದಮೇಲಾದರೂ ನೀನು ವಿಷಯವನ್ನು ಅರಿಯುವಂತಾಗು. ನನ್ನನ್ನು ಅಗಲಿದರೇ ಸುಖ ಸಿಗುವುದಾದರೆ ಹಾಗೆಯೇ ಆಗಲಿ, ಸುಖವಾಗಿಬಾಳು....

ನಿಶಾಚರರಾಜ! ವಾಸ್ತವವಾಗಿ ಹೇಳುತ್ತಿದೇನೆ. ನಾನು ನಿನ್ನ ಹಿತೈಷಿ. ನಿನ್ನನ್ನು ಅಧರ್ಮ ಮಾರ್ಗದಿಂದ ಬಿಡಿಸಲು ನಿನಗೆ ಧರ್ಮವನ್ನು ತಿಳಿಸಿ ಹೇಳಿದೆ; ಆದರೆ, ಅದು ನಿನಗೆ ಹಿತವಾಗ ಲಿಲ್ಲ. ಹೋಗಲಿ, ಯಾರು ಕಾಲನ ಬಲೆಗೆ ಬೀಳಲು ಸಿದ್ಧರಾಗಿದಾರೋ, ಯಾರನ್ನು ಸೆಳೆಯಲು ಕಾಲ ತನ್ನ ಬಲೆಯನ್ನು ಬೀಸಿದ್ದಾನೋ ಅಂಥವರಿಗೆ ಹಿತರಾದವರು ಹೇಳುವ ಹಿತವಾದ ಮಾತು ಗಳೂ ಅಹಿತವಾಗುತ್ತವೆ. ಆಗಲಿ, ನೀನು ಚೆನ್ನಾಗಿರು! ನಾ ಬರುತ್ತೇನೆ." ಎಂದು ಹೇಳಿ ನಾಲ್ಕು ಜನ ರಾಕ್ಷಸರೊಂದಿಗೆ ಲಂಕೆಯನ್ನು ಬಿಟ್ಟು ಮುಹೂರ್ತ ಮಾತ್ರ ಕಾಲದಲ್ಲಿ ಸಮುದ್ರ ವನ್ನು ದಾಟಿ, ರಾಮಲಕ್ಷ್ಮಣರಿದ್ದ ಸ್ಥಾನಕ್ಕೆ ಬಂದು ಸೇರಿದ, ವಿಭೀಷಣ.

## ವಿಭೀಷಣ ಶರಣಾಗತಿ

ರಾಜ್ಯಶಾಸ್ತ್ರ, ಯುದ್ಧಶಾಸ್ತ್ರ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಎನಿಸಿಕೊಂಡ ರಾಮಾಯಣವು ಮೋಕ್ಷಶಾಸ್ತ್ರವೂ ಆಗಿ ಬೆಳಗುತ್ತಿದೆ. ಶ್ರೀವೈಷ್ಣವ ಸಿದ್ಧಾಂತದ ಜೀವನಾಡಿಯೇ **ಶರಣಾಗತಿ.** ಈ ತತ್ವವನ್ನು ಹೃದಯಂಗಮವಾಗಿ ನಿರೂಪಿಸುವ ಘಟ್ಟ **ವಿಭೀಷಣ ಶರಣಾಗತಿ.** ರಾಮಾಯಣವೇ ಶರಣಾಗತಿಶಾಸ್ತ್ರ ಎನಿಸಿಕೊಂಡಿದೆ. ಶರಣಾಗತಿಯ ಮಹಾಮಾಲೆಯಲ್ಲಿ ನಾಯಕರತ್ನದಂತೆ ಶೋಭಾಯಮಾನವಾಗಿದೆ ವಿಭೀಷಣ ಶರಣಾಗತಿ. ಶ್ರೀರಾಮನೇ ಸ್ವತಃ ಶರಣಾಗತಿಯ ವೈಶಿಷ್ಟ್ಯ ವನ್ನು ವಿವರಿಸುತ್ತಾನೆ ಈ ಪ್ರಕರಣದಲ್ಲಿ.

ಆಜಗಾಮ ಮುಹೂರ್ತೇನ ಯತ್ರ ರಾಮಃ ಸಲಕ್ಷ್ಮಣಃ! ಎಂದಿದಾರೆ ವಾಲ್ಮೀಕಿ.

ವಿಭೀಷಣ ಮುಹೂರ್ತಕಾಲದಲ್ಲಿ ರಾಮಲಕ್ಷ್ಮಣರಿರುವಲ್ಲಿಗೇ ಬಂದು ಸೇರಿದ ಎಂದರು. ಆಜಗಾಮ ಎಂಬ ಶಬ್ದ ಅರ್ಥಪೂರ್ಣವಾದುದು. ಬಂದು ಸೇರಿದ ಎಂದಿದಾರೆ ವಾಲ್ಮೀಕಿ. ಈ ಆಜಗಾಮ ಎಂಬ ಪದದ ಔಚಿತ್ಯವನ್ನು ಆಚಾರ್ಯರು ಬಹಳ ಆಳವಾಗಿ ಅನುಭವಿಸಿದ್ದಾರೆ.

ತನ್ನ ಮನೆಗೆ ಬರುವಾಗ, ಬಂದ ಎನ್ನುವುದು ರೂಢಿಯಲ್ಲದೆ. ಬೇರೆ ಕಡೆ ಹೋಗುವಾಗ ಹೋದ ಎನ್ನುವುದು ಪದ್ಧತಿ. ಇಲ್ಲಿ ವಿಭೀಷಣನು ರಾಕ್ಷಸರೊಡನೆ ರಾಮಲಕ್ಷ್ಮಣರ ಬಳಿ ಹೋದ ಎನ್ನದೆ ಬಂದು ಸೇರಿದ ಎಂದರು. ವಾಲ್ಮೀಕಿ. "ಅಲ್ಲಿದೆ ನಮ್ಮ ಮನೆ; ಇಲ್ಲಿ ಬಂದೆ ಸುಮ್ಮನೆ" ಎಂಬ ಜ್ಞಾನಿಗಳ ವಾಣಿಯಂತೆ ವಿಭೀಷಣ ಲಕ್ಷ್ಮಣನೊಡಗೂಡಿ ರಾಮ ಇದ್ದ ಜಾಗಕ್ಕೆ ಬಂದ.

ಶರಣಾಗತಿ ಇಹ–ಪರ ಎರಡರಲ್ಲೂ ಅರ್ಥಸಿದ್ಧಿಯನ್ನು ಕೊಡುವಂಥ ಉಪಾಯ. ಕರ್ಮ, ಜ್ಞಾನ, ಭಕ್ತಿಯೋಗಗಳು ಕಷ್ಟಸಾಧ್ಯ. ಶರಣಾಗತಿ ಎಲ್ಲ ಜೀವದಿಂದಲೂ ಅನುಷ್ಠಿಸಲ್ಪಡತಕ್ಕಂಥ ಸುಲಭವಾದ ಉಪಾಯ. ಒಂದು ಸ್ವಾರಸ್ಯ ಕಥೆಯು ನೆನಪಾಗುತ್ತದೆ.

ಒಬ್ಬ ಋಷಿ ಒಂದು ಪರ್ಣಶಾಲೆ ಕಟ್ಟಿ, ಯಜ್ಞಮಂಟಪ ನಿರ್ಮಿಸಿ ಅರ್ಹರನ್ನು ವೈಕುಂಠಕ್ಕೆ ಕಳಿಸುತ್ತೇನೆ ಎಂದ. ವೈಕುಂಠ ಸರ್ವಮಂಗಳಕರವಾಗಿ ಒಪ್ಪುತ್ತಿದೆ. ಆ ಅಗಮ್ಯವಾದ ಸ್ಥಾನವನ್ನು ತಲುಪಲು ನೂರಾರು ಕಡೆ ಸೋಪಾನಗಳು. ಒಂದು ಕಡೆ ಹೋದರೆ ಅಲ್ಲಿ ದ್ವಾರಪಾಲಕರು ಜೀವವನ್ನು ಕೇಳುತ್ತಾರೆ "ನಿತ್ಯಕರ್ಮಗಳನ್ನು ಸರಿಯಾಗಿ ಮಾಡುತ್ತಿದೀಯಾ ?" ಎಂದು. "ಇಲ್ಲ" ಎಂದೊಡನೆ ಈ ಮಾರ್ಗದಿಂದ ನೀನು ಹೋಗುವ ಹಾಗಿಲ್ಲ" ಎಂದು ಕಳುಹಿಸಿಬಿಟ್ಟರು. ಮತ್ತೆ ಇನ್ನೊಬ್ಬ ಬಂದ. ಅವನಲ್ಲೂ ಒಂದು ದೋಷ. ಇದು ವೈಕುಂಠ–ಅಂದರೆ ದೋಷರಹಿತವಾದ ಸ್ಥಳ. ಇಲ್ಲಿ ದೋಷಿಗಳಾದವರಿಗೆ ಸ್ಥಾನವಿಲ್ಲ ಹೋಗು" ಎಂದುಬಿಟ್ಟರು.

ಕೊನೆಗೆ ಒಬ್ಬ ಸರ್ವಸಂಪನ್ನ ಬಂದ. ನೇರವಾಗಿ ಒಳಗೆ ನುಗ್ಗಿ ಹೋಗಿಯೇ ಬಿಟ್ಟ. ವೈಕುಂಠ ವಾಸ ಆವನಿಗೆ ದೊರಕಿಯೇ ಬಿಟ್ಟಿತು ಎಲ್ಲರಿಗೂ ಆಶ್ಚರ್ಯ! "ಇದೇನು! ನೀ ಮಾತ್ರ ಒಳಗೆ ಹೇಗೆ ಹೋದೆ ?" ಎಂದು ಎಲ್ಲರೂ ಪ್ರಶ್ನಿಸಿದರು. "ನಮಗೆಲ್ಲ ಒಳಗೆ ಪ್ರವೇಶವಿಲ್ಲ ಎಂದುಬಿಟ್ಟರು. ನಾವೆಲ್ಲ ಆಗಿನಿಂದ ಬಹಳ ಕಷ್ಟ ಪಟ್ಟು ಕರ್ಮ, ಜ್ಞಾನ, ಭಕ್ತಿ ಮಾರ್ಗಗಳನ್ನು ಹಿಡಿದು ಈಗ ಬಂದಿದೇವೆ. ಎಷ್ಟು ಕಾಲ ಕಷ್ಟಪಟ್ಟಿದೇವೆ–ಏನಯ್ಯಾ ಇದು! ನೀ ಮಾತ್ರ ಇಷ್ಟು ಬೇಗ ಸರಸರನೆ ಒಳನುಗ್ಗಿ ಬಿಟ್ಟೆಯಲ್ಲ" ಎಂದು ಕೇಳಿದರು.

"ನೀನು ಯಾವ ಮೆಟ್ಟಿಲನ್ನು ಹತ್ತಿ ಬಂದೆ ಹೇಳು" ಎಂದರು. ಆಗ ಅವನು "ಶ್ರೀಭಗವದ್ರಾಮಾನುಜರ ಶರಣಾಗತಿಯ ಮೆಟ್ಟಿಲನ್ನು ಹತ್ತಿ ಬಂದೆ" ಎಂದು ಉತ್ತರ ಕೊಟ್ಟ. ಶರಣಾಗತಿಯ ಮಹತ್ವ ಅಂಥದು.

ವಿಭೀಷಣ ಸತ್ವಗುಣದ ಪ್ರತೀಕ. ತಿಳಿದವನು. ಆದ್ದರಿಂದಲೇ ಅವನು ಬರುವಾಗ ನಿಶ್ಚಲವಾದ ನಂಬಿಕೆಯೊಂದಿಗೆ ಬಂದ. ಸುಗ್ರೀವನಿಗೂ, ವಿಭೀಷಣನಿಗೂ ಒಂದು ವ್ಯತ್ಯಾಸ; ಸುಗ್ರೀವನೂ ರಾಮನಿಗೆ ಬೇಕಾದವ, ವಿಭೀಷಣನೂ ರಾಮನಿಗೆ ಬೇಕಾದವ.

ಆದರೆ, ಸುಗ್ರೀವ ಜಾತಿಯಲ್ಲಿ ವಾನರ–ವಿಭೀಷಣ ರಾಕ್ಷಸ. ಮಾತ್ರವಲ್ಲ. ಸುಗ್ರೀವ ಬಾಹುರೇಷ ಪ್ರಸಾರಿತಃ–"ನಿನಗೆ ನನ್ನೊಡನೆ ಸಖ್ಯ ಮಾಡುವುದು ಇಷ್ಟವಾಗಿದ್ದರೆ ಕೈಯನ್ನು ಕೊಡು." ಎಂದು ಕೈನೀಡಿದ. ವಿಭೀಷಣ ಹಾಗಲ್ಲ; ರಾಮನ ದಿವ್ಯವಾದ ಅಡಿದಾವರೆಗಳಲ್ಲಿ ಶರಣಾದ.

ಸುಗ್ರೀವ ಮೊದಲಿನಿಂದ ರಾಜ್ಯಕ್ಕಾಗಿ, ಕಳೆದುಕೊಂಡ ಪತ್ನಿಯನ್ನು ಪಡೆಯುವುದಕ್ಕಾಗಿ ರಾಮನನ್ನು ಆಶ್ರಯಿಸಿದ. ವಿಭೀಷಣ ಹಾಗಲ್ಲ; ರಾಜ್ಯಕೋಶ, ಹೆಂಡತಿ, ಮಕ್ಕಳು, ಬಂಧುಗಳು, ಬಾಂಧವರು ಎಲ್ಲರನ್ನೂ ಬಿಟ್ಟು ನಿನ್ನನ್ನೇ ಶರಣು ಹೊಂದಿದ್ದೇನೆ ಎಂದು ಬಂದ.

ಸುಗ್ರೀವ ರಾಮನನ್ನು ಮಾತ್ರ ಸಖ್ಯಮಾಡಿಕೊಂಡು ಅವನಿಗೆ ಪಾತ್ರ ಶಾಖೆಯನ್ನು ತಂದು ಹಾಕಿ ರಾಮನೊಡನೆ ಸರಿಸಮಾನವಾದ ನಡವಳಿಕೆಯಲ್ಲಿ ನಡೆದುಕೊಂಡ. ಲಕ್ಷ್ಮಣನನ್ನು ಗಮನಿಸಲಿಲ್ಲ. ಆದರೆ, ವಿಭೀಷಣ ಬರುವಾಗಲೇ "ಲಕ್ಷ್ಮಣಸಹಿತನಾದ ರಾಮ ಇದ್ದಲ್ಲಿಗೆ ಬಂದ" ಎಂದರು ವಾಲ್ಮೀಕಿ. ಇದರ ಅಂತರಾರ್ಥ. ಆಚಾರ್ಯಸಹಿತನಾದ ರಾಮನನ್ನು ಶರಣು ಹೊಕ್ಕ.

ವಿಭೀಷಣನು ಬರುವಾಗ ಕೈಯಲ್ಲಿ ಗದೆಯನ್ನು ಹಿಡಿದು ತನ್ನ ನಾಲ್ಕು ಜನ ಅನುಚರರಾದ ರಾಕ್ಷಸರೊಡನೆ ಬಂದ. ಸಾಮಾನ್ಯವಾಗಿ ಶಾಸ್ತ್ರದ ಪ್ರಕಾರ ಹಿರಿಯರನ್ನು ಮಕ್ಕಳನ್ನು ಗುರುಗಳನ್ನು ದೇವರನ್ನು ದರ್ಶಿಸಲು ಹೋಗುವಾಗ ಬರಿಗೈಯಲ್ಲಿ ಹೋಗಬಾರದು ಎಂಬ ನಿಯಮವಿದೆ. ರಾಮನನ್ನು ವಿಭೀಷಣ ತನ್ನ ಸರ್ವಸ್ವ ಎಂದುಕೊಂಡಿದ್ದಾನೆ. ಹೀಗಿರುವಾಗ ಮೊದಮೊದಲು ರಾಮನ ಬಳಿಗೆ ಬರುವಾಗ ಬರಿಕೈಯಲ್ಲಿ ಬರದೆ ರಾಮನಿಗೆ ಆ ಯುದ್ಧಕಾಲದಲ್ಲಿ ಉಪಯುಕ್ತವಾಗಬಹುದಾದಂಥ ಗದೆಯೊಡನೆ ಬಂದ. ರಾಮನ ಕೈಂಕರ್ಯಕ್ಕಾಗಿ ತನ್ನ ಅನುಚರರಾದ ನಾಲ್ಕು ಜನ ರಾಕ್ಷಸರನ್ನೂ ಕರೆದು ತಂದ.

ಅಲ್ಲದೆ, ಆಚಾರ್ಯರು ಹೇಳುತ್ತಾರೆ, ರಾಮನು ಸಾಕ್ಷಾತ್ ವಿಷ್ಣುವಿನವತಾರ. ಲಕ್ಷ್ಮಣನು ಶೇಷಾವತಾರಿ, ಭರತ ಸುದರ್ಶನ ಚಕ್ರದ ಅಂಶ, ಶತ್ರುಘ್ನ ಶಂಖದ ಅಂಶ. ಇನ್ನು ಗದೆ ಒಂದು ಉಳಿದಿತ್ತು. ವಿಭೀಷಣನು "ನಾನು ವಿಷ್ಣುವಿನ ಆ ಕೌಮೋದಿಕೀ ಎಂಬ ಗದೆಯ ಅಂಶ" ಎಂದು ಹೇಳುತ್ತಿದ್ದಾನೋ ಎಂಬಂತೆ ಕೈಯಲ್ಲಿ ಗದೆಯನ್ನು ಹಿಡಿದು ಬಂದ.

ಮೊದಲಿನಿಂದಲೂ ವಿಭೀಷಣನಿಗೆ ರಾಮನಲ್ಲಿ ದಾಸಭಾವ. ಮಡದಿ-ಮಕ್ಕಳು ರಾಜ್ಯ-ಕೋಶ ಧನ-ಧಾನ್ಯ ಪದವಿ-ಐಶ್ವರ್ಯ ಇದಾವುದರ ಪರಿವೆಯಿಲ್ಲದೆ ರಾಮನ ಸೇವೆಯೇ ಮಹಾಭಾಗ್ಯವೆಂದು ತಿಳಿದು ಬಂದ ಮಹಾನುಭಾವ. ಈ ಪರಿಪಕ್ವವಾದ ದಾಸಭಾವ, ಈ ಅಚಲನಂಬಿಕೆ ವಿಭೀಷಣನಿಗೆ ಬರಲು ದೇವಿಯಾದ ಸೀತೆಯ ಅನುಗ್ರಹವೇ ಕಾರಣ.

ರಾಮನ ಬಳಿಗೆ ಬರುವುದಕ್ಕೆ ಮೊದಲು ಪರೋಕ್ಷವಾಗಿ ಸೀತೆಯ ಸೇವೆಯನ್ನು ಮಾಡಿದ್ದ ವಿಭೀಷಣ, ವಿಭೀಷಣನ ಮಡದಿ ಸುರಮೆ ಸೀತೆಯನ್ನು ಸಂತೈಸುತ್ತಿದ್ದಳು. ಸೀತೆಯೇ ಹನುಮಂತನಿಗೆ ವಿಭೀಷಣನ ಬಗ್ಗೆ ಹೇಳುತ್ತಾ

**''ವಿಭೀಷಣೇನ ಚ ಭ್ರಾತ್ರಾ ಮಮ ನಿರ್ಯಾತನಂ ಪ್ರತಿ।**
**ಅನುನೀತಃ ಪ್ರಯತ್ನೇನ ನ ಚ ತತ್ಕುರುತೇ ಮತಿಂ॥**

ಎಂದು. ವಿಭೀಷಣ ಒಬ್ಬ ರಾಮನಿಗೆ ನನ್ನನ್ನು ಹಿಂದಿರುಗಿಸುವಂತೆ ಹೇಳುತ್ತಿದ್ದಾನೆ" ಎನ್ನುತ್ತಾಳೆ. ಅಂದರೆ, ಮೊದಲು ವಿಭೀಷಣನಿಗೆ ಲಕ್ಷ್ಮೀ ಸ್ವರೂಪಿಣಿ ಸೀತೆಯ ಅನುಗ್ರಹವಾಗಿದೆ. ಆದ್ದರಿಂದಲೇ ರಾಮನಲ್ಲಿ ಅಷ್ಟು ಪರಿಪಕ್ವವಾದ ದಾಸಭಾವ ಉಂಟಾಗಲು ಕಾರಣವಾಯಿತು.

ವಿಭೀಷಣ ಗದಾಪಾಣಿಯಾಗಿ ರಾಕ್ಷಸರೊಡನೆ ಬರುತ್ತಿರುವುದನ್ನು ವಾನರರೆಲ್ಲ ಕಂಡರು. ಯಾರೋ ರಾಕ್ಷಸ ತಮ್ಮನ್ನು ಕೊಲ್ಲಲು ಬರುತ್ತಿದ್ದಾನೆ ಎಂದು ಭಾವಿಸಿ ಸಾಲವೃಕ್ಷಗಳನ್ನೂ, ಪರ್ವತಶಿಖರದ ಬಂಡೆಗಳನ್ನೂ ಕೈಯಲ್ಲಿ ಹಿಡಿದು ಸುಗ್ರೀವನ ಬಳಿಗೆ ಹೋಗಿ "ಮಹಾರಾಜಾ, ಯಾರೋ ಭೀಮಕಾಯನಾದ ರಾಕ್ಷಸ ನಮ್ಮನ್ನು ಕೊಲ್ಲಲು ಬರುವಂತಿದೆ. ಈಗಲೇಅಪ್ಪಣೆಯಾಗಲಿ, ನಾವೆಲ್ಲ ಅವನನ್ನು ನಿರ್ಮೂಲ ಮಾಡಿಬಿಡುತ್ತೇವೆ" ಎಂದರು.

ಹೀಗೆ ಸುಗ್ರೀವ ಮತ್ತು ಇತರ ವಾನರರೆಲ್ಲ ತಮ್ಮ ತಮ್ಮ ಕೈಗಳಲ್ಲಿ ಬಂಡೆಗಳನ್ನೂ, ವೃಕ್ಷಗಳನ್ನೂ ಹಿಡಿದು ತನ್ನತ್ತ ಬೀಳಲು ಉದ್ಯುಕ್ತರಾಗಿರುವುದನ್ನು ಕಂಡ ವಿಭೀಷಣ ಆಕಾಶದಲ್ಲಿ ಹಾಗೆಯೇ ನಿಂತು ಉಚ್ಚಕಂಠದಲ್ಲಿ ವಾನರರನ್ನು ಕುರಿತು

**ರಾವಣೋ ನಾಮ ದುರ್ವೃತ್ತೋ ರಾಕ್ಷಸೋ ರಾಕ್ಷಸೇಶ್ವರಃ ।**
**ತಸ್ಯಾಹಮನುಜೋ ಭ್ರಾತಾ ವಿಭೀಷಣ ಇತಿ ಶ್ರುತಃ ॥**

ಎಂದು ತನ್ನ ಪರಿಚಯವನ್ನು ಹೇಳಿಕೊಂಡ.

''ರಾವಣ ಎಂಬ ಕೆಟ್ಟನಡತೆಯುಳ್ಳ ರಾಕ್ಷಸೇಶ್ವರನಿದ್ದಾನೆ. ಅವನೇ ರಾಕ್ಷಸರೆಲ್ಲರಿಗೂ ರಾಜ. ಅವನಿಗೆ ನಾನು ಸಹೋದರ–ತಮ್ಮ. ವಿಭೀಷಣ ಎಂದು ನನ್ನ ಹೆಸರು" ಎಂದ. ಮುಂದುವರಿದು.

**ಶೇನ ಸೀತಾ ಜನಸ್ಥಾನಾದ್ಧೃತಾ ಹತ್ವಾ ಜಟಾಯುಷಂ ।**
**ರುದ್ಧಾ ಚ ವಿವಶಾದೀನಾ ರಾಕ್ಷಸೀಭಿಃ ಸುರಕ್ಷಿತಾ ॥**
**ತಮಹಂ ಹೇತುಭಿರ್ವಾಕ್ಯೈರ್ವಿವಿಧೈಶ್ಚನ್ಯ ದರ್ಶಯಂ ।**
**ಸಾಧುನಿರ್ಯಾತ್ಯತಾಂ ಸೀತಾ ರಾಮಾಯೆ ೯ತಿ ಪುನಃಪುನಃ ॥**
**ಸಚ ನ ಪ್ರತಿಜಗ್ರಾಹ ರಾವಣಃ ಕಾಲಚೋದಿತಃ ।**
**ಉಚ್ಯಮಾನಂ ಹಿತಂ ವಾಕ್ಯಂ ವಿಪರೀತ ಇವೌಷಧಂ ॥**
**ಸೋಽಹಂ ಪರುಷಿತಸ್ತೇನ ದಾ ವಚ್ಚಾವಮಾನಿತಃ ।**
**ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂಗತಃ ॥**

''ನನ್ನ ಅಣ್ಣ ಎನಿಸಿಕೊಂಡ ಆ ರಾವಣ ಜನಸ್ಥಾನದಿಂದ ಸೀತೆಯನ್ನು ಅಪಹರಿಸಿಕೊಂಡು ಬಂದ. ನಾನು ಅವನಿಗೆ ಯುಕ್ತಿಸಂಗತವಾದ ಅನೇಕ ಮಾತುಗಳಿಂದ ತಿಳಿಯಹೇಳಿ ರಾಮನಿಗೆ ಸೀತೆಯನ್ನು ಒಪ್ಪಿಸುವಂತೆ ನುಡಿದೆ. ಆದರೆ, ಮೃತ್ಯುಮುಖನಾದವನಿಗೆ ಔಷಧಿ ರುಚಿಸದಂತೆ ಕಾಲಚೋದಿತನಾದ ರಾವಣನಿಗೆ ನನ್ನ ಮಾತುಗಳು ಪಥ್ಯವಾಗಲಿಲ್ಲ. ಅವನು ನನ್ನನ್ನು ಅನೇಕ ವಿಧವಾಗಿ ಹೀನೈಸಿ ನುಡಿದು, ಬಯ್ದು, ನಿಂದಿಸಿ, ಅಪಮಾನ ಮಾಡಿದ. ಅವನ ಪರುಷವಾದ ಮಾತುಗಳಿಂದ ಅಪಮಾನಿತನಾದ ನಾನು ಪುತ್ರನನ್ನೂ, ಮಡದಿಯನ್ನೂ, ಭೋಗವನ್ನೂ, ಭಾಗ್ಯವನ್ನೂ, ಐಶ್ವರ್ಯವನ್ನೂ ತ್ಯಜಿಸಿ ರಾಘವನನ್ನು ಶರಣು ಹೊಕ್ಕಿದೇನೆ" ಎನ್ನುತ್ತಾನೆ. ಮಾತ್ರವಲ್ಲ,

**ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ ।**
**ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಂ ॥**

"ಸರ್ವಲೋಕಗಳಿಗೂ ಶರಣ್ಯನೆನಿಸಿದ, ರಘುಕುಲದಲ್ಲಿ ಅವತರಿಸಿದ ಆ ಮಹಾತ್ಮನಾದ ರಾಮನಿಗೆ ನಾನು ಶರಣನಾಗಿದ್ದೇನೆ ಎಂದು ನಿವೇದಿಸಿ" ಎಂದು ವಿಭೀಷಣ ಹೇಳಿದ.

ಪ್ರಾರಂಭದಲ್ಲೇ ವಿಭೀಷಣನು **ರಾವಣೋ ನಾಮ ದುರ್ವೃತ್ತೋ ರಾಕ್ಷಸೋ ರಾಕ್ಷಸೇಶ್ವರಃ** ಎನ್ನುತ್ತಾನೆ. ಧರ್ಮಾತ್ಮನಾದ ವಿಭೀಷಣನು ಮೊದಲು ತನ್ನ ದೋಷಗಳನ್ನೇ ಈ ಶ್ಲೋಕದಿಂದ ಹೇಳಿಕೊಳ್ಳುತ್ತಾನೆ. ರಾವಣಃ – ''ರಾವಯತೀತಿ ರಾವಣಃ" ಎಂಬ ವ್ಯುತ್ಪತ್ತಿಯಿಂದ ಆ ಹೆಸರೇ ಕ್ರೂರವಾದುದು, ಇದರ ಮೇಲೆ ಅವನ ವ್ಯಾಪಾರವೂ ಕ್ರೂರವಾದುದೇ ಎಂದು ಹೇಳುವುದಕ್ಕಾಗಿ "ದುರ್ವೃತ್ತಃ'' ಎಂಬ ಪದವು ಪ್ರಯುಕ್ತವಾಗಿರುವುದು. ಜಾತಿಯೂ ಅಂಥದೇ ಎಂದು ಹೇಳುವುದಕ್ಕೋಸ್ಕರ "ರಾಕ್ಷಸಃ'' ಎನ್ನುತ್ತಾನೆ. ಅವನು ಕ್ರೂರ ಮಾತ್ರ ಅಲ್ಲ,

ಕ್ರೂರಿಗಳಾದ ಪರಿಜನರಿಂದಲೂ ಕೂಡಿದ್ದಾನೆ. ಇವನು ಹೀಗೆ ಎಂದ ಮೇಲೆ ನೀನೋ? ಎಂಬ ಪ್ರಶ್ನೆ ಏಳುವುದು ಸಹಜ ತಾನೆ ? ಎಂತಲೇ "ತಸ್ಯಾಹಮನುಜೋ ಭ್ರಾತಾ" ಅಂದರೆ ಅವನಿಗೆ ನಾನು ಅಣ್ಣನಾಗಿದ್ದರೆ ಕುಬೇರನಂತೆ ದೋಷ ನಿರ್ಲಿಪ್ತನಾಗಿರುತ್ತಿದ್ದೆ. ಆದರೆ ದುರದೃಷ್ಟವಶದಿಂದ ನಾನು ಅವನಿಗೆ ತಮ್ಮನಾಗಿಬಿಟ್ಟಿದೇನೆ. ಇದರಿಂದ ಅವನು ಬುದ್ಧಿಪೂರ್ವಕವಾಗಿ ಮಾಡಿರುವ ದೋಷಗಳೆಲ್ಲವೂ ಅವನಪ್ಪಣೆಯಂತೆ ನಾನು ಮಾಡಿದವುಗಳೇ ಆಗಿ ಹೋಗಿರುವುವು-ಎನ್ನುತ್ತಾನೆ.

ವಿಭೀಷಣ ಶರಣಾಗತಿಯ ಮರ್ಮವನ್ನು ಚೆನ್ನಾಗಿ ಅರಿತವ. ಆದರಿಂದಲೇ ವಾನರರ ಮೂಲಕ ಹೇಳಿ ಕಳುಹಿಸುತ್ತಾನೆ. ವಾನರರು ರಾಮಭಕ್ತರು. ಭಾಗವತರನ್ನು ಮುಂದಿಟ್ಟು ಕೊಂಡು ಭಗವಂತನಲ್ಲಿ ಹೋಗಿ ಶರಣಾಗಬೇಕು ಎಂಬ ಸಿದ್ಧಾಂತವನ್ನು ಅನುಲಕ್ಷಿಸಿ ವಿಭೀಷಣ ವಾನರರ ಮೂಲಕ ರಾಮನಿಗೆ ತಾನು ಶರಣು ಬಂದಿರುವ ವಿಷಯವನ್ನು ನಿವೇದಿಸುವಂತೆ ವಿಜ್ಞಾಪಿಸಿದ.

ರಾವಣನು ಎಂಥ ಭಾಗವತಾಪಚಾರ ಮಾಡಿದಾನೆ ಎಂಬುದನ್ನೂ ವಿಭೀಷಣ ಹೇಳುತ್ತಾನೆ. ಹಿಂದೆ ಹೇಳಿದ ರಾವಣನ ದೋಷಗಳೆಲ್ಲವೂ ಪ್ರಾಯಶ್ಚಿತ್ತಾದಿಗಳಿಂದ ಪರಿಹರಿಸಿಕೊಳ್ಳಬಹುದು. ಆದರೆ ಅಕ್ಷಮ್ಯವಾದ ಭಾಗವತಾಪಚಾರ ಅವನಲ್ಲಿ ಸೇರಿದೆ. ಸಮಸ್ತ ದೋಷಗಳಿಗೂ ಭಾಗಿಯಾಗಿರುವ ಆ ರಾವಣನು "ಅನನ್ಯಾ ರಾಘವೇಣಾಹಂ" "ಜಲಾನ್ಮತ್ಸ್ಯಾವಿವೋದ್ಧೃತೌ" ಎಂಬಂತೆ ಪತಿವ್ರತೆಯೂ, ಸುಕುಮಾರಿಯೂ ಆದ ಸೀತೆಯನ್ನು ಅಪಹರಿಸಿದುದೂ, ಜಟಾಯುವನ್ನು ವಧಿಸಿದುದೂ ಭಾಗವತ ಅಪಚಾರಗಳು, ಇಲ್ಲಿ ಶರಣಾಗತಿಯಲ್ಲಿನ ಕಾರ್ಪಣ್ಯರೂಪಾಂಗವು ಪ್ರತಿಪಾದಿತವಾಗಿದೆ. ಕಾರ್ಪಣ್ಯ ಎಂದರೆ ಗರ್ವಹಾನಿ.

**ಉಪಾಯೇನ್ಯೈವ ಸಿಧ್ಯಂತಿ ಹ್ಯಪಾಯಾವಿವಿಧಾಸ್ತಥಾ ।**
**ಇತಿ ಯಾ ಗರ್ವಹಾನಿಸ್ತದ್ದೈನ್ಯಂ ಕಾರ್ಪಣ್ಯಮುಚ್ಯತೇ ॥**
**"ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಂ"**

ಎಂದರು ವಾಲ್ಮೀಕಿ. ವಿಭೀಷಣನು ಶರಣಾಗತಿಯ ಅಂಗಗಳನ್ನು ಚೆನ್ನಾಗಿ ಅರಿತಿರುವಂಥವ. ಜ್ಞಾನಿಗಳು ಹೇಳುತ್ತಾರೆ :

**ಅನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ ।**
**ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವವರಣಂ ತಥಾ ।**
**ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥**

ಎಂದು—ಹೀಗೆ ಶರಣಾಗತಿ ಆರುವಿಧವಾದ ಅಂಗಗಳಿಂದ ಕೂಡಿದೆ. ಮೊದಲನೆಯದಾಗಿ **ಅನುಕೂಲ್ಯಸ್ಯ ಸಂಕಲ್ಪಃ** ಎಂದರೆ ಭಗವಂತನಿಗೆ ನಾನು ಯಾವಾಗಲೂ ಅನುಕೂಲನಾಗಿಯೇ ಇರುತ್ತೇನೆ ಎಂದು ಧೃಢವಾಗಿ ಸಂಕಲ್ಪಿಸುವುದು.

ಎರಡನೆಯದಾಗಿ **ಪ್ರಾತಿಕೂಲ್ಯಸ್ಯ ವರ್ಜನಂ** ಭಗವಂತನಿಗೆ ಪ್ರತಿಕೂಲವಾದ, ಭಗವದಿಚ್ಛೆಗೆ, ಭಗವಚ್ಛಾಸನಕ್ಕೆ ವಿರೋಧವಾದ ಯಾವ ಕರ್ಮವನ್ನೂ ಮಾಡದೆ ಅದನ್ನು ವಿರೋಧಿಸುವಿಕೆ.

**ರಕ್ಷಿಷ್ಯತೀತಿ ವಿಶ್ವಾಸಃ** ಶರಣಾಗತನಾದ ಯಾರನ್ನೇ ಆದರೂ ಪರಬ್ರಹ್ಮ ರಕ್ಷಿಸಿಯೇ ತೀರುತ್ತಾನೆ ಎಂಬ ಮಹಾವಿಶ್ವಾಸ-ಸಂಪೂರ್ಣ ನಂಬಿಕೆ.

**ಗೋಪ್ತೃತ್ವ ವರಣಂ ತಥಾ** ಸರ್ವಲೋಕಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಸ್ಥಿರತೆ.

**ಆತ್ಮ ನಿಕ್ಷೇಪ** ಎಂದರೆ ಭಗವಂತನಿಗೆ ತನ್ನ ಆತ್ಮವನ್ನೇ ಸಂಪೂರ್ಣವಾಗಿ ಒಪ್ಪಿಸಿ ಬಿಡುವುದು.

**ಕಾರ್ಪಣ್ಯ** ಅಂದರೆ ತನ್ನಲ್ಲಿರುವ ತಪ್ಪು, ಕುಂದು-ಕೊರತೆ ಎಲ್ಲವನ್ನೂ ಭಗವಂತನಲ್ಲಿ ವಿಜ್ಞಾಪಿಸಿಕೊಳ್ಳುವಿಕೆ. ಮಹಾಜ್ಞಾನಿಗಳಾದ ಆಳವಂದಾರ್ ಪ್ರಾರ್ಥಿಸಿದಂತೆ **ಪಾಪೋಽಹಂ, ಪಾಪಕರ್ಮಾಹಂ, ಪಾಪಾತ್ಮಾ, ಪಾಪಸಂಭವಃ** ಎಂದು ತಮ್ಮಲ್ಲಿರುವ ಸಮಸ್ತವಾದ ತಪ್ಪುಗಳನ್ನೂ, ಕುಂದನ್ನೂ, ಭಗವಂತನಲ್ಲಿ ತೋಡಿಕೊಂಡು ಅನನ್ಯವಾದ ಚಿತ್ತದಿಂದ **ನೀನೇ ನನಗೆ ಗತಿ; ಬೇರಾರೂ ಇಲ್ಲ** ಎಂದು ಪ್ರಾರ್ಥಿಸಬೇಕು. ಅದು ಕಾರ್ಪಣ್ಯ. ಅರ್ಜುನ ಶ್ರೀಕೃಷ್ಣನನ್ನು ಪಾರ್ಥಿಸುತ್ತಾ "ಕಾರ್ಪಣ್ಯದೋಷೋ ಪಹತಸ್ವಭಾವಃ" ಎಂದು ತನ್ನಲ್ಲಿರುವ ನ್ಯೂನತೆಗಳನ್ನೆಲ್ಲ ಭಗವಂತನಲ್ಲಿ ಹೇಳಿಕೊಂಡು ಭಗವಂತನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ. ಇದೇ ಶರಣಾಗತಿ.

ವಿಭೀಷಣನೂ ಈ ಆರು ಅಂಗಗಳನ್ನೂ ಅರಿತವ. ಆದ್ದರಿಂದಲೇ ರಾಮನಿಗೆ ಅನುಕೂಲನಾಗಿರಲು ನಿಶ್ಚಯಿಸಿ ಬಂದ. ರಾಮನಿಗೆ ಪ್ರತಿಕೂಲನಾದ ರಾವಣನನ್ನು ವಿರೋಧಿಸಿದ. ಸರ್ವಲೋಕಶರಣ್ಯನಾದ ರಾಘವನೇ ಗತಿ ಎಂದು ರಾಮನನ್ನೇ ಆಶ್ರಯಿಸಿದ.

**ತ್ಯಕ್ತ್ವಾ ದಾರಾಂಶ್ಚ ಪುತ್ರಾಂಶ್ಚ ರಾಘವಂ ಶರಣಂ ಗತಃ**
ಮಡದಿ ಮಕ್ಕಳು ಮನೆ ಮಠ ಎಲ್ಲವನ್ನೂ ತ್ಯಜಿಸಿ ತನ್ನ ಜೀವಿತವನ್ನೇ ರಾಮನ ಅಡಿದಾವರೆಗಳಲ್ಲಿ ಅರ್ಪಿಸಿದ.

ಸರ್ವಲೋಕ ಶರಣ್ಯಾಯ-ಕುಲ, ವಿದ್ಯೆ, ನಡೆವಳಿ ಇವೇ ಮೊದಲಾದವುಗಳನ್ನು ನೋಡದೆಯೇ, ಯೋಚಿಸದೆಯೇ ಎಲ್ಲರಿಗೂ ಶರಣ್ಯನಾಗಿರುವ-ರಾಘವಾಯ ಮಹಾತ್ಮನೇ-ಎಂದಿದಾನೆ. ಸುಲಭತ್ವದಲ್ಲಿಯೂ ಕೂಡ, ಉತ್ಕರ್ಷವಿದ್ದರೂ ಸುಲಭತ್ವ ಪರತ್ವಗಳೆರಡೂ ಅಪೇಕ್ಷಣೀಯವೇ. ಪ್ರತ್ಯಕ್ಷವಾಗಿ ತನ್ನ ಬರುವಿಕೆಯನ್ನು ಅರಿಕೆ ಮಾಡುವುದರಲ್ಲಿ ಪ್ರಯೋಜನವಿಲ್ಲದಿರುವುದರಿಂದ, ಸ್ವಾಪರಾಧಿ ಪರಿಪೂರ್ತಿ, ಇಹಪರಫಲ ಭೋಗವಿರಾಗ, ಶರಣಾಗತಿಗೆ ಲಕ್ಷಣವಾದ ನಿರಪಾಯೋಪಾಯಪರಿಗ್ರಹ, ಶ್ರೀರಾಮ ಕೈಂಕರ್ಯಾಭಿಲಾಷೆ, ತತ್ಪರಿಚಾರ ಕಾಂತರ್ಭಾವ, ಇವೆಲ್ಲ ಪ್ರಯೋಜನಗಳನ್ನೂ ಅರಿಕೆ ಮಾಡಿರಿ ಎಂದು ಕೇಳಿಕೊಳ್ಳುತ್ತಾನೆ. **ಕ್ಷಿಪ್ರಂ**-ಬೇಗ ಎನ್ನುತ್ತಾನೆ. ಶರಣ್ಯನಾಗಿರುವುದರಿಂದ ತಾನಾಗಿಯೇ ಪರಿಗ್ರಹಿಸುತ್ತಾನ. ಆದ್ದರಿಂದ ಹಾಗೆ ಮಾಡುವುದಕ್ಕೆ ಮೊದಲೇ ನೀವು ವಿಜ್ಞಾಪಿಸುವುದರಿಂದ ಸುಹೃತ್ಕಾರ್ಯವನ್ನು ನಡೆಸಿಕೊಟ್ಟಂತಾಗುವುದು ಎನ್ನುತ್ತಾನೆ. "ವಿಭೀಷಣ" ಎನ್ನುವುದರಲ್ಲಿಯೂ ಒಂದು ವಿಶೇಷಾರ್ಥ ಇದೆ. "ವಿಭೀಷಣಸ್ತು ಧರ್ಮಾತ್ಮಾ" ಎಂದು ಮಹರ್ಷಿವಾಲ್ಮೀಕಿ ಹೇಳುವಂತೆ ಧರ್ಮಾತ್ಮ ಆತ. "ರಾವಣನಂತೆ ನಾನು ಪ್ರತಿಕೂಲ ಅಲ್ಲ, ಅನುಕೂಲನೇ" ಎನ್ನುತ್ತಾನೆ!

ದುಷ್ಟನಾದ, ಪರಭಾರ್ಯಾಪಹಾರಕನಾದ ರಾವಣನ ತಮ್ಮ ಎಂದು ತನ್ನ ಕಾರ್ಪಣ್ಯವನ್ನು

ತೋಡಿಕೊಂಡ. ಇಷ್ಟೆಲ್ಲ ಹೇಳಿ "ರಾಮನಿಗೆ ನನ್ನನ್ನು ನಿವೇದಿಸಿ" ಎಂದು ವಾನರರನ್ನು ಪ್ರಾರ್ಥಿಸಿದ. ಆತ್ಮ ಸಮರ್ಪಣೆಯೇ ಆ ನಿವೇದನೆ. ಅದನ್ನು ಮಾಡಿದ ವಿಭೀಷಣ.

ವಿಭೀಷಣನ ಮಾತುಗಳನ್ನು ಕೇಳಿದ ಸುಗ್ರೀವ ಆವೇಶದಿಂದ ಕೂಡಿದನನಾಗಿ ಓಡುತ್ತ ಲಕ್ಷ್ಮಣಸಹಿತನಾಗಿದ್ದ ರಾಮನ ಒಳಿಗೆ ಬಂದ. ಏತತ್ತು ವಚನಂ ಶ್ರುತ್ವಾ ಸುಗ್ರೀವೋ ಲಘುವಿಕ್ರಮಃ ಎನ್ನುತ್ತಾರೆ ವಾಲ್ಮೀಕಿ. ಓಡೋಡಿಬಂದನಂತೆ !

"ರಾಘವ ! ನೋಡು. ನಾಲ್ಕುಜನ ರಾಕ್ಷಸರೊಂದಿಗೆ ಕೂಡಿ ವಿಭೀಷಣ ಎಂಬ ರಾಕ್ಷಸ ಬಂದಿದ್ದಾನೆ ರಾವಣನ ತಮ್ಮನೆಂದು ಹೇಳಿಕೊಳ್ಳುತ್ತಾನೆ. ರಾವಣನ ಪಕ್ಷವನ್ನು ತ್ಯಜಿಸಿ ನಮ್ಮ ಕಡೆ ಸೇರಿಕೊಳ್ಳಲು ಬಂದಿದಾನಂತೆ "ರಾಮ, ನಿನಗೆ ಶರಣಾಗಿದ್ದೇನೆ." ಎಂದು ಹೇಳುತ್ತಿದಾನೆ. ಆದರೆ, ನಾವು ಇವನ ಮಾತುಗಳನ್ನು ನಂಬಬಾರದು. ರಾವಣನಿಂದ ಕಳುಹಿಸಲ್ಪಟ್ಟ ಗೂಢ ಚಾರನೇ ಇವನಾಗಿರಬೇಕು. ಮೆಲ್ಲಗೆ, ನವಿಯಾದ ಮಾತುಗಳನ್ನಾಡಿ ನಮ್ಮೊಡನೆ ಸೇರಿಕೊಂಡು, ನಮಗೇ ದ್ರೋಹವನ್ನು ಬಗೆಯಲು ಇವನು ಬಂದಿದ್ದಾನೆ. ಸರ್ವಥಾ ಇವನನ್ನು ನಮ್ಮೊಡನೆ ಸೇರಿಸಿಕೊಳ್ಳಕೂಡದು. ಯಾರನ್ನಾದರೂ ಸೇರಿಸಿಕೊಳ್ಳಬಹುದು-ಆದರೆ, ಶತ್ರುವನ್ನು ಮಾತ್ರ ಹತ್ತಿರ ಸೇರಿಸಬಾರದು. ಒಳಗೇಸೇರಿಕೊಂಡು ನಮ್ಮ ನಮ್ಮಲ್ಲೇ ಒಡಕು ಉಂಟುಮಾಡಿಬಿಡುತ್ತಾರೆ. ನಾವು ಅಜಾಗರೂಕರಾಗಿರುವ ಸಮಯದಲ್ಲಿ ನಮ್ಮ ಮೇಲೆಯೇ ಬಿದ್ದುಬಿಡುತ್ತಾರೆ. ನಮ್ಮನ್ನು ಕೊಲ್ಲುವ ಸಲುವಾಗಿಯೇ ಈತ ಬಂದಿದಾನೆ. ಜೊತೆಗೆ ಕ್ರೂರನಾದ ರಾವಣನ ತಮ್ಮ ಎಂದು ಬೇರೆ ಹೇಳುತ್ತಿದಾನೆ. ಇವನನ್ನು ಸರ್ವಥಾ ನಮ್ಮಲ್ಲಿ ಸೇರಿಸಿಕೊಳ್ಳಬಾರದು. ನನ್ನನ್ನು ಕೇಳಿದರೆ, ಇವನನ್ನು ಈಗಲೇ ನೆರೆ ಒಡಿದು ಕೊಲ್ಲಬೇಕು" ಎಂದ.

ಸುಗ್ರೀವ ಹೀಗೇಕೆ ವಿಭೀಷಣನ ಮೇಲೆ ಶಂಕಿಸಿದ ? ರಾಮನಲ್ಲಿರುವ ಪ್ರೇಮಾತಿಶಯದಿಂದಲೇ ಹೀಗೆ ಶಂಕಿಸುತ್ತಾನೆ **"ಅತಿಸ್ನೇಹಃ ಪಾಪಶಂಕೀ"** ಎಂಬ ನ್ಯಾಯದಂತೆ ರಾಮಚಂದ್ರನಿಗೆ ಸರ್ವಶಕ್ತಿ ಮಹತ್ವವಿರುವುದೆಂದು ತಿಳಿದೂ ಅದನ್ನು ಮರೆತು. ಶರಣಾಗತವತ್ಸಲನಾದ ರಾಮನು ಶರಣಾಗತಿ ಎಂಬ ಶಬ್ದವನ್ನು ಕೇಳಿದಕೂಡಲೇ "ಗೂಢಹೃದಯನಾದ ವಿಭೀಷಣನನ್ನು ಪರಿಗ್ರಹಿಸಿಬಿಡುತ್ತಾನ ಆಮೇಲೆ ರಾಮನಿಗೆ ಅಪಚಾರಮಾಡಿಬಿಡುತ್ತಾನ" ಎಂಬ ಭಯ ಶಂಕೆಗಳಿಂದ ಓಡೋಡಿ ಬಂದ. ಇವನನ್ನು ಈ ಕ್ಷಣ ಮುಗಿಸಿಬಿಡಬೇಕು. ಎನ್ನುತ್ತಾನೆ ಸುಗ್ರೀವ !

ಸುಗ್ರೀವನ ಉದ್ವೇಗಪೂರ್ಣವಾದ ಮಾತನ್ನು ಕೇಳಿದ, ರಾಮ. ಪಕ್ಕದಲ್ಲಿದ್ದ ಹನುಮಂತನೇ ಮುಂತಾದ ವಾನರವೀರರನ್ನು ಕುರಿತು, ''ವಾನರವೀರರೆ ! ಈಗ ಮಹಾರಾಜನಾದ ಸುಗ್ರೀವ ಯುಕ್ತಸಂಗತವಾದ ಕೆಲವು ಮಾತುಗಳನ್ನಾಡಿ "ರಾವಣನ ತಮ್ಮನಾದ ವಿಭೀಷಣನನ್ನು ಸೇರಿಸಿಕೊಳ್ಳಬಾರದು" ಎಂದದ್ದನ್ನು ನೀವೆಲ್ಲ ಕೇಳಿದ್ದೀರಿ. ನೀವೆಲ್ಲ ಈ ವಿಷಯದಲ್ಲಿ ನಿಮ್ಮನಿಮ್ಮ ಅಭಿಪ್ರಾಯವನ್ನು ಹೇಳಬೇಕು" ಎಂದ.

ರಾಮನ ಮಾತನ್ನು ಕೇಳಿದ ವಾನರಪ್ರಮುಖರೆಲ್ಲತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳಲು ಮುಂದಾದರು. ವಾನರರೆಲ್ಲ ರಾಮನ ಸತ್ಯವ್ರತತ್ವವನ್ನೂ ಶೂರತ್ವವನ್ನೂ, ಧಾರ್ಮಿಕತೆಯನ್ನೂ, ದೃಢವಿಕ್ರಮವನ್ನೂ ಪ್ರಶಂಸಿಸಿದರು. ''ರಾಮಾ, ನೀನು ಸ್ವತಃ ಎಲ್ಲವನ್ನೂ ಬಲ್ಲವನಾದರೂ, ಬುದ್ಧಿವಂತನಾದರೂ, ಯುಕ್ತಾಯುಕ್ತವನ್ನು ತಿಳಿದವನಾದರೂ, ಶಕ್ತಿವಂತನಾದರೂ ಅಲ್ಪರಾದ ನಮ್ಮನ್ನು ಸಲಹೆ ಕೇಳುತ್ತಿರುವೆ. ಇದು ನಿನ್ನ ಹೃದಯ ವೈಶಾಲ್ಯವನ್ನೂ ಬುದ್ಧಿವಂತಿಕೆಯನ್ನೂ

ಪ್ರದರ್ಶಿಸುತ್ತದೆ. ನಮ್ಮೆಲ್ಲರ ಸಲಹೆ ಕೇಳುವುದರ ಮೂಲಕ ನೀನು ನಮ್ಮನ್ನು ನಿನ್ನವರನ್ನಾಗಿ ಭಾವಿಸಿರುವ ವಿಷಯ ಮತ್ತಷ್ಟು ಸ್ಪಷ್ಟವಾಗುತ್ತದೆ. ನಾವು ಬುದ್ಧಿಯಲ್ಲಿ, ಜ್ಞಾನದಲ್ಲಿ ಅಲ್ಪರಾದರೂ, ನೀನು ಕೇಳಿದುದರಿಂದ ನಮಗೆ ತಿಳಿದಂತೆ ಹೇಳುತ್ತೇವೆ'' ಎಂದು ಸಮಸ್ತ ವಾನರ ಪ್ರಮುಖರೂ ರಾಮನನ್ನು ಕೊಂಡಾಡಿದರು.

ಅನಂತರ ಎಲ್ಲರಿಗೂ ಯುವರಾಜನೆನಿಸಿದ ಅಂಗದ ವಿನಯದಿಂದ "ರಾಮಾ! ಬಂದಿರುವವ, ಶತ್ರುಪಕ್ಷದವನು ಎಂದು ತಿಳಿದ ಮೇಲೆ ನಾವು ಬಹಳ ಎಚ್ಚರಿಕೆಯಿಂದ ಇರಬೇಕು. ಯಾವ ಸಮಯದಲ್ಲಿ ಶತ್ರು ನಮ್ಮನ್ನು ಮೋಸಗೊಳಿಸುತ್ತಾನೋ ಎಂದು ಕಣ್ಣಲ್ಲಿ ಕಣ್ಣಿಟ್ಟು ಕಾಯಬೇಕು. ಶತ್ರುಪಕ್ಷದವನನ್ನು ನಮ್ಮ ಪಕ್ಷಕ್ಕೆ ಸೇರಿಸಿಕೊಳ್ಳುವ ಮೊದಲು ಅವನ ಗುಣದೋಷಗಳನ್ನು ಸರಿಯಾಗಿ ಪರಾಮರ್ಶಿಸಬೇಕು. ದೋಷ ಕಂಡುಬಂದರೆ ತ್ಯಾಗಮಾಡಬೇಕು. ಹೆಚ್ಚಾಗಿ ಗುಣಗಳಿದ್ದರೆ ಅವನನ್ನು ಸೇರಿಸಿಕೊಳ್ಳಬೇಕು ಆದರೆ, ಸೇರಿಸಿಕೊಳ್ಳುವ ಮೊದಲು ಬಹಳವಾಗಿ ಎಚ್ಚರಿಕೆಯಿಂದ ಇರಬೇಕು" ಎಂದ.

ಬಹಳವಾಗಿ ಯೋಚಿಸಿದ ನಂತರ ಶರಭ ಎಂಬ ಪ್ರಮುಖ ವಾನರ "ಪುರುಷಸಿಂಹ, ರಾಘವ ಈ ವಿಭೀಷಣನ ಬಳಿಗೆ ಯಾರಾದರೂ ಗುಪ್ತಚಾರರನ್ನು ಕಳುಹಿಸಬೇಕು. ಬುದ್ಧಿಶಾಲಿಗಳಾದ ಆ ಗುಪ್ತಚಾರರು ಅವನ ಬುದ್ಧಿಯನ್ನು ಪರೀಕ್ಷಿಸಲಿ. ಅವನು ಒಳ್ಳೆಯವ ಎಂದು ಕಂಡುಬಂದರೆ ಆಗ ಅವನನ್ನು ಸೇರಿಸಿಕೊಳ್ಳೋಣ" ಎಂದ.

"ಅದೇಶಕಾಲೇ ಸಂಪ್ರಾಪ್ತಃ ಸರ್ವಥಾ ಶಂಕ್ಯತಾಮಯಮ್!" ವಿಭೀಷಣ ರಾವಣನ ತಮ್ಮ. ರಾವಣನೋ ಪಾಪಿ, ದುಷ್ಟ. ಅವನ ತಮ್ಮ ಇವನು. ಅಲ್ಲದೆ ಇವನು ಬಂದಿರುವ ಕಾಲ, ದೇಶ, ಒಂದೂ ಸರಿಯಾಗಿಲ್ಲ. ಬರಬೇಕಾಗಿದ್ದರೆ ಸೀತೆಯನ್ನು ರಾವಣ ಹೊತ್ತುಕೊಂಡು ಹೋದಾಗಲೇ ಬಂದಿರಬೇಕಿತ್ತು. ಆಗ ಸುಮ್ಮನಿದ್ದು ಈಗ ಬರುತ್ತಿದಾನೆ. ಆದ್ದರಿಂದ ಇವನು ಬಂದಿರುವ ಕಾಲ ಸರಿಯಾಗಿಲ್ಲ ಇವನು ವಿಶ್ವಾಸಕ್ಕೆ ಅರ್ಹನಲ್ಲ. ಸರ್ವಥಾ ಶಂಕಾಸ್ಪದನೇ ಸರಿ' ಎಂದ.

ವಾಗ್ವೈಭವದಿಂದ ಒಪ್ಪುವ ಮೈಂದ ಯೋಚಿಸಿ, ವಿಚಾರಿಸಿ ಯುಕ್ತಿಯುಕ್ತವಾದ ಮಾತುಗಳನ್ನು ಹೇಳಿದ. "ಮಹಾರಾಜ, ಬಂದಿರುವವನು ರಾವಣನ ತಮ್ಮ ಇವನೊಡನೆ ಮೊದಲು ಮಾತನಾಡಿ ಅವನಿಂದ ರಾವಣನ ಬಗ್ಗೆ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳೋಣ. ಅನಂತರ, ಇವನು ಯೋಗ್ಯನಾದರೆ ಸ್ವೀಕರಿಸೋಣ. ಅಯೋಗ್ಯನಾದರೆ ದೂರವಿಡೋಣ ಎಂದ ಇವರೆಲ್ಲರ ಅಭಿಪ್ರಾಯವನ್ನೂ ಮಂದಸ್ಮಿತವದನನಾಗಿ ರಾಘವ ಕೇಳುತ್ತಿದ್ದ. ಒಮ್ಮೆ ತನ್ನ ಉತ್ತಮವಾದ ಕಣ್ಣುಗಳಿಂದ ಹನುಮಂತನನ್ನು ನೋಡಿದ. ಆಗ, ಸಚಿವೋತ್ತಮನೆನಿಸಿದ. ಸಂಪೂರ್ಣವಾಗಿ ಶಾಸ್ತ್ರವನ್ನು ಅಧ್ಯಯನ ಮಾಡಿದುದರಿಂದ ಉಂಟಾದ ಸಮೀಚೀನವಾದ ಜ್ಞಾನವುಳ್ಳ, ಸಂಸ್ಕಾರ ಸಂಪನ್ನನಾದ ಹನುಮಂತ ಶಿಷ್ಟವಾದ, ಸಾರ್ಥಕವಾದ, ಸುಂದರವಾದ, ಸಂಕ್ಷಿಪ್ತ ವಚನಗಳನ್ನು ಹೇಳಿದ ವಾಲ್ಮೀಕಿಯ ಮಾತಿನಲ್ಲೇ ಕೇಳಬೇಕು.

**ಸಭವಂತಂ ಮತಿಃಶ್ರೇಷ್ಠಂ ಸಮರ್ಥಂ ವದತಾಂವರಂ।**
**ಅತಿಶಯಯಿತುಂ ಶಕ್ತೋ ಬೃಹಸ್ಪತಿರಪಿ ಬ್ರುವನ್॥**
**ನವಾದಾನ್ನಾಪಿ ಸಂಘರ್ಷಾನ್ನಾಧಿಕ್ಯಾನ್ನಚ ಕಾಮತಃ।**
**ವಕ್ಷ್ಯಾಮಿ ವಚನಂ ರಾಜನ್! ಯಥಾರ್ಥಂ ರಾಮ ಗೌರವಾತ್॥**

"ಕಾರ್ಯ ಗೌರವಾರ್ಥವಾಗಿ "ಹೇಳು" ಎಂದದ್ದರಿಂದ ಹೇಳುತ್ತೇನೆ" ಎನ್ನುತ್ತಾನೆ ಮಾರುತಿ. ಉತ್ತಮೋತ್ತಮು ಅಲ್ಲವೆ ?

ಅರ್ಥಾನರ್ಥ ನಿಮಿತ್ತಂ ಹಿ ಯದುಕ್ತಂ ಸಚಿವೈಸ್ತವ |
ತತ್ರದೋಷಂ ಪ್ರಪಶ್ಯಾಮಿ ಕ್ರಿಯಾನಹ್ಯುಪಪದ್ಯತೇ ||
ಋತೇ ನಿಯೋಗಾತ್ಸಾಮರ್ಥ್ಯಮವ ಬೋದ್ಧುಂ ನ ಶಕ್ಯತೇ |
ಸಹಸಾವಿನಿಯೋಗೋಹಿ ದೋಷವಾನ್ಪ್ರತಿಭಾತಿಮಾ ||
ಚಾರಪ್ರಣಿಹಿತಂ ಯುಕ್ತಂ ಯದುಕ್ತಂಸಚಿವೈಸ್ತವ |
ಅರ್ಥಸ್ಯಾಸಂಭವಾತ್ತತ್ರ ಕಾರಣಂ ನೋಪಪದ್ಯತೇ ||
ಆದೇಶಕಾಲೇ ಸಂಪ್ರಾಪ್ತ ಇತ್ಯಯಂ ಯದ್ವಿಭೀಷಣಃ |
ವಿವಕ್ಷಾ ತತ್ರಮೇಸ್ತೀಯಂ ತಾಂ ನಿಬೋಧ ಯಥಾಮತಿ ||
ಸವಿಷ ದೇಶಃ ಕಾಲಶ್ಚ ಭವತೀತಿ ಯಥಾ ತಥಾ |
ಪುರುಷಾತ್ಪುರುಷಂ ಪ್ರಾಪ್ಯ ತಥಾ ದೋಷಗುಣಾವಪಿ ||
ದೌರಾತ್ಮ್ಯಂ ರಾವಣೇ ದೃಷ್ಟ್ವಾ ವಿಕ್ರಮಂಚ ತಥಾತ್ವಯಿ |
ಯುಕ್ತ ಮಾಗಮನಂ ತಸ್ಯ ಸದೃಶಂ ತಸ್ಯಬುದ್ಧಿತಃ ||
ಅಜ್ಞಾತರೂಪೈಃ ಪುರುಷೈಃ ಸ ರಾಜನ್ ! ಪೃಚ್ಛ್ಯತಾಮಿತಿ |
ಯದುಕ್ತಮತ್ರಮೇ ಪ್ರೇಕ್ಷಾ ಕಾಚಿದಸ್ತಿ ಸಮೀಕ್ಷಿತಾ ||
ಪೃಚ್ಛ್ಯಮಾನೋ ವಿಶಂಕೇತ ಸಹಸಾ ಬುದ್ಧಿಮಾನ್ವಚಃ |
ತತ್ರಮಿತ್ರಂ ಪ್ರದುಷ್ಯೇತ ಮಿಥ್ಯಾ ಪೃಷ್ಟಂ ಸುಖಾಗತಂ ||
ಅಶಕ್ಯಃ ಸಹಸಾರಾಜನ್ ಭಾವೋ ವೇತ್ತುಂ ಪರಸ್ಯವೈ |
ಅಂತಃ ಸ್ವಭಾವೈರ್ಗೀತೈಸ್ತೈರ್ನೈಪುಣ್ಯಂ ಪಶ್ಯತಾ ಭೃಶಂ ||
ನತ್ವಸ್ಯ ಬ್ರುವತೋ ಜಾತು ಲಕ್ಷ್ಯತೇ ದುಷ್ಟಭಾವತಾ |
ಪ್ರಸನ್ನಂ ವದನಂ ಚಾಪಿ ತಸ್ಮಾನ್ಮೇ ನಾಸ್ತಿಸಂಶಯಃ ||
ಅಶಂಕಿತ ಮತಿಸ್ಸ್ವಸ್ಥೋನಶಠಃ ಪರಿಸರ್ಪತಿ |
ನ ಚಾಸ್ಯ ದುಷ್ಟಾವಾಕ್ಚಾಪಿ ತಸ್ಮಾನ್ನಾಸ್ತೀಹ ಸಂಶಯಃ ||
ಆಕಾರಶ್ಛಾದ್ಯಮಾನೋಪಿ ನಶಕ್ಯೋವಿನಿಗೂಹಿತುಂ |
ಬಲಾದ್ಧಿವಿವೃಣೋತ್ಯೇವ ಭಾವಮಂತರ್ಗತಂ ನೃಣಾಂ ||
ದೇಶ ಕಾಲೋಪ ಪನ್ನಂಚ ಕಾರ್ಯಂ ಕಾರ್ಯವಿದಾಂವರ |
ಸಫಲಂ ಕುರುತೇಕ್ಷಿಪ್ರಂ ಪ್ರಯೋಗೇಣಾಭಿಸಂಹಿತಂ ||
ಉದ್ಯೋಗಂ ತವಸಂಪ್ರೇಕ್ಷ್ಯ ಮಿಥ್ಯಾವೃತ್ತಂ ಚ ರಾವಣಂ |

**ವಾಲಿನಶ್ಚ ವಧಂ ಶ್ರುತ್ವಾ ಸುಗ್ರೀವಂಚಾಭಿಷೇಚಿತಂ ||**

**ರಾಜ್ಯಂ ಪ್ರಾರ್ಥಯ ಮಾನಶ್ಚ ಬುದ್ಧಿಪೂರ್ವ ಮಿಹಾಗತಃ |**

**ಏತಾವತ್ತು ಪುರಸ್ಕೃತ್ಯ ಯುಜ್ಯತೇ ತತ್ರಸಂಗ್ರಹಃ ||**

"ಪ್ರಭೋ, ತಾವು ಬುದ್ಧಿವಂತರಲ್ಲಿ ಶ್ರೇಷ್ಠರು, ಸಾಮರ್ಥ್ಯಶಾಲಿಗಳೂ ಉತ್ತಮವಾದ ಧಾರ್ಮಿಕರೂ ಆಗಿದೀರಿ. ಬುದ್ಧಿಯಲ್ಲಿ ಸಾಕ್ಷಾತ್ ಬೃಹಸ್ಪತಿಯೂ ನಿಮಗೆ ಸಾಟಿಯಾಗಲಾರ.

"ಮಹಾರಾಜ, ನಾನು ಈಗ ನಿಮ್ಮ ಮುಂದೆ ಕೆಲವು ಮಾತುಗಳನ್ನು ನಿವೇದಿಸುತ್ತೇನೆ. ಅದನ್ನು ನಾನು ಜಂಭದಿಂದಲೋ, ಗರ್ವದಿಂದಲೋ, ಅಥವಾ ಚರ್ಚೆಗೆ ಪ್ರತಿಯಾಗಿ ಚರ್ಚೆಯಾಗಿಯೋ, ಅಲ್ಲದೆ ನನ್ನ ಮಾತೇ ಸಿದ್ಧಿಸಬೇಕು ಎಂಬ ಹಠದಿಂದಲೋ ಹೇಳುತ್ತಿಲ್ಲ. ನಿಜವಾಗಿ ಕಾರ್ಯಸಿದ್ಧಿಯಾಗಬೇಕಾದರೆ ಯಾವ ಕ್ರಮವನ್ನು ಅನುಸರಿಸಬೇಕು, ಯಾವ ಮಾರ್ಗವನ್ನು ಅನುಸರಿಸಿದರೆ ಲಾಭವಾಗುವುದು, ಯಾವುದು ಯಥಾರ್ಥ ಎಂದು ನನಗೆ ಕಂಡುಬಂದಿದೆಯೋ ಅದನ್ನು ತಮ್ಮ ಮುಂದೆ ನಿವೇದಿಸುತ್ತೇನೆ.

"ರಾಘವ, ಇದುವರೆಗೆ ತಮ್ಮ ಮಂತ್ರಿಗಳೊಡನೆ ಸಮಾಲೋಚನೆ ನಡೆಸಿದ್ದರಲ್ಲಿ ಅವರು ಅನೇಕ ವಿಧವಾಗಿ ತಮ್ಮ ಅಭಿಪ್ರಾಯಗಳನ್ನು ಮುಂದಿಟ್ಟರು. ನನ್ನ ಬುದ್ಧಿಗೆ ಈ ಅಭಿಪ್ರಾಯ ಗಳೆಲ್ಲ ವಿಚಾರಣೀಯ ಎಂದು ಅನಿಸುತ್ತದೆ. ಅಂಗದ ಹೇಳಿದಂತೆ ಗುಣದೋಷಗಳನ್ನು ಪರೀಕ್ಷಿಸುವುದು ಈಗ ಸಾಧ್ಯವಿಲ್ಲ. ವ್ಯಕ್ತಿಯನ್ನು ಒಂದು ಕಾರ್ಯದಲ್ಲಿ ನಿಯೋಜಿಸಿದರೇ ಆಗ ಅವನ ಗುಣ ವ್ಯಕ್ತವಾಗುವುದು. ಹಾಗೆಂದು, ಈಗ ನಾವು ಸಹಸಾ ವಿಭೀಷಣನನ್ನು ಮಹತ್ತರವಾದ ಕಾರ್ಯದಲ್ಲಿ ನಿಯೋಜಿಸಲೂ ಆಗದು-ಆದ್ದರಿಂದ ಗುಣ–ದೋಷಗಳನ್ನು ನಿರ್ಧರಿಸುವ ಸಮಯ ಇದಲ್ಲ ಎನಿಸುತ್ತದೆ.

ಶರಭ ಹೇಳಿದಂತೆ ಗುಪ್ತಚಾರರನ್ನು ನಿಯಮಿಸಿ ವಿಭೀಷಣನನ್ನು ಪರೀಕ್ಷಿಸುವುದು ಉಚಿತವಾಗಿ ತೋರದು. ದೂರದಲ್ಲಿರುವ, ಅವಿತುಕೊಂಡಿರುವವರ ಬಳಿಗೆ ಸಾಮಾನ್ಯವಾಗಿ ಗುಪ್ತಚಾರರನ್ನು ನಿಯಮಿಸಬೇಕು. ವಿಭೀಷಣ ಹಾಗಿಲ್ಲ. ಇದಿರಿಗೇ ಸಾಕ್ಷಾತ್ತಾಗಿ ಬಂದು ನಿಂತಿದಾನೆ. ಆದ್ದರಿಂದ, ಅವನನ್ನು ಪರೀಕ್ಷಿಸಲು ಗೂಢಚಾರರನ್ನು ಕಳುಹಿಸುವುದು ಸರಿಯಾಗದು.

ಜಾಂಬವಂತರು ಹೇಳಿದರು. ವಿಭೀಷಣ ಬಂದ ಕಾಲ, ದೇಶ ಸರಿಯಾಗಿಲ್ಲ ಎಂದು. ಅದೂ ನನ್ನ ಅಭಿಪ್ರಾಯದಲ್ಲಿ ಸರಿಯಲ್ಲ. ವಿಭೀಷಣ ಬಂದಿರುವ ಈ ಕಾಲ, ಈ ದೇಶ ಅನುರೂಪವಾಗಿದೆ, ಪ್ರಶಸ್ತವಾಗಿದೆ ಎಂದು ನನ್ನ ಬುದ್ಧಿಗೆ ಹೊಳೆಯುತ್ತಿದೆ. ವಿಭೀಷಣ ಈಗ ಒಬ್ಬ ನೀಚ ಪುರುಷನ ಕಡೆಯಿಂದ ಒಬ್ಬ ಉತ್ತಮ ಪುರುಷನ ಕಡೆಗೆ ಬರುತ್ತಿದಾನೆ. ಹಾಗೆ ಅವನು ಬರುವ ಮೊದಲು ರಾವಣನ ದೌಷ್ಟ್ಯವನ್ನೂ ನಿಮ್ಮ ಶ್ರೇಷ್ಠತೆಯನ್ನೂ ಚೆನ್ನಾಗಿ ಪರಿಶೀಲಿಸಿಯೇ ಇಲ್ಲಿಗೆ ಬಂದಿದಾನೆ. ಆದ್ದರಿಂದ, ಅವನು ಇಲ್ಲಿಗೆ ಬಂದಿರುವುದು ಸರ್ವಥಾ ಯುಕ್ತವಾಗಿದೆ. ಇದುವರೆಗೆ ರಾವಣನಿಗೆ ವಿವೇಕವನ್ನು ಹೇಳಿ ನೋಡಿದ. ಈಗ ನೀವು ಸಮಸ್ತ ಸೈನ್ಯದೊಡನೆ ಸಮರಕ್ಕೆ ಸಿದ್ಧರಾಗಿ ಬಂದಿರುವುದನ್ನು ಕಂಡ. ರಾವಣನ ದುಷ್ಟತನವನ್ನೂ, ನಿಮ್ಮ ಪರಾಕ್ರಮವನ್ನೂ ತೂಗಿ ನೋಡಿ ರಾವಣನನ್ನು ಬಿಟ್ಟು ನಿಮ್ಮ ಕಡೆಗೆ ಬಂದ. ಇದು ವಿಭೀಷಣನ ಉತ್ತಮ ಬುದ್ಧಿಯನ್ನು ಪ್ರಕಾಶಪಡಿಸುತ್ತದೆ. ಆದ್ದರಿಂದ, ವಿಭೀಷಣ ಬಂದಿರುವ ಈ ಕಾಲ, ಈ ದೇಶ ಪ್ರಶಸ್ತವಾಗಿದೆ.

ಮೈಂದ ಹೇಳಿದಂತೆ ವಿಭೀಷಣನೊಡನೆ ಮಾತಾಡಿ ಅವನನ್ನು ಒಳ್ಳೆಯವನೇ ಕೆಟ್ಟವನೇ

ಎಂದು ನಿರ್ಧರಿಸುವುದೂ ಸರಿಯಲ್ಲ. ಯಾವ ಅಪರಿಚಿತ ವ್ಯಕ್ತಿಯೇ ಆಗಲಿ, ಹೋಗಿ "ನೀನು ಯಾರು ? ಎಲ್ಲಿಂದ ಬಂದೆ ? ನಿನ್ನ ವಿಷಯ ಏನು ?" ಎಂದು ವಿಚಾರಿಸಿದರೆ, ಸಹಜವಾಗಿ ಆ ವ್ಯಕ್ತಿ ಅವನ ಮೇಲೆ ಸಂದೇಹಗೊಳ್ಳುತ್ತಾನೆ. ಅಲ್ಲದೆ, ಒಂದು ವೇಳೆ ವಿಭೀಷಣನಿಗೆ ತನ್ನನ್ನು ಪರೀಕ್ಷಿಸಲು ಈ ರೀತಿ ತಿಳಿದೂ ತಿಳಿದೂ ಕೇಳುತ್ತಿದಾನೆ ಎಂದು ಗೊತ್ತಾದರೆ ಆಗ ಅವನ ಮನಸ್ಸು ಖಿನ್ನವಾಗುತ್ತದೆ.

ಇದೂ ಅಲ್ಲದೆ, ಕೇವಲ ಮೇಲೆ ಆಡಬಹುದಾದ ಮಾತಿನಿಂದ ವ್ಯಕ್ತಿಯ ಒಳ್ಳೆಯತನ ಕೆಟ್ಟ ತನವನ್ನು ನಿರ್ಣಯಿಸಲು ಸಾಧ್ಯವಿಲ್ಲ. ನನ್ನ ಅಭಿಪ್ರಾಯದಲ್ಲಿ ಈ ರಾಕ್ಷಸ ನಿರ್ದೋಷಿಯೆನಿಸು ತ್ತದೆ. ಇವನ ಮುಖ ಪ್ರಸನ್ನವಾಗಿದೆ. ಇವನ ಮಾತುಗಳು ಕಲುಷರಹಿತವಾಗಿವ. ದುಷ್ಟ ನಾದವನು ಇಷ್ಟು ನಿರ್ಭೀತಿಯಿಂದ ನೇರವಾಗಿ ತನ್ನನ್ನು ತೋರಿಸಿಕೊಳ್ಳಲಾರ. ದುಷ್ಟನ ದುಷ್ಟ ತನ ಎಷ್ಟೇ ಮುಚ್ಚಿಕೊಂಡರೂ ಬಾಹ್ಯ ಚಿಹ್ನೆಗಳಿಂದ ಸ್ಪಷ್ಟವಾಗಿ ಕಾಣಬರುತ್ತದೆ. ವಿಭೀಷಣನಲ್ಲಿ ಈ ರೀತಿಯ ದುಷ್ಟತನ ಕಾಣುತ್ತಿಲ್ಲ. ಕಾರ್ಯ ಧುರಂಧರನಾದ ರಘುವೀರ, ನಿಶ್ಚಯವಾಗಿ, ವಿಭೀಷಣ ಯೋಚಿಸಿಯೇ ಇಲ್ಲಿಗೆ ಬಂದಿದಾನೆ. ನಿಮ್ಮ ಉತ್ಸಾಹಯುಕ್ತವಾದ ಉದ್ಯೋಗ, ಧಾರ್ಮಿಕತೆ, ರಾವಣನ ಕುಟಿಲತನ, ಮಿಥ್ಯಾಚಾರ, ನೀವು ವಾಲಿಯನ್ನು ಕೊಂದು ಸುಗ್ರೀವನಿಗೆ ರಾಜ್ಯ ಕೊಡಿಸಿದ್ದು ಎಲ್ಲವನ್ನೂ ತಿಳಿದು ಇವನು ಸರಿಯಾದ ಕಾಲದಲ್ಲಿ ರಾಜ್ಯಕಾಮನಾಗಿ ನಿಮ್ಮ ಲ್ಲಿಗೆ ಬಂದಿದಾನೆ. ಇವನನ್ನು ಸಂಗ್ರಹ ಮಾಡುವುದು ಉಚಿತವೆನಿಸುತ್ತದೆ. ಬುದ್ಧಿವಂತರಲ್ಲಿ ಶ್ರೇಷ್ಠನಾದ ರಘುನಾಥ, ಈ ಪ್ರಕಾರವಾಗಿ ಈ ರಾಕ್ಷಸನ ಸರಳತೆ, ನಿರ್ದೋಷತೆಯ ಬಗ್ಗೆ ನನ್ನ ಬುದ್ಧಿಗೆ ನಿಲುಕಿದಷ್ಟನ್ನು ನಿವೇದಿಸಿದ್ದೇನೆ. ಇದನ್ನು ಕೇಳಿ ನೀವು ನಿಮಗೆ ಹೇಗೆ ಉಚಿತ ಎಂದು ತೋರುವುದೋ ಹಾಗೆ ಮಾಡಬಹುದು ಎಂದ.

ಈ ವಿಭೀಷಣನ ಆರ್ಜವನ್ನು ಕುರಿತು ನನ್ನ ಶಕ್ತ್ಯಾನುಸಾರ ಹೇಳಿದೇನೆ.

**ಯಥಾಶಕ್ತಿ ಮಯೋಕ್ತಂತು ರಾಕ್ಷಸಸ್ಯಾರ್ಜವಂಪ್ರತಿ ।**
**ತ್ವಂ ಪ್ರಮಾಣಂತು ಶೇಷಸ್ಯ ಶ್ರುತ್ವಾಬುದ್ಧಿಮತಾಂವರ ॥**

ಇದರ ಮೇಲೆ ಇವನನ್ನು ಸೇರಿಸಿಕೊಳ್ಳುವುದಕ್ಕೂ, ಬಿಡುವುದಕ್ಕೂ ನೀನೇ ಪ್ರಮಾಣವು ಎಂದು ನಿವೇದಿಸುತ್ತಾನೆ.

ಹನುಮಂತನ ಮಾತಿನ ವೈಖರಿಗೆ ಮೊದಲ ಭೇಟಿಯಲ್ಲೇ ಮನಸೋತಿದ್ದ ಶ್ರೀರಾಮಚಂದ್ರ ಅವನ ಮಾತನ್ನು ಕೇಳಬೇಕೆಂದರೇ ರಾಮನಿಗೆ ಮಹದಾಸೆ. ಆತನ ಮಾತಿನ ಅಂದ, ಸೊಗಸು ವರ್ಣನಾತೀತ. ಯಾವ ವಿಷಯವನ್ನು ಯಾವ ಸಂದರ್ಭದಲ್ಲಿ ಎಷ್ಟು ಹೇಳಬೇಕು, ಹೇಗೆ ಹೇಳ ಬೇಕು ಎಂಬುದನ್ನು ಹನುಮನ ಮಾತಿನಿಂದ ಕಲಿಯಬೇಕು ನಾವು. ವಿಭೀಷಣನ ಬಗೆಗೆ ಹೇಳು ವಾಗ ಮಾರುತಿ ಬರೀ ತನಗೆ ಅನಿಸಿದ್ದನ್ನು ಹೇಳಲಿಲ್ಲ. ಅಥವಾ ಹೇಳಿ ಮುಗಿಸಿ. "ನಾ ಹೇಳು ವಂತೆಯೇ ಮಾಡಿ" ಎಂದು ರಾಮನಿಗೆ ತಿಳಿಸಲಿಲ್ಲ. **ಯಥಾಶಕ್ತಿಮಯೋಕ್ತಂತು** ಶಕ್ತ್ಯಾನುಸಾರ ಹೇಳಿದೇನೆ . . . . ನೀನು ಪ್ರಾಜ್ಞ. ತೋಚಿದಂತೆ ಮಾಡು ಎನ್ನುತ್ತಾನೆ. ಮಾತ್ರವಲ್ಲ ತನಗೆ ಮೊದಲು ಹೇಳಿದವರು ವ್ಯಕ್ತಪಡಿಸಿದ ಸಂಶಯಗಳಿಗೆಲ್ಲ "ಹೀಗೆ ಅಲ್ಲ – ಹೀಗೆ'' ಎಂದು ವಿಶ್ಲೇ ಷಿಸಿ, ರಾಮನಿಗೆ ಪುನಃ ಸಂಶಯಕ್ಕೇ ಅವಕಾಶ ಇರದ ಹಾಗೆ ಹೇಳಿದಾನೆ. ಬುದ್ಧಿವಂತರಲ್ಲೂ ಶ್ರೇಷ್ಠನಾದವನಲ್ಲವೆ !

ಹನುಮಂತನೇ ಮೊದಲಾದ ವಾನರ ಪ್ರಮುಖರು ಹೇಳಿದ ಮಾತುಗಳನ್ನು ಕೇಳಿದ

ಶ್ರೀರಾಮ. ಪ್ರಸನ್ನ ಚಿತ್ತದಿಂದ ಶ್ರೀರಾಮ ವಾನರರೆಲ್ಲರನ್ನೂ ಕುರಿತು ಹೇಳಿದ. ಪ್ರಸನ್ನಾತ್ಮಾ ಪ್ರಸನ್ನ ಚಿತ್ತನಾಗಿ ಎಂದಿದ್ದಾರೆ. ಸುಗ್ರೀವಾದಿಗಳ ಮಾತುಗಳಿಂದ ಮನಸ್ಸು ಕಲುಷಿತವಾದರೂ ಹನುಮದ್ವಾಕ್ಯದಿಂದ ರಾಮ ಪ್ರಸನ್ನ ಚಿತ್ತನಾದ. "ಮಿತ್ರರೇ ! ನೀವೆಲ್ಲ ನನ್ನ ಹಿತವನ್ನು ಬಯಸಿ ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ಹೇಳಿದಿರಿ, ಸಂತೋಷ. ಈಗ, ನಾನೂ ವಿಭೀಷಣನ ಬಗ್ಗೆ ನನ್ನ ಅಭಿಪ್ರಾಯವನ್ನು ಹೇಳುತ್ತೇನೆ ಅದನ್ನು ನೀವೆಲ್ಲ ಸಾವಧಾನವಾಗಿ ಕೇಳಿ.

**ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಾಂಚನ ।**
**ದೋಷೋ ಯದ್ಯಪಿ ತಸ್ಯ ಸ್ಯಾತ್ ಸತಾಮೇತದಗರ್ಹಿತಮ್ ॥**

ನಿಮ್ಮಲ್ಲಿ ಕೆಲವರು ಇವನು ರಾಕ್ಷಸನ ತಮ್ಮ, ದುಷ್ಟ. ಇವನನ್ನು ಸೇರಿಸಿಕೊಳ್ಳುವುದು ಬೇಡ ಎಂದಿರಿ ಹನುಮಂತ, ಇವನು ಒಳ್ಳೆಯವನು, ಸೇರಿಸಿಕೊಳ್ಳಬಹುದು ಎಂದ. ಆದರೆ, ನನ್ನ ಅಭಿಪ್ರಾಯವನ್ನು ಕೇಳಿ. ವಿಭೀಷಣನು ಮಿತ್ರಭಾವದಿಂದ ಬಂದಿದ್ದಾನೆ. ನನಗೆ ಇವನು ಮಿತ್ರನೋ ಶತ್ರುವೋ ಎಂಬುದಲ್ಲ ಮುಖ್ಯ. ಇವನ ಭಾವ ಮುಖ್ಯ. ಆ ಮಿತ್ರಭಾವದಿಂದ ಅವನು ಬಂದಿರುವಾಗ ಅವನನ್ನು ಯಾವಾಗಲೂ ತ್ಯಜಿಸುವುದು ಯುಕ್ತವಲ್ಲ. ಹನುಮಂತನೆಂದಂತೆ ಇವನು ಒಳ್ಳೆಯವನೇ ಆಗಲಿ ಅಥವಾ ನೀವು ಹೇಳುವಂತೆ ಇವನು ದೋಷದಿಂದಲೇ ಕೂಡಿ ಇರಲಿ ಇವನನ್ನು ಕೈಬಿಡುವುದು ಧರ್ಮವಲ್ಲ. ದೋಷವಿಲ್ಲದವರನ್ನು ಸೇರಿಸಿಕೊಳ್ಳುವುದಕ್ಕಿಂತ ದೋಷಯುಕ್ತರನ್ನು ಸೇರಿಸಿಕೊಂಡರೆ ತಾನೇ ಹೆಮ್ಮೆ. ಆದ್ದರಿಂದ, ಇವನನ್ನು ತ್ಯಾಗಮಾಡುವುದು ಯುಕ್ತವಲ್ಲ ಎಂದ.

"ಮಿತ್ರಭಾವೇನ ಸಂಪ್ರಾಪ್ತಂ" ಎಂಬ ಶ್ಲೋಕಕ್ಕೆ ಆಚಾರ್ಯರು ಅನೇಕ ವಿಧವಾಗಿ ವ್ಯಾಖ್ಯಾನ ಮಾಡಿದ್ದಾರೆ. ಗೀತೆಯಲ್ಲಿ ಶ್ರೀಕೃಷ್ಣ

**ಅಪಿಚೇತ್ಸು ದುರಾಚಾರೋ ಭಜತೇ ಮಾಂ ಅನನ್ಯಭಾಕ್ ।**
**ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋ ಹಿಸಃ ॥**

ಎಂದ. ಎಷ್ಟೇ ದುರಾಚಾರಿಯಾಗಿರಲಿ ಅವನು ನನ್ನನ್ನು ಅನನ್ಯವಾಗಿ ಭಜಿಸಿದರೆ ಅವನ ದೋಷವೆಲ್ಲ ದೂರವಾಗಿ ಅವನು ಸಾಧುವಾಗುತ್ತಾನೆ ಎನ್ನುತ್ತಾನೆ ಕೃಷ್ಣ. ರಾಮನು, ''ಮಿತ್ರಭಾವದಲ್ಲಿ ಬಂದಿದ್ದಾನೆ. ಒಂದು ವೇಳೆ ನಿಜವಾಗಿ ಅವನು ಶತ್ರುವೇ ಆಗಿರಬಹುದು. ಆದರೆ, ಅವನು ಮೇಲ್ನೋಟಕ್ಕೆ ಮಿತ್ರಭಾವವನ್ನು ತೋರ್ಪಡಿಸಿದರೂ ಸಾಕು ಅವನನ್ನು ತ್ಯಜಿಸುವುದಿಲ್ಲ" ಎನ್ನುತ್ತಾನೆ.

ವಾಲ್ಮೀಕಿ ರಾಮಾಯಣದ ಪ್ರಾರಂಭದಲ್ಲಿ ಕೇಳಿದ "ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್" ಎಂಬ ಪ್ರಶ್ನೆಗೆ ಉತ್ತರ ರೂಪದಲ್ಲಿದೆ ರಾಮನ ಈ ಮಾತು. ರಾಮ ಗುಣವಂತ ಹೇಗೆ ಎಂದರೆ, ಎಲ್ಲರಲ್ಲೂ ಇರುವ ಗುಣವನ್ನು ಮಾತ್ರ ಗ್ರಹಿಸುತ್ತಾನೆ ಅವನು. ದೋಷಗಳು ಬಹಳಷ್ಟಿದ್ದರೂ ಅದನ್ನು ಎಣಿಸುವುದಿಲ್ಲ. ಗುಣ ಸ್ವಲ್ಪ ಮಟ್ಟಿಗಿದ್ದರೂ ಅದನ್ನೇ ಮಹತ್ತನ್ನಾಗಿ ಭಾವಿಸುತ್ತಾನೆ. ರಾಮನ ಭಾವ ಇಲ್ಲಿ ಸ್ಪಷ್ಟವಾಗುತ್ತದೆ. ಹೇಳುತ್ತಾನೆ :

"ಸುಗ್ರೀವ, ವಿಭೀಷಣ ನಿಜವಾಗಿ ಮಿತ್ರನೇ ಆಗಬೇಕಾಗಿಲ್ಲ. ಅವನು ಮಿತ್ರಭಾವದಿಂದ ಬಂದಿದ್ದಾನೆ ಅಲ್ಲವೆ ? ಆದರಿಂದಲೇ ನಾನು ಅವನನ್ನು ತ್ಯಜಿಸುವುದಿಲ್ಲ. ಒಂದು ವೇಳೆ ದೋಷವಿದ್ದರೂ ಅದನ್ನು ನೋಡದೆ ಅವನನ್ನು ಸೇರಿಸಿಕೊಳ್ಳುವುದೇ ಧರ್ಮ" ಎಂದ.

**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂ ಚನ ।**

ಎನ್ನುತ್ತಾನೆ.

ವಿಭೀಷಣನು ''ಶರಣಾಗತೋಽಹಂ" ಎಂದು ಹೇಳಿರುವುದೇ ಅವನ ಪರಿಗ್ರಹದಲ್ಲಿ ಮುಖ್ಯ ಹೇತುವಾಗಿದೆ. ಎಂತಲೇ ''**ಮಿತ್ರಭಾವೇನ ಸಂಪ್ರಾಪ್ತಂ**" ಎನ್ನುತ್ತಾನೆ ರಾಮ. ಮಿತ್ರಭಾವ ಎಂದರೇ ಶರಣಾಗತ ತತ್ವ ಎಂದು ಅರ್ಥ. ವಿಭೀಷಣನು "**ರಾಘವಂ ಶರಣಂ ಗತಃ, ಶರಣ್ಯ ಶರಣಂಗತಃ**'' ಎಂದು ಹಿಂದೆಯೂ ಮುಂದೆಯೂ ಹೇಳುವ ಮಾತಿನಿಂದಲೇ ಇದು ಪ್ರತಿಪಾದಿತವಾಗುತ್ತದೆ.

ಮಿತ್ರಭಾವೇನ ಸಂಪ್ರಾಪ್ತಂ . . . ಎಂಬ ಮಾತಿನ ಮೇಲೆ ಆಚಾರ್ಯರು ಅದ್ಭುತವಾದ ವ್ಯಾಖ್ಯಾನ ಮಾಡಿದಾರೆ. ಶರಣಾಗತಿಯ ಮಹಿಮೆ ಇಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಶರಣಾಗತಭಾವೇನ ಎಂದು ಹೇಳಬೇಕಾಗಿರುವಾಗ ಮಿತ್ರಭಾವೇನ ಎಂದು ಹೇಳಲಾಗಿದೆ. ತನ್ನ ಆಶ್ರಯಣಕ್ಕಾಗಿ ಕೆಲವು ಹೆಜ್ಜೆಗಳನ್ನಿಟ್ಟವನಲ್ಲಿ ಕೂಡ ಸ್ವಸಮಾನ ಎಂಬ ಭಾವನೆಯುಳ್ಳ ಭಗವಂತನ ಅಭಿಪ್ರಾಯದ್ಯೋತನಾರ್ಥವಾಗಿಯೇ ಇದು ಎಂದು ತಿಳಿಯಬೇಕು. ಸೀತಾಮಾತೆಯೂ ಸಹ ರಾವಣನಿಗೆ ಹೇಳುವಾಗ "ತೇ ನ ಮೈತ್ರಿ ಭವತುತೇಯದಿ ಜೀವಿತು ಮಿಚ್ಛಸಿ" ಎನ್ನುತ್ತಾಳೆ. ಮೈತ್ರೀ ಶಬ್ದವನ್ನು ಹೇಳಿದಾಳೆ.

ರಾಮನು ಸುಗ್ರೀವನಿಗೆ ಸ್ಪಷ್ಟವಾಗಿ ಹೇಳುತ್ತಾನೆ. "ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಶರಣಾಗತನಾದ ವಿಭೀಷಣನಲ್ಲಿ ಗುಣವಿಲ್ಲದಿದ್ದರೂ, ದೋಷವೇ ಹೆಚ್ಚಾಗಿದ್ದರೂ ಅವನನ್ನು ಪರಿಗ್ರಹಿಸುವುದರಲ್ಲಿ ಎಲ್ಲರೂ ವಿರೋಧಿಗಳಾಗಿದ್ದರೂ, ಕಂಡೂ ಕಾಣದ ನೂರಾರು ಅಡಚಣೆಗಳು ಇದ್ದರೂ – ಹೆಚ್ಚೇಕೆ ? ಸುಗ್ರೀವ, ನನ್ನ ಪ್ರಾಣತ್ಯಾಗವೇ ಘಟಿಸುವ ಸಮಯ ಬಂದರೂ ತೊರೆಯುವುದಿಲ್ಲ ಎನ್ನುತ್ತಾನೆ. "ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಎಂಬ ಮಾತು ಕಾರ್ಯರೂಪದಲ್ಲಿ ಬಂದಿದೆ.

''ದೋಷವಿರುವವರನ್ನು ಕಾಪಾಡಿದರೇ ನನಗೆ ಮತ್ತಷ್ಟು ಕೀರ್ತಿ. ನನ್ನ ಗುರುಗಳಾದ ವಸಿಷ್ಠರು, ವಿಶ್ವಾಮಿತ್ರರು ಶರಣಾಗತರನ್ನು ರಕ್ಷಿಸುವುದರಲ್ಲಿ ಮೇಲಾದವರು. ಆ ವರಶಿಷ್ಯನಾದ. ನಾನು ದೋಷ ಇರುವವನನ್ನು ರಕ್ಷಿಸಿದೆ ಎಂದರೆ ಅವರಿಗೆ ಬಹಳ ಸಂತೋಷವಾಗುವುದು. ಆದ್ದರಿಂದ, ವಿಭೀಷಣನನ್ನು ಗ್ರಹಿಸುತ್ತೇನೆ" ಎಂದ. ರಾಮನ ಮಾತುಗಳನ್ನು ಕೇಳಿದ ಸುಗ್ರೀವ ''ಪ್ರಭೋ–ಇವನು ದುಷ್ಟನೋ, ಹಿತನೋ, ಅದೆಲ್ಲ ಒಂದೂ ಬೇಡ ಆ ಚರ್ಚೆಯೆಲ್ಲ ಅನವಶ್ಯಕ. ಇವನು ನಿಶಾಚರ ರಾಜನಾದ ರಾವಣನಕಡೆಯಿಂದ ಬಂದಿದಾನೆ. ಆದ್ದರಿಂದ, ಇವನನ್ನು ಸೇರಿಸಿಕೊಳ್ಳಲೇ ಕೂಡದು. ಇವನು ಕಷ್ಟಕಾಲದಲ್ಲಿ ಅಣ್ಣನನ್ನೇ ಬಿಟ್ಟು ಬಂದ ಎಂದಮೇಲೆ ನಮ್ಮನ್ನು ಬಿಡನೆ ? ಆದ್ದರಿಂದ ಇವನನ್ನು ನಂಬುವುದು ಸರಿಯಲ್ಲ-ಇವನನ್ನು ಸೇರಿಸಿಕೊಳ್ಳಬೇಡಿ" ಎಂದ.

ಸುಗ್ರೀವನ ಮಾತನ್ನು ಕೇಳಿದ ರಾಮ ಮುಗುಳುನಗೆಯಿಂದ ಲಕ್ಷ್ಮಣನ ಕಡೆ ತಿರುಗಿ.

**ಅನಧೀತ್ಯಚ ಶಾಸ್ತ್ರಾಣಿ ವೃದ್ಧಾನನು ಪಸೇವ್ಯಚ ।**
**ನ ಶಕ್ಯಮೀದೃಶಂ ವಕ್ತುಂ ಯದುವಾಚಹರೀಶ್ವರಃ ॥**
**ಅಸ್ತಿ ಸೂಕ್ಷ್ಮತರಂ ಕಿಂಚಿದ್ಯದತ್ರ ಪ್ರತಿಭಾತಿಮೇ ।**
**ಪ್ರತ್ಯಕ್ಷಂ ಲೌಕಿಕಂ ವಾಪಿ ವಿದ್ಯತೇ ಸರ್ವರಾಜಸು ॥**
**ಅಮಿತ್ರಾಸ್ತತ್ಕುಲೀನಾಶ್ಚ ಪ್ರಾತಿದೇಶ್ಯಾಶ್ಚ ಕೀರ್ತಿತಾಃ ।**
**ವ್ಯಸನೇಷು ಪ್ರಹರ್ತಾರಸ್ತಸ್ಮಾದಯ ಮಿಹಾಗತಃ ॥**

ಅಪಾಪಾಸ್ತತ್ಕುಲೀನಾಶ್ಚ ಮಾನಯಂತಿ ಸ್ವಕಾನ್ ಹಿತಾನ್ ।
ಏಷಪ್ರಾಯೋ ನರೇಂದ್ರಾಣಾಂ ಶಂಕನೀಯಸ್ತು ಶೋಭನಃ ॥
ಯಸ್ತು ದೋಷಸ್ತ್ವಯಾ ಪ್ರೋಕ್ತೋ ಹ್ಯಾದಾನೇರಿ ಬಲಸ್ಯಚ ।
ತತ್ರ ತೇ ಕೀರ್ತಯಿಷ್ಯಾಮಿ ಯಥಾ ಶಾಸ್ತ್ರಮಿದಂ ಶ್ರುಣು ॥
ನವಯಂ ತತ್ಕುಲೀನಾಶ್ಚ ರಾಜ್ಯ ಕಾಂಕ್ಷೀಚ ರಾಕ್ಷಸಃ ।
ಪಂಡಿತಾಹಿ ಭವಿಷ್ಯಂತಿ ತಸ್ಮಾದ್ಗ್ರಾಹ್ಯೋ ವಿಭೀಷಣಃ ॥
ಅವ್ಯಗ್ರಾಶ್ಚ ಪ್ರಹೃಷ್ಟಾಶ್ಚ ನಭವಿಷ್ಯಂತಿ ಸಂಗತಾಃ ।
ಪ್ರವಾದಶ್ಚ ಮಹಾನೇಷಸ್ತತೋಽಸ್ಯ ಭಯಮಾಗತಂ ।
ಇತಿಭೇದಂ ಗಮಿಷ್ಯಂತಿ ತಸ್ಮಾದ್ಗ್ರಾಹ್ಯೋ ವಿಭೀಷಣಃ ॥

"ರಾಕ್ಷಸರಲ್ಲಿಯೂ ಪಂಡಿತರಿರುತ್ತಾರೆ. ಆದ್ದರಿಂದ ಪರಿಗ್ರಹಿಸಬೇಕು. ಅಣ್ಣನಾದ ರಾವಣನಿಗೆ ಹೆದರಿ ಬಂದಿದ್ದಾನೆ ಎನ್ನುತ್ತಾರೆ.

"ಸೌಮಿತ್ರಿ, ಸುಗ್ರೀವ ಹೇಳಿದ ಮಾತುಗಳನ್ನು ಕೇಳಿದೆಯಾ ? ನೀತಿಶಾಸ್ತ್ರ ವಿಚಾರದರಲ್ಲದವರು, ಹಿರಿಯರನ್ನು ಸೇವೆಮಾಡದವರು ಇಂಥ ಮಾತನ್ನು ಹೇಳಲು ಸಾಧ್ಯವೆ ? ಸುಗ್ರೀವನು ಎಷ್ಟು ಯುಕ್ತಿ ಸಂಗತವಾದ ಮಾತನ್ನು ಹೇಳಿದ ನೋಡು !" ಎಂದು ಮತ್ತೆ ಸುಗ್ರೀವನನ್ನು ಕುರಿತು "ಸುಗ್ರೀವ, ನಾ ಹೇಳುವುದನ್ನು ಕೇಳು. "ಇವನು ರಾಕ್ಷಸ, ಸೇರಿಸಿಕೊಳ್ಳಬೇಡ" ಎಂದೆ ಅಲ್ಲವೆ ? ರಾಕ್ಷಸರೆಲ್ಲ ಕೆಟ್ಟವರು ಎಂದು ತಿಳಿಯಬೇಡ. ಅಲ್ಲದೆ, ರಾಜನಿಗೆ ಎರಡು ರೀತಿಯಾದ ಭಯವುಂಟು. ಒಂದು ಸಜಾತೀಯರಾದ ಜ್ಞಾತಿಗಳಿಂದ. ಇನ್ನೊಂದು ಶತ್ರುಗಳಿಂದ. ಈಗ ವಿಭೀಷಣ, ತನ್ನ ಅಣ್ಣನಾದ ರಾವಣನಿಗೆ ಹೆದರಿ ನನ್ನಲ್ಲಿಗೆ ಬಂದಿದಾನೆ. ಅಲ್ಲದೆ, ಇವನು ರಾಜ್ಯಾಕಾಂಕ್ಷಿಯಾಗಿ ನನ್ನ ಬಳಿಗೆ ಬಂದಿದ್ದಾನೆ. ಇವನನ್ನು ನಾವು ಸೇರಿಸಿ ಕೊಳ್ಳುವುದರಿಂದ ರಾಕ್ಷಸರಲ್ಲೇ ಭೇದ, ಕಲ್ಪಿಸಿದಂತಾಗಿ ನಮ್ಮ ಕಾರ್ಯ ಸುಲಭವಾಗುತ್ತದೆ. ವಿಭೀಷಣ ಇಲ್ಲಿಗೆ ಬಂದಿರುವುದರಿಂದ ರಾಕ್ಷಸರಲ್ಲಿ ಈಗಾಗಲೇ ಒಡಕು ಉಂಟಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ರಾಜನೀತಿಯ ಪ್ರಕಾರವೂ ಇವನನ್ನು ಸೇರಿಸಿಕೊಳ್ಳುವುದೇ ಸೂಕ್ತ.

ಸುಗ್ರೀವ, ವಿಭೀಷಣ ಕಷ್ಟಕಾಲದಲ್ಲಿ ಅಣ್ಣನನ್ನು ಬಿಟ್ಟು ಬಂದಿದಾನೆ. ಇವನನ್ನು ನಂಬುವುದೇ ಕಷ್ಟ ಎಂದೆ ಅಲ್ಲವೆ ? ಅದಕ್ಕೆ ಸಮಾಧಾನ ಹೇಳತ್ತೇನೆ ಕೇಳು.

**ನ ಸರ್ವೇ ಭ್ರಾತರಸ್ತಾತ ಭವಂತಿ ಭರತೋಪಮಾಃ ।**
**ಮದ್ವಿಧಾಃ ಚ ಪಿತುಃ ಪುತ್ರಾಃ ಸುಹೃದೋ ವಾ ಭವದ್ವಿಧಾಃ ॥**

ಸುಗ್ರೀವ, ಲೋಕದಲ್ಲಿ ನನ್ನ ಮುದ್ದು ತಮ್ಮ ಭರತನಂತೆ ಎಲ್ಲ ತಮ್ಮಂದಿರೂ ಇರುತ್ತಾರೆಯೇ ? ಸುಲಭವಾಗಿ, ಅನಾಯಾಸವಾಗಿ ಸಮಸ್ತವಾದ ರಾಜ್ಯವೂ ಕರಗತವಾಗಿರುವಾಗ, ಅದನ್ನು ಬಿಟ್ಟು ಜಟೆಯನ್ನು ಧರಿಸಿ, ನಾರುಡೆಯುಟ್ಟು, ನನಗಾಗಿ ನಿರೀಕ್ಷಿಸುತ್ತಿರುವ ಭರತನಂತೆ ಎಲ್ಲ ತಮ್ಮಂದಿರೂ ಇರುವರೆ ?

ತನ್ನ ಮುದ್ದು ತಮ್ಮನ ಬಗ್ಗೆ ಹೇಳುವಾಗ ರಾಮನಿಗೆ ಕಂಠ ತುಂಬಿ ಬರುತ್ತದೆ. **ನ ಸರ್ವೇ ಭ್ರಾತರಸ್ತಾತ ! ಭವಂತಿ ಭರತೋಪಮಾಃ ।** ಎನ್ನುತ್ತಾನೆ. ಕೈಕೇಯಿ ವರದಿಂದ ಪ್ರಾಪ್ತ

ವಾಗಿ ತಂದೆಯೇ ಕೊಟ್ಟಿದ್ದೂ ಆಗಿರುವ ರಾಜ್ಯವನ್ನು ತೊರೆದು ವನಕ್ಕೆ ಬಂದು ''ನಿನ್ನದೇ ರಾಜ್ಯ. ನೀನೇ ತೆಗೆದುಕೋ. ನಾನು ನಿನ್ನ ದಾಸನಾಗಿರುತ್ತೇನೆ, ದಾಸ್ಯವನ್ನು ಮಾಡುತ್ತೇನೆ'' ಎಂದು ಹೇಳಿದ ಭರತನಂತೆ ಎಲ್ಲಾ ತಮ್ಮಂದಿರೂ ಇರುವುದಿಲ್ಲಪ್ಪ'' ಎನ್ನುತ್ತಾನೆ. ಅಷ್ಟೇ ಅಲ್ಲ; ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ''ಭರತನಿಗೆ ಸಮಾನರಾದ ತಮ್ಮಂದಿರೋ, ನಿನಗೆ ಸಮಾನರಾದ ಸ್ನೇಹಿತರೋ ಇರುವುದಿಲ್ಲಪ್ಪ'' (ಸುಹೃದೋವಾ ಭವದ್ವಿಧಾಃ) ಎನ್ನುತ್ತಾನೆ.

ಆದ್ದರಿಂದ, ನೀನು ಚಿಂತಿಸಬೇಡ. ವಿಭೀಷಣನನ್ನು ಸೇರಿಸಿಕೊಳ್ಳುವುದರಲ್ಲಿ ಯಾವ ದೋಷವೂ ಇಲ್ಲ ಎಂದು ರಾಮ ಸುಗ್ರೀವನಿಗೆ ಹೇಳಿದ.

ರಾಮನ ಮಾತುಗಳನ್ನು ಕೇಳಿದ ಸುಗ್ರೀವ ಎದ್ದು ರಾಮನಿಗೆ ಪ್ರಣಾಮ ಮಾಡಿ ''ಪ್ರಭೋ ! ಏನೇ ಆಗಲಿ, ಇವನು ರಾವಣನ ಪ್ರೇರಣೆಯಿಂದಲೇ ಇಲ್ಲಿಗೆ ಬಂದಿದಾನೆ. ಸಮಯ ಕಾದು ಕೊಂಡಿದ್ದು ನಮ್ಮಲ್ಲಿ ಸೇರಿಕೊಂಡು ನಿನ್ನನ್ನೂ, ಲಕ್ಷ್ಮಣನನ್ನೂ ಕೊಲ್ಲಲು ಬಂದಿದಾನೆ. ಇವನನ್ನು ಈಗಲೇ ಈ ನಾಲ್ವರು ರಾಕ್ಷಸರೊಂದಿಗೆ ಕೊಂದುಬಿಡುವುದೇ ಸರಿ. ಯುಕ್ತವಾದುದು" ಎಂದು ವಾಕ್ಚಾತುರ್ಯವುಳ್ಳ ಸುಗ್ರೀವ ಹೇಳಿದ.

ಇದನ್ನು ಕೇಳಿದ ರಾಮ "ಸುಗ್ರೀವಾ ! ನೀ ಹೇಳುತ್ತಿರುವುದೇನು ? ಈ ರಾಕ್ಷಸ ನನ್ನನ್ನು ಕೊಂದುಬಿಡುತ್ತಾನೆ ಎಂಬ ಭಯ ನಿನಗೆ ಅಲ್ಲವ ? ಕೇಳು.

**ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವ ರಾಕ್ಷಸಾನ್ ।**
**ಅಂಗುಲ್ಯಗ್ರೇಣ ತಾನ್ ಹನ್ಯಾಂ ಇಚ್ಛನ್ ಹರಿಗಣೇಶ್ವರ ॥**

ಹರಿಗಣೇಶ್ವರ, ಸುಗ್ರೀವ, ಕೇಳು. ಈ ರಾಕ್ಷಸ ನನ್ನನ್ನು ಕೊಂದರೆ ಎಂದು ನಿನಗೆ ಭಯವೆ ? ಈ ಸಮಸ್ತ ಪ್ರಪಂಚದಲ್ಲಿರುವ ಪಿಶಾಚರು, ದಾನವರು, ಯಕ್ಷರು, ಈ ಭೂಮಿಯಲ್ಲಿ, ಆಕಾಶ ದಲ್ಲಿ, ಪಾತಾಳದಲ್ಲಿ ಇರಬಹುದಾದ ಎಲ್ಲ ರಾಕ್ಷಸರೂ ಒಟ್ಟಾಗಿ ನನ್ನ ಮೇಲೆ ಬಿದ್ದು ಸೆಣಸಲು ಸಿದ್ಧರಾದರೂ ಅವರನ್ನೆಲ್ಲ ನಾನು ನನ್ನ ಕಿರುಹೆರಳಿನ ಉಗುರಿನ ಕೊನೆಯಿಂದ ನಾಶಮಾಡಬಲ್ಲೆ ! ತಿಳಿಯಿತೆ ನಿನಗೆ ! ಸುಗ್ರೀವಾ ! ಎಲ್ಲರನ್ನೂ ಸಂಹರಿಸಲು ನಾನು, ನನ್ನ ಆಯುಧ, ನನ್ನ ಧನುಸ್ಸು, ನನ್ನ ಕೈ ಯಾವುದೂ ಅವಶ್ಯವಿಲ್ಲ. ನನ್ನಕಿರುಬೆರಳಿನ ನಖವೂ ಪೂರ್ಣವಾಗಿ ಬೇಡ. "ನಖಾಗ್ರ" ಒಂದೇ ಸಾಕು. ಈ ನಖಾಗ್ರದಿಂದ ಸಮಸ್ತ ಪಿಶಾಚರನ್ನೂ, ದಾನವರನ್ನೂ, ಒಂದೇ ಸಾಕು. ಈ ನಖಾಗ್ರದಿಂದ ಸಮಸ್ತ ಪಿಶಾಚರನ್ನೂ, ದಾನವರನ್ನೂ, ಯಕ್ಷರನ್ನೂ, ರಾಕ್ಷಸರನ್ನೂ ಹೊಸಕಿ ಹಾಕಿಬಿಡಬಲ್ಲೆ. ಹಾಗಾದರೆ ರಾವಣನನ್ನು ಕೊಲ್ಲಲು ಈ ಸಿದ್ಧತೆಯೆಲ್ಲ ಏಕೆ ಎಂದು ಕೇಳುವಿ ಯೇನೋ ? ಅದೂ ಕೇವಲ ವ್ಯಾಜಕ್ಕಾಗಿ ಮಾತ್ರ. ನಾನು ಹಾಗೆ ಎಲ್ಲರನ್ನೂ ಸಂಹರಿಸಲು ನಾನು, ನನ್ನ ಆಯುಧ, ನನ್ನ ಧನುಸ್ಸು, ನನ್ನ ಕೈ ಯಾವುದೂ ಅವಶ್ಯವಿಲ್ಲ. ನನ್ನ ಕಿರುಬೆರಳಿನ ನಖವೂ ಪೂರ್ಣವಾಗಿ ಬೇಡ. "ನಖಾಗ್ರ" ಒಂದೇ ಸಾಕು. ಈ ನಖಾಗ್ರದಿಂದ ಸಮಸ್ತ ಪಿಶಾಚರನ್ನೂ, ದಾನವರನ್ನೂ, ಯಕ್ಷರನ್ನೂ, ರಾಕ್ಷಸರನ್ನೂ ಹೊಸಕಿ ಹಾಕಿಬಿಡಬಲ್ಲೆ. ಹಾಗಾ ದರೆ ರಾವಣನನ್ನು ಕೊಲ್ಲಲು ಈ ಸಿದ್ಧತೆಯೆಲ್ಲ ಏಕೆ ಎಂದ ಕೇಳುವಿಯೇನೋ ? ಅದೂ ಕೇವಲ ವ್ಯಾಜಕ್ಕಾಗಿ ಮಾತ್ರ. ನಾನು ಹಾಗೆ ಎಲ್ಲರನ್ನೂ ಕೊಲ್ಲಲು ಇಚ್ಛಿಸಿಲ್ಲ. ಇಚ್ಛಿಸಿದರೆ ಹಾಗೆ ಮಾಡ ಬಲ್ಲೆ. ಅಂದಮೇಲೆ ಈ ರಾಕ್ಷಸನಿಂದ ನನಗೆ ಅಪಾಯ ಎಲ್ಲಿಯದು ?" ಎಂದ.

"ಅಂಗುಲ್ಯಗ್ರೇಣ ತಾನ್ ಹನ್ಯಾಂ ಇಚ್ಛನ್ ಹರಿಗಣೇಶ್ವರ" ಎಂಬ ಈ ಶ್ಲೋಕಕ್ಕೆ ಆಚಾ ರ್ಯರು ಬಹುವಿಧವಾಗಿ ವ್ಯಾಖ್ಯಾನ ಮಾಡಿದಾರೆ.

ರಾಮ ಇಲ್ಲಿ ನರಸಿಂಹಾವತಾರವನ್ನು ಸ್ಮರಿಸಿಕೊಂಡ ಎಂದಿದಾರೆ. ಈಶ್ಲೋಕವನ್ನು ಮೂಲವಾಗಿಟ್ಟುಕೊಂಡೇ ಕಂಬರು ನರಸಿಂಹಾವತಾರದ ವೈಭವವನ್ನು ವಿವರಿಸಿದ್ದಾರೆ.

ನರಸಿಂಹಾವತಾರಕಾಲದಲ್ಲಿ ತನ್ನ ಉಗುರಿನಿಂದ ಹಿರಣ್ಯಕಶಿಪುವನ್ನು ಸಂಹರಿಸಿದ. ರಾವಣನೇ ಹಿಂದೆ ಹಿರಣ್ಯಕಶಿಪುವಾಗಿದ್ದವನು. ಈ ರಾಮನೇ ನರಸಿಂಹನಾಗಿದ್ದವನು ಆದ್ದರಿಂದಲೇ ರಾಮ ತನ್ನ ಹಿಂದಿನ ಅವತಾರವನ್ನು ಸ್ಮರಿಸಿಕೊಂಡು ''ಸುಗ್ರೀವ, ನಾನು ಇಚ್ಛಿಸಿದರೆ, ಹಿಂದೆ ಹಿರಣ್ಯಕಶಿಪುವನ್ನು ಉಗುರಿನಿಂದ ಸೀಳಿಹಾಕಿದಂತೆ ಈಗಲೂ ಮಾಡಬಲ್ಲೆ. ನಿಮ್ಮ ಸಹಾಯ ನನಗೆ ಎಷ್ಟು ಮಾತ್ರಕ್ಕೂ ಬೇಕಿಲ್ಲ. ಆದರೂ, ಈ ಅವತಾರದಲ್ಲಿ ನಾನು ಹಾಗೆ ಇಚ್ಛಿಸಲಿಲ್ಲ." ಎಂಬ ಭಾವವನ್ನು ''ಇಚ್ಛನ್ ಹರಿಗಣೇಶ್ವರ'' ಎಂಬ ಶಬ್ದದಿಂದ ಪ್ರಕಾಶಪಡಿಸಿದ.

ರಾಮನ ಶರಣಾಗತವಾತ್ಸಲ್ಯ ಅನುಪಮವಾದುದು. ಹಿಂದೆ, ಅರಣ್ಯಕಾಂಡದಲ್ಲಿ ಸೀತೆ ಕೇಳಿದಾಗ, "ಸೀತೆ, ಪ್ರಾಣಪ್ರಿಯಳಾದ ನಿನ್ನನ್ನಾದರೂ ಬಿಟ್ಟೇನು, ಪ್ರಾಣಕ್ಕಿಂತ ಹೆಚ್ಚಿನವನಾದ ಸೌಮಿತ್ರಿಯನ್ನಾದರೂ ಅಗಲಿಯೇನು, ನನ್ನ ಪ್ರಾಣವನ್ನೇ ಬಿಟ್ಟೇನು. ಆದರೆ, ಶರಣಾಗತರನ್ನು ಮಾತ್ರ ಕೈಬಿಡುವುದಿಲ್ಲ ಎಂದ ರಾಮ.

ಈಗ, ಶರಣಾಗತನಾದ ವಿಭೀಷಣನನ್ನು ಸೇರಿಸಿಕೊಳ್ಳಬಾರದು ಎಂದು ಸುಗ್ರೀವ ಹಠ ಹಿಡಿದಾಗ, ತರ್ಹ ಹನ್ಯಾಂ'' ಎಂಬ ಈ ಶ್ಲೋಕ ರಾಮನ ಪರತ್ವವನ್ನು ಸ್ಪಷ್ಟವಾಗಿ ಪ್ರಕಾಶಪಡಿಸುತ್ತದೆ. ಇದುವರೆಗೆ ಕಷ್ಟಪಟ್ಟು ರಾಮ ''ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ" ಎಂದು, 'ನಾನು ಮನುಷ್ಯ. ದಶರಥನ ಮಗ'' ಎಂದೇ ಹೇಳಿಕೊಂಡು ಬಂದ. ಆದರೆ, ಸುಗ್ರೀವ ಶರಣಾಗತನನ್ನು ಸೇರಿಸಿಕೊಳ್ಳುವ ವಿಷಯದಲ್ಲಿ ವಿರೋಧಿಸಿದಾಗ ತನ್ನ ಮನುಷ್ಯತ್ವದ ನೆಲೆಯನ್ನು ಮೀರಿ ತನ್ನ ಪರತ್ವವನ್ನು ಸ್ಪಷ್ಟಪಡಿಸಿದ.

''ನಾನು ಇಚ್ಛಿಸಿದರೆ ಪ್ರಪಂಚದಲ್ಲಿರುವ ಸಮಸ್ತ ಪಿಶಾಚರು ದಾನವರು, ಯಕ್ಷರು, ರಾಕ್ಷಸರನ್ನೂ ಉಗುರಿನ ಕೊನೆಯಿಂದ ನಿವಾರಿಸಬಲ್ಲೆ'' ಎಂಬ ಎದೆಗಾರಿಕೆ ಪರಮಾತ್ಮನಿಗಲ್ಲದೆ ಇತರರಿಗೆ ಹೇಗೆ ತಾನೇ ಬಂದೀತು !

ಸುಗ್ರೀವನ ಭಯವನ್ನು ನಿವಾರಿಸಿದ ಬಳಿಕ ರಾಮ ಸುಗ್ರೀವನಿಗೆ ಶರಣಾಗತರನ್ನು ರಕ್ಷಿಸಲೇಬೇಕು ಎಂಬ ಶ್ರೇಷ್ಠವಾದ ಧರ್ಮವನ್ನು ಅನೇಕ ಉದಾಹರಣೆಗಳಿಂದ ತಿಳಿಯಪಡಿಸುತ್ತಾನೆ.

''ಸುಗ್ರೀವ, ವಿಭೀಷಣ ದುಷ್ಟನೇ ಆಗಲಿ, ಮಿತ್ರನೇ ಆಗಲಿ, ರಾಕ್ಷಸನೇ ಆಗಲಿ, ಅವನನ್ನು ಕಾಪಾಡುವುದು ಧರ್ಮವೇ ಸರಿ. ಶರಣಾಗತರನ್ನು ರಕ್ಷಿಸುವುದು ಶ್ರೇಷ್ಠ ಧರ್ಮ; ಕೇಳು:"

ಒಂದು ಪಾರಿವಾಳದ ಜೋಡಿ ಮರದಲ್ಲಿ ಸಂತೋಷದಿಂದ ಕುಳಿತು ಸಲ್ಲಾಪ ಮಾಡುತ್ತಾ ಆನಂದದಿಂದ ಇದ್ದಿತು. ಆ ಸಮಯಕ್ಕೆ ಸರಿಯಾಗಿ ಒಬ್ಬ ಬೇಡ ಬಲೆಯನ್ನು ಬೀಸಿ ಹೆಣ್ಣು ಹಕ್ಕಿಯನ್ನು ಹಿಡಿದುಕೊಂಡ. ಆ ವೇಳೆಗೆ ಜೋರಾಗಿ ಮಳೆ ಬಂದಿತು. ಆಗ ಆ ಬೇಡನು ಆ ಗಂಡು ಪಾರಿವಾಳ ಕುಳಿತ ಮರದ ಕೆಳಗೇ ಆಶ್ರಯಪಡೆದ. ಚಳಿಯಿಂದ ಅವನ ದೇಹ ನಡುಗುತ್ತಿತ್ತು, ಹಸಿವಿನಿಂದ ಅವನ ಪ್ರಾಣ ಹೋಗುವಂತಿತ್ತು. ಅವನ ಸ್ಥಿತಿಯನ್ನು ಕಂಡ ಹೆಣ್ಣು ಪಾರಿವಾಳ, ಬೇಡನ ಕೈಗೆ ಸಿಕ್ಕ ಆ ಹೆಣ್ಣು ಪಾರಿವಾಳ–ತನ್ನ ಪತಿಯನ್ನು ಕುರಿತು, "ಈ ವ್ಯಾಧ ನಾವು ಕುಳಿತಿದ್ದ ಮರವನ್ನೇ ಆಶ್ರಯಿಸಿದಾನೆ. ಅಂದಮೇಲೆ ನಮ್ಮನ್ನೇ ಆಶ್ರಯಿಸಿದಂತಾಯಿತು. ಇವನಿಗೆ ಆಶ್ರಯ ಕೊಡಬೇಕಾದುದು ಧರ್ಮ. ಇವನನ್ನು ರಕ್ಷಿಸು" ಎಂದು ಕೂಗಿ ಹೇಳಿತು.

ಆಗ ಆ ಗಂಡು ಹಕ್ಕಿ ಕಾಷ್ಟವನ್ನು ಕೂಡಿಸಿ ಬೆಂಕಿ ಹತ್ತಿಸಿತು. ಅದರಲ್ಲಿ ಆ ವ್ಯಾಧ ಚಳಿಯನ್ನು ಹೋಗಲಾಡಿಸಿಕೊಂಡ. ಆಮೇಲೆ ಅವನ ಹಸಿವನ್ನು ತೀರಿಸುವ ನಲುವಾಗಿ ಆ ಗಂಡು ಹಕ್ಕಿ ತನ್ನ ಭಾರ್ಯೆಯನ್ನು ಅಪಹರಿಸಿದ ಬೇಡನ ಹೊಟ್ಟೆಯನ್ನು ತುಂಬುವುದಕ್ಕಾಗಿ ತಾನೇ ಅಗ್ನಿಯಲ್ಲಿ ಬಿದ್ದು ತನ್ನ ಮಾಂಸವನ್ನು ಆ ಬೇಡ ತಿನ್ನಲು ಅನುವು ಮಾಡಿಕೊಟ್ಟಿತು.

ಹೀಗೆ, ಪತ್ನಿಯನ್ನು ಅಪಹರಿಸಿದ ವ್ಯಾಧರಿಗೆ, ಅವನು ತನ್ನನ್ನು ನೇರವಾಗಿ ಶರಣುಬರದೇ, ತಾನು ಕುಳಿತಿದ್ದ ಮರದ ಕೆಳಗೆ ಆಶ್ರಯ ಪಡೆದದ್ದಕ್ಕೇ ಆ ಗಂಡು ಹಕ್ಕಿ ತನ್ನನ್ನೇ ಅರ್ಪಿಸಿಕೊಂಡು ಕಾಪಾಡಿತು. ಅಂದಮೇಲೆ ಸುಗ್ರೀವಾ! ಈಗ ಬಂದಿರುವವ ರಾವಣನಲ್ಲ. ರಾವಣನ ತಮ್ಮ ವಿಭೀಷಣ. ಅಲ್ಲದೆ, ಇವನು ನನಗೆ ಯಾವ ದ್ರೋಹವನ್ನೂ ಮಾಡಲಿಲ್ಲ. ನನಗೆ ಉಪಕಾರ ಮಾಡುವ ನಲುವಾಗಿ ಮಿತ್ರಭಾವದಿಂದ ಬಂದಿದ್ದಾನೆ. ಒಂದು ಪಕ್ಷಿಯೇ ಶರಣಾಗತನನ್ನು ಕಾಪಾಡುವ ನಲುವಾಗಿ ತನ್ನನ್ನೇ ಬಲಿಗೊಟ್ಟಿತು.

**ಶ್ರೂಯತೇಹಿ ಕಪೋತೇನ ಶತ್ರುಃ ಶರಣಮಾಗತಃ**
**ಅರ್ಚಿತಸ್ಯ ಯಥಾನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತಃ ।**
**ಸಹಿತಂ ಪ್ರತಿಜಗ್ರಾಹ ಭಾರ್ಯಾಹರ್ತಾರಮಾಗತಂ ।**
**ಕಪೋತೋ ವಾನರಶ್ರೇಷ್ಠ ! ಕಿಂಪುನರ್ಮದ್ವಿಧೋಜನಃ ॥**

ಎಂದಮೇಲೆ ನರಶ್ರೇಷ್ಠನೆನಿಸಿ ಉತ್ತಮವಾದ ಇಕ್ಷ್ವಾಕುಕುಲದಲ್ಲಿ ಹುಟ್ಟಿಬಂದ ನಾನು ಶರಣಾಗತನನ್ನು ರಕ್ಷಿಸದೆ ಬಿಡುವುದು ಯುಕ್ತವೆ ? ಹೇಳು ಎಂದ."

ಆದಕ್ಕೇ ರಾಮನನ್ನು "ಗುಣವಾನ್" ಎಂದರು ವಾಲ್ಮೀಕಿ. ರಾಮನ ಮನಸ್ಸನ್ನು ಒಂದು ಕಾಪೋತ ಆಕರ್ಷಿಸಿತು. ಎಲ್ಲರಲ್ಲೂ ಉತ್ತಮ ಗುಣವನ್ನು ಗ್ರಹಿಸುವವನು ಅವನು. ಅದಕ್ಕೇ "ಗುಣವಾನ್." ಮತ್ತೆ ರಾಮ ಸುಗ್ರೀವನನ್ನು ಕುರಿತು "ವಾನರೇಶ್ವರಾ, ಕೇಳು! ಹಿಂದೆ ಕಣ್ವ ಮಹರ್ಷಿಗಳ ಪುತ್ರರಾದ ಕಂಡು ಎಂಬ ಮಹರ್ಷಿ ಹೇಳಿದ್ದಾರೆ. "ಶತ್ರುವೇ ಆಗಲಿ, ಇದಿರಿಗೆ ಬಂದು ನಿಂತು ಭಯದಿಂದ, ಶೋಕದಿಂದ, ಮೋಹದಿಂದ "ಕಾಪಾಡಬೇಕು" ಎಂದು. ಹಾಗೆ ಶರಣಾಗತನನ್ನು ರಕ್ಷಿಸದೆ ಹೋದರೆ ಅವನ ಪಾಪವೆಲ್ಲ, ರಕ್ಷಿಸದೆ ಬಿಟ್ಟವನನ್ನು ಸೇರುತ್ತದೆ. ಅಂಥವನ ವೀರ್ಯ, ಯಶಸ್ಸು, ಬಲ, ಎಲ್ಲ ನಾಶವಾಗುತ್ತವೆ. ಆದ್ದರಿಂದ. ನಾನು ಶರಣಾಗತರನ್ನು ಸರ್ವಥಾ ಕೈಬಿಡುವುದಿಲ್ಲ. ಮಹಾತ್ಮನಾದ ಕಂಡು ಋಷಿ ಹೇಳಿದಂತೆ ಶರಣಾಗತನಾದವನು ಯಾರೇ ಆಗಲಿ, ದೋಷಿಯೇ ದಗಲಿ, ಅವನನ್ನು ಕಾಪಾಡಿಯೇ ತೀರುತ್ತೇನೆ. ಇದಕ್ಕೆ ಇನ್ನೊಂದು ಉದಾಹರಣೆ ಕೊಡುತ್ತೇನೆ ಕೇಳು.

"ಒಂದು ದೊಡ್ಡ ಕಾಡು. ಯಾರೋ ಒಬ್ಬ ಯಾತ್ರಿಕ ಆ ಕಾಡಿನ ಮಾರ್ಗವಾಗಿ ಬರುತ್ತಿದ್ದ. ಅವನನ್ನು ಒಂದು ಹುಲಿ ಅಟ್ಟಿಸಿಕೊಂಡು ಬಂದಿತು. ಹುಲಿ ಅಟ್ಟಿಸಿಕೊಂಡು ಬಂದ ಭಯಕ್ಕೆ ಆ ಯಾತ್ರಿಕ ಭಯದಿಂದ ಆ ಕಾಡಿನಲ್ಲಿದ್ದ ಮರವನ್ನು ಹತ್ತಿದ. ಆ ಮರದಲ್ಲಿ ಒಂದು ಕೋತಿ ವಾಸ ಮಾಡುತ್ತಿತ್ತು. "ಹುಲಿಯ ಭಯದಿಂದ ಮರ ಹತ್ತಿದ ಮನುಷ್ಯನಿಗೆ ಮರದ ಮೇಲೆ ಕೋತಿ ಇರುವುದನ್ನು ಕಂಡು ಭಯವಾಯಿತು. ಅಂಜಿದ ಮನುಷ್ಯನಿಗೆ ಕೋತಿ ಅಭಯಕೊಟ್ಟಿತು. "ಬೆದರಬೇಡ, ನಿನ್ನನ್ನು ನಾನು ಏನೂ ಮಾಡುವುದಿಲ್ಲ. ನನ್ನ ಹತ್ತಿರ ಬಾ" ಎಂದಿತು. ಕೋತಿಯ ಬಳಿಗೆ ಹೋದ. ಮನುಷ್ಯ ಕೋತಿಯನ್ನೇನೂ ಅಭಯ ನೀಡುವಂತೆ ಪ್ರಾರ್ಥಿಸಲಿಲ್ಲ. ಆದರೂ, ಆ ಕೋತಿ ತಾನಾ

ಗಿಯೋ ಅವನಿಗೆ ಅಭಯ ಕೊಟ್ಟಿತು. ಹಸಿದಿದ್ದ ಆ ಬ್ರಾಹ್ಮಣನಿಗೆ ತಿನ್ನಲು ಫಲ ಕೊಟ್ಟಿತು. ಕೋತಿ ಕೊಟ್ಟ ಹಣ್ಣುಗಳನ್ನು ಚೆನ್ನಾಗಿ ತಿಂದ. ನಿದ್ದೆ ಬಂದಿತು. ಕೆಳಗೆ ಹುಲಿ ಕಾಯುತ್ತಲೇ ಇತ್ತು. ನಿದ್ದೆ ಬಂದಾಗ ಕೋತಿ ಮನುಷ್ಯನನ್ನು "ನನ್ನ ತೊಡೆಯ ಮೇಲೆ ಮಲಗಿಕೊ" ಎಂದಿತು. ಹಾಗೆಯೆ ಆ ಮನುಷ್ಯ ಕೋತಿಯ ತೊಡೆಯ ಮೇಲೆ ತಲೆಯಿಟ್ಟು ನಿದ್ದೆ ಮಾಡಿದ.

"ನಿದ್ದೆ ಮಾಡುತ್ತಿದ್ದಾಗ ಕೆಳಗೆ ಹುಲಿ ನಿಂತೇ ಇತ್ತು. ಕೋತಿಯನ್ನು ಕುರಿತು "ಹೇ ವಾನರ, "ನೀನು ವನಚರ. ಅವನು ಮನುಷ್ಯ. ಅವನಿಗೇಕೆ ನೀನು ಸಹಾಯ ಮಾಡುತ್ತೀ? ನಾನು ಹಸಿದಿದ್ದೇನೆ. ನನ್ನ ಹಸಿವನ್ನು ಹಿಂಗಿಸು. ಆ ಮನುಷ್ಯನನ್ನು ಕೆಳಗೆ ತಳ್ಳು. ನಾನು ತಿಂದು ಹೋಗುತ್ತೇನೆ" ಎಂದಿತು.

ವಾನರ ಒಪ್ಪಲಿಲ್ಲ. "ಮನುಷ್ಯ ನನ್ನನ್ನು ಆಶ್ರಯಿಸದೆ ಇದ್ದರೂ, ನನ್ನ ನಿವಾಸಸ್ಥಾನವನ್ನು ಆಶ್ರಯಿಸಿದಾನೆ. ಶರಣಾಗತನನ್ನು ರಕ್ಷಿಸುವುದೇ ಒಳಿದು, ನಾನು ನಿನ್ನ ಮಾತಿನಂತೆ ಅವನನ್ನು ಕೆಳಗೆ ತಳ್ಳುವುದಿಲ್ಲ" ಎಂದಿತು. ಸ್ವಲ್ಪ ಹೊತ್ತಾಯಿತು. ಮನುಷ್ಯ ನಿದ್ದೆಯಿಂದ ಎದ್ದ. ಕೋತಿ ನಿದ್ದೆ ಮಾಡತೊಡಗಿತು. ಆಗ, ಕೆಳಗೆ ನಿಂತಿದ್ದ ಹುಲಿ "ಏ ಮನುಷ್ಯ! ನೋಡು, ಆ ಕೋತಿ ಮರದಮೇಲೆ ನಿದ್ರಿಸುತ್ತಿದೆ. ಅದನ್ನು ಕೆಳಗೆ ತಳ್ಳು, ಅದನ್ನು ತಿಂದು ನಿನ್ನನ್ನು ಬಿಟ್ಟುಬಿಡುತ್ತೇನೆ" ಎಂದಿತು.

ಮನುಷ್ಯ ಮಲಗಿ ನಿದ್ರಿಸುತ್ತಿದ್ದ ಕೋತಿಯನ್ನು ಕೆಳಗೆ ತಳ್ಳಿದ. ಕೋತಿ ಎಚ್ಚೆತ್ತಿತು, ಹುಲಿ ಕೋತಿಯನ್ನು ಕುರಿತು "ನೋಡಿದೆಯಾ! ಮನುಷ್ಯ ಎಂಥ ಕೃತಘ್ನ! ನೀನು ಅವನನ್ನು ರಕ್ಷಿಸಿದೆ, ಅವನು ನಿನ್ನನ್ನು ತಳ್ಳಿದ. ಈಗಲೂ ನಿನ್ನನ್ನು ಬಿಡುತ್ತೇನೆ. ಮೇಲೆ ಹೋಗಿ ಅವನನ್ನು ತಳ್ಳು" ಎಂದಿತು. ಆತ್ಮರಕ್ಷಣೆಗಾಗಿ ಕಪಿ "ಆಗಲಿ" ಎಂದಿತು. ಸರಸರನೆ ಮರವೇರಿತು; ಮೇಲೆ ಕುಳಿತ ಮನುಷ್ಯನಿಗೆ ಭಯವಾಯಿತು. ನನ್ನ ಗತಿ ಮುಗಿಯಿತು" ಎಂದುಕೊಂಡ. ಭಯಪಡುತ್ತಿದ್ದ ಅವನನ್ನು ಕಪಿ ಸಂತೈಸಿತು. "ಅಂಜಬೇಡ" ಎಂದಿತು. ಮೇಲೇರಿ ಹುಲಿಗೆ "ಒಲ್ಲೆ" ಎಂದು ಹೇಳಿತು.

"ಇವನು ಶರಣಾಗಿದಾನೆ. ಶರಣಾಗತನನ್ನು ಹೇಗಿದ್ದರೂ ಬಿಟ್ಟುಕೊಡುವುದಿಲ್ಲ" ಎಂದು ಹೇಳಿತು. ಬಹಳ ಹೊತ್ತು ಕಾದು ಹುಲಿ ಹೋದಮೇಲೆ ತನ್ನ ದಾರಿ ಹಿಡಿದ.

"ಹೀಗೆ, ಒಂದು ಕೋತಿ ತನ್ನನ್ನು ಶರಣು ಬಂದವರನ್ನು ರಕ್ಷಿಸಿತು. ಸುಗ್ರೀವಾ! ನೀನೂ ವಾನರರಾಜನೇ ಅಲ್ಲವೆ? ನಿನ್ನಂತೆ ಒಂದು ಕೋತಿಯೇ ಶರಣಾಗತನನ್ನು ರಕ್ಷಿಸಿತು ಎಂದಮೇಲೆ ವಾನರ ರಾಜನಾಗಿ ನೀನು "ಬೇಡ" ಎನ್ನುವಿಯಲ್ಲ. ಇದು ಸರಿಯೇ? ಹೇಳು, ನಿನಗೇಕೆ ಈ ಬುದ್ಧಿ ಬಂದಿತು? ವಾಲಿ ಕುಳಿತ ಸಿಂಹಾಸನದಲ್ಲಿ ಕುಳಿತದ್ದರಿಂದ ಹೀಗೋ! ದೇಶದ, ಸ್ಥಾನದ ಪ್ರಭಾವವೋ? ಹೇಗೆ?

"ಒಂದು ಕೋತಿಯೇ ಶರಣಾಗತನನ್ನು ರಕ್ಷಿಸಿತು ಎಂದಮೇಲೆ ನರಶ್ರೇಷ್ಠನಾಗಿ, ರಘುಕುಲದಲ್ಲಿ ಜನಿಸಿದ ನಾನು ಶರಣಾಗತರನ್ನು ಕೈಬಿಡುವುದು ಉಚಿತವೆ?

"ಸುಗ್ರೀವ, ಇನ್ನೂ ಕೇಳು. ಒಂದು ಹಂಸ ತನ್ನನ್ನು ಶರಣಾಗತಿ ಮಾಡಿದವನನ್ನು ಹೇಗೆ ರಕ್ಷಿಸಿತು ಎಂದು ಹೇಳುತ್ತೇನೆ. "ನಾಲೀಜಂಘ ಎಂಬ ಒಂದು ಹಂಸಪಕ್ಷಿ ಇತ್ತು. ಅದು ಸರ್ವ ಶಾಸ್ತ್ರವನ್ನೂ ಅರಿತಿತ್ತು. ಶಾಪ ವಶದಿಂದ ಹಂಸವಾಗಿತ್ತು. ಅದಕ್ಕೆ ದೇವೇಂದ್ರ ಮತ್ತು ಒಬ್ಬ

ರಾಕ್ಷಸ ಇಬ್ಬರೂ ಮಿತ್ರರಾಗಿದ್ದರು. ದಿನವೂ ಈ ಹಂಸ ತನ್ನ ಮಿತ್ರನಾದ ದೇವೇಂದ್ರನ ಬಗ್ಗೆ ವಿಚಾರಿಸಿ ಮಾತಾಡಿ ಬರುತ್ತಿತ್ತು.

ಒಬ್ಬ ಬಡವ. ಬಡತನ, ಬಹುಪುತ್ರತ್ವ ಈ ಎರಡೂ ಸಂಕಟಗಳಿಂದ ನರಳುತ್ತಿದ್ದ. ಅವನು ಹಾಗೇ ಹೋಗುತ್ತಿದ್ದ ಸಮಯ ಒಂದು ಮರದ ಕೆಳಗೆ ಬಂದ. ಬಡತನದಿಂದಾಗಿ ಕಳ್ಳತನಮಾಡಿ ಬಂದು ಆ ಮರಕ್ಕೆ ಶರಣಾದ. ಅದೇ ಮರದಮೇಲೆ ನಾಲಿಜಂಘನಿದ್ದ. ಬಡವನ ಕಷ್ಟವನ್ನು ಕೇಳಿ ಆ ನಾಲೀಜಂಘ ತನ್ನ ರಾಕ್ಷಸಮಿತ್ರನಿಗೆ, ಬ್ರಾಹ್ಮಣನಿಗೆ ಸಹಾಯಮಾಡುವಂತೆ ಒಂದು ಪತ್ರ ಬರೆದು, ಅದನ್ನು ಬಡವನಿಗೆ ಕೊಟ್ಟಿತು. ಅದರಂತೆ ಆ ಬ್ರಾಹ್ಮಣ ಆ ಪತ್ರವನ್ನು ರಾಕ್ಷಸನಲ್ಲಿಗೆ ತಗೆದುಕೊಂಡು ಹೋದ. ನಾಲೀಜಂಘನ ಮಾತಿನಂತೆ ಆ ರಾಕ್ಷಸ ಬ್ರಾಹ್ಮಣನಿಗೆ ಒಂದು ಗಡಿಗೆ ತುಂಬಾ ಹೊನ್ನು ಕೊಟ್ಟ. ಆ ಹೊನ್ನನ್ನು ಹೊತ್ತುಕೊಂಡು ಹಿಂತಿರುಗಿದ. ಕತ್ತಲಾಯಿತು. ಪುತ್ತೆ ಆ ನಾಲೀಜಂಘನಿದ್ದ ಮರಕ್ಕೇ ಬಂದು ಮರದಡಿಯಲ್ಲಿ ಕುಳಿತ.

ರಾತ್ರಿಯಾಯಿತು. ಆ ನಾಲೀಜಂಘ ನಿದ್ದೆ ಮಾಡುತ್ತಿತ್ತು. ಬ್ರಾಹ್ಮಣನಿಗೆ ತುಂಬ ಹಸಿವಾಯಿತು. ಹಸಿವನ್ನು ತಡೆಯಲಾರದೆ ತನಗ ಸಹಾಯಮಾಡಿದ ಆ ಹಂಸವನ್ನೇ ಕೊಂದುತಿಂದ. ಅರ್ಧವನ್ನು ತಿಂದು ಹಸಿವನ್ನು ಹಿಂಗಿಸಿಕೊಂಡ.

ಮರುದಿನ ನಾಲೀಜಂಘ ಎಂದಿನಂತೆ ಇಂದ್ರಲೋಕಕ್ಕೆ ಬರದಿದ್ದುದನ್ನು ಕಂಡ ಇಂದ್ರ ಮರದಬಳಿಗೆ ಬಂದ. ಅಲ್ಲಿ ಆ ಹಂಸ ಸತ್ತುಬಿದ್ದಿದ್ದನ್ನು ಕಂಡು ಇದು ರಾಕ್ಷಸನ ಕೆಲಸ ಇದ್ದೀತು ಎಂದು ರಾಕ್ಷಸನ ಬಳಿಗೆ ಬಂದ ರಾಕ್ಷಸ ಅಲ್ಲ ಎಂದು ತಿಳಿಯಿತು. ಅಲ್ಲಿಂದ ಬ್ರಾಹ್ಮಣನ ಬಳಿ ಬಂದು ಅವನನ್ನು ಪ್ರಶ್ನಿಸಿದ. ನನಗ ಗೊತ್ತೇ ಇಲ್ಲ ಎಂದು ಬ್ರಾಹ್ಮಣ ಸುಳ್ಳು ಹೇಳಿದ.

ಇಂದ್ರನು ದೇವಲೋಕದಿಂದ ಅಮೃತವನ್ನು ತಂದು ನಾಲೀಜಂಘನನ್ನು ಬದುಕಿಸಿದ. ಆಮೇಲೆ ನಿಜಾಂಶ ತಿಳಿಯಿತು. ಕುಪಿತನಾದ ಇಂದ್ರ ಬ್ರಾಹ್ಮಣನನ್ನು ಕೊಲ್ಲಲು ಕೈಯೆತ್ತಿದ. ಆಗ ನಾಲೀಜಂಘ ಇಂದ್ರನನ್ನು ತಡೆಯುತ್ತಾ "ಇಂದ್ರ, ಬೇಡ. ಇವನು ನನಗೆ ಶರಣಾಗಿದಾನೆ. ಇವನನ್ನು ಕೊಲ್ಲುವುದು ಸರಿಯಲ್ಲ" ಎಂದಿತು. ತನ್ನನ್ನು ಕೊಂದವನನ್ನೇ ರಕ್ಷಿಸಿತು ಆ ಹಂಸ. ಹಂಸ ಪಕ್ಷಿಯೇ ಇಷ್ಟೊಂದು ದೃಢವಾಗಿ ಶರಣಾಗತರನ್ನು ರಕ್ಷಿಸಿರುವಾಗ ಉತ್ತಮ ಕುಲದಲ್ಲಿ ಹುಟ್ಟಿದ ನಾನು ಶರಣಾಗತರನ್ನು ರಕ್ಷಿಸದೆ ಇರಲು ಹೇಗೆ ಸಾಧ್ಯ? ಸುಗ್ರೀವ, ನಾನು ಹುಟ್ಟಿರುವ ಕುಲ ರಘುಕುಲ. ನನ್ನ ಪೂರ್ವಜರಾದ ರಘುಮಹಾರಾಜ ಶರಣಾಗತನಿಗಾಗಿ ತನ್ನ ದೇಹದಿಂದ ಮಾಂಸವನ್ನೇ ಕೊಯ್ದು ಕೊಟ್ಟ. ಅದನ್ನು ಹೇಳುತ್ತೇನೆ, ಕೇಳು.

"ಕಾಡಿನ ಮಾರ್ಗದಲ್ಲಿ ಒಬ್ಬ ಬ್ರಾಹ್ಮಣ ಹೋಗುತ್ತಿದ್ದ. ಅವನನ್ನು ಒಬ್ಬ ಬ್ರಹ್ಮರಾಕ್ಷಸ ಹಿಡಿದ. ಬ್ರಾಹ್ಮಣ ಭಯದಿಂದ ಓಡುತ್ತಾ ರಘುವಿನ ಬಳಿ ಬಂದು ಶರಣಾಗತನಾದ. ಆಗ ರಘುಮಹಾರಾಜ ತನ್ನ ದೇಹದಿಂದ ಮಾಂಸವನ್ನು ಕೊಯ್ದು ಬ್ರಹ್ಮರಾಕ್ಷಸನಿಗೆ ಆಹಾರವನ್ನೂ ಕೊಟ್ಟ.

ಹೀಗೆ ರಘುಮಹಾರಾಜನ ಕುಲದಲ್ಲಿ ಜನಿಸಿ, ರಾಘವ ಎನಿಸಿಕೊಂಡ ನಾನು ಶರಣಾಗತನನ್ನು ಎಂದಾದರೂ ಕೈ ಬಿಟ್ಟೇನೆ?

"ಸುಗ್ರೀವ, ಲೋಕದಲ್ಲಿ ತಿಳಿದವರೆಲ್ಲ ಶರಣಾಗತರಕ್ಷಣೆಯೇ ಪರಮಧರ್ಮವನ್ನಾಗಿ ಅನು

ಷ್ಠಿಸುತ್ತಾರೆ. ನನ್ನ ಗುರುಗಳೆನಿಸಿದ ವಿಶ್ವಾಮಿತ್ರರೂ ಶರಣಾಗತನನ್ನು ರಕ್ಷಿಸುವ ಸಲುವಾಗಿ ತಮ್ಮ ತಪ್ಪೋಬಲವನ್ನೆಲ್ಲ ವಿನಿಯೋಗಿಸಿದರು. ನಮ್ಮ ಪೂರ್ವಜನಾದ ತ್ರಿಶಂಕು ಮಹಾರಾಜ ವಿಶ್ವಾಮಿತ್ರರನ್ನು ಶರಣು ಹೊಕ್ಕ. ಆಗ ವಿಶ್ವಾಮಿತ್ರರು ತಮ್ಮ ಸಮಸ್ತ ತಪ್ಪೋಬಲವನ್ನೂ ವಿನಿಯೋಗಿಸಿ ಅವನಿಗಾಗಿಯೇ ಬೇರೆಯಾದ ಸ್ವರ್ಗವನ್ನೇ ಸೃಷ್ಟಿಸಿದರು.

ಅಲ್ಲದೆ, ವಿಶ್ವಾಮಿತ್ರರ ಸೋದರಳಿಯನಾದ ಶುನಃಶ್ಶೇಫ ವಿಶ್ವಾಮಿತ್ರರನ್ನು ಶರಣುಹೊಕ್ಕ. ಅವನನ್ನು ವಿಶ್ವಾಮಿತ್ರರು ಕಾಪಾಡಿದರು.

ಹೀಗೆ ನನ್ನ ಗುರುಗಳಾದ ವಿಶ್ವಾಮಿತ್ರರು ಶರಣಾಗತರನ್ನು ರಕ್ಷಿಸಿದ್ದಾರೆ. ಎಂದಮೇಲೆ ನಾನು ಅವರ ಶಿಷ್ಯನಾಗಿ ಶರಣಾಗತನನ್ನು ಕೈಬಿಡುವುದೇ ? ಸುಗ್ರೀವ! ಅದೆಂದಿಗೂ ಆಗದ ಕೆಲಸ.

ಸುಗ್ರೀವ, ಕೇಳು, ದೇವಗುರುವಾದ ಬೃಹಸ್ಪತಿಯೂ ಶರಣಾಗತರನ್ನು ರಕ್ಷಿಸಿದ್ದಾರೆ.

ಇಂದ್ರನಿಗೆ ಬ್ರಹ್ಮಹತ್ಯೆ ಬಂದಾಗ ಇಂದ್ರನ ಸ್ಥಾನ ಶೂನ್ಯವಾಯಿತು. ಆಗ, ನೂರು ಅಶ್ವಮೇಧ ಯಾಗಗಳನ್ನು ಮಾಡಿದ್ದ ನಹುಷನನ್ನು ದೇವತೆಗಳೆಲ್ಲ ರಾಜನನ್ನಾಗಿ ಮಾಡಿಕೊಂಡರು. ಇಂದ್ರನಾದ ಮೇಲೆ ಇಂದ್ರಾಣಿಯೂ ತನ್ನವಳಾಗಬೇಕು ಎಂದು ನಹುಷ ಪಟ್ಟುಹಿಡಿದ. ತನ್ನ ಸತೀತ್ವಕ್ಕೆ ಭಂಗ ಬರುವುದನ್ನು ಕಂಡ ಇಂದ್ರಾಣಿ ದೇವಗುರುವಾದ ಬೃಹಸ್ಪತಿಯನ್ನು ಮರೆ ಹೊಕ್ಕಳು. ದೈನ್ಯದಿಂದ ಪ್ರಾರ್ಥಿಸುತ್ತಿರುವ ಶಚಿಯನ್ನು ಸಂತೈಸಿ ಅಭಯಪ್ರದಾನ ಮಾಡಿದರು. ಬೃಹಸ್ಪತಿಯ ಯುಕ್ತಿಯಂತೆ ಶಚಿ ನಹುಷನಿಗೆ ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಬರುವಂತೆ ಹೇಳಿ ಕಳುಹಿಸಿದಳು. ಅದರಂತೆ ನಹುಷ ಸಪ್ತರ್ಷಿಗಳನ್ನು ಪಲ್ಲಕ್ಕಿ ಹೊರುವಂತೆ ಹೇಳಿದ. ಸಪ್ತರ್ಷಿಗಳಲ್ಲಿ ಅಗಸ್ತ್ಯರು ಕುಳ್ಳ. ನಿಧಾನವಾಗಿ ನಡೆಯುತ್ತಿದ್ದ ಅವರನ್ನು ಸರ್ಪ, ಸರ್ಪ, (ಬೇಗ ಹೋಗು, ಬೇಗ) ಎಂದು ಗರ್ಜಿಸಿದ ನಹುಷ. ಕುಪಿತರಾದ ಅಗಸ್ತ್ಯರು ನಹುಷನಿಗೆ "ಸರ್ಪವಾಗು ವಂತೆ ಶಾಪ ಕೊಟ್ಟರು". ಹೀಗೆ, ದೇವಗುರುವಾದ ಬೃಹಸ್ಪತಿಯೂ ಶರಣಾಗತರನ್ನು ಕಾಪಾಡಿ ದ್ದಾರೆ. ಆದ್ದರಿಂದ, ಸುಗ್ರೀವ, ಕಂಡು ಮಹಾಮುನಿ ಹೇಳಿದಂತೆ ನಾನು ಶರಣಾಗತರನ್ನು ಯಾವಾಗಲೂ ಕೈ ಬಿಡುವುದಿಲ್ಲ" ಎಂದ ರಾಮ.

ಸರ್ಪವಾಗಿದ್ದ ಆ ನಹುಷನೇ ಮಹಾಭಾರತದಲ್ಲಿ ಧರ್ಮರಾಯನನ್ನು ಧರ್ಮದ ಬಗ್ಗೆ ಪ್ರಶ್ನಿಸುತ್ತಾನೆ. ಧರ್ಮಜ ನಹುಷನ ಯುಕ್ತಿಯುಕ್ತವಾದ ಮಾತುಗಳನ್ನು ಕೇಳಿ ನಗುತ್ತಾನೆ. ಆಗ ನಹುಷ, "ಧರ್ಮಜ ! ನನ್ನ ಕಥೆಯನ್ನು ಕೇಳಿ ಏಕೆ ನಕ್ಕೆ ?" ಎನ್ನುತ್ತಾನೆ. ಆಗ ಧರ್ಮಜ, ನಹುಷ, ನೂರು ಅಶ್ವಮೇಧ ಯಾಗಗಳನ್ನು ಮಾಡಿದೆ. ಇದುವರೆಗೆ ಇಷ್ಟೊಂದು ಧರ್ಮ ಯುಕ್ತವಾದ ಮಾತುಗಳನ್ನು ಆಡಿದೆ. ಆದರೆ ಬ್ರಾಹ್ಮಣನಿಗೆ ಅವಮಾನ ಮಾಡಿದೆಯಲ್ಲ ಎಂದು ನಕ್ಕೆ" ಎಂದ.

ಧರ್ಮಜನ ಮಾತುಗಳನ್ನು ಕೇಳಿ ನಹುಷ ನಕ್ಕ. ಆಗ ಧರ್ಮಪುತ್ರ ನಹುಷಾ, ನೀನು ಏಕೆ ನಗುತ್ತಿರುವಿ ? ಎಂದ. ನಹುಷ ಹೇಳಿದ, ಧರ್ಮಪುತ್ರ ಎನಿಸಿಕೊಂಡು ಸಕಲ ಧರ್ಮವನ್ನೂ ನನಗೆ ತಿಳಿಸಿದ ನೀನೇ ಜೂಜಾಡಿ ಸಕಲ ರಾಜ್ಯವನ್ನೂ ಕಳೆದುಕೊಂಡೆಯಲ್ಲಾ ! ಧರ್ಮರಹಸ್ಯ ವನ್ನು ಬಲ್ಲ ನಿನಗೆ, ಜೂಜಾಡಬಾರದು ಎಂದು ಹೊಳೆಯಲಿಲ್ಲ ಎಂದು ನಕ್ಕೆ ಎಂದ. ಆಗ ಧರ್ಮಪುತ್ರ ಐಶ್ವರ್ಯದ ಮದದಲ್ಲಿ ಯುಕ್ತಾಯುಕ್ತ ತಿಳಿಯಲಿಲ್ಲ ಎಂದನಂತೆ.

ಸುಗ್ರೀವನಿಗೆ ಶರಣಾಗತಿಯ ಮಹತ್ವವನ್ನು ನಾನಾ ಪ್ರಕಾರದಿಂದ ತಿಳಿಸಿ ಹೇಳಿದ ರಾಮ. ಯಾವ ಯಾವ ಬಗೆಯಲ್ಲಿ ಶರಣಾದರೂ ಕಾಪಾಡುತ್ತೇನೆ ಎಂಬ ಮಾತನ್ನು ರಾಮ ಸ್ಪಷ್ಟವಾಗಿ ತಿಳಿಸಿದ.

ಬದ್ಧಾಂಜಲಿಪುಟಂ ದೀನಂ ಯಾಚಂತಂ ಶರಣಾಗತಂ ।
ನಹನ್ಯಾದಾನೃಶಂ ಸಾರ್ಥಮಪಿ ಶತ್ರುಂ ಪರಂತಪ ! ॥
ಆರ್ತೋವಾ ಯದಿವಾ ದೃಪ್ತಃ ಪರೇಷಾಂ ಶರಣಾಗತಃ ।
ಅರಿಃ ಪ್ರಾಣಾನ್ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ ॥
ಸಚೇದ್ಭಯಾದ್ವಾ ಮೋಹಾದ್ವಾ ಕಾಮಾದ್ವಾಪಿ ನರಕ್ಷತಿ ।
ಸ್ವಯಾಶಕ್ತ್ಯಾಯಥಾ ಸತ್ವಂ ತತ್ಪಾಪಂ ಲೋಕಗರ್ಹಿತಂ ॥
ವಿನಷ್ಟಃ ಪಶ್ಯತಸ್ತಸ್ಯಾರಕ್ಷಿಣಃ ಶರಣಾಗತಃ ।
ಆದಾಯ ಸಕೃತಂ ತಸ್ಯ ಸರ್ವಂ ಗಚ್ಛೇದರಕ್ಷಿತಃ ।
ಏವಂದೋಷೋ ಮಹಾನತ್ರ ಪ್ರಪನ್ನಾ ನಾಮರಕ್ಷಣೇ ।
ಅಸ್ವರ್ಗ್ಯಂ ಚಾ ಯಶಸ್ಯಂಚ ಬಲವೀರ್ಯ ವಿನಾಶನಂ ॥
ಕರಿಷ್ಯಾಮಿ ಯಥಾರ್ಥಂತು ಕಂಡೋರ್ವಚನ ಮುತ್ತಮಂ ।
ಧರ್ಮಿಷ್ಠಂಚ ಯಶಸ್ಯಂಚ ಸ್ವರ್ಗ್ಯಂ ಸ್ಯಾತ್ತುಫಲೋದಯೇ ॥

ಸುಗ್ರೀವ, ಹೆಚ್ಚೇಕೆ ! ನೀ ಏನೇ ಹೇಳಿದರೂ ಶರಣಾಗತರನ್ನು ನಾನು ಕೈ ಬಿಡುವುದಿಲ್ಲ. ಯಾರೇ ಆಗಲಿ, ಜೀವಧಾರಿಯಾದ ಸರ್ವಭೂತಗಳಿಗೂ ಶರಣ್ಯನಾಗಿದ್ದೇನೆ. ಯಾರೇ ಬಂದು ನನ್ನನ್ನು ಶರಣುಹೊಕ್ಕರೂ ಅವರನ್ನು ಕಾಪಾಡಿಯೇ ತೀರುತ್ತೇನೆ. ಶರಣಾಗತರನ್ನು ರಕ್ಷಿಸಬೇಕು ಎನ್ನುವುದು ನನ್ನ ವ್ರತ. ಅದನ್ನು ನಾನು ಯಾವುದೇ ಕಾರಣದಿಂದಲೂ ಭಂಗಗೊಳಿಸಲಾರೆ ಎಂದ.

**ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ ।**
**ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ ತತ್ ವ್ರತಂಮಮ ॥**

ಎನ್ನುತ್ತಾನೆ.

ಇದು ರಾಮಚರಮ ಶ್ಲೋಕ.

"ಯಾರೇ ಆಗಲಿ ನೀನೇ ಗತಿ ಎಂದು ನನ್ನಲ್ಲಿ ಪ್ರಪತ್ತಿ ಮಾಡಿದರೆ ಅವರನ್ನು ಕಾಪಾಡುತ್ತೇನೆ. ಇದು ನನ್ನ ವ್ರತ" ಎಂದ ರಾಮ.

ರಾಮ ದೃಢವ್ರತ ಎಂದಿದಾರೆ ವಾಲ್ಮೀಕಿ.

ರಾಮನಿಗೆ ಇದ್ದ ವ್ರತ ಒಂದೇ. ಶರಣಾಗತರನ್ನು ರಕ್ಷಿಸುವುದು ಎಂಬ ವ್ರತವೇ ಅದು. ಅದನ್ನು ನಾನು ಯಾವುದೇ ಕಾಲದಲ್ಲೂ ಬಿಡುವುದಿಲ್ಲ ಎಂದ ರಾಮ.

ಪರಮಾತ್ಮನ ಅವತಾರಗಳೆಲ್ಲ ದುಷ್ಟಶಿಕ್ಷಣ ಶಿಷ್ಟರಕ್ಷಣೆಗಾಗಿಯೇ ಆಗಿವೆ. ಅದರಲ್ಲೂ

ರಾಮ, ಕೃಷ್ಣ, ವರಾಹ, ಈ ಮೂರು ಅವತಾರಗಳಲ್ಲಿ ಪರಮಾತ್ಮ ತಾನಾಗಿಯೇ ಶರಣಾಗತರನ್ನು ರಕ್ಷಿಸಿಯೇ ತೀರುವುದಾಗಿ ಅಭಯ ಕೊಟ್ಟಿದ್ದಾನೆ.

ರಾಮಾವತಾರ ಕಾಲದಲ್ಲಿ ವಾನರ ಸೈನ್ಯ, ರಾವಣ ಸೈನ್ಯದ, ನಡುವೆ ನಿಂತು

**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತತ್ ವ್ರತಿಂಮಮ ॥**

ಎಂದು ಹೇಳಿದ.

ಕೃಷ್ಣಾವತಾರ ಕಾಲದಲ್ಲಿ ಕೌರವ–ಪಾಂಡವ ಸೈನ್ಯಗಳ ಮಧ್ಯೆ ನಿಂತು

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥**

ಎಂದು ಅಭಯಪ್ರಧಾನ ಮಾಡಿದ.

ಅದೇ ವರಾಹಾವತಾರ ಕಾಲದಲ್ಲಿ

**ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ ಸತಿ ಯೋ ನರಃ ।**
**ಧಾತುಸಾಮ್ಯೇ ಸ್ಥಿತೇ ಸ್ಮರ್ತಾ ವಿಶ್ವರೂಪಂ ಚ ಮಾಮಜಂ ॥**
**ತಮೇವಂ ಮ್ರಿಯಮಾಣಂ ತು ಕಾಷ್ಠಪಾಷಾಣ ಸನ್ನಿಭಂ ।**
**ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಮ್ ॥**

ಎಂದ.

ಹೀಗೆ, ಶರಣಾಗತ ರಕ್ಷಣೆಯೇ ಅವತಾರದ ಹೆಗ್ಗುರಿ ಎಂದು ಪ್ರಕಾಶಪಡಿಸಿದ ಭಗವಂತ.

ಸರ್ವಭೂತಗಳಿಗೂ, ಯಾಚಿಸಿದರೆ ಅಭಯ ಕೊಡುತ್ತೇನೆ ಎಂದ ರಾಮ. ಕೃಷ್ಣ ಅರ್ಜುನ ನನ್ನು ವ್ಯಾಜವನ್ನಾಗಿಟ್ಟುಕೊಂಡು, ಯಾವ ಯಾವ ಧರ್ಮವನ್ನು ಮಾಡುವುದರಿಂದ ನಿನಗೆ ಫಲ ಬರುತ್ತದೋ ಆ ಫಲವನ್ನೆಲ್ಲ ನಿನಗೆ ನಾನು ಕೊಡುತ್ತೇನೆ. ನನ್ನನ್ನೇ ಶರಣುಹೊಂದು. ನಿನ್ನನ್ನು ಎಲ್ಲ ಪಾಪಗಳಿಂದಲೂ ಉದ್ಧರಿಸುತ್ತೇನೆ ಎಂದ. ಅದರಂತೆ ಅರ್ಜುನ ಸುಭದ್ರೆಯನ್ನು ಪಡೆಯುವ ಸಮಯದಲ್ಲಿ ಕೃಷ್ಣನನ್ನು ಶರಣುಹೊಕ್ಕ. ಸುಭದ್ರೆ ಕೃಷ್ಣನ ತಂಗಿ. ಅವಳನ್ನು ಬಲರಾಮ ದುರ್ಯೋಧನನಿಗೆ ಕೊಡುವುದಾಗಿ ಹೇಳಿದ್ದ. ಅರ್ಜುನನಿಗೋ ಕೃಷ್ಣನ ತಂಗಿಯನ್ನು ತಾನೇ ವಿವಾಹ ಮಾಡಿಕೊಳ್ಳಬೇಕು ಎಂದು ಆಸೆ!

ಬೇರೆ ಉಪಾಯ ಕಾಣದೆ ಅರ್ಜುನ ಕೃಷ್ಣನನ್ನೇ ಶರಣುಹೊಕ್ಕ. ಕೃಷ್ಣಾ, ನಿನ್ನ ತಂಗಿ ಸುಭದ್ರೆ ನನಗೆ ದೊರೆಯುವಂತೆ ಮಾಡು ಎಂದ.

ಹಾಗಾದರೆ ಸನ್ಯಾಸಿಯಾಗು ಎಂದ ಕೃಷ್ಣ.

ಏನು ಕೃಷ್ಣ ಇದು! ಸುಭದ್ರೆಯನ್ನು ವಿವಾಹಮಾಡಿಸು ಎಂದರೆ ಸನ್ಯಾಸಿ ಯಾಗು ಎನ್ನು ವಿಯಲ್ಲ" ಎಂದ ಅರ್ಜುನ.

ನನ್ನನ್ನು ನಂಬಿದಮೇಲೆ ನಾ ಹೇಳುವುದನ್ನು ಕೇಳು. ನೀನು ಸುಭದ್ರೆಯನ್ನು ಪಡೆಯಲು ಸನ್ಯಾಸಿ ಆದರೇ ಸಾಧ್ಯ ಎಂದ ಕೃಷ್ಣ.

ಅದರಂತೆ ಅರ್ಜುನ ಸನ್ಯಾಸಿವೇಷ ಧರಿಸಿದ. ಬಲರಾಮನಿಗೆ ಸನ್ಯಾಸಿ ಎಂದರೆ ಗೀಳು.

ಯಾರೋ ತೇಜಸ್ವಿ ಸನ್ಯಾಸಿ ಬಂದಿದಾರೆ. ತ್ರಿಕಾಲ ಜ್ಞಾನಿಗಳಂತೆ ಎಂದುಕೊಂಡು ಕೃಷ್ಣನನ್ನೂ ಕರೆದುಕೊಂಡು ಬಂದು ಅರ್ಜುನಸನ್ಯಾಸಿಗೆ ಅಡ್ಡಬಿದ್ದ.

ಕೃಷ್ಣ, "ಅಣ್ಣಾ, ಇದೆಲ್ಲ ಮೋಸ! ಈಗ ಸನ್ಯಾಸಿಗಳು ಹೆಚ್ಚಿದಾರೆ. ಬರೀ ಮೋಸ. ಇವರನ್ನು ನಂಬಬೇಡ" ಎಂದ.

ಬಲರಾಮನು ಕೃಷ್ಣಾ, ಯಾವಾಗಲೂ ನಿನ್ನದು ಹುಡುಗಾಟವೇ! ಹಿರಿಯರಲ್ಲಿ ಹಾಗೆಲ್ಲ ನಡೆದುಕೊಳ್ಳಬಾರದು ಎಂದು ಹೇಳಿ ಅರ್ಜುನ ಸನ್ಯಾಸಿಯನ್ನು ಕರೆದು ಅಂತಃಪುರದಲ್ಲೇ ಇರಿಸಿಕೊಂಡ. ಮದುವೆಯಾಗದ ಕನ್ಯೆ ಸುಭದ್ರೆಯನ್ನೇ ಪರಿಚರ್ಯೆಗಾಗಿ ನಿಯಮಿಸಿದ. ಒಂದು ದಿನ ರೈವತಕ ಪರ್ವತಕ್ಕೆ ಯಾದವರೊಡನೆ ಬಲರಾಮ, ಕೃಷ್ಣ ಉತ್ಸವಕ್ಕಾಗಿ ಹೋಗಿದ್ದರು. ಅದೇ ಸಮಯದಲ್ಲಿ ಕೃಷ್ಣನ ಹಂಚಿಕೆಯಂತೆ ಅರ್ಜುನ ಸುಭದ್ರೆಗೆ ತನ್ನ ವಿಷಯ ತಿಳಿಸಿ, ಅವಳ ಒಪ್ಪಿಗೆಯನ್ನು ಪಡೆದು, ಕೃಷ್ಣ ಏರ್ಪಡಿಸಿದ್ದಂತೆ ರಥದಲ್ಲಿ ಸುಭದ್ರೆಯನ್ನು ಕರೆದುಕೊಂಡು ಹೋದ. ಗುಟ್ಟು ಬಯಲಾದ ಮೇಲೆ ಬಲರಾಮನಿಗೆ ಕೋಪ ಬಂದಿತು. ಕೃಷ್ಣ ಸಮಾಧಾನ ಮಾಡಿದ. ಅರ್ಜುನ ಸುಭದ್ರೆಯನ್ನು ಪಡೆದ. ಹೀಗೆ ಅರ್ಜುನ ಕೃಷ್ಣನ ಅನುಗ್ರಹದಿಂದ ಸಭದ್ರೆಯ ಕೈ ಹಿಡಿಯುವಂತಾದ,

ಮೇಲೆ ನೋಡುವಾಗ ಕಥೆಯುಂತಿದೆ. ಅಂತರಾರ್ಥ ಗಾಢವಾಗಿದೆ. ಕೃಷ್ಣನಿಗೆ ಶರಣಾಗತನಾದ ಅರ್ಜುನ. ಆದ್ದರಿಂದ ಅವನಿಗೆ ಸುಭದ್ರ ಅಂದರೆ "ಒಳ್ಳೆಯ ಮಂಗಳ" ದೊರಕಿತು. ಮುಂದೆ ಭಾರತ ಯುದ್ಧದಲ್ಲಿ ಕೊನೆಯವರೆಗೆ ಅರ್ಜುನನಿಗೆ ಸಹಾಯಕನಾಗಿದ್ದ. ಪಾಂಡವರನ್ನು ರಕ್ಷಿಸಿದ ಕೃಷ್ಣ. ಅಂಥ ಕೃಷ್ಣ, "ನಿನ್ನನ್ನು ಖಂಡಿತ ಕಾಪಾಡುತ್ತೇನೆ. ನನ್ನನ್ನೇ ಶರಣು ಹೊಂದು" ಎಂದು ಹೇಳಿದ. ಹಾಗೆಯೇ ಭೂದೇವಿಯನ್ನು ಕುರಿತು ವರಾಹಸ್ವಾಮಿ, ನನ್ನ ಭಕ್ತ ಒಮ್ಮೆ ನನ್ನನ್ನು ನೆನೆದರೆ ಸಾಕು. ನಾನು ಅವನನ್ನು ಅವನ ಕಷ್ಟಕಾಲದಲ್ಲಿ ನೆನೆದು ಅವನಿಗೆ ಸಹಾಯಮಾಡುತ್ತೇನೆ ಎಂದ. ಹಾಗೆಯೇ ರಾಮನೂ ಅಭಯಂ ಸರ್ವಭೂತೇಭ್ಯಃ ಎಂದ ಎಲ್ಲ ಪ್ರಾಣಿಗಳಿಗೂ ಅಭಯ ಕೊಡುತ್ತೇನೆ ಎಂದು ನುಡಿದ. ಪಶು, ಪಕ್ಷಿ, ಮೃಗ, ಕೀಟ, ಮನುಷ್ಯ ರಾಕ್ಷಸ, ದೇವ ಎಂಬ ಭೇದಭಾವವಿಲ್ಲದೆ ಯಾರೇ ಆಗಲಿ ನೀನೇ ಗತಿ ಎಂದು ಬೇಡಿದರೆ ಸಾಕು. ಅವರಿಗೆ ಅಭಯ ಕೊಡುತ್ತೇನೆ–ಅದು ನನ್ನ ಸಂಕಲ್ಪ. ಅದನ್ನು ವಿರೋಧಿಸಲು ಯಾರಿಗೂ ಸಾಧ್ಯವಿಲ್ಲ ಎಂದ. ಶರಣಾಗತಿ ವಿಶಿಷ್ಟಾದ್ವೈತ ಸಿದ್ಧಾಂತದ ಜೀವಾಳ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಎರಡು ಸಂಪ್ರದಾಯಗಳುಂಟು. ತೆನ್ನಾಚಾರ್ ಸಂಪ್ರದಾಯ, ವಡಗಲೈ ಸಂಪ್ರದಾಯ ಎಂದು.

"ತೆನ್ನಾಚಾರ್" ಸಂಪ್ರದಾಯದ ರೀತ್ಯಾ ಭಗವಂತನಲ್ಲಿ ಒಮ್ಮೆ ಶರಣು ಬಂದರೆ ಮುಗಿಯಿತು. "ಅಹಂ ತ್ವಾಂ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಂದ ಕೃಷ್ಣ. ಅಂದರೆ, ಪಾಪಮುಕ್ತನಾಗುತ್ತಾನೆ ಶರಣಾಗತ ಎಂದು ಅರ್ಥ. ಇದನ್ನು ಹೇಳುವಾಗ ಮಣವಾಳಮಾಮುನಿಗಳು ಭಗವಂತನ ಔದಾರ್ಯವನ್ನು ಪ್ರಶಂಸಿಸುತ್ತಾ "ದೇವ, ಶರಣಾಗತರ ತಪ್ಪನ್ನು ಎಣಿಸುವುದೇ ಇಲ್ಲ. ಶರಣಾಗತನಿಗೆ–ಅವನು ಏನೇ ಅಪರಾಧ ಮಾಡಲಿ–ಅದನ್ನು ಲೆಕ್ಕಿಸುವುದಿಲ್ಲ" ಎಂದಿದಾರೆ. ಅದರಂತೆ ಶರಣಾಗತನಿಗೆ ಅವನು ಏನೇ ಮಾಡಲಿ! ಮೋಕ್ಷ ಸಿದ್ಧ. ಇದು ಪರಮಾತ್ಮನ ಔದಾರ್ಯವನ್ನು, ಶರಣಾಗತರಲ್ಲಿ ಭಗವಂತನಿಗೆ ಇರುವ ಕಾರುಣ್ಯವನ್ನು ನಿರೂಪಿಸುತ್ತದೆ.

ಭಗವಂತನ ಕಾರುಣ್ಯವನ್ನು ಅನುಭವಿಸುತ್ತಾ ಆಳ್ವಾರ್ ಹೇಳುತ್ತಾರೆ

ಲಕ್ಷ್ಮೀಸಕಲ ಜೀವರಿಗೂ ಪುರುಷಾಕಾರಸ್ವರೂಪಿಣಿ ಎಲ್ಲ ಜೀವರನ್ನೂ ಪರಮಾತ್ಮನಲ್ಲಿ ಸೇರಿ

ಸುವಂಥವಳು. ಅಂಥ ಲಕ್ಷ್ಮಿಯೇ ಒಂದುವೇಳೆ ಭಗವಂತನಲ್ಲಿ ಅವನ ಭಕ್ತನಾದವನು ತಪ್ಪು ಮಾಡಿದ ಎಂದು ಹೇಳಿದರೂ ಭಗವಂತ ನಂಬುವುದಿಲ್ಲವಂತೆ.

ಲಕ್ಷ್ಮಿ ಭಗವಂತನಲ್ಲಿ ನಿನ್ನ ಭಕ್ತ ಆ ಪಾಪವನ್ನು ಮಾಡಿದ ಎಂದು ಹೇಳಿದರೆ ಪರಮಾತ್ಮ "ಎನ್ನಡಿಯಾರ್ ಅದು ಶೈಯ್ಯಾರ್" ನನ್ನ ಭಕ್ತರು ಅದನ್ನು ಮಾಡರು ಎನ್ನುತ್ತಾನಂತೆ. ಭಕ್ತರು ಪಾಪವನ್ನು ಮಾಡರು ಎಂದು "ಪಾಪ" ಶಬ್ದವನ್ನೇ ಉಚ್ಚರಿಸುವುದಿಲ್ಲ ಭಗವಂತ. "ನನ್ನ ಭಕ್ತರು ಅದನ್ನು ಮಾಡುವುದಿಲ್ಲ" ಎನ್ನುವನಂತೆ.

"ಮಾಡಿದಾರೆ; ನಿಜವಾಗಿ ಆ ತಪ್ಪನ್ನು ಮಾಡಿದಾರೆ" ಎಂದರೆ, ಆಗಲೂ ಭಗವಂತ,

**ಎನ್ನಡಿಯಾರ್ ಇದು ಶೆಯ್ಯಾರ್। ಶೈದಾರೇ ನನ್ರು ಶೈದಾರ್ ॥**

ಅಂದರೆ ಮಾಡಿದರೋ ಹಾಗಾದರೆ ಒಳ್ಳೆಯದನ್ನೇ ಮಾಡಿದರು. ಎನ್ನುತ್ತಾನಂತೆ!

ಇಂಥ ಕಾರುಣ್ಯ ಭಗವಂತನದು. ಎಂದೇ ''ಕರುಣಾಸಾಗರ" ಎನಿಸಿಕೊಂಡ ಪರಮಾತ್ಮ. ಭಗವಂತನನ್ನು ವರ್ಣಿಸುತ್ತಾ ನೀಲಮೇಘಶ್ಯಾಮ ಎಂದಿದಾರೆ ಶಾಸ್ತ್ರಜ್ಞರು. ನೀಲಮೇಘದಂತೆ ಕಪ್ಪಾದ ಕಾಂತಿಯುಳ್ಳವ ರಾಮ. ಇದನ್ನು ಅನುಭವಿಸುತ್ತಾ ಆಳ್ವಾರ್ ಹೇಳುತ್ತಾರೆ. ರಾಮನಿಗೆ ಕರುಣೆ ಬಹಳ. ಶರಣಾಗತರಾದವರು ಏನೇ ತಪ್ಪು ಮಾಡಿದಿರೂ ಕ್ಷಮಿಸುವಂಥ ಕರಣಾನಿಧಿ. ಕರುಣಾಸಾಗರ ಅವನು, ಆ ಕರುಣೆ ಹೆಚ್ಚಾಗಿರುವುದರಿಂದಲೇ ಅವನ ದೇಹ ಕಪ್ಪಾಗಿಬಿಟ್ಟಿತು" ಎಂದು.

ದೇಶಿಕ ಸಂಪ್ರದಾಯದ ರೀತ್ಯಾ ಶರಣಾಗತನಿಗೆ ಮೋಕ್ಷಸಿದ್ಧ ಎಂಬುದು ಸತ್ಯ. ಆದರೆ, ಶರಣಾಗತನಾದ ಮೇಲೆ ಪಾಪಕಾರ್ಯ ಮಾಡಿದರೆ ಅದಕ್ಕೆ ಇಹಲೋಕದಲ್ಲೇ ಶಿಕ್ಷೆಉಂಟು. ಕಣ್ಣು ಕಾಣಿಸದೆ ಹೋಗುವುದು, ಕಿವಿ ಕೇಳದೇ ಹೋಗುವುದು, ಕಷ್ಟ ಮುಂತಾದ ಶಿಕ್ಷೆ ಇಹದಲ್ಲಿ. ಆದರೆ, ಶರಣಾಗತನಾದವನಿಗೆ ನರಕವಿಲ್ಲ–ಮೋಕ್ಷಕ್ಕೆ ಸುಲಭವಾದ ಸೋಪಾನ ಶರಣಾಗತಿ.

ಶರಣಾಗತಿಯನ್ನು ಯಾರುಬೇಕಾದರೂ, ಯಾವಾಗಬೇಕಾದರೂ ಮಾಡಬಹುದು. ಶರಣಾಗತಿಗೆ ದೇಶನಿಯಮ, ಕಾಲನಿಯಮ, ಜಾತಿನಿಯಮ, ಒಂದೂ ಇಲ್ಲ. ಮನದಲ್ಲಿ ಭಗವಂತನ ಬಗ್ಗೆ ಪ್ರೇಮ ಅಂಕುರಿಸಿದಾಗ, ಭಗವಂತನೇ ಗತಿ ಎಂಬ ಅನನ್ಯ ಭಾವ ಉಂಟಾದಾಗ ತನ್ನ ಸರ್ವಸ್ವವನ್ನೂ ಪರಮಾತ್ಮನಿಗೆ ಸಮರ್ಪಿಸಿ ಶರಣಾಗತನಾಗಬೇಕು. ಶರಣಾಗತಿಯು ಒಂದೇ ಬಾರಿ ಮಾಡುವಂಥದು. ''ಪರಮಾತ್ಮ ರಕ್ಷಿಸುತ್ತಾನೆ'' ಎಂಬ ದೃಢವಾದ ವಿಶ್ವಾಸ ಇರಬೇಕು ಈ ಮಹಾವಿಶ್ವಾಸ ಇದ್ದರೆ ಶರಣಾಗತಿ ಪೂರ್ಣವಾಗಿ ಫಲಿಸುತ್ತದೆ.

ಇದಕ್ಕೆ ಒಂದು ಉದಾಹರಣೆ,

ಒಬ್ಬ ರಾಜ ಇದ್ದ. ಅವನಿಗೆ ಒಬ್ಬ ಮಗಳು. ಯುಕ್ತವಯಸ್ಸು ಬಂದಿತು. ರಾಜ–ಮಗಳಿಗೆ ಮದುವೆ ಮಾಡಲು ನಿಶ್ಚಯಿಸಿದ ಆದರೆ ರಾಜಕುಮಾರಿ ತಾನು "ಚತುರ್ಭುಜಧಾರಿ, ಗರುಡವಾಹನ ಮಹಾವಿಷ್ಣುವನ್ನು ಬಿಟ್ಟು ಯಾರನ್ನೂ ಮದುವೆ ಆಗುವುದಿಲ್ಲ" ಎಂದು ದೃಢವಾಗಿ ತಿಳಿಸಿಬಿಟ್ಟಳು. ನಿರಾಶನಾಗಿ ಸುಮ್ಮನಿದ್ದ.

ಕೆಲವು ದಿನಗಳು ಕಳೆದವು. ಆ ಊರಿನ ಸಮೀಪದಲ್ಲಿದ್ದ ಒಬ್ಬ ವಿಶ್ವಕರ್ಮ (ಬಡಗಿ) ನಿಗೆ ಈ ವಿಷಯ ತಿಳಿಯಿತು. ಅವನು ಗರುಡನನ್ನು ನಿರ್ಮಿಸಿ, ಕೃತಕವಾಗಿ ಎರಡು ಕೈಗಳನ್ನೂ ತಗುಲಿಸಿ

ಕೊಂಡು ರಾತ್ರಿ ರಾಜನ ಬಳಿಗೆ ಬಂದ. ''ವಿಷ್ಣು ಬಂದಿದಾನೆ" ಎಂದುಕೊಂಡು ರಾಜಕುಮಾರಿ ಅವನನ್ನು ಮದುವೆಯಾಗಲು ಒಪ್ಪಿದಳು. ಆ ವಿಷ್ಣುರೂಪಧಾರಿ ವಿಶ್ವಕರ್ಮ "ನನಗೆ ಹಗಲೆಲ್ಲ ಬಹಳ ಕೆಲಸ ; ಹದಿನಾಲ್ಕು ಲೋಕಗಳಿಗೂ ಹೋಗಬೇಕು. ಆದ್ದರಿಂದ ನಾನು ರಾತ್ರಿಯ ವೇಳೆ ಮಾತ್ರ ಬರುತ್ತೇನೆ" ಎಂದ. "ಆಗಲಿ" ಎಂದು ಒಪ್ಪಿದ ರಾಜ. ವಿಶ್ವಕರ್ಮ ರಾಜಕುಮಾರಿಯನ್ನು ಮದುವೆಯಾದ. ರಾತ್ರಿಯ ವೇಳೆ ಮಾತ್ರ ಬಂದು ಹೋಗುತ್ತಿದ್ದ. ಹೀಗೇ ಕೆಲವು ದಿನಗಳು ಕಳೆದವು.

ಒಮ್ಮೆ ಯಾರೋ ಶತ್ರುರಾಜರು ಬಂದು ರಾಜ್ಯವನ್ನು ಮುತ್ತಿದರು. ರಾಜ ಮಗಳಿಗೆ ಹೇಳಿದ "ನಿನ್ನ ಪತಿ ಸಾಕ್ಷಾತ್ ವಿಷ್ಣು. ಅವನಿಗೆ ಹೇಳು. ನಮ್ಮನ್ನು ಈ ಶತ್ರುಗಳಿಂದ ರಕ್ಷಿಸಲಿ'' ಎಂದು.

ಅದರಂತೆ ಆತ ರಾತ್ರಿ ಬಂದಾಗ ರಾಜಕುಮಾರಿ ತನ್ನ ಪತಿಗೆ ಸಹಾಯಮಾಡಬೇಕು ಎಂದು ಹೇಳಿದಳು.

ಬಡಗಿಗೆ ಬಂದಿತು ಸಂಕಟ. ಮರುರಾತ್ರಿ ಅವನು ಬರಲೇ ಇಲ್ಲ. ಇತ್ತ ರಾಜ, ರಾಜ ಕುಮಾರಿ ಎಲ್ಲರೂ ಮಹಾವಿಷ್ಣುವಿನ ಬರವನ್ನೇ ನಿರೀಕ್ಷಿಸುತ್ತಿದ್ದರು.

ವೈಕುಂಠಾಧೀಶ ಶ್ರೀಮಹಾವಿಷ್ಣು ನೋಡಿದ. ಎಲ್ಲರೂ ತನ್ನನ್ನೇ ನಂಬಿದಾರೆ. ಈಗ ತಾನು ಅವರ ಮುಂದೆ ಪ್ರಕಟನಾಗದೆ ಹೋದರೆ ಎಲ್ಲರೂ ತನ್ನನ್ನು ನಿಂದಿಸುತ್ತಾರೆ. ಮಾತ್ರವಲ್ಲ, ಯಾರೂ ಆ ದಿನದಿಂದ ತನ್ನ ದೇವಾಲಯಕ್ಕೇ ಹೋಗುವುದಿಲ್ಲ. ಆದ್ದರಿಂದ, ಈ ಸಮಯದಲ್ಲಿ ಹೋಗಿ ರಕ್ಷಿಸುವುದೇ ಧರ್ಮ. ಗರುಡಾರೂಢನಾಗಿ ಪ್ರಕಟನಾಗಿ ಸರ್ವಶತ್ರುಗಳನ್ನೂ ನಿರ್ಮೂಲ ಮಾಡಿ ಹೋದ. ಎಲ್ಲರೂ ವಿಷ್ಣುವನ್ನು ಹೊಗಳುವವರೇ ಆದರು. ಈ ಸಮಾಚಾರವನ್ನು ತಿಳಿದ ಬಡಗಿ ಮತ್ತೆ ರಾಜಕುಮಾರಿಯ ಬಳಿ ಬಂದ. ಹೀಗೆ, ಸರಸಕ್ಕಾಗಿ ದೇವರನ್ನು ನಂಬಿದರೂ ಆ ದೇವ ಕೈಬಿಡುವುದಿಲ್ಲ ಎಂದ ಮೇಲೆ ಮಹಾವಿಶ್ವಾಸದಿಂದ ಆಶ್ರಯಿಸುವವನನ್ನು ಖಂಡಿತವಾಗಿ ಕಾಪಾಡುತ್ತಾನೆ.

ರಾಮ, ಸುಗ್ರೀವ ಇಬ್ಬರೂ ಶರಣಾಗತ ರಕ್ಷಣೆಯನ್ನು ಮಾಡಲೇಬೇಕು ಎಂಬ ತತ್ತ್ವವನ್ನೇ ಅನುಸರಿಸಿರುವವರು. ಇಬ್ಬರಿಗೂ ಒಂದೇ ಅಭಿಪ್ರಾಯ, ಒಂದೇ ಗುರಿ. ಆದರೆ, ಸುಗ್ರೀವ ವಿಭೀಷಣನನ್ನು ಸೇರಿಸಿಕೊಳ್ಳಬಾರದು ಎಂದು ಏಕೆ ಪಟ್ಟುಹಿಡಿದ ಎಂಬುದು ಪ್ರಶ್ನೆ.

ಇಬ್ಬರಿಗೂ ಭಿನ್ನಾಭಿಪ್ರಾಯ ಏಕೆ ?
ಇದಕ್ಕೆ ಒಂದು ಉದಾಹರಣೆ.

**ದಾತಾಹಿ ವಿಸೃಜತ್ಯರ್ಥಂ ।**
**ನರಃ ದಾರಿದ್ರ್ಯ ಶಂಕಯಾ ॥**
**ಲುಬ್ಧೋ ನ ವಿಸೃಜತ್ಯರ್ಥಂ ।**
**ತಯೈವ ನನು ಶಂಕಯಾ ॥**

ದಾತೃವಾಗಿರುವವ ತನ್ನಲ್ಲಿರುವ ಧನವನ್ನು ಉದಾರವಾಗಿ ದಾನ ಮಾಡುತ್ತಾನೆ. ಏಕೆ ? ಮುಂದೆ ಬಡತನ ಬಂದುಬಿಟ್ಟರೆ ಕೊಡಲು ಆಗುವುದಿಲ್ಲ. ಆದ್ದರಿಂದ ಇರುವಾಗಲೇ ಕೊಟ್ಟು

ಬಿಡೋಣ ಎಂದು ಕೊಡುತ್ತಾನೆ. ಕೊಟ್ಟರೆ ದಾರಿದ್ರ್ಯವಿರದು. ಕೊಟ್ಟಷ್ಟೂ ಸಿರಿ ಅಭಿವೃದ್ಧಿ ಆಗುತ್ತದೆ. ಆದ್ದರಿಂದ ಕೊಡೋಣ ಎಂದು ದಾತೃ ಕೊಡುತ್ತಾನೆ.

ಜಿಪುಣನಾದವ ಹಣವನ್ನು ಮುಚ್ಚಿಡುತ್ತಾನೆ. ಅವನು ಕೊಡುವುದೇ ಇಲ್ಲ. ಏಕೆ? ಕೊಟ್ಟರೆ ದಾರಿದ್ರ್ಯ ಬಂದುಬಿಡುತ್ತದೆ; ಕೊಡುವುದು ಬೇಡ ಎಂಬುದು ಅವನ ತರ್ಕ. ಇದನ್ನೇ ವಿರೋಧಾಲಂಕಾರ ಎನ್ನುತ್ತಾರೆ.

ದಾತೃ, ಜಿಪುಣ, ಇಬ್ಬರದೂ ಧ್ಯೇಯ ಒಂದೆ. ಆದರೆ, ಅವರ ಕರ್ಮ ಮಾತ್ರ ಬೇರೆ ಬೇರೆ.

ಹಾಗೆಯೇ, ರಾಮ ಸುಗ್ರೀವರಿಬ್ಬರ ಅಭಿಪ್ರಾಯ ಒಂದೇ. ರಾಮ ಶರಣಾಗತನಾದ ವಿಭೀಷಣನನ್ನು ಕಾಪಾಡಬೇಕು ಎಂದ. ಸುಗ್ರೀವನೂ ಅಷ್ಟೆ.

ಅರಣ್ಯಕಾಂಡದಲ್ಲಿ ರಾಮ ''ಸುಗ್ರೀವನಿಗೆ ಶರಣು ಹೊಕ್ಕಿದ್ದೇನೆ" "ಸುಗ್ರೀವಂ ಶರಣಂಗತಃ" ಎಂದು ಹೇಳಿದ್ದಾನೆ. ರಾಮ ಸುಗ್ರೀವನಿಗೆ ಶರಣಾದ ಮೇಲೆ ಸುಗ್ರೀವ ರಾಮನನ್ನು ರಕ್ಷಿಸಬೇಕಾಗಿದೆ. ಆದ್ದರಿಂದಲೇ ಸುಗ್ರೀವ "ವಿಭೀಷಣನನ್ನು ಸೇರಿಸಿಕೊಳ್ಳುವುದು ಬೇಡ – ಸೇರಿಸಿಕೊಂಡರೆ ಶರಣಾಗತನಾದ ರಾಮನಿಗೆ ಎಲ್ಲಿ ತೊಂದರೆ ಆಗುವುದೋ" ಎಂದು ಹೆದರಿದ. ಇಬ್ಬರ ಅಭಿಪ್ರಾಯವೂ ಒಂದೇ ಆಗಿದೆ. ರಾಮ ಶರಣಾಗತಿಯ ವೈಭವವನ್ನೂ, ತನ್ನ ಅಪಾರಶಕ್ತಿಯನ್ನೂ, ಸುಗ್ರೀವನಿಗೆ ವಿವರಿಸಿದ. ಸುಗ್ರೀವ, ಅಂಜಬೇಡ, ಯಾರೂ ನನ್ನನ್ನು ಏನೂ ಮಾಡುವಂತಿಲ್ಲ. ಕೈಬೆರಳಿನ ಕೊನೆಯಿಂದ ಎಲ್ಲ ಶತ್ರುಗಳನ್ನೂ ಹೊಸಕಿಹಾಕಿ ಬಿಡಬಲ್ಲೆ. ಹೋಗು ವಿಭೀಷಣನನ್ನು ಕರೆದುಕೊಂಡು ಬಾ. ಶರಣಾಗತನನ್ನು ರಕ್ಷಿಸುವುದು ನನ್ನ ವ್ರತ. ಅದರಿಂದ ನಾನು ವಿಚಲಿತನಾಗುವಂತಿಲ್ಲ. ಹೋಗು ಎಂದ. ರಾಮನ ಧರ್ಮಸಂಹಿತವಾದ ಮಾತುಗಳನ್ನು ಕೇಳಿದ ಸುಗ್ರೀವ ಸೌಹಾರ್ದಭಾವದಿಂದ ಕೇಳಿದ. ಧರ್ಮಜ್ಞ, ಲೋಕ ಶಿರೋಮಣಿ, ರಾಘವ, ನಿನ್ನ ಮಾತುಗಳು ಧರ್ಮಯುಕ್ತವಾಗಿವೆ. ನಿನ್ನಂಥ ಬಲವಂತ, ಪರಾಕ್ರಮಿ, ಬೇರಾರೂ ಇಲ್ಲ. ನೀನು ಹೇಳುವಂತೆಯೇ ಆಗಲಿ.

**ಕಿಮತ್ರ ಚಿತ್ರಂ ಧರ್ಮಜ್ಞ ! ಲೋಕನಾಥ ! ಸುಖಾವಹ ! ।**
**ಯತ್ತ್ವಮಾರ್ಯಂ ಪ್ರಭಾಷೇಥಾ ಸ್ಸತ್ತ್ವವಾನ್ಸತ್ಪಥೇ ಸ್ಥಿತಃ ॥**
**ಮಮ ಚಾಪ್ಯಂತರಾತ್ಮಾಯಂ ಶುದ್ಧಂ ವೇತ್ತಿ ವಿಭೀಷಣಂ ।**
**ಅನುಮಾನಾಚ್ಚ ಭಾವಾಚ್ಚ ಸರ್ವತಸ್ಸು ಪರೀಕ್ಷಿತಃ ॥**
**ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿಸ್ತುಲ್ಯೋ ಭವತು ರಾಘವ ।**
**ವಿಭೀಷಣೋ ಮಹಾಪ್ರಾಜ್ಞಸ್ಸಖಿತ್ವಂಚಾಭ್ಯುಪೈತುನಃ ॥**

ಎನ್ನುತ್ತಾನೆ.

ನನಗೂ ವಿಭೀಷಣ ಒಳ್ಳೆಯವನೇ ಎಂದು ಹೊಳೆಯುತ್ತಿದೆ. ನಾನು ವಿಭೀಷಣನನ್ನು ಸೇರಿಸಿಕೊಳ್ಳುವುದು ಬೇಡ ಎಂದದ್ದನ್ನು ಅವನಿಗೆ ತಿಳಿಸಬೇಡ. ವಿಭೀಷಣ ಬರಲಿ, ನಮ್ಮೊಂದಿಗೆ ಸುಗ್ರೀವ ಸೇರಲಿ ಎಂದ.

ರಾಮನ ಶಕ್ತಿ, ಸಾಮರ್ಥ್ಯ ಸುಗ್ರೀವನನ್ನು ಬೆರಗುಗೊಳಿಸಿತು. ಸುಗ್ರೀವ ವಿಭೀಷಣನನ್ನು ಕರೆತರಲು ಸಿದ್ಧನಾದ. ಆಗ ರಾಮ ಪುನಃ

**ಆನಯ್ಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ ।**
**ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣಃ ಸ್ವಯಂ ॥**

"ಸುಗ್ರೀವ, ಬೇಗ ಹೋಗಿ ವಿಭೀಷಣನನ್ನು ಕರೆದು ತಾ. ಈಗಿನವರೆಗೆ ನಾನು ಸುಮ್ಮನೆ ಇದ್ದೆ ಎಂದು ನೆನೆಯಬೇಡ. ವಿಭೀಷಣನಿಗೆ ಆಗಲೇ ನಾನು ಅಭಯವನ್ನು ಕೊಟ್ಟಾಯಿತು. ಹೋಗು. ಇನ್ನೊಂದು ವಿಷಯ. ಅವನು ವಿಭೀಷಣನಾದರೂ ಸರಿ, ಅವನ ಅಣ್ಣನಾದ ರಾವಣನಾದರೂ ಸರಿ: ರಾವಣ ಬಂದ ಎಂದು ಹಾಗೇ ಹಿಂದಿರುಗಬೇಡ. ಸೀತೆಯನ್ನಪಹರಿಸಿದ ಆ ರಾವಣನೇ ಬಂದಿದ್ದರೂ ಅವನನ್ನೂ ಕರೆದುಕೊಂಡು ಬಾ. ಇದುವರೆಗೆ ಹೇಳಿದ್ದು ವಿಭೀಷಣನಿಗೆ ಮಾತ್ರವಲ್ಲ, ಎಲ್ಲರಿಗೂ ಅದು ಅನ್ವಯಿಸುತ್ತದೆ ಹೋಗು" ಎಂದ.

ಈ ಪ್ರಕರಣದಲ್ಲೇ ರಾಮನ ಶರಣಾಗತವಾತ್ಸಲ್ಯ ಹೆಚ್ಚಾಗಿ ಪ್ರಕಾಶವಾಗುತ್ತದೆ. ವಾಲ್ಮೀಕಿ ಲಕ್ಷ್ಮಣನ ಬಾಯಿಂದ, ರಾಕ್ಷಸರ ಬಾಯಿಂದ ಅನೇಕ ಬಾರಿ ರಾಮನನ್ನು "ರಿಪೂಣಾಮಪಿವತ್ಸಲಃ" ಎಂದು ಹೊಗಳಿಸಿದ್ದಾರೆ. ಶತ್ರುಗಳ ವಿಷಯದಲ್ಲೂ ರಾಮನಿಗೆ ಅಪಾರವಾದ ಕಾರುಣ್ಯ. ರಾವಣನೇ ಬಂದರೂ ಅಭಯ ಕೊಟ್ಟಿದೇನೆ ಕರೆದುಕೊಂಡು ಬಾ ಎಂದ. ರಾಮನ ಔದಾರ್ಯದ ಆಳ ಅಪಾರವಾದುದು. ಕವಿಗಳು ರಾಮನ ಈ ಔದಾರ್ಯವನ್ನು ಮನಸಾರೆ ಅನುಭವಿಸಿದ್ದಾರೆ.

ಸುಗ್ರೀವ ಕೇಳಿದನಂತೆ. ವಿಭೀಷಣನಿಗೆ ಅಭಯಕೊಟ್ಟು ಲಂಕಾರಾಜ್ಯವನ್ನು ಕೊಟ್ಟೆ. ಒಂದು ವೇಳೆ ರಾವಣನೇ ಬಂದು ಶರಣಾಗತನಾದರೆ ಆಗ, ಅವನಿಗೆ ಏನು ಕೊಡುತ್ತಿ ? ಎಂದು.

ಭರತನಿಗೆ ಹದಿನಾಲ್ಕು ಲೋಕಗಳ ಆಧಿಪತ್ಯವನ್ನೇ ಕೊಡುತ್ತೇನೆ ಎಂದ.

ಈ ಪ್ರಸಂಗದಲ್ಲಿ ರಾಮನ ಕರುಣೆ, ಆಶ್ರಿತರಲ್ಲಿ ಅವನಿಗಿರುವ ವಾತ್ಸಲ್ಯ ಎಷ್ಟು ಆಳವಾಗಿದೆ? ಎಂಬುದು ಪ್ರಕಾಶಕ್ಕೆ ಬರುತ್ತದೆ.

ದೈವದ ಒಲುಮೆ ಒಂದಿದ್ದರೆ ಎಲ್ಲ ತಾನಾಗಿಯೇ ಸುಗಮವಾಗುತ್ತದೆ ಎಂಬುದಕ್ಕೆ ವಿಭೀಷಣನೇ ನಿದರ್ಶನ. ರಾಮ ವಿಭೀಷಣನನ್ನು ರಕ್ಷಿಸಲು ನಿಶ್ಚಯಿಸಿದ. ಎಲ್ಲ ವಾನರವೀರರೂ (ಹನುಮಂತ ಒಬ್ಬನನ್ನು ಹೊರತು) "ಬೇಡ" ಎಂದು ವಿರೋಧಿಸಿದರು. ಆದರೆ, ರಾಮನೋ ವಿಭೀಷಣನನ್ನು ಕರೆದುಕೊಂಡು ಬರಲು ವಿರೋಧಿಸಿದವರಲ್ಲಿ ಮುಖ್ಯನಾದ ಸುಗ್ರೀವನನ್ನೇ ಕಳುಹಿಸಿದ.

**ಅರಕ್ಷಿತಂ ತಿಷ್ಠತಿ ದೈವರಕ್ಷಿತಂ ।**
**ಸುರಕ್ಷಿತಂ ದೈವಹತಂ ವಿನಶ್ಯತಿ ॥**

ಎಲ್ಲ ಬಗೆಯಿಂದ ಅರಕ್ಷಿತವಾಗಿದ್ದಾಗ್ಯೂ ದೈವಾನುಗ್ರಹ ಇದ್ದರೆ ಆ ವಸ್ತು ಸುರಕ್ಷಿತವಾಗಿರುತ್ತದೆ. ಅದೇ ಸುರಕ್ಷಿತವಾಗಿರುವ ವಸ್ತುವೂ ದೈವದ ಒಲುಮೆಯಿಂದ ವಂಚಿತವಾಗಿದ್ದರೆ ನಾಶವನ್ನು ಹೊಂದುತ್ತದೆ. ವಿಭೀಷಣನನ್ನು ಕರೆದು ತರುವಂತೆ ಲಕ್ಷ್ಮಣನಿಗೋ, ಹನುಮಂತನಿಗೋ ಆಜ್ಞಾಪಿಸದೆ ರಾಮ ಸುಗ್ರೀವನನ್ನೇ ಕಳುಹಿಸಿದ. ಇದರಲ್ಲಿ ಔಚಿತ್ಯ ಅಡಗಿದೆ. ವಿಭೀಷಣನನ್ನು ಇಷ್ಟಪಡದೆ ಇರಬಹುದು. ಭಾಗವತರಲ್ಲಿ ಭೇದಭಾವನೆ ಕೂಡದು. ಆದ್ದರಿಂದಲೇ ರಾಮ ಸುಗ್ರೀವನಿಗೆ ಶರಣಾಗತಿಯ ಮಹತ್ವವನ್ನೂ, ತನ್ನ ಅಪಾರವಾದ ಶಕ್ತಿಯನ್ನೂ, ತನ್ನ ವ್ರತವನ್ನೂ ವಿವರಿಸಿ ಹೇಳಿದ. ಸುಗ್ರೀವನ ಮನಸ್ಸಿನಲ್ಲಿ ವಿಭೀಷಣನ ಬಗ್ಗೆ ಲೇಶವೂ ಕಲುಷಿತ ಭಾವನೆ

ತಳೆಯುದಂತೆ ಮಾಡಿ ಅವನನ್ನೇ ವಿಭೀಷಣನನ್ನು ಕರೆದು ತರುವಂತೆ ಆಜ್ಞಾಪಿಸಿದ.

ರಾಮನ ಆಜ್ಞೆಯಂತೆ ಸುಗ್ರೀವ ಹೋಗಿ ವಿಭೀಷಣನನ್ನು ಕರೆದುತಂದ. ಮೊದಲೇ ರಾಮ ವಿಭೀಷಣನಿಗೆ ಅಭಯ ಕೊಟ್ಟೆ ಎಂದು ಹೇಳಿದ.

"ದತ್ತಮಸ್ಯಾಭಯಂ ಮಯಾ" ಎಂದಿದಾನೆ ರಾಮ. "ಸುಗ್ರೀವ, ಈಗ ವಿಭೀಷಣ ಬಂದು ರಕ್ಷಿಸು ಎಂದ ಮೇಲಲ್ಲ ನಾನು ಅವನಿಗೆ ಅಭಯ ಕೊಟ್ಟಿದ್ದು. ಮೊದಲೇ ಕೊಟ್ಟೆ" ಎಂದ. ಅರಣ್ಯ ಕಾಂಡದಲ್ಲಿ ಶೂರ್ಪನಖಿ ಬಂದಾಗ ಅವಳು "ವಿಭೀಷಣಸ್ತು ಧರ್ಮಾತ್ಮಾ ನತು ರಾಕ್ಷಸ ಚೇಷ್ಟಿತಃ ಎಂದಿದ್ದಳು. "ನನ್ನ ಹಿರಿಯ ಅಣ್ಣ ರಾವಣ ಲೋಕವನ್ನೇ ಅಳಿಸಿದವನು. ಎರಡನೆಯವ ಕುಂಭ ಕರ್ಣ. ರಾಕ್ಷಸರಲ್ಲೇ ಅತ್ಯಂತ ಬಲಿಷ್ಠ, ಕ್ರೂರಕರ್ಮಿ. ನನ್ನ ಮೂರನೆಯ ಅಣ್ಣನೇ ವಿಭೀಷಣ. ಅವನು ಧರ್ಮಾತ್ಮ. ಅವನು ರಾಕ್ಷಸ ಕುಲದಲ್ಲಿ ಹುಟ್ಟಿದರೂ ರಾಕ್ಷಸ ಕರ್ಮದಿಂದ ದೂರನಾಗಿ ದಾನೆ. ಅವನು ಸಾಧು" ಎಂದಿದ್ದಳು. ಆಗಲೇ ರಾಮ ವಿಭೀಷಣನಿಗೆ ಅಭಯ ಕೊಟ್ಟಾಯಿತು. ಈಗ ಸುಮ್ಮನೆ ರಾಜನೀತಿಯನ್ನು ಅನುಲಕ್ಷಿಸಿ ಎಲ್ಲರ ಅಭಿಪ್ರಾಯವನ್ನೂ ಕೇಳಿದ ಎಂದಿದಾರೆ ಜ್ಞಾನಿಗಳು.

ರಾಮನ ಸಮೀಪಕ್ಕೆ ವಿಭೀಷಣ ಬರುವಾಗ "ವಿಭೀಷಣೋ ಮಹಾಪ್ರಾಜ್ಞೋ ಭೂಮಿಂ ಸಮವಲೋಕಯತ್" ಎಂದಿದಾರೆ ವಾಲ್ಮೀಕಿ.

ಮಹಾಬುದ್ಧಿವಂತನಾದ ವಿಭೀಷಣ ರಾಮನ ಸಮೀಪಕ್ಕೆ ಬರುವಾಗ ಭೂಮಿಯನ್ನೇ ನೋಡುತ್ತ ಬಂದನಂತೆ. ಇದರಲ್ಲಿ ಒಂದು ಸ್ವಾರಸ್ಯ. ರಾಮ ಕೋಟ್ಯಂತರ ವಾನರ ವೀರರಿಂದ ಆವೃತನಾಗಿದ್ದ. ರಾಮನ ಪಾದಗಳಲ್ಲಿ ಬೀಳಲು ಸರಿಯಾದ ಜಾಗ ಎಲ್ಲಿ? ರಾಮನ ದಿವ್ಯವಾದ ಎಲ್ಲಿ? ಎಂದು ಅರಸುತ್ತಾ ರಾಮನ ದಿವ್ಯ ಪಾದಗಳಿದ್ದ ಜಾಗದ ಕಡೆಗೇ ನೋಡುತ್ತಾ ಬಂದ ಮಹಾಪ್ರಾಜ್ಞನಾದ ವಿಭೀಷಣ.

ನಾಲ್ಕು ಜನ ರಾಕ್ಷಸರಿಂದ ಕೂಡಿ ವಿಭೀಷಣ ರಾಮನ ದಿವ್ಯವಾದ ಅಡಿದಾವರೆಗಳಲ್ಲಿ ಸಾಷ್ಟಾಂಗಪ್ರಣಾಮ ಮಾಡಿ, ರಾಘವ,

**ಅನುಜೋ ರಾವಣಸ್ಯಾಹಂ ತೇನ ಚಾಸ್ಮ್ಯವಮಾನಿತಃ।**
**ಭವಂತಂ ಸರ್ವಭೂತಾನಾಂ ಶರಣ್ಯಂ ಶರಣಂ ಗತಃ॥**
**ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿಚ ಧನಾನಿಚ।**
**ಭವದ್ಗತಂಮೇ ರಾಜ್ಯಂ ಚ ಸುಖಾನಿಚ॥**

ಎನ್ನುತ್ತಾನೆ.

ರಾವಣನ ತಮ್ಮನಾದ ವಿಭೀಷಣ ನಾನು ರಾವಣನಿಂದ ಅವಮಾನಿತನಾಗಿ ಸರ್ವಭೂತಗಳಿಗೂ ಆಶ್ರಯನಾದ ನಿನ್ನನ್ನು ಶರಣುಹೊಕ್ಕಿದೇನೆ ಎನ್ನುತ್ತಾನೆ.

''ರಾಮಾ! ನೀನೇ ನನ್ನ ಸರ್ವಸ್ವ, ಲಂಕೆಯನ್ನು, ಮಿತ್ರರನ್ನು, ಮಡದಿ ಮಕ್ಕಳನ್ನು, ಧನವನ್ನು, ಎಲ್ಲವನ್ನೂ ತ್ಯಜಿಸಿ ನೀನೇ ಗತಿ ಎಂದು ಬಂದೆ, ನನ್ನ ಸರ್ವಸ್ವ" ಎಂದು ರಾಮನ ದಿವ್ಯಪಾದಗಳಲ್ಲಿ ಬಿದ್ದು ಗದ್ಗದಿತನಾಗಿ ಶರಣಾಗತನಾದ ವಿಭೀಷಣ. ಇಲ್ಲಿ ವಿಭೀಷಣ ತಾನು ಎಲ್ಲ ವನ್ನೂ ತ್ಯಜಿಸಿ ರಾಘವನ ಸೇವೆಗಾಗಿಯೇ ಬಂದೆ ಎನ್ನುತ್ತಾನೆ.

ಆದರೆ, ಹನುಮಂತ, ರಾಮ, ಇಬ್ಬರೂ ರಾಜ್ಯಾಕಾಂಕ್ಷೀ ವಿಭೀಷಣಃ ಎಂದು ವಿಭೀಷಣ ರಾಜ್ಯವನ್ನು ಇಚ್ಛಿಸಿಯೇ ಬಂದ ಎನ್ನುತ್ತಾರೆ.

ಇದಕ್ಕೆ ಆಚಾರ್ಯರು ಸಮಾಧಾನ ಹೇಳುತ್ತಾರೆ. ರಾಮ, ಹನುಮಂತರು ಅಭಿಪ್ರಾಯ ವನ್ನು ತಿಳಿದುಕೊಳ್ಳುವಾಗ ರಾಜಧರ್ಮವನನುಸರಿಸಿ ಹಾಗೆ ಹೇಳಿದರು.

ವಿಭೀಷಣನ ನೆಲೆ ಕೈಂಕರ್ಯವೇ ಪರಮಪುರುಷಾರ್ಥ ಎಂಬುದೇ ಆಗಿದೆ. ಅದಕ್ಕೇ ಅವನು ಎಲ್ಲವನ್ನೂ ತ್ಯಜಿಸಿ ನಿನ್ನಲ್ಲೇ ಬಂದೆ ಎಂದ.

ತನ್ನ ಪಾದಗಳಲ್ಲಿ ಬಿದ್ದ ವಿಭೀಷಣನನ್ನು ಎಬ್ಬಿಸಿ ದೇವರಾಜನಾದ ಇಂದ್ರ, ಪಕ್ಷಿರಾಜನಾದ ಗರುಡನನ್ನು ಆಲಿಂಗಿಸುವಂತೆ ರಾಮ ಆಲಿಂಗಿಸಿದ. ವಿಭೀಷಣನನ್ನು ರಾಮ ಹೊಸದಾಗಿ ಹಾಕಿದ ಕರುವನ್ನು ಹಸು ಸಂತೋಷದಿಂದ ಕಾಣುವಂತೆ ಕಂಡ. ಎಲ್ಲ ಕರುಗಳಲ್ಲೂ ಹಸುವಿಗೆ ಪ್ರೀತಿ, ಆದರೆ, ಆಗತಾನೇ ಜನಿಸಿದ ಕರುವಿನಲ್ಲಿ ಮತ್ತೂ ಅತಿಶಯವಾದ ಪ್ರೀತಿ. ಹಾಗೆ ರಾಮ ವಿಭೀಷಣ ನನ್ನು ಆಲಿಂಗಿಸಿ ಪ್ರೀತಿಯ ಮಳೆಗರೆದ.

ವಿಭೀಷಣ ದಾಸನಾಗಿ ಬಂದ. ಆದರೆ ಉದಾರಿಯಾದ ರಾಮ ಅವನನ್ನು ತನ್ನ ಸೋದರನಾಗಿ ಸ್ವೀಕರಿಸಿದ. ಕಂಬಮಹಾಕವಿ ಹೇಳುತ್ತಾರೆ. ರಾಮ ವಿಭೀಷಣನನ್ನು ಕುರಿತು "ವಿಭೀಷಣ ನಾವು ನಮ್ಮ ತಂದೆಗೆ ನಾಲ್ಕು ಮಕ್ಕಳಾಗಿ ಹುಟ್ಟಿದೆವು. ಶೃಂಗಿಬೇರಪುರಕ್ಕೆ ಬಂದಮೇಲೆ ಗುಹನೊಡನೆ ಕೂಡಿ ಐವರು ಸೋದರರಾದೆವು, ಕಿಷ್ಕಿಂಧೆಯಲ್ಲಿ ಸುಗ್ರೀವನನ್ನು ಸೇರಿ ಆರುಜನರಾದೆವು. ಈಗ, ನೀನೂ ಸೇರಿ ಏಳು ಜನ ಸೋದರರಾದೆವು" ಎಂದ ಪ್ರೇಮದಿಂದ.

ವಿಭೀಷಣನಲ್ಲಿ ತನಗೆ ಪೂರ್ಣವಾದ ನಂಬಿಕೆ ಇದೆ ಎಂಬುದನ್ನು ತೋರಿಸಲು ರಾಮ ವಿಭೀಷಣನನ್ನು "ಆಖ್ಯಾಹಿ ಮಮ ತತ್ತ್ವೇನ ರಾಕ್ಷಸಾನಾಂ ಬಲಾಬಲಂ" ಎಂದ. ಇಲ್ಲಿ "ರಾಕ್ಷ ಸಾನಾಂ ಬಲಾಬಲಂ" ಎಂದು ಚಮತ್ಕಾರವಾಗಿ, ಅರ್ಥಯುಕ್ತವಾದ ಮಾತನ್ನು ಆಡುತ್ತಾನೆ. ರಾಮ. ವಿಭೀಷಣನನ್ನು ಕುರಿತು "ರಾಕ್ಷಸರ ಬಲಾಬಲವನ್ನು ತಿಳಿಸು" ಎನ್ನುವಾಗ ರಾಮ ವಿಭೀಷಣನನ್ನು "ರಾಕ್ಷಸ" ಎಂದು ಪರಿಗಣಿಸಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ವಿಭೀಷಣನನ್ನೂ ಇಕ್ಷ್ವಾಕುವಂಶಕ್ಕೆ ಸೇರಿದವನನ್ನಾಗೇ ಭಾವಿಸಿದ ಔದಾರ್ಯನಿಧಿಯಾದ ರಾಘವ, ಅದಕ್ಕೇ ಕಂಬರು ರಾಮನನ್ನು ಕರುಣೈಕ್ಕಡಲ್-ಕರುಣಾಸಾಗರ ಎಂದಿರುವುದು.

ರಾಮನ ಮಾತನ್ನು ಕೇಳಿದ ವಿಭೀಷಣ ರಾವಣನ ಬಲಾಬಲವನ್ನು ವಿವರಿಸಿದ. ರಾಘವ, ನನ್ನ ಹಿರಿಯ ಸೋದರ ರಾವಣ ಮಹಾಪರಾಕ್ರಮಿ, ಅವನ ತಮ್ಮ, ನನ್ನ ಎರಡನೆಯ ಅಣ್ಣ ಕುಂಭಕರ್ಣ ಮಹಾತೇಜಸ್ವಿ. ಇಂದ್ರನಂತೆ ಪರಾಕ್ರಮಿ. ರಾವಣನ ಪುತ್ರ ಇಂದ್ರಜಿತ್. ಅಗ್ನಿದೇವ ನಿಂದ ಸಿದ್ಧಿ ಪಡೆದವ. ಘೋರಕರ್ಮಿ ಅವನು. ಪ್ರಹಸ್ತ ರಾವಣನ ಸೇನಾಪತಿ. ಅವನೇ ಪ್ರಧಾನ ಸೇನಾಪತಿ. ಅವನು ಕುಬೇರನ ಸೇನಾಪತಿಯಾದ ಮಣಿಭದ್ರನನ್ನೂ ಪರಾಜಿತನಾಗಿಸಿದವನು. ಮಹೋದರ, ಮಹಾಪಾರ್ಶ್ವ, ಅಕಂಪನ, ಈ ಮೂವರೂ ರಾವಣನ ಉಪಸೇನಾಪತಿಗಳು. ಈ ಸೇನಾಪತಿಗಳ ಕೆಳಗೆ ಹತ್ತುಸಾವಿರ ಕೋಟಿ ಕ್ರೂರರಾದ ಮಹಾಪರಾಕ್ರಮಿಗಳಾದ ರಾಕ್ಷಸರ ಸೈನ್ಯವಿದೆ. ರಾವಣನ ಬಲ ಬಹಳವಾಗಿದೆ ಎಂದ. ವಿಭೀಷಣನಿಂದ ರಾವಣನ ಬಲವನ್ನು ಕೇಳಿದ ರಾಮ, ವಿಭೀಷಣ, ರಾವಣ ಎಷ್ಟೇ ಬಲಶಾಲಿಯಾಗಿರಲಿ, ಅವನಿಗೆ ಎಷ್ಟೇ ಸೈನ್ಯ ಸಹಾಯಕ್ಕಿ ರಲಿ, ಎಲ್ಲರನ್ನೂ ನಾನು ನಿಶ್ಚಯವಾಗಿ ನಾಶಮಾಡುತ್ತೇನೆ. ಅಲ್ಲದೆ, ರಾವಣನನ್ನು ಕೊಂದು

ಲಂಕೆ ರಾಜ್ಯದಲ್ಲಿ ನಿನಗೇ ಅಭಿಷೇಕ ಮಾಡುತ್ತೇನೆ ಎಂದ. ಒಡನೆಯೇ ಲಕ್ಷ್ಮಣನನ್ನು ಲಕ್ಷ್ಮಣಾ ಹೋಗು, ಈಗಲೇ ಶುದ್ಧವಾದ ಸಮುದ್ರತೀರ್ಥವನ್ನು ತೆಗೆದುಕೊಂಡು ಬಾ. ಇಲ್ಲೇ, ಈಗಲೇ ವಿಭೀಷಣನಿಗೆ ಅಭಿಷೇಕ ಮಾಡಿಬಿಡು ಎಂದ.

**ಇತಿಬ್ರುವಾಣಂ ರಾಮಸ್ತು ಪರಿಷ್ವಜ್ಯ ವಿಭೀಷಣಂ**
**ಅಬ್ರವೀಲ್ಲಕ್ಷ್ಮಣಂ ಪ್ರೀತ ಸ್ಸಮುದ್ರಾ ಜ್ಜಲಮಾನಯ ||**
**ತೇನಚೇಮಂ ಮಹಾಪ್ರಾಜ್ಞ ಮಭಿಷಿಂಚ ವಿಭೀಷಣಂ |**
**ರಾಜಾನಂ ರಕ್ಷಸಾಂ ಕ್ಷಿಪ್ರಂ ಪ್ರಸನ್ನೇಮಯಿಮಾನದ ||**

"ನಾನು ಪ್ರಸನ್ನನಾಗಿರುವಾಗಲೇ ಪ್ರಾಜ್ಞನಾದ ಈ ವಿಭೀಷಣನನ್ನು ರಾಜನನ್ನಾಗಿ ಪಟ್ಟಾಭಿಷೇಕವನ್ನು ಮಾಡು" ಎನ್ನುತ್ತೇನೆ.

ರಾಮನ ಅಪ್ಪಣೆಯಂತೆ ಲಕ್ಷ್ಮಣ ಹೋಗಿ ಶುದ್ಧವಾದ ಸಮುದ್ರಜಲವನ್ನು ತಂದು ಸಮುದ್ರದ ದಕ್ಷಿಣತೀರದಲ್ಲೇ ವಿಭೀಷಣನಿಗೆ ಲಂಕಾರಾಜ್ಯಾಭಿಷೇಕವನ್ನು ಮಾಡಿದ. ರಾಮನ ಈ ಕಾರ್ಯವನ್ನು ಕಂಡ ವಾನರರೆಲ್ಲರೂ ಹರ್ಷಧ್ವನಿ ಮಾಡಿ ರಾಮನನ್ನು ಕೊಂಡಾಡಿದರು.

ಲಕ್ಷ್ಮಣನನ್ನು ಕರೆದು ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕ ಮಾಡುವಂತೆ ರಾಮ ಹೇಳಿದ. ಇದರಲ್ಲಿ ಒಂದು ವೈಶಿಷ್ಟ್ಯ. ಹಿಂದೆ ಸುಗ್ರೀವನಿಗೂ ಲಕ್ಷ್ಮಣನ ಕೈಯಿಂದ ಗಜಪುಷ್ಪ ಮಾಲೆಯನ್ನು ಹಾಕಿಸಿದ ಮೇಲೆಯೇ ಅವನಿಗೆ ರಾಜ್ಯ ದೊರೆಯಿತು. ಇಲ್ಲಿ ವಿಭೀಷಣನಿಗೂ ಲಕ್ಷ್ಮಣನ ಕೈಯಿಂದಲೇ ಅಭಿಷೇಕ ಮಾಡಿಸಿದ. ಇದರ ಔಚಿತ್ಯವನ್ನೇ ವಾಲ್ಮೀಕಿ ''ಲಕ್ಷ್ಮಣೋ ಲಕ್ಷ್ಮಿಸಂಪನ್ನಃ" ಎಂಬ ಪದದಲ್ಲಿ ಅಡಗಿಸಿದ್ದಾರೆ.

ಲಕ್ಷ್ಮಣ, ಮಹಾಭಾಗವತೋತ್ತಮ. ಭಾಗವತರ ಅನುಗ್ರಹ ಇಹಪರ ಎರಡಕ್ಕೂ ಸಾಧಕ. ಆದರಿಂದಲೇ ಲಕ್ಷ್ಮಣನ ಕೈಯಿಂದ ಅಭಿಷೇಕ ಮಾಡಿಸಿದ. ವಿಭೀಷಣನಿಗೆ ಸಮುದ್ರದ ಈಚೆಯದಡದಲ್ಲೇ ಲಂಕಾರಾಜ್ಯದ ಅಭಿಷೇಕ ಮಾಡಿದ ರಾಮನನ್ನು ಕುರಿತು ಕೂರುತ್ತಾಳ್ವಾರ್ ತಮ್ಮ "ಅತಿಮಾನುಷಸ್ತವ" ದಲ್ಲಿ ಕೇಳುತ್ತಾರೆ ;

ರಾಮಾ ! ನೀನು ನಿಜವಾಗಿ ಮನುಷ್ಯನೇ ? ಹೇಳು ! ಮನುಷ್ಯನಾದರೆ ಹೀಗೆಲ್ಲ ಮಾಡುತ್ತಿದ್ದೆಯಾ ! ಇನ್ನೂ ರಾವಣನನ್ನು ನೋಡಿಯೇ ಇಲ್ಲ ! ರಾವಣನ ಬಲವನ್ನು ಕಂಡಿಲ್ಲ ! ಸಮುದ್ರವನ್ನೇ ದಾಟಿಲ್ಲ ! ಹೀಗಿರುವಾಗ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕ ಮಾಡಿಬಿಟ್ಟೆಯಲ್ಲ, ಧೈರ್ಯವಾದಿ ! ಇದು ಮನುಷ್ಯರಿಗೆ ಸಾಧ್ಯವೇ ? ಎಷ್ಟೇ ಬಲಶಾಲಿಯಾದರೂ ಮನುಷ್ಯ ಯುದ್ಧದಲ್ಲಿ ಜಯಾಪಜಯ ಹೇಗೋ ! ಎಂದು ಶಂಕಿಸುತ್ತಾನೆ. ನೀನು ಹಾಗಿಲ್ಲದೆ ಒಂದೇ ದಾರ್ಢ್ಯದಿಂದ ರಾವಣನನ್ನು ಕೊಂದು ನಿನಗೆ ರಾಜ್ಯಕೊಡುತ್ತೇನೆ ಎಂದು ಹೇಳಿದ್ದು ಮಾತ್ರವಲ್ಲದೆ ವಿಭೀಷಣನನ್ನು ರಾಜನನ್ನಾಗಿ ಆ ಕ್ಷಣದಲ್ಲೇ ಮಾಡಿದೆಯಲ್ಲ ! ಇದು ನಿನ್ನ ದೇವತ್ವವನ್ನಲ್ಲವೆ ತೋರಿಸುವುದು, ಎಂದು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ. ಹೀಗಿರುವಾಗ, ಆತ್ಮಾನಂ ಮಾನುಷಂ ಮನ್ಯೇ ಎಂದು ಹೇಳುವ ಆಟ ಏಕೆ ? ಎಂದು ಕೇಳುತ್ತಾರೆ !

ಹಾಗೆ ಹೇಳುವಾಗ ಭಗವಂತನ ಕಾರುಣ್ಯ ಪ್ರಕಾಶಕ್ಕೆ ಬರುತ್ತದೆ. ಮನುಷ್ಯನಾಗೇ ಇದ್ದು ಮನುಷ್ಯನಂತೆಯೇ ನಡೆದು ತೋರಿಸಬೇಕು ಎಂದಿದ್ದರೂ ಶರಣಾಗತ ವಾತ್ಸಲ್ಯದಿಂದ ಅನಿವಾರ್ಯ

ವಾಗಿ ದೇವತ್ವವನ್ನು ತಾನೂ ಅರಿಯದಂತೆಯೇ ಹೊರಗೆಡಹಿಬಿಟ್ಟ ರಾಮ, ವಿಭೀಷಣನನ್ನು ಲಂಕಾರಾಜ್ಯದಲ್ಲಿ ಅಭಿಷೇಕ ಮಾಡುವುದರಿಂದ. ಆ ನಂತರ ರಾಮ ಸಮುದ್ರವನ್ನು ದಾಟುವುದು ಹೇಗೆ ಎಂದು ವಿಭೀಷಣನನ್ನು ಸಲಹೆ ಕೇಳಿದ.

**ಸಮುದ್ರಂ ರಾಘವೋ ರಾಜಾ ಶರಣಂ ಗಂತುಮರ್ಹತಿ ।**

**ಖಾನಿತಸ್ಸಗರೇಣಾಯ ಮಪ್ರಮೇಯೋ ಮಹೋದಧಿಃ ॥**

**ಕರ್ತುಮರ್ಹತಿ ರಾಮಸ್ಯ ಜ್ಞಾತ್ವಾಕಾರ್ಯಂ ಮಹಾಮತಿಃ ।**

"ಸಮುದ್ರಕ್ಕೆ ಶರಣು ಹೋಗುವುದರಿಂದ ಸಮುದ್ರರಾಜನನ್ನು ಒಲಿಸಿಕೊಳ್ಳಬೇಕು" ಎಂದು ಹೇಳಿದ. ವಿಭೀಷಣ ರಾಮನಡಿಯಲ್ಲಿ ಶರಣಾಗತಿ ಮಾಡಿದ. ತಾನು ಮಾಡಿದ ಉಪಾಯವನ್ನೇ ರಾಮನಿಗೂ ಹೇಳಿದ ! ಎಲ್ಲಕ್ಕೂ ಶರಣಾಗತಿಯೇ ಉಪಾಯ ಎಂಬುದು ಅವನ ಸಿದ್ಧಾಂತ । ಈ ಸಂದರ್ಭದಲ್ಲಿ ಒಂದು ಕಥೆ ನೆನಪಿಗೆ ಬರುತ್ತದೆ. ಒಬ್ಬ ರಾಜ. ಅವನ ರಾಜ್ಯದಲ್ಲಿ ಒಬ್ಬ ವೈದ್ಯ. ಅವನು ಜೋಯಿಸನೂ ಆಗಿದ್ದ. ಎಲ್ಲ ಕಾಯಿಲೆಗಳಿಗೂ ಆ ವೈದ್ಯ ಅಳಲೇಕಾಯಿಯನ್ನೇ ಪ್ರಯೋಗಿಸುತ್ತಿದ್ದ. ಅಳಲೇಕಾಯಿಂದ ಗುಣವಾಗದ ಕಾಯಿಲೆ ಇಲ್ಲ. ಕಾಯಿಲೆಗೆ ಮಾತ್ರವೇ ಅಲ್ಲ ಯಾವುದೇ ಕಾರ್ಯಕ್ಕೂ ಅಳಲೇಕಾಯಿ ಪ್ರಯೋಗ ಮಾಡುತ್ತಿದ್ದ.

ಒಮ್ಮೆ ಶತ್ರುಸೈನ್ಯ ಬಂದು ರಾಜ್ಯಕ್ಕೆ ಮುತ್ತಿಗೆ ಹಾಕಿತು. ಶತ್ರುಗಳು ಬಂದದ್ದನ್ನು ಕಂಡು ರಾಜ ಆ ಅಳಲೇಕಾಯಿ ಜೋಯಿಸ ವೈದ್ಯನನ್ನು ಕರೆಯಿಸಿದ. ರಾಜನ ಸೈನ್ಯಬಲ ಕಮ್ಮಿ. ಶತ್ರು ಪಕ್ಷದ ಬಲ ಹೆಚ್ಚು. "ಈಗ ಏನು ಮಾಡೋಣ ?" ಎಂದು ಕೇಳಿದ.

"ನಾ ಹೇಳಿದಂತೆ ಕೇಳಿ" ಎಂದ ! ಜೋಯಿಸ ವೈದ್ಯ, ಶತ್ರುಸೈನ್ಯದಲ್ಲಿ ಸುದ್ದಿ ಹರಡಿತು. "ತಮ್ಮ ಇದಿರುಪಕ್ಷದ ಮಂತ್ರಿ ಮಹಾಬುದ್ಧಿವಂತ" ಎಂದು. ಆಗ ಶತ್ರು ಸೇನಾಧಿಪತಿ ತೀರ್ಮಾನಿಸಿದ. "ತಮ್ಮ ಪಕ್ಷದವರು ಇದಿರು ಪಕ್ಷದವರು ಕೈಗೊಳ್ಳುವ ಯಾವುದೇ ಕೆಲಸವನ್ನೂ ಎರಡರಷ್ಟು ಮಾಡಬೇಕು" ಎಂದು. ಹಾಗೆಯೇ ಇದಿರು ಪಕ್ಷದವರ ಸೈನ್ಯ ಬಲಕ್ಕಿಂತ ಎರಡರಷ್ಟು ಸೈನ್ಯಬಲವನ್ನು ಕೂಡಿಸಿದ. ಇದು ಜೋಯಿಸ ವೈದ್ಯನಿಗೆ ತಿಳಿಯಿತು.

ಅವನು ತನ್ನ ಪಕ್ಷದವರಿಗೆಲ್ಲ ಏಳೇಳು ಅಳಲೇಕಾಯಿ ಕೊಟ್ಟು ಇದನ್ನು ತಿನ್ನಿ ಎಂದ.

ಇದನ್ನು ತಿಳಿದ ಶತ್ರುಪಕ್ಷದ ಸೈನ್ಯಾಧಿಪತಿ ಯೋಚಿಸಿದ. "ಅಳಲೇಕಾಯಿಯಲ್ಲಿ ಏನೋ ಮಹತ್ವವಿರಬೇಕು. ಅದಕ್ಕೇ ಅವರ ಕಡೆಯುವರಿಗೆಲ್ಲ ಏಳೇಳು ಅಳಲೇಕಾಯಿ ಕೊಟ್ಟಿದಾರೆ. ಅವರಿಂದ ಬಲ ವೃದ್ಧಿಯಾಗಬಹುದು. ಆದ್ದರಿಂದ ಅವರು ಏಳು ಕೊಟ್ಟರೆ ನಾವು ಹದಿನಾಲ್ಕು ಕೊಡೋಣ ಎಂದು ತನ್ನ ಪಕ್ಷದವರಿಗೆಲ್ಲ ಹದಿನಾಲ್ಕು ಹದಿನಾಲ್ಕು ಅಳಲೇಕಾಯಿಯನ್ನು ಕೊಟ್ಟು ಇದನ್ನು ತಿನ್ನಲೇಬೇಕು ಎಂದು ನಿರ್ಬಂಧಿಸಿದ. ಎಲ್ಲರೂ ತಿಂದರು. ಹೊಟ್ಟೆನೋವು–ಭೇಧಿ ಪ್ರಾರಂಭವಾಯಿತು. ನಿತ್ರಾಣವಾಯಿತು ಶತ್ರುಸೈನ್ಯವಲ್ಲ ಊರಿಗೆ ಹಿಂದಿರುಗಿತು ಈ ಜೋಯಿಸ ವೈದ್ಯ ಮಂತ್ರಿಯಾದ.

ಈ ಕಥೆಯ ತತ್ವ ಎಂದರೆ

**ಎರ್‌ದು ಕೆಟ್ಟಾಳಕ್ ಏಳೀ ಕಡುಕ್ಕಾಯ್ ।**

**ಈನಾ ಪೆಣ್ಣುಕ್ಕುಂ ಏಳೇ ಕಡುಕ್ಕಾಯ್ ॥**

**ಪುರುವಂದಾರ್‌ಕ್ ಏಳೇ ಕಡುಕ್ಕಾಯ್ ।**

**ಪೊನ್ನಾಪುಲವರ್‌ಕ್ಕಂ ಏಳೇ ಕಡುಕ್ಕಾಯ್ ॥**

ಎಂದು "ತಲೆಗೆಲ್ಲಾ ಒಂದೇ ಮಂತ್ರ" ಎಂಬುದು. ವಿಭೀಷಣ ತನಗೆ ಶರಣಾಗತಿ ಮಂತ್ರ ಸಿದ್ಧಿ ಸಿದ್ದನ್ನು ಕಂಡ ರಾಮನಿಗೂ ಅದನ್ನೇ ಬೋಧಿಸಿದ !

ವಿಭೀಷಣನ ಮಾತಿನಂತೆ ರಾಮ ದರ್ಭೆಯನ್ನು ಹಾಸಿ ಸಮುದ್ರತೀರದಲ್ಲಿ ತನ್ನ ಬಲಗೈಯ ಮೇಲೆ ತಲೆಯನ್ನಿಟ್ಟುಕೊಂಡು,

**ಅಂಜಲಿಂ ಪ್ರಾಙ್ಮುಖಃ ಕೃತ್ವಾ ಪ್ರತಿಶಿಶ್ಯೇ ಮಹೋದಧೇಃ ।**

**ಬಾಹುಂ ಭುಜಂಗಭೋಗಾಭಮುಪಧಾಯಾರಿಸೂದನಃ ॥**

ಶರಣಾಗತಿ ಮಾಡುತ್ತಾ ಮೂರುದಿನ ಹಾಗೇ ಮಲಗಿದ.

ರಾಮ ದರ್ಭಶಯನನಾಗಿರುವುದನ್ನು ವಾಲ್ಮೀಕಿ ವಿವರಿಸುತ್ತಾ ಸುಕುಮಾರನಾದ ರಾಮ ಒರಟಾದ ದರ್ಭೆಯ ಮೇಲೆ ಮಲಗಿರುವುದನ್ನು ಕಂಡು ಸಂಕಟಪಡುತ್ತಾರೆ. ಅಯೋಧ್ಯೆಯಲ್ಲಿ ಶ್ರೀರಾಮನ ಮಾತೆಯರು ರಾಮನ ಸುಕೋಮಲವಾದ ತೋಳುಗಳಿಗೆ ಚಂದನವನ್ನು ಪೂಸಿ ಮದುವಾದ ಹಂಸತೂಲಿಕಾತಲ್ಪದ ಮೇಲೆ ಮಲಗಿಸುತ್ತಿದ್ದರು. ಅಂಥ ಕೋಮಲಾಂಗನಾದ ರಾಮ ಸಮುದ್ರತೀರದಲ್ಲಿ ಮರಳಿನ ಮೇಲೆ ಚುಚ್ಚುವ ದರ್ಭಶಯನದಲ್ಲಿ ಶಯನಿಸಿದ. ಸಮುದ್ರ ರಾಜನನ್ನು ಪ್ರಾರ್ಥಿಸಿದ. ಅವನ ಅನುಗ್ರಹವನ್ನು ಪಡೆಯುವ ಸಲುವಾಗಿ.

ನಿಯತವ್ರತನಾಗಿ ಮಲಗಿದ ರಾಮನ ಆ ದಿವ್ಯದೇಹ ಎರಡನೆಯ ಸಮುದ್ರದಂತೆ ಇತ್ತು. ಕಂಬ ಮಹಾಕವಿ ರಾಮ ಸಮುದ್ರರಾಜನನ್ನು ಶರಣು ಹೊಕ್ಕು ಮಲಗಿರುವುದನ್ನು ಕಂಡಾಗ ನೀಲ ಸಮುದ್ರಗಳೆರಡು ಒಟ್ಟಾಗಿ ಪಕ್ಕಪಕ್ಕದಲ್ಲಿ ಸೇರಿದಂತೆ ಕಾಣುವುದು ಎಂದರು. ವಿಶಾಲವಾದ ನೀಲಸಾಗರ ಎದುರಿಗೆ. ಅದಕ್ಕೆ ಅಭಿಮುಖವಾಗಿ ನೀಲಮೇಘಶ್ಯಾಮನಾದ ಕರುಣಾಸಾಗರ ಮಲಗಿದ.

ರಾಮ ತನ್ನ ಸುಂದರವಾದ ಬಲತೋಳನ್ನು ತಲೆದಿಂಬನ್ನಾಗಿಸಿಕೊಂಡು ಮಲಗಿದ. ಆ ತೋಳು ಎಂಥದು ! ದೀರ್ಘವಾಗಿ ಸಾಧುಗಳಿಗೆ ದುಷ್ಟರನ್ನು ನಿಗ್ರಹಿಸಿ ಆಶ್ರಯ ಕೊಡುವಂಥ ತೋಳು ! ಆ ಭುಜ ಆಪನ್ನರಿಗೆ, ಶರಣ್ಯರಿಗೆ, ರಕ್ಷಣೆಯನ್ನು ನೀಡುವಂಥದು ! ಶತ್ರುಗಳು ಇದಿರಿಗೆ ನಿಂತಾಗ ರಾಮನ ಭುಜಬಲ ಅವರನ್ನೆಲ್ಲ ನಾಶಮಾಡಿತು. ಅಂಥ ಪರಾಕ್ರಮವಾದ ತೋಳು ಅದು !

ಸೀತಾಪಹರಣಕ್ಕೆ ಮೊದಲು ಸಾಧ್ವಿಯಾದ ಸುಂದರಿ ಸೀತೆ ಯಾವ ಭುಜವನ್ನು ತನ್ನ ಉತ್ತಮಾಂಗವಾದ ತಲೆಯಿಂದ ಒರಗಿಕೊಳ್ಳುತ್ತಿದ್ದಳೋ ಅಂಥ ಭುಜ ! ಅಂಥ ದಿವ್ಯವಾದ ಬಾಹುವನ್ನು ತಲೆದಿಂಬನ್ನಾಗಿಟ್ಟುಕೊಂಡು ಮಲಗಿದ ರಾಮ. ಯಾವಾಗಲೂ ರಾಮನ ಆ ಬಲಬಾಹು ದಾನ ಕೊಡುವುದರಲ್ಲೇ ಮುಂದಾಗಿ ನಿಲ್ಲುವಂತಿತ್ತು. ವಿಪ್ರರಿಗೆ, ಬೇಡಿದವರಿಗೆ, ಧಾರಾಳವಾಗಿ ಗೋವುಗಳನ್ನು, ಧನವನ್ನು ಕೊಡುವಂಥ ಬಾಹು ಅದು !

**ತತಃ ಸಾಗರವೇಲಾಯಾಂ ದರ್ಭಾನಾಸ್ತೀರ್ಯ ರಾಘವಃ ।**

**ಅಂಜಲಿಂ ಪ್ರಾಙ್ಮುಖಃ ಕೃತ್ವಾ ಪ್ರತಿಶಿಶ್ಯೇ ಮಹೋದಧೇಃ ॥**

**ಬಾಹುಂ ಭುಜಂಗಭೋಗಾಭಂ ಉಪಧಾಯಾರಿ ಸೂದನಃ**
**ಜಾತರೂಪಮಯೈಶ್ಚೈವ ಭೂಷಣೈ ರ್ಭೂಷಿತಂ ಸದಾ ||**
**ಮಣಿಕಾಂಚನಕೇಯೂರ ಮುಕ್ತಾಪ್ರವರ ಭೂಷಣೈಃ |**
**ಭುಜೈಃ ಪರಮನಾರೀಣಾಂ ಅಭಿಮೃಷ್ಟಮನೇಕಧಾ ||**
**ಚಂದನಾಗರುಭಿಶ್ಚೈವ ಪುರಸ್ತಾದಭಿಸೇವಿತಂ |**
**ಬಾಲಸೂರ್ಯ ಪ್ರಕಾಶೈಶ್ಚ ಚಂದನೈರುಪಶೋಭಿತಂ ||**
**ಶಯನೇ ಚೋತ್ತಮಾಂಗೇನ ಸೀತಾಯಾಃ ಶೋಭಿತಂ ಪುರಾ |**
**ತಕ್ಷಕಸ್ಯೇವ ಸಂಭೋಗಂ ಗಂಗಾಜಲ ನಿಷೇವಿತಂ ||**
**ಸಂಯುಗೇ ಯುಗಸಂಕಾಶಂ ಶತ್ರೂಣಾಂ ಶೋಕವರ್ಧನಂ |**
**ಸುಹೃದಾಂ ನಂದನಂ ದೀರ್ಘಂ ಸಾಗರಾಂತ್ಯಪಾಶ್ರಯಂ ||**
**ಅಸ್ಯತಾ ಚ ಪುನಸ್ಸವ್ಯರಾ ಜ್ಯಾಘಾತ ವಿಹತತ್ವಚಮ್ |**
**ದಕ್ಷಿಣೋ ದಕ್ಷಿಣಂ ಬಾಹುಂ ಮಹಾಪರಿಘಸನ್ನಿಭಂ ||**
**ಗೋಸಹಸ್ರಪ್ರದಾತಾರಂ ಹ್ಯುಪಧಾಯ ಭುಜಂ ಮಹತ್ |**
**ಅದ್ಯಮೇತರಣಂ ವಾಥ ಮರಣಂ ಸಾಗರಸ್ಯ ವಾ ||**
**ಇತಿರಾಮೋ ಧೃತಿಂ ಕೃತ್ವಾ ಮಹಾಬಾಹು ರ್ಮಹೋದಧಿಮ್ |**
**ಅಧಿಶಿಶ್ಯೇ ಚ ವಿಧಿವತ್ ಪ್ರಯತ್ರೋತ್ರಸ್ಥಿತೋ ಮುನಿಃ ||**

ಅಂಥ ದಿವ್ಯವಾದ ಬಲಬಾಹುವನ್ನು ತಲೆದಿಂಬನ್ನಾಗಿ ಇಟ್ಟುಕೊಂಡು ಮಲಗಿದ ರಾಮ.

ಮೂರು ರಾತ್ರಿ ಸಮುದ್ರತಟದಲ್ಲಿ ಹಾಗೇ ನಿಶ್ಚಲವಾಗಿ ಮಲಗಿದ. ಸಮುದ್ರ ಪ್ರಸನ್ನನಾಗಲಿಲ್ಲ. ಇದನ್ನು ಕಂಡ ರಾಮ ಕುಪಿತನಾದ. "ಎಷ್ಟು ಗರ್ವ ಈ ಸಮುದ್ರನಿಗೆ ಇದಕ್ಕೆ ತಕ್ಕದ್ದನ್ನು ಮಾಡಬೇಕು" ಎಂದು ತೀರ್ಮಾನಿಸಿದ.

ಇಲ್ಲಿ ಒಂದು ಸಂಶಯ ಬರಬಹುದು. ಶ್ರೀರಾಮನು ಸಾಗರನಲ್ಲಿ ಸಮ್ಯಕ್ ಶರಣಾಗತಿಯನ್ನು ಮಾಡಲಿಲ್ಲವೆ ? ಆ ಶರಣಾಗತಿಗೆ ಫಲ ಏಕೆ ಸಿಗಲಿಲ್ಲ ? ಎಂದು ಕೇಳಬಹುದು. ಲೋಕದಲ್ಲಿ ಶರಣಾಗತಿ ಮಾಡಲು ಅರ್ಹರಾರು ? ಅಕಿಂಚನನಾದವನು ಮಾತ್ರ ಶರಣಾಗತಿ ಮಾಡಲು ಅಧಿಕಾರಿ. ಸರ್ವವಿಧದಲ್ಲೂ ಸಮರ್ಥನೂ, ಸರ್ವಶರಣ್ಯನೂ ಆದವನು ಅಲ್ಲ. ಆದ್ದರಿಂದ ಶ್ರೀರಾಮ ಶರಣಾಗತಿ ಮಾಡಲು ಹೇಗೆ ತಾನೇ ಅರ್ಹನಾದಾನು ? ಎಂದಿಗೂ ಇಲ್ಲ. ಆದುದರಿಂದಲೇ ಶ್ರೀರಾಮ ಮಾಡಿದ ಶರಣಾಗತಿಗೆ ಫಲ ಸಿಗಲಿಲ್ಲ. ರಾಜನಾದವನು ರಾಜಸೂಯಯಾಗ ಮಾಡಿದರೆ ಫಲ ದೊರಕೀತೇ ವಿನಾ ಬ್ರಾಹ್ಮಣನಾದವನು ಮಾಡಿದರೆ ಸಿಕ್ಕೀತೆ ?

ಸಮುದ್ರರಾಜನ ಮೇಲೆ ಭಾರಿ ಸಿಟ್ಟು ಬಂದಿತು. ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಸೌಮಿತ್ರೇ. ನನ್ನ ಧನಸ್ಸು, ಬಾಣಗಳನ್ನು ತಾ. ಈಗಲೇ ಈ ಸಮುದ್ರದಲ್ಲಿ ಒಂದು ತೊಟ್ಟು ನೀರಿಲ್ಲದಂತೆ ಅದನ್ನು ಶೋಷಿಸಿಬಿಡುತ್ತೇನೆ. ವಾನರರೆಲ್ಲ ಭೂಮಿಯ ಮೇಲೆ ನಡೆದಂತೆ ಶುಷ್ಕವಾದ ಈ ಸಮುದ್ರದ ಮೇಲೆ ನಡದೇಹೋಗಲಿ.

ಸಮುದ್ರರಾಜ ಗರ್ವಿತನಾಗಿರುವಂತಿದೆ, ಲಕ್ಷ್ಮಣಾ ಲೋಕವೇ ಹಾಗೆ! ಶಾಂತಿ, ಕ್ಷಮೆ, ಸರಳತೆ, ಮಧುರವಾಣಿ ಈ ಸದ್ಗುಣಗಳನ್ನು ಪ್ರಪಂಚದಲ್ಲಿ ಯಾರೂ ಗೌರವಿಸುವುದಿಲ್ಲ. ಇದನ್ನು ಪಡೆದ ಸೌಮ್ಯರನ್ನು "ಕೈಲಾಗದವ" ಎಂದು ಅಲಕ್ಷಿಸುತ್ತಾರೆ. ದುಷ್ಟನಾಗಿ ಎಲ್ಲರ ಮೇಲೂಶಾಸನ ಮಾಡುವವನನ್ನೂ, ದರ್ಪ, ಅಹಂಕಾರದಿಂದ ಎಲ್ಲರನ್ನೂ ಮೋಹಗೊಳಿಸುವ ಡಾಂಭಿಕನನ್ನೇ ಲೋಕ ಪೂಜಿಸುತ್ತದೆ. ಸಾಮದಿಂದ ದುಷ್ಟರಲ್ಲಿ ಕಾರ್ಯ ಆಗುವುದಿಲ್ಲ. ಗರ್ವಿಷ್ಠರಲ್ಲಿ, ಡಾಂಭಿಕರಲ್ಲಿ, ದುಷ್ಟರಲ್ಲಿ ಸಾಮವು ಕೆಲಸಕ್ಕೆ ಬರುವುದಿಲ್ಲ. ಅದನ್ನು ಅವರು ಗೌರವಿಸುವುದೂ ಇಲ್ಲ. ಸಾಮವು ಹೇಡಿತನದ ಗುರುತು ಎಂದು ಆ ದುಷ್ಟರು ತಿಳಿಯುತ್ತಾರೆ. ಅಂಥವರ ಮೇಲೆ ದಂಡವೆ. ಸರಿಯಾದ ಉಪಾಯ. ಆದ್ದರಿಂದ, 'ಲಕ್ಷ್ಮಣಾ!' ಈ ಸಮುದ್ರ ನನ್ನನ್ನು ಕೈಲಾಗದವ ಎಂದು ತಿಳಿದಂತಿದೆ. ನೀನು ಧನುಸ್ಸನ್ನು ವಿಷಯುಕ್ತವಾದ ಬಾಣಗಳನ್ನೂ ತೆಗೆದುಕೊಂಡು ಬಾ. ಇವನ ಗರ್ವಕ್ಕೆ ಸರಿಯಾಗಿ ಬುದ್ಧಿ ಕಲಿಸುತ್ತೇನೆ ಎಂದು ಧನುಸ್ಸನ್ನು ಟಂಕಾರ ಮಾಡಿಯೇ ಬಿಟ್ಟ ರಾಮ.

**ಸಮುದ್ರಸ್ಯ ತತಃ ಕ್ರುದ್ಧೋ ರಾಮೋ ರಕ್ತಾಂತಲೋಚನಃ ।**
**ಸಮೀಪಸ್ಥಮುವಾಚೇದಂ ಲಕ್ಷ್ಮಣಂ ಶುಭಲಕ್ಷಣಂ ॥**
**ಅವಲೇಪಃ ಸಮುದ್ರಸ್ಯ ನದರ್ಶಯತಿ ಯಃ ಸ್ವಯಂ ।**
**ಪ್ರಶಮಶ್ಚ ಕ್ಷಮಾಚೈವ ಆರ್ಜವಂ ಪ್ರಿಯವಾದಿತಾ ॥**
**ಅಸಾಮರ್ಥ್ಯ ಫಲಾಹ್ಯೇತೇ ನಿರ್ಗುಣೇಷು ಸತಾಂ ಗುಣಾಃ ।**
**ಆತ್ಮಪ್ರಶಂಸಿನಂ ದುಷ್ಟಂ ಧೃಷ್ಟಂ ವಿಪರಿಧಾವಕಂ ॥**
**ಸರ್ವತ್ರೋತ್ಸೃಷ್ಟದಂಡಂಚ ಲೋಕಃ ಸತ್ಕುರುತೇ ನರಂ ।**
**ನ ಸಾಮ್ನಾ ಶಕ್ಯತೇ ಕೀರ್ತಿಃ ನಸಾಮ್ನಾ ಶಕ್ಯತೇ ಯಶಃ ॥**
**ಪ್ರಾಪ್ತುಂ ಲಕ್ಷ್ಮಣ ಲೋಕೇಸ್ಮಿನ್ ಜಯೋ ವಾರಣನಾರ್ಧನಿ ।**
**ಅದ್ಯ ಮದ್ಬಾಣನಿರ್ಭಗ್ನೈಃ ಮಕರೈಃ ಮಕರಾಲಯಂ ॥**
**ನಿರುದ್ಧತೋಯಂ ಸೌಮಿತ್ರೇ ಪ್ಲವದ್ಭಿಃ ಪಶ್ಯ ಸರ್ವತಃ ।**
**ಭೋಗಿನಾಂ ಪಶ್ಯ ಭೋಗಾನಿ ಮಯಾ ಭಿನ್ನಾನಿ ಲಕ್ಷ್ಮಣ ॥**
**ಮಹಾಭೋಗಾನಿ ಮತ್ಸ್ಯಾನಾಂ ಕರಿಣಾಂ ಚ ಕರಾನಿಹ ।**
**ಸಶಂಖ ಶುಕ್ತಿಕಾಜಾಲಂ ಸಮೀನಮಕರಂ ತಥಾ ॥**
**ಅದ್ಯ ಯುದ್ಧೇನ ಮಹತಾ ಸಮುದ್ರಂ ಪರಿಶೋಷಯೇ ।**
**ಕ್ಷಮಯಾಹಿ ಸಮಾಯುಕ್ತಂ ಮಾಮಯಂ ಮಕರಾಲಯಃ ॥**
**ಅಸಮರ್ಥಂ ವಿಜಾನಾತಿ ಧಿಕ್ ಕ್ಷಮಾಮೀದೃಶೇ ಜನೇ ।**
**ನದರ್ಶಯತಿ ಸಾಮ್ನಾ ಮೇ ಸಾಗರೋ ರೂಪಮಾತ್ಮನಃ ॥**
**ಚಾಪಮಾನಯ ಸೌಮಿತ್ರೇ ಶರಾಂಶ್ಚಾಶೀ ವಿಷೋಪಮಾನ್ ।**
**ಸಮುದ್ರಂ ಶೋಷಯಿಷ್ಯಾಮಿ ಪದ್ಭ್ಯಾಂ ಯಾಂತು ಪ್ಲವಂಗಮಾಃ॥**

ಘೋರವಾದ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಲು ಹೊರಟ. ಆಗ ಲಕ್ಷ್ಮಣ ಓಡಿಬಂದು ರಾಮನ

ಕೈಹಿಡಿದು ''ಅಣ್ಣಾ ! ಬೇಡ! ಸಮುದ್ರವನ್ನು ದಾರಿಗೆ ತರಲು ಬೇರೆ ಉಪಾಯವನ್ನು ಮಾಡೋಣ. ಉತ್ತಮನಾದ ನಿನಗೆ ಇಷ್ಟು ಕ್ರೋಧವಿರಬಾರದು. ಇದರಿಂದ ಸಮುದ್ರದಲ್ಲಿ ಎಲ್ಲ ಪ್ರಾಣಿಗಳಿಗೂ ತೊಂದರೆಯಾಗುತ್ತದೆ. ಅಣ್ಣಾ, ಕ್ಷಮಾವಂತನಾದ ನೀನು ಕೋಪಗೊಳ್ಳಬಾರದು. ನೀನು ಕೋಪಿಸಿದರೆ ಪ್ರಪಂಚವೇ ಹಾಳಾದೀತು. ಅಣ್ಣಾ. ಕ್ರೂರವಾದ ಅಸ್ತ್ರವನ್ನು ಹೂಡಬೇಡ "ಎಂದು ಪ್ರಾರ್ಥಿಸಿದ.

ರಾಮ ಕೈಯಲ್ಲಿ ಬಾಣವನ್ನು ಹಿಡಿದು ಅದರ ಮೇಲೆ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಧನುಸ್ಸಿಗೆ ಹೂಡಿಯೇ ಬಿಟ್ಟ. ಆಕಾಶದಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು, ಚಾರಣರೂ "ಇನ್ನೇನು ! ಇನ್ನೇನು !'' ಎಂದು ಭಯದಿಂದ ತಲ್ಲಣಿಸಿದರು.

ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸುತ್ತಿದ್ದಂತೆ ಸಾಗರ ಅಲ್ಲೋಲಕಲ್ಲೋಲವಾಯಿತು. ಪ್ರಳಯ ಕಾಲದ ರುದ್ರನಂತೆ ಭೀಕರನಾಗಿ ಧನುಸ್ಸನ್ನು ಕೈಯಲ್ಲಿ ಹಿಡಿದ ರಾಮ ಅಸ್ತ್ರವನ್ನು ಹೂಡು ತ್ತಿದ್ದಂತೆಯೇ ಭಯಂಕರ ಸ್ಫೋಟಗಳಾದವು. ಪರ್ವತದ ಶಿಖರಗಳು ಉರುಳಿಬಿದ್ದವು. ವಿಂಧ್ಯ ಪರ್ವತದಂತೆ ಅಲೆಗಳು ಏಳತೊಡಗಿದವು. ಸಮುದ್ರದಡಲ್ಲಿರುವ ಮತ್ಸ್ಯ, ಮೊಸಳೆ, ಇನ್ನೂ ಅನೇಕ ಜಲ ಜಂತುಗಳು ವಿಲಿವಿಲಿ ಒದ್ದಾಡತೊಡಗಿದವು. ಸಮುದ್ರದ ಒಳಗಿನ ರಾಕ್ಷಸರೆಲ್ಲ ಭಯವಿಹ್ವಲ ರಾದರು. ಇಡೀ ಸಮುದ್ರವೇ ಕುದಿಯತೊಡಗಿತು. ಇನ್ನೂ ಅಸ್ತ್ರವನ್ನು ಬಿಡುವ ಮೊದಲೇ ಪರಿ ಸ್ಥಿತಿ ಇಷ್ಟು ವಿಕೋಪಕ್ಕೆ ಹೋಯಿತು. ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸುತ್ತಿದ್ದಂತೆ ರಾಮ ಸಮುದ್ರ ರಾಜ ! ನಿನ್ನ ಗರ್ವವನ್ನು ಇಳಿಸುವ ಸಲುವಾಗಿ ಇಗೋ ! ಈ ಅಸ್ತ್ರವನ್ನು ಬಿಡುತ್ತಿದ್ದೇನೆ. ನನ್ನನ್ನು ಕೈಲಾಗದವ ಎಂದು ನೀ ತಿಳಿದಂತಿದೆ. ಅಕ್ಷೋಭ್ಯವಾದ ಸಾಗರವನ್ನು ಈಗಲೇ ಶೋಷಿಸಿ ಬಿಡುತ್ತೇನೆ. ಹೇ ಸಾಗರ ! ನಿನ್ನಲ್ಲಿರುವ ಮೀನು, ಮೊಸಳೆ, ಕ್ರಿಮಿ, ಕೀಟ ಎಲ್ಲ ನಿನ್ನೊಂದಿಗೇ ನಾಶಹೊಂದುತ್ತವ. ಎಷ್ಟೇ ನೀರಿದ್ದರೂ ನೀನು ಮುಂದುವರಿಯದೆ ಸೀಮಿತವಾಗಿದ್ದೆ ಎಂಬ ಮರ್ಯಾದೆ ಹೊಂದಿದ್ದೆಯಲ್ಲವೆ ? ಇಂದು ಸೀಮೋಲ್ಲಂಘನ ಮಾಡಿ ನಿನ್ನ ಮರ್ಯಾದೆಯನ್ನೇ ನಷ್ಟಮಾಡುತ್ತೇನೆ. ಎಂದು ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿರುವ ತನ್ನ ಕಣ್ಣುಗಳಿಂದ ಸಾಗರ ವನ್ನು ನೋಡಿದ.

ಇನ್ನೇನು ! ಅಸ್ತ್ರವನ್ನು ಬಿಟ್ಟೇ ಬಿಡುತ್ತಾನೆ ಎನ್ನುವಾಗ ನೀರಿನ ಮಧ್ಯೆ ಮೇರು ಪರ್ವತ ಎದ್ದಂತೆ ಸಾಗರ ಮಧ್ಯದಿಂದ ಸಮುದ್ರರಾಜ ಕಾಣಿಸಿಕೊಂಡ.

ವೈಢೂರ್ಯ ಮಣಿಯಂತೆ ಶ್ಯಾಮಲವರ್ಣ ಎತ್ತರವಾದ ಮೈಕಟ್ಟು. ವಿಶಾಲವಾದ ತಾವರೆ ಯಂಥ ಕಣ್ಣುಗಳು, ಆ ದೇದೀಪ್ಯಮಾನವಾದ ಶ್ಯಾಮಲವರ್ಣದ ದೇಹದಲ್ಲಿ ಚೊಕ್ಕಚಿನ್ನದ, ಕುಂದಣದಲ್ಲಿಕೂಡಿಸಿದ ಮಣಿ, ರತ್ನದ ಆಭರಣಗಳು, ಗಂಗಾ, ಸಿಂಧೂ, ಗೋದಾವರಿ, ಮುಂತಾದ ನದಿಗಳಿಂದ ಸೇವಿಸಲ್ಪಡುತ್ತಿರುವ. ಆ ಸಮುದ್ರರಾಜ ಮೇರು ಪರ್ವತದಲ್ಲಿ ಉದಿಸಿದ ಸೂರ್ಯನಂತೆ ಸಮುದ್ರದ ಮಧ್ಯದಿಂದ ಹೊರಬಂದ. ರಾಮನಿಗೆ ಕೈ ಜೋಡಿಸಿ ನಮಸ್ಕರಿಸಿದ.

ಪ್ರಭು, ರಾಘವ, ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ, ಈ ಪಂಚ ಭೂತಗಳೂ ತಮ ತಮಗೆ ನಿಯುಕ್ತವಾದ ಸ್ಥಾನಗಳಲ್ಲಿ ಇರತಕ್ಕವು. ಇದು ತಮ್ಮ ಧರ್ಮವನ್ನು ಮೀರುವು ದಿಲ್ಲ. ಈ ನಿಯಮವನ್ನು ಅನುಲಕ್ಷಿಸಿಯೇ ನಾನೂ ಸಹ ಇದುವರೆಗೆ ಸುಮ್ಮನಿದ್ದೆ. ಈಗ, ನೀನು ಯಾವ ರೀತಿಯಾಗಿ ನನ್ನನ್ನು ದಾಟಬಹುದು ಎಂಬುದಕ್ಕೆ ಉಪಾಯ ಹೇಳುತ್ತೇನೆ ಎಂದ.

ರಾಮ ಆಗಿರಲಿ, ಸಮುದ್ರರಾಜ, ನಾನು ಈಗ ಧನುಸ್ಸಿಗೆ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಯಾಗಿದೆ. ತೊಟ್ಟ ಬಾಣ ತನ್ನ ಗುರಿಯತ್ತ ನಾಗಿಯೇ ತೀರಬೇಕು. ರಾಮೋ ದ್ವಿರ್ನಾಭಿ ಭಾಷತೇ. ಎಂದೂ ನಾನು ಎರಡು ಮಾತಾಡುವವನಲ್ಲ. ಒಂದೇ ಮಾತು, ಒಂದು ಬಾಣ ಇದು ನನ್ನ ವ್ರತ. ಈಗ ನಾನು ತೊಟ್ಟ ಈ ಬಾಣಕ್ಕೆ ಗುರಿಯನ್ನು ಹೇಳು ಎಂದ.

ಸೂರ್ಯಸದೃಶವಾದ ಬಾಣವನ್ನು ನೋಡಿ ಸಮುದ್ರರಾಜ ರಾಮ, ನಿನ್ನ ಬಾಣಕ್ಕೆ ಲಕ್ಷ್ಯವನ್ನು ಹೇಳುತ್ತೇನೆ ಕೇಳು, ಉತ್ತರಭಾಗದಲ್ಲಿ ಅಂದರೆ ನನ್ನ ಕುಕ್ಷಿ ಪ್ರದೇಶದಲ್ಲಿ ದ್ರುಮಕುಲ್ಯ ಎಂಬ ಪ್ರದೇಶವುಂಟು. ಅಲ್ಲಿ ವಾಸಿಸುವವರು ದುಷ್ಟರಾದ ರಾಕ್ಷಸರು. ನನ್ನ ನೀರನ್ನು ಶೋಷಿಸುತ್ತ ಬಂದಿದ್ದಾರೆ. ಆ ಕೆಟ್ಟ ರಾಕ್ಷಸರು ವಾಸ ಮಾಡುವ ದ್ರುಮಕುಲ್ಯದ ಮೇಲೆ ಈ ಬಾಣವನ್ನು ಪ್ರಯೋಗಿಸು ಎಂದ.

ಆದರಂತೆ ರಾಮ ಅಸ್ತ್ರವನ್ನು ದ್ರುಮಕುಲ್ಯದ ಮೇಲೆ ಪ್ರಯೋಗಿಸಿದ. ಅಲ್ಲಿ ವಾಸಿಸುತ್ತಿದ್ದ ದುಷ್ಟರಾಕ್ಷಸರು ನಿರ್ನಾಮರಾದರು. ಆ ಪ್ರದೇಶದಲ್ಲಿದ್ದ ಸಮುದ್ರದ ನೀರೆಲ್ಲ ಶೋಷಿಸಿತು. ಅದು ಮರುಭೂಮಿಯಾಯಿತು. ಸಮುದ್ರದ ಕುಕ್ಷಿಪ್ರದೇಶ ಮರುಕಾಂತಾರವಾಯಿತು. ಶುಷ್ಕವಾದ ಮರುಭೂಮಿಯ ಪ್ರದೇಶವಾದದ್ದನ್ನು ಕಂಡ ರಾಮ. ತನ್ನ ಬಾಣದಿಂದ ಆ ಭೂ ಭಾಗಕ್ಕೆ ಹಾನಿಯಾಗಿದ್ದನ್ನೂ ಸಹಿಸಲಿಲ್ಲ. ದುಷ್ಟರಾದ ರಾಕ್ಷಸರನ್ನು ನಿಗ್ರಹಿಸಿ ಸಮುದ್ರರಾಜನಿಗೆ ಹಿತವನ್ನು ಮಾಡಿದ. ಆದರೆ, ಆ ಭೂಭಾಗ ಮರುಭೂಮಿಯಾಯಿತು. ರಾಮ ಆ ಭೂಭಾಗಕ್ಕೆ ವರದಾನ ಮಾಡಿದ. "ಪ್ರದೇಶ ಯಾವಾಗಲೂ ಫಲ ಮೂಲಗಳಿಂದಲೂ, ಶುದ್ಧವಾದ ನೀರಿನಿಂದಲೂ ಕೂಡಿ ಪಶುಗಳು ವಾಸಿಸಲು ಅನುಕೂಲವಾಗಲಿ, ರೋಗರಹಿತವಾಗಲಿ ಈ ಭೂಭಾಗ" ಎಂದು.

ಈ ಪ್ರಕರಣದಲ್ಲೂ ರಾಮ ತನ್ನ ಮನುಷ್ಯತ್ವದ ನೆಲೆಯಿಂದ ಮೇಲಾದ ಪರತ್ವವನ್ನು ಪ್ರಕಾಶಪಡಿಸಿದ್ದಾನೆ. ಸಾಮಾನ್ಯ ಮಾನವನಿಗೆ ಮರುಭೂಮಿ ತಕ್ಷಣದಲ್ಲಿ ಫಲ, ಮೂಲ, ರಸ, ಔಷಧಿಗಳಿಂದ ಸುಸಮೃದ್ಧವಾಗುವಂತೆ ವರ ನೀಡುವ ಯೋಗ್ಯತೆ ಅಸಹಜ. ವರದಾನ ಎಂಬುದು ದೇವತ್ವದ ಚಿಹ್ನೆ. ಆದ್ದರಿಂದಲೇ ಕೂರತ್ತಾಳ್ವಾರ್ "ರಾಮ! ನೀನು ಮರುಕಾಂತಾರವಾದ ದ್ರುಮಕುಲ್ಯವನ್ನು ಸಸ್ಯ ಸಮೃದ್ಧ, ರೋಗರಹಿತ ಪ್ರದೇಶ ಆಗುವಂತೆ ವರ ಕೊಟ್ಟೆಯಲ್ಲ! ನೀನು ನಿಜವಾಗಿ ಮನುಷ್ಯನೇ? ಹೇಳು" ಎಂದಿದ್ದಾರೆ ತಮ್ಮ "ಅತಿಮಾನುಷಸ್ತವದಲ್ಲಿ." ರಾಮ ಸಮುದ್ರನಿಗೆ ವರದಾನ ನೀಡಿದ ಮೇಲೆ ಸಂತುಷ್ಟನಾದ ಸಾಗರ ರಾಜ ರಾಮನನ್ನು ಕುರಿತು "ರಾಘವ, ಸಮುದ್ರವನ್ನು ದಾಟಲು ನಾನು ಉಪಾಯವನ್ನು ಹೇಳುತ್ತೇನೆ. ವಿಶ್ವಕರ್ಮನ ಮಗ ನಳ ಮಹಾಚತುರ. ತಂದೆಯಂತೆ ಶಿಲ್ಪಶಾಸ್ತ್ರದಲ್ಲಿ ನಿಪುಣ.

**ಅಯಂ ಸೌಮ್ಯ! ನಳೋನಾಮ ತನುಜೋ ವಿಶ್ವಕರ್ಮಣಃ ।**

**ಪಿತ್ರಾದತ್ತವರಃ ಶ್ರೀಮಾನ್ ಪ್ರೀತಿಮೋ ವಿಶ್ವಕರ್ಮಣಾ ॥**

ಅವನಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸು. ನಾನು ಆ ಸೇತುವೆ ಮುಳುಗದಂತೆ ಧರಿಸುತ್ತೇನೆ. ಎಂದು ಹೇಳಿ ಅದೃಶ್ಯನಾದ.

**ಸೇತು ಬಂಧನ**

ಸಮುದ್ರರಾಜನ ಮಾತನ್ನು ಕೇಳಿದ ನಳ ರಾಮನ ಹತ್ತಿರ ಬಂದು ಸವಿನಯವಾಗಿ ಅವನನ್ನು

ವಂದಿಸಿ ರಾಮ ! ಸಮುದ್ರರಾಜನ ವಿಷಯದಲ್ಲಿ ನೀ ಮಾಡಿದುದು ಸರಿಯಾಗಿಯೇ ಇದೆ. ಯಾವಾಗಲೂ ಕೃತಘ್ನರಿಗೆ ದಂಡವೇ ಸರಿಯಾದ ಉಪಾಯ ! ಸಮುದ್ರರಾಜ ಹೇಳಿದ ಮೇಲೆ ನನಗೆ ನನ್ನ ವಿಷಯ ನೆನಪಿಗೆ ಬರುತ್ತಿದೆ. ಸಮುದ್ರ ಹೇಳಿದಂತೆ ನಾನು, ವಿಶ್ವಕರ್ಮನ ಮಗ. ಸೇತುವೆಯನ್ನು ಕಟ್ಟಲು ಸಿದ್ಧನಾಗಿದ್ದೇನೆ. ಅಪ್ಪಣೆಯಾಗಲಿ ಎಂದ ನಳ. ಆದುವರೆಗೆ ಏಕೆ ಸುಮ್ಮ ನಿದ್ದ ಎಂಬುದಕ್ಕೆ ಒಂದು ಕಾರಣವಿದೆ.

ವಿಶ್ವಕರ್ಮನ ಮಗ ನಳ. ಮಂದರ ಪರ್ವತ ಪ್ರದೇಶದಲ್ಲಿ ಋಷಿಗಳು ತಪಸ್ಸು ಮಾಡುತ್ತಿದ್ದಾಗ ಬಾಲಕನಾಗಿದ್ದ ನಳ ಅವರ ಕಮಂಡಲು, ಕೃಷ್ಣಾಜಿನ ಮುಂತಾದ ವಸ್ತುಗಳನ್ನು ತೆಗೆದು ಕೊಂಡು ಹೋಗಿ ನದಿಯಲ್ಲಿ ಬಿಸಡುತ್ತಿದ್ದ ವಾನರ ಸಹಜವಾದ ಚೇಷ್ಟೆ ಮಾಡುತ್ತಿದ್ದ. ಋಷಿಗಳು ಜ್ಞಾನಿಗಳು ಅವರು. ನಳನಿಗೆ ನೀನು ಹಾಕುವ ವಸ್ತುಗಳು ನೀರಿನಲ್ಲಿ ಮುಳುಗದೆ ಹಾಗೆಯೇ ತೇಲುತ್ತಿರಲಿ. ಅಲ್ಲದೆ ನಿನ್ನ ಈ ಸಾಮರ್ಥ್ಯ ಇನ್ನೊಬ್ಬರು ಹೇಳಿದಾಗ ಮಾತ್ರವೇ ನಿನಗೆ ನೆನಪಿಗೆ ಬರಲಿ ಎಂದು ಹೇಳಿದ್ದರು.

ಆದರಂತೆ ನಳನಿಗೆ ತನ್ನ ಸಾಮರ್ಥ್ಯದ ಅರಿವೇ ಮರೆತಿತ್ತು. ಈಗ, ಸಮುದ್ರರಾಜ ಜ್ಞಾಪಿಸಿದ್ದರಿಂದ ಅದು ನೆನಪಿಗೆ ಬಂದಿತು.

**ಸಮರ್ಥಶ್ಚಾಪ್ಯಹಂ ಸೇತುಂ ಕರ್ತುಂ ವೈವರುಣಾಲಯೇ ।**
**ಕಾಮ ಮದ್ಯೈವ ಬಧ್ನಂತು ಸೇತುಂ ವಾನರ ಪುಂಗವಾಃ ॥**

ಎಂದು ಹೇಳಿದ.

ರಾಮ ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು ಆಜ್ಞಾಪಿಸಿದ.

ರಾಮ ಆಜ್ಞಾಪಿಸಿದ್ದೇ ತಡ. ಕಪಿಗಳ ಗುಂಪು ನಾನಾ ದಿಕ್ಕಿಗೂ ಹೊರಟಿತು. ದೊಡ್ಡ ದೊಡ್ಡ ಸಾಲ, ಅರ್ಜುನ, ಅಶೋಕ ವೃಕ್ಷಗಳನ್ನು ಬೇರುಸಹಿತ ಕಿತ್ತು ತಂದರು. ಪರ್ವತಶಿಖರಗಳನ್ನೂ ತಂದು ತಂದು ರಾಶಿ ಎಳೆದರು. ಎಲ್ಲ ಕಡೆಯಲ್ಲೂ ಪರ್ವತಶಿಖರಗಳು, ವೃಕ್ಷಗಳ, ಮರಳಿನ ರಾಶಿಯೇ ರಾಶಿ. ಮಹಾಪರಾಕ್ರಮಶಾಲಿಗಳಾದ ಆ ವಾನರರು ಆ ಮಹಾರಣ್ಯದಲ್ಲಿದ್ದ ಸಾಲ, ಅಶ್ವಕರ್ಣ, ಧವ, ಬಿದಿರು, ಅಶೋಕ, ಕುಟಜ, ಅರ್ಜುನ, ತಾಲ, ತಿಲಕ, ತಿಮಿಶ, ಬಿಲ್ವ ಸಪ್ತಪರ್ಣ, ಕರ್ಣಿ ಕಾರ, ಚೂತ–ಇತ್ಯಾದಿ ಮಹಾವೃಕ್ಷಗಳನ್ನೆಲ್ಲ ಕೆಲವನ್ನು ಬುಡಸಹಿತ, ಕೆಲವನ್ನು ಬುಡಬಿಟ್ಟು ಬರೀ ಕೊಂಬೆ ಕೊಂಬೆ – ಹೀಗೆ ಹೊತ್ತು ತಂದು ಹಾಕಿದವು.

ನಳನಿಗೆ ಸೇತುವೆ ಕಟ್ಟಲು ಕೆಲವು ಸಹಾಯಮಾಡಿದವು. ಕೆಲವು ಕಪಿಗಳು ಯೋಜನ ದೂರದಲ್ಲಿದ್ದ ಸಾಮಗ್ರಿಗಳನ್ನೆಲ್ಲ ನಳನ ಕೈಗೆಟುಕುವಂತೆ ತಂದುಹಾಕುತ್ತಿದ್ದವು. ಕಪಿಗಳು ತಂದುಕೊಟ್ಟ ಪರ್ವತ ಶಿಖರಗಳನ್ನೂ, ವೃಕ್ಷಗಳನ್ನೂ ನಳ ತನ್ನ ಕೈಯಿಂದ ಸ್ಪರ್ಶಿಸಿ ಸಮುದ್ರಕ್ಕೆಸೆಯುತ್ತಿದ್ದ. ನಳನ ಮೇಲ್ವಿಚಾರಣೆಯಲ್ಲಿ ಅತ್ಯದ್ಭುತವಾದ ಸೇತುವೆ ನಿರ್ಮಾಣವಾಗುತ್ತಿತ್ತು.

ಶ್ರೀರಾಮಕಾರ್ಯಕ್ಕಾಗಿ ವಾನರಸಮೂಹ ತೋರಿದ ಉತ್ಸಾಹವನ್ನು ಮಹರ್ಷಿಗೆ ಎಷ್ಟು ವರ್ಣಿಸಿದರೂ, ಹೇಗೆ ವರ್ಣಿಸಿದರೂ, ಸಾಲದು. ವಾಲ್ಮೀಕಿಯ ವರ್ಣನೆಯನ್ನು ಓದಿದರೆ ರಾಮಸೇವಾಕಾರ್ಯ ನಿರತರಾದ ಆ ಪುಣ್ಯಜೀವಿಗಳು ವಾನರರು ಕಣ್ಣೆದುರಿಗೇ ಬಂದು ನಿಂತಂತಾಗುತ್ತದೆ ! ತಮ್ಮ ಶಕ್ತಿಯನ್ನೆಲ್ಲ ಪ್ರಯೋಗಿಸಿ, ಬೆಟ್ಟ ಗುಡ್ಡಗಳನ್ನೇ ಹೊತ್ತು ತಂದು ಹಾಕುತ್ತಿದ್ದವಂತೆ !

**ಸಾಸಾಲಾಂಶ್ಚ ಗಿರಿಪ್ರಸ್ಥಾನ್ ಗಿರೀಣಾಂ ಶಿಖರಾಣಿಚ ।**
**ದೃಶ್ಯಂತೇ ಪರಿಧಾವಂತೋ ಗೃಹ್ಯವಾರಣಸನ್ನಿಭಾಃ ॥**
**ಶಿಲಾನಾಂ ಕ್ಷಿಪ್ಯಮಾಣಾನಾಂ ಶೈಲಾನಾಂಚ ನಿಪಾತ್ಯತಾಂ ।**
**ಬಭೂವ ತುಮುಲಃ ಶಬ್ದಸ್ತದಾ ತಸ್ಮಿನ್ ಮಹೋದಧೌ ॥**

ಈ ಸೇತುಬಂಧನ ಪ್ರಕರಣ ರಾಮಭಕ್ತರಿಗೆಲ್ಲ ಬಹಳ ಇಷ್ಟವಾದುದು. ಭಕ್ತಿರಸವನ್ನು ಉದ್ರೇಕಿಸುವಂಥ ಘಟ್ಟ. ರಾಮಕಾರ್ಯದಲ್ಲಿ ಎಲ್ಲ ಕಪಿಗಳೂ. ಕರಡಿಗಳೂ ಭಾಗವಹಿಸಿದವು. ಆ ಸಮಯದಲ್ಲಿ ದೊಡ್ಡ ದೊಡ್ಡ ವಾನರವೀರರು ಬಂಡೆಗಳನ್ನೂ, ಪರ್ವತಶಿಖರಗಳನ್ನೂ ತಂದು ತಂದು ಹಾಕುತ್ತಿದ್ದರು. ಇವನ್ನೆಲ್ಲ ಒಂದು ಅಳಿಲು ನೋಡುತ್ತಿತ್ತು. ಮನಸ್ಸಿನಲ್ಲೇ ಚಿಂತಿಸಿತು.

ಆಹಾ ! ಈ ವಾನರರೆಲ್ಲ ಎಷ್ಟು ಪುಣ್ಯಶಾಲಿಗಳು. ತಮ್ಮ ದೊಡ್ಡದಾದ ದೇಹದಿಂದ ರಾಮ ಕಾರ್ಯಕ್ಕೆ ನೆರವಾಗುತ್ತಿದಾರೆ. ನಾನೂ ಈ ದೇಹವನ್ನು ಧರಿಸಿದ್ದಕ್ಕೆ ರಾಮಕಾರ್ಯದಲ್ಲಿ ನನ್ನ ಯೋಗ್ಯತೆಗೆ ನಿಲುಕಿದಷ್ಟು ನೆರವಾಗಬೇಕು. ನಾನು ಈ ಮಹಾ ಕಪಿಗಳಂತೆ ದೊಡ್ಡ ಬಂಡೆಗಳನ್ನು ಹೊರಲಾರೆ. ಆದರೂ, ನನ್ನ ಕೈಲಾದ ಸೇವೆ ನಡೆಸುತ್ತೇನೆ ಎಂದು ತೀರ್ಮಾನಿಸಿತು.

ಸಮುದ್ರದಲ್ಲಿ ಮುಳುಗಿತು. ತನ್ನ ಒದ್ದೆಯಾದ ಪುಟ್ಟ ಶರೀರವನ್ನು ಮರಳಿನಲ್ಲಿ ಹೊರಳಿಸಿತು. ಮೆಲ್ಲಗೆ ಹಾರಿ ನಳ ಸೇತುವೆ ಕಟ್ಟುತ್ತಿದ್ದ ಸ್ಥಳಕ್ಕೆ ಬಂದು ಅಲ್ಲಿ ಆ ಮರಳನ್ನು ಉದುರಿಸಿತು. ಹೀಗೆ ಸಮುದ್ರದಲ್ಲಿ ಮುಳುಗುವುದು, ಮೈ ಒದ್ದೆಮಾಡಿಕೊಂಡು ಮರಳಿನಲ್ಲಿ ಹೊರಳುವುದು, ಮೈಗಂಟಿದ ಮರಳನ್ನು ಸೇತುವೆಯಲ್ಲಿ ಉದುರಿಸುವುದು. ಹೀಗೇ ಮಾಡುತ್ತಿತ್ತು. ಆಗ, ಅಲ್ಲಿ ಅದನ್ನು ನೋಡುತ್ತಿದ್ದ ಒಂದು ವಾನರ "ಏ ! ನೀ ಏನುಮಾಡುತ್ತಿದ್ದೀಯೋ ?" ಎಂದಿತು. ನಾನೂ ರಾಮಸೇವೆಯನ್ನು ನನ್ನ ಕೈಲಾದರೀತಿಯಲ್ಲಿ ಮಾಡುತ್ತಿದೇನೆ ಎಂದಿತು.

ವಾನರ ನಕ್ಕು, ''ಹುಂ ! ನೀ ಎಲ್ಲಿ, ನಿನ್ನ ಈ ಸಣ್ಣ ಶರೀರದಿಂದ ಎರಡು ಕಣ ಮರಳನ್ನು ಉದುರಿಸಿದ ಮಾತ್ರಕ್ಕೆ ಸೇತುವ ಕಟ್ಟಿ ಮುಗಿಯವುದೇ ? ಎಂದಿತು. ಅಳಿಲು ಈ ಮಾತನ್ನು ಕೇಳಿ ಸಂಕಟಪಟ್ಟಿತು. ಇದನ್ನು ಪರ್ವತಾಗ್ರದಲ್ಲಿ ಕುಳಿತಿದ್ದ ರಾಮ ಗಮನಿಸಿದ. ಅಳಿಲಿನ ನಿಷ್ಠೆ ರಾಮನ ಹೃದಯವನ್ನು ಕರಗಿಸಿತು. ಅಲ್ಲಿಂದ ಎದ್ದುಬಂದು ಆ ಅಳಿಲನ್ನು ತನ್ನ ಕೋಮಲವಾದ ಕೈಗಳಿಂದ ಸವರಿ ನಿನ್ನ ಸೇವೆ ಅಮೋಘವಾದುದು ಎಂದು ಅದನ್ನು ಸಂತೈಸಿದ. ಅಳಿಲಿನ ಬೆನ್ನಿನಮೇಲೆ ಇರುವ ಮೂರು ಪಟ್ಟೆ ರಾಮನ ಅನುಗ್ರಹದ ದ್ಯೋತಕ ಎನ್ನುತ್ತಾರೆ.

ಎಲ್ಲ ವಾನರರೂ ಭುಜದಮೇಲೆ, ತಲೆಯಮೇಲೆ ಬಂಡೆಗಳನ್ನು ಹೊತ್ತು ತರುತ್ತಿದ್ದರು. ಹನುಮಂತನೂ ತಂದ ತಲೆಯಮೇಲೆ ಒಂದು ನಾಲ್ಕು ಬಂಡೆಗಳು. ಎರಡು ಭುಜಗಳಮೇಲೂ ಒಂದೊಂದು ದೊಡ್ಡ ಶಿಖರ, ಕಂಕುಳಲ್ಲಿ ಇರಿಕಿಕೊಂಡು ಎರಡು ಬಂಡೆಗಳು. ಎರಡು ಕಾಲುಗಳಿಂದ ದೂಡುತ್ತ ಎರಡು ಬಂಡೆಗಳು—ಹೀಗೆ ಪ್ರಪಂಚದಲ್ಲಿರುವ ಪರ್ವತಗಳೆಲ್ಲ ಒಟ್ಟಾಗಿ ಸಮುದ್ರದಲ್ಲೇ ಬಂದು ಸೇರಿದುವೊ ಎಂಬಂತೆ ಇದ್ದಿತು.

ಎಲ್ಲವನ್ನೂ ನಳ ಮುಟ್ಟಿ ಸಮುದ್ರದಲ್ಲಿ ಇರಿಸುತ್ತಿದ್ದ. ನೋಡಿದ ಹನುಮಂತ. ನಳನ ಹಸ್ತಸ್ಪರ್ಶಕ್ಕಾಗಿ ಬಂಡೆಗಳ ರಾಶಿಯೇ ಸಾಲುಸಾಲಾಗಿ ನಿಂತಿತ್ತು. ಇವನ್ನೆಲ್ಲ ಯಾವಾಗ ನಳ ಮುಟ್ಟುವುದು ? ಯಾವಾಗ ಸೇತುಬಂಧನ ? ಎಂದುಕೊಂಡ. ನಳ ಮುಟ್ಟದೆ ಇದ್ದರೆ ಬಂಡೆ

ಸಮುದ್ರದಲ್ಲಿ ಮುಳುಗುತ್ತದೆ. ಏನು ಮಾಡುವುದು ? ಎಂದು ಯೋಚಿಸಿದ. ಎಲ್ಲದಕ್ಕೂ ಸಿದ್ಧೌಷಧ ರಾಮ ಮಂತ್ರ. ಅಕ್ಷೋಭ್ಯವಾದ ಸಾಗರವನ್ನೇ ರಾಮನ ಅನುಗ್ರಹದಿಂದ ಗೋಷ್ಪಾದ ಜಲದಂತೆ ಹಾರಿದ ಧೀರ ಹನುಮಂತ ಹೇಳಿದ, "ವಾನರರೆ ! ಒಂದು ಬಂಡೆಯಮೇಲೆ "ರಾ" ಎಂದೂ ಇನ್ನೊಂದು ಬಂಡೆಯಮೇಲೆ "ಮ" ಎಂದೂ ಬರೆಯಿರಿ. ಸಮುದ್ರದಲ್ಲಿ ಹಾಕಿರಿ" ಎಂದ. ಅದರಂತೆಯೇ ವಾನರ ವೀರರು "ರಾ" ಎಂದು ಒಂದು ಬಂಡೆಯಮೇಲೆ "ಮ" ಎಂದು ಮತ್ತೊಂದು ಬಂಡೆಯಮೇಲೆ ಬರೆದು ಹಾಕಿದರು. ಆಶ್ಚರ್ಯವೋ ಎಂಬಂತೆ ಎರಡೂ ಬಂಡೆಗಳೂ ಒಂದಕ್ಕೊಂದು ಕೂಡಿಕೊಂಡು ಸಮುದ್ರದಲ್ಲಿ ತೇಲತೊಡಗಿದವು. ನಳ ತನ್ನ ಸಹಚರರೊಡನೆ ಸೇತುವೆ ನಿರ್ಮಿಸತೊಡಗಿದ.

ರಾಮ ಎಲ್ಲವನ್ನೂ ನೋಡುತ್ತಿದ್ದ "ನನ್ನ ನಾಮಕ್ಕೇ ಇಷ್ಟು ಮಹಿಮೆ ! ಎಂದ ಮೇಲೆ ಸ್ವತಃ ನಾನೇ ಸಮುದ್ರದಲ್ಲಿ ಕಲ್ಲನ್ನು ಹಾಕಿದರೆ ಏನಾಗುತ್ತದೆ ನೋಡುವ" ಎಂದು ಸಮುದ್ರದ ಒಂದು ಭಾಗದ ತೀರಕ್ಕೆ ಹೋದ. ಯಾರೂ ಸಮೀಪದಲ್ಲಿಲ್ಲದೆ ಇರುವುದನ್ನು ನೋಡಿ ಮೆಲ್ಲಗೆ ಒಂದು ಕಲ್ಲನ್ನು ಸಮುದ್ರದಲ್ಲಿ ಹಾಕಿದ. ಅದು ಮುಳುಗಿಹೋಯಿತು. ರಾಮನಿಗೆ ಆಶ್ಚರ್ಯ ! "ಇದೇನು"ನನ್ನ ಹೆಸರು ಬರೆದ ಬಂಡೆ ತೇಲುತ್ತದೆ, ನಾನೇ ಸ್ವತಃ ಕೈಯಿಂದ ಬಿಟ್ಟ ಕಲ್ಲು ಮುಳುಗಿತಲ್ಲಾ" ಎಂದು.

ಅದೇ ತಾನೇ ಮೇರು ಪರ್ವತ ಪ್ರದೇಶದಿಂದ ಬಂಡೆಗಳನ್ನು ಹೊತ್ತು ತರುತ್ತಿದ್ದ ಹನುಮ ರಾಮನಿಗಿದಿರಾದ. ರಾಮ ಮಾಡಿದ ಕಾರ್ಯವನ್ನು ನೋಡಿದ, ಹನುಮಂತ. ದೇವನ ಅಂತರ್ಯವನ್ನರಿತ ಭಕ್ತ ಹನುಮ.

"ಪ್ರಭು ! ನೀ ಹಾಕಿದ ಕಲ್ಲು ಮುಳುಗಿತು. ಇದರಲ್ಲಿ ಆಶ್ಚರ್ಯವಿಲ್ಲ ! ನೀನು ಕೈಹಿಡಿದವರು, ನೀನು ಕೈ ಹಿಡಿದೆತ್ತಿದವರು ಮಾತ್ರ ಮುಳುಗದೆ ಉದ್ಧಾರವಾಗುತ್ತಾರೆ. ನೀ ಕೈ ಬಿಟ್ಟರೆ ಮುಳುಗುತ್ತಾರೆ ಎಂದು ಸೂಚಿಸಿತು ಅದು, ನೀ ಕೈ ಬಿಟ್ಟ ಮೇಲೆ ಆ ಕಲ್ಲು ಮುಳುಗದೆ ಇದ್ದೀತೆ!" ಎಂದ. ಭಗವಂತನ ಭಕ್ತರು ಈ ರೀತಿಯಾಗಿ ಹಲವಾರು ವಿಧದಲ್ಲಿ ಸೇತುಬಂಧನ ಪ್ರಕರಣವನ್ನು ಅನುಭವಿಸಿದ್ದಾರೆ. ಉತ್ಸಾಹದಿಂದ ಕಪಿವೀರರು ಸೇತುವೆಯನ್ನು ಕಟ್ಟತೊಡಗಿದರು. ಮಹಾಕಾಯರಾದ ಆನೆಯಂಥ ಪರಾಕ್ರಮವುಳ್ಳ ಆ ವಾನರವೀರರು ಮೊದಲನೆಯ ದಿನ ಹದಿನಾಲ್ಕು ಯೋಜನ ಉದ್ದ ಸೇತುವೆಯನ್ನು ನಿರ್ಮಿಸಿದರು.

ಭಯಂಕರ ಆಕಾರವುಳ್ಳ ತೇಜಸ್ವಿಗಳಾದ ವಾನರರು ಎರಡನೆಯ ದಿನ ಇಪ್ಪತ್ತು ಯೋಜನ ಉದ್ದ ಸೇತುವೆಯನ್ನೂ, ಮೂರನೆಯ ದಿನ ಇಪ್ಪತ್ತೊಂದು ಯೋಜನವನ್ನೂ, ನಾಲ್ಕನೆಯ ದಿನ ಇಪ್ಪತ್ತೆರಡು ಯೋಜನವನ್ನೂ, ಐದನೆಯ ದಿನ ಇಪ್ಪತ್ಮೂರು ಯೋಜನ ದೂರ ಸೇತುವೆಯನ್ನೂ ಕಟ್ಟಿ ಪೂರೈಸಿದರು. ಸೇತುವೆಯನ್ನು ಕಟ್ಟುತ್ತಿದ್ದಂತೆಯೇ ವಾನರರು ಸಮುದ್ರದ ಉತ್ತರ ತೀರವನ್ನು ಸೇರಿದರು. ಸಮುದ್ರದ ಆಚೆಯ ದಡದಲ್ಲಿ ಗದಾಪಾಣಿಯಾಗಿ ವಿಭೀಷಣ ಸೇತುವೆಯನ್ನು ರಕ್ಷಿಸುತ್ತಿದ್ದ. ಯಾರಾದರೂ ದುಷ್ಟ ರಾಕ್ಷಸರು ಸೇತುವೆಯನ್ನು ನಾಶಮಾಡಲು ಯತ್ನಿಸಿದರೆ ಅವರುಗಳನ್ನು ಸದೆಬಡಿಯಲು ಸಿದ್ಧನಾಗಿ ನಿಂತಿದ್ದ.

ಸೇತುಬಂಧನವಾಯಿತು. ವಿಶಾಲವಾದ ಸಾಗರದ ಮಧ್ಯೆ ಆ ಸೇತು ನಾರೀಮಣಿಯ ತಲೆಯ ಮಧ್ಯದ ಸೀಮಂತದಂತೆ (ಬೈತಲೆ) ಶೋಭಿಸುತ್ತಿತ್ತು.

ದೇವ ಗಂಧರ್ವ, ಸಿದ್ಧಸಾಧ್ಯರೂ, ಮಹರ್ಷಿಗಳೂ ಬಂದು ಈ ಬೃಹತ್ ಸೇತುವೆಯನ್ನು ನೋಡಿದರು. ಸಮಸ್ತ ಭೂತಗಳೂ ಬೆಕ್ಕಸಬೆರಗಾಗಿ ನೋಡಿದವು. ಮನಸ್ಸಿನಿಂದ ಊಹಿಸಲೂ ಅಸಾಧ್ಯವಾದ ಸೇತುವೆ.

**ತಾನಿಕೋಟಿ ಸಹಸ್ರಾಣಿ ವಾನರಾಣಾಂ ಮಹೌಜಸಾಂ ।**

**ಬಧ್ನಂತಸ್ಸಾಗರೇ ಸೇತುಂ ಜಗ್ಮುಃಪಾರಂ ಮಹೋದಧೇಃ ॥**

ಸೇತುವೆಯನ್ನು ಕಟ್ಟಿ ಆದಮೇಲೆ ಸುಗ್ರೀವ ರಾಮನನ್ನು ಕುರಿತು ರಾಘವ, ನೀನು ಆಂಜನೇಯನ ಹೆಗಲನ್ನೇರು, ಲಕ್ಷ್ಮಣ ಅಂಗದನ ಬೆನ್ನಿನ ಮೇಲೇರಲಿ. ಈ ಇಬ್ಬರು ವಾನರರೂ ಆಕಾಶಮಾರ್ಗದಲ್ಲಿ ಹೋಗುತ್ತಾರೆ ಎಂದ. ಅದರಂತೆ ಆಂಜನೇಯ ರಾಮನನ್ನೂ, ಅಂಗದ ಲಕ್ಷ್ಮಣನನ್ನೂ ಏರಿಸಿಕೊಂಡು ಅಕ್ಷೋಭ್ಯವಾದ ಸಾಗರವನ್ನು ದಾಟಿ ಲಂಕೆಯನ್ನು ಸೇರಿದರು.

ಉಳಿದ ಎಲ್ಲ ವಾನರರೂ ಹೊರಟರು. ಅವರು ಹೊರಟ ವೈಖರಿ ವಿಚಿತ್ರವಾಗಿತ್ತು. ಕೆಲವರು ಹಾರಿಹೋದರು, ಕೆಲವರು ನೆಗೆಯುತ್ತಾ, ಕೆಲವರು ಈಸುತ್ತಾ, ಮತ್ತೆ ಕೆಲವರು ಸಂತೋಷದಿಂದ ಕುಪ್ಪಳಿಸುತ್ತಾ, ಹೀಗೆ ಒಬ್ಬೊಬ್ಬ ವಾನರರೂ ಉತ್ಸಾಹದಿಂದ ತುಂಬಿ ತುಳುಕುತ್ತಾ ಹೊರಟರು.

ಅಧ್ಬುತವಾದ ಈ ಸೇತುಬಂಧನದ ಕಾರ್ಯವನ್ನು ದೇವತೆಗಳು, ಗಂಧರ್ವರು, ಋಷಿಗಳು, ಸಿದ್ಧರು, ಚಾರಣರು ಎಲ್ಲ ಕೊಂಡಾಡಿದರು.

**ಜಯಸ್ವ ಶತ್ರೂನ್ನರದೇವ ! ಮೇದಿನೀಂ**
**ಸಸಾಗರಾಂ ಪಾಲಯ ಶಾಶ್ವತೀಸ್ಸಮಾಃ ।**
**ಇತೀವ ರಾಮಂ ನರದೇವ ಸತ್ಕೃತಂ**
**ಶುಭೈರ್ವಚೋಭಿರ್ವಿವಿಧೈರಪೂಜಯನ್ ॥**

ರಾಮಾ ! ಶೀಘ್ರವಾಗಿ ರಾವಣನನ್ನು ನಿಗ್ರಹಿಸಿ ಅಖಂಡ ಭೂಮಂಡಲವನ್ನು ಪರಿಪಾಲಿಸು! ನಿನಗೆ ಮಂಗಳವಾಗಲಿ ! ಎಂದು ಎಲ್ಲರೂ ರಾಮನನ್ನು ಆಶೀರ್ವದಿಸಿ ಮಂಗಳ ವಚನಗಳಿಂದ ಸತ್ಕರಿಸಿದರು.

ಸೇತುವನ್ನು ದಾಟಿ ಲಂಕೆಗೆ ಪ್ರವೇಶಿಸಿದ ರಾಮ, ಲಂಕಾಪುರಿಯ ಸಮುದ್ರ ತಟದಲ್ಲಿ ಫಲ ಮೂಲಗಳು ಸಮೃದ್ಧಿಯಾಗಿರುವ ಕಡೆ ವಾನರರನ್ನು ತಂಗುವಂತೆ ಆಜ್ಞಾಪಿಸಿದ. ಪಕ್ಕದಲ್ಲಿದ್ದ ಲಕ್ಷ್ಮಣನನ್ನು ಪ್ರೀತಿಯಿಂದ ಆಲಿಂಗಿಸಿದ ರಾಮ, "ಸೌಮಿತ್ರಿ, ನೋಡು ! ಅನೇಕ ಅಪಶಕುನಗಳು ತೋರಿಬರುತ್ತಿದೆ. ವಾಯು ಧೂಳಿನ ಕಣಗಳನ್ನು ತುಂಬಿಕೊಂಡು ಬೀಸುತ್ತಿದೆ. ಸೂರ್ಯನ ಸುತ್ತ ನೀಲವರ್ಣ ಸುತ್ತಿಕೊಂಡಿದೆ. ಚಂದ್ರನ ಕಿರಣಗಳು ಸ್ವಭಾವಕ್ಕೆ ವಿರುದ್ಧವಾಗಿ ತಾಪದಾಯಕ ವಾಗಿವೆ. ನಕ್ಷತ್ರಗಳೆಲ್ಲ ಧೂಳಿನಿಂದ ಆವೃತವಾಗಿ ಕಾಂತಿಹೀನವಾಗಿವೆ. ಹದ್ದು, ಕಾಗೆ, ಗೂಬೆ, ನರಿ ಮುಂತಾದ ಪಶುಪಕ್ಷಿಗಳು ವಿಕೃತವಾದ ಸ್ವರದಲ್ಲಿ ಕಿರುಚುತ್ತಿವೆ. ಘನವಾಗಿ ಆಕಾಶದಲ್ಲಿ ಮೇಘಗಳು ಆವರಿಸಿವೆ. ಅವುಗಳು ನೀರನ್ನು ಸುರಿಸುವುದಕ್ಕೆ ಬದಲು ರಕ್ತದ ಹನಿಗಳನ್ನು ಸುರಿಸುತ್ತಿವೆ. ಲಕ್ಷ್ಮಣಾ, ಈ ಅಪಶಕುನಗಳನ್ನೆಲ್ಲ ಗಮನಿಸಿದರೆ ಮಹಾವಿಪತ್ತು, ತನ್ಮೂಲಕ

ಮಹಾನಾಶ ಆಗುವಂತೆ ತೋರುತ್ತದೆ. ಸೌಮಿತ್ರಿ ! ನಾವು ಬೇಗ ಲಂಕೆಯನ್ನು ಪ್ರವೇಶಿಸಿ ಅದರ ಮೇಲೆ ಧಾಳಿ ಮಾಡಬೇಕಾಗಿದೆ ಈಗ" ಎಂದ

ಹೀಗೆ ಹೇಳಿದ ರಾಮ ತಾನು ಧನುರ್ಧಾರಿಯಾಗಿ ಲಂಕಾಪುರಿಗೆ ಅಭಿಮುಖವಾಗಿ ಹೊರಟ. ಸುಗ್ರೀವ, ಲಕ್ಷ್ಮಣ, ವಿಭೀಷಣ, ಇತರ ವಾನರರೂ ರಾಮನನ್ನು ಅನುಸರಿಸಿದರು.

ವಾನರವೀರರೆಲ್ಲ ಶತ್ರುಗಳ ವಧೆಯಲ್ಲಿ ಅತ್ಯುತ್ಸಾಹವುಳ್ಳವರಾಗಿ ವೀರಗರ್ಜನೆ ಮಾಡುತ್ತ ಹೊರಟರು. ತನಗೆ ಪ್ರಿಯವನ್ನುಂಟುಮಾಡುವುದರಲ್ಲಿ ವ್ಯಸ್ತಚಿತ್ತರಾದ ಆ ವಾನರವೀರರ ಚೇಷ್ಟೆ ಗಳಿಂದ ರಾಮನಿಗೆ ಮಹದಾನಂದವಾಯಿತು.

**ರಾಘವಸ್ಯ ಪ್ರಿಯಾರ್ಥಂತು ಧೃತಾನಾಂ ವೀರ್ಯಶಾಲಿನಾಂ ।**
**ಹರೀಣಾಂ ಕರ್ಮ ಚೇಷ್ಟಾಭಿಸ್ತು ತೋಷ ರಘುಪುಂಗವಃ ॥**

ತನಗೆ ಜಯ ಕಟ್ಟಿಟ್ಟಿದ್ದು ಎಂಬುದನ್ನು ವಾನರರ ಈ ಉತ್ಸಾಹವೇ ಸೂಚಿಸುತ್ತಿತ್ತು.

ನಾನಾ ಧ್ವಜಪತಾಕೆಗಳಿಂದ ಅಲಂಕೃತವಾದ ಲಂಕೆಯನ್ನು ನೋಡಿದ ರಾಮ. ಮನಸ್ಸಿನಲ್ಲೇ "ಈ ರಮ್ಯವಾದ ಲಂಕಾಪುರಿಯಲ್ಲೇ ಮನೋರಮೆಯಾದ ನನ್ನ ಸೀತೆ ಅಂಗಾರಕನಿಂದ ಹಿಡಿಯಲ್ಪಟ್ಟ ರೋಹಿಣಿಯಂತೆ ಇದ್ದಾಳೆ" ಎಂದು ಚಿಂತಿಸಿದ. ಮುಂದೆ, ಲಕ್ಷ್ಮಣನನ್ನು ಕುರಿತು "ಸೌಮಿತ್ರಿ ! ನೋಡು ! ಲಂಕಾಪುರಿ ಎಷ್ಟು ಭವ್ಯವಾಗಿದೆ ! ಹಿಂದೆ ವಿಶ್ವಕರ್ಮ ತನ್ನ ಯೋಗಶಕ್ತಿಯಿಂದ ನಿರ್ಮಿಸಿದ ಪುರಿ ಎಷ್ಟು ರಮಣೀಯವಾಗಿದೆ ನೋಡು. ಎತ್ತರವಾದ ಪ್ರಾಸಾದಗಳಿಂದಲೂ, ರಮ್ಯವಾದ ವನ–ಉಪವನಗಳಿಂದಲೂ ಧ್ವಜ ಪತಾಕೆಗಳಿಂದಲೂ, ಕಾಂಚನಮಯವಾದ ತೋರಣಗಳಿಂದಲೂ ಇಂದ್ರನ ಅಮರಾವತಿಯಂತೆ ಕಂಗೊಳಿಸುತ್ತಿದೆ ಲಂಕೆ. ಇದರಲ್ಲಿ ಸರ್ವದಾ ಫಲಪುಷ್ಪಗಳಿಂದ ತುಂಬಿರುವ ಚೈತ್ರರಥದಂಥ ಉದ್ಯಾನವನಗಳು ಎಷ್ಟು ರಮ್ಯವಾಗಿವೆ ನೋಡು !

**ಪಶ್ಯಮತ್ತ ವಿಹಂಗಾನಿ ಪ್ರಲೀನ ಭ್ರಮರಾಣಿ ಚ ।**
**ಕೋಕಿಲಾ ಕುಲ ಷಂಡಾನಿ ಧೋಧವೀತಿ ಶಿವೋನಿಲಃ ॥**

ಈ ಲಂಕೆಯ ಅಧೀಶ್ವರನಾದ ಆ ರಾವಣನನ್ನು ನಿಗ್ರಹಿಸಿ ಸೀತೆಯನ್ನು ಈಗಲೇ ಪಡೆಯುವ ಯತ್ನಮಾಡುತ್ತೇನೆ" ಎಂದು ಮತ್ತೆ ಸೈನ್ಯವನ್ನು ಯಥಾಸ್ಥಾನದಲ್ಲಿ ನಿಲ್ಲುವಂತೆ ಆಜ್ಞಾಪಿಸಿದ.

"ಸೇನೆಯ ಮಸ್ತಕಭಾಗದಲ್ಲಿ ಧನುರ್ಧಾರಿಯಾಗಿ ಲಕ್ಷ್ಮಣನೊಡನೆ ನಾನು ನಿಲ್ಲುತ್ತೇನೆ. ಸೇನೆಯ ಹೃದಯ ಭಾಗದಲ್ಲಿ ನೀಲ ಅಂಗದನೊಂದಿಗೆ ನಿಲ್ಲಲಿ. ಬಲಾಢ್ಯನಾದ ಗಂಧಮಾದನ ಸೇನೆಯ ಪಶ್ಚಿಮ ಭಾಗದಲ್ಲಿರಲಿ. ಸೇನೆಯ ಬಲ ಭಾಗವನ್ನು ಪರಾಕ್ರಮಿಯಾದ ಗಂಧಮಾಧನ ರಕ್ಷಿಸಲಿ. ಜಾಂಬವಂತ, ಸುಷೇಣ, ವೇಗದರ್ಶಿ, ಈ ಮೂವರು ಸೇನೆಯ ಉದರಭಾಗವನ್ನು ಸಂರಕ್ಷಿಸಲಿ. ಮಹಾಪರಾಕ್ರಮಿಯಾದ ವಾನರರಾಜ ಸುಗ್ರೀವ ಸೇನೆಯ ಹಿಂಭಾಗವನ್ನು ರಕ್ಷಿಸಲಿ" ಎಂದು ಅದರಂತೆ ಸೇನೆಯನ್ನು ವ್ಯೂಹಾಕಾರವಾಗಿ ನಿಲ್ಲಿಸಿದ.

ರಾಮ ಸೇತುಬಂಧನ ಮಾಡಿ ಸಮುದ್ರದಾಟಿ ಲಂಕೆಯ ಹೊರಾವರಣದಲ್ಲಿ ಬಂದಿಳಿದಿರುವುದನ್ನು ಕಂಡ ರಾವಣ. ತನ್ನ ಮಂತ್ರಿಗಳಾದ ಶುಕ–ಸಾರಣ ಎಂಬ ಇಬ್ಬರು ರಾಕ್ಷಸರನ್ನು ಕರೆದು

ರಾಮನ ಬಲಾಬಲಗಳನ್ನು ತಿಳಿದುಬರುವಂತೆ ಕಳುಹಿಸಿದ. ಅವರು ವಾನರರಂತೆಯೇ ರೂಪತಾಳಿ ರಾಮನ ಸೈನ್ಯದ ಬಲಾಬಲವನ್ನು ತಿಳಿಯಲು ಬಂದರು. ಸ್ವಲ್ಪವೂ ಜಾಗವಿಲ್ಲದಂತೆ ಎಲ್ಲೆಲ್ಲೂ ಆವರಿಸಿರುವ ವಾನರರ ಸೇನೆಯನ್ನು ಅವರಿಂದ ಎಣಿಸಲು ಆಗಲಿಲ್ಲ. ಆದರೂ, ಅವರು ವಾನರರ ಮಧ್ಯೆ ನುಸುಳಿ ಎಲ್ಲವನ್ನೂ ಸಂಗ್ರಹಿಸುತ್ತಾ ಬಂದರು. ಹಾಗೆ ಅವರು ಬರುತ್ತಿದ್ದಾಗ ದೂರದಿಂದಲೇ ಅವರನ್ನು ವಿಭೀಷಣ ನೋಡಿದ. ತಕ್ಷಣ ಅವರಿಬ್ಬರನ್ನೂ ಹಿಡಿದುಕೊಂಡು ಬಂದು ರಾಮನ ಮುಂದೆ ತಂದು ನಿಲ್ಲಿಸಿದ. ರಾಘವ! ಇವರಿಬ್ಬರೂ ರಾವಣನ ಮಂತ್ರಿಗಳು. ಶುಕ, ಸಾರಣ ಎಂಬ ಹೆಸರು ಇವರಿಗೆ. ರಾವಣನ ಆಜ್ಞೆಯಂತೆ ಬಲಾಬಲಗಳನ್ನು ತಿಳಿಯಲು ಬರುತ್ತಿದ್ದಾರೆ ಎಂದ.

ಶುಕ, ಸಾರಣರು ಭಯದಿಂದ ಗಡಗಡನೆ ನಡುಗುತ್ತಿದ್ದರು. ಅವರು ರಘುನಂದನ, ನಾವು ರಾವಣನ ಆಜ್ಞೆಯಂತೆ ಬಂದವರು. ನಮ್ಮನ್ನು ರಕ್ಷಿಸು ಎಂದರು. ಸರ್ವಭೂತಗಳಿಗೂ ಸದಾ ಹಿತವನ್ನೇ ಬಯಸುವ ರಾಘವ ಮುಗುಳುನಗೆಯಿಂದ ಶುಕ, ಸಾರಣರೇ, ನೀವು ಭಯಪಡಬೇಡಿ. ಶಸ್ತ್ರವಿಲ್ಲದವರನ್ನೂ, ದೂತರನ್ನೂ, ಅಂಜಿದವರನ್ನೂ ನಾನು ರಕ್ಷಿಸುತ್ತೇನೆ, ಕೊಲ್ಲುವುದಿಲ್ಲ. ನೀವು ರಾವಣನಿಂದ ಪ್ರೇರಿತರಾಗಿ ಬಂದಿದೀರಿ ಅಲ್ಲವೆ? ನಮ್ಮ ಬಲಾಬಲಗಳನ್ನು ಸಂಪೂರ್ಣವಾಗಿ ತಿಳಿದುಕೊಂಡಿರಾ ? ಹಾಗೆ ತಿಳಿದುಕೊಂಡಿದ್ದರೆ ನೀವು ಹೋಗಬಹುದು. ಇಲ್ಲವಾದರೆ ವಿಭೀಷಣನೇ ನಿಮಗೆ ವಾನರರ ಬಲಾಬಲಗಳನ್ನು ಸಂಪೂರ್ಣವಾಗಿ ತಿಳಿಸುತ್ತಾನೆ. ತಿಳಿದುಕೊಳ್ಳಿ ಎಂದ.

ಧರ್ಮವತ್ಸಲನಾದ ರಘುವೀರನ ಮಾತುಗಳನ್ನು ಕೇಳಿದ ಶುಕಸಾರಣರಿಗೆ ಹೋದ ಜೀವ ಮರಳಿ ಬಂದಂತಾಯಿತು. ಅವರಿಬ್ಬರೂ ಕೈಮುಗಿದು ದಾಶರಥಿ, ರಾಘವ, ನಿಮಗೆ ಜಯವಾಗಲಿ ! ನೀವು ಚಿರಂಜೀವಿಗಳಾಗಿರಿ ಎಂದು ಮಂಗಳಾಶಾಸನಮಾಡಿ ಅಲ್ಲಿಂದ ರಾವಣನ ಸಮೀಪಕ್ಕೆ ಹೋದರು.

ಶತ್ರುಗಳೂ ಹೊಗಳುವಂಥ ಗುಣ ರಾಮನದು. ಆದಕ್ಕೆ ಅವನನ್ನು "ರಿಪೂಣಾಮಪಿವತ್ಸಲಃ" ಎಂದಿರುವುದು. ರಾವಣನ ಬಳಿಗೆ ಬಂದ ಶುಕಸಾರಣರು ಇಬ್ಬರೂ "ಮಹಾರಾಜ ! ನೀವು ಹೇಳಿದಂತೆಯೇ ನಾವು ಹೋದೆವು. ವಿಷಯವನ್ನು ಸಂಗ್ರಹಿಸುತ್ತಿದ್ದಾಗ ವಿಭೀಷಣ ನಮ್ಮನ್ನು ಹಿಡಿದುಬಿಟ್ಟ. ಆ ಕರುಣಾಳುವಾದ ರಾಘವನ ದಯೆ ಇಲ್ಲದಿದ್ದಲ್ಲಿ ನಾವು ಇದುವರೆಗೆ ಯಮಲೋಕದಲ್ಲಿರಬೇಕಾಗಿತ್ತು. ಕರುಣಾಸಾಗರನಾದ ರಾಘವ ನಮ್ಮನ್ನು ಬಿಡಿಸಿದ. ಅಬ್ಬ ! ಅವನ ಅನುಕಂಪೆ ಎಂಥದು ! ಅವನ ವೀರ್ಯವೇನು ? ಶೌರ್ಯವೇನು ? ಅವನ ಗಾಂಭೀರ್ಯ ಎಷ್ಟು ? ಒಟ್ಟಿನಲ್ಲಿ ಮಹಾರಾಜ ! ರಾಮನನ್ನು ಜಯಿಸುವಂಥ ವೀರರು ಮೂರು ಲೋಕಗಳಲ್ಲೂ ಇಲ್ಲ.

ರಾಮ, ಲಕ್ಷ್ಮಣ, ಸುಗ್ರೀವ, ವಿಭೀಷಣ – ಈ ನಾಲ್ವರೂ ನಾಲ್ಕು ಲೋಕಪಾಲರಂತೆ ಇದ್ದಾರೆ. ವಾನರರ ಸಹಾಯವಿಲ್ಲದೆ ಈ ನಾಲ್ವರೇ ಲಂಕೆಯನ್ನು ಮುತ್ತಿ ಅದನ್ನು ಪೂರ್ಣವಾಗಿ ನಾಶಮಾಡಲು ಶಕ್ತರು. ರಾವಣ ! ಈ ನಾಲ್ವರೂ ಬೇಡ ! ರಾಮ ಒಬ್ಬನೇ ಸಾಕು ! ಅವನ ಬಾಣಗಳು ಧನುಸ್ಸಿನಿಂದ ಹೊರಬೀಳುವುದೇ ತಡ. ಲಂಕಾಪುರಿ ನಾಶವಾಗಿಬಿಡುತ್ತದೆ. ರಾಮನಂಥ ಅಪ್ರತಿಮ ವೀರನನ್ನು ಕಂಡು ಅರಿಯೆವು. ಆದ್ದರಿಂದ ಮಹಾಪ್ರಭು ! ಸೀತೆಯನ್ನು ರಾಮನಿಗೆ ಒಪ್ಪಿಸಿ ಅವನೊಡನೆ ಸಂಧಿ ಮಾಡಿಕೊಳ್ಳಿ. ಅದೇ ಶ್ರೇಯಸ್ಕರ. ಇಲ್ಲವಾದರೆ ಅಳಿವು ಖಂಡಿತ ಎಂದರು. ಶುಕ ಸಾರಣರ ಮಾತುಗಳನ್ನು ಕೇಳಿದ ರಾವಣ, ಸಾರಣನನ್ನು ಕುರಿತು "ಸಾರಣ ! ನೀವಿಬ್ಬರೂ ವಾನರರ ಕೈಗೆ ಸಿಕ್ಕಿಬಿದ್ದು ಸರಳಿದ್ದೀರಿ. ಆದ್ದರಿಂದ ಹೀಗೆ ಹೇಳುತ್ತಿ

ದೀರಿ. ಯಾರೇ ಬಂದು ಹೇಳಿದರೂ ನಾ ಮಾತ್ರ ಸೀತೆಯನ್ನು ರಾಮನಿಗೆ ಒಪ್ಪಿಸುವುದಿಲ್ಲ. ಇದು ಖಂಡಿತ. ದೇವತೆಗಳು, ದಾನವರು, ಯಕ್ಷರು, ಗಂಧರ್ವರು ಇವರನ್ನೆಲ್ಲ ಜಯಿಸಿದ ನನಗೆ ಈ ರಾಮ ನಾಟಿಯೆ ?" ಎಂದು ಕಠೋರವಾಗಿ ಹೇಳಿ ರಾವಣ ಎತ್ತರವಾದ ಪ್ರಾಸಾದ ವನ್ನು ಹತ್ತಿನಿಂತ. ಅದರ ಮೂಲಕ ಅವನು ಸಮಸ್ತ ವಾನರ ಸೈನ್ಯವನ್ನೂ ನೋಡಬಹು ದಾಗಿದ್ದಿತು. ಎತ್ತರವಾದ ಮಹಡಿಯ ಮೇಲೆ ನಿಂತು ಎರಡನೆಯ ಸಮುದ್ರದಂತಿರುವ ವಾನರ ಸೈನ್ಯವನ್ನು ನೋಡಿದ. ಪಕ್ಕದಲ್ಲಿದ್ದ ಗೂಢಚಾರ ಸಾರಣನನ್ನು ಕುರಿತು ಸಾರಣ ! ಈ ವಾನರ ಸೈನ್ಯದಲ್ಲಿ ಮುಖ್ಯರಾದವರು ಯಾರು ಯಾರು ? ಈ ಸೈನ್ಯದ ಬಲ ಎಷ್ಟು ? ಯಾರು ಹೆಚ್ಚು ಪರಾಕ್ರಮಿಗಳು ? ಸುಗ್ರೀವ ಯಾರ ಮಾತನ್ನು ಕೇಳುತ್ತಾನೆ ? ಎಲ್ಲವನ್ನೂ ತಿಳಿಸು ? ಎಂದ.

ಸಾರಣ ವಾನರ ಪ್ರಮುಖರ ಪರಿಚಯ ಮಾಡಿಕೊಡುತ್ತಾ ಹೇಳಿದ. "ಮಹಾರಾಜ ! ಅದೋ ನೋಡಿ ! ಬೆಟ್ಟದಂಥ ಕಪಿ ಲಂಕೆಯತ್ತ ನೋಡಿ ಗರ್ಜನ ಮಾಡುತ್ತಾ ಲಕ್ಷಾಂತರ ವಾನರರೊಂದಿಗೆ ಸಿದ್ಧವಾಗಿ ನಿಂತಿರುವವನೇ ನೀಲ. ಅವನೇ ಈ ವಾನರ ಸೈನದ ಅಧಿಪತಿ. ಅವನಿಗೆ ಸಹಾಯಕನಾಗಿ ನೋಡಿ ! ಪರ್ವತ ಶಿಖರದಂತ ಎತ್ತರವಾದ ದೇಹವುಳ್ಳ ಮಹಾಪರಾ ಕ್ರಮಿ ಅಂಗದ ನಿಂತಿದಾನೆ. ಅವನೇ ನೀವು ತಿಳಿದಿದ್ದ ವಾಲಿಯ ಮಗ. ತಂದೆಯಂತೆಯೇ ಪರಾ ಕ್ರಮಿ ಎನಿಸಿದ್ದಾನೆ. ಅವನು ವಾನರರಿಗೆಲ್ಲ ಯುವರಾಜ ! "ಅಂಗದನ ಹಿಂದೆ ವಿಶಾಲವಾದ ಸೈನ್ಯದಿಂದ ಆವೃತವಾಗಿ ನಿಂತಿದಾನಲ್ಲ ! ಅವನೇ ನಳ ! ವಿಶ್ವಕರ್ಮನ ಮಗ ! ಈ ಸೇತುವೆ ಯನ್ನು ಕಟ್ಟಿದವ ! ಮಹಾಪರಾಕ್ರಮಿ". ಚಂದ್ರನ ಕಾಂತಿಯಂತ ಬಿಳುಪಾಗಿ ಇದಾನಲ್ಲ! ಅವನೇ "ಶ್ವೇತ" ಎಂಬ ವಾನರ. ಅವನು ಮಹಾಶೂರ. ಸುಗ್ರೀವನ ಬಳಿಗೆ ಅಡಿಗಡಿಗೆ ಹೋಗಿ ಅವನ ಆಜ್ಞೆಯಂತೆ ಸೈನ್ಯವನ್ನು ವಿಭಾಗಿಸಿ ಅದರ ವ್ಯವಸ್ಥೆ ಮಾಡುತ್ತಾನೆ. ಸೈನಿಕರನ್ನು ತನ್ನ ಬುದ್ಧಿ ವಂತಿಕೆಯಿಂದ ಸದಾ ಹರ್ಷಿತರನ್ನಾಗಿ ಮಾಡುತ್ತಾನೆ.

ಗೋಮತೀ ನದಿಯ ತಟದಲ್ಲಿ ಕೋಟ್ಯಾಂತರ ವಾನರರ ಅಧಿಪತಿಯಾಗಿ ಮೆರೆಯುವ ಆ ವಾನರರನ್ನು ನೋಡಿ ! ಅವನೇ "ಕುಮುದ" ಎಂಬ ಹೆಸರಿನ ವಾನರರ ಅಧಿಪತಿ. ಅಲ್ಲಿ ನೋಡಿ! ಶ್ವೇತ, ಪೀತ, ಶ್ಯಾಮಲ ವರ್ಣದ ನಾನಾ ವಾನರರನ್ನು ತನ್ನತ್ತ ಆಕರ್ಷಿಸಿ ಅವರನ್ನೆಲ್ಲ ಉತ್ಸಾಹ ಗೊಳಿಸುತ್ತಿದಾನಲ್ಲ ! ಆ ವಾನರನೇ ಕೋಟ್ಯಾಂತರ ವಾನರರಿಗೆಲ್ಲ ಅಧಿಪತಿ. ''ಚಂಡ" ಎಂದು ಹೆಸರು ಅವನಿಗೆ. ರಾಜಾ ! ಅಲ್ಲಿ ನೋಡಿ ! ಯಾರು ಭಯಂಕರವಾದ ಸಿಂಹನಾದ ಮಾಡುತ್ತಾ ಲಂಕೆಯತ್ತ ತನ್ನ ಕೆಂಪಾದ ಕಣ್ಣುಗಳಿಂದ ತೀಕ್ಷ್ಣವಾಗಿ ದುರದುರನೆ ನೋಡುತ್ತ ಇದಾನೆಯೋ ತನ್ನ ಕೆಂಪಾದ ಕಣ್ಣುಗಳಿಂದಲೇ ಲಂಕೆಯನ್ನು ಸುಟ್ಟುಬಿಡುವಂತ ನೋಡುತ್ತಿದಾನೆಯೋ ಅವನೇ ''ರಂಭ" ಎಂಬ ಹೆಸರಿನ ವಾನರ. ಅವನು ವಿಂಧ್ಯ, ಸಹ್ಯ ಪರ್ವತಗಳಲ್ಲಿ ಸಂಚರಿಸುವವ. ಕೋಟ್ಯಾಂತರ ಪರಾಕ್ರಮಿಗಳಾದ ವಾನರರು ಅವನನ್ನು ಅನುಸರಿಸುತ್ತಾರೆ. ಅವನಂಥ ಪರಾ ಕ್ರಮಿ ಬೇರೊಬ್ಬರಿಲ್ಲ. ಅಲ್ಲಿ ನೋಡಿ! ಈ ಕಡೆಯಲ್ಲಿ ಜೋರಾಗಿ ಆಕಳಿಸುತ್ತಾ. ತನ್ನ ಕಿವಿಗಳನ್ನು ಅಗಲವಾಗಿ ಹಿಗ್ಗಿಸಿಕೊಂಡವನಾಗಿ, ಲಂಕೆಯತ್ತ ತೀಕ್ಷ್ಣವಾದ ದೃಷ್ಟಿಯನ್ನು ಬೀರುತ್ತಿದಾನಲ್ಲ ! ಅವನೇ "ಶರಭ" ಎಂಬ ಮಹಾ ವಾನರ. ಅವನು ಸೈನ್ಯದ ಹಿಂದೆ ಇರಲು ಇಚ್ಛಿಸುವುದಿಲ್ಲ. ''ಭಯ'' ಎಂದರೆ ಏನು ? ಎಂದೇ ಅರಿಯದವನು. ಯಾವಾಗಲೂ ಮುಂಭಾಗದಲ್ಲಿ ನಿಂತು ಶತ್ರುಗಳನ್ನು ತೀರಿಸುವುದರಲ್ಲಿ ಗಟ್ಟಿಗ. ಒಂದೂವರೆ ಲಕ್ಷ ವಾನರರು ಅವನನ್ನು ಹಿಂಬಾಲಿಸಿ ನಿಂತಿದಾರೆ.

ಮೇಘದಂತೆ ಗರ್ಜಿಸುತ್ತಾ, ದೇವತೆಗಳ ಸಮೂಹದಲ್ಲಿ ದೇವರಾಜ ಮಿಂಚಿಸಿರುವಂತೆ ತೋರುತ್ತಿದಾನಲ್ಲಾ! ಅವನೇ ದುರ್ಜಯನಾದ "ಪನಸ'' ಎಂಬ ವಾನರ ಯೋಧಪತಿ. ಅವನ ಕೈಕೆಳಗೆ ಐವತ್ತು ಲಕ್ಷ ಉಪ ಸೇನಾಪತಿಗಳಿದ್ದಾರೆ. ಪ್ರತಿಯೊಬ್ಬರಿಗೂ ತಮ್ಮದೇ ಆದ ಬೇರೆ ಬೇರೆ ಸೈನ್ಯಗಳಿವೆ.

ಸಮುದ್ರ ತೀರದಲ್ಲಿ ನಗೆಯುತ್ತ, ಕುಣಿಯುತ್ತ ಇರುವ ವಾನರ ಗುಂಪಿನ ಮಧ್ಯೆ ಇದಾನಲ್ಲ. ಭೀಮಕಾಯ ವಾನರ, ಅವನೇ "ವಿನತ" ಎಂಬ ಹೆಸರಿನ ವಾನರ. ಅವನು ಅರವತ್ತು ಲಕ್ಷ ಸೈನಿಕರಿಗೆ ಅಧಿಪತಿ.

ಆಗಲೇ ಯುದ್ಧ ಮಾಡಲು ಕಾತರನಾಗಿ ನಿಮ್ಮನ್ನು ಯುದ್ಧಕ್ಕೆ ಆಹ್ವಾನಿಸುತ್ತ ನಿಂತಿದಾನಲ್ಲ. ಅವನೇ ''ಕ್ರೋಧನ" ಎಂಬ ವಾನರ. ಅವನ ಕೈಕಳಗೆ ಲಕ್ಷಾಂತರ ಉಪ ಸೇನಾಧಿಪತಿಗಳಿದ್ದಾರೆ.

ಕೆಂಪು ಬಣ್ಣದ ಪರ್ವತಾಕಾರದ ಒಬ್ಬ ವಾನರ ಅಲ್ಲಿ ನಿಂತಿದಾನ ನೋಡಿ. ಅವನಿಗೆ ತನ್ನ ಬಲದ ಮೇಲೆ ಮಹಾವಿಶ್ವಾಸ. ಲಂಕೆಯತ್ತ ಹೇಗೆ ನುಗ್ಗಿಬರುತ್ತಿದಾನೆ ನೋಡಿ! ಅವನೇ ''ಗವಯ" ಎಂಬ ಹೆಸರಿನ ವಾನರ. ಅವನ ಕೈಕೆಳಗೆ ಎಪ್ಪತ್ತು ಲಕ್ಷ ವಾನರ ವೀರರಿದ್ದಾರೆ.

ಭಯಂಕರ ಕಾರ್ಯವನ್ನು ಮಾಡುತ್ತಿರುವ ಆ ಶ್ಯಾಮಲವರ್ಣದ ವಾನರನನ್ನು ನೋಡಿ, ಅವನೇ ''ಹರ" ಎಂಬ ಹೆಸರಿನ ಕಪಿ. ಅವನ ಕೈಕೆಳಗೆ ಸಾವಿರಾರು ವಾನರ ಅಧಿಪತಿಗಳಿದ್ದಾರೆ.

ಇತ್ತ ನೋಡಿ, ಕರಡಿಗಳ ಸಮೂಹವೇ ನಿಂತಿದೆ. ಈ ಕರಡಿಗಳು ಸಾಮಾನ್ಯವಲ್ಲ. ಕಾಮರೂಪಿಗಳು. ಈ ಕರಡಿಗಳ ನಾಯಕನೇ ''ಧೂಮ್ರ'' ಎಂಬ ನಾಯಕ.

ಧೂಮ್ರನ ಸಮೀಪದಲ್ಲಿ ನಿಂತಿರುವ ಆ ಕರಡಿಯನ್ನು ನೋಡಿ. ಆ ಕರಡಿ ಮಹಾಪರಾಕ್ರಮಿ. ಅವನೇ ಜಾಂಬವಂತ ಎಂಬ ಹೆಸರುಳ್ಳವ. ದೇವರಾಜನಾದ ಇಂದ್ರನಿಗೇ ಸಹಾಯ ಮಾಡಿದ ಧೀರ.

ಅಲ್ಲಿ ನೋಡಿ, ಕುಣಿಯುತ್ತ, ನೆಗೆಯುತ್ತ, ಶರೀರವನ್ನು ಹಿಗ್ಗಿಸುತ್ತಾ ತನ್ನ ಪರಾಕ್ರಮವನ್ನು ಪ್ರದರ್ಶಿಸುತ್ತಿದಾನಲ್ಲ. ಅವನೇ "ದಂಭ" ಎಂಬ ಹೆಸರಿನ ವಾನರ. ಅವನ ಕೈಕೆಳಗೂ ಕೋಟ್ಯಾಂತರ ವಾನರ ಸೇನೆಯುಂಟು. ಅವನು ಸೇನಾ ಸಹಿತನಾಗಿ ಇಂದ್ರನಿಗೂ ಸಹಾಯವನ್ನು ಮಾಡಿದ್ದಾನೆ.

ಅಲ್ಲಿ ಅತ್ಯಂತ ಎತ್ತರವಾಗಿ ನಿಂತಿದಾನಲ್ಲ ಅವನೇ "'ಸಂನಾದ" ಎಂಬ ಹೆಸರಿನ ವಾನರ. ಅವನು ಹನ್ನೆರಡು ಮೈಲಿ ಎತ್ತರದಲ್ಲಿರುವ ವಸ್ತುವನ್ನು ತನ್ನ ಕೈಯಿಂದಲೇ ತೆಗೆದುಕೊಳ್ಳಬಲ್ಲ. ಅಷ್ಟು ಎತ್ತರದ ನಿಲುವು ಅವನದು. ಅವನು ಲಕ್ಷಾಂತರ ವಾನರ ಯೋಧರ ಅಧಿಪತಿ.

ಅತ್ಯಂತ ತೇಜಸ್ವಿಯಾಗಿ ಬೆಳಗುತ್ತಿದಾನೆ ನೋಡಿ! ಆ ವಾನರನೇ "ಕ್ರಥನ" ಎಂಬುವನು. ಅಗ್ನಿದೇವನಿಗೆ ಸಮಾನವಾದ ಪರಾಕ್ರಮ ಅವನಿಗೆ. ಹತ್ತುಸಾವಿರ ಕೋಟಿ ವಾನರರಿಗೆ ಅಧಿಪ ಅವನು. ಇವನು ಈಶಾನ್ಯ ದಿಕ್ಕಿನಲ್ಲಿ ಕುಬೇರನೊಂದಿಗೆ ವಾಸಮಾಡುತ್ತಾನೆ. ಯುದ್ಧದಲ್ಲಿ ಇವನಷ್ಟು ಪರಾಕ್ರಮಿ ಮತ್ತೊಬ್ಬರಿಲ್ಲ,

ಆನೆಗಳನ್ನು ಮೀರಿಸುವ ಪರಾಕ್ರಮ ಹೊಂದಿರುವ ಸುಂದರ. ವಿಂಧ್ಯಪರ್ವತಗಳಂತೆ ನಿಂತಿರುವ ಆ ವಾನರದ್ವಯರನ್ನು ನೋಡಿ, ಅವರ ನಾಯಕ ಎನಿಸಿದವನೇ "ಪ್ರಮಾಥಿ" ಎಂಬ ವಾನರ. ಇವನು ಹತ್ತುಕೋಟಿ ವಾನರರಿಗೆ ಅಧಿಪತಿಯಾಗಿದ್ದಾನೆ. ಮಹಾರಾಜ! ಇತ್ತ ನೋಡಿ! ಕಪ್ಪು ಬೆಟ್ಟಗಳೆಲ್ಲ ಒಂದೆಡೆ ಸೇರಿದಂತೆ ಇದೆಯಲ್ಲ. ಇವರೇ ಲಂಗೂರ್ ಜಾತಿಯ ವಾನರರು. ಸೇತು ಬಂಧನದ ಕಾರ್ಯದಲ್ಲಿ ಬಹಳವಾಗಿ ಸಹಾಯಮಾಡಿದವರು. ಇವರ ಸಂಖ್ಯೆ ಒಂದುಕೋಟಿ. ಇವರ ಅಧಿಪತಿಯೇ "ಗವಾಕ್ಷ" ಎಂಬ ವಾನರ.

ಯಾವ ಪರ್ವತ ಸರ್ವದಾ ಫಲಮೂಲಗಳಿಂದ ಸಮೃದ್ಧವಾಗಿರುವುದೋ, ಯಾವ ಪರ್ವತದ ಮೇಲೆ ಮೊದಲು ಸೂರ್ಯ ತನ್ನ ಪ್ರಭಾಯುಕ್ತ ಕಿರಣಗಳನ್ನು ಪಸರಿಸುತ್ತಾನೋ ಅಂಥ ಅಗಾಧ ವಾದ ಮೇರುಪರ್ವತದಲ್ಲಿ ಸಂಚರಿಸುವ ಮಹಾತೇಜಸ್ವಿ ವಾನರ "ಕೇಸರಿ" ಎಂಬುವವ. ಇವನ ಕೈ ಕೆಳಗೆ ಅರವತ್ತು ಸಾವಿರ ದಳಪತಿಗಳಿದ್ದಾರೆ.

ನಿಶಾಚರರ ಅಧಿಪತಿಯೇ! ಪರ್ವತಗಳಲ್ಲೆಲ್ಲ ಪ್ರಸಿದ್ಧವಾದ ಸಾವರ್ಣಿ ಮೇರುವಿನ ಪ್ರದೇಶ ದಲ್ಲಿ ವಾಸಮಾಡುವ ಅತ್ಯಂತ ಪರಾಕ್ರಮಿಗಳಾದ ವಾನರಕೋಟಿ ಈ ಕಡೆ ನಿಂತಿದೆ ನೋಡಿ. ಇವರ ಅಧಿಪತಿಯೇ "ಶತಬಲಿ" ಎಂಬ ಮಹಾ ವಾನರ. ಈ ಮಹಾಬಲಿಯಾದ ವಾನರ ವಿಜಯ ಪ್ರಾಪ್ತಿಗಾಗಿ ಅನವರತ ಸೂರ್ಯನನ್ನು ಉಪಾಸಿಸುತ್ತಾನೆ.

ಪ್ರಧಾನರಾದ ಗಜ, ಗವಾಕ್ಷ, ಗವಯ, ನಳ, ನೀಲ–ಈ ಐವರೂ ಮಹಾಬಲಿಗಳು. ಒಬ್ಬೊಬ್ಬರೂ ಹತ್ತು ಹತ್ತು ಕೋಟಿ ಸೈನ್ಯಕ್ಕೆ ಅಧಿಪತಿಗಳಾಗಿದಾರೆ.

ರಾಕ್ಷಸರಾಜ! ಹೆಚ್ಚೇಕೆ! ಕೋಟ್ಯಾಂತರ ವಾನರ ವೀರರುಗಳಲ್ಲಿ ಒಬ್ಬೊಬ್ಬರೂ ಪರ್ವತ ಕಾಯರು, ಮಹಾಬಲಿಗಳು. ಒಬ್ಬೊಬ್ಬ ವಾನರರೇ ಇಡೀ ಭೂಮಂಡಲವನ್ನೇ ನಾಶಮಾಡಲು ಶಕ್ತರು. ಅಂದಮೇಲೆ ಇಷ್ಟು ಜನ ಒಟ್ಟುಗೂಡಿದಾರೆ. ಕೇಳಬೇಕೆ! ಪೃಥ್ವಿಯಲ್ಲಿನ ಎಲ್ಲ ಶತ್ರು ಗಳನ್ನೂ ನಿರ್ಮೂಲಮಾಡತಕ್ಕವರಾಗಿದಾರೆ. ಎಂದು ಸಾರಣ ವಿವರವಾಗಿ ವಾನರ ಸೇನಾಪತಿ ಗಳ ಬಲವನ್ನು ವಿವರಿಸಿದ. ವಿವರಿಸಲಾರದೆ ಬಳಲಿದ ಸಾರಣ ನಿಲ್ಲಿಸಿದ ಮೇಲೆ ಶುಕ ಹೇಳ ತೊಡಗಿದ.

ಮಹಾರಾಜ! ಕೋಟ್ಯಾಂತರ ಸಂಖ್ಯೆಯ ಕಪಿಸೈನ್ಯದ ಬಗ್ಗೆ ನನಗೆ ತಿಳಿದಷ್ಟು ಹೇಳುತ್ತೇನೆ ಕೇಳಿ. ಈ ಎಲ್ಲ ವಾನರರೂ ಮಹಾಶಕ್ತಿವಂತರು. ಕಾಮರೂಪಿಗಳು. ಇವರಲ್ಲಿ ಮುಖ್ಯರಾದವರ ಬಗ್ಗೆ ತಿಳಿಸುತ್ತೇನೆ ಕೇಳಿ,

ಈ ವಾನರರಲ್ಲಿ ದೇವತೆಗಳಂತೆ ರೂಪಧಾರಿಗಳಾಗಿ ನಿಂತಿದಾರಲ್ಲ ಇಬ್ಬರು. ಅವರೇ ಮೈಂದ-ದ್ವಿವಿಧರು. ಬ್ರಹ್ಮನಿಂದ ವರ ಪಡೆದವರು. ಅಮೃತಪಾನ ಮಾಡಿದವರು. ಮಹಾ ಯೋಧರು ಇವರು.

ಈ ಕಡೆ ನೋಡಿ! ಮದಿಸಿದ ಆನೆಯಂತೆ ಮಹಾಪರಾಕ್ರಮಿಯಾದ ವಾನರ ನಿಂತಿದಾನಲ್ಲ! ಅವನ ಪರಿಚಯ ನಿಮಗಿರಬಹುದು. ಲಂಕೆಗೆ ಹಿಂದೆ ಬಂದಿದ್ದವ ಇವನು. ಲಂಕೆಗೆ ಬಂದು, ಸೀತೆಯನ್ನು ದರ್ಶಿಸಿ, ಇಡೀ ಲಂಕಾಪುರಿಯನ್ನೇ ಸುಟ್ಟುಹೋದ ಮಹಾಪರಾಕ್ರಮಿ "ಹನುಮಂತ" ಎಂಬ ವಾನರನೇ ಇವನು. ಇವನಂಥ ಪರಾಕ್ರಮಿ ಯಾರೂ ಇಲ್ಲ. ಬುದ್ಧಿಯಲ್ಲಿ, ಬಲದಲ್ಲಿ,

ತೇಜದಲ್ಲಿ, ಶಕ್ತಿಯಲ್ಲಿ ಇವನಿಗೆ ಸರಿಯೇ ಇಲ್ಲ. ರಾಕ್ಷಸೇಶ್ವರಾ! ನೀವು ನೋಡ ನೋಡುತ್ತಿರುವಂತೆಯೇ ಲಂಕೆಯನ್ನೆಲ್ಲ ತನ್ನ ಬಾಲದ ಬೆಂಕಿಯಿಂದ ಸುಟ್ಟು ಹಾಕಿದನಲ್ಲ. ಅವನನ್ನು ನೀವು ಮರೆಯುವುದಾದರೂ ಹೇಗೆ? ನಾವು ಬಹಳ ಕಷ್ಟಪಟ್ಟು ಅವನ ಜನ್ಮವೃತ್ತಾಂತವನ್ನು ತಿಳಿದುಕೊಂಡೆವು. ಅದನ್ನೂ ನಿಮಗೆ ಹೇಳುತ್ತೇವೆ ಕೇಳಿ. ಇವನು ಹುಟ್ಟಿದಾಗಲೇ ಮೂವತ್ತು ಸಾವಿರ ಯೋಜನ ಎತ್ತರದ ಸೂರ್ಯಮಂಡಲಕ್ಕೆ ಹಾರಿದ. ತಿನ್ನಲು ಆಸೆಯಾದಾಗ ಈ ಭೂಲೋಕದ ಹಣ್ಣು ಬೇಡ ಎಂದು ಆಕಾಶದ ಫಲವಾದ ಸೂರ್ಯನನ್ನೇ ಕಬಳಿಸಲು ಹಾರಿದನಂತೆ. ಬಹಳ ಎತ್ತರ ಹಾರಿ ಬಂಡೆಯಮೇಲೆ ಬಿದ್ದಿದ್ದರಿಂದ ಅವನ ಒಂದು ದವಡೆ ಊದಿ ಗಟ್ಟಿಯಾಯಿತಂತೆ. ಅಂದಿನಿಂದ ಅವನಿಗೆ "ಹನುಮಂತ" ಎಂಬ ಹೆಸರಾಯಿತಂತೆ. ಹನುಮಂತನಿಗೆ ಹನುಮಂತನೇ ಸಾಟಿ ಅಲ್ಲದೆ ಬೇರೆ ಯಾರೂ ಇಲ್ಲ. ಇದು ನಿಮಗೆ ಚೆನ್ನಾಗಿ ತಿಳಿದಿದೆ ಅಲ್ಲವೆ. ಹನುಮಂತನ ಪಕ್ಕದಲ್ಲೇ ತಾಮ್ರಲೋಚನನಾಗಿ, ಶ್ಯಾಮವರ್ಣದ ಆಜಾನುಬಾಹು ಧನುರ್ಧಾರಿಯಾಗಿ ನಿಂತಿದಾನೆ ನೋಡಿ! ಅವನೇ ಇಕ್ಷ್ವಾಕುವಂಶದ ಅತಿರಥ ಎನಿಸಿಕೊಂಡವ. ಅವನು ಧರ್ಮಮೂರ್ತಿ. ಧರ್ಮ ನೆರಳಿನಂತೆ ಅವನನ್ನೇ ಆಶ್ರಯಿಸಿರುತ್ತದೆ. ಯಾವಾಗಲೂ ಅವನು ಧರ್ಮವನ್ನು ಉಲ್ಲಂಘಿಸುವವನಲ್ಲ. ವೇದ ವೇದಾಂಗ ಧರ್ಮಶಾಸ್ತ್ರಗಳನ್ನು ಅರಿತವನು, ಮಹಾಪರಾಕ್ರಮಿ. ''ಶೌರ್ಯದಲ್ಲಿ ಅವನಿಗ ಸಮಾನರು ಯಾರೂ ಇಲ್ಲ. ಅವನು ಅಸ್ತ್ರ, ಶಸ್ತ್ರಗಳನ್ನು ಅರಿತವನು. ಅವನ ಬಾಣ ಆಕಾಶವನ್ನೇ ಭೇದಿಸಬಲ್ಲದು. ಭೂಮಿಯನ್ನು ಚೂರುಚೂರಾಗಿ ಮಾಡತಕ್ಕದು. ಅಲ್ಲದೆ ಪಾತಾಳವನ್ನೂ ನಾಶಮಾಡುವಂಥದು. ಇಂಥ ಧಾರ್ಮಿಕವೀರನಾದ ರಘುವೀರನ ಪತ್ನಿಯನ್ನೇ ನೀವು ಜನಸ್ಥಾನದಿಂದ ಅಪಹರಿಸಿಕೊಂಡು ಬಂದಿದ್ದು. ಆದಕ್ಕಾಗಿಯೇ ಈಗ ರಾಮು ಧನುರ್ಧಾರಿಯಾಗಿ ನಿಂತಿದಾನೆ." ''ಮೇಘಶ್ಯಾಮನಾದ ಶ್ರೀರಾಮನ ಬಲಭಾಗದಲ್ಲಿ ನಿಂತಿದಾನಲ್ಲ! ಶುದ್ಧ ಸುವರ್ಣವರ್ಣದ, ವಿಶಾಲ ನೇತ್ರವುಳ್ಳ ಆಜಾನುಬಾಹು, ಅವನೇ ರಾಮನ ತಮ್ಮ ಲಕ್ಷ್ಮಣ. ರೂಪ, ಗುಣ, ಶೌರ್ಯ, ವೀರ್ಯ, ಗಾಂಭೀರ್ಯ, ಧೈರ್ಯ, ಓಜಸ್ಸು, ಕ್ಷಮೆ ಇವನಲ್ಲಿ ಮನೆಮಾಡಿಕೊಂಡಿವೆ. ರಾಮನ ಬಲಗೈಯಾಗಿ, ಏಕೆ ರಾಮನ ಪ್ರಾಣವೇ ಹೊರಗೆ ಲಕ್ಷ್ಮಣನ ರೂಪದಲ್ಲಿರುವಂತೆ ಇದಾನೆ. ರಾಮನ ಬಲಪಾರ್ಶ್ವದಲ್ಲಿ ರಾಕ್ಷಸರೊಡನೆ ನಿಂತಿದಾನೆ ನೋಡಿ! ತೇಜಸ್ವಿಯಾದ ವಿಭೀಷಣ. ಅವನಿಗೆ ರಾಮು ಲಂಕಾರಾಜ್ಯದ ಅಭೀಷೇಕಮಾಡಿದ. ಅವನು ರಾಜಾ ವಿಭೀಷಣನಾಗಿದಾನೆ ಈಗ.

ಎಲ್ಲ ವಾನರರ ಮಧ್ಯದಲ್ಲಿ ಪರ್ವತದಂತೆ ಅಚಲನಾಗಿ ನಿಂತಿದಾನಲ್ಲ ಅವನೇ ಮಹಾತೇಜಸ್ವಿಯಾದ ಸುಗ್ರೀವ! ಸಮಸ್ತ ವಾನರರಾಜ. ಪರ್ವತಗಳೆಲ್ಲ ಹಿಮಾಲಯ ಹೇಗೆ ಶ್ರೇಷ್ಠ ಎನಿಸಿದೆಯೋ ಹಾಗೆ ತೇಜಸ್ಸು, ಬಲ, ಬುದ್ಧಿ, ವೀರ್ಯ ಇವುಗಳಲ್ಲಿ ಸಮಸ್ತ ವಾನರರ ಶ್ರೇಷ್ಠನಾಗಿದಾನೆ ಈ ಸುಗ್ರೀವ. ಮಹಾಬಲಿಯಾದ ಸುಗ್ರೀವ ಕಿಷ್ಕಿಂಧೆಯಲ್ಲಿ ವಾಸಮಾಡುತ್ತಾನೆ. ಸುಗ್ರೀವನ ಕಂಠದಲ್ಲಿ ವಿರಾಜಮಾನವಾಗಿರುವ ಆ ಕಾಂಚನಮಾಲೆಯನ್ನು ನೋಡಿ. ಅದರಲ್ಲಿ ಸರ್ವದಾ ಲಕ್ಷ್ಮಿ ನೆಲಸಿರುತ್ತಾಳೆ. ಆ ಮಾಲೆಯನ್ನು ಎಲ್ಲರೂ ಧರಿಸಲು ಇಚ್ಛಿಸುತ್ತಾರೆ. ಅದನ್ನು ಮೊದಲು ವಾಲಿ ಧರಿಸಿದ್ದ. ರಾಮು ಒಂದೇ ಬಾಣದಿಂದ ವಾಲಿಯನ್ನು ಕೊಂದು ಸುಗ್ರೀವನಿಗೆ ಆ ಮಾಲೆಯನ್ನೂ, ಕಿಷ್ಕಿಂಧಾ ರಾಜ್ಯವನ್ನೂ ಕೊಡಿಸಿದ.

"ಮಹಾತೇಜಸ್ವಿಯಾದ ಸುಗ್ರೀವ ಸಹಸ್ರ ಕೋಟಿ, ನೂರು ಶಂಖ, ಸಹಸ್ರ ಮಹಾಶಂಖ, ಸಾವಿರ ವೃಂದ, ಸಹಸ್ರಮಹಾವೃಂದ, ಸಾವಿರ ಮಹಾಪದ್ಮ, ಸಾವಿರ ಸಮುದ್ರ, ಸಾವಿರ ಮಹೌಘ ಈ ಸಂಖ್ಯೆಯುಳ್ಳ ಮಹಾವಾಹಿನಿಗೆ ಅಧಿಪತಿಯಾಗಿದ್ದಾನೆ ಇಷ್ಟು ದೊಡ್ಡ ಸೈನ್ಯ

ಎರಡನೆ ಸಮುದ್ರದಂತೆ ನಿಂತಿದೆ. ಇಷ್ಟು ವಿಶಾಲವಾಹಿನಿಯೊಡನೆ ನಿಮ್ಮನ್ನು ಜಯಿಸಲು ಸುಗ್ರೀವ ಬಂದಿದಾನೆ. ನೀವು ಜಾಗ್ರತೆಯಿಂದ ನಿಮ್ಮ ರಕ್ಷಣೆಯನ್ನು ಮಾಡಿಕೊಳ್ಳಬೇಕಾಗಿದೆ" ಎಂದ.

ಶುಕ ಸಾರಣರಿಂದ ವಾನರ ವೀರರ ಪರಿಚಯ ಮಾಡಿಕೊಂಡ ರಾವಣ. ಎಲ್ಲರನ್ನೂ ನೋಡಿದ. ಆವನಿಗೆ ಕೋಪ ಉಕ್ಕೇರಿತು. ಕಠೋರವಾದ ವಾಣಿಯಿಂದ ಶುಕ ಸಾರಣರನ್ನು ಧಿಕ್ಕರಿಸಿದ. "ನೀವು ನನ್ನ ಆಶ್ರಯವನ್ನು ಪಡೆದು ಇದುವರೆಗೆ ನನ್ನ ಉಪಕಾರವನ್ನು ಪಡೆದಿರಿ. ಈಗ ಶತ್ರುವನ್ನು ಕೊಂಡಾಡುತ್ತಿದೀರಿ. ನಿಮ್ಮಂಥ ಕೃತಘ್ನರನ್ನು ತತ್‌ಕ್ಷಣವೇ ಕೊಲ್ಲಬೇಕು. ಆದರೆ, ಹಿಂದೆ ನೀವು ನನಗೆ ಮಾಡಿದ ಕೆಲವು ಉಪಕಾರಕ್ಕಾಗಿ ಈಗ, ನಿಮ್ಮನ್ನು ಕೊಲ್ಲದೆ ಬಿಡುತ್ತೇನೆ. ಹೋಗಿ; ನನ್ನ ಇದಿರಿಗೇ ಶತ್ರುವನ್ನು ಕೊಂಡಾಡುವ ನಿಮ್ಮ ದುಷ್ಟಮುಖವನ್ನು ನನಗೆ ತೋರ ಬೇಡಿ ಇನ್ನು ಮುಂದೆ. ಈಗಲೇ ತೊಲಗಿ ಇಲ್ಲಿಂದ ಎಂದು ಗುಡುಗಿದ.

ಶುಕಸಾರಣರು ಹೋದಮೇಲೆ ರಾವಣ ಮಂತ್ರಿಯಾದ ಮಹೋದರನನ್ನು ಕರೆದು "ಈಗಲೇ ಉತ್ತಮರಾದ ಗುಪ್ತಚರರನ್ನು ಕರೆದು ತಾ" ಎಂದು ಆಜ್ಞಾಪಿಸಿದ.

ಆದರಂತೆ ಮಹೋದರ "ಶಾರ್ದೂಲ'' ಎಂಬ ಗುಪ್ತಚರನನ್ನು ಕರೆದು ತಂದ. ಆ ಶಾರ್ದೂಲನನ್ನು ಅನುಸರಿಸಿ ಅನೇಕ ರಾಕ್ಷಸರು ಬಂದರು. ರಾವಣ ಅವರನ್ನು ಕುರಿತು ನೀವು ಹೋಗಿ ಶತ್ರುಪಕ್ಷದ ಬಲಾಬಲವನ್ನೂ, ಅವರ ಕಾರ್ಯಕ್ರಮವನ್ನೂ ಸರಿಯಾಗಿ ತಿಳಿದು ಬನ್ನಿ ಹೋಗಿ. ಸರಿಯಾದ ಗುಪ್ತಚರರಿದ್ದರೇ ರಾಜನಾದವ ಕಾರ್ಯವನ್ನು ಸುಲಭವಾಗಿ ಸಾಧಿಸಬಹುದು. ನೀವು ಹೋಗಿ ವಿಷಯವನ್ನು ತಿಳಿದು ಬನ್ನಿ ಎಂದು ಕಳುಹಿಸಿದ.

ಶಾರ್ದೂಲನನ್ನು ಮುಂದಿಟ್ಟುಕೊಂಡು ರಾಕ್ಷಸರು ರಾಮನ ಸೈನ್ಯದ ಗುಟ್ಟನ್ನು ತಿಳಿಯಲು ಬಂದರು. ವಿಭೀಷಣ ಇವರ ಚಲನವಲನವನ್ನು ಗಮನಿಸಿದ. ತತ್‌ಕ್ಷಣ ರಾಮನ ಬಳಿಗೆ ಎಳೆದು ಕೊಂಡು ಹೋದ. ಅಷ್ಟರಲ್ಲೆ ವಾನರರೆಲ್ಲ ಶಾರ್ದೂಲನನ್ನು ಹಿಡಿದು ಹೊಡೆದು, ಒದೆದು, ಗುದ್ದಿ ಹಾಕಿದ್ದರು. ಜರ್ಝರಿತನಾದ ಶಾರ್ದೂಲ ರಾಮನ ಮುಂದೆ ದೀನನಾಗಿ ಕೈಮುಗಿದು ನಿಂತ. ರಾಮ ಕರುಣೆಯಿಂದ ಅವನನ್ನು ಬಿಡಿಸಿದ.

ರಾವಣನ ಬಳಿಗೆ ಹಿಂದಿರುಗಿದ ಶಾರ್ದೂಲ ''ರಾಮ ಸೈನ್ಯದೊಂದಿಗೆ ಸುವೇಲ ಪರ್ವತ ದಲ್ಲಿ ಬೀಡುಬಿಟ್ಟಿದಾನೆ" ಎಂದು ಹೇಳಿದ. ಶಾರ್ದೂಲನ ದೀನ ಮುಖವನ್ನೂ, ಗದ್ಗದವಾಣಿ ಯನ್ನೂ ಗಮನಿಸಿದ ರಾವಣ ಆವನನ್ನು ಕುರಿತು ಶಾರ್ದೂಲ! ನಿನಗೇನಾಯಿತು ? ರಾಮನ ಬಲ ವನ್ನು ತಿಳಿದು ಬಂದೆಯಾ ? ಮುಖ್ಯರಾದವರ ವಿಷಯ ಹೇಳು ಎಂದ.

ಆಗ ಶಾರ್ದೂಲ, ಮಹಾರಾಜ! ರಾಮನ ಬಲ ಅಪಾರವಾಗಿದೆ! ರಾಮ ಇರಲಿ! ಅವನ ಸೈನ್ಯದ ಶಕ್ತಿ "ಇಂತಿಷ್ಟು" ಎಂದು ಅಳೆಯಲು ಸಾಧ್ಯವೇ ಇಲ್ಲವಾಗಿದೆ. ಒಳಗೆ ನುಸಿಯಲು ಸಾಧ್ಯವೇ ಇಲ್ಲವಾಗಿದೆ. ಒಳಗೆ ಪ್ರವೇಶಕ್ಕೇ ಕಷ್ಟವಾಗಿರುವಾಗ ಇನ್ನು ಬಲವನ್ನು ಅಳೆಯುವುದು ಹೇಗೆ ? ಆದರೂ, ರಾಮನ ದಯದಿಂದ ವಿಷಯ ಸಂಗ್ರಹಿಸಿಕೊಂಡು ಬಂದೆ ಎಂದ ಶಾರ್ದೂಲ. ಪುನಃ ಜಾಂಬವಂತ, ನಳ, ನೀಲ, ಅಂಗದ, ಶರಭ, ಮೈಂದ, ದ್ವಿವಿದ, ಹನುಮಂತ, ಸುಷೇಣ, ಋಷಭ, ಗಂಧಮಾದನ, ಸುಗ್ರೀವ ಮುಂತಾದ ವಾನರ ಪ್ರಮುಖರ ಜನ್ಮವನ್ನೂ ಅವರ ಪರಾ ಕ್ರಮವನ್ನೂ ವಿವರಿಸಿದ.

ಎಲ್ಲವನ್ನೂ ಹೇಳಿದ ಮೇಲೆ ಶಾರ್ದೂಲ "ಮಹಾಪ್ರಭು ! ವಾನರರು ಒಬ್ಬೊಬ್ಬರೂ ಅಗ್ನಿಯಂತೆ ತೇಜಸ್ವಿಗಳು, ಕಾಮರೂಪಿಗಳು. ಅವರೊಡನೆ ಕಾದುವುದು ಕಷ್ಟ. ಸೀತೆಯನ್ನು ರಾಮನಿಗೆ ಒಪ್ಪಿಸಿ ಸಂಧಿ ಮಾಡಿಕೊಳ್ಳುವುದೇ ಒಳ್ಳೆಯದು ಎಂದು ಹೇಳಿ ಹೋದ.

ರಾವಣ ಶಾರ್ದೂಲನಿಂದ ಎಲ್ಲವನ್ನೂ ತಿಳಿದುಕೊಂಡ. ದೇವದಾನವರನ್ನೇ ಸೋಲಿಸಿದ ನನಗೆ ಈ ವಾನರರು ಲಕ್ಷ್ಯವೇ ? ಇರಲಿ, ಯಾರೇ ಹೇಳಿದರೂ ನಾನಂತೂ ಸೀತೆಯನ್ನು ಒಪ್ಪಿಸುವುದಿಲ್ಲ. ಅದು ನನ್ನಿಂದ ಆಗದು ಎಂದು ಹೇಳಿ ಸಮಸ್ತ ರಾಕ್ಷಸ ಪ್ರಮುಖರನ್ನೂ ಮಂತ್ರಾಲೋಚನೆಗಾಗಿ ಕರೆಸಿದ. ಗುಪ್ತರೀತಿಯಲ್ಲಿ ಮಂತ್ರಾಲೋಚನೆ ನಡೆಸಿ ರಾವಣ ತನ್ನ ಮಹಲಿಗೆ ಹೋದ. ಅಲ್ಲಿಗೆ ಮಹಾಮಾಯಾವಿಯಾದ "ವಿದ್ಯುಜ್ಜಿಹ್ವ" ಎಂಬ ರಾಕ್ಷಸನನ್ನು ಕರೆಸಿದ. ಅವನನ್ನು ಕುರಿತು ರಾವಣ, ವಿದ್ಯುಜ್ಜಿಹ್ವ ! ಈಗ, ನಾವು ಉಪಾಯದಿಂದ ಕಾರ್ಯ ಸಾಧಿಸಬೇಕಾಗಿದೆ. ರಾಮನ ಸೈನ್ಯ ಸುವೇಲ ಪರ್ವತವನ್ನು ತಲುಪಿದ್ದಾಯಿತು. ಮೊದಲು ಸೀತೆಯನ್ನು ವಶಪಡಿಸಿಕೊಳ್ಳಬೇಕು. ನೀನು ಮಾಯೆಯಲ್ಲಿ ನಿಪುಣನಾಗಿರುವಿ. ರಾಮನ ತಲೆಯಂತೆಯೇ ತಲೆಯನ್ನು ನಿರ್ಮಿಸು. ಧನುರ್ಬಾಣಗಳನ್ನೂ ಮಾಡು. ನಾನು ಅಶೋಕವನಕ್ಕೆ ಹೋಗುತ್ತೇನೆ. ನಾ ಕರೆದಾಗ ಬಂದು ಸೀತೆಯ ಮುಂದೆ ರಾಮನ ಮಾಯಾಶಿರಸ್ಸನ್ನು ಇಡು ಎಂದ.

ವಿದ್ಯುಜ್ಜಿಹ್ವ ಒಪ್ಪಿದ. ಆಗಲೇ ತನ್ನ ಅದ್ಭುತವಾದ ಮಾಯೆಯಿಂದ ರಾಮನ ತಲೆಯನ್ನು ಹೋಲುವ ಮಾಯಾಶಿರಸ್ಸನ್ನೂ ಧನುರ್ಬಾಣಗಳನ್ನೂ ನಿರ್ಮಿಸಿದ ಅದು ರಾಮನ ಶಿರಸ್ಸಿನಂತೆಯೇ ಇತ್ತು. ರಾವಣ ಅದನ್ನು ನೋಡಿ ಸಂತೋಷವಟ್ಟು ವಿದ್ಯುಜ್ಜಿಹ್ವನಿಗೆ ತಾನು ಧರಿಸಿದ್ದ ಆಭರಣಗಳನ್ನು ಕೊಟ್ಟು ಸನ್ಮಾನಿಸಿದ.

ಅಶೋಕವನಕ್ಕೆ ಹೊರಟ ರಾವಣ. ಅಲ್ಲಿ ಸೀತೆ ದೀನಳಾಗಿ ಭೂಮಿಯಮೇಲೆ ಕುಳಿತು ನೆಲವನ್ನೇ ನೋಡುತ್ತಾ ಪತಿಯಾದ ರಾಮನನ್ನೇ ಚಿಂತಿಸುತ್ತಿದ್ದಳು. ಅಶೋಕವನದಲ್ಲಿದ್ದ ಸೀತೆ ಅತ್ಯಂತ ಶೋಕತಪ್ತಳಾಗಿದ್ದಳು. ಅವಳನ್ನು ನೋಡಿದ ರಾವಣ, ಸೀತೆ ! ನೀನು ಇದುವರೆಗೆ ಯಾರನ್ನು ನಂಬಿದ್ದೆಯೋ ಅವನು ಇನ್ನು ಇಲ್ಲ. ಆ ರಾಮ ಹತನಾದ. ಇನ್ನು ನನ್ನವಳಾಗು. ಮೂಢಳಾಗಿ ಆ ಹುಲುಮನುಜನನ್ನು ನಂಬಿದ್ದೆಯಲ್ಲ. ಅವನ ವೀರ್ಯ ಎಷ್ಟರದು ! ನನ್ನನ್ನು ಕೊಲ್ಲಲು ವಾನರರನ್ನು ಕಟ್ಟಿಕೊಂಡು ಬಂದ. ರಾತ್ರಿಯಲ್ಲಿ ಸುಸ್ತಾಗಿ ಎಲ್ಲ ವಾನರರೂ ಮಲಗಿದ್ದರು. ಆಗ, ನನ್ನ ಸೇನಾಧಿಪಥಿ ಪ್ರಹಸ್ತ ವಾನರ ಸೈನ್ಯದ ಮೇಲೆ ಬಿದ್ದು ಎಲ್ಲರನ್ನೂ ನಾಶ ಮಾಡಿದ. ಸುಗ್ರೀವ ಭಗ್ನಗ್ರೀವನಾದ,, ಹನುಮಂತನ ಹನು ಒಡೆದು ಅವನು ಸತ್ತ. ಅಂಗದ ನಾಶವಾದ. ಪ್ರಹಸ್ತ ರಾಮನನ್ನು ಕೊಂದ. ಅವನ ತಲೆಯನ್ನೂ ತಂದಿದಾನೆ. ನೋಡು ! ಎಂದು ಹೇಳಿ ವಿದ್ಯುಜ್ಜಿಹ್ವನನ್ನು ಕರೆದ.

ವಿದ್ಯುಜ್ಜಿಹ್ವ ಬಂದು ರಾಮನ ಮಾಯಾಶಿರಸ್ಸನ್ನು ರಾವಣನ ಮುಂದಿಟ್ಟ. ರಾವಣ ಅದನ್ನು ಸೀತೆಯ ಮುಂದಿಟ್ಟು ಇಗೋ ನೋಡು ! ನಿನ್ನ ಆ ರಾಮನ ತಲೆ ಇದು. ಇದನ್ನು ನಿನಗೆ ಕೊನೆಯಸಲ ತೋರಿಸಲು ವಿದ್ಯುಜ್ಜಿಹ್ವ ತಂದಿದಾನೆ. ನೋಡಿಬಿಡು. ಅನಂತರ ವ್ಯರ್ಥವಾದ ಶೋಕವನ್ನು ಬಿಟ್ಟು ನನ್ನನ್ನು ಹೊಂದು ಎಂದ. ತನ್ನ ಮುಂದೆ ಇದ್ದ ಶಿರಸ್ಸನ್ನು ನೋಡಿದಳು ಸೀತೆ. ರಾಮನ ಶಿರಸ್ಸಿನಂತೆ ಇದೆ. ಅದೇ ಕಣ್ಣು, ಅದೇ ಕೇಶ, ಅದೇ ಬಣ್ಣ, ಅದೇ ಆಕಾರ, ಆ ಧನುಸ್ಸೇ, ಆ ಬಾಣವೇ, ಒಂದೂ ವ್ಯತ್ಯಾಸವಿಲ್ಲ.

ನೋಡನೋಡುತ್ತಿದ್ದಂತೆಯೇ ದುಃಖ ಒತ್ತರಿಸಿ ಬಂದಿತು ಸೀತೆಗೆ. ಆ ಶಿರಸ್ಸನ್ನು ದೃಷ್ಟಿಸಿ ಅಳ ತೊಡಗಿದಳು. ನಾನಾ ರೀತಿಯಲ್ಲಿ ವಿಲಪಿಸಿದಳು. "ರಾಮಾ! ನನಗಾಗಿ ನೀನು ಈ ಸ್ಥಿತಿ ಯನ್ನು ಪಡೆಯುವಂತಾಯಿತೇ! ಅಯ್ಯೋ! ನನ್ನ ಭಾಗ್ಯವೇ ಅಂಥದು! ಹತಭಾಗ್ಯಳು ನಾನು! "ಕೈಕೇಯೀ" ನೀನು ಸುಖಿಯಾಗು! ಇನ್ನು ರಾಜ್ಯ ನಿನ್ನದೇ ಆಯಿತು. "ರಾಘವಾ" ಜ್ಯೋತಿ ಷ್ಕರು ಹೇಳಿದ್ದರು "ನೀನು ಬಹಳ ಕಾಲ ರಾಜ್ಯಭಾರ ಮಾಡುವಿ ಎಂದು." ಅವರ ಮಾತು ಸುಳ್ಳಾ ಯಿತಲ್ಲ! "ವಿಶಾಲ ನೇತ್ರ! ರಘುವೀರ!" ತಂದೆಯ ಆಜ್ಞೆಯನ್ನು ನೆರವೇರಿಸಿ ತಂದೆಯಿರುವ ಸ್ಥಳಕ್ಕೇ ಹೊರಟೇ ಹೋದೆಯಲ್ಲ. ಪಾಣಿಗ್ರಹಣ ಕಾಲದಲ್ಲಿ ಮಾಡಿದ ಪ್ರತಿಜ್ಞೆ ಮರೆತು ಹೋಯಿತೇ? "ನಿನ್ನನ್ನು ಯಾವಾಗಲೂ ಬಿಡುವುದಿಲ್ಲ ನಿನ್ನ ಜೊತೆಯಲ್ಲೇ ಇರುತ್ತೇನೆ" ಎಂದಿದ್ದೆ ಯಲ್ಲವೆ? ಈಗ ನನ್ನನ್ನು ಒಬ್ಬಳನ್ನೇ ಬಿಟ್ಟು ನೀನು ಮಾತ್ರ ವೈಕುಂಠಕ್ಕೆ ಹೋದೆಯಲ್ಲ? ಇದು ಸರಿಯೆ? ನೀ ಕೊಟ್ಟಮಾತನ್ನು ತಪ್ಪಿದಂತಾಗಲಿಲ್ಲವೆ? ನಾನು ನಿಮ್ಮ ಜೊತೆಯಲ್ಲೇ ಕಾಡಿಗೆ ಬಂದೆನಲ್ಲ. ನನ್ನನ್ನೂ ನಿಮ್ಮ ಜೊತೆಯಲ್ಲೇ ಕರೆದುಕೊಂಡು ಹೋಗಬೇಕಾಗಿತ್ತಲ್ಲವ? ಹಾಗೆ ಮಾಡದೆ ನನ್ನನ್ನು ಬಿಟ್ಟು ನೀವು ಮಾತ್ರ ಪರಲೋಕಕ್ಕೆ ಹೋಗಿದ್ದು ಧರ್ಮವಿರುದ್ಧವಲ್ಲವೆ? ಅಯ್ಯೊ! ರಾಮ ನನ್ನಿಂದ ನಿನಗೆ ಇಂಥ, ಸ್ಥಿತಿ ಬಂದಿತು. ಅನಾರ್ಯಳಾದ ಕುಲಘಾತಿನಿಯಾದ ನನಗಾಗಿ ನೀವು ಪ್ರಾಣ ಬಿಡಬೇಕಾಗಿ ಬಂದಿತು. ಪತ್ನಿಯಾದ ನಾನೇ ನಿಮಗೆ ಮೃತ್ಯುವಾದೆನಲ್ಲಾ" ಎಂದು ವಿಲಪಿಸಿದಳು. ನಂತರ ರಾವಣನನ್ನು ಕುರಿತು "ಹೇ ರಾವಣ! ರಾಮನನ್ನು ಕೊಂದೆ ಯಲ್ಲವೆ? ಹಾಗೇ ನನ್ನನ್ನೂ ಕೊಂದುಬಿಡು ರಾಮನ ತಲೆಯೊಂದಿಗೆ ನನ್ನ ತಲೆಯನ್ನೂ, ರಾಮನ ದೇಹದೊಂದಿಗೆ ನನ್ನ ದೇಹವನ್ನೂ ಸೇರಿಸಿ ಚಿತೆಯಲ್ಲಿಟ್ಟು ದಹಿಸಿಬಿಡು. ಹಾಗಾದರೂ–ರಾಮನ ಸಂಯೋಗ ನನಗಾಗುವಂತೆ ಮಾಡು. ಪತಿಪತ್ನಿಯರನ್ನು ಸೇರಿಸಿದ ಪುಣ್ಯ ನಿನಗೆ ಬರುತ್ತದೆ ಎಂದು ಪ್ರಲಾಪಿಸತೊಡಗಿದಳು.

ಆ ವೇಳೆಗೆ ಒಬ್ಬ ರಾಕ್ಷಸ ಓಡಿಬಂದು "ಮಹಾಪ್ರಭು, ಸೇನಾಪತಿಗಳು ಸಮಸ್ತ ಸೈನ್ಯ ದೊಂದಿಗೆ ಸಿದ್ಧರಾಗಿದಾರೆ. ಅವಶ್ಯವಾದ ರಾಜಕಾರ್ಯಕ್ಕಾಗಿ ನಿಮ್ಮ ಬರವನ್ನೇ ನಿರೀಕ್ಷಿಸುತ್ತಿ ದಾರೆ" ಎಂದ.

ತತ್ಕ್ಷಣ ರಾವಣ ಸೇನಾಪತಿಯನ್ನು ಕಾಣಲು ಹೊರಟ. ರಾವಣ ಹೊರಟ ಕೂಡಲೇ ಆ ಮಾಯಾಶಿರಸ್ಸು, ಧನುಸ್ಸು ಬಾಣ ಎಲ್ಲ ಅದೃಶ್ಯವಾಯಿತು.

ರಾವಣ ಪ್ರಹಸ್ತನೊಡನೆ ಸಮಾಲೋಚನೆ ನಡಸಿದ. ಸಮಸ್ತ ಸೈನ್ಯವೂ ಸನ್ನದ್ಧವಾಗು ವಂತೆ ಭೇರೀ ಶಂಖ ವಾದ್ಯಗಳನ್ನು ಮೊಳಗಿಸುವಂತೆ ಆಜ್ಞಾಪಿಸಿದ. ಅದರಂತೆ ರಾವಣನ ಸೈನ್ಯ ಯುದ್ಧಕ್ಕೆ ಸಿದ್ಧವಾಗಿ ನಿಂತಿತು.

ಇತ್ತ ಸೀತೆಯ ವಿಲಾಪವನ್ನು ಕೇಳಿದ ಸರಮೆ ಎಂಬ ರಾಕ್ಷಸಿ ಸೀತೆಯನ್ನು ಸಂತೈಸ ತೊಡಗಿದಳು.

ಸರಮೆ ರಾವಣನಿಂದ ನಿಯುಕ್ತಳಾದ ರಾಕ್ಷಸಿ. ಸೀತೆಯ ಜೊತೆಯಲ್ಲೇ ಇದ್ದು ಸೀತೆಯೊಡನೆ ಸ್ನೇಹ ಬೆಳಸಿಕೊಂಡಿದ್ದಳು. ಸೀತೆ ದುಃಖದಿಂದ ಇರುವುದನ್ನು ಕಂಡ ಸರಮೆ ಸೀತೆಯಬಳಿಗೆಬಂದು ಅವಳ ಕಣ್ಣೀರನ್ನು ಒರಸಿ "ಸೀತೆ! ನೀನು ಅಳಬೇಡ. ಇದುವರೆಗೆ ರಾವಣ ಹೇಳಿದುದನ್ನೆಲ್ಲ ಕೇಳಿದೆ ನಾನು. ರಾವಣ ಕ್ರೂರಿ ಹಾಗೂ ಪಾಪಿ. ಅವನು ಎಲ್ಲರನ್ನೂ ತನ್ನ ದುಷ್ಟಕರ್ಮದಿಂದ

ಸಂಕಟಪಡಿಸುತ್ತಾನೆ. ನೀನು ಅವನ ಮಾತನ್ನು ನಂಬಬೇಡ. ರಾಮ ಮಹಾಪರಾಕ್ರಮಿ, ತೇಜಸ್ವಿ. ಅವನು ಬಹಳ ಸೂಕ್ಷ್ಮ ಸ್ವಭಾವದವನು. ಅವನನ್ನು ಮಲಗಿರುವಾಗ ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಇದೆಲ್ಲ ರಾವಣನ ಮಾಯೆ. ವೈದೇಹಿ ನೀನು ದುಃಖಪಡಬೇಡ.

ನಿನ್ನ ಶೋಕದ ದಿನಗಳು ಕಳೆದು ಹೋದವು. ಇನ್ನು ಸುಖ-ಸಂತೋಷವೇ ನಿನಗೆ. ಜನಕ ನಂದಿನಿ! ಕೇಳು, ನಾನೇ ಹೋಗಿ ನೋಡಿ ಬಂದೆ. ಪುರುಷೋತ್ತಮನಾದ ರಾಮ ಅನುಜನಾದ ಲಕ್ಷ್ಮಣನೊಡನೆ, ಸಖನಾದ ಸುಗ್ರೀವನೊಡನೆಯೂ, ವಿಭೀಷಣನೊಡನೆಯೂ ಸೇರಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಸುವೇಲಪರ್ವತದಲ್ಲಿ ಬಂದು ನಿಂತಿದ್ದಾನೆ. ಆ ಪುರುಷೋತ್ತಮನ ಧನುಸ್ಸಿನಿಂದ ಹೊರಟ ಬಾಣಗಳು ರಾವಣನನ್ನು ತರಿದು ಹಾಕುತ್ತವೆ. ಕ್ಷಿಪ್ರದಲ್ಲೇ ನೀನು ನಿನ್ನ ಇನಿಯನನ್ನು ಸೇರುವಿ. ಯಾವನ ಭುಜ ಪರಾಕ್ರಮದಿಂದ ರಾವಣ ಅಳಿಯುತ್ತಾನೋ ಅಂಥ ರಾಘವನ ಭುಜವನ್ನು ಸಂತೋಷದಿಂದ ಒರಗಿಕೊಳ್ಳುವ ಸುಕಾಲ ಒದಗಿ ಬರುತ್ತದೆ. ಹೆದರಬೇಡ! ವೈದೇಹಿ! ಕ್ಷಿಪ್ರದಲ್ಲೇ ರಾಘವ ಸಮಸ್ತ ರಾಕ್ಷಸರನ್ನೂ ನಿಗ್ರಹಿಸಿ ನಿನ್ನನ್ನು ವಿಮಾನದಲ್ಲಿ ಪಕ್ಕದಲ್ಲಿ ಕೂರಿಸಿಕೊಂಡು ಅಯೋಧ್ಯೆಗೆ ಹಿಂದಿರುಗುತ್ತಾನೆ. ಅಲ್ಲಿ ದಿವ್ಯವಾದ ಸಿಂಹಾಸನದಲ್ಲಿ ರಾಘವನೊಡನೆ ಕುಳಿತು ಅಭಿಷೇಕ ಮಾಡಿಸಿಕೊಂಡು ಸಾಮ್ರಾಜ್ಞಿಯಾಗಿ ಮೆರೆಯುವಿ. ನಾ ಹೇಳುವುದನ್ನು ನಂಬು. ನೀನು ನನಗೆ ಗೆಳತಿಯಾಗಿರುವೆ. ನಿನಗಾಗಿ ನಾನು ಏನು ಮಾಡಲೂ ಸಿದ್ಧಳಾಗಿರುವೆ. ಹೇಳು ಏನು ಮಾಡಲಿ ? ಎಂದಳು ಸರಮೆ.

ಅಷ್ಟರಲ್ಲಿ ಭೇರಿ ಮೊಳಗಿತು. ಭೇರಿಯ ನಾದವನ್ನು ಕೇಳಿದ ಸರಮೆ "ಸೀತೆ ! ನೋಡು, ಈ ಭೇರೀನಾದ ಯುದ್ಧಕ್ಕೆ ಸೈನ್ಯ ಸಿದ್ಧವಾಗಿರುವುದನ್ನು ಸೂಚಿಸುತ್ತದೆ" ಎಂದಳು.

ಸೀತೆ "ಸರಮೆ, ನನಗಾಗಿ ನೀನು ಒಂದು ಕೆಲಸ ಮಾಡಬೇಕಾಗಿದೆ. ರಾವಣನ ಬಳಿ ಹೋಗಿ ಅವನು ಏನು ಮಾಡುತ್ತಿದ್ದಾನೆ ? ಅವನ ಅಂತರ್ಯವೇನು ? ತಿಳಿದು ಬಾ" ಎಂದಳು.

ಅದರಂತೆ ಸರಮೆ ತಿಳಿದುಕೊಂಡು ಬಂದು ಸೀತೆಗೆ ಹೇಳಿದಳು "ಜಾನಕಿ ! ಕೇಳು. ರಾಮ ಸೇತುವೆಯನ್ನು ದಾಟಿ ಸುವೇಲಪರ್ವತದಲ್ಲಿ ಬಂದಿಳಿದಿದ್ದಾನೆ. ರಾವಣ ತನ್ನ ಮಂತ್ರಿಗಳೊಡನೆ ಆಲೋಚನೆ ನಡೆಸಿದ. ವೃದ್ಧ ಮಂತ್ರಿಗಳು, ಹಿರಿಯರು ರಾವಣನಿಗೆ ಬುದ್ಧಿವಾದ ಹೇಳಿ "ಸೀತೆಯನ್ನು ಒಪ್ಪಿಸಿಬಿಡು" ಎಂದರು. ಆದರೆ, ರಾವಣ ಅದಕ್ಕೆ ಒಪ್ಪದೆ ಯುದ್ಧಕ್ಕೆ ಸಿದ್ಧನಾಗಿದ್ದಾನೆ. ಪ್ರಹಸ್ತ ಸಮಸ್ತ ಸೈನ್ಯವನ್ನೂ ಯುದ್ಧಕ್ಕೆ ಸಜ್ಜುಗೊಳಿಸುತ್ತಿದ್ದಾನೆ. ಈ ಭೇರೀನಾದ ಸೈನ್ಯ ಯುದ್ಧಕ್ಕೆ ಸಿದ್ಧವಾಗುತ್ತಿರುವುದನ್ನು ಸೂಚಿಸುತ್ತದೆ'' ಎಂದಳು.

## ಯುದ್ಧ ಪ್ರಾರಂಭ

ರಾಮ ಸುವೇಲ ಪರ್ವತದಿಂದ ಭೇರೀ ವಾದ್ಯವನ್ನು ಮೊಳಗಿಸಿ ಮುತ್ತಿಗೆ ಹಾಕುವುದನ್ನು ಪ್ರಕಾಶಪಡಿಸಿದ. ಕಿವಿಗಡಚಿಕ್ಕುವಂತೆ ಆ ಭೇರೀನಿನಾದ ಲಂಕೆಯನ್ನೆಲ್ಲ ಸ್ಪಂದನಗೊಳಿಸಿತು. ಇದನ್ನು ಕೇಳಿದ ರಾವಣ ತತ್ಕಾಲದಲ್ಲಿ ಕ್ರಮ ಕೈಗೊಳ್ಳಲು ಮಂತ್ರಾಲೋಚನಾ ಸಭೆಯನ್ನು ಸೇರಿಸಿ ಆಗ ಮಾಡಬೇಕಾದ ಕಾರ್ಯದ ಬಗ್ಗೆ ಸಲಹೆ ಕೇಳಿದ. ರಾವಣನ ತಾತ ಮಾಲ್ಯವಂತ ರಾವಣನಿಗೆ ಹಿತವಾಗಿ ಹೇಳಿದ. "ರಾವಣ ! ಯಾವಾಗಲೂ ರಾಜನಾದವ ಸಮಯಕ್ಕೆ ಸರಿಯಾಗಿ ತಕ್ಕ ನೀತಿಯನ್ನು ಆಚರಿಸಬೇಕು.

ರಾಜನಾದವನು ಹೇಗೆ ನಯಾನುಸಾರವಾಗಿ ನಡೆದುಕೊಳ್ಳಬೇಕು. ದೊರೆಯಾದವನು ಸಕಲ ಐಶ್ವರ್ಯಗಳನ್ನೂ ಅನುಭವಿಸಬೇಕಾದರೆ ಇವುಗಳ ಪಾಲನೆ ಎಷ್ಟು ಅಗತ್ಯ ಎಂಬುದನ್ನು ತಿಳಿಸುವ ಈ ಶ್ಲೋಕಗಳು ಗಮನಾರ್ಹ. ರಾಜ್ಯಭಾರ ಮಾಡುವ ಪ್ರತಿಯೊಬ್ಬನೂ ಗಮನಿಸಬೇಕು.

**ಆನ್ವೀಕ್ಷಕಿ ತ್ರಯೀಂ ವಾರ್ತಾಂ ದಂಡನೀತಿಂಚ ಪಾರ್ಥಿವಃ ।**
**ತದ್ವಿದ್ಭಿಸ್ತತ್ಕ್ರಿಯೋಪೇತೈಶ್ಚಿಂತಯೇದ್ವಿನಯಾನ್ವಿತಃ ॥**
**ಆನ್ವೀಕ್ಷಕ್ಯಾತ್ಮವಿಜ್ಞಾನಂ ಧರ್ಮಾಧರ್ಮೌತ್ರಯೀಸ್ಥಿತೌ ।**
**ಅರ್ಥಾನರ್ಥೌತು ವಾರ್ತಾಯಾಂ ದಂಡನೀತ್ಯಾಂ ನಯಾನಯುತಾ ॥**
**ವಿದ್ಯಾಶ್ಚತಸ್ತ ಏವೈತಾ ಯೋಗಕ್ಷೇಮಾಯದೇಹಿನಾಂ ।**
**ವಿದ್ಯಾವಿನೀತೋ ನೃಪತಿರ್ನ ಕೃಚ್ಛ್ರೇಷ್ವಾವಸೀದತಿ ॥**

ಹದಿನಾಲ್ಕು ರೀತಿಯ ವಿದ್ಯೆಗಳಲ್ಲಿ ಕುಶಲನಾದವನೇ ಸರಿಯಾಗಿ ರಾಜನಾಗಬಲ್ಲ. ಶತ್ರುವಿನ ಬಲಾಬಲವನ್ನು ಮೊದಲು ಪರೀಕ್ಷಿಸಬೇಕು. ಶತ್ರು ಪ್ರಬಲನಾದರೆ ಸಂಧಿ ಮಾಡಿಕೊಳ್ಳಬೇಕು. ಅದರಿಂದಲೇ ಐಶ್ವರ್ಯ ವೃದ್ಧಿಯಾಗುತ್ತದೆ. ಈಗ ಬಂದಿರುವವ ರಾಮ. ಅವನು ಸಾಮಾನ್ಯನಲ್ಲ. ಧರ್ಮವೇ ಮೂರ್ತಿವೆತ್ತಂತೆ ಬಂದಿದಾನೆ ಅವನು. ದೇವತೆಗಳು, ಋಷಿಗಳು, ಗಂಧರ್ವರು ಸಿದ್ಧರು ಎಲ್ಲರೂ ರಾಮನ ಜಯವನ್ನೇ ಬಯಸುತ್ತಿದಾರೆ. ರಾವಣ ! ಕೇಳು, ಧರ್ಮ, ಅಧರ್ಮ ಇವೆರಡೂ ಬ್ರಹ್ಮನಿಂದಲೇ ಸೃಷ್ಟವಾಯಿತು. ದೇವತೆಗಳು ಧರ್ಮವನ್ನು ಆಶ್ರಯಿಸಿದಾರೆ. ದಾನವರು ಅಧರ್ಮವನ್ನು ಆಶ್ರಯಿಸಿದಾರೆ. ಧರ್ಮ ಧರಿಸುತ್ತದೆ. ಅಧರ್ಮ ಅಳಿಸುತ್ತದೆ. ಧರ್ಮ ಶಾಶ್ವತ, ಅಧರ್ಮ ಕ್ಷಣಿಕ, ಅಶಾಶ್ವತ. ನೀನು ಅಧರ್ಮದಿಂದ ಸಂಪತ್ತನ್ನು, ಯಶಸ್ಸನ್ನು ಗಳಿಸಿದೆ. ಅದು ಇದುವರೆಗೆ ಉಳಿದದ್ದೇ ಹೆಚ್ಚು, ಈಗ ಅಳಿಯುವ ಕಾಲ ಬಂದಿದೆ. ಇದು ಸತ್ಯಯುಗ, ರಾಮ ಧರ್ಮವನ್ನು ನೆಲೆಗೊಳಿಸಲು ಬಂದಿದಾನೆ. ನಿನಗೆ ವರದ ಗರ್ವ ಇರಬಹುದು. ಆದರೆ ನೀನು ದೇವತೆಗಳಿಂದ, ದಾನವರಿಂದ, ಯಕ್ಷ, ಕಿನ್ನರ – ಇವರಿಂದ ಕೇಡಾಗದಂತೆ ವರ ಪಡೆದೆ. ನರ ವಾನರರಿಂದ ಕೇಳಲಿಲ್ಲ. ಆದ್ದರಿಂದ ಈಗ ನರರು ವಾನರರು ನಿನ್ನನ್ನು ಕೊಲ್ಲಲು ಬಂದಿದಾರೆ

ಈ ಸ್ಥಳದಲ್ಲಿ ಮಾಲ್ಯವಂತನ ಬಾಯಿಂದ ಹೊರಟ ವಿವೇಕದ ಮಾತುಗಳನ್ನು ಸೊಗಸಾಗಿ ವರ್ಣಿಸಿದಾರೆ. ಅಂಥ ರಾವಣನಿಗೆ ಇಷ್ಟು ಧೈರ್ಯವಾಗಿ ಧರ್ಮದ ಬಗೆಗೆ ಹೇಳುವ ಧೈರ್ಯ ಅಲ್ಲಿ ಬಹುಶಃ ಮತ್ತೆ ಯಾರಿಗೂ ಇದ್ದಿರಲಿಕ್ಕಿಲ್ಲ. ಧರ್ಮದ ಮಹಿಮೆಯ ಸಾರವನ್ನು ಹಿಂಡಿಬಿಟ್ಟಿದಾರೆ. ಈ ಮೇಲಿನ ಮಾತುಗಳ ಸೊಬಗನ್ನು ವಾಲ್ಮೀಕಿಯ ಮಾತಿನಲ್ಲಿ ಇನ್ನೂ ಚೆನ್ನಾಗಿ ಸವಿಯಬಹುದು. ರಾಮನಿಗೆ ಜಯವಾಗಬೇಕು ಎಂದು ದೇವರ್ಷಿಗಳೆಲ್ಲ ಬಯಸುತ್ತಿದಾರೆ. ಅದನ್ನು ತಡೆಯಲು ನಿನ್ನಿಂದ ಸಾಧ್ಯವೆ ಎಂದು ಕೇಳುತ್ತಾನ ಜ್ಞಾನವೃದ್ಧ ಮಾಲ್ಯವಂತ.

**ತಸ್ಯ ದೇವರ್ಷಯಸ್ಸರ್ವೇ ಗಂಧರ್ವಾಶ್ಚ ಜಯೈಷಿಣಃ ।**
**ವಿರೋಧಂ ಮಾಗಮಸ್ತೇನ ಸಂಧಿಸ್ತೆ ತೇನ ರೋಚತಾಂ ॥**
**ಅಸೃಜದ್ಭಗವಾನ್ಪಕ್ಷೌ ದ್ವಾವೇವಹಿ ಪಿತಾಮಹಃ ।**
**ಸುರಾಣಾಮಸುರಾಣಾಂಚ ಧರ್ಮಾಧರ್ಮೌ ತದಾಶ್ರಯೌ ॥**

**ಧರ್ಮೋಹಿ ಶ್ರೂಯತೇ ಪಕ್ಷೋಹ್ಯಮರಾಣಾಂ ಚ ರಾವಣ।**
**ಧರ್ಮೋನ್ಯೈಗ್ರಸತೇ ಧರ್ಮಂ ತತಃ ಕೃತಮಭೂದ್ಯುಗಂ ॥**
**ಅಧರ್ಮೋಗ್ರಸತೇ ಧರ್ಮಂ ತತಸ್ತಿಷ್ಯಃಪ್ರವರ್ತತೇ ।**
**ತತ್ತ್ವಯಾಚರತಾಲೋಕಾ ಧರ್ಮೋವಿನಿಹತೋಮಹಾ ॥**
**ಅಧರ್ಮಃ ಪ್ರಗೃಹೀತಶ್ಚ ತೇನಾಸ್ಮದ್ಬಲಿನಃ ಪರೇ ।**

ಒಟ್ಟಿನಲ್ಲಿ ರಾವಣಾ, ಈಗ ನೀನು ಕೇವಲ ಅಧರ್ಮವನ್ನೆ ವರಿಸಿದ್ದೀಯಾ. ಕಲಿಯು ನಿನ್ನನ್ನು ಸಂಪೂರ್ಣವಾಗಿ ಆವರಿಸಿಬಿಟ್ಟಿದಾನೆ. ಆದ್ದರಿಂದಲೇ ಸದ್ಯದಲ್ಲಿ ನಿನಗೆ ಎಲ್ಲವೂ ಜಯ ಮುಖಗಳಾಗಿಯೇ ಇರುವುದು. ಆದರೆ ಕೊನೆಯಲ್ಲಿ ಜಯವು ಧರ್ಮಕ್ಕೇ ಎಂಬುದು ಸತ್ಯ. ಪ್ರಕೃತ ನಿನ್ನ ಅಧರ್ಮವರ್ತನೆ ಎಲ್ಲೆ ಮೀರಿಬಿಟ್ಟಿದೆ. ನಿನಗೆ ವಿನಾಶಕಾಲ ಬಂದುಬಿಟ್ಟಿದೆ.... ಆದುದರಿಂದ ಈಗಲಾದರೂ ಧರ್ಮಾತ್ಮನಾದ ಶ್ರೀರಾಮನಿಗೆ ಸೀತೆಯನ್ನು ಒಪ್ಪಿಸಿ ಧರ್ಮವನ್ನು ಮಾಡಿ ಶ್ರೇಯಸ್ಸನ್ನು ಪಡೆ" ಎನ್ನುತ್ತಾನೆ ಮಾಲ್ಯವಂತ. ಹೀಗೆ ಎಷ್ಟೋಪರಿಯಲ್ಲಿ ಹೇಳಿ, "ಈಗ ಬಂದಿರುವ ರಾಮ ಯಾರು ಎಂದು ತಿಳಿದಿರುವೆ ? ಸಾಮಾನ್ಯ ಮನುಷ್ಯ ಎಂದು ಭಾವಿಸಬೇಡ, ಕೇಳು.

**ವಿಷ್ಣುಂ ಮನ್ಯಾಮಹೇ ರಾಮಂ ಮಾನುಷಂ ರೂಪಮಾಸ್ಥಿತಮ್ ॥**

ಸಾಕ್ಷಾತ್ ವಿಷ್ಣುವೇ ರಾಮ. ರಾವಣ, ನಾ ಹೇಳುವುದನ್ನು ಕೇಳು. ವೃಥಾ ರಾಮನೊಡನೆ ವೈರ ಏಕೆ ಸಾಧಿಸುವಿ ? ನಿನ್ನದೇ ತಪ್ಪು. ರಾಮನ ಮಡದಿಯನ್ನು ಅಪಹರಿಸಿದೆ. ಈಗ ಸೀತೆಯನ್ನು ರಾಮನಲ್ಲಿಗೆ ಹೋಗಿ ಒಪ್ಪಿಸಿಬಿಡು. ನಿನ್ನ ಐಶ್ವರ್ಯ, ಸ್ಥಾನ, ಅಧಿಕಾರ ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ಜೀವಿತವನ್ನು ಕಾಯ್ದುಕೊ. ರಾವಣ, ಸೀತೆಯನ್ನು ನೀ ಅಪಹರಿಸಿಕೊಂಡು ಬಂದ ದಿನದಿಂದ ಎಷ್ಟೊಂದು ಅಪಶಕುನಗಳು ಆಗುತ್ತಿವ ಬಲ್ಲೆಯಾ ? ಲಂಕೆಯ ಭೂಮಿ ಅದುರುತ್ತಿದೆ. ಕಾಗೆ, ಗೂಗೆ, ನರಿ, ಹದ್ದು ಎಲ್ಲೆಲ್ಲೂ ಭಯಂಕರ ಶಬ್ದ ಮಾಡುತ್ತಿವೆ. ಗೋವುಗಳು ಕತ್ತೆಗೆ ಜನ್ಮ ಕೊಡುತ್ತಿವ. ಪಕ್ಷಿ, ಮೃಗಗಳೆಲ್ಲ ಸೂರ್ಯನ ಕಡೆಗೆ ಮುಖಮಾಡಿಕೊಂಡು ವಿರೋದಿಸುತ್ತಿವೆ. ಇವನ್ನು ಗಮನಿಸಿದರೆ ಮಹಾಭಯ ಸನ್ನಿಹಿತವಾಗಿದೆ ಎಂದು ತೋರುತ್ತದೆ. ಆದ್ದರಿಂದ ರಾಮನೊಡನೆ ಯುದ್ಧ ಬೇಡ. ಸಂಧಿ ಮಾಡಿಕೊ" ಎಂದು ಹೇಳಿದ.

ಅಜ್ಜನ ಮಾತನ್ನು ಕೇಳಿದ ರಾವಣ **ನಮರ್ಷಯತಿ ದುಷ್ಟಾತ್ಮಾ ಕಾಲಸ್ಯ ವಶಮಾಗತಃ**- ಕಾಲನ ಪಾಶ ಹಿಡಿದು ಎಳೆಯುತ್ತಿರುವಾಗ ಅವನಿಗೆ ಈ ಹಿತನುಡಿ ಅಹಿತವಾಯಿತು. ಕೋಪದಿಂದ ಕಣ್ಣುಗಳು ಕೆಂಪಾದವು. ಅಜ್ಜ ಹೇಳುತ್ತಿದಾನೆ ಎಂಬುದನ್ನೂ ಲೆಕ್ಕಿಸದೆ, "ಏನು ನೀನು ಹೇಳುತ್ತಿರುವುದು ? ದೇವತೆಗಳು, ಗಂಧರ್ವರೊಡನೆಯೇ ನಾ ಸೆಣಸಿದ್ದೇನೆ.

ಇನ್ನು ಈ ಅಲ್ಪ ಮನುಷ್ಯನಿಗೆ ಬೆದರುವುದೆ ? ನಿನಗೆ ನನ್ನ ಮೇಲೆ ಅಸೂಯೆ ಇರಬೇಕು. ಇಲ್ಲ, ಶತ್ರುಗಳ ಪಕ್ಷಕ್ಕೆ ನೀನೂ ಸೇರಿರಬೇಕು. ಶತ್ರುವಿನ ಪ್ರೋತ್ಸಾಹ ದೊರೆತಿರುವುದರಿಂದಲೇ ನೀನು ಈ ರೀತಿ ಮಾತಾಡುತ್ತಿರುವ. ಹೇಳುತ್ತೇನೆ ಕೇಳು. ಯಾವ ಕಾಲಕ್ಕೂ ನಾನು ಸೀತೆಯನ್ನು ಒಪ್ಪಿಸುವುದಿಲ್ಲ. ನಾನೇ ಸ್ವತಃ ಆ ರಾಮನೊಡನೆ ಸೆಣಸಿ ಅವನನ್ನು ಯಮಪುರಿಗೆ ಕಳುಹಿಸುತ್ತೇನೆ" ಎಂದ.

ಕ್ರೋಧಪೂರ್ಣನಾದ ರಾವಣ ಮಾಲ್ಯವಂತನನ್ನು ಧಿಕ್ಕರಿಸಿದ. ಜ್ಞಾನವೃದ್ಧನೂ, ವಯೋ

ವೃದ್ಧನೂ ಆದ ಮಾಲ್ಯವಂತನಿಗೆ ತುಂಬಾ ನಾಚಿಕೆಯಾಯಿತು. ಮೂರ್ಖರಿಗೆ ವಿವೇಕ ಹೇಳಬಾರದು ಎಂದುಕೊಂಡು, ಮನಸ್ಸಿನಲ್ಲೇ ನೊಂದು ಸಂಪ್ರದಾಯರೀತ್ಯಾ ರಾಜನಿಗೆ ಹರಸಿ ಸಭೆಯನ್ನು ಬಿಟ್ಟು ಹೊರಟುಹೋದ.

ಆಮೇಲೆ ರಾವಣ ಸೇನಾಪತಿಯ ಕಡೆಗೆ ತಿರುಗಿದ. ಪ್ರಹಸ್ತ, ನೀನು ಅಪಾರವಾದ ರಾಕ್ಷಸ ಸೈನ್ಯದೊಡನೆ ಪೂರ್ವದ್ವಾರವನ್ನು ರಕ್ಷಿಸು. ಮಹೋದರನು ಮಹಾಪಾರ್ಶ್ವನೊಡನೆ ದಕ್ಷಿಣದ್ವಾರವನ್ನು ರಕ್ಷಿಸಲಿ. ಪ್ರಬಲನಾದ ಇಂದ್ರಜಿತ್ತು ಲಕ್ಷಾಂತರ ರಾಕ್ಷಸರೊಡನೆ ಪಶ್ಚಿಮ ಭಾಗದಲ್ಲಿರಲಿ. ಶುಕ–ಸಾರಣರೊಂದಿಗೆ ನಾನೇ ಸ್ವತಃ ಉತ್ತರದ್ವಾರದಲ್ಲಿ ನಿಲ್ಲುತ್ತೇನೆ–ಎಂದು ಸೈನ್ಯವನ್ನು ಆಯಾ ಸ್ಥಳದಲ್ಲಿ ನಿಲ್ಲುವಂತೆ ಆಜ್ಞಾಪಿಸಿ ರಾವಣ ಕೃತಕೃತ್ಯನಾದವನಂತೆ ಅರಮನೆಗೆ ಹಿಂದಿರುಗಿದ.

ಇತ್ತ ಸುವೇಲ ಪರ್ವತ ಪ್ರದೇಶದಲ್ಲಿ ರಾಮನು ಲಕ್ಷ್ಮಣ, ಸುಗ್ರೀವ ವಿಭೀಷಣ ಹನುಮಂತ ಜಾಂಬವಂತ ಅಂಗದ ನಳ ನೀಲ ಋಷಭ ಶರಭ ಮುಂತಾದ ವೀರರೊಡನ ಆಲೋಚನೆ ಮಾಡಲು ಪ್ರಾರಂಭಿಸಿದ. ಲಂಕೆಯನ್ನು ಯಾವಕ್ರಮದಲ್ಲಿ ಆಕ್ರಮಣ ಮಾಡಬೇಕು ಎಂದು ವಿಚಾರಿಸತೊಡಗಿದ. ಆಗ, ವಿಭೀಷಣ ವಿನಯದಿಂದ ರಾಮನಿಗೆ ವಂದಿಸಿ, ರಾಘವ, ನನ್ನ ಮಂತ್ರಿಗಳಾದ ಅನಲ, ಪನಸ, ಸಂಪಾತಿ, ಪ್ರಮತಿ ಈ ನಾಲ್ವರು ರಾಕ್ಷಸರೂ ಪಕ್ಷಿರೂಪವನ್ನು ಧರಿಸಿ ಲಂಕೆಯಲ್ಲೆಲ್ಲ ಸುತ್ತಾಡಿ ರಾವಣನ ಏರ್ಪಾಡನ್ನೆಲ್ಲ ತಿಳಿದು ಬಂದಿದಾರೆ. ಅದನ್ನು ಹೇಳುತ್ತೇನೆ ಕೇಳು. ನಗರದ ಪೂರ್ವದ್ವಾರದಲ್ಲಿ ರಾವಣ ತನ್ನ ಸೇನಾಧಿಪತಿ ಪ್ರಹಸ್ತನನ್ನು ನಿಯಮಿಸಿದಾನೆ. ಪಶ್ಚಿಮ ಭಾಗದಲ್ಲಿ ಮಹಾಪರಾಕ್ರಮಿಯಾದ ಇಂದ್ರಜಿತು ಇದಾನೆ. ದಕ್ಷಿಣಭಾಗದಲ್ಲಿ ಮಹೋದರ, ಮಹಾಪಾರ್ಶ್ವರಿದಾರೆ. ಉತ್ತರದ್ವಾರದಲ್ಲಿ ಸ್ವಯಂ ರಾವಣನೇ ಶುಕಸಾರಣರೊಂದಿಗೆ ನಿಂತಿದಾನೆ. ಮಧ್ಯಭಾಗದಲ್ಲಿ ವಿರೂಪಾಕ್ಷ ಎಂಬ ರಾಕ್ಷಸ ಲಕ್ಷಾಂತರ ಅನುಚರರೊಂದಿಗೆ ಶೂಲ, ಖಡ್ಗ, ಪರಿಘ, ಶಕ್ತಿ, ತೋಮರ, ಮುಸಲ, ಶತಘ್ನಿ, ಇವುಗಳಿಂದ ಕೂಡಿ ಇದಾನೆ.

ರಾಘವ ರಾವಣನ ಬಲವನ್ನು ಹೇಳುತ್ತೇನೆ ಕೇಳು. ರಾವಣನ ಸೈನ್ಯದಲ್ಲಿ ಹತ್ತುಸಾವಿರ ಆನೆಗಳು, ಹತ್ತುಸಾವಿರ ರಥಗಳು, ಇಪ್ಪತ್ತುಸಾವಿರ ಕುದುರೆಗಳು, ಒಂದು ಕೋಟಿಗಿಂತ ಅಧಿಕವಾದ ಕಾಲಾಳುಗಳು ಇದಾರೆ. ಇವರಲ್ಲಿ ಒಬ್ಬೊಬ್ಬ ರಾಕ್ಷಸನಿಗೂ ಹತ್ತು–ಹತ್ತು ಲಕ್ಷ ಸಹಾಯಕರಾಗಿದಾರೆ. ಇವರೇ ಅಲ್ಲದೆ, ರಾವಣನ ಹತ್ತಿರ ಅರವತ್ತು ಲಕ್ಷ ಮಹಾಪರಾಕ್ರಮಿಗಳಾದ ರಾಕ್ಷಸ ಸೈನ್ಯ ಇದೆ. ಹಿಂದೆ ಕುಬೇರನನ್ನು ಜಯಿಸುವಾಗ ಇವರೆಲ್ಲ ಕುಬೇರನೊಂದಿಗೆ ಕಾದಿದವರು. ಇದು ನನಗೆ ತಿಳಿದಂತೆ ರಾವಣನ ಬಲ. ಇದಲ್ಲದೆ ಗುಪ್ತವಾಗಿ ರಾವಣ ರಕ್ಷಿಸುತ್ತಿರುವ ಬಲ ಅಧಿಕವಾಗಿದೆ.

ಪ್ರಭು, ರಾಘವ ! ನಾನು ನಿನ್ನನ್ನು ಹೆದರಿಸುವ ಸಲುವಾಗಿ ರಾವಣನ ಬಲವನ್ನು ಹೆಚ್ಚಿಸಿ ಹೇಳುತ್ತಿದೇನೆ ಎಂದು ತಿಳಿಯಬೇಡ. ವಾಸ್ತವದಲ್ಲಿ ಸಮಸ್ತ ಪ್ರಪಂಚವೂ ಎದುರಾದರೂ ನಿನ್ನ ಬಾಣಕ್ಕೆ ಚ್ಯುತಿಯಿಲ್ಲ ಎಂದು ನಾನು ತಿಳಿದಿದೇನೆ. ಯುದ್ಧಕ್ಕೆ ಸಿದ್ಧವಾಗಿರುವಾಗ ಸೈನ್ಯವನ್ನು ವ್ಯೂಹದಲ್ಲಿ ನಿಲ್ಲಿಸಬೇಕಾಗುತ್ತದೆ. ಆಗ, ಶತ್ರುವಿನ ಬಲವನ್ನು ತಿಳಿದು ಅದಕ್ಕೆ ತಕ್ಕಂತೆ ವ್ಯೂಹ ರಚನೆ ಮಾಡಬೇಕು. ಆದ್ದರಿಂದ, ಇವನ್ನೆಲ್ಲ ಹೇಳಿದೆ. ಇನ್ನು ನಿನ್ನ ಇಚ್ಛೆಯಂತೆ ಸೈನ್ಯವನ್ನು ನಿಯೋಜಿಸಬಹುದು ಎಂದ.

ವಿಭೀಷಣನ ಮಾತುಗಳನ್ನು ಕೇಳಿದ ರಾಮ ಸೈನ್ಯವನ್ನು ಆಯಾ ಸ್ಥಳಗಳಲ್ಲಿ ನಿಯೋಜಿಸಿದ.

ಪೂರ್ವದ್ವಾರದಲ್ಲಿ ನಮ್ಮ ನೀಲ ಅನೇಕ ವಾನರ ವೀರರೊಂದಿಗೆ ಪ್ರಹಸ್ತನನ್ನು ಇದಿರಿಸಿ ನಿಲ್ಲಲಿ. ವಿಶಾಲವಾದ ಸೈನ್ಯದಿಂದ ಒಡಗೂಡಿದ ಅಂಗದ ದಕ್ಷಿಣದ್ವಾರದಲ್ಲಿ ಮಹೋದರ, ಮಹಾ ಪಾರ್ಶ್ವನನ್ನು ಇದಿರಿಸಿ ನಿಲ್ಲಲಿ. ಮಹಾಬಲಿಯಾದ, ಅಜೇಯನಾದ ಆಂಜನೇಯ ಪಶ್ಚಿಮದ್ವಾರ ದಲ್ಲಿ ಇಂದ್ರಜಿತ್ತನ್ನು ಇದಿರಿಸಿ ನಿಲ್ಲಲಿ. ಸೇನೆಯ ಮಧ್ಯಭಾಗದಲ್ಲಿ ರಕ್ಷಿಸುತ್ತಿರುವ ವಿರೂಪಾಕ್ಷ ನನ್ನು ಸುಗ್ರೀವ, ವಿಭೀಷಣ, ಜಾಂಬವಂತ, ಈ ಮೂವರೂ ಅಪಾರವಾದ ಸೈನ್ಯದೊಂದಿಗೆ ಇದಿರಿಸಲಿ. ಉತ್ತರದ್ವಾರದಲ್ಲಿ ನಿಂತಿರುವ ರಾವಣನನ್ನು ನಾನು ಸೌಮಿತ್ರಿಯೊಡನೆ ಇದಿರಿಸುತ್ತೇನೆ ಎಂದು ರಾಮ ತನ್ನ ಸೈನ್ಯವನ್ನು ಆಯಾ ಸ್ಥಳದಲ್ಲಿ ನಿಯೋಜಿಸಿದ.

ರಮ್ಯವಾದ ಸುವೇಲಾದ್ರಿಯನ್ನು ಹತವದಕ್ಕಾಗಿ ರಾಮನು ಲಕ್ಷ್ಮಣ ಸುಗ್ರೀವ ವಿಭೀಷಣ ರೊಡನೆ ಉದ್ಯುಕ್ತನಾದ. ಸುವೇಲ ಪರ್ವತವನ್ನು ಹತ್ತಿ ನೋಡಿದ ರಾಮ, ಮಿತ್ರರೆ! ಈ ರಮ್ಯ ವಾದ ಸುವೇಲ ಪರ್ವತವನ್ನು ಹತ್ತಿ ಈರಾತ್ರಿಯನ್ನು ನಾವು ಅಲ್ಲಿ ಕಳೆಯೋಣ. ಈ ಪರ್ವತ ನಾನಾಧಾತುಗಳಿಂದ ಕೂಡಿ ಶೋಭಿಸುತ್ತಿದೆ. ಇದರ ಮೇಲೆ ಹತ್ತಿ ಅಧಾರ್ಮಿಕನಾದ ಆ ರಾವಣನ ಬಲವನ್ನೂ ಲಂಕಾಪುರಿಯನ್ನೂ ನೋಡೋಣ ಎಂದು ಹೇಳಿ ಸುವೇಲಾದ್ರಿಯನ್ನು ಹತ್ತಿದರು. ಸುವೇಲ ಪರ್ವತದ ಮೇಲಿನಿಂದ ಲಂಕೆ ಚೆನ್ನಾಗಿ ಕಾಣುತ್ತಿತ್ತು. ಲಂಕೆಯ ಸುತ್ತಲೂ ಎತ್ತರವಾದ ಕೋಟೆಯಗೋಡೆ. ಸುತ್ತಲೂ ನೀಲವರ್ಣದ ಭೀಮಕಾಯ ರಾಕ್ಷಸರು ಎರಡನೆಯ ಕೋಟೆಯಂತೆ ನಿಂತಿದ್ದರು. ಯುದ್ಧಕ್ಕೆ ಸನ್ನದ್ಧರಾಗಿ ನಿಂತ ಆ ರಾಕ್ಷಸರನ್ನು ಕಂಡ ವಾನರರು ಉತ್ಸಾಹದಿಂದ ಸಿಂಹ ನಾದ ಮಾಡಿದರು. ಆ ಸಮಯಕ್ಕೆ ಸರಿಯಾಗಿ ಸೂರ್ಯ ಅಸ್ತಾಚಲವನ್ನು ಸೇರಿದ. ರಾಮ ತನ್ನ ಅನುಚರರೊಡನೆ ಸುವೇಲಾದ್ರಿಯ ಮೇಲೆ ಆ ರಾತ್ರಿಯನ್ನು ಕಳೆದ.

ಸುವೇಲ ಪರ್ವತದ ಮೇಲಿನಿಂದ ಲಂಕಾಪುರಿ ಚೆನ್ನಾಗಿ ಕಾಣುತ್ತಿತ್ತು. ಪರ್ವತದ ಅತ್ಯಂತ ಎತ್ತರವಾದುದು ತ್ರಿಕೂಟ ಶಿಖರ. ಅದರ ಮೇಲ್ಭಾಗ ನೂರು ಯೋಜನ ವಿಸ್ತಾರವುಳ್ಳದ್ದು. ಆ ಎತ್ತರವಾದ ತ್ರಿಕೂಟ ಶಿಖರ ಬಹಳ ಕಡಿದಾದುದು. ಅದನ್ನು ಹತ್ತಲು ಯಾರಿಂದಲೂ ಸಾಧ್ಯ ವಾಗದು. ಅಂಥ ಕಠಿಣವಾದ ದುರ್ಗದ ಶಿಖರದಲ್ಲಿ ಲಂಕಾಪುರಿ ಇತ್ತು. ಲಂಕೆಯನ್ನು ಸಾಕ್ಷಾತ್ ವಿಶ್ವಕರ್ಮ ನಿರ್ಮಿಸಿದ್ದ. ಹತ್ತು ಯೋಜನ ಅಗಲ, ಇಪ್ಪತ್ತು ಯೋಜನ ಉದ್ದವುಳ್ಳ ಮಹಾಪುರಿ ಅದು. ಅನೇಕ ವಿಧವಾದ ಉದ್ಯಾನವನಗಳಿಂದಲೂ, ಮೇಘವನ್ನು ಮುಟ್ಟುವ ಎತ್ತರವಾದ ಪ್ರಾಸಾದಗಳಿಂದಲೂ ಆ ಪಟ್ಟಣ ಸುಶೋಭಿತವಾಗಿತ್ತು.

ಸಾಲ, ತಾಲ, ತಮಾಲ, ಅಶೋಕ, ಅರ್ಜುನ, ಚಂದನ, ದೇವದಾರು, ಚಂಪಾಕ, ಪುನ್ನಾಗ, ಕದಳಿ, ಗೋರಂಟೆ, ಕದಂಬ ಮುಂತಾದ ಬಗೆಬಗೆಯ ವಿಧ ವಿಧವಾದ ವೃಕ್ಷಗಳಿಂದಲೂ ಪುಷ್ಟಿಸುವ ನಾನಾ ತರುಲತೆಗಳಿಂಲೂ ಲಂಕೆಯ ವನ, ಉಪವನಗಳು ಶೋಭಿಸುತ್ತಿದ್ದುವು. ಇಂದ್ರನ ಚೈತ್ರರಥ ನಂದನವನದಂತೆ ರಾವಣನ ಲಂಕೆಯ ಉದ್ಯಾನವನಗಳು ಶೋಭಿಸುತ್ತಿದ್ದವು. ವರ್ಷಾಕಾಲದ ಮೇಘಗಳನ್ನು ಮುಟ್ಟುವಂಥ ಎತ್ತರವಾದ ಮಾಳಿಗೆಯ ಮನೆಗಳು ಅಲ್ಲಲ್ಲಿ ಶೋಭಿ ಸುತ್ತಿದ್ದವು. ಇಂಥ ಲಂಕಾಪುರಿಯತ್ತ ಸುಗ್ರೀವನಿಂದ ಆಜ್ಞಪ್ತವಾದ ವಾನರಸೈನ್ಯ ಸಿಂಹನಾದ ಮಾಡುತ್ತಾ ಸಾಗುತ್ತಿತ್ತು.

ಸುಗ್ರೀವಸಹಿತನಾದ ರಾಮ ಸುವೇಲಪರ್ವತದ ಶಿಖರವನ್ನು ತಲಪಿದನಷ್ಟೆ. ಅಲ್ಲಿಂದ ನೇರ ವಾಗಿ ಲಂಕೆ ಕಾಣುತ್ತಿತ್ತು. ಲಂಕೆಯ ಗೋಪುರದ ಮಾಳಿಗೆಯ ಮೇಲೆ ದುರ್ಜಯನಾದ ರಾಕ್ಷಸ

ರಾಜ ರಾವಣ ಕುಳಿತಿದ್ದ. ಅವನ ತಲೆ ಶ್ವೇತಚ್ಛತ್ರದ ನೆರಳಿನಲ್ಲಿತ್ತು. ಎರಡೂ ಕಡೆಯಲ್ಲಿ ಶ್ವೇತಚಾಮರವನ್ನು ಬೀಸುತ್ತಿದ್ದರು ರಾವಣನ ದೇಹವೆಲ್ಲ ರಕ್ತಚಂದನದಿಂದ ಲೇಪಿತವಾಗಿತ್ತು. ಕೆಂಪುರತ್ನದ ಆಭರಣಗಳನ್ನು ಧರಿಸಿಕೊಂಡಿದ್ದ.

ರಾವಣ ಭೀಮಕಾಯ. ಕಾಲಮೇಘದಂತೆ ಕಪ್ಪಾದ ದೇಹಕಾಂತಿ. ಅವನ ಆ ಕಪ್ಪಾದ ಶರೀರಕ್ಕೆ ಸುವರ್ಣದ ಆಭರಣಗಳು ಕಳೆಕೊಟ್ಟಿದ್ದವು. ಚಿನ್ನದ ನರಿಗೆಯುಳ್ಳ ವಸ್ತ್ರವನ್ನು ಧರಿಸಿದ್ದ. ಐರಾವತದೊಡನೆ ಹೋರಾಡಿದಾಗ ಐರಾವತದ ದಂತ ಅವನ ಎದೆಯಲ್ಲಿ ಊರಿ ಅದರಿಂದ ಆದ ಗುರುತನ್ನು ಎತ್ತಿ ತೋರಿಸುತ್ತಿತ್ತು ಅವನ ವಕ್ಷಸ್ಥಲ. ರಕ್ತದಂತೆ ಕೆಂಪಾದ ವಸ್ತ್ರವನ್ನು ಧರಿಸಿದ್ದ ರಾವಣ ಸಂಧ್ಯಾಕಾಲದ ಅರುಣರಾಗದಿಂದ ಆಚ್ಛಾದಿತವಾದ ಕಾಲಮೇಘದಂತೆ ಕಾಣುತ್ತಿದ್ದ.

ತ್ರಿಕೂಟಶಿಖರದ ಮೇಲೆ ಈರೀತಿ ಆಸೀನನಾಗಿದ್ದ ರಾವಣನನ್ನು ನೋಡಿದ ಸುಗ್ರೀವ. ಅವನಿಗೆ ಕೋಪ ತಡೆಯಲಾಗಲಿಲ್ಲ. "ಈ ಪಾಪಿ ತಾನೇ ನನ್ನ ರಾಮನ ಪತ್ನಿಯನ್ನು ಅಪಹರಿಸಿರುವುದು. ಈಗ ಕಿರೀಟ ಇಟ್ಟುಕೊಂಡು ಮೆರೆಯುತ್ತಿದಾನೆ. ಇವನಿಗೆ ಸರಿಯಾದ ಶಾಸ್ತಿ ಮಾಡಬೇಕು" ಎಂದುಕೊಂಡು ಸ್ವಲ್ಪಹೊತ್ತು ದುರದುರನೆ ರಾವಣನನ್ನು ನೋಡಿದ. ಯಾರಿಗೂ ತಿಳಿಸದೆ ಥಂಗನೆ ಸುವೇಲ ಪರ್ವತದಿಂದ ತ್ರಿಕೂಟ ಶಿಖರಕ್ಕೆ ಹಾರಿದ. ರಾವಣನ ಮುಂದೆ ನಿಂತು ತನ್ನ ಬಲವಾದ ಮುಷ್ಟಿಯಿಂದ ರಾವಣನ ಎದೆಗೆ ಹೊಡೆದ. ಅಕಸ್ಮಾತ್ತಾಗಿ ಆದ ಈ ಪ್ರಹಾರಕ್ಕೆ ಜರ್ಝರಿತನಾದ ರಾವಣ ಸಿಂಹಾಸನದಿಂದ ಕೆಳಗೆ ಬಿದ್ದ. ತಲೆಯಲ್ಲಿದ್ದ ಕಿರೀಟ ಸಿಡಿದು ಬಿದ್ದಿತು. ಮೇಲಿಂದ ಮೇಲೆ ಸುಗ್ರೀವ ಮುಷ್ಟಿಯಿಂದ ರಾವಣನನ್ನು ಗುದ್ದುತ್ತಾ "ಪಾಪಿ!-ನಾನು ಯಾರು ತಿಳಿದೆಯಾ. ರಘುನಂದನನ ಸಖ ಹಾಗೂ ದಾಸ ಸುಗ್ರೀವ ನಾನು. ನನ್ನ ಸ್ವಾಮಿಯ ಪತ್ನಿಯನ್ನು ಅಪಹರಿಸಿದ ನಿನ್ನನ್ನು ಈಗಲೇ ತೀರಿಸಿಬಿಡುತ್ತೇನೆ" ಎಂದ.

ಸಾವರಿಸಿಕೊಂಡ ರಾವಣ "ಓಹೋ! ನೀನೇಯೋ ಸುಗ್ರೀವ? ಇದುವರೆಗೆ "ಸುಗ್ರೀವ" ಅಂದರೆ ಅಂದವಾದ ಕೊರಳುಳ್ಳವ ಎಂದುಕೊಂಡಿದ್ದೆ. ನನ್ನ ಕೈಗೆ ಸಿಕ್ಕಿದ ಮೇಲೆ ಸುಗ್ರೀವ! ನೀನು ಹೀನಗ್ರೀವನಾಗುವಿ–ನೋಡು! ಎನ್ನುತ್ತಾ ರಾವಣನೂ ಮುಷ್ಟಿಯಿಂದ ಸುಗ್ರೀವನಿಗೆ ಹೊಡೆದ. ರಾಕ್ಷಸರಾಜನಾದ ರಾವಣನಿಗೂ ಕಪಿರಾಜನಾದ ಸುಗ್ರೀವನಿಗೂ ಸೆಣಸಾಟ ಪ್ರಾರಂಭವಾಯಿತು. ಇಬ್ಬರೂ ಮಹಾಪರಾಕ್ರಮಿಗಳೇ. ಮದಿಸಿದ ಆನೆಯಂತೆ ಸುಗ್ರೀವ, ಗಜರಾಜನಂತೆ ರಾವಣ. ಒಬ್ಬರನ್ನೊಬ್ಬರು ಹಿಡಿದು, ಹೊಡೆದು, ಗುದ್ದಿ ಹೊಡೆದಾಡುತ್ತಿದ್ದರು. ಅನಾಮತ್ತಾಗಿ ರಾವಣ ಸುಗ್ರೀವನನ್ನು ಕೆಳಗೆ ಕುಕ್ಕಿದ. ಪುಟಹಾಕಿದ ಚೆಂಡಿನಂತೆ ತಕ್ಷಣ ಸುಗ್ರೀವ ಜಿಗಿದು ರಾವಣನನ್ನು ಹಿಡಿದು ತನ್ನ ಉಗುರುಗಳಿಂದ ಪರಚಿ, ಹಲ್ಲುಗಳಿಂದ ಕಡಿದು ಮುಷ್ಟಿಯಿಂದ ಹೊಡೆದ. ಇವರಿಬ್ಬರ ಪದಾಘಾತದಿಂದ ಭೂಮಿ ಅದಿರತೊಡಗಿತು. ಕೆಲವು ಸಲ ಬಹಳ ದ್ರುತ ಗತಿಯಿಂದ ಸಾಗಿಬರುತ್ತಿದ್ದರು. ಮತ್ತೆ ಕೆಲವು ಸಲ ವಕ್ರಗತಿ. ಹೀಗೆ ನಾನಾ ಗತಿಗಳಿಂದ, ವಿಧ. ವಿಧವಾದ ಕ್ರಮದಲ್ಲಿ ಮುಷ್ಟಿಯುದ್ಧ, ದೃಷ್ಟಿಯುದ್ಧ, ದ್ವಂದ್ವಯುದ್ಧ, ಮಲ್ಲಯುದ್ಧ, ಮಾಡಿದರು ಇಬ್ಬರೂ.

ಕೊನೆಗೆ ರಾವಣ ಮಾಯಾಬಲದ ಸುಗ್ರೀವನನ್ನು ಆಕ್ರಮಿಸಲು ನಿಶ್ಚಯಿಸಿದ. ಚಾಣಾಕ್ಷ ಸುಗ್ರೀವ ಇದನ್ನರಿತ. ರಾವಣ ತನ್ನ ಮಾಯೆಯನ್ನು ತೋರಿಸುವ ಮುನ್ನವೇ ಅವನನ್ನು ನೂಕಿ ಥಂಗನೆ ವಾಯುಮಾರ್ಗದಲ್ಲಿ ಹಾರಿ ಮತ್ತೆ ರಾಮನ ಬಳಿಗೆ ಬಂದ.

ಜಯಶಾಲಿಯಾಗಿ ಬಂದ ಸುಗ್ರೀವನನ್ನು ಎಲ್ಲ ವಾನರರೂ ಅಭಿನಂದಿಸಿದರು.

ರಕ್ತದಿಂದ ತೋಯ್ದು ಹೋಗಿದ್ದ ಸುಗ್ರೀವನನ್ನು ರಾಮ ಅಪ್ಪಿಕೊಂಡು "ಮಿತ್ರ! ಇದೇನು! ನನ್ನ ಸಲಹೆಯನ್ನೂ ಕೇಳದೆ ಏಕಾಏಕಿ ರಾಜನಾದವ ಇಂಥ ಸಾಹಸವನ್ನು ಮಾಡಬಾರದು. ಇನ್ನು ಮೇಲೆ ಇಂಥ ದುಸ್ಸಾಹಸವನ್ನು ಮಾಡಬೇಡ ಕಂಡೆಯಾ! ಒಂದು ವೇಳೆ ನಿನಗೇನಾದರೂ ಆಗಿ ಬಿಟ್ಟಿದ್ದರೆ ನಾ ಏನು ಮಾಡಬೇಕಾಗಿತ್ತು. ವಚನ ಕೊಟ್ಟಿದ್ದಕ್ಕಾಗಿ ಯುದ್ಧಮಾಡಿ ರಾವಣನನ್ನು ಕೊಂದು ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕಮಾಡಿ, ಅಯೋಧ್ಯೆಯನ್ನು ಭರತನಿಗೆ ಕೊಟ್ಟು ನಾನು ಪ್ರಾಣಬಿಡಬೇಕು ಎಂದು ನಿಶ್ಚಯಿಸಿದ್ದೆ. ಸುಗ್ರೀವಾ! ನೀ ಇಲ್ಲದ ಮೇಲೆ ನನಗೆ ಯಾರಿಂದ ಏನು ಸುಖ! ಇನ್ನು ಮೇಲೆ ಇಂಥ ಸಾಹಸವನ್ನು ಮಾಡಬೇಡ" ಎಂದ.

ಸುಗ್ರೀವ ''ಪ್ರಭು, ರಾಘವ, ನಿನ್ನ ಪತ್ನಿಯನ್ನು ಅಪಹರಿಸಿದ ಆ ರಾವಣ ಹಾಗೆ ಸಿಂಹಾಸನದ ಮೇಲೆ ಠೀವಿಯಿಂದ ಕುಳಿತಿರುವುದನ್ನು ನೋಡಲಾಗಲಿಲ್ಲ ನನ್ನಿಂದ. ಅದರಿಂದಲೇ ಹಾಗೆ ಮಾಡಿದೆ" ಎಂದ.

ಸುಗ್ರೀವನನ್ನು ಅಭಿನಂದಿಸಿ ರಾಮನು ಲಕ್ಷ್ಮಣನನ್ನು ಕುರಿತು ಆಕ್ರಮಣ ಮಾಡುವ ಸಲುವಾಗಿ ವ್ಯೂಹಾಕಾರದಲ್ಲಿ ಸೈನ್ಯವನ್ನು ಸಿದ್ಧಗೊಳಿಸುವಂತೆ ಹೇಳಿದ.

ರಾಮನು ಲಕ್ಷ್ಮಣನಿಗೆ ಆಗ ಕಾಣಿಸಿಕೊಳ್ಳುತ್ತಿದ್ದ ಅಪಶಕುನಗಳನ್ನೆಲ್ಲ ವಿವರಿಸಿ ಹೇಳಿ "ಲಕ್ಷ್ಮಣಾ! ನೋಡು. ನಕ್ಷತ್ರಗಳೆಲ್ಲ ಕಾಂತಿಹೀನವಾಗಿವೆ. ಸೂರ್ಯಮಂಡಲ ಚಿಕ್ಕದಾಗಿ, ಒಣಗಿದಂತೆ, ಬಹಳ ಕೆಂಪಾಗಿ ಕಾಣಿಸುತ್ತದೆ. ಇದು ಅಮಂಗಳ ಸೂಚಕವಾಗಿದೆ. ಅಲ್ಲದೆ ಸೂರ್ಯಮಂಡಲದಲ್ಲಿ ಕಪ್ಪು ಚಿಹ್ನೆ ಬೇರೆ ಕಾಣಿಸುತ್ತಿದೆ. ಹದ್ದು, ಕಾಗೆ, ನರಿ–ಇವೆಲ್ಲ ಅಲ್ಲಲ್ಲೇ ಗುಂಪುಗುಂಪಾಗಿ ಕುಳಿತು ವಿಕಾರ ಶಬ್ದ ಮಾಡುತ್ತಿವೆ. ಚಂದ್ರನು ಪ್ರಕಾಶ ಹೀನನಾಗಿದಾನೆ. ಚಂದ್ರಮಂಡಲದ ಸುತ್ತ ಕಪ್ಪು ಛಾಯೆ ಹಾಗೂ ಕೆಂಪು ಛಾಯೆ ಕಾಣಬರುತ್ತಿದೆ. ಚಂದ್ರನ ಕಿರಣ ತಾಪಹರಣಮಾಡುವ ಬದಲು ತಾಪದಾಯಕವಾಗಿದೆ. ಲೋಕನಾಶವಾಗುವ ಸಮಯದಲ್ಲಿ ಯಾವಯಾವ ಭಯಂಕರ ಚಿಹ್ನೆಗಳು ಕಾಣಬರುತ್ತವೋ ಅವೆಲ್ಲ ಈಗ ಕಾಣಿಸಿಕೊಳ್ಳುತ್ತಿವೆ. ಇದನ್ನೆಲ್ಲ ನೋಡುವಾಗ ರಾಕ್ಷಸಕುಲ ಸಂಪೂರ್ಣವಾಗಿ ಅಳಿದು ಹೋಗುತ್ತದೆ, ಎನಿಸುತ್ತದೆ. ಇನ್ನು ನಾವು ಶೀಘ್ರವಾಗಿ ನಮ್ಮ ಸೈನ್ಯವನ್ನು ಆಯಾಸ್ಥಾನದಲ್ಲಿ ನಿಯೋಜಿಸಿ ಲಂಕೆಯಮೇಲೆ ಆಕ್ರಮಣ ಮಾಡಬೇಕು" ಎಂದು ಹೇಳಿ ಎಲ್ಲರೊಂದಿಗೆ ಆ ಪರ್ವತ ಶಿಖರದಿಂದ ಕೆಳಗೆ ಇಳಿದ.

ಕೆಳಗೆ ಇಳಿದ ರಾಮ ತನ್ನ ಸೈನ್ಯವನ್ನು ಸುಯೋಜಿತವಾಗಿ ಆಯಾ ಸ್ಥಳದಲ್ಲಿ ಮುತ್ತುವಂತೆ ಆಜ್ಞಾಪಿಸಿದ. ಎಲ್ಲರನ್ನೂ ಕುರಿತು ರಾಮ ''ವಾನರರೆ, ನೀವೆಲ್ಲ ಕಾಮರೂಪಿಗಳು. ಆದರೆ, ಈ ಯುದ್ಧದಲ್ಲಿ ನೀವೆಲ್ಲ ವಾನರರೂಪದಲ್ಲೇ ಹೋರಾಡಬೇಕು. ನಾನು, ಲಕ್ಷ್ಮಣ, ವಿಭೀಷಣ ಅವನ ಅನುಚರರಾದ ನಾಲ್ವರು ರಾಕ್ಷಸರು ಈ ಏಳುಜನ ಮಾತ್ರ ಮನುಷ್ಯರೂಪದಲ್ಲಿರುತ್ತೇವೆ. ನೀವೆಲ್ಲ ವಾನರ ರೂಪದಲ್ಲೇ ಇದ್ದು ಯುದ್ಧ ಮಾಡಬೇಕು. ಇದು ನಮ್ಮ ಸಂಕೇತ" ಎಂದು ಹೇಳಿ ಸರ್ವಸೈನ್ಯದೊಡನೆ ಶುಭಮುಹೂರ್ತದಲ್ಲಿ ಲಂಕೆಯನ್ನು ಮುತ್ತಲು ಹೊರಟ.

ವಾನರರೆಲ್ಲ ಅಮಿತವಾದ ಉತ್ಸಾಹದಿಂದ ಹೊರಟರು. ಸರ್ವಸೇನಾಧಿಪ ನೀಲ, ಅತ್ಯಂತ ಪರಾಕ್ರಮಿಗಳಾದ ಮೈಂದ, ದ್ವಿವಿಧರೊಂದಿಗೆ ಪ್ರಹಸ್ತನಿದ್ದ ಪೂರ್ವದ್ವಾರದ ಕಡೆಗೆ ಹೊರಟ. ಯುವರಾಜನಾದ ಅಂಗದ ಅಸಂಖ್ಯ ವಾನರರೊಂದಿಗೆ ಮಹೋದರ, ಮಹಾಪಾರ್ಶ್ವರನ್ನು ಇದಿರಿಸಲು ದಕ್ಷಿಣದ್ವಾರದ ಕಡೆಗೆ ಹೊರಟ. ಹನುಮಂತ ಲಕ್ಷಾಂತರ ವಾನರ ಸೈನ್ಯದೊಡನೆ ಇಂದ್ರಜಿತ್ತು ಇದ್ದ ಪಶ್ಚಿಮ ದ್ವಾರದ ಕಡೆಗೆ ಹೊರಟ. ಸುಗ್ರೀವ, ಜಾಂಬವಂತ, ವಿಭೀಷಣರು ಲಂಕಾ ಮಧ್ಯದಲ್ಲಿ

ರಕ್ಷಿಸುತ್ತಿದ್ದ ವಿರೂಪಾಕ್ಷನಿಗಿದಿರಾಗಿ ಸಿದ್ಧರಾದರು. ರಾವಣ ಸ್ವಯಂ ಉತ್ತರದ್ವಾರದಲ್ಲಿದ್ದ. ಇವನನ್ನು ಇದಿರಿಸಲು ರಾಘವನೇ ನಿಂತ.

ಇಷ್ಟೆಲ್ಲ ಸಿದ್ಧತೆಗಳನ್ನು ಮಾಡಿಕೊಂಡ ನಂತರ ರಾಮ ರಾಜನೀತಿಯನ್ನು ಅನುಕ್ಷಿಸಿದವನಾಗಿ ವಾಲಿಪುತ್ರ ಅಂಗದನನ್ನು ಕರೆದು ಅವನಿಂದ ರಾವಣನಿಗೆ ಸಂದೇಶವನ್ನು ಕಳುಹಿಸಿದ. ಪಿತೃಸಮ ಪರಾಕ್ರಮಿಯೆನಿಸಿದ ವಾಲಿಪುತ್ರ ಛಂಗನೆ ನೆಗೆದು ರಾವಣ ಕುಳಿತಿದ್ದ ಕಡೆಗೆ ಬಂದ. ಅಲ್ಲಿ ರಾವಣ ಮಂತ್ರಿಗಳೊಡನೆ ಕುಳಿತಿದ್ದ. ಅವನ ಮುಂದೆಬಂದು ನಿಂತ ಈ ವಾನರನನ್ನು ರಾವಣ ನೋಡಿದವನೇ "ನೀ ಯಾರು ?" ಎಂದ.

ನಿನಗೆ ನನ್ನ ಪರಿಚಯ ಇರಬಹುದು ಅಲ್ಲವೆ ? ಎಂದ ಅಂಗದ.

ಅದು ಹೇಗೆ ? ಹಿಂದೆ ಬಂದಿದ್ದ ವಾನರನೋ ನೀನು ? ಎಂದ.

ಅಲ್ಲ, ಅವನಲ್ಲ.

ಹಾಗಾದರೆ ಅವನೆಲ್ಲಿ ?

ಅವನನ್ನು ನಾವೆಲ್ಲ ಓಡಿಸಿಬಿಟ್ಟೆವು ಎಂದ.

ಏಕೆ ?

ಅವನು ಲಂಕೆಯಲ್ಲಿ ರಾಕ್ಷಸರ ಕೈಗೆ ಸಿಕ್ಕುಬಿದ್ದ. ರಾವಣನನ್ನು ಸಂಹರಿಸಿ ಬಾ ಎಂದು ಕಳುಹಿಸಿದರೆ ಅವನನ್ನು ಹಾಗೆಯೇ ಬಿಟ್ಟು ಅವನು ಕಳುಹಿಸಿದ ರಾಕ್ಷಸರ ಕೈಗೆ ಸಿಕ್ಕಿಬಿದ್ದ. ಇದರಿಂದ ಕೋಪಗೊಂಡು "ನೀ ವಾನರ ಸಮೂಹದಲ್ಲಿ ಇರಲು ಲಾಯಕ್ಕಿಲ್ಲ" ಎಂದು ಓಡಿಸಿಬಿಟ್ಟರು. ಎಲ್ಲೋ ಅಡಗಿಕೊಂಡಿದಾನೆ ಆ ಕಪಿ, ಎಂದ.

ಈ ಪ್ರಕರಣವನ್ನು ವಾಲ್ಮೀಕಿ ಹೇಳಲಿಲ್ಲ. ಆದರೆ ಜ್ಞಾನಿಗಳಾದ ಕವಿಗಳು ಚಮತ್ಕಾರವಾಗಿ ಹೇಳಿದಾರೆ. ಇದರಲ್ಲಿ ಒಂದು ಮುಖ್ಯವಾದ ಉದ್ದೇಶವುಂಟು. ಶತ್ರುವಿಗೆ ಭಯವನ್ನು ಹುಟ್ಟಿಸುವುದಕ್ಕಾಗಿಯೇ ಅಂಗದ ಹೀಗೆ ಹೇಳಿದ. ಲಂಕೆಯನ್ನು ಸುಟ್ಟ ಹನುಮಂತನೆಂಬ ಒಬ್ಬ ಸಾಮಾನ್ಯ ಕಪಿಯೇ ಹೀಗಾದರೆ, ಇನ್ನು ರಾಮನ ಸೈನ್ಯದಲ್ಲಿರುವ ಅಸಂಖ್ಯಾತ ವಾನರರು ಎಂಥವರೋ ! ಎಂಬ ಭೀತಿ ರಾವಣನಿಗುಂಟಾಗಲಿ ಎಂದೇ ಅಂಗದ ಹೀಗೆ ಹೇಳಿದ.

ರಾವಣನಿಗೆ ಕೋಪ ಒತ್ತರಿಸಿ ಬಂದಿತು. ಆದರೂ ತಡೆದ. ಹುಂ ! ನೀ ಯಾರು ? ಹೇಳು? ಎಂದ,

ಹೇಳಿದೆನಲ್ಲ, ನಿನಗೆ ನನ್ನ ಪರಿಚಯ ಇರಬಹುದು ಎಂದು, ನಾನಂತೂ ನಿನ್ನನ್ನು ಚೆನ್ನಾಗಿ ನೋಡಿದೇನೆ ಎಂದ.

ಯಾವಾಗ ? ಎಲ್ಲಿ ? ಎಂದು ಕೇಳಿದ ರಾವಣ. ನಾನು ಮಗುವಾಗಿದ್ದಾಗ, ನನ್ನ ತಂದೆ ವಾಲಿ ಒಮ್ಮೆ ಸಮುದ್ರತೀರಕ್ಕೆ ಹೋಗಿದ್ದಾಗ ನಿನ್ನನ್ನು ಕಟ್ಟಿಕೊಂಡು ಬಂದಿದ್ದರು. ಮಗು ಅಂಗದ ಅಳುತ್ತಾನೆ, ಅವನ ಸಮಾಧಾನಕ್ಕೆ ಇರಲಿ ಎಂದು ನನ್ನ ತೊಟ್ಟಿಲಿನ ಮೇಲ್ಭಾಗದಲ್ಲಿ ನಿನ್ನನ್ನು ಕಟ್ಟಿದರು. ಹತ್ತು ತಲೆಯ ಹುಳ ಪ್ರದರ್ಶನಕ್ಕಿಡಲಾಗಿದೆ ಎಂದು ಎಲ್ಲರೂ ಬಂದು ನಿನ್ನನ್ನು ನೋಡಿ ಹೋಗುತ್ತಿದ್ದರು. ನನ್ನ ತೊಟ್ಟಿಲಿನ ಮೇಲ್ಭಾಗದಲ್ಲೇ ನಿನ್ನನ್ನು ನೋಡಿದೇನೆ. ಜ್ಞಾಪಕ ಇದೆಯೇ ? ಆ ವಾಲಿಯ ಮಗ ನಾನು. "ಅಂಗದ" ಎಂದು ನನ್ನ ಹೆಸರು. ಅಂಥ ಪರಾಕ್ರಮಿಯಾದ ವಾಲಿಯನ್ನೇ ರಾಮ ಒಂದೇ ಬಾಣದಿಂದ ಹೊಡೆದುಕೊಂದ. ಅಂಥ ರಾಮನ ದೂತ

ನಾನು ಎಂದು ಹೇಳಿ ರಾಮ ಹೇಳಿಕಳುಹಿಸಿದ ಒಂದು ಮಾತನ್ನೂ ಬಿಡದೆ ಯಥಾವತ್ತಾಗಿ ಹೇಳಿದ.

"ರಾವಣ ! ನೀನು ಅಧರ್ಮ ಮಾರ್ಗದಲ್ಲಿ ಪ್ರವರ್ತಿಸಿ ದೇವ ಯಕ್ಷ, ಗಂಧರ್ವ, ಋಷಿಗಳಿಗೆಲ್ಲ ಶತ್ರುವಾಗಿದೀಯೆ. ನಿನ್ನನ್ನು ನನ್ನ ಅಮೋಘವಾದ ಬಾಣಗಳು ಈಗಲೇ ನಾಶಮಾಡುತ್ತವೆ. ನೀನು ಸತ್ತಮೇಲೆ ಸಮಸ್ತ ಶ್ರೀಯುಕ್ತವಾದ ಲಂಕಾ ರಾಜ್ಯವು ವಿಭೀಷಣನದಾಗುತ್ತದೆ. ಆದ್ದರಿಂದ, ನನ್ನ ಮಾತನ್ನು ಕೇಳು. ನೀನು ಜೀವಿಸಬೇಕು ಎಂದು ಇಚ್ಛಿಸುವುದಾದರೆ ಸೀತೆಯನ್ನು ತಂದೊಪ್ಪಿಸಿ ಶರಣಾಗತನಾಗು. ಇಲ್ಲವಾದರೆ ಸಾಯಲು ಸಿದ್ಧನಾಗು. ಸಾಯುವ ಮುನ್ನ ಯಥೇಚ್ಛವಾಗಿ ಭೋಗವನ್ನನುಭವಿಸಿ, ಲಂಕೆಯನ್ನೆಲ್ಲ ಒಮ್ಮೆ ಚೆನ್ನಾಗಿ ನೋಡಿಬಿಟ್ಟು ಬಾ. ಏಕೆಂದರೆ, ಒಮ್ಮೆ ನನ್ನ ಇದಿರಿಗೆ ಬಂದು ನಿಂತ ಮೇಲೆ ನಿನ್ನನ್ನು ನಾನು ಹಾಗೆಯೇ ಜೀವದೊಂದಿಗೆ ಬಿಡಲಾರ.

ನೀನು ಆಕಾಶದಲ್ಲೇ ಅವಿತುಕೋ, ಪಾತಾಳದಲ್ಲೇ ಬಚ್ಚಿಟ್ಟುಕೋ, ನನ್ನ ಬಾಣದ ಸವಿಯನ್ನು ಸವಿಯದೆ ಇರಲಾರೆ. ನಿನಗೆ ನನ್ನ ಬಾಣಗಳಿಂದ ರಕ್ಷಣೆ ಎಲ್ಲೂ ಸಿಗಲಾರದು. ಆದಕ್ಕೇ ಆ ಬಾಣಗಳು ಬರುವ ಮೊದಲು ಸೀತೆಯನ್ನು ಒಪ್ಪಿಸಿ ನನಗೆ ಶರಣಾಗತನಾಗು."

"ಹೀಗೆ ರಾಮ ಹೇಳಿದಾನೆ" ಎಂದು ಅಂಗದ ರಾವಣನಿಗೆ ರಾಮ ಹೇಗೆ ಹೇಳಿ ಕಳುಹಿಸಿದ್ದನೋ ಹಾಗೆಯೇ ನಿರ್ಭೀತಿಯಿಂದ ಹೇಳಿದ.

ಅಂಗದನ ಮಾತುಗಳನ್ನು ಕೇಳುತ್ತಿದ್ದಂತೆ ರಾವಣನಿಗೆ ಕೋಪ ಉಕ್ಕೇರಿತು. "ಹಿಡಿ ! ಈ ದುಷ್ಟ ವಾನರನನ್ನು. ಈಗಲೇ ಕೊಲ್ಲಿ ಈ ಕಪಿಯನ್ನು" ಎಂದು ಗುಡುಗಿದ.

ಮಹಾಕಾಯರಾದ ನಾಲ್ವರು ರಾಕ್ಷಸರು ಓಡಿಬಂದು ಅಂಗದನನ್ನು ಹಿಡಿದುಕೊಂಡರು. ಅವರು ತನ್ನನ್ನು ಹಿಡಿದುಕೊಂಡಂತೆಯೇ ಮಹಾಬಲಿಯಾದ ಅಂಗದ ಛಂಗನೇ ಮೇಲೆ ಹಾರಿದ. ಅಂಗದ ಹಾರಿದ ರಭಸಕ್ಕೆ ಆ ನಾಲ್ವರು ರಾಕ್ಷಸರೂ ಹಾಗೇ ಧೊಪ್ಪನೆ ಕೆಳಗೆ ಬಿದ್ದರು. ರಾವಣ, ಅವನ ಪರಿವಾರದವರು ನೋಡುತ್ತಿದ್ದಂತೆಯೇ ಅವನು ಕುಳಿತಿದ್ದ ಎತ್ತರವಾದ ಪ್ರಾಸಾದಕ್ಕೆ ಹಾರಿ ಆ ಮಾಳಿಗೆಯನ್ನು ಪುಡಿಪುಡಿಮಾಡಿದ. ಆಕಾಶ ಮಾರ್ಗದಲ್ಲಿ ಹಾರಿ ಬಂದು ರಾಮನ ಸಮೀಪಕ್ಕೆ ಬಂದ ರಾಕ್ಷಸರಿಗೆ ಸಂತಾಪವನ್ನೂ, ವಾನರರಿಗೆ ಹರ್ಷವನ್ನೂ ಉಂಟುಮಾಡುತ್ತ ಅಂಗದ ರಾಮನ ಅಡಿದಾವರೆಯಲ್ಲಿ ಬಾಗಿ ನಮಿಸಿದ.

ಅಂಗದನಿಂದ ವಿಷಯವನ್ನು ತಿಳಿದು ರಾಮ ಲಂಕೆಯನ್ನು ಆಕ್ರಮಿಸಲು ನಿಶ್ಚಯಿಸಿದ. ಮಹಾಪರಾಕ್ರಮಿಗಳಾದ ವಾನರರು ಲಂಕೆಯನ್ನು ಮುತ್ತಿದರು. ಕೆಲವು ವಾನರರು ಹತ್ತು ಆನೆಯ ಬಲವುಳ್ಳವರು, ಮತ್ತೆ ಕೆಲವರು ಹತ್ತು ಸಹಸ್ರ ಆನೆಯ ಬಲವುಳ್ಳವರು, ಕೆಲವರು ಅಗ್ನಿಯಂತೆ, ಕೆಲವರು ವಾಯುವಿನಂತೆ ಮಹಾಪರಾಕ್ರಮವುಳ್ಳವರು. ಮಹಾ ಉತ್ಸಾಹದಿಂದ ಸಿಂಹನಾದ ಮಾಡುತ್ತಾ ವಾನರರು ಕೋಲಾಹಲ ಮಾಡತೊಡಗಿದರು. ಅತ್ಯಂತ ಭಯಂಕರನಾದ "ಕುಮುದ" ಎಂಬ ವಾನರ ಹತ್ತು ಕೋಟಿ ವಾನರರೊಂದಿಗೆ ಪೂರ್ವ ಭಾಗವನ್ನು ಆಕ್ರಮಿಸಿದ. ವೀರನಾದ ಶತಬಲಿ ಇಪ್ಪತ್ತುಕೋಟಿ ವಾನರರೊಂದಿಗೆ ದಕ್ಷಿಣ ದ್ವಾರವನ್ನು ಮುತ್ತಿಬಿಟ್ಟ. ತಾರಾಪಿತನಾದ ಮಹಾಬಲಿ ಸುಷೇಣ ಕೋಟ್ಯಾಂತರ ವಾನರರೊಂದಿಗೆ ಪಶ್ಚಿಮ ದ್ವಾರವನ್ನು ಆಕ್ರಮಿಸಿದ. ಸಾಕ್ಷಾತ್ ರುದ್ರನಂತೆ ಜ್ವಲಿಸುತ್ತ ರಾಘವ ಸೌಮಿತ್ರಿಯೊಂದಿಗೆ ಅಸಂಖ್ಯ ವಾನರರೊಂದಿಗೆ ಉತ್ತರ ದ್ವಾರವನ್ನು ಮುತ್ತಿದ. ಲಂಗೂರ ಜಾತಿಯ ಕೋಟ್ಯಾಂತರ ವಾನರರೊಂದಿಗೆ ಗವಾಕ್ಷ

ರಾಮನ ಒಂದು ಪಕ್ಕದಲ್ಲಿ ನಿಂತ. ಮಹಾಬಲಿಯಾದ "ದೂಮ್ರ" ಎಂಬ ವಾನರಾಧಿಪತಿ ಕೋಟ್ಯಾಂತರ ವಾನರರೊಂದಿಗೆ ರಾಮನ ಇನ್ನೊಂದು ಪಕ್ಕದಲ್ಲಿ ನಿಂತ. ಕವಚವನ್ನು ಧರಿಸಿ ಶಸ್ತ್ರಪಾಣಿಯಾದ ವಿಭೀಷಣ ರಾಮನ ಸಮೀಪದಲ್ಲೆ ನಿಂತ ಗಜ, ಗವಾಕ್ಷ, ಶರಭ, ಗಂಧಮಾದನ ಎಲ್ಲ ಕಡೆಗಳಲ್ಲೂ ಸುತ್ತುತ್ತಾ ವಾನರರನ್ನು ರಕ್ಷಿಸುತ್ತಿದ್ದರು. ವಾನರರು ಲಂಕೆಯ ಕೋಟೆಯ ಗೋಡೆಯ ಮೇಲೆ ಹತ್ತಿದರು. ಮಣ್ಣು, ಮರಳು, ವೃಕ್ಷ, ಪರ್ವತಶಿಖರ ಇವು ಗಳನ್ನು ಹಾಕಿ ಕಂದಕಗಳನ್ನು ಮುಚ್ಚಿಬಿಟ್ಟು ಕೋಟೆಯ ಮೇಲೆ ಏರಿದರು. ಪರ್ವತಶಿಖರ, ಮಹಾವೃಕ್ಷಗಳು, ಮುಷ್ಟಿ, ಉಗುರು ಹಲ್ಲು ಇವೇ ಅವರ ಆಯುಧಗಳು. ಇವುಗಳಿಂದ ಕೂಡಿದ ಭೀಮಕಾಯರಾದ ವಾನರರು ಲಂಕೆಯ ಉಚ್ಚವಾದ ಗೋಪುರಗಳನ್ನೂ, ಪ್ರಾಸಾದಗಳನ್ನೂ ಪುಡಿ ಮಾಡುತ್ತ ಬಂದರು. ರಾಮಸೇನೆ ಲಂಕೆಯನ್ನು ಸಂಪೂರ್ಣವಾಗಿ ಮುತ್ತಿದ್ದನ್ನು ರಾವಣ ಮನ ಗಂಡ. ಒಂದು ಮುಹೂರ್ತಕಾಲ ಕುಳಿತು ಗಾಢವಾಗಿ ಆಲೋಚಿಸಿದ. ಆ ನಂತರ ಬಲಾಧ್ಯಕ್ಷ ನನ್ನು ಕರೆದು ಸೈನ್ಯ ಹೊರಗೆ ಹೋಗಿ ದಾಳಿಯನ್ನು ಇದಿರಿಸುವಂತೆ ಆಜ್ಞೆ ಕೊಟ್ಟ. ಅದರಂತೆ ರಾಕ್ಷಸರು ಸರ್ವ ಸೈನ್ಯದಿಂದ ಕೂಡಿದವರಾಗಿ ಭೇರೀ ಶಂಖ ಮುಂತಾದ ಯುದ್ಧದ ವಾದ್ಯಗಳನ್ನು ಘೋಷಿಸುತ್ತಾ ಮುನ್ನುಗ್ಗಿದರು.

ರಾಕ್ಷಸರಿಗೂ ವಾನರರಿಗೂ ಹೋರಾಟ ಜರುಗಿತು. ಸೂರ್ಯನಂತೆ ಪ್ರಕಾಶಮಾನವಾದ ರಥವನ್ನೇರಿ ಧನುಸ್ಸು, ಬಾಣ, ಶೂಲ, ಮುದ್ಗರ. ತೋಮರ, ಶಕ್ತಿ ಪ್ರಾಸ, ಖಡ್ಗ, ಮುಸಲ ಮುಂತಾದ ಆಯುಧಗಳನ್ನು ಧರಿಸಿ ರಾಕ್ಷಸರು ವಾನರರ ಮೇಲೆ ಬಿದ್ದರು. ವಾನರರು ಮರ, ಬಂಡಿ, ಕಲ್ಲು ಇವುಗಳಿಂದ ರಾಕ್ಷಸರನ್ನು ಘಾತಿಸುತ್ತಿದ್ದರು. ರಾಕ್ಷಸರನ್ನು ಮುಷ್ಟಿಯಿಂದ ಹೊಡೆದು ಹಲ್ಲಿನಿಂದ ಕಚ್ಚಿ, ವಜ್ರದಂತೆ ಇದ್ದ ಉಗುರುಗಳಿಂದ ಸಿಗಿದು ಹಾಕುತ್ತಿದ್ದರು ವಾನರರು.

ಅತಿಬಲಿಯಾದ ರಾಮನಿಗೆ ಜಯವಾಗಲಿ ! ಮಹಾಪರಾಕ್ರಮಿ ಲಕ್ಷ್ಮಣನಿಗೆ ಜಯವಾಗಲಿ! ರಾಮನ ಆಶ್ರಿತನಾದ ಸುಗ್ರೀವ ಮಹಾರಾಜನಿಗೆ ಜಯವಾಗಲಿ ! ಎಂದು ವಾನರರು ಉತ್ಸಾಹ ದಿಂದ ಜಯಘೋಷ ಮಾಡುತ್ತಿದ್ದರು.

ರಾಕ್ಷಸರು "ಮಹಾರಾಜ ರಾವಣನಿಗೆ ಜಯವಾಗಲಿ" ಎಂದು ಕೂಗುತ್ತಿದ್ದರು. ರಾಕ್ಷಸ_ ವಾನರ ದೇಹಗಳು ಪರ್ವತದ ಮಳೆ ಸುರಿದಂತೆ ರಣಭೂಮಿಯಲ್ಲಿ ಬೀಳತೊಡಗಿತು. ರಕ್ತ, ಮಾಂಸದಿಂದ ಕೂಡಿದ ರಣಭೂಮಿ ಕೆಸರಾಯಿತು. ಆ ವೇಳೆಗೆ ದಿವಾಕರ ಅಸ್ತಾಚಲವನ್ನು ಮುಟ್ಟಿದ. ಆದರೆ, ವಾನರರು ರಾಕ್ಷಸರು ಸುಮ್ಮನಿರಲಿಲ್ಲ.

ರಾತ್ರಿಯಲ್ಲೂ ಯುದ್ಧವನ್ನು ಪ್ರಾರಂಭಿಸಿದರು. ಅತಿ ಭಯಂಕರವಾಗಿ ಘೋರವಾದ ಯುದ್ಧ ನಡೆಯಿತು.

ರಾಕ್ಷಸರೆಲ್ಲ ವಾನರರನ್ನು ಹಿಡಿದು ನುಂಗುತ್ತಿದ್ದರು. ವಾನರರೂ ತಮ್ಮ ಸಾಮರ್ಥ್ಯದಿಂದ ರಾಕ್ಷಸರನ್ನು ನಾಶಮಾಡುತ್ತಿದ್ದರು. ವೀರಾವೇಶದಿಂದ ಹೋರಾಡುತ್ತಿದ್ದರು.

ವಾನರರ, ರಾಕ್ಷಸರ ಗಾಯಗೊಂಡ ದೇಹಗಳು ವಿಚಿತ್ರವಾದ ನರಳುವಿಕೆಯ ಧ್ವನಿಯನ್ನು ಮಾಡುತ್ತಿದ್ದವು. ಆ ಚೀರಾಟ ಕೂಗಾಟ ಭಯಂಕರವಾಗಿತ್ತು. ವಾನರರ, ರಾಕ್ಷಸರ ದೇಹದಿಂದ ಹರಿದ ರಕ್ತ ಅನೇಕ ಪ್ರವಾಹಗಳಾಗಿ ಹರಿಯಿತು. ಅಂಗದ ಇಂದ್ರಜಿತುವಿನೊಡನೆ ಸೆಣಸುತ್ತಿದ್ದ. ತನ್ನ ಮಹಾ ಬಲದಿಂದ ಅಂಗದ ಇಂದ್ರಜಿತುವಿನ ರಥ, ಸಾರಥಿಯನ್ನು ನಾಶಮಾಡಿ ಅವನನ್ನು ಸೋಲಿಸಿದ. ಮಹಾ ಬಲಿಯಾದ ಅಂಗದನಿಂದ ಪರಾಜಿತನಾದ ಇಂದ್ರಜಿತು ಮಾಯಾಬಲದಿಂದ

ಅದೃಶ್ಯನಾದ. ಬ್ರಹ್ಮನ ವರ ಬಲದಿಂದ ಕಣ್ಣಿಗೆ ಕಾಣಿಸದೆ ಆಕಾಶದಲ್ಲಿ ಮಾಯೆಯಿಂದ ಅದೃಶ್ಯನಾಗಿಯೇ ಇದ್ದುಕೊಂಡು ಬಾಣದ ಮಳೆಗೆರದ. ತೀಕ್ಷ್ಣವಾದ ನಾಗಪಾಶದಿಂದ ರಾಮಲಕ್ಷ್ಮಣರನ್ನು ಕಟ್ಟು ಹಾಕಿದ. ಅತ್ಯುಗ್ರವಾದ ನಾಗಪಾಶಕ್ಕೆ ಕಟ್ಟುಬಿದ್ದ ರಾಮಲಕ್ಷ್ಮಣರು ಭೂಮಿಯಲ್ಲಿ ಮಲಗಿದರು.

ರಾಮಲಕ್ಷ್ಮಣರನ್ನು ಕಟ್ಟಿದ ನಂತರ ಇಂದ್ರಜಿತು ಬಹಳ ಹೆಮ್ಮೆಯಿಂದ ರಾಕ್ಷಸರೊಡನೆ "ನೋಡಿ! ನನ್ನ ಸಾಮರ್ಥ್ಯದಿಂದ ಹೇಗೆ ಈ ರಾಮಲಕ್ಷ್ಮಣರನ್ನು ನಿರ್ವೀರ್ಯರನ್ನಾಗಿ ಮಾಡಿದೆ! ಇನ್ನು ನನ್ನ ತಂದೆ ಇವರ ಭಯದಿಂದ ಮುಕ್ತನಾಗಿ ನಿಶ್ಚಿಂತೆಯಿಂದಿರಬಹುದು. ನನ್ನ ಬಲದ ಮುಂದೆ ಈ ನರರ ಬಲ ಎಷ್ಟು? ಇಂದ್ರನನ್ನೇ ಜಯಿಸಿದ ನನ್ನ ನಾಗಪಾಶದಿಂದ ಬದ್ಧರಾದ ಇವರು ಪುನಃ ಸೂರ್ಯನನ್ನು ನೋಡಲಾರರು. ಮೂರು ಲೋಕದಲ್ಲಿ ಯಾರೂ ಇವರನ್ನು ಈ ಪಾಶದಿಂದ ಬಿಡಿಸಲಾರರು. ಇವರು ಸತ್ತಂತೆಯೇ" ಎಂದು ಜಂಭ ಕೊಚ್ಚಿಕೊಂಡ. ಇಂದ್ರಜಿತ್ತಿನ ಪರಾಕ್ರಮವನ್ನು ರಾಕ್ಷಸರು ಕೊಂಡಾಡಿದರು.

ರಾಮಲಕ್ಷ್ಮಣರು ನಿಷ್ಕ್ರಿಯರಾಗಿ ಮಲಗಿರುವುದನ್ನು ಕಂಡ ಇಂದ್ರಜಿತು ಅವರು ಸತ್ತು ಹೋದರು ಎಂದು ಭಾವಿಸಿದ. ಮಹಾಬಲಿಯಾದ ಅವನು ವಾನರ ಯೂಥಪರನ್ನು ತನ್ನ ಬಾಣಗಳಿಂದ ಗಾಯಗೊಳಿಸಿದ. ನೀಲನನ್ನು ಒಂಬತ್ತು ಬಾಣಗಳಿಂದ ಗಾಯಗೊಳಿಸಿದ ಮೈಂದ ದ್ವಿವಿಧರನ್ನು ಮೂರು ಮೂರು ಬಾಣಗಳಿಂದ ತಾಡಿಸಿದ. ಜಾಂಬವಂತನನ್ನು ಒಂದೇ ಬಾಣದಿಂದ ಗಾಯಗೊಳಿಸಿದ. ಹನುಮಂತನ ಮೇಲೆ ಹತ್ತು ಬಾಣಗಳನ್ನು ಹೊಡೆದ. ಎಲ್ಲ ವಾನರ ಯೂಥಪರನ್ನೂ ಗಾಯಗೊಳಿಸಿದ. ಅಂದು ಇಂದ್ರಜಿತ್ತಿನ ಪರಾಕ್ರಮ ಅದ್ಭುತವಾಗಿತ್ತು ಎಲ್ಲರನ್ನೂ ಗಾಯಗೊಳಿಸಿ, ರಾಮಲಕ್ಷ್ಮಣರನ್ನು ನಾಗಪಾಶದಿಂದ ಕಟ್ಟಿ ಲಂಕೆಯನ್ನು ತಲುಪಿದ. ರಾವಣನ ಮುಂದೆ ಎಲ್ಲವನ್ನೂ ವಿಜ್ಞಾಪಿಸಿದ. ರಾಮಲಕ್ಷ್ಮಣರು ಅಳಿದರು ಎಂಬ ವಾಕ್ಯ ರಾವಣನಿಗೆ ಅತ್ಯಂತ ಪ್ರಿಯವನ್ನುಂಟುಮಾಡಿತು. ವೀರನಾದ ಪುತ್ರನನ್ನು ಬಾಚಿ ತಬ್ಬಿಕೊಂಡ. ಬಹಳ ಸಂತೋಷಪಟ್ಟ.

ಇತ್ತ ವಾನರರೆಲ್ಲ ಶೋಕಾಕ್ರಾಂತರಾದರು. ಸುಗ್ರೀವನಂತೂ ಬಹಳವಾಗಿ ಧೃತಿಗೆಟ್ಟ. ಕಣ್ಣುಗಳಿಂದ ಧಾರೆಧಾರೆಯಾಗಿ ನೀರು ಸುರಿಸುತ್ತಾ ಇದ್ದ ಸುಗ್ರೀವನನ್ನು ನೋಡಿ ವಿಭೀಷಣ ಅವನನ್ನು ಸಂತೈಸಿದ. "ಸುಗ್ರೀವ, ವ್ಯಥೆ ಪಡುವ ಕಾಲವಲ್ಲ ಇದು. ಯುದ್ಧ ಎಂದ ಮೇಲೆ ಹೀಗೆಲ್ಲ ಆಗುವುದು ಸಹಜವೇ! ನೀನು ಧೈರ್ಯವಾಗಿರಬೇಕು. ರಾಮ ಲಕ್ಷ್ಮಣರು ಅಜೇಯರು. ಅವರು ಎಂದಿಗೂ ಮೃತ್ಯುವಶರಾಗರು. ಶೀಘ್ರದಲ್ಲೇ ಅವರು ಮೂರ್ಛೆಯಿಂದ ಏಳುತ್ತಾರೆ. ಅದುವರೆಗೆ ನಾವು ಧೈರ್ಯವಾಗಿರಬೇಕು. ನೋಡು! ವಾನರರೆಲ್ಲ ದಿಕ್ಕೆಟ್ಟಿದ್ದಾರೆ. ಅವರನ್ನು ನಾವು ಹುರಿದುಂಬಿಸಬೇಕು. ಏಳು!" ಎಂದು ಸುಗ್ರೀವನ ನೀರು ತುಂಬಿದ ಕಣ್ಣುಗಳನ್ನು ಶುದ್ಧವಾದ ಜಲದಿಂದ ತೊಳೆದು ಅವನನ್ನು ಸಂತೈಸಿದ ವಿಭೀಷಣ. ಅದರಂತೆ ಹನುಮಂತ, ಅಂಗದ, ನಳ, ನೀಲ, ಸುಗ್ರೀವ, ಸುಷೇಣ. ಗಜ, ಗವಾಕ್ಷ, ಗವಯ, ಗಂಧಮಾದನ, ಶರಭ, ಮೈಂದ, ದ್ವಿವಿಧ, ಮುಂತಾದ ವಾನರ ಯೂಥಪರು ಸಾವಧಾನವಾಗಿ ರಾಮಲಕ್ಷ್ಮಣರನ್ನೂ ಸಕಲ ವಾನರ ಸೈನ್ಯವನ್ನೂ ರಕ್ಷಿಸುತ್ತಿದ್ದರು.

ಇತ್ತ ರಾಮಲಕ್ಷ್ಮಣರನ್ನು ಜಯಿಸಿ ಬಂದ ಇಂದ್ರಜಿತ್ತನ್ನು ರಾವಣ ಸನ್ಮಾನಪೂರ್ವಕವಾಗಿ ಬೀಳುಕೊಂಡ. ಅನಂತರ, ಅಶೋಕವನದಲ್ಲಿ ಸೀತೆಯ ಕಾವಲಿದ್ದ ರಾಕ್ಷಸಿಯರನ್ನು ಕರೆದು

ಹತರಾಗಿ ರಣಭೂಮಿಯಲ್ಲಿ ಮಲಗಿದ್ದಾರೆ. ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕೂರಿಸಿಕೊಂಡು ಅಲ್ಲಿಗೆ ಕರೆದುಕೊಂಡು ಹೋಗಿ ತೋರಿಸಿ. ತಾನೇ ಸ್ವತಃ ರಾಮಲಕ್ಷ್ಮಣರು ಸತ್ತು ಬಿದ್ದಿರುವುದನ್ನು ಕಾಣಲಿ ಅವಳು. ಆಮೇಲಾದರೂ ನನಗೆ ಗತಿ ಯಾರೂ ಇಲ್ಲ ಎಂಬುದನ್ನು ಅರಿತುಕೊಂಡು ನನ್ನನ್ನು ವರಿಸಲು ಬರುತ್ತಾಳೆ ಅವಳು. ಹೋಗಿ! ಸೀತೆಗೆ ವಿಷಯವನ್ನು ತಿಳಿಸಿ ಅವಳಿಗೆ ರಾಮ ಲಕ್ಷ್ಮಣರನ್ನು ತೋರಿಸಿ ಬನ್ನಿ" ಎಂದು ಆಜ್ಞಾಪಿಸಿದ.

ಅದರಂತೆ ರಾಕ್ಷಸಿಯರು ಸೀತೆಯನ್ನು ವಿಮಾನದಲ್ಲಿ ಕೂರಿಸಿಕೊಂಡು ರಾಮಲಕ್ಷ್ಮಣರಿದ್ದ ಸ್ಥಳಕ್ಕೆ ಕರೆತಂದರು. ಅಲ್ಲಿ ಕೆದರಿದ ಕೇಶದಿಂದ, ಹರಿದ ಕವಚದಿಂದ ಪ್ರಜ್ಞಾಶೂನ್ಯರಾದ, ನಾಗ ಪಾಶಕ್ಕೆ ಕಟ್ಟುಬಿದ್ದು ಮಲಗಿದ್ದ ರಾಮಲಕ್ಷ್ಮಣರನ್ನು ಕಂಡಳು. ಉತ್ಸಾಹದಿಂದ ಸಿಂಹನಾದ ಮಾಡುತ್ತಿದ್ದ ರಾಕ್ಷಸರನ್ನೂ ವ್ಯಥೆಯಿಂದ ದುಃಖಿಸುತ್ತಿದ್ದ ವಾನರರನ್ನೂ ಕಂಡಳು.

ರಾಮಲಕ್ಷ್ಮಣರನ್ನು ಆ ಸ್ಥಿತಿಯಲ್ಲಿ ಕಂಡ ಸೀತೆಗೆ ದುಃಖ ಉಮ್ಮಳಿಸಿ ಬಂದಿತು. ಅತ್ಯಂತ ಶೋಕದಿಂದ ವಿಲಪಿಸಲು ಪ್ರಾರಂಭಿಸಿದಳು.

ಮಹಾ ಮಹಾ ವಿದ್ವಾಂಸರೂ, ಜ್ಯೋತಿಷ್ಯ ಶಾಸ್ತ್ರವನ್ನು ಚೆನ್ನಾಗಿ ಅಭ್ಯಸಿಸಿದ ಜ್ಞಾನಿಗಳೂ ನನ್ನನ್ನು ನೋಡಿ ನೀನು ಮಂಗಳವತಿ ಎಂದು ಹೇಳಿದ್ದರು. ಇಂದು ರಾಮಲಕ್ಷ್ಮಣರು ಹೀಗೆ ಭೂಮಿಯಲ್ಲಿ ಮಲಗಿರುವುದರಿಂದ ಅವರ ಆ ಮಾತೆಲ್ಲ ಸುಳ್ಳಾಯಿತು! ಅಲ್ಲದೆ, ನನ್ನನ್ನು ಚಿಕ್ಕಂದಿ ನಿಂದ ನೋಡಿದ ಜ್ಞಾನಿಗಳೆಲ್ಲ ನನ್ನ ಕೈ ಕಾಲುಗಳಲ್ಲಿರುವ ಶುಭ್ರವಾದ ಪದ್ಮರೇಖೆಯನ್ನು ಕಂಡು ಅತ್ಯಂತ ಸಂತೋಷದಿಂದ "ಅಮ್ಮಾ ಜಾನಕೀ! ನೀನು ದೀರ್ಘ ಸುಮಂಗಲಿಯಾಗಿ ಪುತ್ರವತಿಯಾಗಿ, ರಾಜರಾಜೇಶ್ವರಿಯಾಗಿ ಬಾಳುವಿ" ಎಂದು ಭವಿಷ್ಯ ನುಡಿದಿದ್ದರು. ಇಂದು, ರಾಮ ನೆಲದಲ್ಲಿ ಮಲಗಿದ ಮೇಲೆ ಆ ಭವಿಷ್ಯವೆಲ್ಲ ಮಣ್ಣುಗೂಡಿತು. ಅಯ್ಯೋ! ನನಗಾಗಿ ರಾಮಲಕ್ಷ್ಮಣರು ಜನಸ್ಥಾನದಲ್ಲೆಲ್ಲ ಅಲೆದು, ಸುಗ್ರೀವನೊಡನೆ ಲಂಕೆಯನ್ನು ಸೇರಿ ಯುದ್ಧವನ್ನೂ ಪ್ರಾರಂಭಿಸಿದರು. ಆದರೆ ನನ್ನ ದುರದೃಷ್ಟ ಎಷ್ಟೆಂದು ಹೇಳಲಿ! ಮಾಯೆಯಿಂದ ಅವರು ಕೊಲ್ಲಲ್ಪಡಬೇಕಾಯಿತು. ನನಗಾಗಿ ಅವರು ತಮ್ಮ ಅತ್ಯಮೌಲ್ಯವಾದ ಪ್ರಾಣವನ್ನು ಬಿಡಬೇಕಾಗಿ ಬಂದಿತು. ಆ ಕೌಸಲ್ಯೆಯ ದುಃಖವನ್ನು ನೆನಸಿಕೊಂಡರೆ ನನ್ನೆದೆ ಒಡೆಯುತ್ತದೆ. ರಾಮನನ್ನು ಕಾಡಿಗೆ ಕಳುಹಿಸಿದ ಕ್ಷಣದಿಂದ ದಿನಗಳನ್ನು ಎಣಿಸುತ್ತ ಕಳೆದಿದ್ದಾಳೆ ಆ ಮಾತೆ! ಈಗ, ರಣಾಂಗಣದಲ್ಲಿ ರಾಮಲಕ್ಷ್ಮಣರು ಹತ ರಾದರು! ಎಂಬ ವಾರ್ತೆ ಅವಳ ಕಿವಿಗೆ ಬಿದ್ದರೆ ಅವಳಿಗೆ ಹೇಗಾದೀತು!

ಇಕ್ಷ್ವಾಕು ವಂಶದ ಶೂರನಾದ ರಾಜಕುಮಾರರು ತಿಳಿಯದ ಅಸ್ತ್ರವಿಲ್ಲ. ವಾಯವ್ಯ, ಆಗ್ನೇಯ, ಐಂದ್ರ ಬ್ರಹ್ಮಾಸ್ತ್ರವೇ ಮುಂತಾದ ನಾನಾ ವಿಧವಾದ ಮಹಾ ಮಹಾ ಅಸ್ತ್ರಗಳು ಅವರಿಗೆ ಗೊತ್ತು. ಆದರೂ, ಅದನ್ನು ಪ್ರಯೋಗಿಸದೆ ಹೋದರಲ್ಲ. ಆ ಮಾಯಾವಿಯಾದ ಇಂದ್ರಜಿತ್ತಿನ ನಾಗಾಪಾಶಕ್ಕೆ ಬದ್ಧರಾಗಿ ಅಸುನೀಗಿದರು ಎಂದರೆ ಆ ಕಾಲನ ಹಿಡಿತ ಅದೆಷ್ಟು ಬಿಗಿ ಎಂದು ತಿಳಿಯುತ್ತದೆ? ಅಯ್ಯೋ! ನನ್ನನ್ನು ನೋಡಿದ ಹಿರಿಯರೆಲ್ಲ "ಜಾನಕಿ! ನೀನು ಸರ್ವ ಲಕ್ಷಣಗಳಿಂದ ಕೂಡಿದವಳು, ನಿನಗೆ ವೈಧವ್ಯವೇ ಇಲ್ಲ. ನೀನು ದೀರ್ಘಕಾಲ ನಿನ್ನ ಪತಿಯೊಂದಿಗೆ ಸಾಮ್ರಾಜ್ಞಿಯಾಗಿ ಸರ್ವಸುಖವನ್ನೂ ಅನುಭವಿಸುವಿ ಎಂದು ಹೇಳಿದ್ದಾರಲ್ಲ. ಈಗ ನಾನು ಸಾಮ್ರಾಜ್ಞಿ ಆಗುವ ಮೊದಲೇ ರಾಮ ನಾಗಪಾಶಕ್ಕೆ ಸಿಕ್ಕಿ ಹತನಾದನಲ್ಲಾ'' ಎಂದು ನಾನಾ ಪ್ರಕಾರವಾಗಿ ಹಲುಬಿದಳು ಸೀತೆ.

ಸೀತೆ ಈ ರೀತಿ ದುಃಖಿಸುತ್ತಿರುವುದನ್ನು ನೋಡಿದ ತ್ರಿಜಟೆ ''ಜಾನಕಿ! ನೀನು ಶೋಕಿಸ ಬೇಡ. ನಿನಗೆ ಎಂದಿಗೂ ವೈಧವ್ಯ ಎಂಬುದೇ ಇಲ್ಲ. ನೀನು ಸರ್ವ ಶುಭ ಲಕ್ಷಣಗಳಿಂದ ಕೂಡಿದ

ಸರ್ವಮಂಗಳೆ, ಈಗ ನೀನು ದುಃಖಿಸುವ ಕಾರಣವೇ ಇಲ್ಲ. ನೋಡು ! ರಾಮಲಕ್ಷ್ಮಣರು ಸತ್ತಿಲ್ಲ. ಅವರ ಮುಖದಲ್ಲಿ ತೇಜಸ್ಸು ಹೇಗಿದೆ ? ಸತ್ತವರ ಮುಖ ಕಾಂತಿಹೀನವಾಗಿರುತ್ತದೆಯೇ ವಿನಾ ಈ ರೀತಿಯ ಕಳೆಯಿಂದ ಕೂಡಿರುವುದಿಲ್ಲ.

"ಜಾನಕಿ ! ಸ್ವಾಮಿ ಸತ್ತಿದ್ದರೆ ಅವನ ಅನುಚರರು ಹೀಗೆ ಧೈರ್ಯವಾಗಿ ಇರುತ್ತಿದ್ದರೆ ? ನೋಡು ! ವಾನರರೆಲ್ಲ ಧೈರ್ಯದಿಂದ, ಉತ್ಸಾಹದಿಂದ ಇದ್ದಾರೆ. ಇದರಿಂದಲೇ ತಿಳಿಯುತ್ತದೆ ರಾಮಲಕ್ಷ್ಮಣರು ಸತ್ತಿಲ್ಲ ಎಂದು. ಅಲ್ಲದೆ ಜಾನಕಿ ! ಇನ್ನೊಂದು ಮುಖ್ಯವಾದ ವಿಷಯ ಹೇಳು ತ್ತೇನೆ ಕೇಳು. ಈ ಪುಷ್ಪಕವಿಮಾನ ಮಂಗಳಕರವಾದುದು. ರಾಮಲಕ್ಷ್ಮಣರು ಸತ್ತಿದ್ದರೆ ನಿನ್ನನ್ನು ಈ ವಿಮಾನ ಧರಿಸುತ್ತಿರಲಿಲ್ಲ. ಈ ವಿಮಾನ ನಿನ್ನನ್ನು ಧರಿಸಿರುವುದೇ ನೀನು ಸರ್ವ ಮಂಗಳೆ ಎನ್ನಲು ಸಾಕ್ಷಿ.

"ಇನ್ನು ದುಃಖಿಸಬೇಡ. ನಿನ್ನ ಶೋಕದ ದಿನಗಳು ಕಳೆದವು. ಕ್ಷಿಪ್ರದಲ್ಲೇ ರಾಮನೊಡನೆ ಸೇರುವಿ, ದುಃಖಿಸಬೇಡ. ಸೀತೆ, ನಾನು ಹಿಂದೆ ಯಾವಾಗಲೂ ಸುಳ್ಳನ್ನು ಆಡಿದವಳಲ್ಲ. ಮುಂದೆಯೂ ಆಡುವವಳಲ್ಲ. ನಿನ್ನ ಮೇಲಿನ ಪ್ರೀತಿಯಿಂದ ವಾಸ್ತವವನ್ನೇ ಹೇಳಿದೇನೆ. ನಿನಗೆ ಸರ್ವಮಂಗಳವಾಗುತ್ತದೆ" ಎಂದು ಸಂತೈಸಿದಳು.

ತ್ರಿಜಟೆಯ ಮಾತುಗಳನ್ನು ಕೇಳಿದ ಸೀತೆ ಕೈಗಳನ್ನು ಮುಗಿದು ''ನೀನು ಹೇಳುವಂತೆಯೇ ಆಗಲಿ" ಎಂದಳು. ಪುನಃ ವಿಮಾನದಲ್ಲಿ ಸೀತೆಯನ್ನು ಅಶೋಕವನಕ್ಕೆ ತಲುಪಿಸಿದರು. ಸೀತೆ ಅಶೋಕವನದಲ್ಲಿ ರಾಮಲಕ್ಷ್ಮಣರ ಚಿಂತೆಯಲ್ಲೇ ಇದ್ದಳು.

ರಾಮಲಕ್ಷ್ಮಣರು ಪ್ರಜ್ಞಾಹೀನರಾಗಿ ಬಿದ್ದಿರುವುದನ್ನು ನೋಡಿದ ವಾನರರೆಲ್ಲ ದುಃಖಿತ ರಾದರು. ಸುಗ್ರೀವನಿಗೆ ಧೈರ್ಯ ಹೇಳಿದ ವಿಭೀಷಣನೂ ಈಗ ದುಃಖಿಸತೊಡಗಿದ. "ಸುಗ್ರೀವ ಇನ್ನೇನು ! ಪಾಪಿಯಾದ ಆ ರಾವಣನ ಮನೋರಥ ಕೈಗೂಡಿತು. ಇನ್ನು ನಮ್ಮ ಗತಿ ಅದರಲ್ಲೂ ನನ್ನ ಗತಿ ಅತ್ಯಂತ ಶೋಚನೀಯವೇ ಸರಿ" ಎಂದು ಅಳತೊಡಗಿದ. ಸುಗ್ರೀವ ವಿಭೀಷಣನನ್ನು ತಬ್ಬಿಕೊಂಡು ಅವನನ್ನು ಸಮಾಧಾನ ಪಡಿಸುತ್ತಾ "ಮಿತ್ರ ! ಶೋಕಿಸಬೇಡ ! ನಾವೆಲ್ಲ ಇರುವಾಗ ನೀನೇಕೆ ಅನಾಥನಾಗುವಿ ? ನಾವು ರಾವಣನನ್ನು ಕೊಂದು ಲಂಕಾರಾಜ್ಯದಲ್ಲಿ ನಿನಗೆ ಅಭಿಷೇಕ ಮಾಡುತ್ತೇವೆ" ಎಂದ.

ಮಾವನಾದ ಸುಷೇಣನ ಕಡೆಗೆ ತಿರುಗಿದ ಸುಗ್ರೀವ. "ನೀವು ರಾಮಲಕ್ಷ್ಮಣರನ್ನು ಕರೆದು ಕೊಂಡು ಕಿಷ್ಕಿಂಧೆಗೆ ಹಿಂದಿರುಗಿ. ನಾನು ಸಮಸ್ತ ವಾನರರೊಂದಿಗೆ ರಾವಣನೊಡನೆ ಹೋರಾಡಿ ಅವನನ್ನು ನಿಗ್ರಹಿಸಿ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕ ಮಾಡಿ, ರಾಮಪತ್ನಿ ಸೀತೆಯನ್ನು ಕರೆದು ತರುತ್ತೇನೆ" ಎಂದ.

ಸುಗ್ರೀವನ ಮಾತನ್ನು ಕೇಳಿದ ಸುಷೇಣ "ಹಿಂದೆ ದೇವಾಸುರ ಯುದ್ಧದಲ್ಲಿ ನಾನೂ ಸಹ ಪಾಲ್ಗೊಂಡಿದ್ದೆ. ಆಗಲೂ ಹೀಗೆ ದಾನವರಿಂದ ತಾಡಿತರಾದ ದೇವರುಗಳು ಪ್ರಜ್ಞಾಹೀನರಾಗಿ ಬೀಳುತ್ತಿದ್ದರು. ಆಗ ಅವರನ್ನು ಮತ್ತೆ ಎಚ್ಚರಿಸುವ ಸಲುವಾಗಿ ಮೂಲಿಕೆಗಳನ್ನು ತಂದು ಅದನ್ನು ಪ್ರಯೋಗಿಸುತ್ತಿದ್ದರು. ಈಗಲೂ ನಾವು ಹಾಗೆಯೇ ಮಾಡೋಣ.

"ಚಂದ್ರ, ದ್ರೋಣ ಎಂಬ ಎರಡು ಪರ್ವತಗಳಿವೆ. ಎತ್ತರದ ಕ್ಷೀರಸಮುದ್ರದ ತಟದಲ್ಲಿಅಮೃತ ಮಥನಕಾಲದಲ್ಲಿ ಕ್ಷೀರಸಮುದ್ರದಿಂದ ಉದ್ಭವಿಸಿದ ಮೂಲಿಕೆಗಳು ಅವು; ಮಹಾಫಲಕಾರಿಯಾದ

ಮೂಲಿಕೆಗಳು. ಅವುಗಳನ್ನು ವೇಗಶಾಲಿಗಳಾದ ವಾನರರು ಹೋಗಿ ತಂದರೆ ರಾಮಲಕ್ಷ್ಮಣರನ್ನು ಎಚ್ಚರಿಸಬಹುದು" ಎಂದ ಸುಷೇಣ ಮೂಲಿಕೆಗಳ ವಿಷಯವಾಗಿ ಮಾತಾಡುತ್ತಿದ್ದಂತೆಯೇ ಬಲವಾಗಿ ಗಾಳಿಬೀಸಿತು. ಎಲ್ಲ ವಾನರರೂ ಭ್ರಾಂತರಾಗಿ ನೋಡುತ್ತಿದ್ದ ವೇಳೆ ಮಹಾಪಕ್ಷಗಳುಳ್ಳ ಪಕ್ಷಿರಾಜ ಗರುಡ ಅಲ್ಲಿಗೆ ಬಂದ. ಗರುಡನ ರೆಕ್ಕೆಯ ಹೊಡೆತಕ್ಕೇ ರಾಮಲಕ್ಷ್ಮಣರನ್ನು ಕಟ್ಟಿದ್ದ ನಾಗಗಳು ಭಯದಿಂದ ಓಡಿಹೋದವು. ಬಂದವನೇ ತನ್ನ ಮೃದುವಾದ ಕರಗಳಿಂದ ರಾಮಲಕ್ಷ್ಮಣರನ್ನು ಸ್ಪರ್ಶಿಸಿದ ಇಬ್ಬರನ್ನೂ ಗಾಢವಾಗಿ ಆಲಿಂಗಿಸಿದ. ಗರುಡನ ಆಲಿಂಗನದಿಂದ ರಾಮಲಕ್ಷ್ಮಣರು ಎಚ್ಚೆತ್ತರು. ಮೊದಲಿಗಿಂತ ಇಮ್ಮಡಿಯಾದ ಶಕ್ತಿ, ಸಾಮರ್ಥ್ಯ, ವೀರ್ಯ, ಬಲ, ಪೌರುಷ, ಓಜಸ್ಸು, ಬುದ್ಧಿ ಎಲ್ಲವನ್ನೂ ಪಡೆದರು. ರಾಮ ಸಂತೋಷದಿಂದ ತನ್ನನ್ನು ಅಪ್ಪಿದ ಗರುಡನನ್ನು ನೋಡಿದ. 'ಮಹಾಪುರುಷ ! ನೀನು ನನಗೆ ಅತ್ಯಂತ ಪ್ರಿಯವನ್ನು ಮಾಡಿರುವಿ. ಮಹಾಕಷ್ಟಕಾಲದಲ್ಲಿ ನನಗೆ ಇಂಥ ಸಹಾಯವನ್ನು ಮಾಡಿ ನೀನು ನನ್ನ ತಂದೆ ದಶರಥ, ತಾತ ಅಜನಂತೆ ಪ್ರೀತಿಪಾತ್ರನಾಗಿರುವಿ.

''ನೀನು ವಿಶಾಲ ನೇತ್ರಗಳುಳ್ಳವನಾಗಿರುವಿ! ದಿವ್ಯರೂಪಿಯಾಗಿ, ದಿವ್ಯಮಾಲ್ಯಾಂಬರಗಳನ್ನು ಧರಿಸಿರುವಿ. ಹೇ ದಿವ್ಯಪುರುಷ ! ನೀನಾರೆಂದು ನಾನು ತಿಳಿಯಲಿ?" ಎಂದ.

ರಾಮನ ಮಾತಗಳನ್ನು ಕೇಳಿದ ಗರುಡ ಅತ್ಯಂತ ಸಂತೋಷದಿಂದ 'ಅಹಂ ಸಖಾ ತೇ ಕಾಕುಸ್ಥ' ನಾನು ನಿನ್ನ ಸಖ ಎಂದು ತಿಳಿ, ಎಂದು ಪ್ರೀತಿಯಿಂದ ಹೇಳಿದ. ಮತ್ತೆಮತ್ತೆ ರಾಮನನ್ನು ಆಲಿಂಗಿಸಿದ.

"ರಾಮಾ ! ನಿನ್ನನ್ನು ಕಟ್ಟಿದ ಈ ಅಸ್ತ್ರ ಸಾಮಾನ್ಯವಲ್ಲ. ಯಾರೂ ಇದರಿಂದ ಬಿಡುಗಡೆ ಹೊಂದಲಾರರು. ದೇವತೆಗಳನ್ನೇ ಲಕ್ಷಿಸದ ನನ್ನ ಅಮೋಘವಾದ ಪರಾಕ್ರಮದಿಂದ ಇದು ಮೋಘವನ್ನು ಪಡೆಯಿತು. ರಾಮಾ ! ನೀನು ರಾವಣನನ್ನು ಕೊಂದು ಸೀತೆಯನ್ನು ಪಡೆಯುವಿ.

"ರಾಘವ, ನನ್ನ ಬಗ್ಗೆ ತಿಳಿಯಲು ನೀನೇನೂ ಚಿಂತಿಸಬೇಕಿಲ್ಲ. ನಾನು ನಿನ್ನ ಮಿತ್ರ. ಯುದ್ಧ ಪೂರೈಸಿದಮೇಲೆ ನಿನಗೆ ತಾನಾಗಿಯೇ "ನಾನಾರು?" ಎಂದು ತಿಳಿಯುವುದು ಎಂದು ರಾಮನನ್ನು ಮತ್ತೆ ಆಲಿಂಗಿಸಿಕೊಂಡು ಗರುಡ ರಾಮನಿಗೆ ಪ್ರದಕ್ಷಿಣೆಯಾಗಿ ಹಾರಿಹೋದ.

ಇಲ್ಲಿ ಗರುಡ "ಅಹಂ ಸಖಾ ತೇ ಕಾಕುಸ್ಥ" ಎಂದಿದಾನೆ. ಇದರ ಔಚಿತ್ಯವನ್ನು ಆಚಾರ್ಯರು ಬಹಳ ಚೆನ್ನಾಗಿ ವಿವರಿಸಿದ್ದಾರೆ.

ಗರುಡ ವಿಷ್ಣುವಿನ ಆಜ್ಞಾಧಾರಕ. ಮಹಾಪರಾಕ್ರಮಿ. ಶೇಷ ಹೇಗೆ ಸತತವಾಗಿ ಪರಮಾತ್ಮನ ಕೈಂಕರ್ಯವನ್ನೇ ಮಾಡುತ್ತಿರುವನೋ ಹಾಗೆಯೇ ಗರಡನೂ ಭಗವತ್ ಕೈಂಕರ್ಯವೇ ಪುರುಷಾರ್ಥವನ್ನಾಗಿ ಭಾವಿಸಿದವನು.

ಗರುಡ ಮಹಾ ಪರಾಕ್ರಮಿ. ದೇವರಾಜ ಇಂದ್ರನನ್ನೇ ಸೋಲಿಸಿದವ. ತಾಯಿಯಾದ ವಿನತೆಯ ದಾಸ್ಯ ನಿವೃತ್ತಿಗಾಗಿ ಅಮೃತವನ್ನು ದೇವಲೋಕದಿಂದ ತರುತ್ತಿರುವಾಗ ದೇವರಾಜ ಇಂದ್ರ ಪಕ್ಷಿರಾಜ ಗರುಡನನ್ನು ತಡೆದ. ಇಬ್ಬರಿಗೂ ಯುದ್ಧ ಮೊದಲಾಯಿತು. ಪಕ್ಷಿರಾಜನ ಪ್ರಹಾರಕ್ಕೆ ದೇವರಾಜ ಜರ್ಝರಿತನಾದ. ದೇವರಾಜ ಇಂದ್ರ ವಜ್ರಾಯುಧದಿಂದ ಪ್ರಹರಿಸಿದರೂ ಪಕ್ಷಿರಾಜನಿಗೆ ಏನೂ ಆಗಲಿಲ್ಲ. ಆಗ, ವೈನತೇಯ "ಇಂದ್ರ ! ನಿನ್ನ ವಜ್ರಾಯುಧವನ್ನು ಮೋಘ

ವಾಗಿನಬಾರದು. ಅದಕ್ಕಾಗಿ ಇದೋ ! ನಾನೇ ಒಂದು ಗರಿಯನ್ನು ಕಿತ್ತುಹಾಕುತ್ತೇನೆ" ಎಂದು ತನ್ನ ರೆಕ್ಕೆಯಲ್ಲಿನ ಒಂದು ಗರಿಯನ್ನು ಕಿತ್ತುಹಾಕಿಹೋದ. ಇಂದ್ರ ನಾಚಿಕೆಯಿಂದ ಗರುಡನ ಸಖ್ಯವನ್ನು ಬೆಳೆಸಿದ. ಅಂಥ ಪ್ರತಾಪಿ ಗರುಡ.

ಹದಿನಾಲ್ಕುಲೋಕದ ಸ್ವಾಮಿಯೆನಿಸಿದ ಸಾಕ್ಷಾತ್ ಮಹಾವಿಷ್ಣುವನ್ನೇ ತನ್ನ ಪಕ್ಷಗಳಲ್ಲಿ ಧರಿಸುತ್ತಾನೆ ಎಂದ ಮೇಲೆ ಆವನ ಪರಾಕ್ರಮ ಎಷ್ಟಿದ್ದೀತು ?

ಇಂಥ ಗರುಡ ಸರ್ವದಾ ಭಗವಂತನ ಕೈಂಕರ್ಯವನ್ನೇ ಮಾಡುವವ. ರಾಮಾವತಾರ ಕಾಲದಲ್ಲಿ ಶೇಷಾವತಾರಿ ಲಕ್ಷ್ಮಣ ಸತತವಾಗಿ ರಾಮನ ಕೈಂಕರ್ಯವನ್ನು ಮಾಡಿದ. "ಪೆರಿಯ ತಿರುವಡಿ" ಎನಿಸಿರುವ ವೈನತೇಯ ತಾನೂ ರಾಮನಿಗೆ ಸೇವೆ ಮಾಡಬೇಕು ಎಂದು ಯೋಚಿಸಿದ್ದ. ಸಮಯ ಕಾಯುತ್ತಿದ್ದ. ರಾಮ ನಾಗಪಾಶಕ್ಕೆ ಕಟ್ಟುಬಿದ್ದಾಗ ಓಡಿಬಂದು ತನ್ನ ಸೇವೆಯನ್ನು ಸಲ್ಲಿಸಿದ. ಎಲ್ಲವನ್ನೂ ತಿಳಿದವನಾದರೂ ರಾಮ ರಾವಣನನ್ನು ಕೊಲ್ಲುವವರೆಗೂ ತನ್ನನ್ನು "ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ" ಎಂದು ಮನುಷ್ಯನನ್ನಾಗೇ ಭಾವಿಸಿಕೊಂಡ ಎಂತಲೇ ವೈನತೇಯನನ್ನು "ನೀ ಯಾರು ?" ಎಂದು ಕೇಳಿದ.

ರಾಮಲಕ್ಷ್ಮಣರು ಸ್ವಸ್ಥರಾದುದನ್ನು ಕಂಡ ಕಪಿಸೈನ್ಯ ಮಹಾನಾದವನ್ನು ಮಾಡಿತು. ಉತ್ಸಾಹದಿಂದ ವಾನರರೆಲ್ಲ ಗರ್ಜಿಸಿದರು. ಅವರ ಕೋಲಾಹಲ ಅಸದಳವಾಗಿತ್ತು. ವಾನರರ ಭಯಂಕರವಾದ ಸಿಂಹನಾದ ಲಂಕೆಯನ್ನೇ ನಡುಗಿಸುತ್ತಿತ್ತು.

ಇದನ್ನು ರಾವಣ ಕೇಳಿದ. ಅವನಿಗೆ ಭ್ರಮೆಯಾಯಿತು. ಇದೇನು ? ಇಂದ್ರಜಿತ್ತು "ರಾಮಲಕ್ಷ್ಮಣರನ್ನು ಸಂಹರಿಸಿದೆ" ಎಂದು ಬಂದನಲ್ಲ ! ಈಗ ನೋಡಿದರೆ ವಾನರರು ಭಯಂಕರವಾದ ಸಿಂಹನಾದ ಮಾಡುತ್ತಿದಾರಲ್ಲ ಎಂದು ಯೋಚಿಸಿದ.

ರಾಕ್ಷಸರನ್ನು ಕರೆದು ಹರ್ಷೋದ್ಗಾರಕ್ಕೆ ಕಾರಣವನ್ನು ತಿಳಿದು ಬರುವಂತೆ ಆಜ್ಞಾಪಿಸಿದ. ರಾವಣನಿಂದ ಆಜ್ಞಪ್ತರಾದ ರಾಕ್ಷಸರು ಕೋಟೆಯ ಮೇಲೆ ಏರಿನಿಂತು ರಾಮನ ಪಕ್ಷದ ಕಡೆಗೆ ನೋಡಿ ಸುದ್ದಿಯನ್ನು ಸಂಗ್ರಹಿಸತೊಡಗಿದರು.

## ಧೂಮ್ರಾಕ್ಷನ ವಧೆ

ರಾಕ್ಷಸರು ಕೋಟೆಯ ಬಾಗಿಲಿನ ಮೇಲೆ ಹತ್ತಿ ನೋಡಿದರು. ನಾಗಪಾಶದಿಂದ ಮುಕ್ತರಾಗಿ ರಾಮಲಕ್ಷ್ಮಣರು ಚಂದ್ರ ಸೂರ್ಯರಂತೆ ಕಂಗೊಳಿಸುತ್ತಿದಾರೆ. ಕಪಿಗಳೆಲ್ಲ ಅವರ ಸುತ್ತಲೂ ನಿಂತು ಉತ್ಸಾಹದಿಂದ ಸಿಂಹನಾದ ಮಾಡುತ್ತಿದಾರೆ. ಹೀಗೆ ರಾಮಲಕ್ಷ್ಮಣರು ನಾಗಪಾಶದಿಂದ ಮುಕ್ತಿ ಹೊಂದಿದ್ದನ್ನು ನೋಡಿದ ರಾಕ್ಷಸರ ಗಂಟಲಿನ ದ್ರವವೇ ಆರಿಹೋಯಿತು. ಮಹಾಭಯದಿಂದ ಅವರು ರಾವಣನಿಗೆ ವಿಷಯವನ್ನು ತಿಳಿಸಿದರು. ರಾಮಲಕ್ಷ್ಮಣರು ನಾಗಪಾಶದಿಂದ ವಿಮುಕ್ತಿ ಹೊಂದಿದ ವಾರ್ತೆ ರಾವಣನನ್ನೂ ಭ್ರಾಂತಿಗೊಳಿಸಿತು. ಅವನ ಮನಸ್ಸು ಕೋಪದಿಂದ ಕುದಿಯತೊಡಗಿತು. ತಕ್ಷಣವೇ ಅಗ್ನಿಯನ್ನು ಕಕ್ಕುವ ತನ್ನ ಕೆಂಪಾದ ಕಣ್ಣುಗಳಿಂದ ಸುತ್ತಲೂ ನೋಡಿದ. "ಧೂಮ್ರಾಕ್ಷ" ಎಂಬ ಮಹಾಕಾಯನಾದ ರಾಕ್ಷಸನನ್ನು ಕರೆದು ಸೇನಾಸಮೇತನಾಗಿ ಹೋಗಿ ರಾಮಲಕ್ಷ್ಮಣರನ್ನು ಕೊಂದು ಬರುವಂತೆ ಆಜ್ಞಾಪಿಸಿದ.

ಸೇನಾಪತಿಗೆ ಮಹತ್ಸೇನೆಯನ್ನು ಸಿದ್ಧಮಾಡುವಂತೆ ಹೇಳಿದ. ಅದರಂತೆ ಧೂಮ್ರಾಕ್ಷ

ನನ್ನು ಅನುಸರಿಸಿ ಒಂದು ದೊಡ್ಡ ಸೈನ್ಯ ಹೊರಟಿತು. ರಥವನ್ನೇರಿ ಹೊರಡುವಾಗಲೇ ಅವನು ಮುಗ್ಗರಿಸಿದ. ಕ್ರೂರವಾದ ಪಕ್ಷಿಗಳು ಅಮಂಗಳ ಸೂಚಕವಾದ ಶಬ್ದವನ್ನು ಮಾಡತೊಡಗಿದವು. ಹದ್ದು ಅವನ ರಥದ ಮೇಲೇರಿ ಕುಳಿತಿತು. ನಾನಾ ವಿಧವಾದ ಅಪಶಕುನ ಆಗತೊಡಗಿತು. ಹೀಗಾದರೂ ಅವನು ಜಗ್ಗಲಿಲ್ಲ. ಧೈರ್ಯದಿಂದ ಹನುಮಂತನಿದ್ದ ಪಶ್ಚಿಮ ದ್ವಾರದ ಕಡೆಗೆ ಹೊರಟ.

ಧೂಮ್ರಾಕ್ಷನ ಜೊತೆಯಲ್ಲಿ ಬಂದ ರಾಕ್ಷಸರು ಶೂಲ, ಪಟ್ಟಿಶ, ಮುದ್ಗರ, ಪ್ರಾಸ ತೋಮರ, ಮುಸಲ, ಶಕ್ತಿ, ಭಿಂಡಿಪಾಲ, ಕತ್ತಿ, ಪರಶು, ಮುಂತಾದ ಆಯುಧಗಳಿಂದ ವಾನರ ರನ್ನು ಘಾತಿಸತೊಡಗಿದರು. ಸಹಸ್ರ ಸಂಖ್ಯೆಯಲ್ಲಿ ವಾನರರು ಸತ್ತುಬೀಳುತ್ತಿದ್ದರು. ಅಮಿತ ಸಂಖ್ಯೆಯಲ್ಲಿ ವಾನರ ಸೈನ್ಯ ಹತವಾಗಿ ಬೀಳುತ್ತಿದ್ದುದನ್ನು ಕಂಡ ಹನುಮಂತ. ತಾನಿದ್ದ ಸ್ಥಳ ದಿಂದ ಧೂಮ್ರಾಕ್ಷನ ರಥಕ್ಕೆ ಹಾರಿದ. ಅವನು ಹಾರಿದ ವೇಗಕ್ಕೆ ಧೂಮ್ರಾಕ್ಷನ ರಥ, ಸಾರಥಿ, ಅಶ್ವಗಳು ನಾಶವಾದವು. ಧೂಮ್ರಾಕ್ಷನನ್ನೂ ಸಂಹರಿಸುವ ಸಲುವಾಗಿ ವೃಕ್ಷವನ್ನು ಬೀಸಿ ಎಸೆದ. ಆದರೆ, ಅದನ್ನು ಧೂಮ್ರಾಕ್ಷ ಕಡಿದ. ಬಾಣಗಳಿಂದ ಪುನಃ ಮಾರುತಿ ದೊಡ್ಡದಾದ ಶಿಖರ ವನ್ನೆತ್ತಿ ಧೂಮ್ರಾಕ್ಷನನ್ನು ಘಾತಿಸಿದ. ಶಿಖರದ ಪ್ರಹಾರಕ್ಕೆ ಸಿಕ್ಕಿದ ಧೂಮ್ರಾಕ್ಷ ಯಮ ಲೋಕವನ್ನು ಸೇರಿದ.

ಹನುಮಂತ ಧೂಮ್ರಾಕ್ಷನನ್ನು ಕೊಂದದ್ದನ್ನು ಕಂಡ ವಾನರರೆಲ್ಲ ಸಂತೋಷಪಟ್ಟರು.

ರಾಕ್ಷಸರು ಭಯದಿಂದ ತತ್ತಳಿಸಿದರು.

## ವಜ್ರದಂಷ್ಟ್ರನ ಸಂಹಾರ

ಧೂಮ್ರಾಕ್ಷ ಹತನಾದುದನ್ನು ಕಂಡ ರಾವಣ ತನ್ನ ಸೇನಾಪತಿ ವಜ್ರದಂಷ್ಟ್ರನನ್ನು ಕಳುಹಿ ಸಿದ. ನೀನು ಹೋಗಿ ರಾಮಲಕ್ಷ್ಮಣರನ್ನು ಕೊಂದು ಬಾ ಎಂದು ಹೇಳಿದ. ವಜ್ರದಂಷ್ಟ್ರ ಹಾಗೆ ಆಗಲಿ ಎಂದು ಹೊರಟ. ಅನೇಕ ಲಕ್ಷ ರಾಕ್ಷಸರು ಅವನನ್ನು ಹಿಂಬಾಲಿಸಿದರು. ಅವರೆಲ್ಲ ದಕ್ಷಿಣ ದ್ವಾರವನ್ನು ಕುರಿತು ಹೊರಟರು. ಅವರು ಹೋಗುವಾಗ ಅನೇಕ ರೀತಿಯ ಅಪಶಕುನ ಗಳಾದವು. ಹದ್ದು ಭಯಂಕರವಾದ ಧ್ವನಿಯಲ್ಲಿ ಅಶುಭವನ್ನು ಸೂಚಿಸುತ್ತಿತ್ತು. ಯೋಧರೆಲ್ಲ ಅಲ್ಲಲ್ಲಿ ನಡುನಡುಗಿ ಬೀಳುತ್ತಿದ್ದರು. ನಿರ್ಮಲವಾದ ಆಕಾಶದಲ್ಲಿ ಧೂಮಕೇತು ಕಾಣಿಸಿಕೊಂಡಿತು ಇಷ್ಟೆಲ್ಲ ಅಪಶಕುನಗಳಾದರೂ ವಜ್ರದಂಷ್ಟ್ರ ಜಗ್ಗಲಿಲ್ಲ. ಧೈರ್ಯದಿಂದ ಮುನ್ನುಗ್ಗಿದ. ಅವರೆಲ್ಲ ದಕ್ಷಿಣ ದ್ವಾರವನ್ನು ಲಕ್ಷ್ಯದಲ್ಲಿಟ್ಟು ಹೋಗುತ್ತಿರುವುದು ಅವರು ಯಮಪುರಿಯನ್ನು ಕುರಿತು ಹೋಗುತ್ತಿರುವಂತೆ ಇತ್ತು. ನಾನಾ ವಿಧವಾದ ಆಯುಧಗಳಿಂದಲೂ ಅಸ್ತ್ರ ಶಸ್ತ್ರಗಳಿಂದಲೂ ಕೂಡಿದ ಅವರು ಅಂಗದ ಕಾವಲಿದ್ದ ದಕ್ಷಿಣ ದ್ವಾರವನ್ನು ತಲುಪಿದರು. ಮಹಾಕಾಯರಾದ ರಾಕ್ಷಸರಿಗೂ ಭೀಮಕಾಯರಾದ ವಾನರರಿಗೂ ಘೋರವಾದ ಯುದ್ಧ ಜರುಗಿತು. ಒಬ್ಬೊಬ್ಬ ರಾಕ್ಷಸನೂ ನಾಲ್ಕಾರು ವಾನರರನ್ನು ಒಂದೇ ಏಟಿಗೆ ಕೊಲ್ಲುತ್ತ ಮುನ್ನುಗ್ಗಿದ. ವಜ್ರದಂಷ್ಟ್ರ ಅವರನ್ನೆಲ್ಲ ಹುರಿದುಂಬಿಸುತ್ತ ಮುನ್ನುಗ್ಗಿದ. ರಾಕ್ಷಸರ ಕೈ ಮೇಲಾಗುತ್ತ ಬಂದಂತೆ ವಾನರರೆಲ್ಲ ಭಯದಿಂದ ಅಂಗದನನ್ನು ನೋಡತೊಡಗಿದರು. ಕಷ್ಟಕ್ಕೆ ಸಿಲುಕಿದ ಪ್ರಜೆಗಳು ಬ್ರಹ್ಮದೇವ ನನ್ನು ನೋಡುವಂತೆ ವಾನರರೆಲ್ಲ ಅಂಗದನನ್ನು ಸುತ್ತುವರಿದರು.

ಮಹಾಬಲಿಯಾದ ಅಂಗದ ವಾನರರನ್ನು ಹುರಿದುಂಬಿಸುತ್ತಾ ವಜ್ರದಂಷ್ಟ್ರನ ಇದಿರಿನಲ್ಲೇ ಬಂದು ನಿಂತ. ವಜ್ರದಂಷ್ಟ್ರ–ಅಂಗದರಿಗೆ ಹೋರಾಟ ಪ್ರಾರಂಭವಾಯಿತು. ವಾನರರೂ ಉತ್ಸಾಹ ದಿಂದ ಪರ್ವತ, ಬಂಡೆ, ಕಲ್ಲು, ವೃಕ್ಷಗಳಿಂದ ರಾಕ್ಷಸರನ್ನು ಘಾತಿಸತೊಡಗಿದರು. ರಾಕ್ಷಸರ ತಲೆ ದೇಹದಿಂದ ಬೇರೆಯಾಗಿ ಉರುಳತೊಡಗಿತು. ಕೆಲವರ ಕೈ ಹೋಯಿತು, ಕೆಲವರಿಗೆ ಕಾಲು ಹೋಯಿತು, ಮತ್ತೆ ಕೆಲವರಿಗೆ ಸೊಂಟ ಮುರಿಯಿತು. ಎಲ್ಲೆಲ್ಲೂ ಭಿನ್ನವಾದ ರುಂಡ ಮುಂಡಗಳು ರಾಶಿರಾಶಿಯಾಗಿ ಬಿದ್ದಿದ್ದವು. ರಾಕ್ಷಸರ ದೇಹಗಳಲ್ಲಿ ಅವರು ಧರಿಸಿದ್ದ ಆಭರಣಗಳು ಹೊಳೆಯು ತ್ತಿದ್ದವು. ಇಡೀ ರಣಭೂಮಿ ರುದ್ರ ಭೂಮಿಯಾಗಿ ಮಾರ್ಪಟ್ಟಿತು. ಎಲ್ಲೆಲ್ಲೂ ಗೋಣಗಾಟ, ಚೀರಾಟ ನರಳಾಟ ಕೇಳಿ ಬರುತ್ತಿತ್ತು. ವಜ್ರದಂಷ್ಟ್ರ–ಅಂಗದರಿಗೆ ಘೋರವಾದ ಯುದ್ಧ ಕೈ ಹತ್ತಿತು. ಮದಿಸಿದ ಆನೆಗಳಂತೆ ಇಬ್ಬರೂ ಹೋರಾಡತೊಡಗಿದರು. ಮಹಾಪರಾಕ್ರಮಿಯಾದ ವಜ್ರದಂಷ್ಟ್ರ ಒಂದು ಲಕ್ಷಬಾಣಗಳನ್ನು ಅಂಗದನ ಮೇಲೆ ಪ್ರಯೋಗಿಸಿದ. ಅವುಗಳನ್ನು ಚಾಕಚಕ್ಯತೆ ಯಿಂದ ನಿವಾರಿಸಿಕೊಂಡ ಅಂಗದ ವಜ್ರದಂಷ್ಟ್ರನಮೇಲೆ ಒಂದು ದೊಡ್ಡ ಬಂಡೆಯನ್ನು ಬೀಸಿ ಒಗೆದ. ಆ ಬಂಡೆ ವಜ್ರದಂಷ್ಟ್ರನ ರಥವನ್ನು ನಾಶಮಾಡಿತು. ಆ ಬಂಡೆಯ ಪ್ರಹಾರಕ್ಕೆ ಸಿಕ್ಕಿದ ಕುದುರೆ ಗಳು, ಸಾರಥಿ ಗತಪ್ರಾಣರಾದರು. ರಥವನ್ನು ಕಳೆದುಕೊಂಡ ವಜ್ರದಂಷ್ಟ್ರನೊಡನೆ ಮುಷ್ಟಿ ಯುದ್ಧಕ್ಕೆ ಪ್ರಾರಂಭಿಸಿದ ಅಂಗದ. ಇಬ್ಬರೂ ಒಬ್ಬರನ್ನೊಬ್ಬರು ಬಲವಾದ ಮುಷ್ಟಿಯಿಂದ ಘಾತಿಸತೊಡಗಿದರು. ನೋಡನೋಡುತ್ತಿದ್ದಂತೆ ಅಂಗದ ವೃಕ್ಷಗಳಿಂದ ಆವೃತವಾದ ಒಂದು ಪರ್ವತ ಶಿಖರವನ್ನು ವಜ್ರದಂಷ್ಟ್ರನ ಮೇಲೆ ಬೀಸಿ ಒಗೆದ. ಆದರೆ, ಪರಾಕ್ರಮಿಯಾದ ವಜ್ರದಂಷ್ಟ್ರ ಅದನ್ನು ಬಾಣಗಳಿಂದ ಕತ್ತರಿಸಿದ. ಪುನಃ ಇಬ್ಬರೂ ದ್ವಂದ್ವಯುದ್ಧ ಮಾಡತೊಡಗಿದರು. ವಜ್ರ ದಂಷ್ಟ್ರನ ಮುಷ್ಟಿಯ ಪೆಟ್ಟಿಗೆ ಒಮ್ಮೆ ಅಂಗದ ಕೆಳಗೆ ಬಿದ್ದ. ಒಡನೆಯೇ ಪುನಃ ಎದ್ದು ವಜ್ರದಂಷ್ಟ್ರ ನನ್ನು ತನ್ನ ಬಲವಾದ ಮುಷ್ಟಿಯಿಂದ ಹೊಡೆದ, ಇಬ್ಬರೂ ಹೊಡೆದಾಡುತ್ತಿದ್ದರೆ ಇಂದ್ರ ವೃತ್ರಾ ಸುರನೊಡನೆ ಯುದ್ಧ ಮಾಡಿದಂತಿತ್ತು. ಇಬ್ಬರೂ ಸತತವಾಗಿ ಯುದ್ಧ ಮಾಡುತ್ತಿದ್ದುದರಿಂದ ಅವರ ದೇಹದಿಂದ ರಕ್ತ ಹರಿಯಲಾರಂಭಿಸಿತು. ಆ ಇಬ್ಬರೂ ಹೂಬಿಟ್ಟ ಮುತ್ತುಗದ ಮರಗಳಂತೆ ಶೋಭಿಸುತ್ತಿದ್ದರು. ಯುದ್ಧ ಮಾಡುತ್ತ–ಮಾಡುತ್ತಿದ್ದಂತೆಯೇ ಇಬ್ಬರೂ ಆಯಾಸದಿಂದ ಭೂಮಿಯಮೇಲೆ ಮಂಡಿಯೂರಿ ಕುಳಿತರು. ಎವೆಯಿಕ್ಕುವಷ್ಟರಲ್ಲಿ ಅಂಗದ ಜಿಗಿದುಬಿಟ್ಟ. ವಜ್ರ ದಂಷ್ಟ್ರನ ತಲೆ ದೇಹದಿಂದ ಬೇರೆಯಾದೊಡನೆಯೇ ರಾಕ್ಷಸರು ಭಯದಿಂದ ಓಡಿದರು.

ಅಂಗದ ವಿಜಯೋತ್ಸಾಹದಿಂದ ಬೆಳಗಿದ. ಅವನನ್ನು ಎಲ್ಲ ವಾನರರೂ ಸುತ್ತುವರಿದು ಅಭಿ ನಂದಿಸಿದರು. ವೃತ್ರಾಸುರನನ್ನು ಸಂಹರಿಸಿದ ದೇವೇಂದ್ರನನ್ನು ದೇವತೆಗಳು ಸುತ್ತುಗಟ್ಟಿ ಅಭಿನಂದಿ ಸಿದಂತೆ ವಾನರರೆಲ್ಲ ಅಂಗದನನ್ನು ಸುತ್ತುವರೆದು ಪ್ರಶಂಸಿಸಿದರು.

## ಅಕಂಪನನ ವಧೆ

ಮಹಾಪರಾಕ್ರಮಿಯಾದ ವಜ್ರದಂಷ್ಟ್ರನ ಸಂಹಾರವಾದುದನ್ನು ಕೇಳಿದ ರಾವಣ. ಸೇನಾಪತಿ ಯಾದ ಪ್ರಹಸ್ತನನ್ನು ಕುರಿತು ಮಹಾಬಲಿಯಾದ ಅಕಂಪನ ದುರ್ಧರ್ಷರಾದ ರಾಕ್ಷಸರೊಡನೆ ಯುದ್ಧರಂಗಕ್ಕೆ ಹೊರಡಲಿ. ಮೊದಲಿನಿಂದಲೂ ಅಕಂಪನನಿಗೆ ಯುದ್ಧ ಎಂದರೆ ಉತ್ಸಾಹ. ದೇವತೆಗಳೂ ಅವನನ್ನು ನಡುಗಿಸಲಾರದೆ ಹೋದರು. ಆದರಿಂದಲೇ ಅವನು "ಅಕಂಪನ" ಎಂದು ಹೆಸರು ಪಡೆದ. ಈಗ ಅವನು ರಾಕ್ಷಸ ಸೈನ್ಯದೊಡನೆ ಹೊರಟು ಆ ರಾಮಲಕ್ಷ್ಮಣರನ್ನು ಕೊಂದು ಬರಲಿ ಎಂದು ಆಜ್ಞಾಪಿಸಿದ.

ರಾವಣನ ಆಜ್ಞೆಯಂತೆ ಅಕಂಪನ ಅನೇಕ ರಾಕ್ಷಸರೊಂದಿಗೆ ಹೊರಟ. ಅವನ ಬಣ್ಣ ಮೇಘದಂತೆ, ಅವನ ವಾಣಿ ಮೇಘದಂತೆ, ಅವನ ದೇಹ ಮೇಘದಂತೆ ಇದ್ದಿತು. ಯಾರಿಗೂ ನಡುಗದೆ "ಅಕಂಪನ'' ಎನಿಸಿಕೊಂಡವ ಈಗ ರಥವನ್ನೇರುತ್ತಿದ್ದಂತೆಯೇ ಕಂಪಿಸತೊಡಗಿದ. ಅಕಂಪನನ ದೇಹದಲ್ಲಿ ಕಂಪನವಾಗತೊಡಗಿತು. ರಥ ಏರುತ್ತಿದ್ದಂತೆಯೇ ಅವನ ಎಡಗಣ್ಣು ಹಾರ ತೊಡಗಿತು. ಅವನ ಮುಖದ ಕಾಂತಿ ಮಲಿನವಾಗತೊಡಗಿತು. ಕಂಠ ಗದ್ಗದವಾಯಿತು.

ಮಹಾಬಲಿಗಳಾದ ರಾಕ್ಷಸರೊಂದಿಗೆ ಹೊರಟ ಅಕಂಪನ. ರಾಕ್ಷಸರೆಲ್ಲ ಗರ್ಜಿಸಿ ಕೋಲಾಹಲ ಮಾಡತೊಡಗಿದರು. ವಾನರರೆಲ್ಲ ಇದನ್ನು ಕೇಳಿ ಯಾರೋ "ಬಲಿಷ್ಠನಾದ ರಾಕ್ಷಸ ಬರುತ್ತಿರಬೇಕು" ಎಂದು ಊಹಿಸಿದರು.

ರಾಕ್ಷಸ-ವಾನರ ಸೈನ್ಯಗಳ ಪದಾಘಾತದಿಂದ ಆಕಾಶದೆತ್ತರ ಧೂಳು ಆವರಿಸಿತು. ಆ ಧೂಳು ಘನವಾದ ಮೋಡದಂತೆ ಕವಿದು ಅಂಧಕಾರವನ್ನುಂಟುಮಾಡಿತು. ಆ ಅಂಧಕಾರಮಯವಾದ ವಾತಾವರಣದಲ್ಲಿ ವಾನರ-ರಾಕ್ಷಸರಿಗೆ ಕಣ್ಣೇ ಕಾಣಿಸುತ್ತಿರಲಿಲ್ಲ. ಆ ಕತ್ತಲು ತುಂಬಿದ ಸ್ಥಿತಿಯಲ್ಲಿ ವಾನರರು ವಾನರರನ್ನೇ, ರಾಕ್ಷಸರು ರಾಕ್ಷಸರನ್ನೇ ಹೊಡೆದು ಹಾಕುತ್ತಿದ್ದರು.

ಘೋರವಾದ ಯುದ್ಧ ಪ್ರಾರಂಭವಾಯಿತು. ರಾಕ್ಷಸರು ನಾನಾವಿಧವಾದ ಶೂಲ, ಪರಿಘ, ಪ್ರಾಸ, ಮುಸಲ, ಖಡ್ಗ, ತೋಮರ ಮುಂತಾದ ಆಯುಧಗಳಿಂದ ವಾನರರನ್ನು ಕೊಲ್ಲುತ್ತಿದ್ದರು. ವಾನರರೂ ಶಿಲೆ, ವೃಕ್ಷ ಇವುಗಳಿಂದ ರಾಕ್ಷಸರನ್ನು ನಾಶಮಾಡುತ್ತಿದ್ದರು.

ಸ್ವಲ್ಪ ಹೊತ್ತಾಗುವುದರೊಳಗೆ ಧೂಳು ತುಂಬಿದ ವಾತಾವರಣ ತಿಳಿಯಾಗಿ ರಣಭೂಮಿ ವಾನರರ-ರಾಕ್ಷಸರ ಭಗ್ನವಾದ ದೇಹಗಳಿಂದ ತುಂಬಿತು. ಎಲ್ಲೆಲ್ಲೂ ರಕ್ತದ ಕಾಲುವೆ ಹರಿಯ ತೊಡಗಿತು. ಸೇನಾಪತಿಯಾದ ಅಕಂಪನ ತನ್ನ ಸೈನ್ಯವನ್ನು ಹುರಿದುಂಬಿಸುತ್ತಾ ಮುನ್ನುಗ್ಗಿದ.

ರಾಕ್ಷಸರು ಅಕಂಪನನ ಮುಂದಾಳುತನದಲ್ಲಿ ವಾನರ ಸೈನ್ಯವನ್ನು ನಾಶ ಮಾಡುತ್ತಿರುವುದನ್ನು ಹನುಮಂತ ನೋಡಿದ.

ಇತ್ತ ಅಕಂಪನನೂ ತನ್ನ ಸೈನ್ಯ ವಾನರರಿಂದ ಹತವಾಗುತ್ತಿದ್ದುದನ್ನು ಕಂಡು ಸಾರಥಿಗೆ ರಥವನ್ನು ವಾನರರ ಮಧ್ಯ ಬಿಡುವಂತೆ ಹೇಳಿದ. ವಾನರರ ಮಧ್ಯ ನುಗ್ಗಿ ಅಕಂಪನ ಅನೇಕ ಬಾಣಗಳಿಂದ ವಾನರರನ್ನು ನಾಶಮಾಡತೊಡಗಿದ. ಅಕಂಪನನ ಬಾಣವೇಗವನ್ನು ತಾಳಲಾರದೆ ವಾನರರು ಓಡತೊಡಗಿದರು. ತನ್ನ ಜನರಿಗೆ ಒದಗಿದ ಸ್ಥಿತಿಯನ್ನು ನೋಡಿದ ಹನುಮಂತ ವಾನರರಿಗೆ ಧೈರ್ಯವನ್ನು ತುಂಬುತ್ತಾ ತಾನೇ ಅಕಂಪನನಿಗಿದಿರಾಗಿ ಬಂದು ನಿಂತ.

ಪರ್ವತದಂತೆ ವಿಶಾಲವಾದ ದೇಹವುಳ್ಳ ಹನುಮಂತ ಅಕಂಪನಿಗಿದಿರಾಗಿ ನಿಂತಿದ್ದನ್ನು ಕಂಡು ಎಲ್ಲ ವಾನರರೂ ಸಂತೋಷಪಟ್ಟರು. ಹನುಮಂತನ ನಾಯಕತ್ವದಲ್ಲಿ ವಾನರರೆಲ್ಲ ಧೈರ್ಯದಿಂದ ಮುನ್ನುಗ್ಗಿದರು.

ಪರ್ವತದಂತೆ ವಿಶಾಲಕಾಯನಾದ ಹನುಮಂತ ಮುಂದೆ ನಿಂತಿದ್ದನ್ನು ಕಂಡ ಅಕಂಪನ ಇಂದ್ರ ಮಳೆಗರೆಯುವಂತೆ ಹನುಮಂತನ ಮೇಲೆ ಬಾಣದ ಮಳೆಗರೆದ.

ಹನುಮಂತ ಅದನ್ನು ಲಕ್ಷ್ಯಕ್ಕೆ ತರದೆ ಅಕಂಪನನನ್ನು ವಧಿಸುವ ಸಲುವಾಗಿ ಮುನ್ನುಗ್ಗಿದ. ಆಗ ಆತನು ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಅಗ್ನಿಯಂತೆ ಜ್ವಲಿಸುತ್ತಿದ್ದ. ನಿರಾಯುಧನಾಗಿದ್ದ

ಹನುಮಂತ ಅಕಂಪನನನ್ನು ವಧಿಸುವ ನಿಶ್ಚಯದಿಂದ ಒಂದು ದೊಡ್ಡ ಬಂಡೆಯನ್ನು ತೆಗೆದು ಬೀಸಿದ. ಹಿಂದೆ ದೇವೇಂದ್ರ "ನಮುಚಿ" ಎಂಬ ರಾಕ್ಷಸನನ್ನು ಪ್ರಹರಿಸಿದಂತೆ ಹನುಮಂತ ಆ ಬಂಡೆಯಿಂದ ಅಕಂಪನನನ್ನು ಪ್ರಹರಿಸಿದ. ಆದರೆ, ಪರಾಕ್ರಮಿಯಾದ ಅಕಂಪನ ಆ ಬಂಡೆಯನ್ನು ಅರ್ಧಚಂದ್ರಾಕಾರದ ಬಾಣಗಳಿಂದ ಮಾರ್ಗದಲ್ಲೇ ಚೂರು ಚೂರು ಮಾಡಿದ.

ಇದರಿಂದ ಕ್ರುದ್ಧನಾದ ಹನುಮಂತ ಫಲಪುಷ್ಪಗಳಿಂದ ಕೂಡಿದ ದೊಡ್ಡದಾದ "ಅಶ್ವಕರ್ಣ" ಎಂಬ ವೃಕ್ಷವನ್ನು ಕಿತ್ತುಕೊಂಡು ವೇಗವಾಗಿ ತಿರುಗಿಸುತ್ತಾ ಅನೇಕ ರಾಕ್ಷಸರನ್ನು ನಿಗ್ರಹಿಸಿದ. ಅದನ್ನು ಕಂಡ ಅಕಂಪನ ಹದಿನಾಲ್ಕು ತೀಕ್ಷ್ಣವಾದ ಬಾಣಗಳಿಂದ ಹನುಮಂತನನ್ನು ಗಾಯಗೊಳಿಸಿದ. ಬಾಣಗಳಿಂದ ಆವೃತನಾದ ಹನುಮಂತ ವೃಕ್ಷಗಳಿಂದ ಆವೃತವಾದ ಪರ್ವತದಂತೆ ಶೋಭಿಸುತ್ತಿದ್ದ. ರಕ್ತ ಹನುಮಂತನ ದೇಹದಿಂದ ಸುರಿಯುತ್ತಿದ್ದು ಪುಷ್ಪಿಸಿದ ಅಶೋಕವೃಕ್ಷದಂತೆ ಜ್ವಲಿಸುತ್ತಿರುವ ಅಗ್ನಿ ಜ್ವಾಲೆಯಂತೆ ಕಂಗೊಳಿಸುತ್ತಿದ್ದ. ಅಕಂಪನನನ್ನು ತೀರಿಸಲೇಬೇಕು ಎಂದು ನಿಶ್ಚಯಿಸಿದ ಹನುಮಂತ ಒಂದು ದೊಡ್ಡ ಮರವನ್ನು ಕಿತ್ತು ತಕ್ಷಣವೇ ಅಕಂಪನನ ತಲೆಯ ಮೇಲೆ ಪ್ರಹಾರ ಮಾಡಿದ. ಆ ಪ್ರಹಾರಕ್ಕೆ ಅಕಂಪನನ ತಲೆ ಒಡೆದು ಭೂಮಿಯಲ್ಲಿ ಬಿದ್ದು ಅವನು ಗತಪ್ರಾಣನಾದ.

ಅಕಂಪನ ನತ್ತ ಕೂಡಲೇ ಉಳಿದ ರಾಕ್ಷಸರು ತಮ್ಮ ಅಸ್ತ್ರ ಶಸ್ತ್ರಗಳನ್ನು ಅಲ್ಲಲ್ಲೇ ಹಾಕಿ ಲಂಕೆಯತ್ತ ಓಡತೊಡಗಿದರು. ಭೂಕಂಪ ಆಗುವಾಗ ಮರಗಳೆಲ್ಲ ಬುಡಸಹಿತ ಕಳಚಿ ಬೀಳುವಂತೆ ರಾಕ್ಷಸರೆಲ್ಲ ಭಯದಿಂದ ಅಲ್ಲಲ್ಲೇ ಬೀಳತೊಡಗಿದರು. ಇನ್ನೂ ಕೆಲವರು ಭಯದಿಂದ ಹಿಂದೆ ತಿರುಗಿ ತಿರುಗಿ ನೋಡುತ್ತ ಓಡತೊಡಗಿದರು.

ರಾಕ್ಷಸರೆಲ್ಲ ಓಡಿಹೋದ ಬಳಿಕ ವಾನರರೆಲ್ಲ ಹನುಮಂತನನ್ನು ಸುತ್ತುವರಿದು ಅಭಿನಂದಿಸಿದರು. ಹನುಮಂತ ಅವರನ್ನೆಲ್ಲ ಯಥಾಕ್ರಮದಲ್ಲಿ ಆಶ್ವಾಸನಗೊಳಿಸಿದ. ಮಹಾವಿಷ್ಣು ಮಧುಕೈಟಭರನ್ನೂ, ಉಳಿದ ದಾನವರನ್ನೂ ಕೊಂದಂತೆ ಹನುಮಂತ ಅಕಂಪನನೇ ಮೊದಲಾದ ರಾಕ್ಷಸರನ್ನು ಕೊಂದು ಶೋಭಿಸಿದ. ಮಹಾ ಸಾಹಸವನ್ನು ಮಾಡಿದ ಹನುಮಂತನನ್ನು ಎಲ್ಲ ದೇವತೆಗಳೂ ಪ್ರಶಂಸಿಸಿದರು.

ಮಹಾಪರಾಕ್ರಮಿಯಾದ ರಾಮ, ಲಕ್ಷ್ಮಣ, ಸುಗ್ರೀವ, ವಿಭೀಷಣ, ಉಳಿದ ವಾನರ ವೀರರೆಲ್ಲ ಹನುಮಂತನನ್ನು ಯಥೋಚಿತವಾಗಿ ಗೌರವಿಸಿದರು.

## ಪ್ರಹಸ್ತನ ವಧೆ

ವಜ್ರದಂಷ್ಟ್ರ, ಅಕಂಪನ ಇವರುಗಳು ಮರಣವನ್ನಪ್ಪಿದ್ದನ್ನು ಕಂಡ ರಾವಣ ಒಂದು ಮುಹೂರ್ತದವರೆಗೆ ಚಿಂತಾಕ್ರಾಂತನಾಗಿ ಯೋಚಿಸಿದ. ತಾನೇ ಸ್ವತಃ ಲಂಕೆಯನ್ನೆಲ್ಲ ಸುತ್ತಿ ಸೈನ್ಯ ಬಲವನ್ನು ಮತ್ತೆ ಪರೀಕ್ಷಿಸಿದ. ಆ ನಂತರ ರಾವಣ ಅತ್ಯಂತ ಪರಾಕ್ರಮಿಯಾದ ತನ್ನ ಸೇನಾಧಿಪತಿ ಪ್ರಹಸ್ತನನ್ನು ಕರೆದು "ಪ್ರಹಸ್ತ, ವಾನರಸೈನ್ಯ ಲಂಕೆಗೆ ಅತ್ಯಂತ ಸಮೀಪದಲ್ಲಿ ಬಂದು ಆವರಿಸಿ ನಿಂತಿದೆ. ಇದರಿಂದ ರಾಕ್ಷಸರೆಲ್ಲ ಭಯಗೊಂಡಿದ್ದಾರೆ. ಇಂಥ ಸಮಯದಲ್ಲಿ ನಾನು, ಕುಂಭಕರ್ಣ, ಇಂದ್ರಜಿತು, ನಿಕುಂಭ, ನೀನು, ಇಷ್ಟು ಜನ ಮಾತ್ರ ನಮ್ಮ ಪುರಿಯನ್ನು ರಕ್ಷಿಸಿಕೊಳ್ಳಲು ಶಕ್ತರಾಗಿದೇವೆ.

"ನೀನು ಈಗಲೇ ಸೇನಾ ಸಮೇತನಾಗಿ ಹೋಗು. ನಿನ್ನ ಪ್ರಚಂಡ ಬಲದ ಮುಂದೆ ಆ ವಾನರರು ನಿಲ್ಲಲಾರದೆ ದಿಕ್ಕಾಪಾಲಾಗಿ ಓಡಿ ಹೋಗುತ್ತಾರೆ. ವಾನರರೆಲ್ಲ ಚಪಲಬುದ್ಧಿಯುವರು ಅವರಲ್ಲಿ ದೃಢತೆ ಲೇಶವೂ ಇರದು. ಅವರೆಲ್ಲ ಓಡಿ ಹೋದ ಮೇಲೆ ರಾಮಲಕ್ಷ್ಮಣರು ಸುಲಭವಾಗಿ ನಿನ್ನ ವಶವಾಗುತ್ತಾರೆ, ಪ್ರಹಸ್ತ ! ನೀನು ಹೋಗಿ ಅವರನ್ನೆಲ್ಲ ಜಯಿಸಿ ಬಾ" ಎಂದ.

ರಾವಣನ ಮಾತುಗಳನ್ನು ಕೇಳಿದ ಪ್ರಹಸ್ತ "ಮಹಾಪ್ರಭು, ಈಗ ನಮ್ಮ ಮೇಲೆ ಬಂದಿರುವ ವಿಪತ್ತು ಬಹಳ ಘೋರವಾಗಿದೆ. ನಾವು ಈಗಾಗಲೇ ಎಲ್ಲ ಸೇರಿ ಮಂತ್ರಾಲೋಚನೆ ನಡೆಸಿದೆವು. ಸೀತೆಯನ್ನು ರಾಮನಿಗೆ ಒಪ್ಪಿಸಿಬಿಟ್ಟರೆ ನಾವು ಈ ಯುದ್ಧದಿಂದ ಪಾರಾಗಬಹುದು. ಹಾಗೆ ನಾವು ಮಾಡದಿದ್ದರೆ ಭಯ ಕಟ್ಟಿಟ್ಟದ್ದು.

"ಆದರೆ ನಾನು ನಿಮ್ಮ ಉಪ್ಪನ್ನು ತಿಂದಿದೇನೆ. ಅನೇಕಸಲ ನನ್ನನ್ನು ದಾನ ಮಾನಗಳಿಂದ ನೀವು ಸತ್ಕರಿಸಿದೀರಿ. ಆದ್ದರಿಂದ ನಿಮಗ ಪ್ರಿಯವಾದ ಕಾರ್ಯವನ್ನು ಮಾಡುವುದು ನನ್ನ ಕರ್ತವ್ಯ. ನಾನು ನನ್ನ ಹೆಂಡತಿ, ಮಕ್ಕಳು, ಮನೆ, ಮಠ, ಧನ–ಇವುಗಳ ಬಗ್ಗೆ ಯೋಚಿಸುವುದಿಲ್ಲ. ನಿಮ್ಮ ಅಪ್ಪಣೆಯಂತೆ ಸ್ವಾಮಿಕಾರ್ಯಕ್ಕಾಗಿ ಹೋಗುತ್ತೇನೆ" ಎಂದು ಹೇಳಿ ಸೇನಾಧ್ಯಕ್ಷನನ್ನು ಕುರಿತು ಬಲವಾದ ಸೈನ್ಯವನ್ನು ಸಜ್ಜುಗೊಳಿಸುವಂತೆ ಹೇಳಿದ.

ನರಾಂತಕ, ಕುಂಭಹನು, ಮಹಾನಾದ, ಸಮುನ್ನತ–ಎಂಬ ನಾಲ್ಕುಜನ ಮಂತ್ರಿಗಳೊಡನೆ ಅಪಾರವಾದ ಸೈನ್ಯದೊಡನೆ ಪ್ರಹಸ್ತ ಪೂರ್ವದ್ವಾರದತ್ತ ಸಾಗಿದ. ಸರ್ಪಾಕಾರದ ಧ್ವಜದಿಂದ ಅಲಂಕೃತವಾದ ದಿವ್ಯರಥದಲ್ಲಿ ನಾನಾವಿಧವಾದ ಆಯುಧಗಳಿಂದ ಸಜ್ಜಾಗಿ ಹೊರಟ. ಅವನು ಹೊರಡುತ್ತಿದ್ದಂತೆ ಯುದ್ಧ ಸೂಚಕವಾದ ಶಂಖ, ಭೇರಿ, ಪಣವ ಮುಂತಾದ ವಾದ್ಯಗಳು ಶಬ್ದಿಸಿದವು. ಪರ್ವತದಂತೆ ಕಾಯವುಳ್ಳ ಆ ಪ್ರಹಸ್ತ ರಥವನ್ನೇರಿ ಉತ್ಸಾಹದಿಂದ ಹೊರಟ. ಆದರೆ ಹಾಗೆ ಹೊರಟ ಒಂದು ಕ್ಷಣದಲ್ಲಿ ಅವನ ಉತ್ಸಾಹವೆಲ್ಲ ತತ್ತ್ವಗಾಗುವಂತೆ ಅನೇಕ ವಿಧವಾದ ಅಪಶಕುನಗಳು ಕಂಡುಬಂದವು. ದೊಡ್ಡದೊಡ್ಡ ಹದ್ದುಗಳು ಅವನ ರಥದಮೇಲೆ ದಕ್ಷಿಣಾಭಿಮುಖವಾಗಿ ಕುಳಿತು ಭಯಂಕರ ಶಬ್ದ ಮಾಡತೊಡಗಿದವು. ಆದರೂ ಧೈರ್ಯಗುಂದದೆ ಮುಂದುವರಿದ ಪ್ರಹಸ್ತ. ಅವನನ್ನನುಸರಿಸಿ ಹೊರಟ ರಾಕ್ಷಸರು ಅಗ್ನಿ ಹೋತ್ರವನ್ನು ವಿಧಿವತ್ತಾಗಿ ಮಾಡಿ ದಿವ್ಯಾಂಬರಗಳನ್ನೂ, ದಿವ್ಯಮಾಲ್ಯಗಳನ್ನೂ ಧರಿಸಿದ್ದರು. ಅವರೆಲ್ಲ ದೊಡ್ಡದಾಗಿ ಸಿಂಹನಾದ ಮಾಡುತ್ತಿದ್ದರು. ರಾಕ್ಷಸರ ಸೈನ್ಯ ಸಿಂಹನಾದ ಮಾಡುತ್ತ ಬರುತ್ತಿರುವುದನ್ನು ಕಂಡ ವಾನರರೂ ಮೇಘದಂತೆ ಗರ್ಜಿಸತೊಡಗಿದರು. ಆ ರಣಭೂಮಿಯೆಲ್ಲ ರಾಕ್ಷಸರ ಸಿಂಹನಾದ, ವಾನರರ ಗರ್ಜನೆಯಿಂದ ಪ್ರತಿಧ್ವನಿಸುತ್ತಿತ್ತು.

ಇದೇ ಸಮಯಕ್ಕೆ ಸರಿಯಾಗಿ ದುರ್ಬುದ್ಧಿಯುಳ್ಳ ಪ್ರಹಸ್ತ ವಿಜಯಕಾಂಕ್ಷಿಯಾಗಿ ಸುಗ್ರೀವನ ಸೈನ್ಯಕ್ಕೆ ಅಭಿಮುಖನಾಗಿ ನಡೆದ. ದೀಪವನ್ನು ಕಂಡು ಅದರಲ್ಲಿ ಬೀಳಲು ಕಾತರವಾಗಿರುವ ಪತಂಗ ಧಾವಿಸಿದಂತೆ ಪ್ರಹಸ್ತ ವಾನರ ಸೈನ್ಯದತ್ತ ಧಾವಿಸಿದ, ಯುದ್ಧಕ್ಕೆ ಸನ್ನದ್ಧನಾಗಿ. ಮಹಾಸೈನ್ಯದೊಡನೆ ಬರುತ್ತಿದ್ದ ಪ್ರಹಸ್ತನನ್ನು ನೋಡಿ ಮುಗುಳುನಗೆಯಿಂದ ಶ್ರೀರಾಮ ವಿಭೀಷಣನನ್ನು ಕುರಿತು ''ವಿಭೀಷಣ–ಅಲ್ಲಿ ಬರುತ್ತಿರುವ ಮಹಾಬಲಿಯಾದ ರಾಕ್ಷಸ ಯಾರು? ಅವನ ಬಲ ಪೌರುಷಗಳ ಬಗ್ಗೆ ಹೇಳು'' ಎಂದ. ಆಗ, ವಿಭೀಷಣ, "ರಾಘವ, ಅಲ್ಲಿ ಬರುತ್ತಿರುವವ ರಾವಣನ ಪ್ರಧಾನ ಸೇನಾಪತಿಯಾದ ಪ್ರಹಸ್ತ. ಅವನು ಮಹಾಪರಾಕ್ರಮಿ. ಅಸ್ತ್ರಶಸ್ತ್ರಗಳ ಉಪಯೋಗ

ವನ್ನು ಚೆನ್ನಾಗಿ ತಿಳಿದವನು. ರಾವಣನ ಸೈನ್ಯದಲ್ಲಿ ಮೂರನೇ ಒಂದು ಭಾಗದಷ್ಟು ಸೈನ್ಯ ಇವನ ಅಧೀನದಲ್ಲಿದೆ" ಎಂದ.

ಪ್ರಹಸ್ತನನ್ನು ಅನುಸರಿಸಿ ಬಂದ ರಾಕ್ಷಸರಿಗೂ ವಾನರರಿಗೂ ಘೋರವಾದ ಯುದ್ಧ ಕೈಗಟ್ಟಿತು. ರಾಕ್ಷಸರು ಪರಿಘ, ತೋಮರ, ಒನಕೆ, ಖಡ್ಗ ಮುಂತಾದ ಆಯುಧಗಳಿಂದ ವಾನರರನ್ನು ಕತ್ತರಿಸಿ ಹಾಕುತ್ತಿದ್ದರು. ಹಾಗೆಯೇ ವಾನರರೂ ಪರ್ವತ, ವೃಕ್ಷ, ಬಂಡೆ ಇವುಗಳಿಂದ ರಾಕ್ಷಸರನ್ನು ಕೊಂದುಹಾಕುತ್ತಿದ್ದರು. ಎಲ್ಲೆಲ್ಲೂ ಛಿನ್ನವಾದ ರುಂಡಮುಂಡಗಳು ದೇಹದ ವಿಭಿನ್ನವಾದ ಭಾಗಗಳು ಕಂಡುಬರುತ್ತಿದ್ದವು. ರಕ್ತಪ್ರವಾಹ ನದಿಗಳ ಪ್ರವಾಹದಂತೆ ಹರಿಯುತ್ತಿತ್ತು. ಸತ್ತುಬಿದ್ದಿದ್ದ ರಾಕ್ಷಸ ವಾನರರ ಹೆಣಗಳೇ ನದೀತಟಗಳಾದವು. ಮುರಿದು ಬಿದ್ದ ದೊಡ್ಡ ದೊಡ್ಡ ಅಸ್ತ್ರಶಸ್ತ್ರಗಳ ರಕ್ತದ ನದಿಯ ಸಾಲು ಮರಗಳಾದವು. ಈ ದೊಡ್ಡ ರಕ್ತನದಿ ಯಮಲೋಕವೆಂಬ ಸಮುದ್ರವನ್ನೇ ಸೇರಲು ಪ್ರವಹಿಸುತ್ತಿದ್ದಿತು. ಸೈನಿಕರ ಚೂರ್ಣೀಕೃತವಾದ ಹೃದಯವೇ ಈ ನದಿಯ ಕೆಸರಾಗಿತ್ತು. ಕತ್ತರಿಸಿ ಬಿದ್ದಿದ್ದ ರುಂಡ ಮುಂಡಗಳೇ ನದಿಯಲ್ಲಿನ ಮೀನು ಮೊಸಳೆಗಳು. ಶರೀರದ ಕೇಶಪಾಶಗಳು ನದಿಯಲ್ಲಿ ಅಲ್ಲಲ್ಲಿ ಕಾಣಬರುವ ಹುಲ್ಲಿನಂತೆ ಇದ್ದಿತು. ರಕ್ತರೂಪೀನದಿಯಲ್ಲಿ ಹದ್ದುಗಳೇ ಹಂಸಗಳು. ಬೆಳ್ಳಗೆ ಇರುವ ಮೇಧಸ್ಸೇ ನೊರೆ. ರಣಭೂಮಿಯಲ್ಲಿ ಅಂಗಗಳು ಕತ್ತರಿಸಲ್ಪಟ್ಟು ಬಿದ್ದು ನರಳುತ್ತಿರುವವರ ನರಳುವಿಕೆಯೇ ನದಿಯ ಕಲಕಲನಾದವೆನಿಸುತ್ತಿತ್ತು. ಈ ಯುದ್ಧಭೂಮಿರೂಪಿಯ ನದಿಯನ್ನು ವಾನರರು ರಾಕ್ಷಸರು ಅತ್ಯಂತ ಶ್ರಮದಿಂದ ದಾಟುತ್ತಿದ್ದರು, ಮದಿಸಿದ ಆನೆ ಕಮಲಗಳಿಂದ ಯುಕ್ತವಾದ ನದಿಯನ್ನು ದಾಟುವಂತೆ.

ಈ ಸಂದರ್ಭದಲ್ಲಿ ಪ್ರಹಸ್ತ ರಥದಲ್ಲಿ ಕುಳಿತು ಬಾಣದ ಮಳೆಗರೆಯುತ್ತಾ ಅನೇಕ ವಾನರರನ್ನು ಕೊಂದುಹಾಕುತ್ತಿರುವುದನ್ನು ವಾನರ ಸೇನಾಪತಿಯಾದ ನೀಲ ನೋಡಿದ. ತನ್ನ ಕಡೆಯವರು ಪ್ರಹಸ್ತನಿಂದ ಕೊಲ್ಲಲ್ಪಡುತ್ತಿರುವುದನ್ನು ಕಂಡುಸಹಿಸದ ನೀಲ ಮಹಾವೇಗದಿಂದ ಹಾರಿದ, ರಾಕ್ಷಸ ಸೈನ್ಯದ ನಡುವೆ. ಭಯಂಕರವಾದ ವಾಯುವಿನ ಆಘಾತಕ್ಕೆ ಘನವಾದ ಮೋಘಗಳು ದಶದಿಶೆಗೂ ಚದುರಿ ಹೋಗುವಂತೆ ನೀಲನ ವೇಗಕ್ಕೆ ಅನೇಕ ರಾಕ್ಷಸರು ಹತರಾದರು, ಮತ್ತೆ ಕೆಲವರು ದೂರ ಚದುರಿದರು. ರಾಕ್ಷಸ ಸೈನ್ಯ ಅಲ್ಲೋಲ ಕಲ್ಲೋಲವಾಯಿತು. ತನ್ನ ಸೈನ್ಯ ಕಂಗೆಟ್ಟದ್ದನ್ನು ಕಂಡ ಪ್ರಹಸ್ತ ಸೂರ್ಯನಂತೆ ಹೊಳೆಯುವ ತನ್ನ ರಥವನ್ನು ನೇರವಾಗಿ ನೀಲನಿಗೆ ಅಭಿಮುಖವಾಗಿ ತಿರುಗಿಸಿದ.

ನೀಲ-ಪ್ರಹಸ್ತ ಇಬ್ಬರಿಗೂ ಘೋರವಾದ ಯುದ್ಧ ಪ್ರಾರಂಭವಾಯಿತು. ಪ್ರಹಸ್ತನೊಡನೆ ಬಂದಿದ್ದ ನಾಲ್ಕು ಜನ ಸೇನಾಧಿಪತಿಗಳು ವಾನರರೊಡನೆ ಹೋರಾಡತೊಡಗಿದರು. ವಾನರರನ್ನು ಕೊಲ್ಲುತ್ತಿದ್ದ ನರಾಂತಕನನ್ನು ದ್ವಿವಿದ ಒಂದು ಪರ್ವತ ಶಿಖರವನ್ನೆತ್ತಿ ಹಾಕಿ ಕೊಂದ. ದುರ್ಮುಖ ಎಂಬ ವಾನರಶ್ರೇಷ್ಠ ವಿಶಾಲವಾದ ವೃಕ್ಷವನ್ನೆತ್ತಿ ರಾಕ್ಷಸನಾದ ಸಮುನ್ನತನನ್ನು ನಾಶಮಾಡಿದ. ಮಹಾ ಪರಾಕ್ರಮಿಯಾದ ಜಾಂಬವಂತ ಮಹಾಕೋಪದಿಂದ ಕೂಡಿದವನಾಗಿ ಒಂದು ದೊಡ್ಡ ಬಂಡೆಯನ್ನೆತ್ತಿ ಮಹಾನಾದನ ಎದೆಯ ಮೇಲೆ ಹಾಕಿ ಅವನನ್ನು ಕೊಂದ. ಉಳಿದ "ಕುಂಭಹನು" ಎಂಬ ರಾಕ್ಷಸನನ್ನು "ತಾರ" ಎಂಬ ವಾನರ ಯುದ್ಧದಲ್ಲಿ ಕೊಂದ. ತನ್ನ ಮಂತ್ರಿಗಳೆಲ್ಲ ವಾನರರಿಂದ ಹತರಾದುದನ್ನು ಕಂಡ ಪ್ರಹಸ್ತ ಬಹಳ ಕೋಪದಿಂದ ನೀಲನೊಡನೆ ಯುದ್ಧಮಾಡತೊಡಗಿದ. ಪುಂಖಾನುಪುಂಖವಾಗಿ ಬಾಣಗಳ ಮಳೆಯನ್ನೇ ನೀಲನ ಮೇಲೆ ಸುರಿಸಿದ. ರಾಕ್ಷಸರಾಜನ ಸೇನಾಪತಿ ಪ್ರಹಸ್ತನಿಗೂ ವಾನರ ರಾಜನ ಸೇನಾಪತಿ ನೀಲನಿಗೂ ಘೋರವಾದ ಯುದ್ಧ ಜರು

ಗಿತು. ಪ್ರಹಸ್ತ ನೀಲನನ್ನು ಅನೇಕ ಬಾಣಗಳಿಂದ ಮುಚ್ಚಿದ. ಕೋಪಗೊಂಡ ನೀಲ ಬೇರುಸಹಿತ ಒಂದು ಸಾಲವೃಕ್ಷವನ್ನು ಕಿತ್ತುಕೊಂಡು ಪ್ರಹಸ್ತನ ಮೇಲೆ ಪ್ರಹರಿಸಿದ. ಆ ಪ್ರಹಾರಕ್ಕೆ ಪ್ರಹಸ್ತನ ರಥ ಪುಡಿಯಾಯಿತು. ಕುದುರೆಗಳು ಸತ್ತುವು. ಸಾರಥಿ ಗತಪ್ರಾಣನಾದ. ಕೋಪದಿಂದ ಪ್ರಹಸ್ತ ಶೂಲವನ್ನು ತಿರುಗಿಸುತ್ತಾ ನೀಲನಮೇಲೆ ಬಿದ್ದ. ನೀಲನನ್ನು ಶೂಲದಿಂದ ಘಾತಿಸಿದ. ಶೂಲದ ಪ್ರಹಾರಕ್ಕೆ ನೀಲ ಒಂದು ಕ್ಷಣ ತತ್ತರಿಸಿದ. ಆದರೆ, ಪುನಃ ಚೇತರಿಸಿಕೊಂಡು ದೊಡ್ಡ ಬಂಡೆ ಯನ್ನು ತೆಗೆದು ಪ್ರಹಸ್ತನ ತಲೆ ಜಜ್ಜಿಹೋಗಿ, ಅಸು ನೀಗಿ ಅವನು ಕೆಳಗೆ ಬಿದ್ದ. ಸೇನಾಪತಿ ಕೆಳಗೆ ಬಿದ್ದುದನ್ನು ಕಂಡ ರಾಕ್ಷಸರು ದಿಕ್ಕಾಪಾಲಾಗಿ ಓಡಿದರು.

ರಾವಣನ ಸೇನಾಪತಿಯನ್ನು ಕೊಂದ ನೀಲ ರಾಮಲಕ್ಷ್ಮಣರಬಳಿ ಹೋಗಿ ನಮಿಸಿದ. ರಾಮಲಕ್ಷ್ಮಣರು ಮಹಾವೀರನಾದ ನೀಲನನ್ನು ಯಥೋಚಿತವಾಗಿ ಪ್ರಶಂಸಿಸಿದರು,

**ರಾವಣ ಮೊದಲನೆಯಬಾರಿ ಯುದ್ಧಕ್ಕೆ ಹೊರಡುವುದು**

ಪ್ರಹಸ್ತನ ಸೈನಿಕರು ವೇಗವಾಗಿ ಲಂಕೆಯತ್ತ ಓಡಿಬಂದರು. ರಾವಣನನ್ನು ಕಂಡು ಪ್ರಹಸ್ತ ನಾಶವಾದುದನ್ನು ತಿಳಿಸಿದರು. ಪ್ರಹಸ್ತನ ಮರಣವೃತ್ತಾಂತವನ್ನು ಕೇಳಿದ ರಾವಣನಿಗೆ ಬಹಳ ವಾಗಿ ಕೋಪಬಂದಿತು. ತಕ್ಷಣವೇ ಶೋಕವೂ ಆಯಿತು. ಹೆಬ್ಬಾವಿನಂತೆ ನಿಟ್ಟುಸಿರುಬಿಡುತ್ತಾ ರಾವಣ "ನಾನು ಶತ್ರುವನ್ನು ಬಲಹೀನರೆಂದು ಬಗೆದೆ. ಆದರೆ, ಅವರು ಮಹಾ ಪರಾಕ್ರಮಿಗಳಾ ಗಿರುವರು. ನನ್ನ ಸೇನಾಪತಿ ಪಹಸ್ತ ಇಂದ್ರನ ಸೇನೆಯೊಡನೆಯೇ ಹೋರಾಡಿ ಜಯಗಳಿಸಿದವ. ಅಂಥವನನ್ನು ವಾನರರು ಕೊಂದಿದ್ದಾರೆ. ಇರಲಿ; ಈಗ ನಾನೇ ಸರ್ವಸೈನ್ಯದಿಂದ ಕೂಡಿದವನಾಗಿ ಯುದ್ಧಕ್ಕೆ ಹೋಗುವೆನು. ಅಗ್ನಿಯಿಂದ ಆವೃತವಾದ ವನ ಹೇಗೆ ನಾಶವಾಗುವುದೋ ಹಾಗೆ ಬಾಣಗಳಿಂದ ವಾನರರನ್ನು ಮುಚ್ಚಿ ನಾಶಮಾಡಿಬಿಡುತ್ತೇನೆ. ರಾಮಲಕ್ಷ್ಮಣರನ್ನೂ ಕೊಂದು ಜಯವನ್ನು ಗಳಿಸಿಬರುತ್ತೇನೆ." ಎಂದು ಹೇಳಿ ಸಕಲ ಸೈನ್ಯವನ್ನೂ ಯುದ್ಧಯಾತ್ರೆಗೆ ಹೊರಡಲು ಆಜ್ಞಾಪಿಸಿದ. ಯುದ್ಧಸೂಚಕವಾದ ಶಂಖ, ಭೇರಿ, ಪಣವ ವಾದ್ಯಗಳು ಭೋರ್ಗರೆದವು. ರಾವಣ ಪರ್ವತ ಸದೃಶರಾದ ರಾಕ್ಷಸರೊಂದಿಗೆ ಯುದ್ಧಕ್ಕೆ ಹೊರಟ. ಅತ್ಯಂತ ಪರಾಕ್ರಮಿಗಳಾದ ರಾಕ್ಷಸರೊಡನೆ ರಾವಣ ಬರುತ್ತಿರುವುದನ್ನು ರಾಮ ಕಂಡ. ''ವಿಭೀಷಣ ! ಇದೇನು ? ಪರ್ವತ ದಂತೆ ಆಕಾರವುಳ್ಳ ಅನೇಕ ರಾಕ್ಷಸರಿಂದ ಕೂಡಿದ ಸೈನ್ಯ ಬರುತ್ತಿದೆ. ಇವರಲ್ಲಿ ಪರಾಕ್ರಮಿಗಳು ಯಾರು, ಹೇಳು" ಎಂದ.

ರಾಮನ ಮಾತುಗಳನ್ನು ಕೇಳಿದ ವಿಭೀಷಣ "ರಾಘವ, ನೋಡು, ಮಹಾಸೈನ್ಯದ ಮುಂಭಾಗ ದಲ್ಲಿ ಸಿಂಹಧ್ವಜವಿರುವ ರಥವನ್ನು ಹತ್ತಿ ಬರುತ್ತಿದ್ದಾನಲ್ಲ! ಇಂದ್ರಧನುಸ್ಸಿನಂತೆ ಕಾಂತಿಯುಕ್ತ ವಾದ ಧನುಸ್ಸನ್ನು ಕೈಯಲ್ಲಿ ಹಿಡಿದು. ಅವನೇ ಇಂದ್ರನನ್ನು ಜಯಿಸಿದ ಇಂದ್ರಜಿತು. ಅವನು ವರಪ್ರಭಾವದಿಂದ ಕೊಬ್ಬಿದ್ದಾನೆ.

"ಈ ಕಡೆ ನೋಡು ! ವಿಂಧ್ಯಾಚಲ, ಅಸ್ತಾಚಲ, ಮಹಾಮೇರು ಈ ಪರ್ವತಗಳಂತೆ ವಿಶಾಲ ವಾದ ಶರೀರಉಳ್ಳವ ಬರುತ್ತಿದ್ದಾನೆ—ಅವನೇ "ಅತಿಕಾಯ"—ಅವನಿಗೆ ಮೈ ಬಹಳ ಅಧಿಕ. ನೋಡು, ಅವನು ಪುನಃಪುನಃ ಧನುಸ್ಸಿನ ನಾಣನ್ನು ಕಟ್ಟಿ ಎಳೆಯುತ್ತಾ ಬರುತ್ತಿದ್ದಾನೆ ! ಅವನೂ ರಾವಣನ ಮಗನೇ, ಯಾವನ ಕಣ್ಣುಗಳು ಪ್ರಾತಃಕಾಲದ ಸೂರ್ಯನಂತೆ ಕೆಂಪಾಗಿದೆಯೋ; ಯಾವನುಮದಿ ಸಿದ ಆನೆಯಮೇಲೆ ಕುಳಿತು ಗರ್ಜಿಸುತ್ತಿದ್ದಾನೆಯೋ, ಯಾವನ ಕಂಠಧ್ವನಿ ಗಂಟೆಯ ಧ್ವನಿಗಿಂತ ಜೋರಾಗಿದೆಯೋ ಅಂಥ ಕ್ರೂರ ಸ್ವಭಾವ ಉಳ್ಳವನೇ ಮಹೋದರ. ಇವನು ರಾವಣನ ಮಂತ್ರಿ ಗಳಲ್ಲಿ ಒಬ್ಬ. ಇತ್ತ ನೋಡು—ಸಾಯಂಕಾಲದಲ್ಲಿ ಘನವಾಗಿ ತೋರುತ್ತಿರುವ ಮೇಘದಂಥ ಶರೀರ

ಉಳ್ಳವನು. ಕುದುರೆಯಮೇಲೆ ಹತ್ತಿ ಕುಳಿತು ಬರುತ್ತಿದಾನ. ಇವನು "ಪಿಶಾಚ" ಎಂಬ ರಾಕ್ಷಸ. "ಇವನು ಮಹಾವೇಗಶಾಲಿಯಾದ ಯೋಧನೆಂದು ಖ್ಯಾತಿವಡೆದಿದಾನೆ."

"ಮೇಘದಂತೆ ಕಪ್ಪಾದ ದೇಹಕಾಂತಿಯುಳ್ಳ, ತನ್ನ ಧನುಸ್ಸನ್ನು ಬಾರಿಬಾರಿಗೂ ಸರಿಪಡಿಸಿ ಕೊಳ್ಳುತ್ತ ಇರುವ ಈ ರಾಕ್ಷಸನನ್ನು ನೋಡು. ಇವನ ಧ್ವಜ ವಾಸುಕಿಯ ಚಿಹ್ನದಿಂದ ಕೂಡಿದೆ. ಇವನೇ "ಕುಂಭ" ಎಂಬ ರಾಕ್ಷಸ. ಅಲ್ಲಿ ನೋಡು.: ಸುವರ್ಣ ವಜ್ರದ ಆಭರಣಗಳಿಂದ ಭೂಷಿತ ನಾಗಿ ಪ್ರಕಾಶಿಸುತ್ತಾ ಇಂದ್ರನೀಲಮಣಿಯನ್ನು ಧರಿಸಿರುವುದರಿಂದ ಹೊಗೆಯಿಂದ ಕೂಡಿದ ಅಗ್ನಿ ಯಂತೆ ಪ್ರಕಾಶಮಾನವಾಗಿ ಬರುತ್ತಿದಾನಲ್ಲ. ಅವನೇ "ನಿಕುಂಭ" ಎಂಬ ಯೋಧ. ರಾಕ್ಷಸ ಸೈನ್ಯದ ಧ್ವಜದಂತೆ ಇದಾನೆ. ಇವನು ಘೋರ ಪರಾಕ್ರಮಿ.

"ರಾಘವ ! ಅದೋ ನೋಡು ! ಅಲ್ಲಿ ಘೋರವಾದ ಹುಲಿ, ಸಿಂಹ, ನರಿ, ಕುದುರೆ, ಆನೆ, ಈ ಪ್ರಾಣಿಗಳ ಮುಖದಂತೆ ಮುಖಗಳುಳ್ಳ ಘೋರರಾದ ರಾಕ್ಷಸರಿಂದ ಸುತ್ತುವರಿಯಲ್ಪಟ್ಟವ ನಾಗಿ ದೇವತೆಗಳ ದರ್ಪವನ್ನೂ ಮುರಿದಂಥವನಾಗಿ, ರಥದಲ್ಲಿ ಕುಳಿತು ಬರುತ್ತಿದಾನೆ. ಅವನ ತಲೆಯ ಮೇಲೆ ಶುಭ್ರವಾದ ಬೆಳದಿಂಗಳಿನಂತೆ ಶ್ವೇತಚ್ಛತ್ರಿ ಹಿಡಿಯಲ್ಪಟ್ಟಿದೆ. ಭೂತಗಳಿಂದ ಸೇವಿತ ನಾದ ರುದ್ರನಂತೆ ಬರುತ್ತಿದಾನೆ ನೋಡು. ಅವನೇ ರಾಕ್ಷಸ ರಾಜನಾದ ರಾವಣ.

"ರಾಮ ! ನೋಡು ! ಅವನ ತಲೆಯ ಮೇಲೆ ವಜ್ರಖಚಿತವಾದ ಕಿರೀಟ ಪ್ರಕಾಶಿಸುತ್ತಿದೆ. ಕಿವಿಯಲ್ಲಿ ಧರಿಸಿರುವ ಕುಂಡಲಗಳ ಕಾಂತಿಯಿಂದ ಅವನ ಮುಖ ಹೊಳೆಯುತ್ತಿದೆ. ಅವನ ದೇಹ ವಿಂಧ್ಯ ಪರ್ವತದಂತೆ ವಿಶಾಲವಾಗಿ, ಬಲಯುತವಾಗಿ ಇದೆ. ಇಂಥ ಮಹಾಶರೀರಿ ರಾವಣ ಯುದ್ಧದಲ್ಲಿ ಇಂದ್ರನ ಮತ್ತು ಯಮನ ಗರ್ವವನ್ನೂ ಅಡಗಿಸಿದವನು. ಅವನ ಎದೆ ನೋಡು ! ಐರಾವತದೊಡನೆ ಹೋರಾಡಿ ಅದರ ದಂತಕ್ಷತದ ಗುರುತು ಇದೆ. ಅವನೇ ಲೋಕವನ್ನು ನಡುಗಿ ಸುವ ರಾವಣ !" ಎಂದು ವಿಭೀಷಣ ರಾವಣನ ಸೈನ್ಯದಲ್ಲಿರುವ ವೀರ ರಾಕ್ಷಸರ ಪರಿಚಯುವನ್ನು ಮಾಡಿಕೊಟ್ಟ.

ರಾವಣನನ್ನು ನೋಡಿದ ರಾಮ 'ವಿಭೀಷಣ, ರಾವಣ ಮಹಾತೇಜಸ್ಸಿನಿಂದ ಬೆಳಗುತ್ತಿದಾನೆ ಇವನ ತೇಜಸ್ಸು ಎಷ್ಟು ಪ್ರಭಾವಶಾಲಿಯಾಗಿದೆ ಎಂದರೆ ನಾನೇ ಇವನನ್ನು ಆ ತೇಜೋಮಂಡಲ ದಲ್ಲಿ ಸರಿಯಾಗಿ ನೋಡಲು ಆಗುತ್ತಿಲ್ಲ. ಪರ್ವತ ಸದೃಶರಾದ ರಾಕ್ಷಸರೊಂದಿಗೆ ಇವನು ಬರು ತ್ತಿರುವುದನ್ನು ನೋಡಿದರೆ ಭೂತಗಳಿಂದ ಕೂಡಿಕೊಂಡು ಸಾಕ್ಷಾತ್ ಯಮರಾಜನೇ ಬರುವಂತಿದೆ.

"ಆದರೇನು ? ವಿಭೀಷಣ ! ಈ ಪಾಪಿ ನನ್ನ ಪತ್ನಿ ಸೀತೆಯನ್ನು ಅಪಹರಿಸಿ ಘೋರವಾದ ಅಪರಾಧವನ್ನು ಮಾಡಿದಾನೆ. ಇವನು ನನ್ನ ಕಣ್ಣಿಗೆ ಬಿದ್ದಮೇಲೆ ಇವನನ್ನು ಕೊಲ್ಲದೆ ಬಿಡುವುದಿಲ್ಲ" ಎಂದು ಹೇಳಿ ರಾವಣನೊಡನೆ ಯುದ್ಧಮಾಡಲು ಸನ್ನದ್ಧನಾಗಿ ನಿಂತ. ಲಕ್ಷ್ಮಣನೂ ರಾಮನ ಸಹಾಯಕ್ಕೆ ಪಕ್ಕದಲ್ಲೇ ನಿಂತ. ಇತ್ತ ರಾವಣ ತನ್ನೊಡನೆ ಬಂದ ರಾಕ್ಷಸರನ್ನೆಲ್ಲ ನೋಡಿ ನೀವೆಲ್ಲ ಲಂಕೆಯ ಪ್ರಮುಖ ದ್ವಾರಗಳನ್ನು ಕಾಯುತ್ತಿರಿ. ನಾನು ಇಲ್ಲಿ ಯುದ್ಧ ಮಾಡುತ್ತಿರುವ ವೇಳೆ ವಾನರರು ಲಂಕೆಯೊಳಗೆ ನುಗ್ಗಿ ಲಂಕೆಯನ್ನೇ ನಾಶಮಾಡಿಯಾರು. ಆದಕಾರಣ, ನೀವೆಲ್ಲ ಕೋಟೆ ಸುತ್ತಲೂ ನಿಂತು ಲಂಕೆಯನ್ನು ಕಾಯುತ್ತಿರಿ ಎಂದು ಹೇಳಿ ಅವರನ್ನೆಲ್ಲ ಆಯಾ ಸ್ಥಳಗಳಲ್ಲಿ ನಿಯೋಜಿಸಿದ.

ರಾಕ್ಷಸರೆಲ್ಲ ರಾವಣನ ಆಜ್ಞೆಯನ್ನನುಸರಿಸಿ ಕೋಟೆಯ ಸುತ್ತಲೂ ಯಥಾಸ್ಥಾನದಲ್ಲಿ ನಿಂತರು. ರಾವಣ ಅಗ್ನಿಸದೃಶವಾದ ರಥವನ್ನೇರಿ ಮದಿಸಿದ ಆನೆ ಕಬ್ಬಿನ ತೋಟವನ್ನು

ಹೋಗುವಂತೆ ವಾನರ ಸೈನ್ಯದ ಮಧ್ಯೆ ನುಗ್ಗಿದ.

ಮಹಾ ತಿಮಿಂಗಿಲ ಸಮುದ್ರದಲ್ಲಿ ನುಗ್ಗಿ ಬಂದಂತೆ ರಾವಣ ನುಗ್ಗಿ ಬರುದುದನ್ನು ಕಂಡ ಸುಗ್ರೀವ ಒಂದು ದೊಡ್ಡ ಪರ್ವತ ಶಿಖರವನ್ನು ಕಿತ್ತು ರಾವಣನ ಮೇಲೆ ಯುದ್ಧಕ್ಕೆ ಬಂದ. ಆ ಪರ್ವತ ಶಿಖರವನ್ನು ಬೀಸಿ ರಾವಣನ ಮೇಲೆ ಒಗೆದ. ರಾವಣ ಅದನ್ನು ಅನೇಕ ಬಾಣಗಳಿಂದ ಚೂರುಚೂರಾಗಿ ಮಾಡಿದ. ಸುಗ್ರೀವ ಇದರಿಂದ ಮತ್ತೂ ಕುಪಿತನಾಗಿ ಮಹಾ ವೃಕ್ಷವನ್ನು ಕಿತ್ತು ಅದನ್ನು ಒಗೆದ. ರಾವಣ ಅದನ್ನೂ ತನ್ನ ಬಾಣಗಳಿಂದ ಕತ್ತರಿಸಿ ಸುಗ್ರೀವನ ಮೇಲೆ ತೀಕ್ಷ್ಣವಾದ ಬಾಣಗಳನ್ನು ಬಿಟ್ಟ. ಸುಗ್ರೀವ ರಾವಣನ ಆ ಕ್ರೂರವಾದ ಬಾಣಗಳಿಗೆ ಸಿಕ್ಕು ಕೆಳಗೆ ಮೂರ್ಛಿತನಾಗಿ ಬಿದ್ದ.

ಸುಗ್ರೀವ ಹೀಗೆ ಮೂರ್ಛಿತನಾಗಿ ಬಿದ್ದುದನ್ನು ಕಂಡ ಗಜ, ಗವಾಕ್ಷ ಮುಂತಾದ ವಾನರರು ಪರ್ವತವನ್ನೂ, ವೃಕ್ಷಗಳನ್ನೂ ಕಿತ್ತುಕೊಂಡು ರಾವಣನ ಮೇಲೆ ನುಗ್ಗಿ ಬಂದರು. ರಾವಣ ಅವರನ್ನೆಲ್ಲ ತನ್ನ ಬಾಣಗಳಿಂದ ಹೊಡೆದು ಮುನ್ನುಗ್ಗಿದ. ಬಡಬಾಗ್ನಿಯ ತಾಪಕ್ಕೆ ಸಿಲುಕಿದಂತೆ ವಾನರರೆಲ್ಲ ರಾವಣನ ಪ್ರತಾಪಕ್ಕೆ ಬೆಂದು ರಾಮನ ಹತ್ತಿರ ಓಡಿ ಹೋದರು. ರಾಘವ ವಾನರರ ಆರ್ತನಾದವನ್ನು ಕೇಳಿ ರಾವಣನನ್ನು ಕೊಲ್ಲುವ ಸಲುವಾಗಿ ಸನ್ನದ್ಧನಾದ.

ಸನ್ನದ್ಧನಾಗಿ ನಿಂತ ರಾಮನನ್ನು ಕಂಡ ಲಕ್ಷ್ಮಣ ವಿನಯದಿಂದ ಅವನಿಗೆ ಬಾಗಿ ನಮಿಸಿ "ಅಣ್ಣಾ ! ಈ ಪಾಪಿಯಾದ ರಾಕ್ಷಸ ರಾಜನನ್ನು ನಾನೇ ನೋಡಿಕೊಳ್ಳುತ್ತೇನೆ. ಹೋಗಲು ಅವಕಾಶ ಕೊಡಿ" ಎಂದ.

ರಾಮ, "ಸೌಮಿತ್ರಿ ! ಈ ರಾವಣ ಸಾಮಾನ್ಯನಲ್ಲ. ಇವನು ತನ್ನ ಪೂರ್ಣ ಬಲದೊಂದಿಗೆ ಯುದ್ಧ ಮಾಡಿದರೆ ದೇವತೆಗಳನ್ನೂ ಜಯಿಸಬಲ್ಲ. ನೀನು ಹೋಗಿ ಜಾಗ್ರತೆಯಿಂದ ಯುದ್ಧ ಮಾಡು. ಅವನ ದೌರ್ಬಲ್ಯವನ್ನು ಗಮನಿಸಿ ಅವನ ಮೇಲೆ ಬಾಣಗಳನ್ನು ಬಿಡು. ಹೋಗಿ ಬಾ, ಮಂಗಳವಾಗಲಿ" ಎಂದ.

ಲಕ್ಷ್ಮಣ ಉತ್ಸಾಹದಿಂದ ರಾಮನನ್ನು ಅಪ್ಪಿಕೊಂಡು ಅವನನ್ನು ವಂದಿಸಿ ರಾವಣನಿಗೆ ಅಭಿಮುಖವಾಗಿ ಹೊರಟ.

ಇತ್ತ ರಾವಣ ಕಪಿಸೈನ್ಯವನ್ನು ವಿದೀರ್ಣಗೊಳಿಸುತ್ತಾ ಬರುತ್ತಿದ್ದುದನ್ನು ಹನುಮಂತ ಕಂಡ. ವೇಗವಾಗಿ ಹಾರಿ ರಾವಣನ ರಥದ ಮುಂದೆ ನಿಂತು "ನಿಶಾಚರ ! ನೀನು ದೇವದಾನವರೊಡನೆ ಯುದ್ಧ ಮಾಡಿರಬಹುದು. ಆದರೆ, ನನ್ನ ಮುಷ್ಟಿ ಪ್ರಹಾರಕ್ಕೆ ನೀನು ಪ್ರಾಣದೊಂದಿಗೆ ಉಳಿಯಲಾರೆ. ನಿನ್ನನ್ನು ಒಂದೇ ಮುಷ್ಟಿಯಿಂದ ಪ್ರಹರಿಸಿ ಯಮಸದನಕ್ಕಟ್ಟುವೆ" ಎಂದು ಗರ್ಜಿಸಿದ. ಹನುಮಂತನ ಗರ್ಜನೆಯನ್ನು ಕೇಳಿದ ರಾವಣ "ಹನುಮಂತ ! ನಿನಗೆ ಎಷ್ಟು ಬಲವಿದೆಯೋ ಅದನ್ನು ತೋರಿಸು, ನೋಡೋಣ" ಎಂದು ಸವಾಲು ಹಾಕಿದ.

ಹನುಮಂತ "ರಾವಣ ! ಹಿಂದೆ ನಿನ್ನ ಮಗ ಅಕ್ಷ ಕುಮಾರನನ್ನು ನಾನು ಕೊಂದುಹಾಕಿದೆ. ನೆನಪಿದೆಯೇ ?" ಎಂದ.

ಹನುಮಂತನ ಈ ಮಾತನ್ನು ಕೇಳಲಾರದೆ ರಾವಣ ತನ್ನ ಬಲವಾದ ಮುಷ್ಟಿಯಿಂದ ಹನುಮಂತನ ಎದೆಗೆ ಘಾತಿಸಿದ. ರಾವಣನ ಬಲವಾದ ಮುಷ್ಟಿಪ್ರಹಾರಕ್ಕೆ ಹನುಮಂತನೂ ಕೆಲ

ನಿಮಿಷ ಸ್ತಬ್ಧನಾದ. ನಂತರ ಸಾವರಿಸಿಕೊಂಡು ತನ್ನ ಮುಷ್ಟಿಯನ್ನು ಬಿಗಿಯಾಗಿ ಹಿಡಿದು "ಇದೋ ! ರಾಕ್ಷಸ ರಾಜ, ಇದನ್ನು ತಡೆದುಕೊ" ಎನ್ನುತ್ತಾ ಬಲವಾಗಿ ಗುದ್ದಿದ.

ಹನುಮಂತನ ಬಲವಾದ ಮುಷ್ಟಿ ಪ್ರಹಾರಕ್ಕೆ ರಾವಣ ಭೂಕಂಪದಿಂದ ಕಂಪಿಸುವ ಪರ್ವತದಂತೆ ಕಂಪಿಸತೊಡಗಿದ.

"ಭಲಾ ಕಪಿ ! ನಿನ್ನ ಪರಾಕ್ರಮ ಪ್ರಶಂಸನೀಯವೇ ಸರಿ !" ಎಂದು ಹನುಮಂತನನ್ನು ಕೊಂಡಾಡಿದ.

ರಾವಣನ ಪ್ರಶಂಸೆಯನ್ನು ಕೇಳಿದ ಹನುಮಂತ ಗ್ಲಾನಿಗೊಳಗಾದ. "ಛೆ, ರಾವಣ ! ನನ್ನ ಬಲವನ್ನು ಪ್ರಶಂಸಿಸುವೆಯಾ ! ನಾನು ಮುಷ್ಟಿಯಿಂದ ಪ್ರಹಾರ ಮಾಡಿಯೂ ನೀನು ಇನ್ನೂ ನನ್ನನ್ನು ಪ್ರಶಂಸೆಮಾಡುವ ಸ್ಥಿತಿಯಲ್ಲಿ ಇದೀಯಲ್ಲಾ ! ನಾ ಕೊಟ್ಟ ಪ್ರಹಾರಕ್ಕೆ ನೀನು ಗತಪ್ರಾಣನಾಗಬೇಕಿತ್ತು. ಹಾಗಿಲ್ಲದೆ ಇನ್ನೂ ಜೀವಂತವಾಗಿರುವೆ. ಛ, ನನ್ನ ಬಲಕ್ಕೆ ಧಿಕ್ಕಾರವಿರಲಿ'' ಎಂದ.

ಇದನ್ನು ಕೇಳಿ ರಾವಣನಿಗೆ ಮಹಾಕೋಪ ಬಂದಿತು. ಮತ್ತೊಮ್ಮೆ ಮುಷ್ಟಿಯಿಂದ ಬಲವಾಗಿ ಹನುಮಂತನನ್ನು ಘಾತಿಸಿ ಅಲ್ಲಿಂದ ಮುಂದೆ ಹೊರಟ.

ನೀಲ ರಾವಣನಿಗೆ ಅಭಿಮುಖನಾದ. ನೀಲನ ಮೇಲೆ ಅನೇಕ ಬಾಣಗಳನ್ನು ಹೊಡೆದ ರಾವಣ. ರಾವಣನನ್ನು ಘಾತಿಸುವ ಸಲುವಾಗಿ ನೀಲ ದೊಡ್ಡ ಪರ್ವತ ಶಿಖರವನ್ನು ತೆಗೆದು ಅವನತ್ತ ಬೀಸಿದ. ಆದರೆ, ರಾವಣ ಆ ಪರ್ವತ ಶಿಖರವನ್ನು ಅನೇಕ ಬಾಣಗಳಿಂದ ಹೊಡೆದು ವಿದೀರ್ಣಗೊಳಿಸಿದ. ನೀಲ ಮಹಾವೃಕ್ಷಗಳನ್ನು ಕಿತ್ತು ರಾವಣನ ಮೇಲೆ ಬೀಸಿ ಒಗೆದ. ಮಹಾತೇಜಸ್ವಿಯಾದ ರಾವಣ ಆ ವೃಕ್ಷಗಳನ್ನು ಬಾಣಗಳಿಂದ ನಾಶ ಮಾಡಿದ. ನೀಲನ ಮೇಲೆ ಬಾಣಗಳನ್ನು ಹೊಡೆದ. ಮೇಘರಾಜ ಪರ್ವತದ ಮೇಲೆ ವೃಷ್ಟಿಧಾರೆಯನ್ನು ಸುರಿಸುವಂತೆ ರಾಕ್ಷಸರಾಜನಾದ ರಾವಣ ಪರ್ವತಕಾಯನಾದ ನೀಲನ ಮೇಲೆ ಬಾಣಗಳ ಮಳೆಗರೆದ.

ಬುದ್ಧಿವಂತನಾದ ನೀಲ ಅಲ್ಲಿಂದ ಜಿಗಿದು ರಾವಣನ ಧ್ವಜದ ಮೇಲೆ ಕುಳಿತ. ರಾವಣ ಬಾಣಗಳನ್ನು ಹೊಡೆಯಲು ನೋಡಿದಾಗ ನೀಲ ಎದುರಿಗೆ ಇರಲಿಲ್ಲ. "ಎಲ್ಲಿ ಹೋದ ?" ಎಂದು ನೋಡುವಾಗ ತನ್ನ ರಥದ ಧ್ವಜದ ಮೇಲೆಯೇ ಕುಳಿತಿದ್ದ. ಅವನನ್ನು ಹಿಡಿಯಲು ರಾವಣ ಪ್ರಯತ್ನಿಸಿದಾಗ ನೀಲ ರಥದ ಮೇಲೆ ಹಾರಿದ. ಅಲ್ಲಿ ರಾವಣ ಹಿಡಿಯಲು ಬಂದಾಗ ನೀಲ ಮತ್ತೆ ರಾವಣನ ಕಿರೀಟದ ಮೇಲೆಯೇ ಹಾರಿದ. ಅಲ್ಲಿಂದ ಮತ್ತೆ ರಾವಣನ ತೋಳಿನ ಮೇಲೆ–ಅಲ್ಲಿಂದ ಮತ್ತೆ ಧ್ವಜದ ಮೇಲೆ, ಹೀಗೆ ಅತ್ಯಂತ ಲಾಘವದಿಂದ ನೀಲ ಜಿಗಿಯುತ್ತಿದ್ದ. ರಾವಣನ ಕೈಗೆ ಸಿಕ್ಕದೆ ಅವನಿಗೆ ಉಪದ್ರವ ಕೊಡುತ್ತಿದ್ದ. ನೀಲನ ಈ ಅದ್ಭುತ ಕರಲಾಘವವನ್ನೂ ರಾವಣನ ದೀನ ಸ್ಥಿತಿಯನ್ನೂ ಕಂಡ ವಾನರರೆಲ್ಲ ಸಂತೋಷದಿಂದ ಕಿಲಕಿಲ ಧ್ವನಿ ಮಾಡಿದರು. ಚಪ್ಪಾಳೆ ತಟ್ಟಿ ನಗಲು ಪ್ರಾರಂಭಿಸಿದರು. ರಾಮಲಕ್ಷ್ಮಣರೂ ನೀಲನ ಈ ಅದ್ಭುತವಾದ ಲಾಘವವನ್ನು ಮೆಚ್ಚಿದರು. ವಾನರರೆಲ್ಲ ತನ್ನನ್ನು ಅಪಹಾಸ್ಯ ಮಾಡುತ್ತಿರುವುದನ್ನು ಕಂಡು ರಾವಣ ಸಹಿಸದೆ ಆಗ್ನೇಯಾಸ್ತ್ರವನ್ನು ತೆಗೆದ. 'ಏ ಕಪಿ ! ನೀ ಏನೋ ನಿನ್ನ ಬುದ್ಧಿಯಿಂದ ಹೀಗೆ ಅದ್ಭುತವಾದ ಕಾರ್ಯ ಮಾಡುತ್ತಿರುವೆ. ಆದರೆ, ನನ್ನ ಮುಂದೆ ನಿನ್ನ ಈ ಆಟ ನಡೆಯದು. ನೋಡು !

ಈ ಆಗ್ನೇಯಾಸ್ತ್ರವನ್ನು ಬಿಡುತ್ತಿದೇನೆ. ಇದರಿಂದ ನೀನು ಗತಪ್ರಾಣನಾಗುವಿ" ಎನ್ನುತ್ತಾ ಆಗ್ನೇಯಾಸ್ತ್ರವನ್ನು ನೀಲನ ಮೇಲೆ ಪ್ರಯೋಗಿಸಿದ. ನೀಲ ಅಗ್ನಿಪುತ್ರ. ಆಗ್ನೇಯಾಸ್ತ್ರದ ಪ್ರಭಾವದಿಂದ ಆತ ಧ್ವಜದಿಂದ ಭೂಮಿಗೆ ಉರುಳಿ ಅಚೇತನನಾದ. ಆದರೆ, ತಂದೆಯಾದ ಅಗ್ನಿಯ ಅನುಗ್ರಹದಿಂದಲೂ, ತನ್ನ ಸಾಮರ್ಥ್ಯದಿಂದಲೂ ಕಾಂತಿಗುಂದಲಿಲ್ಲ, ಮೃತಿ ಹೊಂದ ಲಿಲ್ಲ. ಸ್ವಲ್ಪ ಕಾಲ ಮಾತ್ರ ಮೂರ್ಛಿತನಾದ.

ನೀಲನನ್ನು ಜಯಿಸಿ ರಾವಣ ಲಕ್ಷ್ಮಣನ ಕಡೆಗೆ ನುಗ್ಗಿದ. ಪ್ರಜ್ವಲಿಸುತ್ತಿರುವ ಅಗ್ನಿಯಂತೆ ಬೆಳಗುತಾ ರಾವಣ ಲಕ್ಷ್ಮಣನ ಮುಂದೆ ಬಂದು ತನ್ನ ಧನುಸ್ಸನ್ನು ಟಂಕಾರ ಮಾಡತೊಡಗಿದ. ರಾವಣ ತನ್ನ ಧನುಸ್ಸನ್ನು ಸಿದ್ಧವಾಗಿ ಹಿಡಿದು ಯುದ್ಧಕ್ಕೆ ಆಹ್ವಾನಿಸುತ್ತಿರುವುದನ್ನು ಕಂಡ ಲಕ್ಷ್ಮಣ ತಾನೂ ತನ್ನ ಮಹತ್ತಾದ ಧನುಸ್ಸನ್ನು ಟಂಕಾರ ಮಾಡುತ್ತ ರಾವಣನ ಮುಂದೆ ಬಂದು ನಿಂತ. "ಎ ರಾಕ್ಷಸರಾಜ! ನೀನು ನನ್ನ ಕಣ್ಣಿಗೆ ಬಿದ್ದಿರುವ. ಇಂದು ನೀನು ನನ್ನಿಂದ ತಪ್ಪಿಸಿಕೊಳ್ಳ ಲಾರೆ. ನಿಲ್ಲು" ಎಂದು ಗರ್ಜಿಸಿದ.

ಸೌಮಿತ್ರಿ ಇದಿರಿಗೆ ನಿಂತದ್ದನ್ನು ಕಂಡ ರಾವಣ ಕೋಪದಿಂದ "ಇಕ್ಷ್ವಾಕು ವಂಶದ ಕುಮಾರ! ನೀನು ಇದುವರೆಗೆ ನನ್ನ ದೃಷ್ಟಿಗೆ ಗೋಚರಿಸದೆ ಅಡಗಿದ್ದೆ. ಆದ್ದರಿಂದ ಜೀವಿಸಿದ್ದ. ಇನ್ನು ಮುಂದೆ ಹಾಗಾಗದು. ನೀ ಇನ್ನು ಜೀವದೊಂದಿಗೆ ಇರಲಾರೆ'' ಎಂದು ಗರ್ಜಿಸಿದ

"ರಾವಣ! ನಿನ್ನ ಬಲ ಎಷ್ಟು ಎಂದು ನನಗೆ ತಿಳಿದಿದೆ, ಶೂನ್ಯವಾದ ಆಶ್ರಮದಲ್ಲಿ ಅಬಲೆ ಯಾದ ಸ್ತ್ರೀಯನ್ನು ಅಪಹರಿಸಿದ ನಿನ್ನ ಬಲ ಎಷ್ಟು ಎಂದು ನಾನು ಬಲ್ಲೆ! ನಿಜವಾಗಿ ಕೆಲಸ ಮಾಡುವವರು ಕಾರ್ಯದಲ್ಲಿ ಜಾಣ್ಮೆಯನ್ನು ತೋರುತ್ತಾರೆಯೇ ವಿನಾ ವ್ಯರ್ಥವಾದ ಮಾತು ಗಳಲ್ಲಲ್ಲ" ಎಂದ ಲಕ್ಷ್ಮಣ.

ಲಕ್ಷ್ಮಣನ ಮಾತುಗಳಿಂದ ಕುಪಿತನಾದ ರಾವಣ ಮಹಾಧನುಸ್ಸಿನಿಂದ ಏಳು ಬಾಣಗಳನ್ನು ಲಕ್ಷ್ಮಣನಿಗೆ ಗುರಿಯಿಟ್ಟು ಹೊಡೆದ. ಅವುಗಳನ್ನೆಲ್ಲ ಸೌಮಿತ್ರಿ ತನ್ನ ತೀಕ್ಷ್ಣವಾದ ಅಲಗುಳ್ಳ ಬಾಣಗಳಿಂದ ಕತ್ತರಿಸಿಹಾಕಿದ. ಹಾವುಗಳನ್ನು ಕತ್ತರಿಸಿ ಹಾಕಿದಂತೆ ಲಕ್ಷ್ಮಣ ತನ್ನ ಬಾಣಗಳನ್ನು ಕತ್ತರಿಸಿ ಹಾಕಿದ್ದನ್ನು ಕಂಡ ರಾವಣ ಕೋಪದಿಂದ ಮತ್ತೆ ಬಾಣಗಳನ್ನು ಹೊಡೆದ. ಅವೆಲ್ಲವನ್ನೂ ಲಕ್ಷ್ಮಣ ನಾಶಮಾಡಿ ರಾವಣನ ಮೇಲೆ ಸೂರ್ಯಸಂಕಾಶವಾದ ಬಾಣಗಳನ್ನು ಬಿಟ್ಟ.

ಲಕ್ಷ್ಮಣನ ಬಾಣಗಳಿಂದ ತಾಡಿತನಾದ ರಾವಣ ಕೋಪದಿಂದ ಬ್ರಹ್ಮದತ್ತವಾದ ಶಕ್ತಿಯನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದ. ಲಕ್ಷ್ಮಣ ಅನೇಕ ಬಾಣಗಳಿಂದ ಆ ಶಕ್ತಿಯನ್ನು ನಾಶ ಮಾಡಲು ಯತ್ನಿಸಿದ. ಆದರೆ, ಆ ಶಕ್ತಿ ಲಕ್ಷ್ಮಣನ ಎದೆಯನ್ನು ಹೊಕ್ಕಿತು. ಶಕ್ತಿಯ ಪ್ರಹಾರಕ್ಕೆ ಸಿಕ್ಕ ಲಕ್ಷ್ಮಣ ಅಚೇತನನಾಗಿ ಭೂಮಿಗುರುಳಿದ. ವಿಹ್ವಲನಾಗಿ ಧರೆಗೆ ಉರುಳಿದ ಲಕ್ಷ್ಮಣನನ್ನು ಎತ್ತಿಕೊಂಡು ಹೋಗಲು ರಾವಣ ಪ್ರಯತ್ನಿಸಿದ.

ರಾವಣ ಸಾಮಾನ್ಯನಲ್ಲ. ಕೈಲಾಸ ಪರ್ವತವನ್ನೂ, ಮಂದರಾದ್ರಿಯನ್ನೂ, ಮೇರುಪರ್ವತ ವನ್ನೂ, ಇಷ್ಟೇ ಏಕೆ! ಸಮಸ್ತಜೀವರಾಶಿಗಳಿಂದ ಒಳಗೊಂಡ ಮೂರು ಲೋಕಗಳನ್ನೂ ಎತ್ತುವ ಸಾಮರ್ಥ್ಯವುಳ್ಳವ. ಅಂಥ ಪರಾಕ್ರಮಿ ಭರತನ ತಮ್ಮನಾದ ಲಕ್ಷ್ಮಣನನ್ನು ಎತ್ತಲು ಪ್ರಯತ್ನಿಸಿ ವಿಫಲನಾದ. ಬಿದ್ದಲ್ಲಿಂದ ಲಕ್ಷ್ಮಣನನ್ನು ಒಂದಂಗುಲ ಕದಲಿಸಲಾರದೆ ಹೋದ. ತನ್ನ ಇಪ್ಪತ್ತೂ

ಕೈಗಳಿಂದ ಮಂಡಿಯೂರಿ ತನ್ನೆಲ್ಲ ಸಾಮರ್ಥ್ಯವನ್ನೂ ಉಪಯೋಗಿಸಿದರೂ ಲಕ್ಷ್ಮಣನನ್ನು ಕದಲಿಸಲು ರಾವಣನಿಂದ ಸಾಧ್ಯವಾಗಲಿಲ್ಲ.

ಇದರ ವೈಶಿಷ್ಟ್ಯವನ್ನು ವಾಲ್ಮೀಕಿ ಹೇಳುತ್ತಾರೆ. ಲಕ್ಷ್ಮಣ ಶಕ್ತಿಯಿಂದ ಘಾತಿಸಲ್ಪಟ್ಟವನಾಗಿ ಕೆಳಗೆ ಬೀಳುವಾಗಲೇ ವಿಷ್ಣುವಿನ ತನ್ನ ಭಾಗದ ಅಂಶವನ್ನು ಸ್ಮರಿಸಿಕೊಂಡು ಕೆಳಗೆ ಬಿದ್ದ.

**ಆಶ್ವಸ್ತಶ್ಚ ವಿಶಲ್ಯಶ್ಚ ಲಕ್ಷ್ಮಣಃ ಶತ್ರುಸೂದನಃ ।**

**ವಿಷ್ಣೋರ್ಭಾಗಮಮೀಮಾಂಸ್ಯಮಾತ್ಮಾನಂ ಪ್ರತ್ಯನುಸ್ಮರನ್ ॥**

ಎಂದಿದ್ದಾರೆ ವಾಲ್ಮೀಕಿ.

ವಿಷ್ಣುವಿನ ಅಂಶ ಲಕ್ಷ್ಮಣ. ಆದಿಶೇಷನ ಅವತಾರ. ಸಮಸ್ತ ಬ್ರಹ್ಮಾಂಡವನ್ನೂ ಧರಿಸುವ ಸಾಕ್ಷಾತ್ ಆದಿಶೇಷನೇ ತಾನು ಎಂಬ ಶೇಷಾಂಶವನ್ನು ಸ್ಮರಿಸಿಕೊಂಡ ಲಕ್ಷ್ಮಣ. ಆದರಿಂದಲೇ ರಾವಣನಿಗೆ ಲಕ್ಷ್ಮಣನನ್ನು ಅಲ್ಲಾಡಿಸಲೂ ಆಗಲಿಲ್ಲ, ವಾಲ್ಮೀಕಿ ಇದನ್ನು ಸ್ಪಷ್ಟವಾಗಿಯೇ ಪಟ್ಟಾಭಿಷೇಕ ಆದಮೇಲೆ ಹೇಳುತ್ತಾರೆ. ಸಾಕ್ಷಾತ್ ಶೇಷನೇ ಲಕ್ಷ್ಮಣ ಎಂದು. ಮಂಡಿಯೂರಿ ಲಕ್ಷ್ಮಣನನ್ನು ಎತ್ತಲು ರಾವಣ ಪ್ರಯತ್ನಿಸುತ್ತಿದ್ದುದನ್ನು ಕಂಡ ಹನುಮಂತ ವೇಗವಾಗಿ ಹಾರಿ ಬಂದು ರಾವಣನ ಎದೆಗೆ ಗುರಿಯಿಟ್ಟು ತನ್ನ ಮುಷ್ಟಿಯಿಂದ ಪ್ರಹಾರಮಾಡಿದ. ಹನುಮಂತನ ವಜ್ರಮುಷ್ಟಿ ಪ್ರಹಾರದಿಂದ ರಾವಣ ಪ್ರಜ್ಞಾಹೀನನಾದ. ಮೂರ್ಛಿತನಾಗಿ ಕೆಳಗೆ ಬಿದ್ದ ರಾವಣನ ಕಣ್ಣು, ಬಾಯಿ, ಮೂಗುಗಳಿಂದ ರಕ್ತ ಹರಿಯಲು ಆರಂಭಿಸಿತು. ದೇವದ್ರೋಹಿಯಾದ ರಾವಣ ಅಚೇತನನಾಗಿ ಬಿದ್ದು ಅವನ ದೇಹದಿಂದ ರಕ್ತಸುರಿಯುತ್ತಿರುವುದನ್ನು ಕಂಡ ದೇವತೆಗಳು, ಗಂಧರ್ವರು, ಋಷಿಗಳು, ಸಿದ್ಧರು, ಚಾರಣರು ಸಂತೋಷಪಟ್ಟರು. ಹನುಮಂತನನ್ನು ಕೊಂಡಾಡಿದರು.

ರಾವಣನನ್ನು ಅಚೇತಗೊಳಿಸಿದ ಹನುಮಂತ ಲಕ್ಷ್ಮಣನನ್ನು ಹೂವಿನಂತೆ ಹಗುರವಾಗಿ ಎತ್ತಿಕೊಂಡು ರಾಮನಬಳಿಗೆ ಕೊಂಡೊಯ್ದ. ಲಕ್ಷ್ಮಣನನ್ನು ಹನುಮಂತ ಮಾತ್ರ ಹೇಗೆ ಎತ್ತಲು ಸಾಧ್ಯವಾಯಿತು? ಎಂದು ಪ್ರಶ್ನೆ ಏಳುತ್ತದೆ. ಇದಕ್ಕೂ ವಾಲ್ಮೀಕಿಯೇ ಸಮಾಧಾನ ಹೇಳಿದ್ದಾರೆ.

**ವಾಯುಸೂನೋಃ ಸುಹೃತ್ತ್ವೇನ ಭಕ್ತ್ಯಾ ಪರಮಯಾ ಚ ಸಃ ।**

**ಶತ್ರೂಣಾಮಪ್ರಕಂಪ್ಯೋಪಿ ಲಘುತ್ವಮಗಮತ್ ಕಪೇಃ ॥**

ಶತ್ರುಗಳಪಾಲಿಗೆ ಸರ್ವದಾ ಅಕಂಪನನೇ ಆಗಿ ಮೆರೆಯುತ್ತಾನೆ ಲಕ್ಷ್ಮಣ. ಆದರೆ ಕಪಿಯಾದ ಹನುಮಂತನಿಗೆ ಅವನ ಸೌಹಾರ್ದದಿಂದಲೂ, ಭಕ್ತಿಭಾವದಿಂದಲೂ ಲಘುವಾದ, ಹಗುರವಾದ. ಹನುಮಂತನಿಗೆ ರಾಮಲಕ್ಷ್ಮಣರಲ್ಲಿ ಇರುವ ಸೌಹಾರ್ದ, ಭಕ್ತಿ ಅತ್ಯಂತ ಘನವಾದುದು. ಆ ಘನೀಭೂತವಾದ ಭಕ್ತಿ ಮಹಾ ಶಕ್ತಿಯನ್ನು ಹನುಮಂತನಿಗೆ ಉಂಟುಮಾಡಿತು. ಆ ನಿಶ್ಚಲ, ನಿರ್ಮಲ ಅಂತಃಕರಣಕ್ಕೆ, ಭಕ್ತಿಭಾವಕ್ಕೆ ಲಕ್ಷ್ಮಣ ಹಗುರವಾದ. ಎಳೆಯ ಮಗುವಿನಂತಾದ. ತೋಳಿನಲ್ಲಿ ಎತ್ತಿಕೊಂಡು ರಾಮನಬಳಿಗೆ ಕರೆತಂದ.

ಸ್ವಲ್ಪ ಹೊತ್ತು ಕಳೆಯುವುದರಲ್ಲಿ ತನ್ನ ವಾಸ್ತವ ಅಂಶವಾದ ವಿಷ್ಣುವಿನ ಅಂಶವನ್ನು ಸ್ಮರಿಸಿಕೊಂಡ ಲಕ್ಷ್ಮಣ ನಿರೋಗಿಯಾಗಿ ಮೂರ್ಛೆಯಿಂದ ಎಚ್ಚೆತ್ತ.

ಸ್ವಸ್ಥನಾಗಿ ಎಚ್ಚೆತ್ತ ಒಡನೆಯೇ "ಆ ಪಾಪಿ ಎಲ್ಲಿ? ಅವನನ್ನು ಪೂರ್ಣವಾಗಿ ನಾಶ ಮಾಡಿಯೇ ಬಿಡುತ್ತೇನೆ" ಎಂದು ಗುಡುಗಿದ.

ರಾಮನು ಲಕ್ಷ್ಮಣನನ್ನು ಆಲಿಂಗಿಸಿ, "ಸೌಮಿತ್ರೀ! ನೀನು ಯುದ್ಧದಲ್ಲಿ ಬಹಳ ಆಯಾಸ ಗೊಂಡಿರುವೆ. ಸ್ವಲ್ಪ ಸುಧಾರಿಸಿಕೊ. ಆ ದುರಾತ್ಮನಾದ ರಾವಣನೊಡನೆ ನಾನು ಯುದ್ಧ ಮಾಡುತ್ತೇನೆ'' ಎಂದು ಹೇಳಿದ.

ಅಷ್ಟರಲ್ಲಿ ಹನುಮಂತ ರಾಮನ ಬಳಿಗೆ ಬಂದು ''ಪ್ರಭು ! ರಾಘವ, ನೀನು ನನ್ನ ಹೆಗಲಿನ ಮೇಲೆ ಏರಿ ಕುಳಿತು ಆ ಪಾಪಿಯಾದ ರಾವಣನನ್ನು ಯುದ್ಧದಲ್ಲಿ ಸಂಹರಿಸು ಎಂದ.

ಹನುಮಂತನ ಹೆಗಲಿನ ಮೇಲೇರಿ ಕುಳಿತು ಧನುಸ್ಸನ್ನು ಟಂಕಾರ ಮಾಡುತ್ತ ರಾವಣ ನೊಡನೆ ಕಾದಲು ಸಿದ್ಧನಾದ, ರಾಮ. ರಾವಣನನ್ನು ಕಂಡ ಕೂಡಲೆ "ಹೇ ! ದುರಾತ್ಮನಾದ ನಿಶಾಚರ ! ಇಷ್ಟು ದಿನಕ್ಕೆ ಈಗ ನನ್ನ ಕಣ್ಣಿಗೆ ಬಿದ್ದಿರುವಿ. ನಿನ್ನನ್ನೂ ನಿನ್ನ ಬಂಧುಬಾಂಧವ ರೊಂದಿಗೆ ಸಂಪೂರ್ಣವಾಗಿ ನಾಶ ಮಾಡಿಬಿಡುತ್ತೇನೆ, ನೋಡು'' ಎಂದು ಗರ್ಜಿಸಿದ. ರಾಮನ ಗರ್ಜನೆಯನ್ನು ಕೇಳಿ ಕುಪಿತನಾದ ರಾವಣ ರಾಮನ ಮೇಲೆ ಬಾಣಗಳ ಮಳೆಯನ್ನೇ ಕರೆದ. ಆದರೆ, ಧನ್ವಿಗಳಲ್ಲಿ ಶ್ರೇಷ್ಠನಾದ ರಘುವೀರ ಅತ್ಯಂತ ಲಾಘವದಿಂದ ಎಲ್ಲ ಬಾಣಗಳನ್ನೂ ನಿವಾ ರಿಸಿ ರಾವಣನ ಮೇಲ ಅತ್ಯಮೋಘವಾದ ಬಾಣಗಳನ್ನು ಬಿಟ್ಟ. ಚಿನ್ನದ ಕಟ್ಟುಳ್ಳ ಮೊನಚಾದ ಅಲಗುಳ್ಳ ಬಾಣಗಳು ರಾವಣನ ರಥವನ್ನು ಪುಡಿಮಾಡಿದವು. ರಾಮನ ಬಾಣಕ್ಕೆ ಸಿಕ್ಕಿದ ಕುದುರೆ ಗಳು ಅಸು ನೀಗಿದವು. ಸಾರಥಿ ಸತ್ತ. ರಥದ ಚಕ್ರಗಳು ಮುರಿದು ಚೂರಾದವು.

ರಾವಣ ಧನುಸ್ಸಿನಲ್ಲಿ ಬಾಣ ಹೂಡುತ್ತಿದ್ದಂತೆಯೇ ರಾಮ ಕಾಲಾಗ್ನಿ ಸದೃಶವಾದ ಬಾಣ ದಿಂದ ರಾವಣನ ಧನುಸ್ಸನ್ನು ಕತ್ತರಿಸಿದ. ಮತ್ತೊಂದು ಬಾಣದಿಂದ ರಾವಣ ಕೈಯಲ್ಲಿ ಹಿಡಿದಿದ್ದ ಖಡ್ಗವನ್ನೂ ಕತ್ತರಿಸಿದ. ಅಮೋಘವಾದ ಅರ್ಧಚಂದ್ರ ಬಾಣವನ್ನು ಬಿಟ್ಟು ರಾವಣನ ತಲೆಯ ಮೇಲಿದ್ದ ಕಿರೀಟವನ್ನೂ ಕತ್ತರಿಸದ.

ರಾವಣನ ರಥ ನಾಶವಾಯಿತು. ಕುದುರೆಗಳು ಸತ್ತವು. ಸಾರಥಿ ಅಸುನೀಗಿದ. ಧನಸ್ಸು, ಬಾಣ, ಖಡ್ಗ ಎಲ್ಲ ಭಿನ್ನವಾದವು. ತಲೆಯ ಮೇಲಿದ್ದ ಶ್ವೇತಚ್ಛತ್ರ, ಕಿರೀಟ ಪುಡಿಪುಡಿ ಯಾಯಿತು. ಕವಚ ಹರಿಯಿತು. ರಾಮಬಾಣದಿಂದ ದೇಹವೆಲ್ಲ ತೂತಾಗಿ ರಕ್ತ ಹರಿಯುತ್ತಿತ್ತು. ನೆಲದ ಮೇಲೆ ಬರಿಗಾಲಿನಲ್ಲಿ, ಬರಿತಲೆಯಲ್ಲಿ, ಬರಿಗೈಯಲ್ಲಿ ತಲೆತಗ್ಗಿಸಿ ನಿಂತ ರಾವಣ.

ಈ ಸ್ಥಿತಿಯಲ್ಲಿ ರಾವಣನನ್ನು ಮತ್ತೊಂದು ಬಾಣದಿಂದ ಸುಲಭವಾಗಿ ರಾಮ ಹೊಡೆದು ಕೊಲ್ಲಬಹುದಾಗಿತ್ತು. ಆದರೆ, ಆಗ ರಾಮ ಹಾಗೆ ಮಾಡಲಿಲ್ಲ. ತನ್ನ ಪ್ರಿಯಪತ್ನಿಯಾದ ಸೀತೆಯನ್ನು ಅಪಹರಿಸಿದ ಶತ್ರು ರಾವಣ, ಇದಿರಿಗೆ ಎಲ್ಲವನನ್ನು ಕಳೆದುಕೊಂಡು ನಿಂತಿದಾನೆ. ಅವನನ್ನು ಕುರಿತು' ಹೇ ರಾಕ್ಷಸರಾಜ ! ನೀನು ಇಂದಿನ ಯುದ್ಧದಲ್ಲಿ ಅನೇಕ ವಾನರವೀರರನ್ನು ಕೊಂದಿರುವೆ. ಆದ್ದರಿಂದ ನೀನು ಇಂದು ಬಹಳ ಆಯಾಸಪಟ್ಟಿದೀಯೆ. ಈಗ ನಿನ್ನ ರಥ ಹೋಗಿದೆ. ಸಾರಥಿ ಇಲ್ಲ. ಕುದುರೆಗಳಿಲ್ಲ. ಧನುಸ್ಸು ಮುರಿದಿದೆ. ಈಗ ನೀನು ಯುದ್ಧಮಾಡ ಲಾರೆ. ಹೋಗು, ಹಿಂದಿರುಗು ಲಂಕೆಗೆ. ರಾತ್ರಿ ಇಡೀ ಚೆನ್ನಾಗಿ ತಿಂದು, ಮಲಗಿ, ಭೋಗವನ್ನನು ಭವಿಸಿ ವಿಶ್ರಾಂತಿ ಪಡೆ. ನಾಳೆ ರಥವನ್ನು ಹತ್ತಿ ನಿನ್ನ ಸಮಸ್ತ ಬಲದೊಂದಿಗೆ ಯುದ್ಧಕ್ಕೆ ಬಾ. ಆಗ ನನ್ನ ಪೌರುಷವನ್ನು ತೋರಿಸುತ್ತೇನೆ. ಈಗ, ನಿರಾಯುಧನಾಗಿ ನೆಲದಮೇಲೆ ನಿಂತಿರುವಿ. ನಿನ್ನನ್ನು ಹೊಡೆಯಬಾರದು. ಇಂದು ಹೋಗಿ ಸರ್ವ ಸಿದ್ಧತೆಗಳೊಂದಿಗೆ ನಾಳೆ ಬಾ ಎಂದು ಹೇಳಿದ.

ಆಶ್ವಾಸ್ಯ ನಿರ್ಯಾಹಿ ರಥೀಚ ಧನ್ವೀ।
ತದಾ ಬಲಂ ಪ್ರೇಕ್ಷ್ಯಸಿ ಮೇ ರಥಸ್ಥಃ॥

"ಚೆನ್ನಾಗಿ ರಾತ್ರಿಯೆಲ್ಲ ವಿಶ್ರಾಂತಿ ಪಡೆದು ನಾಳೆ ರಥವನ್ನು ಹತ್ತಿ ಧನುಸ್ಸನ್ನು ಹಿಡಿದು ಬಾ ಆಗ ನನ್ನ ಬಲವನ್ನು ಕಾಣುವಿಯಂತೆ" ಎಂದ ರಾಮನ ಔದಾರ್ಯವನ್ನು ವರ್ಣಿಸದ ಭಕ್ತರಿಲ್ಲ.

ಅಬ್ಬ ! ರಾಘವ ಎಂದರೆ ಕರುಣೆಯ ಕಡಲು, ಕರುಣಾಸಮುದ್ರ. ಶತ್ರುವಿನಲ್ಲೂ ಅದೆಂಥ ವಾತ್ಸಲ್ಯ ! ಅದಕ್ಕೇ ರಿಪೂಣಾಮಪಿ ವತ್ಸಲಃ ಎಂದಿದಾರೆ ಜ್ಞಾನಿಗಳು.

ರಣರಂಗದಲ್ಲಿ ಎಲ್ಲವನ್ನೂ ಕಳೆದುಕೊಂಡ ರಾವಣ ಅವಮಾನಿತನಾಗಿ ಲಂಕೆಗೆ ಹಿಂದಿರುಗಿದ.

ಬರುವಾಗ ಸೈನ್ಯ, ರಥ, ಕುದುರೆ, ಸಾರಥಿ, ಧನುಸ್ಸು, ಬಾಣ, ಆಯುಧಗಳು, ಶ್ವೇತ ಛತ್ರಿ, ಚಾಮರ, ಕಿರೀಟ ಇವುಗಳೊಡನೆ ಬಂದಿದ್ದ. ಲಂಕೆಗೆ ಹಿಂದಿರುಗುವಾಗ ಸೈನ್ಯ ಹತವಾಗಿ, ರಥ, ಕುದುರೆ, ಸಾರಥಿ, ಧನುಸ್ಸು, ಬಾಣ, ಕಿರೀಟ, ಎಲ್ಲವನ್ನೂ ಕಳೆದುಕೊಂಡು ಬರಿಗೈಯಲ್ಲಿ ಒಬ್ಬನೇ ಹಿಂದಿರುಗಿದ. ರಾವಣ ಹೊರಟ ಎಂದರೇ ಅನೇಕ ರಾಕ್ಷಸರು ಅವನ ಹಿಂದೆ, ಮುಂದೆ ಶಸ್ತ್ರಧಾರಿಗಳಾಗಿ ಹೊರಡುತ್ತಿದ್ದರು. ರಾಕ್ಷಸವೀರರು ಶ್ವೇತಛತ್ರಿಯನ್ನು ಹಿಡಿದು ಚಾಮರಸೇವೆ ಮಾಡುತ್ತಿದ್ದರು. ರಾಕ್ಷಸ ಸ್ತುತಿಪಾಠಕರು ಅವನನ್ನು ಸ್ತುತಿಸುತ್ತಿದ್ದರು. ಹೀಗೆ ಯಾವಾಗಲೂ ವೈಭವದಿಂದ ಹೋಗಿಬರುತ್ತಿದ್ದ ರಾವಣ ರಾಮನಿಂದ ಪರಾಜಿತನಾಗಿ ಅನಾಥನಂತೆ ಚಕ್ರವರ್ತಿಯೆನಿಸಿಕೊಂಡೂ ಬರೀತಲೆಯಲ್ಲಿ, ಬರಿಗೈಯಲ್ಲಿ ಕುದಿಯುತ್ತಿರುವ ಮನಸ್ಸಿನಿಂದ ಲಂಕೆಗೆ ಹಿಂದಿರುಗಿದ.

## ಕುಂಭಕರ್ಣನನ್ನು ಎಬ್ಬಿಸುವುದು

ಸತ್ಯಪರಾಕ್ರಮಿಯಾದ ರಾಮನಿಂದ ಪರಾಜಿತನಾಗಿ ಹಿಂದಿರುಗಿದ ರಾವಣ ಸುವರ್ಣಾಸನದ ಮೇಲೆ ಕುಳಿತು ಚಿಂತಿಸತೊಡಗಿದ. ದೇವ, ದಾನವ, ಯಕ್ಷ, ಪನ್ನಗ, ಸಿದ್ಧ, ಸಾಧ್ಯ, ಚಾರಣ, ಋಷಿ, ಈ ಜೀವರಾಶಿಗಳನ್ನೆಲ್ಲ ಸುಲಭವಾಗಿ ಜಯಿಸಿದ ನಾನು ಆಹಾರರೂಪಿಯಾದ ಒಬ್ಬ ಮನುಷ್ಯನಿಂದ ಪರಾಜಿತನಾಗುವ ಸ್ಥಿತಿ ಬಂದಿತಲ್ಲಾ ಎಂದು ಚಿಂತಿಸಿ ಜೊತೆಗೆ ಅದುವರೆಗೆ ತಾನು ಕೂಡಿಹಾಕಿಕೊಂಡಿದ್ದ ಶಾಪಗಳನ್ನೆಲ್ಲ ಸ್ಮರಿಸಿಕೊಳ್ಳತೊಡಗಿದ.

ಸಾಮಾನ್ಯನಾದ ಮನುಷ್ಯನಿಂದ ನಾನು ಹೀಗೆ ಪರಾಜಯವನ್ನು ಹೊಂದಬೇಕಾದರೆ ಆ ರಾಮ ಸಾಮಾನ್ಯ ಮನುಷ್ಯನಾಗಿರಲಾರ ಎಂದುಕೊಂಡ.

ಹಿಂದೆ ಬ್ರಹ್ಮನಿಂದ ವರ ಪಡೆದಾಗ ದೇವತೆಗಳು, ದಾನವರು, ಗಂಧರ್ವರು, ಋಷಿಗಳು, ಮುಂತಾದ ಎಲ್ಲರಿಂದ ಅವಧ್ಯತ್ವವನ್ನು ಪಡೆದೆ. ಆದರೆ ಮನುಷ್ಯರು, ವಾನರರು, ಇವರನ್ನು ಅಲಕ್ಷಿಸಿಬಿಟ್ಟೆ. ಆಗಲೇ ಬ್ರಹ್ಮದೇವ ಹೇಳಿದ: "ನಿನಗೆ ಮಾನವರಿಂದ ಭಯವುಂಟಾಗುತ್ತದೆ" ಎಂದು. ಬ್ರಹ್ಮ ಹೇಳಿದ ಆ ಮಾತು ಈಗ ಸತ್ಯವಾಗುವ ಕಾಲ ಬಂದಿತು. ಪೂರ್ವದಲ್ಲಿ ನಾನು ಇದೇ ಇಕ್ಷ್ವಾಕು ವಂಶದ ರಾಜ ಅನರಣ್ಯನೊಡನೆ ಯುದ್ಧಮಾಡಿ ಅವನನ್ನು ಸೋಲಿಸಿದ್ದೆ. ಆಗ, ಕುಪಿತನಾದ ಅನರಣ್ಯ ನನ್ನ ವಂಶದಲ್ಲೆ ಮುಂದೆ ಬರುವ ಒಬ್ಬ ನಿನ್ನನ್ನು ಸಂಹರಿಸುತ್ತಾನೆ ಎಂದು ಶಪಿಸಿದ್ದ. ಅನರಣ್ಯ ಹೇಳಿದವನೇ ಈಗ ರಾಮರೂಪದಿಂದ ನನ್ನ ಮುಂದೆ ಬಂದು ನಿಂತಿರಬಹುದೇ ?

ಹಿಂದೆ, ಬ್ರಹ್ಮರ್ಷಿಯ ಮಗಳಾದ ವೇದವತಿಯನ್ನು ನಾನು ಬಲಾತ್ಕರಿಸಿದಾಗ ಅವಳು ನನ್ನಿಂದಲೇ ಮುಂದೆ ನೀನು ಮರಣ ಹೊಂದುವಿ ಎಂದು ಶಾಪಕೊಟ್ಟಿದ್ದಳು. ಆ ವೇದವತಿಯೇ ಸೀತೆಯಾಗಿ ಒಂದುವೇಳೆ ಬಂದಿರಬಹುದೇ ? ಆ ವೇದವತಿ ಕೊಟ್ಟ ಶಾಪ ಫಲಿಸುವ ಕಾಲವೂ ಬಂದಿತೆ ? ಅಲ್ಲದೆ ನಳಕೂಬರನ ಪತ್ನಿ ರಂಭೆಯನ್ನು ಬಲಾತ್ಕರಿಸಿದಾಗ ನಳಕೂಬರ ಕೊಟ್ಟ ಶಾಪ, ಪುಂಜಕ ಸ್ಥಲಿಯನ್ನು ಪೀಡಿಸಿದಾಗ ಬ್ರಹ್ಮ ಕೊಟ್ಟ ಶಾಪ ಈಗ ಒದಗಿ ಬಂದಿತೇ ? ಹಿಂದೆ ಕೈಲಾಸ ಪರ್ವತವನ್ನು ಎತ್ತಿದಾಗ ತೊಂದರೆಗೊಳಗಾದ ಪರಮೇಶ್ವರನ ಪ್ರಣಯಿನಿ ಉಮೆ ನೀನು ಮುಂದೆ ಸ್ತ್ರೀನಿಮಿತ್ತವಾಗಿಯೇ ನಾಶಹೊಂದುವಿ ಎಂದು ಶಪಿಸಿದ್ದಳು. ಆ ಶಾಪ ಈಗ ಸೀತಾರೂಪಿನಿಂದ ಬಂದು ಒದಗಿದೆಯೋ ? ಕೈಲಾಸಪರ್ವತಕ್ಕೆ ಈಶ್ವರನನ್ನು ದರ್ಶಿಸಲು ಹೋದಾಗ ವಾನರ ಮುಖನಾದ ನಂದಿಯನ್ನು ಅಪಹಾಸ್ಯಮಾಡಿದೆ. ಆಗ ಅವನು ನನ್ನಂಥ ವಾನರರಿಂದಲೇ ನಿನಗೆ ವಿನಾಶವುಂಟಾಗುತ್ತದೆ, ಎಂದು ಶಪಿಸಿದ್ದ. ಆ ನಂದಿಯ ಶಾಪ ಈಗ ವಾನರರೂಪಿನಲ್ಲಿ ಫಲಿಸುತ್ತಿದೆಯೋ ಏನೋ ? ಅಯ್ಯೋ ! ಯಾರಿಗೂ ತಲೆಯನ್ನು ಬಗ್ಗಿಸದ ನಾನು ಈಗ ಒಬ್ಬ ಮಾನವನಿಂದ ಅಪಜಯವನ್ನು ಅನುಭವಿಸುತ್ತಿರುವೆನಲ್ಲ ! ಪಾಪ ! ಮಹಾತ್ಮನಾದ ವಿಭೀಷಣ ಮೊದಲೇ ಹೇಳಿದ. ರಾಮನ ಪರಾಕ್ರಮವನ್ನು ಸರಿಯಾಗಿ ವಿವರಿಸಿದ. ನಾನು ಅವನ ಮಾತನ್ನು ಕೇಳಲಿಲ್ಲ ! ಹುಂ ! ಇರಲಿ ! ಎಂದುಕೊಂಡು ಗ್ಲಾನಿಗೊಳಗಾದ.

ಚಿಂತೆಯಿಂದ ಶೋಕದಿಂದ ಸಂತಪಿಸುತ್ತಾ ರಾವಣ ರಾಕ್ಷಸಪ್ರಮುಖರನ್ನು ಕರೆಸಿದ. "ರಾಕ್ಷಸವೀರರೇ ! ಶತ್ರುವನ್ನು ಲಘುವಾಗಿ ಉಪೇಕ್ಷಿಸುವುದು ಸರಿಯಲ್ಲ. ಮಹಾಬಲಿಯಾದ ಪ್ರಹಸ್ತ, ಅಕಂಪನ, ವಜ್ರದಂಷ್ಟ್ರ ಮುಂತಾದವರೇ ಇಲ್ಲವಾಗಿದಾರೆ. ಅಂದಮೇಲೆ ವಾನರರಿಂದ ನಮಗೆ ಭಯ ಸನ್ನಿಹಿತವಾಗಿದೆ ಎಂದೇ ತಿಳಿಯಬೇಕು. ನೀವೆಲ್ಲ ಲಂಕಾಪುರಿಯ ಮುಖ್ಯ ದ್ವಾರಗಳನ್ನೂ, ಕೋಟೆಯನ್ನೂ ಚೆನ್ನಾಗಿ ರಕ್ಷಿಸುತ್ತಿರಿ. ಮತ್ತೆ ಕೆಲವರು ನನ್ನ ತಮ್ಮನಾದ ಕುಂಭಕರ್ಣನನ್ನು ಎಬ್ಬಿಸಿ. ಕುಂಭಕರ್ಣ ಮಹಾಪರಾಕ್ರಮಿ, ಯುದ್ಧದಲ್ಲಿ ಅವನಿಗೆ ಸಾಟಿಯಾದವರೇ ಇಲ್ಲ. ಯಾವ ರೀತಿಯಲ್ಲಾದರೂ ಅವನನ್ನು ಎಬ್ಬಿಸಿ" ಎಂದು ರಾಕ್ಷಸರಿಗೆ ತಮ್ಮನಾದ ಕುಂಭಕರ್ಣನನ್ನು ನಿದ್ದೆಯಿಂದ ಎಬ್ಬಿಸುವಂತೆ ಹೇಳಿದ.

ನಿದ್ರಿಸುತ್ತಿರುವ ಕುಂಭಕರ್ಣನನ್ನು ಎಬ್ಬಿಸಿ ಎಂದೊಡನೆಯೇ ರಾಕ್ಷಸರಿಗೆಲ್ಲ ಭಯವಾಯಿತು. ಕುಂಭಕರ್ಣನ ಹತ್ತಿರಕ್ಕೆ ಹೋಗುವುದಕ್ಕೇ ಅಂಜುತ್ತಿದ್ದರು. ಆದರೆ, ರಾವಣನ ಆಜ್ಞೆ ! ಹತ್ತು ಸಾವಿರ ರಾಕ್ಷಸರು ನಾನಾವಿಧವಾದ ಶಂಕ, ಪಣವ, ಅನಕ, ಭೇರಿ, ದುಂಧುಬಿ ಮುಂತಾದ ಸಹಸ್ರಾರು ವಾದ್ಯಗಳನ್ನೂ ಶೂಲ, ಪ್ರಾಸ, ಮುಸಲ, ತೋಮರ, ಖಡ್ಗ, ಶತಘ್ನಿ, ಪರಿಘ, ಮುಂತಾದ ಹಲವಾರು ಆಯುಧಗಳನ್ನೂ ಹಿಡಿದುಕೊಂಡು ಕುಂಭಕರ್ಣ ನಿದ್ದೆ ಮಾಡುತ್ತಿದ್ದ ಸ್ಥಳಕ್ಕೆ ಬಂದರು.

ಶ್ರೀಮದ್ರಾಮಾಯಣದಲ್ಲಿ ಕುಂಭಕರ್ಣನ ಪಾತ್ರ ಔಚಿತ್ಯಪೂರ್ಣವಾಗಿದೆ. ಅವನೊಬ್ಬ ಕೇವಲ ಬೆಟ್ಟದಂಥ ನಿದ್ರಿಸುವ ರಾಕ್ಷಸ ಎಂದಲ್ಲ, ಅವನನ್ನು ತಿಳಿಯ ಬೇಕಾಗಿರುವುದು. ರಾಮಾಯಣದಲ್ಲಿ ನಿರೂಪಿಸಿರುವ ಪಾತ್ರಗಳೆಲ್ಲ ತತ್ತ್ವಪ್ರಧಾನವಾದ ಪಾತ್ರಗಳು. ವಿಭೀಷಣ, ರಾವಣ, ಕುಂಭಕರ್ಣ—ಈ ಮೂವರೂ ಕ್ರಮವಾಗಿ ಸತ್ತ್ವ, ರಜೋ ತಮೋಗುಣಗಳ ಪ್ರತೀಕಗಳು ಜೀವದಲ್ಲಿ ಸತ್ತ್ವಗುಣ ಪ್ರಧಾನವಾಗಿದ್ದರೆ, ವಿಭೀಷಣನಂತೆ ಧರ್ಮಾತ್ಮನಾಗಿ ದೈವವನ್ನು ಆಶ್ರಯಿಸುತ್ತಾನೆ. ಅದೇ ಜೀವನದಲ್ಲಿ ರಜೋಗುಣ ಮೂರ್ತೀಭವಿಸಿದರೆ ರಾವಣನಂತೆ ಅಹಂಕಾರ, ಗರ್ವ

ಕ್ರೋಧ, ''ನನಗಾರು ಸರಿ ?" ಎಂಬ ಹೆಮ್ಮೆ–ಈ ಥಾಂಭಿಕ ಗುಣಗಳಿರುತ್ತವೆ. ಅದು ದೈವದಿಂದ ಅಂದರೆ ಸತ್ಪಥದಿಂದ ಜೀವನನ್ನು ವಿಮುಖವಾಗಿರುತ್ತದೆ. ಕುಂಭಕರ್ಣ ತಮೋಗುಣದ ಅವತಾರವೇ ಎನ್ನಬೇಕು ಅದಕ್ಕೆ ಸರಿಯಾಗುವ ಗುಣಗಳು ಅವನಲ್ಲಿವೆ. "ನಿದ್ರಾಲಸ್ಯ ಪ್ರಮಾದೋತ್ಥಂ ತತ್ತಾಮ ಸಮುದಾಹೃತಮ್" ಎಂದಿದಾನೆ ಶ್ರೀಕೃಷ್ಣ ಗೀತೆಯಲ್ಲಿ.

ಅತಿನಿದ್ರೆ, ಆಲಸ್ಯ–ಸೋಮಾರಿತನ, ಮೋಹ, ಭ್ರಾಂತಿ, ಇವೆಲ್ಲ ತಾಮಸ ಗುಣಗಳು. ಜೀವನನ್ನು ಮೋಹದ ದಾರಿಯಲ್ಲಿ ಒಯ್ಯುತ್ತವೆ. ಕುಂಭಕರ್ಣ ಬ್ರಹ್ಮಶಾಪದಿಂದ ದೀರ್ಘನಿದ್ರೆಯನ್ನು ಹೊಂದಿದವ. ಇಂಥವನನ್ನು ಎಬ್ಬಿಸಲು ರಾಕ್ಷಸರು ಹೊರಟರು.

ರಾಮಾಯಣದಲ್ಲಿ "ರಾಕ್ಷಸರ ಸಂಹಾರ" ಎನ್ನುವುದೇ ದುಷ್ಪ್ರವೃತ್ತಿಗಳ ನಿರೋಧ ಎಂದು ತಿಳಿಯಬೇಕು. ರಾಮ ಪರತತ್ವ. ರಾಮಪಕ್ಷ ದೈವೀಗುಣಗಳ ಸಂಕೇತ. ರಾವಣ, ಅಹಂಕಾರ ತತ್ವ. ರಾವಣನಪಕ್ಷ ಅಸುರೀಗುಣಗಳ ಸಂಕೇತ. ಜೀವನ ಉದ್ಧಾರವಾಗಬೇಕಾದರೆ ಅಸುರೀಗುಣಗಳ ನಿರೋಧ ಅತ್ಯವಶ್ಯಕ. ದೇವಾಂತಕ, ನರಾಂತಕ, ಕುಂಭ, ನಿಕುಂಭ, ಅತಿಕಾಯ, ಪ್ರಹಸ್ತ, ಮಹೋದರ, ಮಹಾಪಾರ್ಶ್ವ, ವಜ್ರದಂಷ್ಟ್ರ, ಅಕಂಪನ, ತ್ರಿಶಿರ ಮುಂತಾದವಲ್ಲ ರಾಕ್ಷಸರೂ ಈ ದಾನವಗುಣಗಳ ಶಾಖೋಪಶಾಖೆಗಳು.

**ರಾಮ – ಧರ್ಮವೃಕ್ಷ**

ತಾರೆ ಅರಣ್ಯಕಾಂಡದಲ್ಲಿ ಹೇಳಿದಂತೆ,

**ನಿವಾತವೃಕ್ಷ ಸಾಧೂನಾಂ ಅಪನ್ನಾನಾಂ ಪರಾಗತಿಃ**

ಎಂಬುದಾಗಿ ಧರ್ಮವೃಕ್ಷದ ಮೂಲವೇ ರಾಮ. ಆ ವಕ್ಷದ ಬೇರುಗಳೇ ಲಕ್ಷ್ಮಣ. ಶತ್ರುಘ್ನ ಭರತ. ಕಾಂಡವೇ ಹನುಮಂತ. ಶಾಖೋಪಶಾಖೆಗಳೇ ವಾನರ ಪ್ರಮುಖರು, ಫಲ ಪುಷ್ಪಗಳಂತೆ ಸುಗ್ರೀವ ವಿಭೀಷಣರು. ಧರ್ಮವೇ ಆ ಧರ್ಮವೃಕ್ಷಕ್ಕೆ ಜಲ.

ರಾವಣ ಅಧರ್ಮ ವೃಕ್ಷದ ಮೂಲ. ಇಂದ್ರಜಿತು, ಕುಂಭಕರ್ಣ ಅತಿಕಾಯ ಇವರುಗಳೇ ಆ ವೃಕ್ಷದ ಬೇರುಗಳು. ಪ್ರಹಸ್ತನೇ ಆ ವೃಕ್ಷದ ಕಾಂಡ. ಮಹೋದರ, ಮಹಾಪಾರ್ಶ್ವ ಮುಂತಾದ ರಾಕ್ಷಸರ ಸಮೂಹವೇ ಶಾಖೋಪಶಾಖೆಗಳು. ನರಾಂತಕ, ದೇವಾಂತಕ ಮುಂತಾದ ರಾವಣನ ಪುತ್ರರು ಆ ಅಧರ್ಮ ವೃಕ್ಷದ ಫಲ ಪುಷ್ಪಗಳು, ಮೋಸ, ಕಪಟ, ವಂಚನೆ, ಪರಪೀಡನೆ ಮುಂತಾದ ಅಧರ್ಮದ ಕಾರ್ಯಗಳೇ ಆ ವೃಕ್ಷಕ್ಕೆ ಜಲದಂತೆ.

"ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂದು ಶ್ರೀಕೃಷ್ಣ ಹೇಳಿದಂತೆ ರಾಮನೇ ವಿಷ್ಣುವಿನ ಅವತಾರ. ಅಧರ್ಮವನ್ನು ಮೂಲೋತ್ಪಾಟನಗೊಳಿಸಿ ಧರ್ಮವನ್ನು ಸ್ಥಾಪಿಸುವುದೇ ಅವನ ಉದ್ದೇಶ.

ಕುಂಭಕರ್ಣ ಒಂದು ದೊಡ್ಡ ಗುಹೆಯಲ್ಲಿ ಮಲಗಿದ್ದ. ಒಂದು ಯೋಜನ ಉದ್ದ, ಒಂದು ಯೋಜನ ಅಗಲ ಉಳ್ಳ ಆ ಗುಹೆ ರತ್ನವಜ್ರಗಳಿಂದ ಕೆತ್ತಲ್ಪಟ್ಟ ನೆಲದಿಂದ ಸುಶೋಭಿತವಾಗಿತ್ತು. ಅಲ್ಲಿ ಪರ್ವತದಂತೆ ಮಲಗಿ ನಿದ್ರಿಸುತ್ತಿದ್ದ ಕುಂಭಕರ್ಣ. ಅವನ ಮೂಗಿನ ಎರಡು ರಂಧ್ರಗಳು ಪರ್ವತದ ದೊಡ್ಡ ಗುಹೆಗಳಂತೆ ಇದ್ದವು. ಕಾಂತಿಯಿಂದ ಅವನ ಕಣ್ಣುಗಳು ಎರಡು ಗ್ರಹಗಳಂತೆ

ಹೊಳೆಯುತ್ತಿದ್ದವು. ಪರ್ವತದ ಮೇಲೆ ಬೆಳೆದಿರುವ ಹುಲ್ಲಿನಂತೆ ಅವನ ಕೇಶಪಾಶಗಳು ಹರಡಿಕೊಂಡಿದ್ದವು.

ಕುಂಭಕರ್ಣ ಮಲಗಿ ನಿದ್ರಿಸುತ್ತಿದ್ದಾಗ ಬಿಡುತ್ತಿದ್ದ ಗೊರಕೆ ಮೇಘಗರ್ಜನೆಯಂತಿತ್ತು. ಅವನ ಮೂಗಿನಿಂದ ಹೊರಕ್ಕೂ ಒಳಕ್ಕೂ ಓಡುತ್ತಿದ್ದ ಉಚ್ಛ್ವಾಸ–ನಿಚ್ಛ್ವಾಸಗಳು ಬಿರುಗಾಳಿಯಂತಿದ್ದವು. ರಾಕ್ಷಸರು ಅಲ್ಲಿಗೆ ಬಂದು ಮೊದಲು ರಾಶಿ ರಾಶಿಯಾಗಿ ಆಡುಗಳು, ಹಂದಿಗಳು, ಕೋಣಗಳನ್ನು ಅವನಿಗಿದಿರಾಗಿ ಒಟ್ಟುಗೂಡಿಸಿದರು. ಕುರಿ, ಕೋಳಿ, ಪಶುವಿನ ಮಾಂಸಗಳ ರಾಶಿಯನ್ನು ಅಲ್ಲಿ ತಂದು ತುಂಬಿದರು. ರಕ್ತದ ಗುಡಾಣಗಳನ್ನು, ಮದ್ಯದ ದೊಡ್ಡ ದೊಡ್ಡ ಘಟಗಳನ್ನು ಸಿದ್ಧಪಡಿಸಿದರು. ಬಂಡಿ ಬಂಡಿಗಳಲ್ಲಿ ಚಂದನ, ಅಗರು, ಧೂಪ, ವಸ್ತ್ರಮಾಲ್ಯಗಳನ್ನು ಅನುವಾಗಿಸಿಕೊಂಡರು. ಇಷ್ಟೆಲ್ಲ ಸಿದ್ಧಮಾಡಿಕೊಂಡು ಹತ್ತು ಸಾವಿರ ರಾಕ್ಷಸರು ಆ ಗುಹಾದ್ವಾರಕ್ಕೆ ಬಂದು ನಿಂತರು. ಅಲ್ಲಿ ಕುಂಭಕರ್ಣನ ಉಸಿರಿನ ಗಾಳಿಯ ವೇಗಕ್ಕೆ ಸಿಕ್ಕಿದ ಅವರು ಅನೇಕ ಗಜಗಳಷ್ಟು ಹಿಂದೆ ಬಿದ್ದರು. ಅನೇಕ ರಾಕ್ಷಸರು ಅವನ ಮೂಗಿನೊಳಕ್ಕೇ ಹೋದರು.

ಎಲ್ಲ ರಾಕ್ಷಸರೂ ಒಟ್ಟಾಗಿ ಸೇರಿ ಕುಂಭಕರ್ಣನನ್ನು ಎಬ್ಬಿಸಲು ತೊಡಗಿದರು. ಮೊದಲು ಅವನ ಮೇಲೆ ಸಹಸ್ರಾರು ರಾಕ್ಷಸರು ಚಂದನದ ಘಟಗಳನ್ನು ಲೇಪಿಸಿದರು. ಹೂವಿನ ರಾಶಿಯಿಂದ ಅವನನ್ನು ಅಲಂಕರಿಸಿದರು. ಗರ್ಜಿಸುವ ಧ್ವನಿಯಲ್ಲಿ ಸ್ತುತಿ ಮಾಡಿದರು. ಆದರೆ ಕುಂಭಕರ್ಣ ಏಳಲಿಲ್ಲ.

ಲಕ್ಷಾಂತರ ಘಟಗಳಲ್ಲಿನ ನೀರನ್ನು ಅವನ ಗುಹೆಯಂಥ ಕಿವಿಗಳಿಗೆ ಹೊಯ್ದರು. ಊಹೂಂ, ಏಳಲಿಲ್ಲ ! ಶಂಖ, ಭೇರಿ, ಪಣವ ಮುಂತಾದ ವಾದ್ಯಗಳನ್ನು ಸಹಸ್ರಾರು ಸಂಖ್ಯೆಯಲ್ಲಿ ಬಾರಿಸಿದರು ಅವನ ನಿದ್ದೆ ಶಾಪದಿಂದ ಕೂಡಿದ್ದಾದ್ದರಿಂದ ಅವನಿಗೆ ಪ್ರಜ್ಞೆಯೇ ಇರಲಿಲ್ಲ. ಕೋಪಗೊಂಡ ರಾಕ್ಷಸರು ಅವನ ದೇಹದ ಮೇಲೆಯೇ ತಾವು ನಿಲ್ಲಿಸಿದ್ದ ಮೃಗಗಳ, ಹಂದಿ, ಕೋಣಗಳ ಹಿಂಡನ್ನು ಓಡಿಸಿದರು; ಜಗ್ಗಲಿಲ್ಲ !

ರಾಕ್ಷಸರೆಲ್ಲ ನಾನಾ ವಿಧವಾದ ಆಯುಧಗಳನ್ನು ಬಾರಿಸುತ್ತಾ ಆ ಕುಂಭಕರ್ಣನ ದೇಹದ ಮೇಲೆ ನರ್ತನ ಮಾಡಲಾರಂಭಿಸಿದರು. ತಮ್ಮ ಪಾದಗಳಿಂದ ಒದೆದರು. ಏನೂ ಪ್ರಯೋಜನವಾಗಲಿಲ್ಲ.

ಸಹಸ್ರ ಸಂಖ್ಯೆಯಲ್ಲಿ ಕುದುರೆಗಳನ್ನೂ, ಒಂಟೆಗಳನ್ನೂ ಅವನ ಪರ್ವತದಂಥ ದೇಹದ ಮೇಲೆ ಓಡಿಸಿದರು.

ಆದರೆ ಅದೂ ಅವನನ್ನು ಎಬ್ಬಿಸಲು ಸಾಧ್ಯವಾಗಲಿಲ್ಲ. ಕೋಪಗೊಂಡ ರಾಕ್ಷಸರು ತಮ್ಮ ಕೈಗಳಲ್ಲಿದ್ದ ಮುಸಲ, ಪ್ರಾಸ, ತೋಮರ, ಮುಂತಾದ ಆಯುಧಗಳಿಂದ ಅವನನ್ನು ಘಾತಿಸಲು ಪ್ರಾರಂಭಿಸಿದರು. ಅದರಿಂದಲೂ ಅವನಿಗೆ ಎಚ್ಚರವಾಗಲಿಲ್ಲ.

ಅತ್ಯಂತ ಕ್ಷುದ್ರರಾದ ರಾಕ್ಷಸರು ಸಹಸ್ರ ಸಂಖ್ಯೆಯಲ್ಲಿ ಆನೆಗಳ ಹಿಂಡನ್ನು ಅವನ ಮೇಲೆ ಓಡಿಸಿದರು. ಬಲಯುತವಾದ ಮದಿಸಿದ ಆನೆಗಳು ಅವನ ದೇಹವನ್ನು ತುಳಿಯುತ್ತಿದ್ದವು. ಆಗ ಕುಂಭಕರ್ಣನಿಗೆ ಏನೋ ಸ್ವಲ್ಪ ಸ್ಪರ್ಶವಾದಂತಾಯಿತು. ಆಮೇಲೆ ಬ್ರಹ್ಮಾಂಡದಂಥ ತನ್ನ

ಬಾಯಿಂದ ಆಕಳಿಸುತ್ತಾ ಎದ್ದ. ಅವನು ಆಕಳಿಸುತ್ತಿದ್ದಂತೆ ಅವನ ಬಾಯೊಳಗೆ ಅನೇಕ ಪ್ರಾಣಿಗಳು ಹೋದವು. ಅವೆಲ್ಲವನ್ನೂ ಹಾಗೇ ತಿಂದ. ಇದಿರಿಗಿದ್ದ ಮಾಂಸದ ರಾಶಿಯನ್ನು ತಿಂದು ರಕ್ತವನ್ನು ಕುಡಿದ; ಮೇಲೆ ಮದ್ಯವನ್ನೂ ಕುಡಿದ. ಆ ನಂತರ ಸ್ವಲ್ಪ ಸಮಾಧಾನವಾಗಿದ್ದ.

ಇದಿರಿಗೆ ನಿಂತಿದ್ದ ರಾಕ್ಷಸರನ್ನು ಕುರಿತು, "ಹೇ ರಾಕ್ಷಸರೇ, ಏನಾದರೂ ಮಹಾಭಯ ಒದಗಿದೆಯೇ ? ರಾವಣ ಕ್ಷೇಮವಾಗಿರುವನೇ ? ನನ್ನನ್ನು ಇಷ್ಟು ಉತ್ಸಾಹದಿಂದ ನೀವೆಲ್ಲ ಎಬ್ಬಿಸಲು ಏನು ಕಾರಣ ?" ಎಂದ.

ಆಗ ರಾಕ್ಷಸರಾಜನ ಮಂತ್ರಿಯಾದ ಯೂಪಾಕ್ಷ, "ನಮಗೆ ದೇವತೆಗಳಿಂದ, ದಾನವರಿಂದ ಭಯ ಎಂಬುದೇ ಇಲ್ಲ. ಈಗ, ಒಬ್ಬ ಮಾನವನಿಂದ ಮಹಾಭಯ ಒದಗಿದೆ. ಸೀತಾಪಹರಣ ಮಾಡಿದ ರಾವಣನನ್ನು ನಿಗ್ರಹಿಸುವುದಕ್ಕಾಗಿ ರಾಮ ಪರ್ವತಾಕಾರವಾದ ವಾನರರ ಸೇನೆಯೊಂದಿಗೆ ಲಂಕೆಗೆ ಮುತ್ತಿದಾನೆ. ಅನೇಕ ಲಕ್ಷ ರಾಕ್ಷಸರು ಈಗಾಗಲೇ ಮಡಿದಿದ್ದಾರೆ. ರಾವಣನೂ ಸಹ ನಿನ್ನಿನ ಯುದ್ಧದಲ್ಲಿ ಪರಾಜಿತನಾಗಿದ್ದಾನೆ" ಎಂದ.

ಆಗ, ಕುಂಭಕರ್ಣ ತಾಮಸ ಗುಣ ಸಹಜವಾದ ಮೋಹದಿಂದ, "ಏನು ! ಮಾನವನಿಂದ ನಮಗೆ ಭಯವೆ ? ಇಂದ್ರನನ್ನೇ ಜಯಿಸಿದ ನನಗೆ ಈ ಮಾನವ ಸಾಟಿಯೇ ? ಈಗಿಂದೀಗಲೆ ಹೋಗಿ ಸರ್ವ ವಾನರರನ್ನೂ, ಆ ರಾಮಲಕ್ಷ್ಮಣರನ್ನೂ ಕೊಂದು ಆ ನಂತರವೇ ರಾವಣನನ್ನು ಕಾಣುತ್ತೇನೆ" ಎಂದ.

ರಾವಣನ ಮತ್ತೊಬ್ಬ ಮಂತ್ರಿಯಾದ ಮಹೋದರ, "ಮೊದಲು ರಾಕ್ಷಸೇಶ್ವರನನ್ನು ಕಂಡು ಅವನು ಹೇಳಿದಂತೆ ಮಾಡುವುದು ಯುಕ್ತವಾದೀತು" ಎಂದ.

ಅದರಂತೆ ಮಂತ್ರಿಗಳು ರಾವಣನಿಗೆ ಕುಂಭಕರ್ಣ ಎಚ್ಚತ್ತಿರುವ ವಿಷಯವನ್ನು ತಿಳಿಸಿದರು. ರಾವಣ ಕುಂಭಕರ್ಣನನ್ನು ಸಭೆಗೆ ಕರೆತರುವಂತೆ ಆಜ್ಞಾಪಿಸಿದ. ಅಣ್ಣನ ಮಾತಿನಂತೆ ಕುಂಭಕರ್ಣ ಹಾಸಿಗೆಯಿಂದ ಎದ್ದ. ಸ್ನಾನ ಮಾಡಿ ಅಲಂಕರಿಸಿಕೊಂಡು ಅನೇಕ ಘಟಗಳ ಮದ್ಯವನ್ನು ಕುಡಿದ ಆ ನಂತರ ರಾವಣನಲ್ಲಿಗೆ ಹೊರಟ.

ಕುಂಭಕರ್ಣ ಹೋಗುತ್ತಿರುವುದನ್ನು ನೋಡಿದಾಗ ವಿಂಧ್ಯಾಚಲವೇ ನಡೆದು ಹೋಗುತ್ತಿದ್ದಂತೆ ಇತ್ತು. ಅವನ ಪದಾಘಾತಕ್ಕೆ ಭೂಮಿ ಕಂಪಿಸುತ್ತಿತ್ತು. ವಾನರರು ಕುಂಭಕರ್ಣನನ್ನು ನೋಡಿದೊಡನೆ ಭಯಪಟ್ಟರು. ಅನೇಕ ವಾನರರು ಕುಂಭಕರ್ಣನ ದರ್ಶನ ಮಾತ್ರದಿಂದ ಕೆಳಗೆ ಬಿದ್ದರು. ಮತ್ತೆ ಕೆಲವರು ರಾಮನ ಬಳಿಗೆ ಓಡಿದರು. ಒಟ್ಟಿನಲ್ಲಿ ಇಡೀ ವಾನರ ಸೈನ್ಯ ಕುಂಭಕರ್ಣನನ್ನು ನೋಡಿದ ಮಾತ್ರದಿಂದ ಬೆದರತೊಡಗಿತು.

## ವಿಭೀಷಣ ರಾಮನಿಗೆ ಕುಂಭಕರ್ಣನನ್ನು ಪರಿಚಯ ಮಾಡಿಕೊಡುವುದು

ವಿಶಾಲಕಾಯನಾದ ಕುಂಭಕರ್ಣನನ್ನು ಕಂಡ ವಾನರಸೇನೆ ದಿಕ್ಕಾಪಾಲಾಗಿ ಓಡುತ್ತಿರುವುದನ್ನು ಕಂಡ ರಾಮ, "ವಿಭೀಷಣ! ಪರ್ವತದಂತೆ ದೀರ್ಘವಾದ ದೇಹವುಳ್ಳ ಇವನಾರು? ಇವನ ತಲೆಯ ಮೇಲಿರುವ ಕಿರೀಟವೇ ಪರ್ವತದ ಶಿಖರದಂತಿದೆ. ಕಣ್ಣುಗಳು ಗ್ರಹಗಳಂತೆ ಪ್ರಕಾಶಮಾನವಾಗಿವೆ, ಇವನಾರು ?" ಎಂದ.

ಅನೇಕ ರೀತಿಯ ಸಾಹಸ ಕಾರ್ಯಗಳನ್ನು ಅನಾಯಾಸವಾಗಿ ಮಾಡುವ ರಾಮನ ಮಾತು ಗಳನ್ನು ಕೇಳಿದ ವಿಭೀಷಣ, "ರಾಮ ! ವಿಶ್ರವಸ್ಸಿನ ಮಗನಾದ ಕುಂಭಕರ್ಣನೇ ಇವನು ! ಲಂಕೆ ಯಲ್ಲಿ ಇವನಂಥ ಪತ್ತರವಾದ ರಾಕ್ಷಸ ಬೇರೊಬ್ಬನಿಲ್ಲ. ಇವನು ಹುಟ್ಟಿದಾಗಲೇ ಹಸಿವೆಯಿಂದ ಅನೇಕರನ್ನು ತಿನ್ನತೊಡಗಿದ. ಆಗ, ಪ್ರಜೆಗಳೆಲ್ಲರೂ ದೇವರಾಜನಾದ ಇಂದ್ರನನ್ನು ಶರಣು ಹೊಕ್ಕರು ಇಂದ್ರ ಕುಪಿತನಾಗಿ ವಜ್ರಾಯುಧದಿಂದ ಕುಂಭಕರ್ಣನನ್ನು ಘಾತಿಸಿದ. ಕುಂಭಕರ್ಣ ಕೋಪಗೊಂಡು ಇಂದ್ರ ಏರಿದ್ದ ಐರಾವತದ ಒಂದು ದಂತವನ್ನೇ ಕಿತ್ತುಕೊಂಡು ಅದರಿಂದಲೇ ಇಂದ್ರನನ್ನು ಹೊಡೆದ. ಇಂದ್ರ ಬ್ರಹ್ಮನ ಬಳಿ ಓಡಿ ಅವನನ್ನು ಪ್ರಾರ್ಥಿಸಿದ. "ಕುಂಭಕರ್ಣ ಮಹಾಪಾಪಿಯಾಗಿದ್ದಾನೆ. ಇವನನ್ನು ಹೀಗೆಯೇ ಬಿಟ್ಟರೆ ಸರ್ವಲೋಕವೂ ನಾಶವಾದೀತು" ಎಂದು ಹೇಳಿದ. ಪ್ರಜೆಗಳೆಲ್ಲ ಪ್ರಜಾಪತಿಯಾದ ಬ್ರಹ್ಮನಲ್ಲಿ ಮೊರೆಯಿಟ್ಟರು.

"ಆಗ ಬ್ರಹ್ಮ ಕೋಪಗೊಂಡು ಕುಂಭಕರ್ಣನನ್ನು ಶಪಿಸಿದ. "ನೀನು ಯಾವಾಗಲೂ ಶವದಂತೆ ಬಿದ್ದುಕೊಂಡು ನಿದ್ರಿಸುತ್ತಿರು" ಎಂದ.

"ಬ್ರಹ್ಮನ ಶಾಪದಿಂದ ಕುಂಭಕರ್ಣ ರಾವಣನ ಇದಿರಿನಲ್ಲೇ ಬಿದ್ದ. ರಾವಣ ಇದನ್ನು ಕಂಡು ಬ್ರಹ್ಮನನ್ನು ಪ್ರಾರ್ಥಿಸಿದ. ಆಗ ಬ್ರಹ್ಮ "ಇವನು ಆರು ತಿಂಗಳ ಕಾಲ ನಿದ್ದೆ ಮಾಡಿ ಒಂದು ದಿನ ಮಾತ್ರ ಏಳಲಿ" ಎಂದು ಅವನ ನಿದ್ದೆಗೆ ಕಾಲವನ್ನೂ ನಿಯಮಿಸಿದ.

ಆರು ತಿಂಗಳಿಗೆ ಒಮ್ಮೆ ಅವನು ಎದ್ದರೂ ಆಗ ಅವನ ಉಪಟಳ ಹೇಳತೀರದು. ಆರು ತಿಂಗಳಿನಲ್ಲಿ ತಿನ್ನಬಹುದಾದಷ್ಟನ್ನು ಒಂದೇ ದಿನದಲ್ಲಿ ಪೂರೈಸುತ್ತಾನೆ. ಈ ಕುಂಭಕರ್ಣ ಸಹಜ ವಾಗಿಯೇ ಮಹಾಪರಾಕ್ರಮ ಉಳ್ಳವನು ಈಗ, ರಾವಣ ನಿನ್ನ ಭಯದಿಂದ ಈ ಕುಂಭಕರ್ಣ ನನ್ನು ಎಬ್ಬಿಸಿದಾನೆ. ಇವನನ್ನು ನೋಡಿಯೇ ವಾನರರು ಓಡಿಹೋಗುತ್ತಿದಾರೆ ಎಂದ ಮೇಲೆ ಇವನನ್ನು ಇದಿರಿಸಲಾರರು: ಆದ್ದರಿಂದ, ಅವರಿಗೆ ಧೈರ್ಯ ತುಂಬಬೇಕು. ಇದು ವಾನರರನ್ನು ಭಯ ಪಡಿಸಲು ರಾವಣ ನಿರ್ಮಿಸಿರುವ ಒಂದು ದೊಡ್ಡ ಯಂತ್ರ ಎಂದು ಹೇಳಿ ವಾನರರಲ್ಲಿ ಧೈರ್ಯ ಮೂಡಿಸಬೇಕು" ಎಂದು ಕುಂಭಕರ್ಣನ ವೃತ್ತಾಂತವನ್ನು ತಿಳಿಸಿದ.

ರಾಮ ವಾನರ ಪ್ರಮುಖರನ್ನು ಕೋಟೆಯ ದ್ವಾರದಲ್ಲಿ ಪರ್ವತ, ಬಂಡೆ. ವೃಕ್ಷಗಳನ್ನು ಹಿಡಿದು ನಿಲ್ಲುವಂತೆ ಹೇಳಿದ. ಅದರಂತೆ ಹನುಮಂತ, ಶರಭ, ನೀಲ, ಅಂಗದ, ಜಾಂಬವಂತ ಮುಂತಾದ ವಾನರ ಯೂಥಪರು ಬಂಡೆಗಳನ್ನೂ, ಶಿಖರಗಳನ್ನೂ, ವೃಕ್ಷಗಳನ್ನೂ ಸಜ್ಜುಗೊಳಿಸಿ ಕೊಂಡು ಕೋಟೆಯ ಸುತ್ತ ನಿಂತುಕೊಂಡರು. ಪರ್ವತದ ಸಮೀಪದಲ್ಲಿ ಆವರಿಸಲ್ಪಟ್ಟಿರುವ ಮೇಘಗಳಂತೆ ಆ ವಾನರಸೈನ್ಯ ಲಂಕೆಯನ್ನು ಸುತ್ತುವರಿದಿತ್ತು.

## ರಾವಣ ಕುಂಭಕರ್ಣರ ಮಾತುಕತೆ

ಕುಂಭಕರ್ಣ ರಾಜಮಾರ್ಗದಲ್ಲಿ ಅನೇಕ ರಾಕ್ಷಸರಿಂದ ಆವೃತನಾದವನಾಗಿ ನಡೆದು ಬರುತ್ತಿದ್ದ. ರಾವಣನ ನಿವಾಸವನ್ನು ಪ್ರವೇಶಿಸಿದ. ಅಲ್ಲಿ ಸ್ವರ್ಣಾಸನದ ಮೇಲೆ ವಿರಾಜಮಾನನಾಗಿದ್ದ ರಾವಣನನ್ನು ಕಂಡ. ರಾವಣ ದೂರದಲ್ಲಿ ಬರುತ್ತಿದ್ದ ಕುಂಭಕರ್ಣನನ್ನು ಕಂಡ ಒಡನೆಯೇ ಆಸನದಿಂದ ಎದ್ದು ಬಂದು ಅವನನ್ನು ಆಲಿಂಗಿಸಿದ. ಕುಂಭಕರ್ಣ ಬಂದು ರಾವಣನ ಚರಣವನ್ನು ಮುಟ್ಟಿ ನಮಸ್ಕರಿಸಿದ. "ಅಣ್ಣಾ ! ಏತಕ್ಕಾಗಿ ನನ್ನನ್ನು ಈಗ ಎಬ್ಬಿಸಿದಿ ? ನನ್ನಿಂದ ಯಾವ ಕಾರ್ಯ ಆಗಬೇಕಾಗಿದೆ ?" ಎಂದ. "ಕುಂಭಕರ್ಣ ! ನೀನು ಬಹಳ ಕಾಲದಿಂದ ನಿದ್ದೆ ಮಾಡು

ತ್ತಿರುವೆ. ಆದ್ದರಿಂದ ನಿನಗೆ ವಿಷಯ ತಿಳಿದಿರಲಾರದು. ರಾಮನು ಸುಗ್ರೀವನೊಂದಿಗೆ ಮಹಾ ಪರಾಕ್ರಮಿಗಳಾದ ವಾನರರೊಂದಿಗೆ ಲಂಕೆಯನ್ನು ಆಕ್ರಮಿಸಿದ್ದಾನೆ. ಈಗಾಗಲೇ ಅನೇಕ ರಾಕ್ಷಸರು ಅಸುವನ್ನು ನೀಗಿದಾರೆ. ನನ್ನ ಖಜಾನೆ, ಸೈನ್ಯ ಬರಿದಾಗುತ್ತ ಬಂದಿದೆ. ಈ ನನ್ನ ಕಷ್ಟಕಾಲದಲ್ಲಿ ನೀನೇ ನನಗೆ ಸಹಾಯ ಮಾಡಬೇಕು. ಸೋದರನಿಗೆ ಪ್ರಿಯವನ್ನುಂಟುಮಾಡುವ ಕಾರ್ಯವನ್ನು ನೀನು ಮಾಡುವವನಾಗು. ನೀನು ಸಮರಾಂಗಣಕ್ಕೆ ಹೋಗುತ್ತಿದ್ದಂತೆಯೇ ಬಲವಾದ ವಾಯು ವಿನಿಂದ ಮೋಡಗಳು ಚದುರಿ ಹೋಗುವಂತೆ ವಾನರರೆಲ್ಲ ನಾಶವಾಗುತ್ತಾರೆ. ಆದ್ದರಿಂದ ನಿನ್ನ ಬಲವನ್ನು ನೆಚ್ಚಿ ನಿನ್ನನ್ನು ಎಬ್ಬಿಸಿದೆ" ಎಂದ ರಾವಣ.

ರಾವಣನ ಮಾತನ್ನು ಕೇಳಿದ ಕುಂಭಕರ್ಣ ಜೋರಾಗಿ ನಕ್ಕ. "ಅಣ್ಣಾ, ರಾವಣ! ನೀ ಹೇಳುವ ಮಾತು ಅಸಂಗತವಾಗಿದೆ. ಹಿಂದೆ ಮಂತ್ರಾಲೋಚನಾ ಸಭೆಯಲ್ಲಿ ನಾವೆಲ್ಲ ಸೇರಿ ಆಲೋಚಿಸಿದಾಗ ನಾ ಹೇಳಲಿಲ್ಲವ? ಹಾಗೆಯೇ ಈಗ ಪರಿಸ್ಥಿತಿ ಒದಗಿಬಂದಿದೆ. ರಾಜನಾದವನು ಕಾರ್ಯಮಾಡು ವಾಗ ಮಂತ್ರಿಗಳೊಂದಿಗೆ ಸರಿಯಾಗಿ ಆಲೋಚಿಸಿ ಮಾಡಬೇಕು. ಯಾವುದೇ ಕಾರ್ಯವನ್ನು ಪ್ರಾರಂಭಿಸುವ ಮೊದಲೇ ಅದರಿಂದ ಹಾನಿಯೇ ಲಾಭವೆ ಎಂದು ಯೋಚಿಸಬೇಕು.

"ಅಣ್ಣಾ! ನೀನು ಕಾರ್ಯವನ್ನು ತಿರುವುಮುರುವಾಗಿ ಮಾಡಿದಿ. ಸೀತೆಯನ್ನು ಹೊತ್ತು ತರುವಾಗಲೇ ಸರಿಯಾದ ಮಂತ್ರಿಗಳೊಡನೆ ಕಲೆತು ಆಲೋಚಿಸಬೇಕಿತ್ತು. ಆಗ ಹಾಗೆ ಮಾಡದೆ ಈಗ ಕಾರ್ಯ ಕೆಟ್ಟಮೇಲೆ ಆಲೋಚನೆ ಮಾಡತೊಡಗಿರುವೆ? ರಾಜ ತನ್ನ ಉತ್ತಮರಾದ ಮಂತ್ರಿಗಳೊಡನೆ ಕಲೆತು ಸಮಾಲೋಚನೆ ನಡೆಸಬೇಕು. ಮಂತ್ರಿ ಒಳ್ಳೆಯ ಸ್ವಭಾವದವನಾಗಿರ ಬೇಕು. ಲೋಭಿಯಾಗಿ, ಅಜಿತೇಂದ್ರಿಯನಾಗಿ, ಧನದಾಹ ಉಳ್ಳವನಾಗಿ ಇರುವವನನ್ನು ಮಂತ್ರಿ ಯನ್ನಾಗಿ, ಇಟ್ಟುಕೊಳ್ಳಬಾರದು. ಕಾರ್ಯಸಾಧನೆಗೆ ಸಾಮ, ದಾನ, ಭೇದ, ಈ ಉಪಾಯ ಗಳನ್ನೆ ಆದಷ್ಟೂ ಪ್ರಯೋಗಿಸಬೇಕು. ಈ ಬಗ್ಗೆ ಸರಿಯಾಗಿ ಸಲಹೆ ಕೊಡುವಂಥ ಉತ್ತಮರಾದ ಮಂತ್ರಿಗಳನ್ನಿಟ್ಟುಕೊಳ್ಳಬೇಕು. ಅಣ್ಣಾ, ಕೇಳು! ಶತ್ರುವಿನ ಬಲೆಗೆ ಬಿದ್ದು ನಾಮವನ್ನು ಬೋಧಿ ಸುತ್ತಿದಾನೆಯೇ ಮಂತ್ರಿ ಎಂದೂ ಗಮನಿಸಬೇಕು. ತನಗಿಂತ ಪ್ರಬಲನಾದರೆ ಆ ಶತ್ರುವಿನೊಡನೆ ಸಂಧಿಯನ್ನೇ ಮಾಡಿಕೊಳ್ಳಬೇಕು. ಧರ್ಮ, ಅರ್ಥ, ಕಾಮ, ಈ ಮೂರು ಪುರುಷಾರ್ಥಗಳನ್ನೂ ಕ್ರಮವಾಗಿ ಅನುಭವಿಸಬೇಕು. ಕೆಲವು ವೇಳೆ ಅರ್ಥಕಾಮಗಳನ್ನು ಬದಿಗೊತ್ತಿ ಧರ್ಮವನ್ನೇ ಎತ್ತಿ ಹಿಡಿಯಬೇಕಾಗುತ್ತದೆ. ಹಾಗಲ್ಲದೆ, ಕೇವಲ ಕಾಮವನ್ನೇ ಪ್ರಧಾನವಾಗಿ ಇಟ್ಟುಕೊಂಡರೆ ಅಂಥ ವನಿಗೆ ನಾಶ ಖಂಡಿತವೇ ಸರಿ.

"ನೀನು ಇದನ್ನೆಲ್ಲ ಸರಿಯಾಗಿ ಪರ್ಯಾಲೋಚಿಸಿ ಕಾರ್ಯವನ್ನು ಸಾಧಿಸಬೇಕೇ ವಿನಾ ವ್ಯಧಾ ವ್ಯರ್ಥವಾದ ಉದ್ಯೋಗವನ್ನು ಕೈಗೊಳ್ಳುವುದು ಸರ್ವಥಾ ಹಾನಿಕರವೇ ಆದೀತು" ಎಂದ. ಕುಂಭಕರ್ಣನ ಮಾತುಗಳನ್ನು ಕೇಳಿದ ರಾವಣ ಕೋಪದಿಂದ ಹುಚ್ಚೇರಿದ. "ಕುಂಭಕರ್ಣ! ಮಹಾ ಗುರುವಿನಂತೆ, ನೀತಿಶಾಸ್ತ್ರಕೋವಿದನಂತೆ ನನಗೆ ಬೋಧಿಸಲು ನಿನ್ನನ್ನು ನಾ ಇಲ್ಲಿಗೆ ಕರೆಸಲಿಲ್ಲ. ಯಾವುದೇ ಕೆಲಸವನ್ನೂ ಮಾಡಬೇಕಾದಾಗ ಮಾಡುವ ಕ್ರಮ ಹೇಗೆ? ಎಂದು ನನಗೆ ತಿಳಿದಿದೆ. ನೀ ಅದನ್ನು ನನಗೆ ಹೇಳಿಕೊಡಬೇಕಾಗಿಲ್ಲ.

"ಕಾರ್ಯ ನಡೆದು ಹೋದಮೇಲೆ ಅದರ ಬಗ್ಗೆ ಯೋಚಿಸುವುದು, ಪರಿತಾಪ ಪಡುವುದು ಬುದ್ಧಿವಂತರ ಲಕ್ಷಣವಲ್ಲ. ಮುಂದೆ ನಡೆಸಬೇಕಾದುದರ ಕಡೆಗೆ ಲಕ್ಷ್ಯಕೊಡುವುದೇ ಜಾಣತನ.

ಈಗ, ನಿನಗೆ ಧೈರ್ಯವಿದ್ದರೆ, ನನ್ನಲ್ಲಿ ನಿನಗೆ ಅಭಿಮಾನ ಇರುವುದಾದರೆ ಹೇಳು ನನಗೆ ಸಹಾಯ ಮಾಡುವಿಯಾ ? ಸುಮ್ಮನೆ ವ್ಯರ್ಥವಾದ ನೀತಿ ಬೋಧೆಯನ್ನು ಕೇಳಲು ನಿನ್ನನ್ನು ನಾ ಕರೆಸಲಿಲ್ಲ" ಎಂದ. ರಾವಣ ಕುಪಿತನಾಗಿದಾನೆ ಎಂಬುದು ತಿಳಿಯಿತು ಕುಂಭಕರ್ಣನಿಗೆ. ಅವನನ್ನು ಸಮಾಧಾನ ಪಡಿಸುವ ಸಲುವಾಗಿ ಮಧುರವಾದ ವಾಣಿಯಿಂದ "ಮಹಾರಾಜ ! ಭ್ರಾತೃ ಸ್ನೇಹದಿಂದ ಹಾಗೂ ಬಂಧು ವಾತ್ಸಲ್ಯದಿಂದ ಇದುವರಗೆ ನಾನು ಹಾಗೆ ಹೇಳಿದೆ. ನಿನಗೆ ಅಪ್ರಿಯವನ್ನು ಮಾಡಬೇಕೆಂದು ಹಾಗೆ ಹೇಳಲಿಲ್ಲ. ಯಾವಾಗಲೂ ನಿನಗೆ ಪ್ರಿಯವನ್ನುಂಟುಮಾಡುವುದೇ ನನ್ನ ಗುರಿ. ಇದರಲ್ಲಿ ಸಂಶಯವೇ ಇಲ್ಲ."

"ಅಣ್ಣಾ ! ಕೇಳು, ಈಗಲೇ ನಾನು ಹೋಗಿ ಆ ರಾಮನನ್ನೂ ಅವನ ತಮ್ಮನಾದ ಲಕ್ಷ್ಮಣ ನನ್ನೂ, ಸುಗ್ರೀವನನ್ನೂ ತಿಂದು ಬರುತ್ತೇನೆ. ರಾಮಲಕ್ಷ್ಮಣರು ನನ್ನಿಂದ ಹತರಾದ ಮೇಲೆ ವಾನರರೇನೆ ಭಯದಿಂದ ಓಡುವುದನ್ನು ನೀನೇ ನೋಡುವಿ. ದೇವರಾಜನಾದ ಇಂದ್ರನನ್ನೇ ಜಯಿಸಿದ ನನಗೆ ಈ ರಾಮಲಕ್ಷ್ಮಣರು ಸಾಟಿಯೇ ?

"ರಾಜಾ! ಒಂದುವೇಳೆ ರಾಮ ಪರಾಕ್ರಮಿಯಾದರೆ ನನ್ನನ್ನು ಮೊದಲು ಕೊಂದು ಆಮೇಲೆ ಅವನು ನಿನ್ನನ್ನು ಕೊಲ್ಲುವಂತಾಗುತ್ತದೆ. ನಾನು ಜೀವದಿಂದಿರುವಾಗ ನಿನಗೆ ಅಪಾಯ ತಟ್ಟದು. ಇದು ಸತ್ಯ. ನನ್ನಮಾತನ್ನು ನಂಬು. ಈಗಲೇ ಹೋಗುತ್ತೇನೆ. ನನಗೆ ಆಯುಧಗಳ ಅವಶ್ಯ ಕತೆಯೇ ಇಲ್ಲ. ಬರೀ ಕೈಗಳಿಂದಲೇ ಸಮಸ್ತರನ್ನೂ ಅಪ್ಪಳಿಸಿಬಿಡುತ್ತೇನೆ.

"ಅಣ್ಣಾ ! ನನ್ನ ಪರಾಕ್ರಮ ಎಷ್ಟಿದೆ ಗೊತ್ತಿದೆಯೇ ! ಹೀಗೆಯೇ ಹಾರಿ ಸೂರ್ಯ ಮಂಡಲವನ್ನೇ ಧರೆಗಿಳಿಸಬಲ್ಲೆ ! ಸಮುದ್ರವನ್ನೇ ಕುಡಿದು ಬರಿದುಮಾಡಬಲ್ಲೆ ! ಸಾಕ್ಷಾತ್ ಬ್ರಹ್ಮ ನನ್ನೇ ಸೋಲಿಸಿಬಿಡಬಲ್ಲೆ ! ನನ್ನ ಇದಿರಿಗೆ ಸರಿಸಮನಾಗಿ ನಿಲ್ಲಬಲ್ಲ ಧೀರ ಯಾರು ? ನೀನು ಚಿಂತಿಸ ಬೇಡ. ಈಗಲೇ ಹೋಗಿ ಆ ರಾಮಲಕ್ಷ್ಮಣರನ್ನೂ, ವಾನರರಾಜನಾದ ಸುಗ್ರೀವನನ್ನೂ, ಲಂಕೆ ಯನ್ನು ಸುಟ್ಟ ಆ ಹನುಮಂತನನ್ನೂ ನಾಶಮಾಡಿ ಬರುತ್ತೇನೆ. ನೀನು ಯಥೇಚ್ಛವಾಗಿ ತಿನ್ನು, ಸುಗಂಧವಾದ, ಮಧುರವಾದ ಮಧುವನ್ನು ಪಾನಮಾಡು, ಸಂತೋಷವಾಗಿರು. ರಾಕ್ಷಸರಿಗೆ ಸಂತಾಪವನ್ನುಂಟುಮಾಡಿದ ಆ ನರ–ವಾನರರನ್ನು ಹತಮಾಡಿಯೇ ಹಿಂದಿರುಗುತ್ತೇನೆ" ಎಂದು ರಾವಣನಿಗೆ ಧೈರ್ಯ ತುಂಬಿದ.

ಕುಂಭಕರ್ಣನ ಮಾತುಗಳನ್ನು ಕೇಳಿದ ರಾವಣನ ಮಂತ್ರಿಯಾದ ಮಹೋದರ. ಅವನು ಯಾವಾಗಲೂ ರಾವಣನನ್ನು ಸಂತೋಷಪಡಿಸುವ ಸಲುವಾಗಿಯೇ ಅವನ ವಿಚಾರಧಾರೆಯನ್ನೇ ಪ್ರೋತ್ಸಾಹಿಸುತ್ತಿದ್ದ ! ಕುಂಭಕರ್ಣನನ್ನು ಕುರಿತು ಮಹೋದರ, ಕುಂಭಕರ್ಣ ! ನೀ ಹೇಳುವ ಮಾತುಗಳು ಒಂದೂ ಸರಿಯಾಗಿಲ್ಲ. ನೀ ಏನೆಂದೆ? ಒಬ್ಬನೇ ಹೋಗಿ ರಾಮನನ್ನು ಕೊಂದುಬರು ತ್ತೇನೆ ಎಂದೆಯಲ್ಲವೆ ? ಇದು ಸರ್ವಥಾ ಆಗದ ಕೆಲಸವೇ ಸರಿ. ಮಹಾಮಹಾ ರಾಕ್ಷಸರನ್ನು ನಿಗ್ರ ಹಿಸಿದಸ ಆ ರಾಮನ ಮುಂದೆ ಸೈನ್ಯರಹಿತನಾಗಿ ನೀ ಹೋದರೆ ಕಾರ್ಯ ಸಿದ್ಧಿಸುವುದೆ? ಅದಿರಲಿ. ನೀನು ಧರ್ಮವೇ ಎಲ್ಲದಕ್ಕೂ ಮೂಲ ಎಂದೆ. ಅದು ಹಾಗಲ್ಲ. ರಾಜನಾದವನು ಕಾರ್ಯವನ್ನು ಕಾಮದ ಪ್ರಾಧಾನ್ಯತೆಯಿಂದಲೂ ಸಾಧಿಸಬಹುದು" ಎಂದು ಕುಂಭಕರ್ಣನನ್ನು ಹೀಯಾಳಿಸಿ ರಾವಣ ನಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಮಹೋದರ ಕಾಮವಾದವನ್ನು ಮುಂದಿಟ್ಟ.

"ಪ್ರಭು ! ರಾವಣ ! ನೀವು ಕಾಮವನ್ನು ಹೊಂದುವುದರಲ್ಲಿ ಏಕೆ ಇಷ್ಟು ತಡಮಾಡುತ್ತಿ ದೀರಿ ? ಈಗಲೇ ಡಂಗುರ ಹೊಡೆದು ಸಾರಿ ಕುಂಭಕರ್ಣ, ಮಹೋದರ ಮುಂತಾದ ಪ್ರಮುಖರು

ಮೇಲೆ ಯುದ್ಧಕ್ಕೆ ಹೊರಟಿದ್ದಾರೆ ಎಂದು. ನಾವೆಲ್ಲ ದೊಡ್ಡ ಸೈನ್ಯದೊಂದಿಗೆ ಹೋಗಿ ರಾಮನನ್ನು ಕೊಂದು ಬರುತ್ತೇವೆ. ಒಂದು ವೇಳೆ ರಾಮ ನಮ್ಮನ್ನು ಪರಾಜಯಗೊಳಿಸಿದರೂ ನೀವು ರಾಮನೊಡನೆ ಯುದ್ಧಕ್ಕೆ ಹೋಗಬೇಡಿ. ಲಂಕೆಯಲ್ಲೆಲ್ಲ ಕುಂಭಕರ್ಣ, ಮಹೋದರರು ರಾಮನನ್ನು ತಿಂದುಬಿಟ್ಟರು ಎಂದು ಘೋಷಿಸಿಬಿಡಿ. ಆ ನಂತರ, ಸರ್ವ ರೀತಿಯ ಅಲಂಕಾರ ಗಳಿಂದ ಲಂಕೆಯನ್ನು ಅಲಂಕರಿಸಿಬಿಡಿ. ವಿವಿಧವಾದ ರತ್ನಭೂಷಣಗಳು, ವಸ್ತ್ರ, ಇವುಗಳನ್ನೆಲ್ಲ ತೆಗೆದುಕೊಂಡು ಹೋಗಿ ಸೀತೆಯನ್ನು ನಿಮ್ಮ ವಶಮಾಡಿಕೊಳ್ಳಿ. "ಪತಿ ಸತ್ತ" ಎಂದು ತಿಳಿದ ಮೇಲೆ ಸೀತೆ ತಾನಾಗಿಯೇ ನಿಮ್ಮ ವಶಳಾಗುತ್ತಾಳೆ. ನೀವು ಸಂತೋಷದಿಂದ ಸೀತೆಯೊಡನೆ ಭೋಗವನ್ನನುಭವಿಸಿ" ಎಂದ.

ಈ ಸಂದರ್ಭದಲ್ಲಿ ಅನೇಕ ಕವಿಗಳು ಮಹೋದರನ ಕಾಮುವಾದವನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಮಹೋದರ ರಾವಣನಿಗೆ ಸಲಹೆ ಕೊಡುತ್ತಾ "ಮಹಾಪ್ರಭು ! ನೀವು ಸೀತೆಯನ್ನು ವಶಪಡಿಸಿಕೊಳ್ಳಲು ಏಕೆ ಇಷ್ಟು ನಿಧಾನ ಮಾಡುತ್ತಿರುವಿರಿ ? ನಾ ಒಂದು ಸುಲಭವಾದ ಉಪಾಯ ಹೇಳಿಕೊಡುತ್ತೇನೆ. ನೀವು ಕಾಮರೂಪಿಗಳು. ಇಷ್ಟಬಂದ ರೂಪವನ್ನು ಧರಿಸುವ ಶಕ್ತಿ ತಮ ಗುಂಟು. ನೀವೂ ರಾಮನಂತೆಯೇ ವೇಷ ಧರಿಸಿ ಸೀತೆಯನ್ನು ನಿಮ್ಮ ವಶ ಮಾಡಿಕೊಳ್ಳಿ" ಎಂದ.

ಆಗ, ರಾವಣ ನಿಟ್ಟುಸಿರುಬಿಡುತ್ತಾ "ಮಹೋದರ ! ನೀ ಹೇಳಿದ ಸಲಹೆ ಚೆನ್ನಾಗಿದೆ. ಆದರೆ, ಅದರಂತೆ ಮಾಡಲು ಸಾಧ್ಯವಿಲ್ಲ" ಎಂದ.

"ಏಕೆ ಪ್ರಭು ? ಈಗಲೇ ನನ್ನ ಸಲಹೆಯನ್ನು ಕಾರ್ಯಗತಗೊಳಿಸಿ. ಸುಖವನ್ನು ಅನುಭವಿಸಿ" ಎಂದ ಮಹೋದರ.

"ಮಹೋದರ ! ನೀ ಹೇಳುವ ಮೊದಲೇ ನಾನು ಆ ಕೆಲಸವನ್ನು ಮಾಡಿದೆ. ಆದರೆ, ಅದು ಫಲಕಾರಿಯಾಗಲಿಲ್ಲ."

"ಏಕೆ ? ಏನಾಯಿತು ?"

"ಮಹೋದರಾ ! ಕೇಳು ! ನೀ ಹೇಳಿದಂತೆಯೇ ನಾನು ರಾಮನಂತೆಯೇ ರೂಪ ತಾಳಿದೆ. ಕನ್ನಡಿಯಲ್ಲಿ ನೋಡಿಕೊಂಡೆ. ರಾಮನದೇ ತದ್ರೂಪ. ರಾಮನ ರೂಪ ಧರಿಸಿದ ಒಡನೆಯೆ, ರಾಮನ ಬುದ್ಧಿಯೂ ನನಗೆ ಬಂದುಬಿಟ್ಟಿತು" ಎಂದ ರಾವಣ.

"ಹಾಗೆಂದರೆ ? ಮುಂದೆ ಏನಾಯಿತು ?" ಎಂದ ಮಹೋದರ. "ರಾಮ ಪರಸ್ತ್ರೀಯನ್ನು ಕಣ್ಣೆತ್ತಿ ನೋಡುವುದಿಲ್ಲ. ನಾನು ರಾಮನ ವೇಷವನ್ನು ಧರಿಸಿದ ಕೂಡಲೇ ನನಗೂ ಪರಸ್ತ್ರೀಯನ್ನು ನೋಡುವ ಆಸೆಯೂ ಹೊರಟುಹೋಯಿತು. ಇಚ್ಛೆಯೇ ಇಲ್ಲದ ಬಳಿಕ ಕಾರ್ಯ ಸಾಧಿಸುವುದು ಹೇಗೆ ?" ಎಂದ ರಾವಣ,

ಈ ಪ್ರಕರಣದಲ್ಲಿ ರಾಘವನ ಧರ್ಮಶ್ರದ್ಧೆ ಪ್ರಕಾಶಕ್ಕೆ ಬರುತ್ತದೆ. ರಾಮನನ್ನು ಅನುಕರಣೆ ಮಾಡಿದರೂ ರಾಮನ ಬುದ್ಧಿಯೇ ಬರುತ್ತದೆ ಎಂದ ಮೇಲೆ ಆ ರಾಘವನ ಸ್ವಭಾವ ಎಷ್ಟು ಉತ್ತಮವಾಗಿರಬೇಕು ! ಅದಕ್ಕೇ ಇರಬೇಕು ವಾಲ್ಮೀಕಿ "ರಾಮೋ ವಿಗ್ರಹವಾನ್ ಧರ್ಮಃ" ಎಂದಿರುವುದು.

## ಕುಂಭಕರ್ಣನ ರಣಯಾತ್ರೆ

ಮಹೋದರನ ಮಾತುಗಳನ್ನು ಕೇಳಿದ ಕುಂಭಕರ್ಣ ಅವನನ್ನು ಚೆನ್ನಾಗಿ ಧಿಕ್ಕರಿಸಿದ, "ಮಹೋದರ! ನಿನ್ನಂಥ ಹೇಡಿಗಳು ರಾಜನ ಬಳಿಯಲ್ಲಿದ್ದರೆ ವಿನಾಶ ಖಂಡಿತವೇ ಸರಿ! ನಾ ಏನೂ ಜಂಭಕೊಚ್ಚಿಕೊಳ್ಳಲಿಲ್ಲ. ಇಷ್ಟಕ್ಕೂ ರಣರಂಗದಲ್ಲಿ ನುಗ್ಗಿ ಕಾರ್ಯವನ್ನು ಸಾಧಿಸಿದ ಮೇಲೆ ತಾನೇ ಮುಂದಿನ ಮಾತು! ನಿಜಕ್ಕೂ ಕಾರ್ಯಸಾಧಕನಾಗಿರುವವ ಕಾರ್ಯವನ್ನು ಸಾಧಿಸುವ ಮೂಲಕ ವಾಗಿಯೇ ತನ್ನ ಜಾಣ್ಮೆಯನ್ನು ತೋರಿಸುತ್ತಾನೆ, ಒಣಜಂಭದ ಮಾತುಗಳಿಂದಲ್ಲ.

''ನಿನ್ನಂಥ ಬುದ್ಧಿಹೀನ, ಹೇಡಿಯನ್ನು ಪಕ್ಕದಲ್ಲಿ ಇಟ್ಟುಕೊಂಡಿರುವುದರಿಂದಲೇ ರಾವಣ ನಿಗೆ ಇಂಥ ಸ್ಥಿತಿ ಬಂದಿತು. ಖಜಾನೆ ಖಾಲಿಯಾಗಿದೆ. ಸೈನ್ಯ ನಷ್ಟವಾಗಿದೆ. ಇಂಥ ದುಸ್ಥಿತಿಯನ್ನು ನೀನೇ ತಂದೊಡ್ಡಿದೆ. ಇರಲಿ! ನಾನು ಈಗಲೇ ಹೋಗಿ ನನ್ನ ಪರಾಕ್ರಮದಿಂದ ಈಗಾಗಿರುವ ಸ್ಥಿತಿಯನ್ನು ಸರಿಪಡಿಸುತ್ತೇನೆ'' ಎಂದ.

ಕುಂಭಕರ್ಣನ ವೀರೋಚಿತವಾದ ವಾಣಿಯನ್ನು ಕೇಳಿದ ರಾವಣ "ತಮ್ಮಾ! ಈ ಮಹೋದರ ರಾಮನನ್ನು ಕಂಡು ಹೆದರಿದ್ದಾನೆ-ಅದಕ್ಕೇ ಹೀಗೆ ಹೇಳುತ್ತಿದಾನೆ. ನಿನ್ನಂಥ ವೀರನ ಮುಂದೆ ಆ ವಾನರರು ನಿಲ್ಲುವರೆ? ನೀನು ಶೂಲವನ್ನು ಹಿಡಿದು ಹೋದರೆ ಪಾಶಹಸ್ತನಾದ ಯಮನಂತೆ ತೋರುವೆ. ಆದ್ದರಿಂದಲೇ, ಶತ್ರುಗಳನ್ನು ನಿಗ್ರಹಿಸುವ ಸಲುವಾಗಿಯೇ ನಿನ್ನನ್ನು ಎಬ್ಬಿಸಿದೆ" ಎಂದ. "ಸರಿ. ನಾನೊಬ್ಬನೇ ಹೋಗುತ್ತೇನೆ. ಎಲ್ಲರನ್ನೂ ನಿರ್ಮೂಲಮಾಡಿ ಬರುತ್ತೇನೆ'' ಎಂದ ಕುಂಭಕರ್ಣ. "ಸೋದರ, ಜೊತೆಗೆ ಸೈನ್ಯವಿರಲಿ. ನೀ ಒಬ್ಬನೇ ಹೋದರೆ ನೀನು ಅಸಾವಧಾನ ಸ್ಥಿತಿಯಲ್ಲಿದ್ದಾಗ ಆ ಪರ್ವತಕಾಯರಾದ ವಾನರರು ಹಲ್ಲುಗಳಿಂದ ನಿನ್ನ ದೇಹವನ್ನು ಕಡಿದು ಹಾಕಿಬಿಟ್ಟಾರು. ಜೊತೆಗೆ ಸೈನ್ಯ ತೆಗೆದುಕೊಂಡು ಹೋದರೆ ನಿನ್ನನ್ನು ಇದುರಿಸಲು ಯಾರೂ ಶಕ್ತ ರಾಗರು" ಎಂದ ರಾವಣ.

ರಣಯಾತ್ರೆಗೆ ಹೊರಡಲು ಸಿದ್ಧನಾದ ಕುಂಭಕರ್ಣನನ್ನು ತಾನೇ ಕೈಯಾರ ಅಲಂಕರಿಸಿದ ರಾವಣ. ಕುಂಭಕರ್ಣನ ಕೊರಳಿಗೆ ರತ್ನಖಚಿತವಾದ ಸ್ವರ್ಣಹಾರವನ್ನು ಹಾಕಿದ. ತೋಳುಗಳಿಗೆ ತೋಳುಬಂದಿಯನ್ನೂ, ಕೈಗಳಿಗೆ ಉಂಗುರಗಳನ್ನೂ ತೊಡಿಸಿದ. 'ಅಧಾನನಾತ್ಸಮುತ್ಪತ್ಯಸ್ರಜಂ ಮಣಿ ಕೃತಾಂತರಾಂ'! ಕುಂಭದಂಥ ಕರ್ಣಗಳಿಗೆ ದಿವ್ಯವಾಗಿ ಜ್ವಲಿಸುತ್ತಿರುವ ರತ್ನಕುಂಡಲಗಳನ್ನು ಹಾಕಿ ಸ್ವರ್ಣಕವಚವನ್ನು ತೊಡಿಸಿದ. ಮೇರು ಪರ್ವತದ ಶಿಖರದಂಥ ಕಿರೀಟಗಳನ್ನಿಟ್ಟ ತಲೆಯ ಮೇಲೆ. ಇವೆಲ್ಲದರ ಜೊತೆಗೆ ಕೊರಳಿಗೆ ರಕ್ತ ಪುಷ್ಪಗಳಿಂದ ಕಟ್ಟಿದ ಮಾಲೆಯನ್ನು ಹಾಕಿದ. ಪುಷ್ಪ ಗಳಿಂದ ತೋಳನ್ನೂ, ಕೈಗಳನ್ನೂ ಅಲಂಕರಿಸಿದ. ಇಷ್ಟೆಲ್ಲ ಅಲಂಕಾರಮಾಡಿದ ರಾವಣ ಕುಂಭ ಕರ್ಣನನ್ನು ಗಾಢವಾಗಿ ಆಲಿಂಗಿಸಿ ಅವನಿಗೆ ರಣವೀಳ್ಯವನ್ನು ಕೊಟ್ಟ. ಅಣ್ಣನಿಗೆ ವಂದಿಸಿ ಸೈನ್ಯ ದೊಂದಿಗೆ ಹೊರಟ ಕುಂಭಕರ್ಣ. ರಕ್ತಪುಷ್ಪಗಳಿಂದಲೂ, ಚಿನ್ನದ ಕವಚದಿಂದಲೂ ಅಲಂಕೃತನಾದ ಕುಂಭಕರ್ಣ ನಡೆದು ಬರುತ್ತಿದ್ದರೆ ಸಂಧ್ಯಾಕಾಲದ ಅರುಣವರ್ಣದಿಂದ ಆಚ್ಛಾದಿತವಾದ ಅಸ್ತಾಚಲ ನಡೆದು ಬರುವಂತಿತ್ತು. ಕೈಯಲ್ಲಿ ಶೂಲವನ್ನೂ, ಪರಿಘವನ್ನೂ ಹಿಡಿದು ಬರುತ್ತಿದ್ದರೆ ಭೂಮಿಯನ್ನಳೆದ ತ್ರಿವಿಕ್ರಮನೇ ಪುನಃ ಬರುತ್ತಿದಾನೊ ಎಂದು ಅನಿಸುತ್ತಿತ್ತು.

**ತ್ರಿವಿಕ್ರಮಕೃತೋತ್ಸಾಹೋ ನಾರಾಯಣ ಇವಾಬಭೌ**

ಎನ್ನುತ್ತಾರೆ ಕವಿ.

ಬಂದವನೇ, ವಾನರ ಸೈನ್ಯದ ನಡುವೆ ನುಗ್ಗಿದ. ಮದಿಸಿದ ಆನೆ ಕಬ್ಬಿನ ತೋಟದೊಳಗೆ ನುಗ್ಗುವಂತೆ ಗರ್ಜಿಸಿದ. ಅವನ ಬರುವಿಕೆಯನ್ನು ಕಂಡ ಅನೇಕ ವಾನರರು ಮೂರ್ಛಿತರಾದರು. ಅವನ ಗರ್ಜನೆಯನ್ನು ಕೇಳಿದ ಅನೇಕರು ಚೇತನವನ್ನೇ ಕಳೆದುಕೊಂಡರು.

ಬರುತ್ತಲೇ ಹೇಳಿದ "ಈ ಅಲ್ಪ ವಾನರರ ಜೊತೆ ನನಗೇಕೆ ಯುದ್ಧ! ಪಾಪ! ಇವರು ನನ್ನ ಪಾಲಿಗ ನೊಳ್ಳೆಗಳಂತೆ. ರಾಕ್ಷಸರೆ! ನೋಡಿ ನನ್ನ ಪರಾಕ್ರಮವನ್ನು. ಬೆಂಕಿಯಲ್ಲಿ ಬಿದ್ದು ಸಾಯುವ ಪತಂಗಗಳಂತೆ ನಾನು ಈ ವಾನರ ಸೈನ್ಯವನ್ನು ಕಲಕುತ್ತೇನೆ. ಪ್ರಧಾನರು ರಾಮ-ಲಕ್ಷ್ಮಣರು! ಅವರನ್ನು ತೀರಿಸಿಬಿಟ್ಟರೆ ಮುಗಿಯಿತು! ತಾನಾಗಿಯೇ ಎಲ್ಲ ವಾನರರು ಓಡಿ ಹೋಗುತ್ತಾರೆ" ಎಂದು ಗುಡುಗಿದ. ಕೈಯಲ್ಲಿ ಶೂಲವನ್ನು ಹಿಡಿದು ಪ್ರಳಯ ಕಾಲದ ಕಾಲ ರುದ್ರನಂತೆ ಲಂಕಾಪುರಿಯಿಂದ ಹೊರಟ.

ಕುಂಭಕರ್ಣ ಬರುತ್ತಿರುವುದನ್ನು ಕಂಡ ವಾನರರೆಲ್ಲ ಭಯದಿಂದ ಓಡತೊಡಗಿದರು. ಅವರೆಲ್ಲರನ್ನೂ ಅಂಗದ ಹುರಿದುಂಬಿಸಿ ಕರೆತಂದ. ಇದ್ದುದರಲ್ಲಿ ಧೈರ್ಯವನ್ನು ತಂದುಕೊಂಡು ವಾನರರು ಶಿಖರ, ಬಂಡೆ, ವೃಕ್ಷಗಳನ್ನು ಕುಂಭಕರ್ಣನ ಮೇಲ ಬೀಸತೊಡಗಿದರು. ಆದರೆ, ಅದರಿಂದ ಕುಂಭಕರ್ಣ ಸ್ವಲ್ಪವೂ ವಿಚಲಿತನಾಗಲಿಲ್ಲ. ಅನೇಕ ವೃಕ್ಷಗಳು, ಬಂಡೆಗಳು ಅವನ ದೇಹಕ್ಕೆ ತಗುಲುತ್ತಿದ್ದಂತೆಯೇ ಚೂರು ಚೂರಾದವು. ಕೋಪದಿಂದ ಕುಂಭಕರ್ಣ ವಾನರ ವಾಹಿನಿಯನ್ನು ಕಲಕ ತೊಡಗಿದ. ಅನೇಕ ವಾನರರು ಸತ್ತರು. ಕುಂಭಕರ್ಣ ದಾವಾಗ್ನಿ ವನವನ್ನು ಸುಡುವಂತೆ ವಾನರ ಸೈನ್ಯವನ್ನು ನಾಶಮಾಡುತ್ತಾ ಬಂದ ಈ ಸನ್ನಿವೇಶವನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

**ಉಲ್ಕಾಶನಿಯುತಾ ಮೇಘಾ ಬಭೂವುರ್ಗರ್ದಭಾರುಣಾಃ ।**
**ಸಸಾಗರವನಾ ಚೈವ ವಸುಧಾ ಸಮಕಂಪತ ॥**
**ಘೋರರೂಪಾಃ ಶಿವಾ ನೇದುಸ್ಸಜ್ವಾಲಕಬಳೈರ್ಮುಖೈಃ ।**
**ಮಂಡಲಾನ್ಯಪಸವ್ಯಾನಿ ಬಬಂಧುಶ್ಚ ವಿಹಂಗಮಾಃ ॥**
**ನಿಷ್ಪಪಾತ ಚ ಗೃಧ್ರೋಽಸ್ಯ ಶೂಲೇ ವೈ ಪಥಿ ಗಚ್ಛತಃ ।**
**ಪ್ರಾಸ್ಫುರನ್ನಯನಂ ಚಾಸ್ಯ ಸವ್ಯೋ ಬಾಹುಶ್ಚ ಕಂಪತೇ ॥**

ಇಷ್ಟೆಲ್ಲ ಆಯಿತು. ಜತೆಗೆ ಕುಂಭಕರ್ಣನ ಎಡಗಣ್ಣು, ಎಡಭುಜವೂ ಅದುರಿದವು. ಆದರೆ ಇದೊಂದನ್ನೂ ಲೆಕ್ಕಿಸದೆ ಮುನ್ನುಗ್ಗಿದ ಕುಂಭಕರ್ಣ.

ಕುಂಭಕರ್ಣನ ಯುದ್ಧವೇಗಕ್ಕೆ ವಾನರರು ಅಂಜಿದರು. ಕೆಲವರು ಓಡಿದರು. ಮತ್ತೆ ಕೆಲವರು ಸಮುದ್ರದಲ್ಲಿ ಹಾರಿದರು. ಇನ್ನು ಕೆಲವರು ಪರ್ವತದ ಗುಹೆಗಳಲ್ಲಿ ಆಶ್ರಯ ಪಡೆದರು. ಮತ್ತೆ ಕೆಲವರು ಸತ್ತಂತೆ ನಟಿಸುತ್ತಾ ಶವಗಳ ಮಧ್ಯೆ ಹಾಗೇ ಮಲಗಿದರು. ವಾನರಸೇನೆ ದಿಕ್ಕಾಪಾಲಾಗಿ ಚದುರಿತು. ಆಗ ಧೀರನಾದ ಅಂಗದ ಎಲ್ಲ ವಾನರ ವೀರರನ್ನೂ ಹುರಿದುಂಬಿಸ ತೊಡಗಿದ.

"ವಾನರವೀರರ! ಶೂರರಾದವರು ಹೀಗೆ ಬೆನ್ನು ತೋರಿಸಿ ಓಡುವುದು ನಿಂದನೀಯವಾಗುತ್ತದೆ. ನೀವು ಹೀಗ ಹೇಡಿಗಳಂತೆ ಓಡುತ್ತಿರುವುದು ಸರಿಯಲ್ಲ. ನೀವು ಎಲ್ಲೇ ಅವಿತಿದ್ದರೂ ಸುಗ್ರೀವ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಆದ್ದರಿಂದ, ಪ್ರಾಣರಕ್ಷಣೆಯ ಆಶೆಯನ್ನು

ತೊರೆದು ಧೈರ್ಯದಿಂದ ಕಾದಲು ಸಿದ್ಧರಾಗಿ. ರಣಭೂಮಿಯಲ್ಲಿ ರಘುವೀರನಿಗಾಗಿ ಪ್ರಾಣವನ್ನು ತೆತ್ತರೆ ಯೋಗಿಗಳಿಗೂ ಅಲಭ್ಯವಾದ ಬ್ರಹ್ಮಲೋಕ ನಮಗೆ ಪ್ರಾಪ್ತವಾಗುತ್ತದೆ. ಹಾಗಲ್ಲದೆ, ಕ್ಷುದ್ರರಾದ ಅಂಜುಬುರುಕರಾಗಿ ಜೀವವನ್ನು ಉಳಿಸಿಕೊಂಡರೂ ಜೀವಚ್ಛವಗಳಾಗಿರಬೇಕು. ನಿಂದ ನೀಯವಾದ ಬಾಳನ್ನು ಬಾಳುವುದಕ್ಕಿಂತ ಕೀರ್ತಿಪ್ರದವಾದ ಸಾವೇ ಒಳ್ಳೆಯದು. ನೀವೆಲ್ಲ ಧೈರ್ಯ ದಿಂದ ಒಟ್ಟಾಗಿ ಬನ್ನಿ. ಎಲ್ಲರೂ ಸೇರಿ ಇವನನ್ನು ಇದಿರಿಸೋಣ.

"ನೀವು ಇವನ ವಿಶಾಲ ದೇಹವನ್ನು ಕಂಡು ಭಯಪಟ್ಟಿರುವಿರಿ. ಇದು ರಾಕ್ಷಸ ಮಾಯೆ. ಕೇವಲ ಭಯಪಡಿಸುವುದಕ್ಕಾಗಿಯೇ ರಾಕ್ಷಸರು ಹೀಗೆ ಬಂದಿದ್ದಾರೆ. ಇದನ್ನು ಕಂಡು ಅಂಜದೆ ಎಲ್ಲರೂ ಒಟ್ಟಾಗಿ ಸೇರಿ ಕಾದೋಣ ಬನ್ನಿ" ಎಂದು ಅಂಗದ ಸಾಮ, ಭೇದಗಳಿಂದ ಎಲ್ಲ ವಾನರ ಪ್ರಮುಖರನ್ನೂ ಹುರಿದುಂಬಿಸಿದ.

ಹನುಮಂತ, ಶರಭ, ನೀಲ, ಗಜ, ಗವಾಕ್ಷ, ಗವಯ, ಗಂಧಮಾದನ, ಕುಮುದ, ನಳ, ಪನಸ, ಮುಂತಾದ ವಾನರವೀರರು ತಮ್ಮ ತಮ್ಮ ಸೈನ್ಯವನ್ನು ಸಿದ್ಧಪಡಿಸಿಕೊಂಡು ನುಗ್ಗಿ ಬರು ತ್ತಿರುವ ಕುಂಭಕರ್ಣನನ್ನು ತಡೆಯಲು ಸನ್ನದ್ಧರಾದರು.

ಕುಂಭಕರ್ಣನ ಮೇಲೆ ಬಂಡೆಗಳ ವೃಕ್ಷಗಳ ಮಳೆಯೇ ಸುರಿಯತೊಡಗಿತು. ಆದರೂ, ಆ ಮಹಾ ಪ್ರತಾಪಿಯಾದ ರಾಕ್ಷಸ ಅವೆಲ್ಲವನ್ನೂ ಭಗ್ನಗೊಳಿಸುತ್ತಾ ನಡೆದ. ಸಾವಿರಾರು ವಾನರರು ಅವನ ಪಾದತಳಕ್ಕೆ ಸಿಕ್ಕಿ ಸತ್ತರು. ದ್ವಿವಿದ ಒಂದು ದೊಡ್ಡ ಪರ್ವತಶಿಖರವನ್ನೆತ್ತಿ ಒಗೆದ. ಅದು ಕುಂಭಕರ್ಣನ ಹತ್ತಿರ ಬರುವಷ್ಟರಲ್ಲಿ ಅದನ್ನು ಅವನು ಚೂರು ಚೂರು ಮಾಡಿದ. ದ್ವಿವಿದನನ್ನು ಒಂದು ಹೊಡೆತದಿಂದ ಕೆಳಗೆ ಬೀಳಿಸಿ ಮುನ್ನುಗ್ಗಿದ.

ವಾನರರು ಅಧಿಕ ಸಂಖ್ಯೆಯಲ್ಲಿ ಕೆಳಗೆ ಬಿದ್ದು ಹತರಾಗುತ್ತಿರುವುದನ್ನು ಕಂಡ ಹನುಮಂತ ಕುಂಭಕರ್ಣನ ಮೇಲೆ ಮೇಲಿನಿಂದ ಬಂಡೆಗಳನ್ನೂ, ಪರ್ವತ ಶಿಖರಗಳನ್ನೂ, ವೃಕ್ಷಗಳನ್ನೂ ಬೀಸಿ ಒಗೆಯತೊಡಗಿದ. ಅವೆಲ್ಲವನ್ನೂ ಕುಂಭಕರ್ಣ ತನ್ನ ಶೂಲದಿಂದ ನಿವಾರಿಸಿದ. ಮಹಾಬಲಿ ಯಾದ ಹನುಮಂತ ಕುಂಭಕರ್ಣನ ಎದೆಗೆ ಬಲವಾಗಿ ಒದೆದ. ಅವನ ಪ್ರಹಾರದಿಂದ ಕುಂಭಕರ್ಣ ವಿಹ್ವಲನಾದ ಮರುಕ್ಷಣದಲ್ಲಿ ಮತ್ತೆ ಚೇತರಿಸಿಕೊಂಡು ತನ್ನ ದೊಡ್ಡ ಶೂಲದಿಂದ ಬಲವಾಗಿ ಹನುಮಂತನ ಎದೆಗೆ ಚುಚ್ಚಿದ. ಶೂಲದ ಪ್ರಹಾರದಿಂದ ಹನುಮನೂ ಸ್ವಲ್ಪ ಕಾಲ ವಿಚಲಿತ ನಾದ. ಹನುಮಂತನ ಬಾಯಿಂದ, ಎದೆಯಿಂದ ರಕ್ತ ಹರಿಯತೊಡಗಿತು. ಇದನ್ನು ಕಂಡ ರಾಕ್ಷಸರು ಸಂತೋಷದಿಂದ ಹರ್ಷಧ್ವನಿ ಮಾಡಿದರು. ವಾನರರು ಭಯದಿಂದ ಓಡತೊಡಗಿದರು.

ಓಡುತ್ತಿದ್ದ ವಾನರರನ್ನು ಪುನಃ ಸಂಘಟನೆ ಮಾಡಿಕೊಂಡು ಋಷಭ, ನೀಲ, ಶರಭ, ಗವಾಕ್ಷ, ಗಂಧಮಾಧನ ಈ ಐವರು ವಾನರ ಪ್ರಮುಖರೂ ಕುಂಭಕರ್ಣನ ಮೇಲೆ ಯುದ್ಧಕ್ಕೆ ಬಂದರು. ವೃಕ್ಷಗಳಿಂದ, ಬಂಡೆಗಳಿಂದ, ಶಿಖರಗಳಿಂದ, ಅವರನ್ನು ಪ್ರಹರಿಸತೊಡಗಿದರು. ಹಲ್ಲು ಗಳಿಂದ ಕಚ್ಚುತ್ತಿದ್ದರು. ಉಗುರುಗಳಿಂದ ಬಗೆಯುತ್ತಿದ್ದರು. ಕುಂಭಕರ್ಣ ಅಲಕ್ಷ್ಯದಿಂದ ಎಲ್ಲ ವಾನರರನ್ನೂ ಸೋಲಿಸುತ್ತ ಬಂದ. ವೇಗಶಾಲಿಯಾದ ಋಷಭನನ್ನು ತನ್ನ ಎರಡು ಕಂಕುಳಿನಲ್ಲಿ ಇರುಕಿಕೊಂಡ. ಕುಂಭಕರ್ಣನ ಒತ್ತುವಿಕೆಯಿಂದಾಗಿ ಋಷಭ ರಕ್ತವನ್ನು ಕಾರತೊಡಗಿದ. ಅವನು ಭೂಮಿಯ ಮೇಲೆ ಬಿದ್ದ. ಆ ನಂತರ ಇಂದ್ರದ್ರೋಹಿಯೆನಿಸಿದ ಆ ಕುಂಭಕರ್ಣ ಶರಭನನ್ನು ಮುಷ್ಟಿಯಿಂದ ಹೊಡೆದ. ನೀಲನನ್ನು ಮಂಡಿಯಿಂದ ಅದುಮಿದ. ಗವಾಕ್ಷನನ್ನು ಕೈಯಿಂದ

ಅಪ್ಪಳಿಸಿದ. ಗಂಧಮಾಧನನಿಗೆ ಬಲವಾದ ಏಟನ್ನು ಕೊಟ್ಟ. ಆ ಪಂಚವಾನರ ಪ್ರಮುಖರೂ ಕುಂಭಕರ್ಣನ ವೇಗಕ್ಕೆ ಸಿಕ್ಕಿ ಪ್ರಜ್ಞಾ ಶೂನ್ಯರಾದರು. ಅವರೆಲ್ಲ ಕತ್ತರಿಸಲ್ಪಟ್ಟ ಪಲಾಶವೃಕ್ಷದಂತೆ ಕಾಣಬರುತ್ತಿದ್ದರು.

ಇದಾದ ನಂತರ ಸಾವಿರಾರು ವಾನರರು ಒಟ್ಟಾಗಿ ಕುಂಭಕರ್ಣನ ಮೇಲೆ ಬಿದ್ದರು. ಅವರಲ್ಲಿ ಅನೇಕರು ಕುಂಭಕರ್ಣನ ದೇಹದ ನಾನಾ ಭಾಗಗಳನ್ನು ಏರಿ ನಿಂತು ಅವನನ್ನು ತಮ್ಮ ಹಲ್ಲುಗಳಿಂದ ಕಚ್ಚಿ ಉಗುರುಗಳಿಂದ ಬಗೆಯುತ್ತಿದ್ದರು. ಸಾವಿರಾರು ದೊಡ್ಡ ದೊಡ್ಡ ವೃಕ್ಷಗಳಿಂದ ಕೂಡಿದ ಪರ್ವತದಂತೆ ಆ ಕುಂಭಕರ್ಣ ಸಾವಿರಾರು ವಾನರರಿಂದ ಸುತ್ತಲ್ಪಟ್ಟವನಾಗಿ ತೋರುತ್ತಿದ್ದ.

ಕುಂಭಕರ್ಣ ವಾನರರನ್ನು ಕೊಲ್ಲುತ್ತಿದ್ದ ರೀತಿ ವಿಚಿತ್ರವಾಗಿತ್ತು,

**ಷೋಡಶಾಷ್ಟೌಚ ದಶಚ ವಿಂಶತ್ತ್ರಿಂಶತ್ತಥೈವಚ ।**
**ಪರಿಕ್ಷಿಪ್ಯಚ ಬಾಹುಭ್ಯಾಂ ಖಾದನ್ ವಿಪರಿಧಾವತಿ ।**
**ಭಕ್ಷಯನ್ ಭೃಶಸಂಕ್ರುದ್ಧೋ ಗರುಡಃ ಪನ್ನಗಾನಿವ ॥**
**ಕೃಚ್ಛ್ರೇಣಚ ಸಮಾಶ್ವಸ್ತಾಸ್ಸಂಗಮ್ಯಚ ತತಸ್ತತಃ ।**
**ವೃಕ್ಷಾದ್ರಿಹಸ್ತಾ ಹರಯಸ್ತಸ್ಥುಸ್ಸಂಗ್ರಾಮಮೂರ್ಧನಿ ॥**

ಮಹಾಪರಾಕ್ರಮಿಯಾದ ಆ ರಾಕ್ಷಸ ವಿಶಾಲವಾದ ಗುಹೆಯಂಥ ತನ್ನ ಬಾಯೊಳಗೆ ವಾನರರನ್ನು ನೂರಾರು ಸಂಖ್ಯೆಯಲ್ಲಿ ಹಿಡಿದು ಹಾಕಿಕೊಳ್ಳುತ್ತಿದ್ದ. ಪಕ್ಷಿರಾಜನಾದ ಗರುಡ ಸರ್ಪಗಳನ್ನು ಲಕ್ಷ ಸಂಖ್ಯೆಯಲ್ಲಿ ಹಿಡಿಯುವಂತೆ ಕುಂಭಕರ್ಣ ವಾನರರನ್ನು ಹಿಡಿದು ಮುಕ್ಕುತ್ತಿದ್ದ. ಅವನ ಬಾಯೊಳಗೆ ಹೊರಟ ವಾನರರು ಅವನ ಕಿವಿಯಿಂದ, ಮೂಗಿನಿಂದ ಹೊರಬರುತ್ತಿದ್ದರು. ಗ್ರೀಷ್ಮಋತುವಿನಲ್ಲಿ ಪ್ರಜ್ವಲಿಸುತ್ತಿರುವ ದಾವಾಗ್ನಿ ವನವನ್ನೆಲ್ಲ ಸುಡುವಂತೆ ಕುಂಭಕರ್ಣ ವಾನರ ಸೈನ್ಯವನ್ನು ಸುಟ್ಟು ಹಾಕುತ್ತಿದ್ದ.

ಕುಂಭಕರ್ಣನ ಸಮರವೇಗವನ್ನು ವಾನರರು ತಡೆಯದಾದರು. ಅನೇಕರು ಓಡಿ ಹೋಗಿ ರಾಮನಲ್ಲಿ ಶರಣು ಹೊಕ್ಕರು. ಓಡುತ್ತಿರುವ ಸೈನ್ಯವನ್ನು ಮತ್ತೆ ಮತ್ತೆ ಹುರಿದುಂಬಿಸುತ್ತಾ ಅಂಗದ ಮುನ್ನುಗ್ಗಿದ. ಒಂದು ದೊಡ್ಡ ಪರ್ವತ ಶಿಖರವನ್ನು ಕುಂಭಕರ್ಣನ ನೆತ್ತಿಯ ಮೇಲೆ ಹಾಕಿದ. ನೆತ್ತಿಯ ಮೇಲೆ ಹಾಕಿದ ಆ ಶಿಖರದ ಪ್ರಹಾರದಿಂದ ಕುಂಭಕರ್ಣನಿಗೆ ನೋವಾಯಿತು. ನೋವಿನಿಂದ ಮತ್ತಷ್ಟು ಕುಪಿತನಾಗಿ ತನ್ನ ಶೂಲವನ್ನು ತಿರುಗಿಸಿದ. ಅದನ್ನು ಅಂಗದನ ಮೇಲೆ ಪ್ರಯೋಗಿಸಿದ. ಮಹಾವೇಗಶಾಲಿಯಾದ ಅಂಗದ ಥಟ್ಟನೆ ಹಾರಿ ಆ ಶೂಲದಿಂದ ತನ್ನನ್ನು ತಪ್ಪಿಸಿಕೊಂಡು ಕುಂಭಕರ್ಣನ ಮೇಲೆ ಹಾರಿ ಅವನ ಎದೆಗೆ ಮುಷ್ಟಿಯಿಂದ ಬಲವಾಗಿ ಘಾತಿಸಿದ.

ಅಂಗದನ ಮುಷ್ಟಿಪ್ರಹಾರದಿಂದ ಕುಂಭಕರ್ಣ ಮೂರ್ಛಿತನಾದ. ಸ್ವಲ್ಪ ಹೊತ್ತಿಗೆಲ್ಲ ಮೂರ್ಛೆಯಿಂದ ಎಚ್ಚೆತ್ತು ಮಹಾಕ್ರುದ್ಧನಾಗಿ ಮುಷ್ಟಿಯಿಂದ ಅಂಗದನನ್ನು ಬಲವಾಗಿ ಹೊಡೆದ. ಅಂಗದ ಅವನ ಹೊಡೆತಕ್ಕೆ ಮೂರ್ಛಿತನಾಗಿ ಕೆಳಗೆ ಬಿದ್ದ. ಅಂಗದನನ್ನು ಕೆಳಗೆ ಕೆಡಹಿ ಕುಂಭಕರ್ಣ ಸುಗ್ರೀವನ ಕಡೆಗೆ ನುಗ್ಗಿದ. ಮಹಾಬಲಿಯಾದ ಕುಂಭಕರ್ಣ ತನ್ನತ್ತ ನುಗ್ಗಿ ಬರುತ್ತಿರುವುದನ್ನು ಕಂಡ ಸುಗ್ರೀವ ಥಟ್ಟನೆ ಅಂತರಿಕ್ಷಕ್ಕೆ ನೆಗೆದ. ಒಂದು ದೊಡ್ಡ ಶಿಖರವನ್ನು ಕಿತ್ತುಕೊಂಡು ಕುಂಭಕರ್ಣನ ಮೇಲೆ ಯುದ್ಧಕ್ಕೆ ಸಿದ್ಧನಾಗಿ ಬಂದ. "ರಾಕ್ಷಸ! ನೀನೇನೋ ಬಲವಂತನೇ ಸರಿ!

ಆದರೆ, ನಿನ್ನ ಬಲವನ್ನು ಸಾಮಾನ್ಯರಾದ ವಾನರ ಸೈನಿಕರ ಮೇಲೆ ಉಪಯೋಗಿಸುವುದರಿಂದ ಫಲವಿಲ್ಲ. ನಿನ್ನಲ್ಲಿ ಶಕ್ತಿ ಇದ್ದರೆ ಅದನ್ನು ನನ್ನ ಮೇಲೆ ತೋರು" ಎಂದು ಆಹ್ವಾನಿಸಿದ.

"ಸುಗ್ರೀವ, ನೀನು ಪ್ರಜಾಪತಿಯ ಪೌತ್ರ, ಋಕ್ಷರಜಸ್ಸಿನ ಪುತ್ರ, ಮಹಾ ಪೌರುಷವಂತ. ಆದುದರಿಂದಲೇ ಇಂಥ ಸತ್ವಯುಕ್ತವಾದ ಮಾತುಗಳನ್ನಾಡುತ್ತಿರುವಿ" ಎಂದು ಮುನ್ನುಗ್ಗಿದ.

ಕುಂಭಕರ್ಣನ ಮಾತುಗಳನ್ನು ಕೇಳುತ್ತಿದ್ದಂತೆ ಸುಗ್ರೀವ ಆ ಶೈಲ ಶಿಖರದಿಂದ ಕುಂಭಕರ್ಣನ ಎದೆಯನ್ನು ಘಾತಿಸಿದ. ಕುಂಭಕರ್ಣನ ಎದೆಗೆ ಬಡಿದ ಆ ಪರ್ವತ ಶಿಖರ ನುಚ್ಚುನೂರಾಯಿತು. ಇದನ್ನು ಕಂಡ ರಾಕ್ಷಸರು ಸಂತೋಷದಿಂದ ಸಿಂಹನಾದ ಮಾಡಿದರು. ವಾನರರು ವಿಷಾದಿಸಿದರು.

ಪರ್ವತ ಶಿಖರದ ಪೆಟ್ಟನ್ನು ತಿಂದ ಕುಂಭಕರ್ಣ ಕೋಪದಿಂದ ಬುಸುಗುಟ್ಟಿದ. ಕ್ರೋಧ ದಿಂದ ಅವನು ಸುಗ್ರೀವನನ್ನು ಮುಗಿಸಿಬಿಡುವ ಸಲುವಾಗಿ ತನ್ನ ಕೈಯಲ್ಲಿದ್ದ ಶೂಲವನ್ನು ಗಿರಗಿರನೆ ತಿರುಗಿಸತೊಡಗಿದ, ಆಗ, ಎಲ್ಲಿಂದಲೋ ಹಾರಿ ಬಂದ ಹನುಮಂತ ಹಠಾತ್ತಾಗಿ ಆ ಭಯಂಕರ ವಾದ ಶೂಲವನ್ನು ಕುಂಭಕರ್ಣನ ಕೈಯಿಂದ ಕಿತ್ತುಕೊಂಡು ಮುರಿದು ಹಾಕಿದ. ಅನೇಕ ಭಾರ ವಾದ ಲೋಹಗಳಿಂದ ಮಾಡಲ್ಪಟ್ಟ ಆ ಶೂಲವನ್ನು ಹನುಮಂತ ಚೂರು ಚೂರಾಗಿ ಒಡೆದು ಹಾಕಿದ್ದನ್ನು ಕಂಡ ವಾನರರೆಲ್ಲ ಅತ್ಯಂತ ಆನಂದದಿಂದ ಹರ್ಷ ಧ್ವನಿ ಮಾಡಿದರು. ರಾಕ್ಷಸರೆಲ್ಲ ಶೋಕ ತಪ್ತರಾದರು. ಕುಂಭಕರ್ಣನೂ ಭಯಪಟ್ಟ. ಹಲ್ಲು ಕಳಚಿದ ಹಾವಿನಂತಾದ. ಶೂಲ ವನ್ನು ನಾಶಪಡಿಸಿದ ಹನುಮಂತನನ್ನು ವಾನರರೆಲ್ಲ ಬಾಯಿತುಂಬ ಕೊಂಡಾಡತೊಡಗಿದರು,

ಶೂಲವನ್ನು ಕಳೆದುಕೊಂಡ ಕುಂಭಕರ್ಣ ಕೆಣಕಿದ ಫಣಿಯಂತಾದ. ಮುಂದೆ ಮಲಯ ಪರ್ವತದ ಶಿಖರವನ್ನೆತ್ತಿ ಸುಗ್ರೀವನನ್ನು ಅಪ್ಪಳಿಸಿದ. ಶಿಖರದ ಆಘಾತಕ್ಕೆ ಸಿಕ್ಕಿದ ಸುಗ್ರೀವ ಮೂರ್ಛಿತನಾಗಿ ಕೆಳಗೆ ಬಿದ್ದ, ಕೆಳಗೆ ಬಿದ್ದ ಸುಗ್ರೀವನನ್ನು ಎತ್ತಿಕೊಂಡು ಕಂಕುಳಿನಲ್ಲಿಟ್ಟು, ಲಂಕೆಯತ್ತ ನಡೆದ. ಕುಂಭಕರ್ಣ ಪ್ರಬಲವಾದ ವಾಯು ಮೇಘವನ್ನೆತ್ತಿಕೊಳ್ಳುವಂತೆ ಸುಗ್ರೀವ ನನ್ನೆತ್ತಿಕೊಂಡೊಯ್ದ.

ಸುಗ್ರೀವನನ್ನು ಸೆರೆ ಹಿಡಿದದ್ದನ್ನು ಕಂಡ ವಾನರರೆಲ್ಲ ಭಯಕ್ಕೊಳಗಾದರು. ಆಗ ಬುದ್ಧಿ ವಂತರಲ್ಲಿ ಶ್ರೇಷ್ಠನಾದ ಹನುಮಂತ ತನ್ನಲ್ಲೇ ಯೋಚಿಸತೊಡಗಿದ.

"ಈಗ, ನಾನು ಮಾಡಬೇಕಾದ ಕರ್ತವ್ಯವೇನು ? ಈಗಲೇ ಹೋಗಿ ಆ ರಾಕ್ಷಸನನ್ನು ಮುಷ್ಟಿಯಿಂದ ಗುದ್ದಿ ಸಾಯಿಸಿ ಸುಗ್ರೀವನನ್ನು ಬಿಡಿಸಲೇ ? ಅಥವಾ ಸಮರ್ಥನಾದ ಸುಗ್ರೀವ ತನ್ನನ್ನು ತಾನೇ ಬಿಡಿಸಿಕೊಳ್ಳುವನೇ ? ಒಂದು ವೇಳೆ ನಾನು ರಾಕ್ಷಸನಿಂದ ಬಿಡಿಸಿದರೆ ಆಗ ಸುಗ್ರೀ ವನ ಯಶಸ್ಸಿಗೆ ಕುಂದಾಗುವುದಿಲ್ಲವೆ? ಹೇಗಾದರೂ ಆಗಲಿ! ಒಂದು ಮುಹೂರ್ತ ಕಾಯುತ್ತೇನೆ".

**ತಸ್ಮಾನ್ಮುಹೂರ್ತಂ ಕಾಂಕ್ಷಿಷ್ಯೇ ವಿಕ್ರಮಂ ಪಾರ್ಥಿವಸ್ಯತು ।**
**ಭಿನ್ನಂಚ ವಾನರಾನೀಕಂ ತಾವದಾಶ್ವಾಸಯಾಮ್ಯಹಂ ॥**

ಅಷ್ಟರಲ್ಲಿ ಸುಗ್ರೀವ ತನ್ನನ್ನು ತಾನೇ ಬಿಡಿಸಿಕೊಳ್ಳುತ್ತಾನೆ. ತನ್ಮಧ್ಯೆ ಭಯಪಟ್ಟಿರುವ ಈ ವಾನರ ಸೈನ್ಯವನ್ನು ಒಟ್ಟುಗೂಡಿಸುತ್ತೇನೆ" ಎಂದು ತೀರ್ಮಾನಿಸಿದ. ಯಾವ ಕಾಲದಲ್ಲಿ ಯಾವ ಕಾರ್ಯ ವನ್ನು ಯಾವ ರೀತಿಯಲ್ಲಿ ಮಾಡಬೇಕು ಎಂದು ತಿಳಿದವ ಆಂಜನೇಯ. ಸುಗ್ರೀವನು ಮಹಾರಾಜ; ರಾಜನನ್ನು ಮಂತ್ರಿಯಾದವ ಬಿಡಿಸಿದರೆ ರಾಜನ ಸಾಮರ್ಥ್ಯ, ಯಶಕ್ಕೆ ಕುಂದುಬಂದೀತು ಎಂದು

ಯೋಚಿಸಿದ. ತನಗೆ ಸಾಮರ್ಥ್ಯವಿದ್ದರೂ ಮುಹೂರ್ತಕಾಲ ಕಾದುನೋಡಲು ನಿಶ್ಚಯಿಸಿದ.

ಇತ್ತ ರಾಕ್ಷಸರೆಲ್ಲ ಸಿಂಹನಾದ ಮಾಡುತ್ತಿದ್ದಂತೆ ಕುಂಭಕರ್ಣ ಸುಗ್ರೀವನೊಡನೆ ಲಂಕೆಯನ್ನು ಪ್ರವೇಶಿಸಿದ. ಕುಂಭಕರ್ಣನ ಸ್ವಾಗತಕ್ಕಾಗಿ ರಾಕ್ಷಸರು ಮೇಲಿನಿಂದ ಚಂದನವನ್ನೂ, ಸುಗಂಧ ಮಿಶ್ರಿತವಾದ ತಣ್ಣೀರನ್ನೂ ಚೆಲ್ಲತೊಡಗಿದರು. ಇದರಿಂದ ಮೂರ್ಛಿತನಾಗಿದ್ದ ಸುಗ್ರೀವ ಎಚ್ಚೆತ್ತ. ಎಚ್ಚೆತ್ತೊಡನೇ ನೋಡಿದ. ತನ್ನ ನಿಲುವು ತಾನು ಎಲ್ಲಿದ್ದೇನೆ ಎಂಬುದರ ಅರಿವಾಯಿತು. ಈ ರಾಕ್ಷಸನಿಂದ ಬಿಡಿಸಿಕೊಳ್ಳುವ ಉಪಾಯವನ್ನೂ ಯೋಚಿಸಿದ. ಒಡನೆ ತನ್ನ ಕ್ರೂರವಾದ ಉಗುರುಗಳಿಂದ ಕುಂಭಕರ್ಣನ ಪಾರ್ಶ್ವಗಳನ್ನು ಬಗೆದ. ಸ್ಥಳಾವಕಾಶ ಮಾಡಿಕೊಂಡು ತನ್ನ ಹಲ್ಲುಗಳಿಂದ ಕುಂಭಕರ್ಣನ ಮೂಗನ್ನು ಕಚ್ಚಿ ಕಿತ್ತ. ತನ್ನ ಉಗುರುಗಳಿಂದ ಕುಂಭಕರ್ಣನ ಕಿವಿಗಳನ್ನೂ ಕತ್ತರಿಸಿದ. ಕಿವಿ ಮೂಗುಗಳನ್ನು ಕಳೆದುಕೊಂಡ ಕುಂಭಕರ್ಣ ರೋಷದಿಂದ ಸುಗ್ರೀವನನ್ನು ನೆಲಕ್ಕೆ ಹಾಕಿ ತೀಡತೊಡಗಿದ. ಅತಿ ಲಾಘವದಿಂದ ಸುಗ್ರೀವ ನೆಲದಿಂದ ಚೆಂಡಿನಂತೆ ಪುಟಿದು ಆಕಾಶಕ್ಕೆ ಹಾರಿ ರಾಮನ ಬಳಿಗೆ ಹಿಂದಿರುಗಿದ. ಇತ್ತ ಕಿವಿ ಮೂಗುಗಳನ್ನು ಕಳೆದುಕೊಂಡ ಕುಂಭಕರ್ಣನಿಗೆ ರಕ್ತಪ್ರವಾಹವೇ ಹರಿಯುತ್ತಿತ್ತು. ಪರ್ವತದಿಂದ ಹರಿಯುತ್ತಿರುವ ನದಿಯಂತೆ ಇತ್ತು ಕುಂಭಕರ್ಣನ ಮೂಗು ಕಿವಿಗಳಿಂದ ಹರಿಯುತ್ತಿದ್ದ ರಕ್ತದ ಕೋಡಿ. ವಿಷಣ್ಣನಾಗಿ ಮತ್ತೆ ಸಮರಾಂಗಣಕ್ಕೆ ಹೊರಟ. ಸಮರಾಂಗಣಕ್ಕೆ ಹಿಂದಿರುಗುತ್ತಿದ್ದಂತೆ ಕುಂಭಕರ್ಣನಿಗೆ ಅನೇಕ ಅಪಶಕುನಗಳಾದವು. ಎಡಗಣ್ಣು ಎಡಭುಜ ಅದುರಿತು. ಇದನ್ನೆಲ್ಲ ಗಮನಿಸಲಿಲ್ಲ ಕುಂಭಕರ್ಣ. ಬಹಳ ಕೋಪದಿಂದ ಕೈಯಲ್ಲಿ "ಮುದ್ಗರ" ಎಂಬ ಆಯುಧವನ್ನು ಹಿಡಿದು ನುಗ್ಗಿದ. ವೇಗವಾಗಿ ನುಗ್ಗುತ್ತ ಬಂದು ಅನೇಕ ವಾನರರನ್ನು ತಿನ್ನತೊಡಗಿದ.

**ಬಭುಕ್ಷಿತಶ್ಶೋಣಿತ ಮಾಂಸಗೃಧ್ನುಃ**

**ಪ್ರವಿಶ್ಯತದ್ವಾನರನರ ಸೈನ್ಯ ಮುಗ್ರಂ ।**

**ಚಖಾದ ರಕ್ಷಾಂಸಿ ಹರೀನ್ ಪಿಶಾಚಾನೃಕ್ಷಾಂಶ್ಚ**

**ಮೋಹಾದ್ಯುಧಿಕುಂಭಕರ್ಣಃ ॥**

ಅವನ ಹಸಿವು ಹೆಚ್ಚುತ್ತಿತ್ತು. ಒಂದೇ ಸಲಕ್ಕೆ ನೂರಾರು ವಾನರರನ್ನೂ ರಾಕ್ಷಸರನ್ನೂ ಕೂಡಿಯೇ ತಿನ್ನತೊಡಗಿದ. ಅವನ ರಕ್ತಪಿಪಾಸೆ ಹೆಚ್ಚತೊಡಗಿತು. ತನ್ನವರು ಶತ್ರುಗಳು ಎಂಬ ಭೇದವೇ ಇಲ್ಲದೇ ವಾನರರನ್ನೂ ರಾಕ್ಷಸರನ್ನೂ ಕೂಡಿಯೇ ತಿನ್ನತೊಡಗಿದ. ಅವನ ಕಟವಾಯಿಂದ ರಕ್ತ ಹರಿಯುತ್ತಿತ್ತು. ಅವನ ಶರೀರದಲ್ಲಿ ವಾನರರ ರಕ್ತ, ಮಾಂಸ, ಮಜ್ಜೆ, ಕೊಬ್ಬು ಎಲ್ಲ ಅಂಟಿಕೊಂಡಿತ್ತು.

ಪ್ರಳಯ ಕಾಲದಲ್ಲಿ ಮೃತ್ಯು ಎಲ್ಲರ ಪ್ರಾಣವನ್ನೂ ಅಪಹರಿಸುವಂತೆ ಕುಂಭಕರ್ಣ ವಾನರರನ್ನು ನಾಶಮಾಡತೊಡಗಿದ. ಇದನ್ನು ಕಂಡ ಲಕ್ಷ್ಮಣ ಇನ್ನು ನಿಧಾನಿಸಬಾರದೆಂದು ಧನುರ್ಧಾರಿಯಾಗಿ ಕುಂಭಕರ್ಣನ ಮುಂದೆ ಬಂದು ನಿಂತ. ಒಂಭತ್ತು ಬಾಣಗಳಿಂದ ಅವನ ಕವಚವನ್ನು ಕತ್ತರಿಸಿದ. ಲಕ್ಷ್ಮಣನನ್ನು ಕಂಡ ಕುಂಭಕರ್ಣ "ಸುಮಿತ್ರಾ ಕುಮಾರ. ಬಾಲನಾದರೂ ನಿನ್ನ ಪರಾಕ್ರಮ ಮೆಚ್ಚುವಂಥದೇ ಸರಿ. ದೇವತೆಗಳನ್ನೇ ಸೋಲಿಸಿದ ನನ್ನ ಇದಿರಿಗೆ ನಿಲ್ಲುವ ಸಾಹಸವನ್ನು ಮಾಡಿದೆ ಎಂದ ಮೇಲೆ ನಿನ್ನ ಪೌರುಷ ಶ್ಲಾಘನೀಯವೇ ಸರಿ! ಅದಿರಲಿ ಲಕ್ಷ್ಮಣಾ ! ನನ್ನ ಪ್ರಧಾನ ಲಕ್ಷ್ಯ, ರಾಮ. ಅವನನ್ನು ಕೊಂದರೆ ಈ ಸೈನ್ಯ ತಾನಾಗಿಯೇ ನಷ್ಟವಾಗುತ್ತದೆ. ಎಲ್ಲಿ! ರಾಮನ ಕಡೆಗೆ

ಹೋಗುತ್ತೇನೆ" ಎಂದು ಗರ್ಜಿಸಿ ಲಕ್ಷ್ಮಣನನ್ನೂ ಅತಿಕ್ರಮಿಸಿ, ರಾಮನ ಕಡೆಗೆ ನುಗ್ಗತೊಡಗಿದ. ಮುದ್ಗರವನ್ನು ತಿರುಗಿಸುತ್ತಾ ಲಕ್ಷಾಂತರ ವಾನರರನ್ನು ಕೊಲ್ಲುತ್ತಾ ಬರುತ್ತಿದ್ದ ಕುಂಭಕರ್ಣನನ್ನು ತಡೆಯುವ ಸಲುವಾಗಿ ಲಕ್ಷ್ಮಣನ ಸಲಹೆಯಂತೆ ಪರಾಕ್ರಮಿಗಳಾದ ವಾನರ ಪ್ರಮುಖರು ನೂರಾರು ಸಂಖ್ಯೆಯಲ್ಲಿ ಆ ರಾಕ್ಷಸನ ದೇಹದ ಮೇಲೆ ಏರಿ ನಿಂತರು. ಆದರೆ, ಮಹಾಶಕ್ತಿವಂತನಾದ ಆ ರಾಕ್ಷಸ ತನ್ನ ದೇಹವನ್ನು ಒಮ್ಮೆ ಕೊಡವಿದ. ಅದರಿಂದ ಎಲ್ಲ ವಾನರರೂ ಕೆಳಗೆ ಬಿದ್ದರು. ಪರ್ವತಾಕಾರರಾದ ವಾನರರು ಕೆಳಗೆ ಬಿದ್ದ ರಭಸಕ್ಕೆ ಅವರ ಕೆಳಗೆ ಸಿಕ್ಕು ಸಾವಿರಾರು ವಾನರರು ಜಜ್ಜಿಹೋದರು.

ಪ್ರಳಯಾಗ್ನಿಯಂತೆ ದೇದೀಪ್ಯಮಾನನಾಗಿ ವಾನರರನ್ನು ನಾಶಮಾಡುತ್ತ ಬರುತ್ತಿರುವ ಕುಂಭಕರ್ಣನ ಮೇಲೆ ರಾಮ ಸೂರ್ಯಸದೃಶವಾದ ಬಾಣಗಳನ್ನು ಬಿಟ್ಟ.

ಕುಂಭಕರ್ಣ ರಾಮನಿಗೆ ಇದಿರಾಗಿ ನಿಂತು "ನೀನೇಯೋ ರಾಮ ! ಹುಂ ! ನನ್ನನ್ನು ಕಬಂಧ, ವಿರಾಧ, ಖರ, ವಾಲಿ – ಇವರ ಗುಂಪಿಗೆ ಸೇರಿಸಬೇಡ. ನೀನು ಕೊಂದ ಹದಿನಾಲ್ಕು ಸಾವಿರ ರಾಕ್ಷಸರಂತಲ್ಲ ನಾನು. ನಾನು ವಾಲಿಯೂ ಅಲ್ಲ, ವಿರಾಧನೂ ಅಲ್ಲ, ಕಬಂಧನೂ ಅಲ್ಲ, ಖರನೂ ಅಲ್ಲ. ನಾನು ಕುಂಭಕರ್ಣ ! ನನ್ನನ್ನು ಕಂಡ ಮೇಲೂ ನೀನು ಬದುಕಿರುವುದೇ ಆಶ್ಚರ್ಯ" ಎಂದ. ಅದಕ್ಕೆ ರಾಮ ನಗುತ್ತ,

**ಆಗಚ್ಛ ರಕ್ಷೋಧಿಪ ! ಮಾವಿಷಾದಮವಸ್ಥಿತೋಽಹಂ**
**ಪ್ರಗೃಹೀತ ಚಾಪಃ ।**
**ಅವೇಹಿಮಾಂ ಶಕ್ರಸಪತ್ನ ! ರಾಮಂ ಮಯಾ**
**ಮುಹೂರ್ತಾದ್ಭವಿತಾ ವಿಚೇತಾಃ ।**

"ಅಯ್ಯಾ ರಾಕ್ಷಸಾಧಿಪ ! ಬಾ, ಬಾ ! ಇದು ರಣರಂಗ. ವ್ಯಸನ ಪಡಬೇಡ. ನಾನು ಧನುರ್ಧಾರಿಯಾಗಿ ನಿನ್ನೊಡನೆ ಯುದ್ಧ ಮಾಡಲು ಸಿದ್ಧನಾಗಿಯೇ ಇದ್ದೇನೆ. ನಾನು ರಾಮ. ಇನ್ನು ಒಂದೇ ಮುಹೂರ್ತದೊಳಗೆ ನೀನು ಪ್ರಾಣ ಬಿಡುತ್ತೀಯೆ. ಬಾ, ಬಾ !" ಎಂದು ಕರೆದು, ಕುಂಭಕರ್ಣನ ಮೇಲೆ ಬಾಣಗಳನ್ನು ಬಿಟ್ಟ. ರಾಮನ ಬಾಣಗಳ ಸುಳಿಗೆ ಸಿಕ್ಕ ಆ ರಾಕ್ಷಸನ ಕೈಯಲ್ಲಿನ ಗದೆ ಜಾರಿ ಕೆಳಗೆ ಬಿತ್ತು. ಆ ಗದೆ ಸಾವಿರಾರು ಮಣ ಭಾರ. ಅದರ ಅಡಿಗೆ ಸಿಕ್ಕಿ ಅನೇಕ ವಾನರರು ಜಜ್ಜಿಹೋದರು. ಆಯುಧಹೀನನಾದ ಕುಂಭಕರ್ಣ ಕೈಗಳಿಂದಲೇ ವಾನರರನ್ನು ಅಪ್ಪಳಿಸಿ ಕೊಲ್ಲುತ್ತಾ ರಾಮನ ಕಡೆಗೆ ನುಗ್ಗಿದ. ನುಗ್ಗಿಬರುತ್ತಿದ್ದ ಕುಂಭಕರ್ಣನನ್ನು ರಾಮ ಬಾಣಗಳಿಂದ ತಡೆದ. ವಾಲಿಯನ್ನು ಒಂದೇ ಬಾಣದಿಂದ ಕೊಂದಿದ್ದ. ಆದರೆ, ಕುಂಭಕರ್ಣ ರಾಮನ ಬಾಣಗಳಿಂದ ಗಾಯಗೊಂಡರೂ ಧೈರ್ಯದಿಂದ ಮುನ್ನುಗ್ಗುತ್ತಿದ್ದ.

ರಾಮ ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಶೈಲವನ್ನು ಹಿಡಿದುಕೊಂಡು ನುಗ್ಗುತ್ತಿದ್ದ ಕುಂಭಕರ್ಣನ ಬಲಗೈಯನ್ನು ಕತ್ತರಿಸಿದ. ಪುಡಿ ಪುಡಿಯಾದ ಶಿಖರದೊಂದಿಗೆ ಅವನ ಮಹಾಬಾಹು ಕೆಳಗೆ ಬಿದ್ದಿತು. ಅದು ಬೀಳುತ್ತಿದ್ದಂತೆ ಅದ್ದರಡಿಗೆ ಸಿಕ್ಕಿ ಅನೇಕ ವಾನರರು ಹತರಾದರು.

ಬಲಗೈಯನ್ನು ಕಳೆದುಕೊಂಡ ಕುಂಭಕರ್ಣ ಶಿಖರ ವಿಹೀನವಾದ ಪರ್ವತದಂತಾದ. ಆದರೂ ಧೈರ್ಯಗುಂದಲಿಲ್ಲ "ರಾಮ ! ನನ್ನನ್ನು ಸಾಮಾನ್ಯ ಎಂದು ತಿಳಿಯಬೇಡ; ಮೂಗು, ಕಿವಿ, ಬಲಗೈ ಹೋದರೂ ನನಗೆ ಅದರಿಂದ ಸ್ವಲ್ಪವೂ ತೊಂದರೆಯಿಲ್ಲ. ಇದೋ ! ಇದರಿಂದ

ನಿನ್ನನ್ನು ನಾಶಮಾಡುತ್ತೇನೆ" ಎಂದು ಎಡಗೈಯಿಂದ ಒಂದು ಮಹಾವೃಕ್ಷವನ್ನು ಹಿಡಿದುಕೊಂಡು ಮುಂದೆ ನುಗ್ಗಿದ. ಐಂದ್ರಾಸ್ತ್ರವನ್ನು ಪ್ರಯೋಗಿಸಿ ರಾಮ ಕುಂಭಕರ್ಣನ ಎಡಗೈಯನ್ನು ವೃಕ್ಷ ಸಹಿತವಾಗಿ ಕತ್ತರಿಸಿದ ಅದು ಕೆಳಗೆ ಬೀಳುತ್ತಿದ್ದಂತೆ ಅದರ ಘಾತಕ್ಕೆ ಸಿಲುಕಿ ಸಹಸ್ರಾರು ವಾನರರು ನುಚ್ಚು ನೂರಾದರು. ಎರಡು ಕೈಗಳನ್ನು ಕಳೆದು ಕೊಂಡರೂ ಕುಂಭಕರ್ಣ ಜಗ್ಗಲಿಲ್ಲ. ಮುಂದುವರಿಯುತ್ತಲೇ ಇದ್ದ.

ರಾಮ ಎರಡು ಅರ್ಧಚಂದ್ರ ಬಾಣಗಳನ್ನು ಪ್ರಯೋಗಿಸಿ ಕುಂಭಕರ್ಣನ ಎರಡು ಕಾಲುಗಳನ್ನೂ ಕತ್ತರಿಸಿದ. ಅವನ ಎರಡು ಕಾಲುಗಳ ಹೊಡೆತಕ್ಕೆ ಸಿಕ್ಕಿ ಮತ್ತಷ್ಟು ವಾನರಸೈನ್ಯ ನಾಶವಾಯಿತು.

ಕೈಕಾಲುಗಳನ್ನು ಕಳೆದು ಕೊಂಡರೂ ಹೆದರದೆ ಧೈರ್ಯವಾಗಿ ತೆವಳಿಕೊಂಡೇ ಬಾಯನ್ನು ತೆರೆದು ಅದರಿಂದಲೇ ನುಂಗಲು ಮುಂದುವರಿದ. ಮುನ್ನುಗ್ಗಿ ಬರುತ್ತಿದ್ದ ಕುಂಭಕರ್ಣನ ತೆರೆದ ಬಾಯನ್ನು ಬಾಣಗಳಿಂದ ಮುಚ್ಚಿದ ರಾಮ. ಆದರೂ ಆ ರಾಕ್ಷಸ ಸುಮ್ಮನೆ ಇರದೆ ನುಗ್ಗುತ್ತಲೇ ಇದ್ದ. ಆಗ ರಾಮ ಮಹಾ ತೇಜಸ್ವಿಯಾದ ಕಾಲದಂಡ, ಬ್ರಹ್ಮದಂಡಕ್ಕೆ ಸಮನಾದ ಸೂರ್ಯ ಸಂಕಾಶವಾದ ಅಗ್ನಿಯಂತೆ ಜ್ವಲಿಸುತ್ತಿರುವ ಬಾಣವನ್ನು ತೆಗೆದು ಅದನ್ನು ಐಂದ್ರಾಸ್ತ್ರದಿಂದ ಅಭಿಮಂತ್ರಿಸಿ ಕುಂಭಕರ್ಣನ ಮೇಲೆ ಬಿಟ್ಟ. ಆ ಮಹಾಸ್ತ್ರ ಕುಂಭಕರ್ಣನ ಕುಂಡಲಯುಕ್ತವಾದ ತಲೆಯನ್ನು ದೇಹದಿಂದ ಬೇರೆ ಮಾಡಿತು. ಕುಂಭಕರ್ಣನ ಕರ್ಣ ನಾಸಾರಹಿತವಾದ ರುಂಡ ಲಂಕೆಯಲ್ಲಿ ಬಿದ್ದಿತು. ಅದು ಬೀಳುವಾಗ ಅದರ ವೇಗಕ್ಕೆ ಸಿಕ್ಕಿದ ಲಂಕೆಯ ಅನೇಕ ಪ್ರಾಸಾದಗಳೂ ಲಂಕೆಯಲ್ಲಿನ ಅನೇಕ ರಾಕ್ಷಸರೂ ನಾಶವಾದರು.

ರುಂಡವಿಹೀನವಾದ ಕುಂಭಕರ್ಣನ ಮುಂಡ ಸಮುದ್ರದಲ್ಲಿ ಬಿದ್ದಿತು. ಅದು ಬಿದ್ದ ವೇಗಕ್ಕೆ ಸಮುದ್ರದಲ್ಲಿದ್ದ ಅಸಂಖ್ಯಾತ ಮೀನು, ಮೊಸಳೆ, ತಿಮಿಂಗಿಲಗಳು ಮರಣವನ್ನಪ್ಪಿದವು. ಕುಂಭಕರ್ಣ ಸತ್ತದ್ದನ್ನು ಕಂಡ ರಾಕ್ಷಸರು ಭಯವಿಹ್ವಲರಾದರು. ದೇವತೆಗಳು, ಸಿದ್ಧರು, ಗಂಧರ್ವರು, ಋಷಿಗಳು, ಚಾರಣರು, ನಾಗರು, ಪನ್ನಗರು, ಯಕ್ಷರು ಎಲ್ಲರೂ ಬಹಳ ಸಂತೋಷಪಟ್ಟರು.

ಎಲ್ಲರೂ ಕುಂಭಕರ್ಣನನ್ನು ವಧಿಸಿದ ರಾಮನನ್ನು ಕೊಂಡಾಡತೊಡಗಿದರು.

ಕುಂಭಕರ್ಣನನ್ನು ವಧಿಸಿದ ರಾಮ ವೃತ್ರಾಸುರನನ್ನು ವಧಿಸಿದ ಇಂದ್ರನಂತೆ ಶೋಭಿಸುತ್ತಿದ್ದ. ವಾನರರ ನಡುವೆ ಇದ್ದ ರಾಘವ ದೇವತೆಗಳ ನಡುವೆ ಇದ್ದ ದೇವರಾಜನಂತೆ ಕಂಗೊಳಿಸುತ್ತಿದ್ದ.

**ಸ ಕುಂಭಕರ್ಣಂ ಸುರಸಂಘ ಮರ್ದನಂ**
**ಮಹತ್ಸು ಯುದ್ಧೇಷು ಪರಾಜಿತ ಶ್ರಮಂ ।**
**ನನಂದ ಹತ್ವಾ ಭರತಾಗ್ರಜೋ ರಣೇ**
**ಮಹಾಸುರಂ ವೃತ್ರಮಿವಾ ಮರಾಧಿಪಃ ॥**

## ರಾವಣ ವಿಲಾಪ

ಕುಂಭಕರ್ಣ ಮೃತನಾದುದನ್ನು ಕಂಡ ರಾಕ್ಷಸರು ನೇರವಾಗಿ ರಾವಣನ ಹತ್ತಿರ ಹೋಗಿ "ಮಹಾಪ್ರಭು ! ಕಾಲನಂತೆ ವಾನರರನ್ನು ಕೊಂದು ರಾಮನೊಡನೆ ಕಾದಿ ಕೊನೆಗೆ ಮಹಾಬಲಿಷ್ಠ

ನಾದ ಕುಂಭಕರ್ಣ ಕಾಲವಶನಾದ. ಅವನ ಮುಂಡ ಸಮುದ್ರದಲ್ಲಿ ಬಿದ್ದಿತು. ಅವನ ಕರ್ಣ ನಾಸಾ ರಹಿತವಾದ ರುಂಡ ಲಂಕಾದ್ವಾರದ ಮುಂದೆ ದ್ವಾರಕ್ಕೆ ಪ್ರತಿಬಂಧಕವಾಗಿ ಬಿದ್ದಿದೆ'' ಎಂದರು.

ಕುಂಭಕರ್ಣ ಸತ್ತ ಎಂಬ ವಾರ್ತೆಯನ್ನು ಕೇಳಿದ ರಾವಣ "ಹಾ! ಸೋದರ!" ಎನ್ನುತ್ತಾ ನಿಸ್ಸಂಜ್ಞನಾದ. ದೇವಾಂತಕ, ನರಾಂತಕ, ತ್ರಿಶಿರ, ಅತಿಕಾಯ–ಈ ನಾಲ್ವರೂ ಚಿಕ್ಕಪ್ಪನ ಮರಣ ವಾರ್ತೆಯನ್ನು ಕೇಳಿ ದುಃಖಿಸತೊಡಗಿದರು. ರಾವಣ ಅತ್ಯಂತ ಶೋಕದಿಂದ ''ಹಾ! ಕುಂಭಕರ್ಣ ಹೋದೆಯಾ! ಇನ್ನು ದೇವತೆಗಳನ್ನು ಹೇಗೆ ಜಯಿಸಲಿ ನಾನು? ಈವರೆಗೆ ನನಗೆ ಉರುಗೋಲಾಗಿದ್ದೆ. ನನ್ನ ಬಲಗೈಯಾಗಿದ್ದೆ. ಈಗ ನನ್ನ ಬಲಗೈ ನಾಶವಾಯಿತು, ಅಕಟ! ಈಗ ನನ್ನನ್ನು ನೋಡಿ ಆ ದೇವತೆಗಳು ಸಂತೋಷಪಡುತ್ತಾರಲ್ಲ! ನೀನಿಲ್ಲದೆ ಇನ್ನು ಮುಂದೆ ನಾನು ಹೇಗೆ ಬಾಳಲಿ? ಇನ್ನು ಬದುಕಿದ್ದು ತಾನೇ ಪ್ರಯೋಜನ? ಕುಂಭಕರ್ಣಾ! ನಿನ್ನ ಬಲವನ್ನು ನೆಚ್ಚಿ ನಾನು ಧೈರ್ಯವಾಗಿದ್ದೆನಲ್ಲ! ಈಗ ನನ್ನ ಸಮಸ್ತ ಸತ್ವವೂ ಅಡಗಿತು. ಹಿಂದೆ ನನ್ನಿಂದ ಅಪಕಾರ ಹೊಂದಿದ ದೇವತೆಗಳು ಈಗ ನನ್ನ ಸ್ಥಿತಿಯನ್ನು ಕಂಡು ಹರ್ಷಿಸುವಂತಾಯಿತಲ್ಲಾ!

**ಹಾ! ವೀರ ರಿಪುದರ್ಪಘ್ನ! ಕುಂಭಕರ್ಣ! ಮಹಾಬಲ।**
**ತ್ವಮಾಂ ವಿಹಾಯ ವೈ ದೈವಾದ್ಯಾತೋಸಿ ಯಮಸಾದನಂ॥**
**ಮಮಶಲ್ಯ ಮನುದ್ಧೃತ್ಯ ಬಾಂಧವಾನಾಂ ಮಹಾಬಲ।**
**ಶತ್ರುಸೈನ್ಯಂ ಪ್ರತಾಪ್ಯೈಕಸ್ತ್ವಂ ಮಾಂ ಸಂತ್ಯಜ್ಯಗಚ್ಛಸಿ॥**

ಕಷ್ಟ! ಕಷ್ಟ! ಇಂಥ ಸ್ಥಿತಿಗೆ ನಾನು ಬರುವಂತೆ ಮಾಡಿದೆಯಲ್ಲ ನೀನು. ನೀನಿಲ್ಲದ ಮೇಲೆ ನನಗೆ ಈ ಲಂಕಾರಾಜ್ಯದಿಂದ ಏನು? ಆ ಸೀತೆಯಿಂದಲಾದರೂ ಏನು! ನಿನ್ನಿಂದ ರಹಿತವಾದ ರಾಜ್ಯವಾಗಲೀ, ಭೋಗವಾಗಲೀ ನನಗೆ ಬೇಡ. ನನ್ನ ಬಲಗೈ ಹೊಯಿತು. **ಇದಾನೀಂ ಖಲ್ವಹಂ ನಾಸ್ಮಿ ಯಸ್ಯಮೇ ದಕ್ಷಿಣೋಭುಜಃ।** ಎನ್ನುತ್ತಾನೆ.

ನಿನ್ನ ಸಾವಿಗೆ ತಕ್ಕ ಪ್ರತೀಕಾರ ಮಾಡಿಯೇ ತೀರುತ್ತೇನೆ. ನಿನ್ನನ್ನು ಕೊಂದವನನ್ನು ಕೊಂದು ಅವನ ರಕ್ತದಿಂದ ನಿನಗೆ ತರ್ಪಣಬಿಡುತ್ತೇನೆ. ಇಲ್ಲ, ನಾನೇ ಆದರೂ ರಣರಂಗದಪ ಮಡಿಯುತ್ತೇನೆ. ನೀನಿಲ್ಲದ ಜೀವಿತ ಶೂನ್ಯ; ಆದರಿಂದ ನನಗೆ ಲಾಭವೇ ಇಲ್ಲ.

ಅಯ್ಯೋ! ಆ ಮಹಾತ್ಮನಾದ ವಿಭೀಷಣ ಮೊದಲೇ ಇದೆಲ್ಲವನ್ನೂ ಕಂಡುಕೊಂಡು ಯಥಾರ್ಥವಾಗಿ ಹೇಳಿದ. ಅವನ ಮಾತನ್ನು ಕೇಳಲಿಲ್ಲ. ಅಜ್ಞಾನದಿಂದ ಆವೃತವಾದ ನನ್ನ ಬುದ್ಧಿ ವಿಭೀಷಣನ ಮಾತನ್ನು ಗ್ರಹಿಸಲಿಲ್ಲ. ಇಂದು ನನಗೆ ಅದೇ ಸ್ಥಿತಿ ಒದಗಿ ಬಂದಿತು. ಎಂದು ಪಶ್ಚಾತ್ತಾಪ ಪಡುತ್ತಾನೆ.

**ತದಿದಂ ಮಾಮನುಪ್ರಾಪ್ತಂ ವಿಭೀಷಣ ವಚಃ ಶುಭಮ್।**
**ಯದಜ್ಞಾನಾ ಮಯಾ ತಸ್ಯ ನ ಗೃಹೀತಂ ಮಹಾತ್ಮನಃ॥**

ಪ್ರಹಸ್ತ ಸತ್ತಾಗಿನಿಂದ, ಕುಂಭಕರ್ಣ ಅಳಿದಾಗಿನಿಂದ, ನನಗೆ ಮೇಲಿಂದ ಮೇಲೆ ಧಾರ್ಮಿಕನಾದ ವಿಭೀಷಣನ ಮಾತುಗಳೇ ನೆನಪಿಗೆ ಬರುತ್ತವೆ.

**ತಸ್ಯಾಯಂ ಕರ್ಮಣಃ ಪ್ರಾಪ್ತೋ ವಿಪಾಕೋ ಮಮಶೋಕದಃ।**
**ಯನ್ಮಯಾ ಧಾರ್ಮಿಕಃ ಶ್ರೀಮಾ ಸನಿರಸ್ತೋ ವಿಭೀಷಣಃ॥**

"ಮಹಾತ್ಮನಾದ ಆ ವಿಭೀಷಣನನ್ನು ಕ್ರೂರವಾದ ವಚನಗಳಿಂದ ನೋಯಿಸಿ ಅಟ್ಟಿದೆ. ಅಂದಿನಿಂದ ಈ ಶೋಕ ಪರಂಪರೆ ಪ್ರಾರಂಭವಾಯಿತು ಎನ್ನುತ್ತಾನೆ. ವಿಭೀಷಣನು ಧರ್ಮಾತ್ಮ, ಶ್ರೀಮಾನ್ ಎನ್ನುತ್ತಾನೆ. ಈ ಮಾತು ಗಮನಾರ್ಹ.

ಹೀಗೆ ವಿವಿಧ ರೀತಿಯಲ್ಲಿ ವಿಲಪಿಸಿದ ರಾವಣ ದೀನನಾಗಿ ವಿಲಪಿಸುತ್ತಿರುವುದನ್ನು ಕಂಡ ಆವನ ಮಗನಾದ ತ್ರಿಶಿರಸ್ ತಂದೆಯನ್ನು ಸಮಾಧಾನ ಪಡಿಸುತ್ತಾನೆ. "ಮಹಾರಾಜ ನೀವು ಹೇಳಿದಂತೆ ನಮ್ಮ ಚಿಕ್ಕಪ್ಪನೇನೋ ಪರಾಕ್ರಮಿಯೇ ಸರಿ. ಆದರೆ ಅವನಿಗಿಂತ ವೀ ರ ರಾ ದ ನೀವು ಇಷ್ಟೊಂದು ಶೋಕಿಸುವುದು ಸರಿಯಲ್ಲ, ನೀವು ಸಾಮಾನ್ಯರೆ ! ವರದತ್ತವಾದ ರಥ. ಬಾಣ. ಧನುಸ್ಸು ಇವೆಲ್ಲ ನಿಮಗೆ ಇರುವಾಗ ಇದನ್ನು ಬಿಟ್ಟು ನೀವು ಹೀಗೆ ದುಃಖಿಸುವುದು ಸರಿಯೇ ? ಧನುಸ್ಸನ್ನು ಹಿಡಿದು ನಿಂತರಾದರೆ ನಿಮಗೆ ಮೂರು ಲೋಕಗಳಲ್ಲಿಯೂ ಸಾಟಿ ಯಾರೂ ಇರರು. ಅಂದ ಮೇಲೆ ಅಲ್ಪರಾದ ಈ ಮನುಷ್ಯರು ನಿಮಗೊಂದು ಲೆಕ್ಕವೇ ?

"ಪ್ರಭು ನೀವು ಇಲ್ಲಿಯೇ ಇರಿ. ನಾನೇ ಹೋಗಿ ಅವರನ್ನು ನಿಗ್ರಹಿಸಿ ಬರುತ್ತೇನೆ, ಗರುಡ ಹೇಗೆ ಸರ್ಪಗಳನ್ನು ನಾಶ ಮಾಡುತ್ತಾನೋ ಹಾಗೆ ನಾನೂ ರಾಕ್ಷಸರೊಡನೆ ಹೋಗಿ ಆ ಶತ್ರುಗಳನ್ನು ನಿಗ್ರಹಿಸಿ ಬರುತ್ತೇನೆ. ಇಂದ್ರ ಶಂಬರಾಸುರನನ್ನು ಕೊಂದಂತೆ ನಾನೂ ರಾಮನನ್ನು ಕೊಲ್ಲುತ್ತೇನೆ. ನರಕಾಸುರ ವಿಷ್ಣುವಿನಿಂದ ಹತನಾದಂತೆ ರಾಮ ನನ್ನಿಂದ ಹತನಾಗುತ್ತಾನೆ" ಎನ್ನುತ್ತಾನೆ ತ್ರಿಶಿರಸ್. (ಇಲ್ಲಿ ನರಕಾಸುರ ಎಂದರೆ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟ ನರಕಾಸುರ ಅಲ್ಲ, ವಿಷ್ಣುವಿನಿಂದ ಸಂಹೃತನಾದವನೇ ಬೇರೆ. ಸಿಂಹಿಕೆ ಎಂಬುವಳಿಗೆ ವಾತಾಪಿ, ಇಲ್ವಲ, ನಮುಚಿ. ಸೃಮರ, ಅಂಧಕ, ನರಕ, ಕಾಲನಾಭ ಎಂಬ ಏಳು ಮಕ್ಕಳು. ಈ ಏಳು ರಾಕ್ಷಸರಲ್ಲಿ ಒಬ್ಬ ನರಕ. ಇವನನ್ನು ವಿಷ್ಣು ಕೊಂದ.) ಅಪ್ಪಣೆ" ಕೊಡಿ ಎಂದ ತ್ರಿಶಿರಸ್. ಇವನ ಮಾತನ್ನು ಕೇಳಿದ ರಾವಣ ಪುನರ್ಜನ್ಮವನ್ನು ಪಡೆದವನಂತೆ ಧೈರ್ಯ ಹೊಂದಿದ. ಕಾಲಕ್ಕೆ ವಶನಾದ ರಾವಣನಿಗೆ ತ್ರಿಶಿರಸ್ಸಿನ ಮಾತುಗಳು ಅಮೃತದಂತೆ ಇದ್ದವು.

**ರಾವಣನ ಪುತ್ರ ಮತ್ತು ಸೋದರರಿಂದ ರಣ ಯಾತ್ರೆ**

ತ್ರಿಶಿರಸ್ಸಿನ ಮಾತುಗಳನ್ನು ಕೇಳಿದ ನರಾಂತಕ, ದೇವಾಂತಕ, ಅತಿಕಾಯ ಈ ಮೂವರೂ ಉತ್ಸಾಹದಿಂದ "ಪ್ರಭು ನಾವೂ ಯುದ್ಧಕ್ಕೆ ಹೋಗುತ್ತೇವೆ ! ನಾವೂ ರಣದಲ್ಲಿ ಸೆಣಸಲು ಹೋಗುತ್ತೇವೆ." ಎಂದು ಕೂಗತೊಡಗಿದರು.

ರಾವಣ ಸಂತೋಷಗೊಂಡವನಾಗಿ ಅವರೆಲ್ಲರನ್ನೂ ಸೈನ್ಯದೊಡನೆ ಯುದ್ಧಕ್ಕೆ ಕಳುಹಿಸಿದ ದೇವಾಂತಕ, ನರಾಂತಕ, ತ್ರಿಶಿರ, ಅತಿಕಾಯ ರಾವಣನ ಈ ನಾಲ್ವರು ಪುತ್ರರೂ ಯುದ್ಧಕ್ಕೆ ಸನ್ನದ್ಧರಾದರು. ರಾವಣ ತನ್ನ ಕೈಯಾರೆ ಅವರನ್ನು ಭೂಷಣಗಳಿಂದ ಅಲಂಕರಿಸಿದ. ತನ್ನ ಸೋದರರಾದ ಮಹಾಪಾರ್ಶ್ವ, ಮಹೋದರರನ್ನೂ ಯುದ್ಧಕ್ಕೆ ಕುಮಾರರ ರಕ್ಷಣೆಗಾಗಿ ಕಳುಹಿಸಿದ,

ರಾವಣನ ನಾಲ್ವರು ಪುತ್ರರೂ ಮಹಾಪರಾಕ್ರಮಿಗಳು. ವರದಿಂದ ಕೊಬ್ಬಿದವರು. ಎಲ್ಲರೂ ಉತ್ಸಾಹದಿಂದ ರಣರಂಗದತ್ತ ಹೊರಟರು.

ಮಹೋದರ ಐರಾವತದ ಕುಲದಲ್ಲಿ ಬಂದ ಕಾಲ ಮೇಘದಂಥ ದೊಡ್ಡ ಆನೆಯನ್ನೇರಿ ಹೊರಟ. ಸರ್ವ ವಿಧವಾದ ಆಯುಧಗಳಿಂದ ಕೂಡಿಕೊಂಡು ಆವನು ಅಸ್ತಾಚಲದಲ್ಲಿ ಅಸ್ತಮಿಸುತ್ತಿರುವ ಸೂರ್ಯನಂತೆ ಶೋಭಿಸುತ್ತಿದ್ದ. ರಾವಣ ಪುತ್ರನಾದ ತ್ರಿಶಿರಸ್, ಮೂರು ತಲೆ

ಯುಳ್ಳವನು. ದಿವ್ಯವಾದ ರಥವನ್ನೇರಿದ. ಆ ರಥಕ್ಕೆ ಬಲಿಷ್ಠವಾದ ಕುದುರೆಗಳು ಕಟ್ಟಲ್ಪಟ್ಟಿದ್ದವು. ಅವನ ಮೂರು ತಲೆಗಳಲ್ಲೂ ಹೊಳೆಯುವ ಕಿರೀಟ, ಮೂರು ಉನ್ನತ ಶಿಖರಗಳಿಂದ ಯುಕ್ತವಾದ ಹಿಮಾಲಯದಂತೆ ಶೋಭಿಸುತ್ತಿತ್ತು.

ರಾವಣನ ಮಕ್ಕಳಲ್ಲಿ ಮಹಾಪರಾಕ್ರಮಿಯೆನಿಸಿ, ಧನುರ್ಧಾರಿಗಳಲ್ಲಿ ಉತ್ತಮನೆನಿಸಿದ ಅತಿಕಾಯ ಸುವರ್ಣಮಯವಾದ ರಥವನ್ನೇರಿದ. ಅವನ ರಥದಲ್ಲಿ ಪ್ರಾಸ, ತೋಮರ, ಬಾಣಗಳು, ಶಕ್ತಿ ಇತರ ಅಸ್ತ್ರಶಸ್ತ್ರಗಳಿದ್ದವು. ದೊಡ್ಡ ದೇಹವುಳ್ಳ ಮಹಾಬಲಿಯಾದ ಆ ಅತಿಕಾಯ ಮೇರು ಪರ್ವತದಂತೆ ರಥವನ್ನೇರಿ ಹೊರಟ. ನರಾಂತಕ ಉಚ್ಚೈಶ್ರವಸ್ಸಿನಂತೆ ಬಿಳುಪಾದ, ಮಹಾವೇಗಶಾಲಿಯಾದ ಕುದುರೆಯನ್ನೇರಿ ಹೊರಟ.

ದೇವಾಂತಕ ಸ್ವರ್ಣಭೂಷಿತವಾದ ಮಹಾ ಪರಿಘವನ್ನು ತಿರುಗಿಸುತ್ತಾ ಹೊರಟ. ಮಹಾತೇಜಸ್ವಿಯಾದ, ಪರಾಕ್ರಮಿಯಾದ ಮಹಾಪಾರ್ಶ್ವ ಕೈಯಲ್ಲಿ ಮಹಾಗದೆಯನ್ನು ಹಿಡಿದು ಗದಾಧಾರಿಯಾದ ಕುಬೇರನಂತೆ ವಿಜೃಂಭಿಸುತ್ತಿದ್ದ.

ಇವರೆಲ್ಲರೂ ರಾಕ್ಷಸ ಸೈನ್ಯದೊಡನೆ ಲಂಕೆಯಿಂದ ಹೊರಟರು. ಮಾಡು ಅಥವಾ ಮಡಿ, ರಾಮನನ್ನು ಕೊಲ್ಲಬೇಕು ಇಲ್ಲವೇ ರಾಮನಿಂದ ಸಾಯಬೇಕು.

**ಮರಣಂ ವಾಪಿ ನಿಶ್ಚಿತ್ಯ ಶತ್ರೂಣಾಂ ವಾ ಪರಾಜಯಂ ।**
**ಇತಿಕೃತ್ವಾ ಮತಿಂ ವೀರಾ ನಿರ್ಜಗ್ಮುಸ್ಸಂಯುಗಾರ್ಥಿನಃ ॥**

ಎಂಬಧೃಢ ನಿಶ್ಚಯವಿತ್ತು ಅವರಲ್ಲಿ. ಅವರು ವೇಗವಾಗಿ ಬರುತ್ತಿದ್ದಾಗ ಭೂಮಿ ಅದುರತೊಡಗಿತು. ಅವರೆಲ್ಲ ನಗರದ್ವಾರದಿಂದ ಹೊರಗೆ ಬಂದು ಅಲ್ಲಿ ಪರ್ವತಾಕಾರರಾಗಿ ನಿಂತಿದ್ದ ವಾನರರನ್ನು ಕಂಡರು. ವಾನರರೆಲ್ಲ ವೃಕ್ಷಗಳನ್ನೂ, ಪರ್ವತ ಶಿಖರಗಳನ್ನೂ, ಬಂಡೆಗಳನ್ನೂ ಹಿಡಿದು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿದ್ದರು. ವಾನರರೂ ಆಯುಧಗಳನ್ನು ಝಳುಪಿಸುತ್ತಾ ಬರುತ್ತಿದ್ದ ರಾಕ್ಷಸರನ್ನು ಕಂಡರು. ಪರಸ್ಪರ ಜಯಾಭಿಲಾಷಿಗಳಾದ ರಾಕ್ಷಸರೂ, ವಾನರರೂ ಸಿಂಹನಾದ ಮಾಡತೊಡಗಿದರು. ರಾಕ್ಷಸರ ಸಿಂಹನಾದವನ್ನು ಕೇಳಿ ಸಹಿಸದ ವಾನರರು ಜೋರಾಗಿ ಗರ್ಜಿಸತೊಡಗಿದರು. ವಾನರರ ಗರ್ಜನೆಯನ್ನು ಸಹಿಸದಾದ ರಾಕ್ಷಸರು ಕರ್ಕಶವಾದ ಸ್ವರದಲ್ಲಿ ಕೂಗತೊಡಗಿದರು. ರಣರಂಗವೆಲ್ಲ ಭಯಂಕರವಾದ ಶಬ್ದದಿಂದ ತುಂಬಿಹೋಯಿತು.

ರಾಕ್ಷಸರು ತೀಕ್ಷ್ಣವಾದ ಬಾಣ, ಶಕ್ತಿ, ತೋಮರ, ಮುಸಲ, ಪರಿಘ, ಪ್ರಾಸ ಮುಂತಾದ ಆಯುಧಗಳಿಂದ ವಾನರರನ್ನು ಘಾತಿಸತೊಡಗಿದರು, ವಾನರರು ಬಂಡೆ, ಕಲ್ಲು, ವೃಕ್ಷ ಇವುಗಳಿಂದ ರಾಕ್ಷಸರನ್ನು ಪ್ರಹರಿಸುತಿದ್ದರು. ಕೆಲವು ವೇಳೆ ರಾಕ್ಷಸರು ಪರ್ವತಾಕಾರವಾದ ವಾನರರನ್ನು ಹಿಡಿದು ಅವರಿಂದಲೇ ಹೊಡೆದು ಸಾಯಿಸುತ್ತಿದ್ದರು. ಹಾಗೆಯೇ ವಾನರರೂ ರಾಕ್ಷಸರನ್ನು ಹಿಡಿದು ರಾಕ್ಷಸರಿಗೇ ಅಪ್ಪಳಿಸಿ ಕೊಲ್ಲುತ್ತಿದ್ದರು ! ವಾನರರು, ರಾಕ್ಷಸರು ಹತ್ತಿಬಂದ ಆನೆಯಿಂದ ಆನೆಯನ್ನೂ ಹೊಡೆದು ಸಾಯಿಸುತ್ತಿದ್ದರು.

**ರಥೇನಚರಥಂ ಚಾಪಿ ವಾರಣೇ ನೈವ ವಾರಣಂ ।**
**ಹಯೇನಚ ಹಯಂ ಕೇ ಚಿನ್ನಿ ಜಘ್ನುರ್ವಾನರಾರಣೇ ॥**

ರಾಕ್ಷಸರು ವಾನರರಿಂದ ಶಿಖರ, ವೃಕ್ಷ, ಕಲ್ಲು ಇವುಗಳನ್ನು ಕಿತ್ತುಕೊಂಡು ಅದರಿಂದ ಪುನಃ ವಾನರರನ್ನೇ ಹೊಡೆದುಹಾಕುತ್ತಿದ್ದರು. ಹಾಗೆಯೇ ವಾನರರೂ ರಾಕ್ಷಸರಿಂದ ಆಯುಧಗಳನ್ನು ಕಿತ್ತು ಕೊಂಡು ಅವರನ್ನೇ ಅದರಿಂದ ಘಾಸಿಪಡಿಸುತ್ತಿದ್ದರು.

ರಣಭೂಮಿ ವಾನರರ ರಾಕ್ಷಸರ ದೇಹಗಳಿಂದ ಮುಚ್ಚಿಹೋಗಿತ್ತು. ಅಲ್ಲಲ್ಲಿ ಮುದ ರಥರಿಗಳು, ಆಯುಧಗಳು, ಶಿಖರಗಳು, ಬಂಡೆಗಳು, ವೃಕ್ಷಗಳು-ಇವುಗಳಿಂದ ಆ ರಣರಂಗವೆಲ್ಲ ತುಂಬಿ ಹೋಗಿತ್ತು.

ಭಯಂಕರವಾಗಿ ವಾನರರಿಗೂ, ರಾಕ್ಷಸರಿಗೂ ಹಣಾಹಣಿ, ಕೇಶಾಕೇಶಿ, ದಂಡಾದಂಡಿ ಈ ಕ್ರಮದಲ್ಲಿ ಯುದ್ಧ ಜರುಗಿತು.

ಅಪಾರವಾದ ವಾನರಸೇನೆಯ ನಡುವೆ ಬಲಿಷ್ಠನಾದ ನರಾಂತಕ ನುಗ್ಗಿದ. ಮಹಾತಿಮಿಂಗಿಲ ವೊಂದು ಸಾಗರವನ್ನು ಕಲಕುವಂತೆ ನರಾಂತಕ ವಾನರವಾಹಿನಿಯನ್ನು ಕಲಕತೊಡಗಿದ.

ನರಾಂತಕ ಕುದುರೆಯನ್ನೇರಿ ತನ್ನ ತೀಕ್ಷ್ಣವಾದ ಭಲ್ಲೆಯನ್ನು ತಿರುಗಿಸುತ್ತಾ ಬಂದ. ಅವನ ವೇಗಕ್ಕೆ ಅನೇಕ ವಾನರರು ಹತರಾದರು. ನರಾಂತಕ ನುಗ್ಗಿದ ಕಡೆಯಲ್ಲೆಲ್ಲ ಪರ್ವತದಂತೆ ವಾನರರ ದೇಹ ತಪತಪನೆ ಬೀಳತೊಡಗಿತು. ಶುಷ್ಕವಾದ ಕಟ್ಟಿಗೆಯನ್ನು ಬೆಂಕಿ ದಹಿಸುವಂತೆ ನರಾಂತಕ ವಾನರರನ್ನು ನಾಶಮಾಡತೊಡಗಿದ. ಅಲ್ಪ ಸಮಯದಲ್ಲಿ ರಣರಂಗ ವಾನರ ಪ್ರಮುಖರ ಶರೀರ ದಿಂದ ತುಂಬಿಹೋಯಿತು. ವಾನರರೆಲ್ಲ ಭಯದಿಂದ ಚೀತ್ಕಾರಮಾಡತೊಡಗಿದರು.

ವಾನರರ ಆರ್ತನಾದವನ್ನು ಕೇಳಿದ ಸುಗ್ರೀವ ವೀರಕುಮಾರ ಅಂಗದನನ್ನು ಕರೆದು "ವತ್ಸ ! ನೋಡು ! ಆ ಪಾಪಿ ರಾಕ್ಷಸ ನಮ್ಮವರನ್ನು ಹೇಗೆ ನಾಶಮಾಡುತ್ತಿದಾನೆ ? ನೀನು ಹೋಗಿ ಅವ ನನ್ನು ಕೊಲ್ಲು" ಎಂದ.

ಸ್ವಾಮಿಯ ಮಾತನ್ನು ಕೇಳಿದ ಕುಮಾರ ಅಂಗದ ಒಡನೆ ವಾನರ ಸೈನ್ಯದಿಂದ ಹೊರಬಂದು ನರಾಂತಕನಗಿದಿರಾಗಿ ಕಾಣಿಸಿಕೊಂಡ. ಹೆಪ್ಪುಗಟ್ಟಿದ ಮೇಘಗಳ ಮಧ್ಯದಿಂದ ಮೂಡಿ ಬರುವ ಸೂರ್ಯನಂತೆ ಅಂಗದ ವಾನರರ ನಡುವೆ ಬಂದು ನಿಂತ. ವೀರನಾದ ಅಂಗದನ ತೋಳಿನಲ್ಲಿ ಜ್ವಲಿ ಸುತ್ತಿರುವ ಸುವರ್ಣಮಯವಾದ ತೋಳ್ಬಳೆ ಪ್ರಕಾಶಿಸುತ್ತಿತ್ತು. ಸುವರ್ಣ ಧಾತುವಿನಿಂದ ಬೆಳಗು ತ್ತಿರುವ ಪರ್ವತದಂತೆ ಕಂಗೊಳಿಸುತ್ತಿದ್ದ ಧೀರನಾದ ಅಂಗದ ಉಗುರು ಹಲ್ಲು-ಆಯುಧಗಳಿಂದ ಕೂಡಿದವನಾಗಿ ಪ್ರತಾಪಿಯಾದ ನರಾಂತಕನ ಮುಂದೆ ಬಂದುನಿಂತು "ಎಲವೋ ರಾಕ್ಷಸ ! ನಿನಗೆ ಪರಾಕ್ರಮವಿದ್ದರೆ ಅದನ್ನು ನನ್ನ ಮೇಲೆ ತೋರು. ವ್ಯರ್ಥವಾಗಿ ಈ ಬಡ ವಾನರರ ಮೇಲೇಕೆ ತೋರಿಸುವೆ ಎಂದ.

ಅಂಗದನ ಪರುಷವಾಣಿಯನ್ನು ಕೇಳಿ ಕುಪಿತನಾದ ನರಾಂತಕ ತನ್ನ ಭಲ್ಲೆಯನ್ನು ಅಂಗದನ ಎದೆಗೆ ಬೀಸಿದ. ಆದರೆ ವಜ್ರದೇಹಿಯಾದ ಅಂಗದನ ಎದೆಗೆ ತಾಗಿದ ಆ ಭಲ್ಲೆ ವಿಫಲವಾದದ್ದನ್ನು ಕಂಡು ಮತ್ತೂ ಕೋಪಗೊಂಡ ನರಾಂತಕ ಮುಷ್ಟಿಯಿಂದ ಅಂಗದನ ಹಣೆಯಮೇಲೆ ಪ್ರಹ ರಿಸಿದ. ಅಂಗದನ ತಲೆಯೊಡೆದು ರಕ್ತ ಹರಿಯತೊಡಗಿತು. ಸ್ವಲ್ಪಕಾಲ ಪ್ರಜ್ಞೆತಪ್ಪಿತು. ಮತ್ತೆ ಎಚ್ಚೆತ್ತು ಆ ರಾಕ್ಷಸನ ಬಲಕ್ಕೆ ಆಶ್ಚರ್ಯಪಟ್ಟ. ಅಂಗದ ದೃಢವಾಗಿ ಮುಷ್ಟಿಯನ್ನು ಬಿಗಿಹಿಡಿದು ಬಲವಾಗಿ ನರಾಂತಕನ ಎದೆಯನ್ನು ಘಾತಿಸಿದ. ಅಂಗದನ ತೀಕ್ಷ್ಣವಾದ ಮುಷ್ಟಿ ಪ್ರಹಾರಕ್ಕೆ ನರಾಂತಕನ ಎದೆ ಒಡೆಯಿತು.

**ನರಾಂತಕೋ ಭೂಮಿತಲೇ ಪಪಾತ ಯಥಾಚಲೋ ವಜ್ರನಿಪಾತಭಗ್ನಃ** । ಎನ್ನುತ್ತಾರೆ ಕವಿ. ಕೆಳಗೆಬಿದ್ದ. ಬಾಯಿ, ಮೂಗು, ಕಣ್ಣು ಎಲ್ಲದರಿಂದ ರಕ್ತ ಹರಿಯತೊಡಗಿತು. ಸ್ವಲ್ಪ ಹೊತ್ತಿನಲ್ಲೇ ಗತಪ್ರಾಣನಾದ. ನರಾಂತಕ ಅಂಗದನಿಂದ ಹತನಾದುದನ್ನು ಕಂಡು ವಾನರರೆಲ್ಲ ಅತ್ಯಂತ ಆನಂದದಿಂದ ಹರ್ಷಧ್ವನಿಗೈದರು. ರಾಮ ಅಂಗದನ ಬಲವನ್ನು ಧೈರ್ಯವನ್ನು ಪ್ರಶಂಸಿಸಿದ. ನರಾಂತಕನನ್ನು ಸಂಹರಿಸಿದ ಅಂಗದ ಪುನಃ ಯುದ್ಧಕಾತರನಾಗಿ ನಿಂತ.

ನರಾಂತಂಕನ ಅಂತ್ಯವನ್ನು ಕಂಡು ದೇವಾಂತಕ, ತ್ರಿಶಿರ, ಮಹೋದರ, ಮೂವರೂ ವೇಗವಾಗಿ ಅಂಗದನ ಮೇಲೆ ಏರಿ ಹೋದರು. ಅಂಗದ ಆ ಮೂವರನ್ನೂ ಇದಿರಿಸಿ ಯುದ್ಧಮಾಡತೊಡಗಿದ. ಮದಿಸಿದ ಪರ್ವತಾಕಾರವಾದ ಆನೆಯನ್ನೇರಿ ಮಹೋದರ ಮುಂದೆ ನುಗ್ಗಿ ಅಂಗದನ ಮೇಲೆ ಬಾಣಗಳ ಮಳೆಯನ್ನೇ ಸುರಿಸತೊಡಗಿದ. ಹಾಗೆಯೇ ದೇವಾಂತಕ, ತ್ರಿಶಿರರೂ ಅಂಗದನನ್ನು ಬಾಣಗಳಿಂದ ಮುಚ್ಚಿದರು.

ವೀರನಾದ ಅಂಗದ ತನ್ನ ಬಲವಾದ ಮುಷ್ಟಿಯಿಂದ ಮಹೋದರ ಏರಿದ್ದ ಆನೆಯನ್ನು ಪ್ರಹರಿಸಿದ. ಅಂಗದನ ಏಟಿಗೆ ಆನೆಯ ಕಣ್ಣುಗಳು ಹೊರಬಂದವು. ಆನೆ ಸತ್ತಿತು. ಆ ಮಹಾಗಜದ ಒಂದು ದಂತವನ್ನು ಕಿತ್ತುಕೊಂಡು ಅಂಗದ ಅದರಿಂದ ದೇವಾಂತಕನನ್ನು ಪ್ರಹರಿಸಿದ. ದೇವಾಂತಕ ಅಂಗದನ ಪೆಟ್ಟಿಗೆ ಮೂರ್ಛಿತನಾಗಿ ಕೆಳಗೆ ಬಿದ್ದ. ಸೋದರನಿಗೆ ಒದಗಿದ ಸ್ಥಿತಿಯನ್ನು ಕಂಡ ತ್ರಿಶಿರ ಅಂಗದನನ್ನು ಬಾಣಗಳಿಂದ ನೋಯಿಸತೊಡಗಿದ.

ಒಟ್ಟಿಗೆ ನಾಲ್ಕಾರು ಕಡೆಗಳಿಂದ ಅಂಗದನನ್ನು ಶತ್ರುಗಳು ಮುತ್ತಿರುವುದನ್ನು ಹನುಮಂತ, ನೀಲರು ಕಂಡು ಅವನ ಸಹಾಯಕ್ಕೆ ಬಂದರು. ಮಹಾ ಪರಾಕ್ರಮಿಯಾದ ಹನುಮಂತ ದೇವಾಂತಕನನ್ನು ಮುಷ್ಟಿಯಿಂದ ಘಾಸಿದ. ಅವನ ಮುಷ್ಟಿ ಪ್ರಹಾರಕ್ಕೆ ವಿಹ್ವಲನಾಗಿ ದೇವಾಂತಕ ಅಂತಕಪುರಿಯನ್ನು ಸೇರಿದ. ದೇವಾಂತಕನ ಅಳಿವನ್ನು ಕಂಡ ಮಹೋದರ ಬೇರೊಂದು ಆನೆಯನ್ನು ಹತ್ತಿ ಹೊರಟ. ಅವನನ್ನು ನೀಲ ಇದಿರಿಸಿದ. ಮಹೋದರ ತನ್ನ ಇಂದ್ರ ಧನುಸ್ಸಿನಂಥ ಧನುಸ್ಸಿನಿಂದ ಅನೇಕ ಬಾಣಗಳನ್ನು ಹೊಡೆದ. ಅವನ ಬಾಣಗಳ ಪ್ರಹಾರಕ್ಕೆ ಸಿಕ್ಕಿದ ನೀಲ ಸ್ವಲ್ಪ ಕಾಲ ಪ್ರಜ್ಞೆಯನ್ನು ಕಳೆದುಕೊಂಡ. ಪುನಃ ಎಚ್ಚತ್ತು ಒಂದು ದೊಡ್ಡ ವೃಕ್ಷವನ್ನು ತಿರುಗಿಸಿ ಮಹೋದರನ ಮೇಲೆಸೆದ. ಆ ವೃಕ್ಷದ ಪ್ರಹಾರಕ್ಕೆ ಸಿಕ್ಕಿದ ಮಹೋದರ ಕೆಳಗೆ ಬಿದ್ದು ಮೃತನಾದ.

ತನ್ನ ಚಿಕ್ಕಪ್ಪ ಸತ್ತದ್ದನ್ನು ಕಂಡ ತ್ರಿಶಿರ ಕ್ರೋಧದಿಂದ ಉರಿಯುತ್ತಾ ನೀಲನ ಕಡೆಗೆ ನುಗ್ಗಿದ.

ಕೋಪದಿಂದ ನುಗ್ಗಿ ಬರುತ್ತಿದ್ದ ತ್ರಿಶಿರನನ್ನು ಮಾರ್ಗದಲ್ಲೇ ತಡೆದ ಹನುಮಂತ. ಹನುಮಂತನ ಮೇಲೆ ತ್ರಿಶಿರ ಬಾಣಗಳ ಮಳೆಯನ್ನೇ ಸುರಿಸಿದ. ಧೀರನಾದ ಮಾರುತಿ ಅದನ್ನು ಲಕ್ಷ್ಯಕ್ಕೇ ತಾರದೆ ಒಂದು ದೊಡ್ಡ ಪರ್ವತ ಶಿಖರವನ್ನು ತ್ರಿಶಿರನ ಮೇಲೆ ಬೀಸಿ ಒಗೆದ. ಆ ಪರ್ವತ ಶಿಖರವನ್ನು ತ್ರಿಶಿರ ಮಧ್ಯದಲ್ಲೇ ತನ್ನ ಬಾಣಗಳಿಂದ ಚೂರು ಚೂರು ಮಾಡಿದ. ಶಿಖರ ಭಗ್ನವಾದದ್ದನ್ನು ಕಂಡು ಕೋಪದಿಂದ ಹನುಮಂತ ವೃಕ್ಷಗಳ ಮಳೆಯನ್ನೇ ಸುರಿಸಿದ. ಅವನ್ನೆಲ್ಲವನ್ನೂ ತ್ರಿಶಿರ ತನ್ನ ಬಾಣಗಳಿಂದ ಕತ್ತರಿಸುತ್ತಾ ಬಂದ.

ಕೋಪದಿಂದ ತ್ರಿಶಿರ ಶಕ್ತಿಯನ್ನು ತಿರುಗಿಸಿ ಹನುಮಂತನ ಮೇಲೆ ಪ್ರಯೋಗಿಸಿದ. ಅಗ್ನಿ

ಜ್ವಾಲೆಯನ್ನು ಕಕ್ಕುತ್ತಾ ಬಂದ ಆ ಶಕ್ತಿಯನ್ನು ಹನುಮಂತ ಕೈಯಲ್ಲಿ ಹಿಡಿದು ಮುರಿದು ಹಾಕಿದ. ಹನುಮಂತನಿಂದ ಶಕ್ತಿ ಭಗ್ನವಾದುದ್ದನ್ನು ಕಂಡ ವಾನರರು ಸಂತೋಷದಿಂದ ಮೇಘದಂತೆ ಗರ್ಜಿಸ ತೊಡಗಿದರು. ರಾಕ್ಷಸರು ಭಯಭ್ರಾಂತರಾದರು. ತಾನು ಪ್ರಯೋಗಿಸಿದ ಶಕ್ತಿ ಭಗ್ನವಾದದ್ದನ್ನು ಕಂಡು ಕೋಪದಿಂದ ತ್ರಿಶಿರ ಪರಿಘವನ್ನು ತೆಗೆದುಕೊಂಡು ಮುನ್ನುಗ್ಗಿದ. ಹನುಮಂತ ಮುಷ್ಟಿ ಯಿಂದ ಗುದ್ದಿ ಆ ಪರಿಘವನ್ನೂ ವಿದೀರ್ಣಗೊಳಿಸಿದ.

ಕೋಪದಿಂದ ಹುಚ್ಚೇರಿದ ತ್ರಿಶಿರ ಖಡ್ಗದಿಂದ ಹನುಮಂತನ ಎದೆಯನ್ನು ಘಾತಿಸಿದ. ಹನುಮಂತ ಮತ್ತೆ ತ್ರಿಶಿರನ ಎದೆಗೆ ಒಂದು ಬಲವಾದ ಏಟನ್ನು ಕೊಟ್ಟ. ಹನುಮಂತನ ಏಟಿನ ಪೆಟ್ಟಿಗೆ ತ್ರಿಶಿರ ಭೂಮಿಗೊರಗಿದ. ಬಿದ್ದ ತ್ರಿಶಿರನ ಕೈಯಲ್ಲಿದ್ದ ಖಡ್ಗವನ್ನು ಹನುಮಂತ ಕಿತ್ತು ಕೊಂಡ. ಕೆಳಗೆ ಬಿದ್ದ ತ್ರಿಶಿರ ಸಾವರಿಸಿಕೊಂಡು ಹನುಮಂತನನ್ನು ಪ್ರಹರಿಸಲು ಸಿದ್ಧನಾದ. ಆಗ, ಹನುಮಂತ ಕಿರೀಟಯುಕ್ತವಾದ ತ್ರಿಶಿರನ ಮೂರು ತಲೆಗಳನ್ನು ತನ್ನ ಕೈಯಲ್ಲಿರುವ ಖಡ್ಗ ದಿಂದ ತುಂಡರಿಸಿದ. ಪೂರ್ವದಲ್ಲಿ ಇಂದ್ರ ವಿಶ್ವರೂಪನ ಮೂರು ತಲೆಗಳನ್ನು ವಜ್ರಾಯುಧದಿಂದ ಕತ್ತರಿಸಿದಂತೆ ಹನುಮಂತ ತ್ರಿಶಿರನ ಮೂರು ತಲೆಗಳನ್ನೂ ಕತ್ತರಿಸಿ ಹಾಕಿದ. ತ್ರಿಶಿರ ಸತ್ತದ್ದನ್ನು ಕಂಡು ವಾನರರೆಲ್ಲ ಸಿಂಹನಾದ ಮಾಡಿ ಹನುಮಂತನನ್ನು ಹೊಗಳಿದರು.

ನರಾಂತಕ, ದೇವಾಂತಕ, ಮಹೋದರ, ತ್ರಿಶಿರ ಇವರು ಮರಣವನ್ನಪ್ಪಿದ್ದನ್ನು ಕಂಡ ಮಹಾಪಾರ್ಶ್ವ ಮಹಾ ಕೋಪದಿಂದ ತನ್ನ ಬಲವಾದ ಗದೆಯನ್ನು ತಿರುಗಿಸುತ್ತಾ ಮುನ್ನುಗ್ಗಿದ. ಅವನ ಗದೆ ಕಬ್ಬಿಣದಿಂದ ಮಾಡಲ್ಪಟ್ಟು ಮಹಾ ಭಯಂಕರವಾಗಿತ್ತು. ಐರಾವತದಂಥ ಆನೆಯೂ ಆ ಗದಾ ಪ್ರಹಾರಕ್ಕೆ ಅಂಜುವಂತಿತ್ತು. ಅಂಥ ದೊಡ್ಡ ಗದೆಯನ್ನು ತಿರುಗಿಸುತ್ತಾ ಮಹಾಪಾರ್ಶ್ವ ನುಗ್ಗುತ್ತಿದ್ದುದನ್ನು ಕಂಡ "ಋಷಭ" ಎಂಬ ಪರ್ವತಾಕಾರನಾದ ವಾನರ ಥಂಗನೆ ಹಾರಿ ಮಹಾಪಾರ್ಶ್ವನ ಮುಂದೆ ಬಂದು ನಿಂತ.

ತನ್ನ ಮುಂದೆ ಬಂದು ನಿಂತದ್ದನ್ನು ಕಂಡ ಮಹಾಪಾರ್ಶ್ವ ತನ್ನ ಗದೆಯಿಂದ ಋಷಭನ ಎದೆಯನ್ನು ಬಲವಾಗಿ ಹೊಡೆದ. ಗದಾ ಪ್ರಹಾರದಿಂದ ಋಷಭ ರಕ್ತವನ್ನು ಕಾರುತ್ತಾ ಅರಿವು ತಪ್ಪಿ ಬಿದ್ದ. ಸ್ವಲ್ಪ ಕಾಲದ ಮೇಲೆ ಪುನಃ ಎಚ್ಚೆತ್ತ. ಹಾರಿ ಬಂದವನೇ ಮಹಾಪಾರ್ಶ್ವನ ಎದೆಗೆ ಬಲವಾದ ಮುಷ್ಟಿಯಿಂದ ಗುದ್ದಿದ. ಆ ಮುಷ್ಟಿ ಪ್ರಹಾರಕ್ಕೆ ಮಹಾಪಾರ್ಶ್ವ ನೆಲಕ್ಕೆ ಬಿದ್ದ. ಅವನ ಮೂಗು ಬಾಯಿಗಳಿಂದ ರಕ್ತವು ಪ್ರವಾಹದಂತೆ ಹರಿಯುತ್ತಿತ್ತು, ಹಿಮಾಲಯಪರ್ವತ ದಿಂದ ನದೀ ಪ್ರವಾಹ ಹರಿಯುತ್ತಿದ್ದಂತೆ ಮಹಾಪಾರ್ಶ್ವನ ಶರೀರದಿಂದ ರಕ್ತಧಾರೆ ಹರಿಯುತ್ತಿತ್ತು. ಋಷಭ ಮಹಾಪಾರ್ಶ್ವನ ಗದೆಯನ್ನು ಕಿತ್ತುಕೊಂಡ. ಎಚ್ಚೆತ್ತ ಮಹಾಪಾರ್ಶ್ವ ಪುನಃ ಋಷಭ ನಿಂದ ಗದೆಯನ್ನು ಹಿಂದಕ್ಕೆ ಪಡೆಯಲು ಸೆಣಸತೊಡಗಿದ. ಆದರೆ, ಋಷಭ ಆ ಮಹಾ ಗದೆ ಯನ್ನು ವೇಗವಾಗಿ ತಿರುಗಿಸಿ ಮಹಾಪಾರ್ಶ್ವನ ಎದೆಗೆ ಪ್ರಹರಿಸಿದ. ಬುಡಕಡಿದ ಮರದಂತೆ ಮಹಾಪಾರ್ಶ್ವ ಧರೆಗುರುಳಿದ. ಹೀಗೆ, ಅವನ ಗದೆಯಿಂದಲೇ ಅವನು ಸಾವನ್ನಪ್ಪಿದ. ಮಹಾಪಾರ್ಶ್ವನ ಅಂತ್ಯವನ್ನು ಕಂಡ ರಾಕ್ಷಸರು ಆಯುಧಗಳನ್ನು ಅಲ್ಲಲ್ಲೇ ಬಿಸುಟು ದಿಕ್ಕಾಪಾಲಾಗಿ ಓಡತೊಡಗಿದರು. ಸೀಮಿತವಾಗಿರುವ ಸಾಗರ ಮೇರೆಮೀರಿ ದಶದಿಶೆಯಲ್ಲೂ ವ್ಯಾಪಿಸುವಂತೆ ರಾಕ್ಷಸ ಸೈನ್ಯ ದಿಕ್ಕಾಪಾಲಾಗಿ ಚದುರಿತು.

**ಅತಿಕಾಯನ ಅಂತ್ಯ**

ನೋದರರೂ, ಚಿಕ್ಕಪ್ಪಂದಿರೂ ಹತರಾದುದನ್ನು ನೋಡಿದ ಅತಿಕಾಯ. ರಾಕ್ಷಸ ಸೈನ್ಯ

ದಿಕ್ಕೆಟ್ಟು ಓಡಿಹೋಗುತ್ತಿದ್ದನ್ನು ಕಂಡು ಅವರೆಲ್ಲರನ್ನೂ ಹುರಿದುಂಬಿಸಿದ. ಸಾವಿರ ದಿವ್ಯಾಶ್ವಗಳು ಕಟ್ಟಿದ ರಥದಲ್ಲಿರುವ ಸೂರ್ಯನಂತೆ ಬೆಳಗುತ್ತಿದ್ದ. ರಥವನ್ನು ಏರಿ ಹೊರಟ. ಕಾಲ ಮೇಘ ದಂತೆ ಕಪ್ಪಾದ ದೇಹಕಾಂತಿ. ಜ್ವಲಿಸುತ್ತಿರುವ ಸುವರ್ಣದ ಕುಂಡಲಗಳು. ರಕ್ತಪುಷ್ಪಗಳಿಂದ ಕಟ್ಟಿದ ಹಾರದಿಂದ ಅಲಂಕೃತನಾಗಿ ಧನುಸ್ಸನ್ನು ಟಂಕಾರ ಮಾಡುತ್ತಾ ಬರುತ್ತಿದ್ದ. ಅತಿಕಾಯು ನನ್ನು ವಾನರರೆಲ್ಲ ನೋಡಿ ಭಯಪಟ್ಟರು. ಸೂರ್ಯನನ್ನು ಹೋಲುವ ಕಾಂತಿಯುಳ್ಳ ವಿಶಾಲ ಕಾಯದ ಆ ಅತಿಕಾಯನನ್ನು ಕಂಡು ವಾನರರೆಲ್ಲರೂ ಬಿದ್ದ ಕುಂಭಕರ್ಣನೇ ಪುನಃ ಎದ್ದು ಬಂದನೆಂದೇ ಭ್ರಮಿಸಿ ನಾನಾ ದಿಕ್ಕಿಗೆ ಓಡತೊಡಗಿದರು. ಅನೇಕರು ಅತ್ಯಂತ ಭಯದಿಂದ ಓಡೋಡಿ ಶರಣಾಗತವತ್ಸಲನಾದ ರಾಮನನ್ನು ಆಶ್ರಯಿಸಿದರು. ಆರ್ತರಾದ ಆ ವಾನರರನ್ನು ರಾಮ ಸಂತೈಸಿದ. ಭೀಮಕಾಯನಾದ ರಾಕ್ಷಸ ವಿಶಾಲವಾದ ಅಗ್ನಿಸದೃಶವಾದ ರಥವನ್ನೇರಿ ಬರುತ್ತಿರುವುದನ್ನು ನೋಡಿದ ರಾಮ. ವಿಭೀಷಣನನ್ನು ಕುರಿತು "ವಿಭೀಷಣಾ ! ದೂರದಲ್ಲಿ ಮಂದರಪರ್ವತದಂತೆ ಮಹಾಕಾಯನಾದ ರಾಕ್ಷಸ ಬರುತ್ತಿದ್ದಾನಲ್ಲ, ಅವನು ಯಾರು ? ಅವನ ತಲೆಯ ಮೇಲಿನ ಕಿರೀಟ ಪರ್ವತದ ಶಿಖರದಂತೆ ಹೊಳೆಯುತ್ತಿದೆ. ಅವನು ಸಹಸ್ರ ಕುದುರೆ ಗಳಿಂದ ಕಟ್ಟಲ್ಪಟ್ಟ ದಿವ್ಯರಥವನ್ನು ಹತ್ತಿ ನಾಲ್ವರು ಸಾರಥಿಗಳೊಡನೆ ಬರುತ್ತಿದ್ದಾನೆ. ಅವನು ಧನುಸ್ಸು ಹಿಡಿದಿರುವ ರೀತಿ, ಟಂಕಾರ ಮಾಡುವ ಕ್ರಮ—ಇದನ್ನೆಲ್ಲ ನೋಡಿದರೆ ಆವನು ಧನು ರ್ವಿದ್ಯಾ ಪ್ರವೀಣ ಎಂದೆನಿಸುತ್ತದೆ. ಅವನ ರಥದಲ್ಲಿ ಹತ್ತು ಧನುಸ್ಸು, ಅನೇಕ ರೀತಿಯ ಆಯುಧ ಗಳೆಲ್ಲ ಇವೆ. ಇವನ ಭೀಮಕಾಯ ಎಂಥವರಿಗೂ ಅಚ್ಚರಿಯನ್ನುಂಟುಮಾಡುವಂತಿದೆ. ಇವನು ಯಾರು ? ಇವನ ಬಗ್ಗೆ ತಿಳಿಯಲು ಕುತೂಹಲಿಯಾಗಿದ್ದೇನೆ. ಹೇಳು" ಎಂದ.

ರಾಮನ ಮಾತನ್ನು ಕೇಳಿದ ವಿಭೀಷಣ "ರಾಘವ! ಕುಬೇರನ ತಮ್ಮನಾದ ಮಹಾಬಲಿ ಯಾದ ರಾವಣನ ಮಗ ಇವನು" ರಾವಣನ ಪತ್ನಿಯಾದ ಧಾನ್ಯಮಾಲಿನಿಯೇ ಇವನ ತಾಯಿ. ಇವನಿಗೆ "ಅತಿಕಾಯ" ಎಂದು ಹೆಸರು. ದೇವತೆಗಳನ್ನೂ, ದಾನವರನ್ನೂ ನಾಶಮಾಡಲು ಶಕ್ತನೆಂದರೆ ಇವನೇ. ರಾಮ ! ಇವನ ಶಕ್ತಿಯಿಂದಲೇ ಲಂಕೆ ಇದುವರೆಗೆ ರಕ್ಷಿತವಾಗಿರುವುದು. ಇವನು ದೀರ್ಘಕಾಲದವರೆಗೆ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವಧ್ಯತ್ವ ವರವನ್ನು ಪಡೆದಿದ್ದಾನೆ. ದೇವತೆಗಳೂ ದಾನವರೂ ಇವನನ್ನು ಗೆಲ್ಲಲಾರರು. ಒಟ್ಟಿನಲ್ಲಿ, ರಾವಣನಿಗೆ ಸಮಾನವಾದ ಪರಾಕ್ರಮಿ ಎಂದರೆ ಅತಿಕಾಯನೇ ಸರಿ. ಇವನು ಸರ್ವಅಸ್ತ್ರ, ಶಸ್ತ್ರಗಳ ಪರಿಚಯ ವನ್ನು ಪಡೆದು ಅಸ್ತ್ರವಿದ್ಯಾ ಪಾರಂಗತನೆನಿಸಿದ್ದಾನೆ. ರಾವಣನ ಆಜ್ಞೆಯಿಂದ ಈಗ ಬರುತ್ತಿದ್ದಾನೆ" ಎಂದ.

ರಾಮ, ವಿಭೀಷಣರು ಮಾತಾಡುತ್ತಿದ್ದಂತೆ ಅತಿಕಾಯ ಸಹಸ್ರಾರು ವಾನರರನ್ನು ನಾಶ ಮಾಡುತ್ತಾ ಬಂದ. ಮೈಂದ, ದ್ವಿವಿಧ, ಗಜ, ಗವಾಕ್ಷ ಮುಂತಾದ ವಾನರ ಪ್ರಮುಖರು ಶಿಲಾ, ಶೈಲ, ವೃಕ್ಷ, ಇವುಗಳನ್ನು ತೆಗೆದುಕೊಂಡು ಒಟ್ಟಾಗಿ ಅತಿಕಾಯನನ್ನು ಎದುರಿಸಿದರು. ಆದರೆ, ಮಹಾಬಲಿಯಾದಅತಿಕಾಯ ಅವೆಲ್ಲವನ್ನೂ ತನ್ನ ಬಾಣಗಳಿಂದ ಖಂಡಿಸಿ ಆ ವಾನರ ಪ್ರಮುಖರನ್ನು ಸೋಲಿಸಿ ಮುನ್ನುಗ್ಗಿ ರಾಮನ ಮುಂದೆ ಬಂದು ನಿಂತ. ಅಹಂಕಾರದಿಂದ ತನ್ನ ಧನಸ್ಸನ್ನು ಟಂಕಾರ ಮಾಡುತ್ತಾ, "ರಾಮ ! ನಿಮ್ಮಲ್ಲಿ ಯಾರಿಗಾದರೂ ಸಾಹಸ, ಬಲ, ಇರುವುದಾದರೆ ಅಂಥವರು ನನ್ನ ಮುಂದೆ ಯುದ್ಧಮಾಡಲು ಬಂದು ನಿಲ್ಲಿ" ಎಂದು ಆಹ್ವಾನಿಸಿದ.

ಅತಿಕಾಯನ ಗರ್ವಪೂರಿತವಾದ ಮಾತುಗಳನ್ನು ಕೇಳಿದ ಲಕ್ಷ್ಮಣ ಕ್ರೋಧದಿಂದ ಧನುಸ್ಸನ್ನು ಟಂಕಾರ ಮಾಡುತ್ತಾ ಅತಿಕಾಯನ ಮುಂದೆ ಬಂದು ನಿಂತ.

ಲಕ್ಷ್ಮಣ ತನ್ನ ಮುಂದೆ ಬಂದು ನಿಂತಿದ್ದನ್ನು ಕಂಡ ಅತಿಕಾಯ "ಲಕ್ಷ್ಮಣಾ! ನೀ ಇನ್ನೂ ಬಾಲಕ. ಅನ್ಯಾಯವಾಗಿ ನನ್ನ ಬಾಣಕ್ಕೆ ಸಿಕ್ಕಿ ಏಕೆ ಸಾಯುವಿ? ಹೋಗು. ಪ್ರಸುಪ್ತವಾಗಿರುವ ಪ್ರಳಯಾಗ್ನಿಯನ್ನು ಕೆರಳಿಸಬೇಡ. ನಿನಗೆ ರಣದಲ್ಲಿ ಪರಿಶ್ರಮವಿಲ್ಲ. ಅಥವಾ ನಿನ್ನನ್ನು ನೋಡಿದರೆ ಸಾಹಸಮಾಡುವಂತೆ ಕಾಣುತ್ತದೆ. ಸರಿ! ನನ್ನ ಬಾಣಕ್ಕೆ ಸಿಕ್ಕಿದ ಬಳಿಕ ನೀನು ಉಳಿಯುವುದು ಅಸಂಭವ" ಎಂದು ಗುಡುಗಿದ.

ಅತಿಕಾಯನ ಗರ್ಜನೆಯನ್ನು ತಡೆದು ಲಕ್ಷ್ಮಣ "ರಾಕ್ಷಸ! ವ್ಯರ್ಥವಾಗಿ ಮಾತುಗಳಲ್ಲೇಕೆ ನಿನ್ನ ಪೌರುಷವನ್ನು ತೋರಿಸುವಿ? ಉತ್ತಮರಾದವರು ಕಾರ್ಯದಿಂದ ತಮ್ಮ ಸಾಮರ್ಥ್ಯವನ್ನು ತೋರಿಸುತ್ತಾರಲ್ಲದೆ ಒಣಮಾತುಗಳಿಂದಲ್ಲ. ಪರಾಕ್ರಮದ ಮೂಲಕ ನಿನ್ನ ಬಲವನ್ನು ಪ್ರದರ್ಶಿಸು. ನೀನು ಅನೇಕವಿಧವಾದ ಆಯುಧಗಳೊಂದಿಗೆ ಬಂದಿರುವೆಯಲ್ಲವೆ? ಅವೆಲ್ಲವನ್ನೂ ಪ್ರಯೋಗಿಸು. ಆ ನಂತರ ನನ್ನ ಪರಾಕ್ರಮವನ್ನು ಪರಿಚಯಮಾಡಿಕೊ. ನಿಶಾಚರ! ನನ್ನನ್ನು ಬಾಲಕ ಎಂದೆ ಯಲ್ಲವೆ? ವಾಮನ ಮೂರು ಹೆಜ್ಜೆಯಿಂದ ಮೂರು ಲೋಕವನ್ನಳೆದಾಗ ಬಾಲರೂಪದಲ್ಲಿ ಕಾರ್ಯ ವನ್ನು ಸಾಧಿಸಿದನಲ್ಲವೆ? ನಾನು ಬಾಲನಾರೇನು? ವೃದ್ಧನಾದರೇನು? ನಿನ್ನ ಪರಾಕ್ರಮವನ್ನು ಚೆನ್ನಾಗಿ ತೋರಿಸು. ಆಮೇಲೆ ನನ್ನ ಬಲವನ್ನು ನೋಡು" ಎಂದ.

ಲಕ್ಷ್ಮಣನ ಮಾತುಗಳಿಂದ ಕುಪಿತನಾದ ಅತಿಕಾಯ ಕ್ರೂರವಾದ ನಾರಾಚಗಳನ್ನು ಪ್ರಯೋಗಿ ಸಿದ. ಲಕ್ಷ್ಮಣ ಆ ಬಾಣಗಳನ್ನು ತನ್ನ ಅಮೋಘವಾದ ಬಾಣದಿಂದ ಕತ್ತರಿಸಿದ. ತನ್ನ ಬಾಣಗಳು ವಿಫಲವಾದದ್ದನ್ನು ಕಂಡ ಅತಿಕಾಯ ಕೆಣಕಿದ ಫಣಿಯಂತೆ ರೋಷದಿಂದ ಐದುಬಾಣಗಳನ್ನು ಒಟ್ಟಿಗೆ ಲಕ್ಷ್ಮಣನ ಮೇಲೆ ಪ್ರಯೋಗಿಸಿದ. ಲಕ್ಷ್ಮಣ ತನ್ನ ತೀಕ್ಷ್ಣವಾದ ಬಾಣಗಳಿಂದ ಅತಿಕಾಯ ಪ್ರಯೋಗಿಸಿದ ಐದು ಬಾಣಗಳನ್ನೂ ವಿದೀರ್ಣಗೊಳಿಸಿ ಅತಿಕಾಯನ ಹಣೆಗೆ ಗುರಿಯಿಟ್ಟು ಸೂರ್ಯಸಂಕಾಶವಾದ ಬಾಣವನ್ನು ಹೊಡೆದ. ಆ ಮಹಾಬಾಣ ಅತಿಕಾಯನ ಹಣೆಗೆ ತಗುಲಿ ಅದರಿಂದ ರಕ್ತ ಹರಿಯತೊಡಗಿತು. ಅತಿಕಾಯ ಸ್ವಲ್ಪ ಕಾಲ ವಿಹ್ವಲನಾದ. "ಭಲೇ, ಲಕ್ಷ್ಮಣಾ! ನೀನು ನನಗೆ ಸರಿಯಾದ ಶತ್ರು. ನಿನ್ನ ಬಾಣ ಅಮೋಘವಾದುದೇ ಸರಿ" ಎನ್ನುತ್ತಾ ಅತಿಕಾಯ ಮತ್ತೆ ಪುಂಖಾನುಪುಂಖವಾಗಿ ಲಕ್ಷ್ಮಣನ ಮೇಲೆ ಬಾಣಗಳನ್ನು ಪ್ರಯೋಗಿಸತೊಡಗಿದ. ಮಹ ತ್ಕರ್ಮ ಮಾಡುವ ಲಕ್ಷ್ಮಣ ಅವೆಲ್ಲವನ್ನೂ ತನ್ನ ಬಾಣಗಳಿಂದ ನಾಶಮಾಡಿ ಅತಿಕಾಯನನ್ನು ತೀರಿಸುವ ಸಲುವಾಗಿ ಅಮೋಘವಾದ ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿದ.

ಆಗ್ನೇಯಾಸ್ತ್ರ–ಸೂರ್ಯಾಸ್ತ್ರ–ಎರಡೂ ಅಂತರಿಕ್ಷದಲ್ಲಿ ಒಂದಕ್ಕೊಂದು ಘಟ್ಟಿಸಿ ಕೆಳಗೆ ಬಿದ್ದವು.

ಅತಿಕಾಯ ಮತ್ತೆ ತ್ವಷ್ಟ್ರದೇವತಾತ್ಮಕ ಅಸ್ತ್ರವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದ. ಲಕ್ಷ್ಮಣ ಐಂದ್ರಾಸ್ತ್ರವನ್ನು ಪ್ರಯೋಗಿಸಿ ಅದನ್ನು ನಾಶಗೊಳಿಸಿದ.

ಲಕ್ಷ್ಮಣನನ್ನು ಕೊಲ್ಲುವ ಸಲುವಾಗಿ ಅತಿಕಾಯ ಯಾಮ್ಯಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋ ಗಿಸಿದ. ಲಕ್ಷ್ಮಣ ಅದನ್ನು ವಾಯುವ್ಯಾಸ್ತ್ರದಿಂದ ವಿಫಲಗೊಳಿಸಿದ.

ಕೋಪದಿಂದ ಲಕ್ಷ್ಮಣ ಅತಿಕಾಯನ ಮೇಲೆ ಸಹಸ್ರಾರು ಬಾಣಗಳನ್ನು ಸುರಿದ. ಅತಿಕಾಯ

ಬ್ರಹ್ಮದತ್ತವಾದ ಅಭೇದ್ಯ ಕವಚವನ್ನು ಧರಿಸಿದ್ದನಾದ್ದರಿಂದ ಲಕ್ಷ್ಮಣನ ಬಾಣಗಳು ಅವನ ಕವಚವನ್ನು ವಿದೀರ್ಣಗೊಳಿಸಲಾರದೆ ಹೋದವು.

ಲಕ್ಷ್ಮಣ ಮತ್ತೆ ಮತ್ತೆ ಅತಿಕಾಯನ ಕವಚವನ್ನು ಭೇದಿಸಲು ಬಾಣ ಬಿಡುತ್ತಿದ್ದ. ಅಮೋಘವಾದ ಬಾಣಗಳಿಂದ ಅತಿಕಾಯನ ಕುದುರೆಗಳನ್ನೂ, ಸಾರಥಿಯನ್ನೂ ನಾಶಮಾಡಿದ.

ಲಕ್ಷ್ಮಣ ದಿವ್ಯಾಸ್ತ್ರವೊಂದನ್ನು ಪ್ರಯೋಗಿಸುತ್ತಿದ್ದಂತೆ ವಾಯುದೇವ ಲಕ್ಷ್ಮಣನನ್ನು ಕುರಿತು, "ಲಕ್ಷ್ಮಣಾ! ಈ ಅತಿಕಾಯ ಮಹಾ ಪರಾಕ್ರಮಿ. ಬ್ರಹ್ಮನಿಂದ ಅವಧ್ಯತ್ವವನ್ನು ಪಡೆದಿದ್ದಾನೆ. ಆದ್ದರಿಂದ, ಇವನ ಮೇಲೆ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸು" ಎಂದ. ವಾಯುವಿನ ಸಲಹೆಯಂತೆ ಲಕ್ಷ್ಮಣ ಅಮೋಘವಾದ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿದ. ಲಕ್ಷ್ಮಣನ ಧನುಸ್ಸಿನಿಂದ ಬ್ರಹ್ಮಾಸ್ತ್ರ ಹೊರಡುತ್ತಿದ್ದಂತೆ ಗ್ರಹಗಳು ನಡುಗಿದವು. ಭೂಮಿ ಕಂಪಿಸಿತು. ಇಡೀ ಪ್ರಪಂಚವೇ ಅಲ್ಲೋಲ ಗೊಂಡಿತು. ದಿವ್ಯವಾದ ಬ್ರಹ್ಮಾಸ್ತ್ರ ದೇದೀಪ್ಯಮಾನವಾಗಿ ಅತಿಕಾಯನತ್ತ ನಾಗಿ ಬರುತ್ತಿತ್ತು. ಅತಿಕಾಯ ಆಗಲೂ ಧೈರ್ಯಗುಂದದೆ ಶೂಲ, ಮುದ್ಗರ, ಪ್ರಾಸ, ಶಕ್ತಿ, ಕುಠಾರ ಇವುಗಳಿಂದ ಆ ಅಸ್ತ್ರವನ್ನು ನಾಶಮಾಡಲು ಪ್ರಯತ್ನಿಸಿದ. ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ಅನೇಕ ಅಸ್ತ್ರಗಳನ್ನು ಪ್ರಯೋಗಿಸಿದ.

ಆದರೆ, ಆ ಅಮೋಘವಾದ ಬ್ರಹ್ಮಾಸ್ತ್ರ ಎಲ್ಲವನ್ನೂ ನಾಶಮಾಡಿ ವೇಗವಾಗಿ ಬಂದು ಅತಿಕಾಯನ ತಲೆಯನ್ನು ದೇಹದಿಂದ ಬೇರ್ಪಡಿಸಿತು. ಹಿಮಾಲಯದ ಶಿಖರ ಕೆಳಗೆ ಬೀಳುವಂತೆ ಅತಿಕಾಯನ ತಲೆ ಕೆಳಗೆ ಕತ್ತರಿಸಲ್ಪಟ್ಟು ಬಿದ್ದಿತು. ಅತಿಕಾಯನ ಅಂತ್ಯವನ್ನು ನೋಡಿದ ರಾಕ್ಷಸರೆಲ್ಲ ಘೋರವಾಗಿ ರೋದಿಸತೊಡಗಿದರು. ಸೇನಾಪತಿಯನ್ನು ಕಳೆದುಕೊಂಡ ರಾಕ್ಷಸ ಸೇನೆ ಭಯದಿಂದ ಲಂಕೆಯತ್ತ ಓಡತೊಡಗಿತು. ರಾಕ್ಷಸರಾಜಪುತ್ರನಾದ ಅತಿಕಾಯನನ್ನು ಸಂಹರಿಸಿ ಶೂರನಾದ ಲಕ್ಷ್ಮಣ ಶ್ರೀರಾಮನ ಸಮೀಪಕ್ಕೆ ಬಂದು ಅವನಿಗೆ ವಂದಿಸಿದ, ವಾನರರೆಲ್ಲ ಸಂತೋಷದಿಂದ ಹರ್ಷಧ್ವನಿ ಮಾಡುತ್ತಾ ಲಕ್ಷ್ಮಣನನ್ನು ಕೊಂಡಾಡಿದರು.

## ರಾವಣನ ದೈನ್ಯ

ನಾಲ್ವರು ಪುತ್ರರೂ, ಸೋದರರೂ ಹತರಾದುದು ರಾವಣನಿಗೆ ಅಸಹನೀಯವಾದ ವೇದನೆಯನ್ನುಂಟುಮಾಡಿತು. ಮೇಲಿಂದ ಮೇಲೆ ನಿಟ್ಟುಸಿರು ಬಿಡುತ್ತಾ ರಾವಣ ಚಿಂತಿಸತೊಡಗಿದ. ಮೊದಲಿನಿಂದ ರಾಮ ತನ್ನ ಪರಾಕ್ರಮವನ್ನು ಒಂದೇ ರೀತಿ ತೋರುತ್ತಾ ಬಂದಿದ್ದಾನೆ. ನಾನು ಕಳುಹಿಸಲ್ಪಟ್ಟ ರಾಕ್ಷಸರೆಲ್ಲ ಹತರಾಗುತ್ತಲೇ ಇದ್ದಾರೆ. ಮಹಾ ಬಲಿಯಾದ ಧೂಮ್ರಾಕ್ಷ, ವಜ್ರದಂಷ್ಟ್ರ, ಅಕಂಪನ, ಪ್ರಹಸ್ತ, ಕುಂಭಕರ್ಣ, ನರಾಂತಕ, ದೇವಾಂತಕ, ತ್ರಿಶಿರ, ಅತಿಕಾಯ, ಮಹೋದರ, ಮಹಾಪಾರ್ಶ್ವ ಮುಂತಾದ ರಾಕ್ಷಸರು ಭೀಮಬಲರು. ದೇವತೆಗಳನ್ನೂ ಜಯಿಸಿದಂತವರು. ಅಂಥವರು ರಾಮನಿಂದ ಹತರಾದರು. ಇಂದ್ರನನ್ನು ಜಯಿಸಿದ ಇಂದ್ರಜಿತು ಅವರನ್ನು ನಾಗಪಾಶದಿಂದ ಕಟ್ಟಿದ. ಆ ಪಾಶ ಸಾಮಾನ್ಯವಾದುದೇ! ದೇವದಾನವರೂ ಅದನ್ನು ಬಿಡಿಸಲು ಅಶಕ್ತರು. ಹೀಗಿದ್ದೂ ರಾಮ ಲಕ್ಷ್ಮಣರು ಸುಖವಾಗಿ ಅದರಿಂದಲೂ ಉಳಿದುಕೊಂಡರು. ಇಷ್ಟೆಲ್ಲ ಪರಾಕ್ರಮವುಳ್ಳ ಆ ರಾಮ ಮನುಷ್ಯನೇ! ನಿಜವಾಗಿ ಮನುಷ್ಯನೇ ಆಗಿದ್ದರೆ ಅವನಿಗೆ ಇಂಥ ಪರಾಕ್ರಮ ಇರಲು ಸಾಧ್ಯವೇ ? ಇಂದು ಭೂಮಿಯಲ್ಲೇ ಆಗಲಿ, ಆಕಾಶದಲ್ಲೇ ಆಗಲಿ

ಪಾತಾಳದಲ್ಲಾಗಲೀ ರಾಮನನ್ನು ಜಯಿಸಬಲ್ಲ ವೀರನನ್ನು ನಾ ಕಾಣೆ. ಆ ರಾಮ ಯಾರಾಗಿರಬಹುದು ?

**ತಂ ಮನ್ಯೇ ರಾಘವಂ ವೀರಂ ನಾರಾಯಣಮನಾಮಯಮ್ ।**

ಆ ರಾಮ ನಿಜವಾಗಿ ಮನುಷ್ಯನಲ್ಲ. ಆ ವೀರರಾಘವ ಸಾಕ್ಷಾತ್ ನಾರಾಯಣನೇ ಆಗಿರಬೇಕು ಆ ನಾರಾಯಣ "ಅನಾಮಯ". ಶೋಕ, ರೋಗ, ಮೋಹ ಮುಂತಾದ ದೋಷಗಳಿಂದ ದೂರನಾದವನು. ಆ ನಾರಾಯಣನೇ ಈ ವೀರ ರಾಘವ; ಇಲ್ಲವಾದರೆ ಅವನಿಗೆ ಹೇಗೆ ಇಷ್ಟು ವೀರ್ಯ, ಪೌರುಷ ಇದ್ದೀತು ಎಂದು ಕೊಂಡ.

ಈ ಪ್ರಕರಣದಲ್ಲಿ ಜ್ಞಾನಿಗಳು ವ್ಯಾಖ್ಯಾನ ಮಾಡುತ್ತಾ ರಾವಣನ ಮನೋಭೂಮಿಕೆಯನ್ನು ವಿವರಿಸುತ್ತಾರೆ. ರಾವಣ ಅರಿಯದವನಲ್ಲ. ಈಗ ತನ್ನ ಹಿಂದಿನ ವೃತ್ತಾಂತವನ್ನು ಜ್ಞಾಪಿಸಿಕೊಳ್ಳತೊಡಗಿದ. ಹಿಂದೆ ವೈಕುಂಠದಲ್ಲಿ ಶ್ರೀಮನ್ನಾರಾಯಣನ ದ್ವಾರಪಾಲಕರಾಗಿದ್ದರು. ಜಯ ವಿಜಯರು. ಒಮ್ಮೆ ಸನತ್ಕುಮಾರ, ಸನಕ, ಸನಂದನ, ಸನತ್ಸುಜಾತರೇ ಮೊದಲಾದ ಮುನಿಶ್ರೇಷ್ಠರು ನಾರಾಯಣನನ್ನು ದರ್ಶಿಸಲು ಬಂದರು. ಆಗ ಜಯ ವಿಜಯರು ಅವರನ್ನು ಒಳಕ್ಕೆ ಹೋಗದಂತೆ ತಡೆದರು. ಗರ್ವಿಷ್ಠರಾದ ಜಯವಿಜಯರ ದೌರಾತ್ಮ್ಯವನ್ನು ಮುನಿಗಳು ಸಹಿಸದಾದರು. "ಜಯವಿಜಯರೇ ! ವೈಕುಂಠ ಕಳಂಕರಹಿತವಾದ ಪವಿತ್ರವಾದ ತಾಣ ಇಲ್ಲಿ ನೀವು ಅಹಂಕಾರದಿಂದ ಶ್ರೇಷ್ಠರನ್ನೂ, ಪೂಜ್ಯರನ್ನೂ, ಭಗವದ್ದರ್ಶನಾಕಾಂಕ್ಷಿಗಳನ್ನೂ ಅವಮಾನ ಪಡಿಸುತ್ತಿರುವಿರಿ. ಅಹಂಕಾರಿಗಳಿಗೆ ಇದು ಸರಿಯಾದ ಸ್ಥಳವಲ್ಲ. ಗರ್ವಿತರಾದ ನೀವು ಮೋಹವನ್ನು ಹುಟ್ಟಿಸುವ ರಾಕ್ಷಸರಾಗಿ" ಎಂದು ಶಪಿಸಿದರು.

ಮುನಿಗಳ ಕೋಪವನ್ನು ಒಳಗಿನಿಂದ ಬಂದ ನಾರಾಯಣ ಶಮನ ಮಾಡಿದ ಮುನಿಗಳು ನಾರಾಯಣನನ್ನು ದರ್ಶಿಸಿ, ಸ್ತುತಿಸಿ ಮೊರಟು ಹೋದರು.

ನಾರಾಯಣ ತನ್ನ ದ್ವಾರಪಾಲಕರಲ್ಲಿ ಕರುಣೆಯಿಂದ "ಜಯ ವಿಜಯರೇ ! ಮುನಿಶಾಪ ಅವಶ್ಯವಾಗಿ ಅನುಭವಿಸಬೇಕಾದುದೇ. ಇದಕ್ಕೆ ಪರಿಹಾರವೇ ಇಲ್ಲ. ಆದರೆ ನಾನು ಅದಕ್ಕೆ ವಿನಾಯಿತಿ ತೋರಿಸಬಲ್ಲೆ. ರಾಕ್ಷಸರಾಗಿ ನನ್ನ ಮಿತ್ರರಾಗಿ ಏಳು ಜನ್ಮಗಳನ್ನು ಎತ್ತಿ ಪುನಃ ನನ್ನನ್ನು ಸೇರುವಿರಾ ? ಇಲ್ಲವೇ, ರಾಕ್ಷಸರಾಗಿ, ಶತ್ರುಗಳಾಗಿ ಮೂರು ಜನ್ಮಗಳಲ್ಲಿ ನನ್ನನ್ನು ಸೇರುವಿರೋ?" ಎಂದ.

ಜಯ ವಿಜಯರು ನಾರಾಯಣನಿಗೆ ನಮಿಸಿ "ಪ್ರಭು ! ಈ ನಿನ್ನ ದಿವ್ಯ ಸಾನ್ನಿಧ್ಯವನ್ನು ಬಹಳ ಕಾಲದವರೆಗೆ ತ್ಯಜಿಸಿ ಇರಲಾರೆವು, ನಿನಗೆ ಶತ್ರುಗಳಾದರೂ ಸರಿಯೆ, ಮೂರು ಜನ್ಮಗಳಲ್ಲೆ ಪುನಃ ನಿನ್ನ ಬಳಿ ಬರುವಂತೆ ಅನುಗ್ರಹಿಸು. ಅಲ್ಲದೆ ನಮಗೆ ಇನ್ನೊಂದು ಅನುಗ್ರಹವನ್ನು ಮಾಡು. ಮೂರು ಜನ್ಮಗಳಲ್ಲೂ ನಮ್ಮನ್ನು ನೀನೇ ನಿಗ್ರಹಿಸಿ, ಅನುಗ್ರಹಿಸು" ಎಂದು ಪ್ರಾರ್ಥಿಸಿದರು.

ನಾರಾಯಣ ಅವರಿಗೆ ಹಾಗೇ ಆಗಲಿ ಎಂದು ಅಭಯವನ್ನಿತ್ತಿದ್ದ. ಅದರಂತೆಯೇ ದಿತಿಯ ಪುತ್ರರಾಗಿ ಮೊದಲಿನ ಜನ್ಮದಲ್ಲಿ ಹಿರಣ್ಯಾಕ್ಷ–ಹಿರಣ್ಯಕಶಿಪುಗಳಾಗಿ ಹುಟ್ಟಿದರು. ಸಾಕ್ಷಾತ್ ನಾರಾಯಣನೇ ವರಾಹ–ನರಸಿಂಹ ಅವತಾರಗಳನ್ನು ಮಾಡಿ ಅವರನ್ನು ಸಂಹರಿಸಿದ. ರಾವಣ-ಕುಂಭಕರ್ಣರಾಗಿ ಎರಡನೆಯ ಜನ್ಮದಲ್ಲಿ ಬಂದರು. ರಾಮನಾಗಿ ಅವತರಿಸಿ ಆಗ ನಿಗ್ರಹಿಸಿದ. ಮೂರ

ನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ತ್ರರಾಗಿ ಹುಟ್ಟಿದರು. ಮಹಾಭಾರತದಲ್ಲಿ ರಾ ಜ ಸೂ ಯ ಯಾಗದ ಕಾಲದಲ್ಲಿ ಶ್ರೀ ಕೃಷ್ಣ ಚಕ್ರದಿಂದ ಕತ್ತರಿಸಿದಾಗ ಶಿಶುಪಾಲನ ದೇಹದಿಂದ ಹೊರಟ ದಿವ್ಯ ಜ್ಯೋತಿಯೊಂದು ಶ್ರೀ ಕೃಷ್ಣನನ್ನು ಸೇರಿತು. ಆ ಆಶ್ಚರ್ಯವನ್ನು ಕಂಡ ಧರ್ಮಜ ಭೀಷ್ಮರನ್ನು ಪ್ರಶ್ನಿಸಿದಾಗ ಭೀಷ್ಮರು ಅದರ ರಹಸ್ಯವನ್ನು ತಿಳಿಸುತ್ತಾರೆ.

ಇಲ್ಲಿ ರಾವಣ ತನ್ನ ಪೂರ್ವ ವೃತ್ತಾಂತವನ್ನು ನೆನಸಿಕೊಂಡುದರಿಂದಲೇ "ತಂ ಮನ್ಯೇ ರಾಘವಂ ವೀರ ನಾರಾಯಣ ಮನಾಮಯಂ" ಎಂದು ಉದ್ಗರಿಸಿದ. "ಸಾಕ್ಷಾತ್ ನಾರಾ ಯ ಣ ನೇ ರಾಮನಾಗಿ ಬಂದಿದಾನೆ. ಇನ್ನು ಸುಮ್ಮನೆ ಇರಬಾರದು" ಎಂಬ ನಿಶ್ಚಯಕ್ಕೆ ಬಂದ.

ನವದಿ, ರಾಕ್ಷಸರೆಲ್ಲರನ್ನೂ ಲಂಕೆಯನ್ನು ಬಲವಾಗಿ ಕಾಯುವಂತೆ ಆಜ್ಞಾಪಿಸಿದ. "ರಾಕ್ಷಸರೇ, ಅಶೋಕವನವನ್ನು ಜಾಗರೂಕರಾಗಿ ರಕ್ಷಿಸುತ್ತಿರಿ. ಅಲ್ಲಿಗೆ ಯಾರನ್ನೂ ಬಿಡದೆ ಆ ಕಡೆ ಸುಳಿದಾಡುವವರ ಚಲನವಲನದ ಕಡೆಗೆ ಗಮನ ಇಟ್ಟಿರಿ. ಕೋಟೆಯ ದ್ವಾರವನ್ನು ಚೆನ್ನಾಗಿ ರಕ್ಷಿಸಿ" ಎಂದ. ವೀರಪುತ್ರರ ಮರಣದ ದುಃಖದಿಂದ ದೀರ್ಘವಾದ ನಿಟ್ಟುಸಿರನ್ನು ಬಿಡತೊಡಗಿದ.

## ಇಂದ್ರಜಿತ್ತಿನ ಮಾಯಾ ಯುದ್ಧ

ರಾವಣ ದೀನನಾಗಿರುವುದನ್ನು ಕಂಡ, ರಾವಣನ ಮಗ ಇಂದ್ರಜಿತು ತಂದೆಗೆ ನಮಸ್ಕರಿಸಿ "ಅಪ್ಪಾ ! ನೀವೇಕೆ ಇಷ್ಟು ಚಿಂತೆ ಪಡುತ್ತಿರುವಿರಿ ? ಇಂದ್ರನನ್ನೇ ಜಯಿಸಿದ ಪರಾಕ್ರಮಿಯಾದ ನಿಮ್ಮ ಮಗ ಇಂದ್ರಜಿತು ಜೀವಿಸಿರುವವರೆಗೆ ನೀವು ಯೋಚಿಸ ಬೇಕಾದ್ದೇ ಇಲ್ಲ. ಈಗಿಂದೀಗಲೇ ಹೋಗಿ ನಾನು ಆ ರಾಮ ಲಕ್ಷ್ಮಣರನ್ನೂ ಸಮಸ್ತ ವಾನರ ಸೇನೆಯನ್ನು ನಾಶಮಾಡಿ ಬರುತ್ತೇನೆ" ಎಂದ.

ರಾವಣನ ಅನುಮತಿ ಪಡೆದು ಉತ್ಸಾಹದಿಂದ ಇಂದ್ರಜಿತ್, ಪ್ರಕಾಶವಾದ ರಥವನ್ನೇರಿ ರಾಕ್ಷಸರೊಡಗೂಡಿ ಹೊರಟ. ರಾಕ್ಷಸರೂ ಉತ್ಸಾಹದಿಂದ ಇಂದ್ರಜಿತ್ತನ್ನು ಅನುಸರಿಸಿದರು. ಹೊರಡುತ್ತಿದ್ದ ಇಂದ್ರಜಿತ್ತನ್ನು ನೋಡಿ ರಾವಣ, "ಪುತ್ರ, ನೀನು ದೇವತೆಗಳನ್ನು ಜಯಿಸಿ ದುರ್ಜಯನೆನಿಸಿ ಕೊಂಡಿರುವೆ. ನಿಶ್ಚಯವಾಗಿ ನೀನು ರಾಮ ಲಕ್ಷಣರನ್ನು ಕೊಂದೇ ಕೊಲ್ಲುವೆ ಹೋಗಿ ಬಾ" ಎಂದು ಹರಸಿದ.

ರಣಭೂಮಿಯಲ್ಲಿ ಇಂದ್ರಜಿತು ತನ್ನ ರಥದ ಸುತ್ತಲೂ ರಾಕ್ಷಸರನ್ನು ನಿಲ್ಲಿಸಿದ. ಅಲ್ಲೇ ಅಗ್ನಿಯನ್ನು ಸ್ಥಾಪಿಸಿ ಅಭಿಚಾರಿಕ ಹೋಮವನ್ನು ನಡೆಸಿ ಕರಿಯ ಆಡನ್ನು ಆಹುತಿಯನ್ನಾಗಿ ಕೊಟ್ಟ. ಪ್ರಜ್ವಲಿಸುತ್ತಿದ್ದ ಅಗ್ನಿದೇವ ಪ್ರತ್ಯಕ್ಷನಾಗಿ ಬಂದು ಇಂದ್ರಜಿತ್ ಕೊಟ್ಟ ಆಹುತಿಯನ್ನು ಸ್ವೀಕರಿಸಿದ. ಅಗ್ನಿ ಹೊಗೆಯಿಲ್ಲದೆ ದೇದೀಪ್ಯ ಮಾನವಾಗಿ ಜ್ವಲಿಸುತ್ತಿತ್ತು. ಒಡನೆಯೇ ಅಗ್ನಿಯಿಂದ ಪ್ರಕಾಶಮಾನವಾದ ರಥ. ಅಭೇದ್ಯವಾದ ಧನುಸ್ಸು, ಅಕ್ಷಯವಾದ ಬತ್ತಳಿಕೆಗಳು ಬಂದವು. ಇಂದ್ರಜಿತು ಎಲ್ಲವನ್ನೂ ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿದ. ಇಂದ್ರಜಿತ್ ಹಾಗೆ ಅಭಿಮಂತ್ರಿಸುತ್ತಿದ್ದಂತೆ ದಶದಿಶೆಗಳೂ ಕಂಪಿತವಾದುವು. ರಥವನ್ನೇರಿ ಇಂದ್ರಜಿತು ಅದೃಶ್ಯನಾದ. ರಾಕ್ಷಸರನ್ನು ಹುರಿದುಂಬಿಸಿದ. ಅದೃಶ್ಯನಾಗಿದ್ದುಕೊಂಡೇ ವಾನರ ವೀರರನ್ನು ತನ್ನ ಬಾಣಗಳಿಂದ ಘಾಯಗೊಳಿಸಿದ. ಶರಭ, ನಳ, ನೀಲ, ಜಾಂಬವಂತ, ಅಂಗದ, ಸುಗ್ರೀವ ಎಲ್ಲರೂ ಅವನ ಬಾಣಗಳಿಂದ ಘಾಯಗೊಂಡರು.

ಇಂದ್ರಜಿತ್ತಿನ ಮೇಲೆ ವಾನರರು ಸುರಿಸಿದ ಶಿಲಾವರ್ಷಗಳು ವ್ಯರ್ಥವಾದವು. ಬರಬರುತ್ತ ಇಂದ್ರಜಿತ್ತಿನ ಕೈ ಮೇಲಾಯಿತು. ವಾನರರೆಲ್ಲ ಭಯದಿಂದ ರಾಮನನ್ನು ಶರಣು ಹೊಕ್ಕರು. ಆಗ, ಮಹಾಪ್ರತಾಪಿಯಾದ ರಾಮ "ಲಕ್ಷ್ಮಣಾ ! ಇಂದ್ರಜಿತು ಈಗ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸುತ್ತಿದಾನೆ. ಆ ಅಸ್ತ್ರ ಸೃಷ್ಟಿಕರ್ತನಾದ ಸ್ವಯಂಭುವಿನ ಅಸ್ತ್ರ. ಅದು ವ್ಯರ್ಥವಾಗುವಂಥದಲ್ಲ. ಬ್ರಹ್ಮನ ವರವನ್ನು ಸರ್ವಥಾ ಮಾನ್ಯ ಮಾಡಲೇಬೇಕು. ಆದ್ದರಿಂದ, ನಾವು ಈಗ ಈ ಬ್ರಹ್ಮಾಸ್ತ್ರಕ್ಕೆ ಕಟ್ಟು ಬೀಳೋಣ. ನಾವು ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದು ಮಲಗಿದರೆ ಇಂದ್ರಜಿತು ನಮ್ಮನ್ನು ಗೆದ್ದ ಗರ್ವದಿಂದ ಲಂಕೆಗೆ ಹಿಂದಿರುಗುತ್ತಾನೆ" ಎಂದ. ಅದರಂತೆಯೇ ರಾಮಲಕ್ಷ್ಮಣರು ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದು ಮಲಗಿದರು. ವಾನರ ಸೇನೆಯೆಲ್ಲಾ ಬ್ರಹ್ಮಾಸ್ತ್ರದಿಂದ ನಿಶ್ಚೇಷ್ಟಿತವಾಗಿತ್ತು. ರಾಮಲಕ್ಷ್ಮಣರು ಭೂಶಾಯಿಗಳಾದುದನ್ನು ಕಂಡ ಇಂದ್ರಜಿತು ಹರ್ಷದಿಂದ ಲಂಕೆಗೆ ಹಿಂದಿರುಗಿದ. ತಂದೆಯ ಬಳಿ ತನ್ನ ವಿಜಯ ವಾರ್ತೆಯನ್ನು ಸಂತೋಷದಿಂದ ತಿಳಿಸಿದ.

## ಹನುಮಂತ ಸಂಜೀವಿನಿ ಪರ್ವತವನ್ನು ತರುವುದು

ಬ್ರಹ್ಮಾಸ್ತ್ರದಿಂದ ತಾಡಿತರಾಗಿ ರಾಮಲಕ್ಷ್ಮಣರೂ ಸಕಲ ವಾನರ ಪ್ರಮುಖರೂ ಪ್ರಜ್ಞಾಹೀನರಾಗಿ ಬಿದ್ದುದನ್ನು ನೋಡಿದ ವಿಭೀಷಣ. ಆ ಸಮಸ್ತ ಸೇನೆಯಲ್ಲಿ ವಿಭೀಷಣ, ಹನುಮಂತ ಇಬ್ಬರೇ ಅಸ್ತ್ರಕ್ಕೆ ಸಿಕ್ಕುಬೀಳದೆ ಇದ್ದವರು. ರಾತ್ರಿಯಾಗುತ್ತ ಬಂದಿತು. ಆ ರಾತ್ರಿಯಲ್ಲಿ ಬ್ರಹ್ಮಾಸ್ತ್ರಕ್ಕೆ ಸಿಕ್ಕುಬಿದ್ದು ಪ್ರಜ್ಞೆಯೊಂದಿಗಿರುವವರನ್ನು ಆಶ್ವಾಸನೆಗೊಳಿಸುವ ಸಲುವಾಗಿ ವಿಭೀಷಣ ಹನುಮಂತ ಇಬ್ಬರೂ ಕೈಯಲ್ಲಿ ಪಂಜನ್ನು ಹಿಡಿದು ರಣರಂಗವನ್ನು ಶೋಧಿಸುತ್ತಿದ್ದರು.

ಆ ರಣರಂಗದಲ್ಲಿ ಸರ್ವರೂ ಧರಾಶಾಯಿಗಳಾಗಿದ್ದರು. ಪರ್ವತದಂಥ ವಾನರರು ನೆಲದ ಮೇಲೆ ಬಿದ್ದು ಆ ರಣರಂಗದಲ್ಲಿ ಕಾಲಿಡಲು ಸಾಧ್ಯವಿಲ್ಲವಾಗಿತ್ತು. ವಿಭೀಷಣ ಹನುಮಂತ ಇಬ್ಬರೂ ಜಾಂಬವಂತನನ್ನು ಹುಡುಕುತ್ತ ಹೊರಟರು.

ರಣರಂಗದ ಒಂದು ಕಡೆಯಲ್ಲಿ ಬಾಣಗಳಿಂದ ಪೆಟ್ಟು ತಿಂದು ನರಳುತ್ತಾ ಜಾಂಬವ ಬಿದ್ದಿದ್ದ. ಅವನನ್ನು ಕಂಡ ಕೂಡಲೇ ವಿಭೀಷಣ ಅವನ ಬಳಿಗೆ ಓಡಿಬಂದು "ಜಾಂಬವರೇ ಬ್ರಹ್ಮಾಸ್ತ್ರದಿಂದ ನಿಮಗೆ ಪ್ರಜ್ಞೆ ಹೋಗಲಿಲ್ಲವಷ್ಟೆ ? ಕುಶಲವೆ ?" ಎಂದ. ಜಾಂಬವರು "ವಿಭೀಷಣ ! ನಾನು ಬಾಣಗಳಿಂದ ಮುಚ್ಚಲ್ಪಟ್ಟಿದ್ದೇನೆ. ನಾನು ಗಾಯಗೊಂಡಿದೇನೆ. ಕಣ್ಣು ಕಾಣಿಸುತ್ತಿಲ್ಲ ನಿನ್ನ ಧ್ವನಿಯಿಂದ ಗುರುತಿಸುತ್ತಿದೇನೆ. ಅದಿರಲಿ ವಿಭೀಷಣ, ಅಂಜನಾದೇವಿಯ ಸುಪುತ್ರನಾದ ಆಂಜನೇಯ ಕ್ಷೇಮವೆ ? ಅವನು ಕುಶಲವೆ ?" ಎಂದು ವಿಚಾರಿಸಿದರು.

ವಿಭೀಷಣ ಅಚ್ಚರಿಯಿಂದ "ಜಾಂಬವರೆ! ಇದೇನು ! ಆಶ್ಚರ್ಯವಾಗುತ್ತಿದೆ ನಿಮ್ಮ ಮಾತು. ರಾಜಪುತ್ರರಾದ ರಾಮಲಕ್ಷ್ಮಣರನ್ನು ವಿಚಾರಿಸಲಿಲ್ಲ. ಮಹಾರಾಜನಾದ ಸುಗ್ರೀವನ ಕ್ಷೇಮವನ್ನು ಕೇಳಲಿಲ್ಲ. ಆಂಜನೇಯನನ್ನು ವಿಚಾರಿಸುತ್ತಿರುವಿರಿ. ಇದು ನನಗೆ ಆಚ್ಚರಿಯನ್ನುಂಟುಮಾಡಿದೆ" ಎಂದ.

"ವಿಭೀಷಣ, ನಾನು ಆಂಜನೇಯನನ್ನು ವಿಚಾರಿಸಲು ಕಾರಣ ಹೇಳುತ್ತೇನೆ, ಕೇಳು. ವಾಯುಪುತ್ರನಾದ ಆ ಹನುಮ ಒಬ್ಬ ಜೀವಿಸಿದ್ದರೆ ನಾವೆಲ್ಲ ಬದುಕಿದ್ದಂತೆ. ನಾವೆಲ್ಲ ಬದುಕಿ ಆಂಜನೇಯ ಒಬ್ಬ ಜೀವಿಸದೆ ಇದ್ದರೆ ನಾವೆಲ್ಲ ಸತ್ತಂತೆಯೇ ಸರಿ. ಆ ಪುಣ್ಯಾತ್ಮ ಆಂಜನೇಯ ಎಲ್ಲರಿಗೂ

ಜೀವಾಮೃತವನ್ನು ಧಾರೆಯೆರೆಯುವಂಥವನು" ಎಂದು ಆಂಜನೇಯನನ್ನು ಕೊಂಡಾಡತೊಡಗಿದ.

ಇದೆಲ್ಲವನ್ನೂ ಕೇಳುತ್ತಿದ್ದ ಆಂಜನೇಯ ಮುಂದೆ ಬಂದು ಜಾಂಬವರ ಪಾದಗಳನ್ನು ಹಿಡಿದು ನಮಸ್ಕರಿಸಿ ವಿನಯದಿಂದ "ಜಾಂಬವರೆ! ಇದೋ! ನಾನೇ ಹನುಮಂತ; ನಮಸ್ಕರಿಸುತ್ತಿದೇನೆ" ಎಂದ.

ಹನುಮಂತನ ಸ್ಪರ್ಶವನ್ನು ಅನುಭವಿಸಿ ಅವನ ವಾಣಿಯನ್ನು ಕೇಳಿ ಜಾಂಬವನಿಗೆ ಪುನರ್ಜನ್ಮವೇ ಬಂದಂತಾಯಿತು.

"ಹನುಮನ್! ನೀನೀಗ ಮಹತ್ಕಾರ್ಯವನ್ನು ಸಾಧಿಸಬೇಕಾಗಿದೆ. ರಾಜಪುತ್ರರು, ಸಕಲ ವಾನರರೂ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಿದಾರೆ. ನೀನು ಈಗಲೇ ಸಮುದ್ರವನ್ನು ದಾಟಿ ದೂರದಲ್ಲಿ ರುವ ಹಿಮಾಲಯಕ್ಕೆ ಹೋಗಬೇಕು. ಹಿಮಾಲಯದಲ್ಲಿ ಶಿವನ ಆವಾಸಸ್ಥಾನವಾದ ಕೈಲಾಸ ಶಿಖರಕ್ಕೂ, ಈ ಸುವರ್ಣಮಯವಾದ ಋಷಭ ಶಿಖರಕ್ಕೂ ನಡುವೆ ಓಷಧಿ ಪರ್ವತವಿದೆ. ಅದರಲ್ಲಿ ಸಂಧಾನ ಕರಣಿ, ಸುವರ್ಣ ಕರಣಿ, ವಿಶಲ್ಯಕರಣಿ ಮೃತಸಂಜೀವಿನೀ ಎಂಬ ನಾಲ್ಕು ದಿವ್ಯ ಮೂಲಿಕೆಗಳಿವೆ. ನೀನು ಹೋಗಿ ಅವುಗಳನ್ನು ತರಬೇಕು. ಅದರ ಗಾಳಿಯನ್ನು ಆಘ್ರಾಣಿಸಿದರೆ ರಾಮ–ಲಕ್ಷ್ಮಣರೂ, ಸಮಸ್ತ ವಾನರರೂ ಚೇತನವನ್ನು ಮತ್ತೆ ಪಡೆಯುವಂತಾಗುತ್ತಾರೆ. ನೀನು ಶೀಘ್ರವಾಗಿ ಹೋಗಿ ಅವುಗಳನ್ನು ತಾ" ಎಂದ.

ಜಾಂಬವಂತನ ಮಾತಿನಂತೆ ಮಹಾಪರಾಕ್ರಮಿಯಾದ ಹನುಮಂತ ಹಿಮಾಲಯಕ್ಕೆ ಹಾರಲು ಸಿದ್ಧನಾದ. ಬಳಿಯಲ್ಲಿದ್ದ ಪರ್ವತದ ಮೇಲೆ ಹತ್ತಿ ಅದನ್ನು ಒಮ್ಮೆ ಅದುಮಿದ. ಹನುಮಂತನ ಭಾರಕ್ಕೆ ಪರ್ವತ ಒಳಗೇ ಕುಸಿಯಿತು. ಆ ಪರ್ವತದಲ್ಲಿದ್ದ ವೃಕ್ಷಗಳೆಲ್ಲ ನಾಶವಾದವು. ಮಹಾ ಬಲಿಯಾದ ಹನುಮಂತ ಅಲ್ಲಿಂದ ಮಲಯ ಪರ್ವತದ ಮೇಲೆ ಹೋಗಿ ನಿಂತು ತನ್ನ ದೇಹವನ್ನು ಬೆಳೆಸಿದ. ವಿಶಾಲವಾದ ಅವನ ದೇಹ ಎರಡನೆಯ ಪರ್ವತದಂತೆ ಶೋಭಿಸುತ್ತಿತ್ತು.

ತನ್ನ ಬಾಲವನ್ನು ಧ್ವಜದಂತೆ ಮೇಲೆತ್ತಿದ. ಸರ್ಪದಂತೆ ತನ್ನ ತೋಳುಗಳನ್ನು ಮುಂದಕ್ಕೆ ಚಾಚಿದ. ವಾಯುಪುತ್ರನಾದ ಹನುಮಂತ ತಂದೆಯಂತೆಯೇ ವೇಗವಾಗಿ ಹಾರಿ ಸಾಹಸವನ್ನು ಮಾಡಲು ಉಜ್ಜುಗಿಸಿದ ಹಾರುವ ಮುನ್ನ ಸಮುದ್ರಕ್ಕೆ ನಮಸ್ಕರಿಸಿದ. ರಾಮನಿಗೆ ಶಿರಸಾ ಪ್ರಣಾಮ ಮಾಡಿದ. ಜೋರಾಗಿ ಸಿಂಹನಾದ ಮಾಡಿದ. ಅವನ ಸಿಂಹನಾದಕ್ಕೆ ಇಡೀ ಲಂಕೆಯೇ ನಡುಗಿತು. ಬಲವಾಗಿ ಒಮ್ಮೆ ಪರ್ವತವನ್ನು ಊರಿ ಅದುಮಿದ. ಅವನು ಪರ್ವತವನ್ನು ಅದುಮಿದ ವೇಗಕ್ಕೆ ಪರ್ವತದಲ್ಲಿದ್ದ ವೃಕ್ಷಗಳೂ ಧಾತುಗಳೂ ಗಡಗಡ ನಡುಗಿದವು ಲಂಕೆಯ ಕೋಟೆ, ಕೋಟೆಯ ದ್ವಾರ ಕಂಪಿಸಿತು.

ವೇಗವಾಗಿ ಗರುಡನಂತೆ ಹನುಮಂತ ಹಾರಿದ. ಅವನ ವೇಗಕ್ಕೆ ಅನೇಕ ವೃಕ್ಷಗಳು ಅವನನ್ನು ಹಿಂಬಾಲಿಸಿದವು. ಬಹಳ ದೂರ ಹೋಗಿ ಸಮುದ್ರದಲ್ಲಿ ಬಿದ್ದವು. ಸೂರ್ಯಪಥದಲ್ಲಿ ಹನುಮಂತ ಹಾರಿದ. ಅನೇಕ ದೇಶಗಳನ್ನೂ, ವನಗಳನ್ನೂ, ಅರಣ್ಯಗಳನ್ನೂ ನೋಡುತ್ತ ಅತಿ ವೇಗವಾಗಿ ಹಿಮಾಲಯವನ್ನು ಸೇರಿದ. ಹಿಮಾಲಯದ ಕಿರೀಟದಂತೆ ಶೋಭಿಸುತ್ತಿದ್ದ ಕೈಲಾಸ ಶಿಖರವನ್ನು ನೋಡಿದ. ಸುವರ್ಣ ಧಾತುವಿನಿಂದ ಆವೃತವಾದ ಋಷಭ ಪರ್ವತವನ್ನೂ ಕಂಡ. ಅವೆರಡರ ನಡುವೆ ಓಷಧಿ ಪರ್ವತ ಕಂಗೊಳಿಸುತ್ತಿತ್ತು. ಹನುಮಂತ ಓಷಧಿ ಮೂಲಿಕೆಯನ್ನು ಅಲ್ಲಿ ಹುಡುಕತೊಡಗಿದ. ತಮ್ಮನ್ನು ಕೊಂಡೊಯ್ಯಲು ಬಂದ ಹನುಮಂತನನ್ನು ಕಂಡ ಆ ಓಷಧಿ

ಅಭಿಮಾನಿಗಳು ಅದೃಶ್ಯವಾದವು. ಓಷಧಿ ಅದೃಶ್ಯವಾದದ್ದನ್ನು ಕಂಡ ಹನುಮಂತ ಕುಪಿತನಾಗಿ "ಹೇ ನಗರಾಜ! ರಾಮನ ಕಾರ್ಯಕ್ಕೆ ನೀ ಸಹಾಯ ಮಾಡುವುದಿಲ್ಲವೇ? ನಿನ್ನನ್ನು ಈಗಲೇ ವಿದೀರ್ಣಗೊಳಿಸುತ್ತೇನೆ ನೋಡು" ಎನ್ನುತ್ತಾ ಆ ಓಷಧಿಗಳಿದ್ದ ಪರ್ವತವನ್ನೇ ಕಿತ್ತ. ಹನುಮಂತ ಆ ಸಂಜೀವಿನೀ ಪರ್ವತವನ್ನು ಕೈಯಲ್ಲಿ ಕಿತ್ತ ರಭಸಕ್ಕೆ ಹಿಮಾಲಯದ ಅನೇಕ ಶಿಖರಗಳು ಉರುಳಿ ಬಿದ್ದವು

ಕೈಯಲ್ಲಿ ಆ ಸಂಜೀವಿನಿ ಪರ್ವತವನ್ನು ಹಿಡಿದು ಸಂಜೀವರಾಯನೆನಿಸಿದ ಮಾರುತಿ ಹಾರಿದ. ಸೂರ್ಯಪಥದಲ್ಲಿ ಹಾರುತ್ತಿದ್ದ ಅವನು ಎರಡನೆಯ ಸೂರ್ಯನಂತೆ ಪ್ರಕಾಶಿಸುತ್ತಿದ್ದ. ಪರ್ವತವನ್ನು ಕೈಯಲ್ಲಿ ಹಿಡಿದು ಬರುತ್ತಿದ್ದರೆ ಚಕ್ರವನ್ನು ಹಿಡಿದು ಮಹಾವಿಷ್ಣು ಬರುತ್ತಿದ್ದಂತೆ ಇತ್ತು.

ಸಕಲ ವಾನರರಿಗೂ ಹರ್ಷದಾಯಕನಾದ ಮಾರುತಿ ವೇಗವಾಗಿ ವಿಭೀಷಣನಲ್ಲಿಗೆ ಬಂದು ಅವನನ್ನು ಆಲಿಂಗಿಸಿದ. ವಾನರರ ಮಧ್ಯೆ ಆ ಓಷಧಿ ಪರ್ವತವನ್ನಿಟ್ಟ. ಹನುಮಂತ ಆ ಪರ್ವತವನ್ನು ತರುತ್ತಿದ್ದಂತೆಯೇ ಆ ಮೂಲಿಕೆಯ ಮೇಲೆ ಬೀಸಿದ ಗಾಳಿಯನ್ನು ಆಘ್ರಾಣಿಸಿದ ಎಲ್ಲ ವಾನರರೂ ಎಚ್ಚೆತ್ತರು. ರಾಮಲಕ್ಷ್ಮಣರೂ ನಿದ್ದೆಯಿಂದ ಎದ್ದವರಂತೆ ಬಲದಿಂದ ಮೇಲೆದ್ದರು ಅವರ ಉತ್ಸಾಹವು ಇಮ್ಮಡಿಸಿತು. ಅವರೆಗೆ ಮೈಯಲ್ಲಿ ಹೊಕ್ಕಿದ್ದ ಬಾಣಗಳೆಲ್ಲ ಕಳಚಿಬಿದ್ದವು. ಆ ಮೂಲಿಕೆಗಳ ಪ್ರಭಾವದಿಂದ ಗಾಯಗಳೆಲ್ಲ ಮಾಗಿದವು. ಬಿದ್ದಿದ್ದ ಸಮಸ್ತ ವಾನರರರೂ ಪುನಃ ಮೇಲೆದ್ದರು. ಮೊದಲಿಗಿಂತ ಹೆಚ್ಚಾದ ಬಲ, ಪೌರುಷ, ವೀರ್ಯ, ತೇಜಸ್ಸು, ಶಕ್ತಿ ಆ ವಾನರರಲ್ಲಿ ಉಕ್ಕುತ್ತಿತ್ತು.

ಈ ಪ್ರಕರಣದಲ್ಲಿ ಒಂದು ಪ್ರಶ್ನೆ ಸಹಜವಾಗಿ ಏಳುತ್ತದೆ. ಓಷಧಿ ಪರ್ವತದ ಮೂಲಿಕೆಯ ಪ್ರಭಾವದಿಂದ ವಾನರರು ಮಾತ್ರ ಎದ್ದರು ಎಂದರು. ಮೂಲಿಕೆ ಸರ್ವರ ಮೇಲೂ ಸಮನಾದ ಪ್ರಭಾವ ಬೀರುತ್ತದೆ, ಎಂದ ಮೇಲೆ ರಾಕ್ಷಸರೇಕೆ ಏಳಲಿಲ್ಲ? ಎಂಬುದೇ ಆ ಪ್ರಶ್ನೆ. ಇದಕ್ಕೆ ವಾಲ್ಮೀಕಿಯೇ ಸಮಾಧಾನ ಹೇಳಿದಾರೆ.

**ಯದಾ ಪ್ರಭೃತಿ ಲಂಕಾಯಾಂ ಯುಧ್ಯಂತೇ ಹರಿರಾಕ್ಷಸಾಃ ।**
**ತದಾ ಪ್ರಭೃತಿ ಮಾನಾರ್ಥಂ ಆಜ್ಞಯಾ ರಾವಣಸ್ಯ ಚ ॥**
**ಯೇ ಹನ್ಯಂತೇ ರಣೇ ತತ್ರ ರಾಕ್ಷಸಾಃ ಕಪಿಕುಂಜರೈಃ ।**
**ಹತಾ ಹತಾಸ್ತು ಕ್ಷಿಪ್ಯಂತೇ ಸರ್ವ ಏವತು ಸಾಗರೆ ॥**

ವಾನರರಿಗೂ, ರಾಕ್ಷಸರಿಗೂ ಯುದ್ಧ ಪ್ರಾರಂಭವಾದ ಕ್ಷಣದಿಂದ ರಾಕ್ಷಸರು ಹತರಾಗುತ್ತಿದ್ದಂತೆ ಅವರನ್ನು ಸಮುದ್ರದಲ್ಲಿ ಹಾಕುವಂತೆ ರಾವಣನ ಆಜ್ಞೆಯಾಗಿತ್ತು. ಇದರಿಂದ ರಣಭೂಮಿಯಲ್ಲಿ ಒಬ್ಬ ರಾಕ್ಷಸನ ಶವವೂ ಇರದಂತೆ ಆಗಿತ್ತು. ಇದನ್ನು ರಾವಣ ಯುದ್ಧನೀತಿಯಂತೆ ಜಾರಿಗೆ ತಂದಿದ್ದ. ವಾನರರಿಗೆ ತಾವು ರಾಕ್ಷಸರನ್ನು ಕೊಂದ ವಿಷಯ ಅರಿವಾಗಬಾರದು. ಹಾಗೆಯೇ ರಾಕ್ಷಸರೂ ಎದೆಗುಂದಬಾರದು ಎಂದು ರಾವಣ ಮೃತರಾದ ರಾಕ್ಷಸರನ್ನೆಲ್ಲ ಸಮುದ್ರದಲ್ಲಿ ಆಗಾಗಲೇ ಹಾಕಿಬಿಡುವಂತೆ ಅಪ್ಪಣೆ ಮಾಡಿದ್ದ. ಆದ್ದರಿಂದಲೇ ಸಂಜೀವನ ಪರ್ವತದ ಪ್ರಭಾವದಿಂದ ರಾಕ್ಷಸರು ಬದುಕಲಿಲ್ಲ.

ರಾವಣನ ಯುದ್ಧನೀತಿಯನ್ನು ಈಗಿನ ಯುದ್ಧಗಳಲ್ಲೂ ಅನುಸರಿಸುವುದು ಕಂಡುಬರುತ್ತಿದೆ. ಶತ್ರುಪಕ್ಷಕ್ಕೆ ಭಯವನ್ನು ಹುಟ್ಟಿಸಲು ಮತ್ತು ತಮ್ಮ ಪಕ್ಷವನ್ನು ನಿರುತ್ಸಾಹಗೊಳಿಸದಂತೆ ನೋಡಿ

ಕೊಳ್ಳಲು ತಮ್ಮ ಪಕ್ಷದಲ್ಲಿ ಸತ್ತವರ ಸಂಖ್ಯೆಯನ್ನು ಕಡಮೆಯಾಗಿ ಹೇಳುವುದು, ಶತ್ರು ಪಕ್ಷದವರ ಸಾವಿನ ಸಂಖ್ಯೆಯನ್ನು ಹೆಚ್ಚಿಸಿ ಹೇಳುವುದು ರೂಢಿಯಲ್ಲಿದೆ. ಇದನ್ನು ವಾಲ್ಮೀಕಿಯು ರಾಮಾಯಣದಲ್ಲಿ ಆಗಲೇ ನಿರೂಪಿಸಿದ್ದಾರೆ.

ಸಕಲ ವಾನರರೂ, ರಾಮಲಕ್ಷ್ಮಣರೂ ನಿರೋಗಿಗಳಾದ ಮೇಲೆ ಹನುಮಂತ ಆ ಓಷಧಿ ಪರ್ವತವನ್ನು ಪುನಃ ಯಥಾಸ್ಥಾನದಲ್ಲಿ ಇಟ್ಟು ಬಂದ.

## ವಾನರರಿಂದ ಲಂಕಾದಹನ : ವಾನರ–ರಾಕ್ಷಸರ ನಡುವೆ ಘೋರ ಯುದ್ಧ

ಓಷಧಿ ಪರ್ವತವನ್ನು ಯಥಾಸ್ಥಾನದಲ್ಲಿ ಇಟ್ಟು ಬಂದ ಹನುಮಂತನನ್ನು ನೋಡಿ ಸುಗ್ರೀವ "ಹನುಮಂತ ಈಗ ರಾವಣನ ಬಲ ಕ್ಷೀಣಿಸಿದೆ. ಕುಂಭಕರ್ಣನೇ ಮೊದಲಾದ ರಾಕ್ಷಸರು ನಾಶವಾಗಿದ್ದಾರೆ. ರಾತ್ರಿಯಾಗುತ್ತಿದೆ. ಈಗಲೇ ಮುಖ್ಯರಾದ ವಾನರರೊಡನೆ ಹೋಗಿ ಲಂಕೆಯನ್ನು ದಹಿಸು" ಎಂದು ಆಜ್ಞಾಪಿಸಿದ. ಸುಗ್ರೀವನ ಆಜ್ಞೆಯಂತೆ ವಾನರ ಪ್ರಮುಖರು ಕೈಗಳಲ್ಲಿ ಉರಿಯುತ್ತಿರುವ ಪಂಜುಗಳನ್ನು ಹಿಡಿದು ಕೊಂಡು ಲಂಕೆಯ ಕೋಟೆಯನ್ನು ಹತ್ತಿ ಲಂಕೆಯ ಮಹೋನ್ನತವಾದ ಪ್ರಾಸಾದಗಳಿಗೆ ಬೆಂಕಿಯನ್ನು ಹಚ್ಚತೊಡಗಿದರು. ವಾನರರು ಸಿಂಹನಾದ ಮಾಡುತ್ತಾ ಬೆಂಕಿಯನ್ನು ನಾಲ್ಕೂ ಕಡೆಗಳಲ್ಲಿ ಹಚ್ಚಿದರು. ಒಣಗಿದ ಕಟ್ಟಿಗೆಯನ್ನೂ, ಹತ್ತಿಯ ರಾಶಿಯನ್ನೂ ಸುಡುವಂತೆ ಅಗ್ನಿದೇವ ತನ್ನ ಸಪ್ತಜಿಹ್ವೆಗಳಿಂದ ಲಂಕೆಯನ್ನು ಕಬಳಿಸತೊಡಗಿದ ಆ ಅಗ್ನಿಯ ಪ್ರಚಂಡ ಜ್ವಾಲೆ ಪ್ರಳಯಾಗ್ನಿಯಂತೆ ವಿಜೃಂಭಿಸುತ್ತಿತ್ತು. ಅದಕ್ಕೆ ಸಿಕ್ಕಿದ ಲಂಕೆಯ ಎತ್ತರವಾದ ಪ್ರಾಸಾದಗಳು ಭಗ್ನವಾಗಿ ಕೆಳಗೆ ಬೀಳುತ್ತಿದ್ದವು. ತಮ್ಮ ಮನೆಯೊಳಗೆ ಬೆಂಕಿ ಬಿದ್ದಿದ್ದನ್ನು ಕಂಡ ರಾಕ್ಷಸರು ಹಾಹಾಕಾರ ಮಾಡುತ್ತಾ ಹೊರಗೋಡಿದರು. ಎಲ್ಲರೂ ಭಯದಿಂದ ತಲ್ಲಣಿಸಿದರು. ಮುತ್ತು, ರತ್ನ, ಮಣಿ, ಮಾಣಿಕ್ಯ ನಾನಾ ವಿಧವಾದ ಆಯುಧಗಳು, ವಸ್ತ್ರಗಳು, ಭಾಂಡಗಳು ಎಲ್ಲ ಸುಟ್ಟು ಸೀಕರಿಯಾದವು. ರಾಕ್ಷಸರು ಆನೆಗಳನ್ನು ಕುದುರೆಗಳನ್ನು ಬಿಡಿಸಿದುದರಿಂದ ಆನೆಗಳು, ಕುದುರೆಗಳೆಲ್ಲ ಮನಸ್ವೀ ಲಂಕೆಯಲ್ಲಿ ಓಡಾಡಿ ಹಾವಳಿ ಮಾಡ ತೊಡಗಿದವು. ಎಲ್ಲ ಕಡೆಯಲ್ಲೂ ಕೋಲಾಹಲವೇರ್ಪಟ್ಟಿತು. ಪ್ರಾಣ ಉಳಿಸಿ ಕೊಳ್ಳಲು ರಾಕ್ಷಸರು ದ್ವಾರದತ್ತ, ಕೋಟೆಯತ್ತ ಬಂದರೆ ಅಲ್ಲಿ ಯಮ ಸದೃಶರಾಗಿ ವಾನರರು ದ್ವಾರವನ್ನು ಬಂಧಿಸಿ ಅಡ್ಡವಾಗಿ ನಿಂತಿದ್ದರು. ಬರುತ್ತಿದ್ದ ರಾಕ್ಷಸರನ್ನು ಕೊಂದು ಹಾಕುತ್ತಿದ್ದರು. ಅಗ್ನಿ ದೇವನಿಗೆ ಸಂತರ್ಪಣೆ ಆಗುತ್ತಿತ್ತು. ರಾಕ್ಷಸರ ಕೋಲಾಹಲ ಗಗನವನ್ನು ಭೇಧಿಸುತ್ತಿತ್ತು. ಇತ್ತ ರಾಮ ಲಕ್ಷ್ಮಣರು ಧನುಸ್ಸನ್ನು ಹಿಡಿದು ಸಿದ್ಧರಾಗಿದ್ದರು. ರಾಮ ತನ್ನ ಧನುಸ್ಸನ್ನು ಟಂಕಾರ ಮಾಡುತ್ತಿದ್ದ.

ರಾಕ್ಷಸರ ಕೋಲಾಹಲ ವಾನರರ ಸಿಂಹನಾದವನ್ನೂ ಮೀರಿಸಿ ರಾಮನ ಧನುಸ್ಸಿನ ಟಂಕಾರ ಕೇಳಿ ಬರುತ್ತಿತ್ತು. ರಾಮ ತನ್ನ ಅಮೋಘವಾದ ಬಾಣಗಳಿಂದ ಉನ್ನತವಾದ ಲಂಕಾದ್ವಾರವನ್ನು ಕೆಳಗೆ ಕೆಡುಹಿದ. ಎಲ್ಲೆಲ್ಲೂ ರಾಕ್ಷಸರ ಹಾಹಾಕಾರ ಕೇಳಿ ಬರುತ್ತಿತ್ತು. ರಾಮ ಧನುಸ್ಸನ್ನು ಹಿಡಿದು ನಿಂತಿದ್ದರೆ ಕಾಲರುದ್ರ ತ್ರಿಪುರಾಸುರರನ್ನು ಸಂಹರಿಸಲು ವೇದಮಯವಾದ ಧನುಸ್ಸನ್ನು ಹಿಡಿದು ನಿಂತಂತಿತ್ತು.

ಲಂಕೆಯಲ್ಲಿ ಆ ರಾತ್ರಿ ಕಾಳರಾತ್ರಿಯಂತಿತ್ತು. ಗೃಹಗಳೆಲ್ಲ ಭಗ್ನವಾಗುತ್ತಿದ್ದಂತೆ ಅದರಲ್ಲಿಂದ ರಾಕ್ಷಸ ಸ್ತ್ರೀಯರು ಹೊರಬಂದು ರೋದಿಸತೊಡಗಿದರು. ಅವರ ರೋದನ ನೂರಾರು ಮೈಲಿಗಳ ದೂರ ಕೇಳಿಸುತ್ತಿತ್ತು. ಲಂಕೆಗೆ ಲಂಕೆಯೇ ಭಯದಿಂದ ತಲ್ಲಣಿಸುತ್ತಿತ್ತು.

ಇತ್ತ ಸುಗ್ರೀವ ವಾನರ ಪ್ರಮುಖರಿಗೆ ಕಠಿಣವಾದ ಆಜ್ಞೆಯನ್ನು ಹೊರಡಿಸಿದ. ಎಲ್ಲ ವಾನರರೂ ಕೋಟೆಯ ದ್ವಾರವನ್ನು ಬಂಧಿಸಿ ಸಿದ್ಧರಾಗಿ ನಿಲ್ಲುವಂತೆ ಆಜ್ಞಾಪಿಸಿದ. ಅನಂತರ ಸಮಸ್ತ ವಾನರರೂ ನಿಂತರು.

ರಾವಣ ಇದೆಲ್ಲವನ್ನೂ ಗಮನಿಸಿ ಅತ್ಯಂತ ಕುಪಿತನಾದ. ಆ ಕ್ಷಣವಲ್ಲಿ ಅವನು ಕುಂಭಕರ್ಣನ ಮಕ್ಕಳಾದ ಕುಂಭ ನಿಕುಂಭರನ್ನು ಯುದ್ಧಕ್ಕೆ ಹೋಗುವಂತೆ ಕಳುಹಿಸಿದ. ಅವರ ಸಹಾಯಕ್ಕೆ ಯೂಪಾಕ್ಷ, ಶೋಣಿತಾಕ್ಷ, ಪ್ರಜಂಘ ಮತ್ತು ಕಂಪನ ಎಂಬ ನಾಲ್ವರು ಮಹಾ ರಾಕ್ಷಸರು ಸೈನ್ಯ ಸಮೇತರಾಗಿ ಹೊರಟರು. ರಾಕ್ಷಸರ ಪಾಲಿಗೆ ಆ ರಾತ್ರಿ ಕಾಳರಾತ್ರಿಯಾಗಿತ್ತು.

ರಾಕ್ಷಸರಿಗೂ, ವಾನರರಿಗೂ ಘೋರವಾದ ಯುದ್ಧ ಕೈಗಟ್ಟಿತು. ಎಲ್ಲೆಲ್ಲೂ ಹೊಡಿ ! ಕೊಲ್ಲು ! ತಿವಿ ! ಎಂಬ ಭಯಂಕರವಾದ ಶಬ್ದ ಕೇಳಿ ಬರುತ್ತಿತ್ತು. ವಾನರರು, ರಾಕ್ಷಸರು ಪರಸ್ಪರ ಜಯಾಭಿಲಾಷಿಗಳಾಗಿ ಹೋರಾಡುತ್ತಿದ್ದರು.

## ವಾನರರಿಂದ ರಾಕ್ಷಸರ ಅಂತ್ಯ

ರಾವಣನಿಂದ ಆಜ್ಞಾಪ್ತರಾದ ಕಂಪನ, ಯೂಪಾಕ್ಷ, ಪ್ರಜಂಘ, ಶೋಣಿತಾಕ್ಷ ಈ ನಾಲ್ವರೂ ವಾನರರ ಮೇಲೆ ನುಗ್ಗಿದರು, ವೀರನಾದ ಅಂಗದ ಕಂಪನನನ್ನು ಇದಿರಿಸಿದ. ಕಂಪನನ ಮೇಲೆ ದೊಡ್ಡ ವೃಕ್ಷವನ್ನು ಬೀಸಿ ಒಗೆದ. ಆ ಪ್ರಹಾರಕ್ಕೆ ಕಂಪನ ಕಂಪಿಸುತ್ತಾ ಕೆಳಗೆ ಬಿದ್ದು ಅಸುವನ್ನು ನೀಗಿದ. ಕಂಪನ ಅಸುವನ್ನು ನೀಗಿದುದನ್ನು ಕಂಡ ಶೋಣಿತಾಕ್ಷ ಖಡ್ಗವನ್ನು ಝಳಪಿಸುತ್ತಾ ಅಂಗದನಿಗೆ ಎದುರಾದ. ಅಂಗದ ತನ್ನ ಬಲದಿಂದ ಅವನ ರಥವನ್ನೂ, ಸಾರಥಿಯನ್ನೂ ನಾಶ ಮಾಡಿದ. ವಿಚಾರಿಸದೆಯೇ ಅಂಗದನತ್ತ ಕತ್ತಿಯನ್ನು ಹಿಡಿದು ಶೋಣಿತಾಕ್ಷ ನುಗ್ಗಿದ. ಆಗ ಮಹಾವೀರನಾದ ಅಂಗದ ಹಾರಿ ಬಂದು ಶೋಣಿತಾಕ್ಷನ ಕೈಯಿಂದ ಕತ್ತಿಯನ್ನು ಕಿತ್ತುಕೊಂಡು ಅದರಿಂದಲೇ ಅವನನ್ನು ಘಾತಿಸಿದ.

ಅಂಗದನ ಖಡ್ಗ ಪ್ರಹಾರದಿಂದ ಶೋಣಿತಾಕ್ಷ ಕೆಳಗೆ ಬಿದ್ದ. ಅದನ್ನು ಕಂಡ ಯೂಪಾಕ್ಷ, ಪ್ರಜಂಘರು ಅಂಗದನ ಮೇಲೇರಿ ಬಂದರು. ಆ ಇಬ್ಬರು ರಾಕ್ಷಸರ ನಡುವೆ ಅಂಗದ ಎರಡು ವಿಶಾಖಾ ನಕ್ಷತ್ರಗಳ ಮಧ್ಯದಲ್ಲಿ ಶೋಭಿಸುತ್ತಿರುವ ಚಂದ್ರನಂತೆ ಇದ್ದ.

ಅಷ್ಟರಲ್ಲಿ ಮೂರ್ಛಿತನಾಗಿದ್ದ ಶೋಣಿತಾಕ್ಷನೂ ಎಚ್ಚೆತ್ತು ಅವರನ್ನು ಕೂಡಿಕೊಂಡ. ಅಂಗದನ ಮೇಲೆ ಮೂವರು ರಾಕ್ಷಸರೂ ಮೇಲೇರಿ ಬರುತ್ತಿದ್ದುದನ್ನು ಗಮನಿಸಿದ ಮೈಂದದ್ವಿವಿಧರು ಅಂಗದನ ಸಹಾಯಕ್ಕೆ ಬಂದರು. ಮೂವರೂ ರಾಕ್ಷಸರೊಡನೆ ಹೋರಾಡತೊಡಗಿದರು, ರಾಕ್ಷಸ ವಾನರರ ಈ ಘೋರವಾದ ಯುದ್ಧ ರೋಮಹರ್ಷಣವನ್ನುಂಟು ಮಾಡುತ್ತಿತ್ತು.

ಮೈಂದ, ದ್ವಿವಿಧ, ಅಂಗದರು ಕ್ರಮವಾಗಿ ಯೂಪಾಕ್ಷ, ಶೋಣಿತಾಕ್ಷ, ಪ್ರಜಂಘರ ಮೇಲೆ ಶಿಲ, ಶೈಲ ವೃಕ್ಷಗಳ ಮಳೆಯನ್ನೇ ಸುರಿಸಿದರು. ಆದರೆ ಅವೆಲ್ಲವನ್ನೂ ಅವರು ನಾಶಮಾಡುತ್ತಾ ಬಂದರು. ನೋಡ ನೋಡುತ್ತಿದ್ದಂತೆ ಪ್ರಜಂಘ ಅಂಗದನ ಮೇಲೆ ನುಗ್ಗಿ ಬಂದ. ಅಂಗದನ ಪೆಟ್ಟಿಗೆ ಪ್ರಜಂಘನ ಕೈಲಿದ್ದ ಒನಕೆ ಕೆಳಗೆ ಬಿತ್ತು. ಆಗ ಕುಪಿತನಾದ ಪ್ರಜಂಘ ಮುಷ್ಟಿಯಿಂದ ಅಂಗದನನ್ನು ಘಾತಿಸಿದ. ಸ್ವಲ್ಪ ಹೊತ್ತು ಅಂಗದ ವಿಚಲಿತನಾದ. ಪುನಃ ಮುಷ್ಟಿಯನ್ನು ಬಿಗಿಹಿಡಿದು ಬಲವಾಗಿ ಪ್ರಜಂಘನನ್ನು ಪ್ರಹರಿಸಿದ. ಅವನ ಏಟಿಗೆ ಪ್ರಜಂಘ ಕೆಳಗೆ ಬಿದ್ದು ಗತಪ್ರಾಣನಾದ.

ತನ್ನ ಚಿಕ್ಕಪ್ಪ ಮರಣವನ್ನಪ್ಪಿದ್ದನ್ನು ಕಂಡ ಯೂಪಾಕ್ಷ ಸಂಕಟದಿಂದ ಕೈಯಲ್ಲಿ ಖಡ್ಗವನ್ನು ಹಿಡಿದು ನುಗ್ಗಿದ. ಅವನನ್ನು ದ್ವಿವಿಧ ತಡೆದು ಕೋಪದಿಂದ ಪ್ರಹರಿಸಿದ. ಸೋದರನು ತಾಡಿತನಾದುದನ್ನು ಕಂಡ ಶೋಣಿತಾಕ್ಷ ದ್ವಿವಿಧನ ಎದೆಗೆ ಗುದ್ದಿದ. ದ್ವಿವಿಧ ಕೆಳಗೆ ಬಿದ್ದ. ಆದರೆ ಶೋಣಿತಾಕ್ಷ ಮತ್ತೆ ಗದೆಯನ್ನು ಎತ್ತಿಕೊಳ್ಳುವುದರೊಳಗಾಗಿ ಎದ್ದು ಅವನಿಂದ ಆ ಗದೆಯನ್ನು ಕಿತ್ತುಕೊಂಡ. ಈ ಮಧ್ಯದಲ್ಲಿ ಮೈಂದ ಸೋದರನ ಸಹಾಯಕ್ಕೆ ಬಂದ. ಯೂಪಾಕ್ಷನನ್ನು ಬಲವಾಗಿ ಪ್ರಹರಿಸಿದ. ಪರಾಕ್ರಮಿಯಾದ ದ್ವಿವಿಧ ಶೋಣಿತಾಕ್ಷನ ಮುಖವನ್ನು ಉಗುರಿನಿಂದ ಪರಚಿ ಅವನನ್ನು ಕೆಳಗೆ ಹಾಕಿ ಉಜ್ಜಿಬಿಟ್ಟ. ಶೋಣಿತಾಕ್ಷ ಸತ್ತ.

ಅನಂತರ ಮೈಂದ ತನ್ನ ಎರಡು ತೋಳುಗಳಿಂದ ಯೂಪಾಕ್ಷನನ್ನು ಅವನ ಪ್ರಾಣ ಹೋಗುವವರೆಗೆ ಅಮುಕಿದ.

ಈ ಪ್ರಮುಖ ವೀರರನ್ನು ವಾನರರು ಕೊಂದದ್ದರಿಂದ ರಾಕ್ಷಸರು ಭಯಭ್ರಾಂತರಾದರು. ಅವರೆಲ್ಲ ಕುಂಭಕರ್ಣನ ಪುತ್ರನಲ್ಲಿಗೆ ಹೋಗಿ ರಕ್ಷಣೆಯನ್ನು ಬೇಡಿದರು. ರಾಕ್ಷಸರಿಗೆ ಅಭಯವನ್ನು ನೀಡಿ ಕುಂಭಕರ್ಣನ ಮಗನಾದ ಕುಂಭ ಯುದ್ಧಕ್ಕೆ ಸಿದ್ಧನಾದ. ತನ್ನ ತೀಕ್ಷ್ಣವಾದ ಬಾಣಗಳಿಂದ ದ್ವಿವಿಧನನ್ನು ಕೆಳಗೆ ಕೆಡಹಿದ. ಮೈಂದನನ್ನೂ ನೋಯಿಸಿ ಭೂಮಿಗೆ ಉರುಳಿಸಿದ. ಮೈಂದ, ದ್ವಿವಿದರು ಕೆಳಗೆ ಉರುಳಿದ್ದನ್ನು ಕಂಡು ಕೋಪದಿಂದ ಅಂಗದ ಕುಂಭನನ್ನು ಇದಿರಿಸಿದ. ಕುಂಭನ ಮೇಲೆ ಅಶ್ವಕರ್ಣ, ಸಾಲ ಮುಂತಾದ ವೃಕ್ಷಗಳನ್ನು ಪ್ರಹರಿಸಿದ. ಆದರೆ ಪರಾಕ್ರಮಿಯಾದ ಕುಂಭ ತನ್ನ ಬಾಣಗಳಿಂದ ಅವೆಲ್ಲವನ್ನೂ ಚೂರ್ಣಗೊಳಿಸಿ ಅಂಗದನ ಎದೆಗೆ ಬಾಣಗಳನ್ನು ಒಗೆದ. ಅಂಗದ ಮುಷ್ಟಿಯಿಂದ ಕುಂಭನನ್ನು ಘಾತಿಸಿದ. ಇದರಿಂದ ಮತ್ತೂ ಕುಪಿತನಾದ ಕುಂಭ ಎರಡು ಬಾಣಗಳಿಂದ ಅಂಗದನ ಹುಬ್ಬುಗಳಿಗೆ ಹೊಡೆದ. ಅಂಗದ ಕಣ್ಣುಗಳನ್ನು ಮುಚ್ಚಿಕೊಂಡ. ಬಾಣದ ವೇದನೆ ಬಹಳವಾಗಿತ್ತು. ಆದರೂ ಅವನು ಸುಮ್ಮನಿರದೆ ಒಂದು ಮಹಾ ಸಾಲ ವೃಕ್ಷವನ್ನು ಕಿತ್ತುಕೊಂಡು ಕುಂಭನನ್ನು ಘಾತಿಸಿದ. ಆದರೆ ಕುಂಭ ಆ ಸಾಲವೃಕ್ಷವನ್ನು ಮಧ್ಯದಲ್ಲೇ ಚೂರು-ಚೂರು ಮಾಡಿದ. ಅಂಗದನನ್ನು ತೀಕ್ಷ್ಣವಾಗಿ ಬಾಣಗಳಿಂದ ಘಾತಿಸಿದ. ಅಂಗದ ಮೂರ್ಛಿತನಾಗಿ ನೆಲಕ್ಕುರುಳಿದ. ಅಂಗದ ಕೆಳಗೆ ಬಿದ್ದುದನ್ನು ಕಂಡು ವಾನರಶ್ರೇಷ್ಠರು ಶ್ರೀ ರಾಮನಿಗೆ ಸುದ್ದಿಯನ್ನು ತಿಳಿಸಿದರು.

ಶ್ರೀರಾಮ ಜಾಂಬವಂತನೇ ಮೊದಲಾದ ವಾನರಪ್ರಮುಖರನ್ನು ಅಂಗದನ ಸಹಾಯಕ್ಕೆ ಕಳುಹಿಸಿದ. ಜಾಂಬವಂತ, ಸುಷೇಣ, ವೇಗದರ್ಶಿ ಈ ವಾನರಪ್ರಮುಖರು ಕುಂಭನ ಮೇಲೇರಿ ಬಂದರು. ಆದರೆ ಮಹಾ ಪರಾಕ್ರಮಿಯಾದ ಕುಂಭ ಅವರೆಲ್ಲರನ್ನೂ ತನ್ನ ಬಾಣಗಳಿಂದ ಪ್ರಹರಿಸಿ ನುಗ್ಗುತ್ತಿದ್ದ. ಅಪಾರವಾದ ಜಲ ಪ್ರವಾಹವನ್ನು ಪರ್ವತ ತಡೆಯುವಂತೆ ಕುಂಭ ನುಗ್ಗಿ ಬರುತ್ತಿದ್ದ ವಾನರರನ್ನು ತನ್ನ ಬಾಣಗಳಿಂದ ತಡೆಯುತ್ತಿದ್ದ.

ಕುಂಭನ ವೀರ್ಯವನ್ನು ಕಂಡ ವಾನರರಾಜ ಸುಗ್ರೀವ ತಾನೇ ಕುಂಭನಿಗೆ ಇದಿರಾದ. "ಕುಂಭಕರ್ಣ ಕುಮಾರ ! ನೀನು ನಿಜವಾಗಿ ಮಹಾ ಪರಾಕ್ರಮಿಯೇ ಸರಿ. ನಿನ್ನ ತಂದೆಯಂತೆ ನೀನೂ ಶಕ್ತಿಶಾಲಿಯಾಗಿರುವಿ. ಅನೇಕ ವಾನರ ಪ್ರಮುಖರನ್ನು ಕೆಡಹಿರುವಿ. ನಿನ್ನ ವೀರ್ಯ ನಿಜಕ್ಕೂ ಶ್ಲಾಘನೀಯವೇ ಸರಿ. ನೀನು ಮಹಾ ಪರಾಕ್ರಮಿಯೇನೋ ನಿಜ. ಆದರೆ, ನಿನ್ನ ಪರಾಕ್ರಮ ನನ್ನ ಮುಂದೆ ಸಾಗದು. ಇದುವರೆಗೆ ನಿನ್ನನ್ನು ಕೊಲ್ಲದೆ ಬಿಡಲು ಕಾರಣ ಹೇಳುತ್ತೇನೆ ಕೇಳು.

ಕುಂಭನು ವಾನರ ಪ್ರಮುಖರೊಡನೆ ಹೋರಾಡಿ ಆಯಾಸಪಟ್ಟಿದ್ದ. ಆಗ, ಸುಗ್ರೀವ ಅವನನ್ನು ಕೊಂದ ಎಂಬ ಅಪವಾದಕ್ಕೆ ನಾನು ಗುರಿಯಾಗಬಾರದು ಎಂದು ಇದುವರೆಗೆ ಸುಮ್ಮನಿದ್ದೆ. ರಾಕ್ಷಸ, ಸ್ವಲ್ಪ ವಿಶ್ರಾಂತಿ ಪಡೆ. ಆ ಮೇಲೆ ನನ್ನ ಬಲವನ್ನು ನೋಡು ಎಂದ.

ಸುಗ್ರೀವನ ಮಾತುಗಳನ್ನು ಕೇಳಿದ ಕುಂಭ ಕೋಪದಿಂದ ಕುದಿಯತೊಡಗಿದ. ಸುಗ್ರೀವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದ. ಸುಗ್ರೀವ ಥಂಗನೆ ಹಾರಿ ಕುಂಭನ ರಥದ ಮೇಲೆ ನಿಂತ, ಸುಗ್ರೀವನ ಭಾರಕ್ಕೆ, ಹಾರಿದ ವೇಗಕ್ಕೆ ಆ ರಥ ಚೂರಾಯಿತು. ಕುಂಬ ಹಿಡಿದಿದ್ದ ಧನುಸ್ಸನ್ನು ಮುರಿದು ಹಾಕಿದ ಸುಗ್ರೀವ. ಕುಂಭ ಮುಷ್ಟಿಯಿಂದ ಸುಗ್ರೀವನನ್ನು ಘಾತಿಸಿದ. ಸುಗ್ರೀವ ಅನಾಯಾಸವಾಗಿ ಕುಂಭನನ್ನು ಎತ್ತಿ ಸಮುದ್ರಕ್ಕೆ ಬೀಸಿ ಒಗೆದ, ಪರ್ವತಾಕಾರನಾದ ಕುಂಭ ಸಮುದ್ರದ ಕೆಳಗೆ ಹೋಗಿ ಬಿದ್ದ. ಅವನು ಬಿದ್ದ ವೇಗಕ್ಕೆ ಸಮುದ್ರ ಎಲ್ಲೆಯನ್ನು ಮೀರಿ ಬಂದಿತು. ಪರ್ವತಾಕಾರದ ಅಲೆಗಳು ಏಳತೊಡಗಿದವು. ಪ್ರಳಯ ಕಾಲದಂತೆ ಸಮುದ್ರ ಭೋರ್ಗರೆಯತೊಡಗಿತು.

ಸಮುದ್ರದಿಂದ ಮೇಲೆದ್ದು ಬಂದ ಕುಂಭ ಮುಷ್ಟಿಯಿಂದ ಸುಗ್ರೀವನನ್ನು ಬಲವಾಗಿ ಹೊಡೆದ. ಅವನ ಪ್ರಹಾರಕ್ಕೆ ಸುಗ್ರೀವ ಸ್ವಲ್ಪಕಾಲ ವಿಚಲಿತನಾದ. ಮತ್ತೆ ಅವನು ಸಾವರಿಸಿಕೊಂಡು ತನ್ನ ಬಲವಾದ ಮುಷ್ಟಿಯಿಂದ ಕುಂಭನ ಎದೆಗೆ ಗುದ್ದಿದ. ಕುಂಭ ಎದೆಯೊಡೆದು ಕೆಳಗೆ ಬಿದ್ದ ಅಸುವನ್ನು ನೀಗಿದ. ಎರಡನೆಯ ಕುಂಭಕರ್ಣನಂತೆ ಕಾದಿದ ಕುಂಭ ಸತ್ತದ್ದನ್ನು ಕಂಡು ವಾನರರೆಲ್ಲ ಸಂತೋಷಪಟ್ಟರು. ರಾಕ್ಷಸರು ಭೀತರಾದರು.

ಸೋದರನಾದ ಕುಂಭನ ಮರಣವನ್ನು ನೋಡಿದ ನಿಕುಂಭ ಭಯಂಕರವಾದ ಪರಿಘಾಯುಧವನ್ನು ತಿರುಗಿಸುತ್ತಾ ಮುನ್ನುಗ್ಗಿದ. ಮಂದರ ಪರ್ವತದಂತೆ ಭಾರವಾದ ಆ ಪರಿಘಾಯುಧವನ್ನು ತಿರುಗಿಸುತ್ತಾ ಆ ನಿಕುಂಭ ಪ್ರಳಯಾಗ್ನಿಯಂತೆ ಜ್ವಲಿಸುತ್ತಿದ್ದ. ಆ ಪರಿಘ ಯಮದಂಡದಂತೆ ಇತ್ತು. ನಿಕುಂಭ ಧರಿಸಿದ್ದ ಆಭರಣಗಳು ಹಿಡಿದಿದ್ದ ಪರಿಘದ ಕಾಂತಿಯೇ ಅಗ್ನಿಯ ಪ್ರಭೆಯಂತೆ ಇತ್ತು. ನಿಕುಂಭನ ಕ್ರೋಧವೇ ಕಟ್ಟಿಗೆಯಂತಿತ್ತು. ಕ್ರೋಧವೆಂಬ ಕಟ್ಟಿಗೆಯಿಂದ ಉರಿಯುತ್ತಿದ್ದ, ನಿಕುಂಭನೆಂಬ ಪ್ರಳಯಾಗ್ನಿ. ಆ ಅಗ್ನಿ ವ್ಯಾಪಿಸುತ್ತ ಬಂದಂತೆ ಎಲ್ಲ ವಾನರರೂ ಭಯದಿಂದ ಓಡಿದರು. ಹನುಮಂತ ಮಾತ್ರ ಧೈರ್ಯದಿಂದ ತನ್ನ ವಜ್ರಸದೃಶವಾದ ಎದೆಯನ್ನು ಚಾಚಿದ ನಿಕುಂಭನತ್ತ. ಪರಿಘವನ್ನು ವೇಗವಾಗಿ ತಿರುಗಿಸುತ್ತಾ ಬಂದ ನಿಕುಂಭ ಪರಿಘದಿಂದ ಹನುಮಂತನ ಎದೆಯನ್ನು ಘಾತಿಸಿದ. ಅದರಿಂದ ಆ ಭಾರವಾದ ಪರಿಘ ಒಡೆದು ಚೂರಾಯಿತೇ ವಿನಾ ಹನುಮಂತ ಮಾತ್ರ ವಿಚಲಿತನಾಗದೆ ಹಾಗೆಯೇ ನಿಂತಿದ್ದ, ಭೂಕಂಪವಾದಾಗಲೂ ದೊಡ್ಡ ಪರ್ವತ ಹಾಗೆಯೇ ಸ್ಥಿರವಾಗಿ ನಿಲ್ಲುವಂತೆ.

ಪರಿಘವು ವಿದೀರ್ಣವಾದದ್ದನ್ನು ಕಂಡು ಕೋಪದಿಂದ ನಿಕುಂಭ ಹನುಮಂತನನ್ನು ಮುಷ್ಟಿಯಿಂದ ಘಾತಿಸಿದ. ಆ ಪ್ರಹಾರಕ್ಕೆ ಸ್ವಲ್ಪ ವಿಚಲಿತನಾದ ಹನುಮಂತ ಆಗ. ನಿಕುಂಭ ಮುಂದೆ ನುಗ್ಗಿ ಪರಿಘಸದೃಶವಾದ ತನ್ನ ತೋಳುಗಳಿಂದ ಹನುಮಂತನನ್ನು ಹಿಡಿದ

ಮಹಾವೀರನಾದ ಹನುಮಂತನನ್ನು ನಿಕುಂಭ ಹಿಡಿದಿದ್ದನ್ನು ಕಂಡ ರಾಕ್ಷಸರು ಬಹಳ ಸಂತೋಷದಿಂದ ಹರ್ಷಧ್ವನಿ ಮಾಡಿದರು. ಹನುಮಂತ ನಿಕುಂಭನ ತೋಳಿನಿಂದ ಬಿಡಿಸಿಕೊಂಡು ಬಲವಾಗಿ ಮುಷ್ಟಿಯಿಂದ ಅವನ ಎದೆಯನ್ನು ಗುದ್ದಿದ. ವಿಹ್ವಲನಾಗಿ ನಿಕುಂಭ ಕೆಳಗೆ ಬಿದ್ದ. ಬಿದ್ದ ನಿಕುಂಭನ ಎದೆಯಮೇಲೆ ಹನುಮಂತ ಕುಳಿತ. ಭೂಮಿಯಲ್ಲಿ ಅವನನ್ನು ತೀಡಿದ. ಎದೆಯ ಮೇಲೆ ಕುಳಿತು ನಿಕುಂಭನ ತಲೆಯನ್ನು ತಿರಿಚಿ ದೇಹದಿಂದ ಬೇರ್ಪಡಿಸಿದ. ನಿಕುಂಭ ಹನುಮಂತ

ನಿಂದ ಹತನಾದವನ್ನು ನೋಡಿ ರಾಕ್ಷಸರೆಲ್ಲ ಭಯದಿಂದ ಲಂಕೆಯತ್ತ ಓಡಿದರು. ವಾನರರೆಲ್ಲ ಹರ್ಷ ದಿಂದ ಹನುಮಂತನನ್ನು ಸುತ್ತುವರಿದು ಸಿಂಹನಾದ ಮಾಡಿದರು.

## ಶ್ರೀರಾಮನಿಂದ ಮಕರಾಕ್ಷನ ವಧ

ಕುಂಭ ನಿಕುಂಭರು ಗತಪ್ರಾಣರಾದ ವಾರ್ತೆಯನ್ನು ಕೇಳಿದ ರಾವಣ ಕೋಪದಿಂದ ಕುದಿಯ ತೊಡಗಿದ. ಶೋಕ, ಮೋಹ, ಕ್ರೋಧ ಇವುಗಳಿಂದ ರಾವಣನ ಚಿತ್ತ ಭ್ರಾಂತವಾಗಿತ್ತು. ಆವನು ಒಡನೆ ಖರನ ಮಗನಾದ ಮಕರಾಕ್ಷನನ್ನು ಕರೆದು, "ವತ್ಸ! ನೀನು ಸೈನ್ಯದೊಂದಿಗೆ ಹೋಗಿ ಆ ರಾಮಲಕ್ಷ್ಮಣರನ್ನು ಕೊಂದು ಬಾ" ಎಂದು ಕಳುಹಿಸಿದ. ಮಕರಾಕ್ಷ "ಹಾಗೆಯೇ ಆಗಲಿ" ಎಂದು ಸರ್ವಸಿದ್ಧತೆಗಳೊಡನೆ ಹೊರಟ.

ಮಕರಾಕ್ಷ ರಾಕ್ಷಸರನ್ನು ಕುರಿತು "ರಾಕ್ಷಸರೆ! ರಾವಣ ನನಗೆ ರಾಮ ಲಕ್ಷ್ಮಣರನ್ನು ಕೊಲ್ಲು ವಂತೆ ಆಜ್ಞಾಪಿಸಿದ್ದಾನೆ. ಅದರಂತೆ ರಾವಣನಿಗೆ ಪ್ರಿಯವನ್ನುಂಟು ಮಾಡಲು ನಾನು ಹೋಗು ತ್ತಿದ್ದೇನೆ. ನೀವೆಲ್ಲ ನನ್ನ ಮುಂಭಾಗದಲ್ಲಿ ನಿಂತು ಸಹಾಯಮಾಡಿರಿ" ಎಂದ.

ಅದರಂತೆ ಪರ್ವತಾಕಾರರಾದ, ವಿರೂಪರಾದ ಅನೇಕ ರಾಕ್ಷಸರು ಮಕರಾಕ್ಷನಿಗೆ ಸಹಾ ಯಕರಾಗಿ ಹೊರಟರು. ಅವರಲ್ಲಿ ಕೆಲವರು ಮೇಘದಂತೆ, ಕೆಲವರು ಕೋಣದಂತೆ, ಕೆಲವರು ಆನೆಯಂತೆ ಕಪ್ಪಾಗಿದ್ದರೆ ಆ ಮಹಾವೀರ್ಯವುಳ್ಳ ರಾಕ್ಷಸರು ಮಕರಾಕ್ಷನನ್ನು ಅನುಸರಿಸಿ ಹೊರಟರು. ದಿವ್ಯವಾದ ರಥವನ್ನು ಏರಿ ಹೊರಟ ಮಕರಾಕ್ಷ. ದಾರಿಯಲ್ಲಿ ಆತನ ಕುದುರೆಗಳು ಮುಗ್ಗರಿಸಿದವು. ಸಾರಥಿಯ ಕೈಯಿಂದ ಹಠಾತ್ತಾಗಿ ಚಾಟಿ ಕೆಳಗೆ ಬಿದ್ದಿತು. ರಥ ನೆಲಕ್ಕೆ ಕುಸಿಯಿತು. ಆದರೂ, ಮಕರಾಕ್ಷ ಯಾವುದನ್ನೂ ಲಕ್ಷಿಸದೆ ಮುಂದೆ ನುಗ್ಗಿದ.

ರಾಕ್ಷಸರೆಲ್ಲ ಮಹೋತ್ಸಾಹದಿಂದ ವಾನರರನ್ನು ಕೊಲ್ಲುತ್ತ ಮುಂದೆ ನುಗ್ಗಿ ಬರುತ್ತಿದ್ದರು. ಇದನ್ನು ನೋಡಿದ ರಾಮ ತನ್ನ ಅಮೋಘವಾದ ಬಾಣಗಳಿಂದ ರಾಕ್ಷಸರನ್ನು ತಡೆದ. ಆಗ, ಮಕರಾಕ್ಷ ರಾಮನನ್ನು ಕುರಿತು "ರಾಮಾ! ನಿನ್ನೊಡನೆ ಯುದ್ಧಮಾಡಲು ಸಮಯವನ್ನು ನಿರೀಕ್ಷಿಸುತ್ತಿದ್ದೆ. ದಂಡಕಾರಣ್ಯದಲ್ಲಿ ನನ್ನ ತಂದೆಯಾದ ಖರನನ್ನು ಕೊಂದಾಗಿನಿಂದ ನಿನ್ನನ್ನು ಕೊಲ್ಲಬೇಕು ಎಂಬ ವಾಂಛೆ ನನಗಿತ್ತು. ಇಂದು ಅದನ್ನು ಸಫಲಗೊಳಿಸಿಕೊಳ್ಳುತ್ತೇನೆ. ರಾಘವ! ನನ್ನ ಅಮೋಘವಾದ ಬಾಣಗಳಿಗೆ ಸಿಕ್ಕಿ ನೀನು ಶೀಘ್ರದಲ್ಲೇ ಯಮಲೋಕವನ್ನು ಸೇರುವಿ" ಎಂದ.

ಮಕರಾಕ್ಷನ ಮಾತುಗಳನ್ನು ಕೇಳಿದ ರಾಮ ಜೋರಾಗಿ ನಕ್ಕು "ರಾಕ್ಷಸ! ಶೂರನಾದವನು ಕಾರ್ಯದಲ್ಲಿ ತನ್ನ ಸಾಮರ್ಥ್ಯವನ್ನು ಕೈಯಲ್ಲಿ ತೋರಿಸುತ್ತಾನೆಯೇ ವಿನಾ ಬಾಯಮಾತಿನಲ್ಲಿ ಅಲ್ಲ. ವ್ಯರ್ಥವಾದ ಬಾಯ್ಬಡುಕತನದಿಂದ ಯಾವ ಲಾಭವೂ ಸಿದ್ಧಿಸದು. ನೀನೆಂದಂತೆ ಖರ, ತ್ರಿಶಿರ, ದೂಷಣರನ್ನೂ ಅವರೊಡನೆ ಬಂದ ಹದಿನಾಲ್ಕುಸಾವಿರ ರಾಕ್ಷಸರನ್ನೂ ನಿಗ್ರಹಿಸಿ ನಾನು ಅಂದು ದಂಡಕಾರಣ್ಯದಲ್ಲಿ ಹದ್ದು, ನರಿ, ನಾಯಿಗಳಿಗೆ ಸಂತರ್ಪಣೆಯನ್ನು ಮಾಡಿದೆ. ಇಂದು ನಿನ್ನನು ಕೊಂದು ಮತ್ತೊಮ್ಮೆ ಹದ್ದು, ಕಾಗೆ, ನರಿ, ನಾಯಿ ಇವುಗಳಿಗೆ ಭೋಜನವನ್ನಿಕ್ಕುತ್ತೇನೆ" ಎಂದ.

ಮಕರಾಕ್ಷನು ರಾಮನ ಮಾತುಗಳಿಂದ ಕೋಪಗೊಂಡವನಾಗಿ ರಾಮನ ಮೇಲೆ ಅನೇಕ ಬಾಣಗಳನ್ನು ವರ್ಷಿಸಿದ. ರಾಮ ಅವುಗಳನ್ನೆಲ್ಲ ಕ್ಷಣ ಮಾತ್ರದಲ್ಲಿ ತುಂಡರಿಸಿ ಮಕರಾಕ್ಷನನ್ನು ಬಾಣಗಳಿಂದ ಘಾತಿಸಿದ. ರಾಮ ಮಕರಾಕ್ಷರು ಘೋರವಾದ ಯುದ್ಧ ಮಾಡತೊಡಗಿದರು.

ಅವರ ಆ ಯುದ್ಧವನ್ನು ನೋಡಲು ದೇವತೆಗಳು, ಗಂಧರ್ವರು, ಸಿದ್ಧರು, ಯಕ್ಷರು ಆಕಾಶದಲ್ಲಿ ನಿಂತರು. ಸ್ವಲ್ಪ ಕಾಲವಾದ ಮೇಲೆ ರಾಮ ತನ್ನ ಅಮೋಘವಾದ ಬಾಣಗಳಿಂದ ಮಕರಾಕ್ಷನ ರಥವನ್ನು ನಾಶ ಮಾಡಿದ. ಸಾರಥಿಯನ್ನು ಕೊಂದ. ಅವನ ಧನುಸ್ಸನ್ನೂ ಕತ್ತರಿಸಿ ಕುದುರೆಯನ್ನೂ ಸಂಹರಿಸಿದ.

ಸಾರಥಿ, ರಥ, ಧನುಸ್ಸನ್ನು ಕಳೆದುಕೊಂಡ ಮಕರಾಕ್ಷ ನೆಲದ ಮೇಲೆ ನಿಂತ. ಈಶ್ವರದತ್ತವಾದ ಮಹಾಶೂಲವನ್ನು ತಿರುಗಿಸಿ ರಾಮನ ಮೇಲೆ ಪ್ರಯೋಗಿಸಿದ. ಇದನ್ನು ಕಂಡ ದೇವತೆಗಳು ಯಕ್ಷರು, ಕಿನ್ನರರು ಎಲ್ಲರೂ ಭಯದಿಂದ ತಲ್ಲಣಿಸಿದರು. ಆದರೆ ರಾಮ ಆ ಶೂಲವನ್ನೂ ಬಾಣಗಳಿಂದ ಕತ್ತರಿಸಿದ.

ಶೂಲವು ಪುಡಿಯಾದುದನ್ನು ಕಂಡ ಮಕರಾಕ್ಷ ಕೋಪದಿಂದ ಮುಷ್ಟಿಯನ್ನು ಬಂಧಿಸಿ "ನಿಲ್ಲು ! ನಿಲ್ಲು ! " ಎಂದು ಗರ್ಜಿಸುತ್ತಾ ರಾಮನ ಕಡೆಗೆ ನುಗ್ಗಿದ. ಆಗ, ರಾಮ ತನ್ನತ್ತ ನುಗ್ಗಿ ಬರುತ್ತಿದ್ದ ಮಕರಾಕ್ಷನನ್ನು ಸಂಹರಿಸುವ ಸಲುವಾಗಿ ಆಗ್ನೇಯಾಸ್ತ್ರವನ್ನು ಅವನ ಮೇಲೆ ಪ್ರಯೋಗಿಸಿದ. ಕ್ರೂರನಾದ ಮಕರಾಕ್ಷ ಅಗ್ನೇಯಾಸ್ತ್ರದಿಂದ ದಗ್ಧನಾದ. ದೇವತೆಗಳೆಲ್ಲ ರಾಮನ ಮೇಲೆ ಹೂಮಳೆಗರೆದರು. ವಾನರರೆಲ್ಲ ಆನಂದದಿಂದ ರಾಮನನ್ನು ಅಭಿನಂದಿಸಿದರು.

## ಇಂದ್ರಜಿತ್ತಿನ ಮಾಯಾಯುದ್ಧ

ಮಕರಾಕ್ಷ ತೀರಿಕೊಂಡ ಬಳಿಕ ರಾವಣ ಮಹಾ ಪರಾಕ್ರಮಿಯಾದ ಇಂದ್ರಜಿತುವನ್ನು ಪುನಃ ರಾಮ ಲಕ್ಷ್ಮಣರ ಮೇಲೆ ಯುದ್ಧಕ್ಕೆ ಕಳುಹಿಸಿದ. ಇಂದ್ರಜಿತು ಯುದ್ಧಕ್ಕೆ ಮೊದಲು ಅಭಿಚಾರಿಕ ಹೋಮವನ್ನು ಮಾಡಿ ಅಗ್ನಿಯನ್ನು ಸಂತೋಷಗೊಳಿಸಿದ. ತುಷ್ಟನಾದ ಅಗ್ನಿಯಿಂದ ದತ್ತವಾದ ರಥ, ಅಶ್ವ, ಸಾರಥಿಯನ್ನು ಪಡೆದು ಅದೃಶ್ಯನಾಗಿ ಮರೆಯಿಂದ ಬಾಣಗಳ ಮಳೆಯನ್ನು ಸುರಿಸ ತೊಡಗಿದ. ಇಂದ್ರಜಿತ್ತು ತನ್ನ ಮಾಯೆಯಿಂದ ಘನವಾದ ಅಂಧಕಾರವನ್ನು ಉಂಟು ಮಾಡಿದ. ಆ ಕತ್ತಲಿನಲ್ಲಿ ಅದೃಶ್ಯನಾಗಿದ್ದು ಕೊಂಡು ಮಹಾ ಬಲಿಯಾದ ಇಂದ್ರಜಿತು ಬಾಣಗಳ ಮಳೆಯನ್ನು ಸುರಿಸಿದ. ಇಂದ್ರಜಿತ್ತಿನ ಸುಳಿವೇ ಆಗಲಿಲ್ಲ ವಾನರರಿಗೆ.

ಇಂದ್ರಜಿತ್ತಿನ ಈ ಘೋರಕೃತ್ಯವನ್ನು ಕಂಡ ಲಕ್ಷ್ಮಣ ಕೋಪದಿಂದ "ಅಣ್ಣಾ ನಾನು ಈಗಲೇ ಬ್ರಹ್ಮಾಸ್ತ್ರವನ್ನು ಉಪಯೋಗಿಸಿ ಈ ಧರೆಯನ್ನೇ ರಾಕ್ಷಸರಿಂದ ಮುಕ್ತ ಮಾಡುತ್ತೇನೆ" ಎಂದ.

ಆಗ ರಾಮ, "ಲಕ್ಷ್ಮಣಾ ! ಒಬ್ಬ ರಾಕ್ಷಸನಿಗಾಗಿ ಇಡೀ ರಾಕ್ಷಸ ಕುಲವನ್ನೇ ನಾಶಮಾಡುವುದು ಸರಿಯಲ್ಲ. ಅಲ್ಲದೆ ವೀರನಾದವನು ಇದಿರಿಗೆ ನಿಂತು ಹೋರಾಡುವ ವೀರನನ್ನು ಕೊಲ್ಲಬೇಕೆ ವಿನಾ ಮರೆಯಲ್ಲಿ ನಿಂತು ಹೋರಾಡುವವನನ್ನೂ, ಅವಿತಿಕೊಂಡಿರುವವನನ್ನೂ, ಶರಣಾಗತನಾದವನನ್ನೂ ಬಾಯಲ್ಲಿ ಹುಲ್ಲು ಕಚ್ಚಿರುವವನನ್ನೂ ಕೊಲ್ಲಬಾರದು. ಈ ರಾಕ್ಷಸ ಬಹಳ ನೀಚನಾಗಿದ್ದಾನೆ. ಇವನನ್ನು ಸರ್ಪದಂತೆ ಕ್ರೂರವಾದ ಬಾಣಗಳಿಂದ ನಾಶ ಮಾಡೋಣ ಬಾ" ಎನ್ನುತ್ತಾ ರಾಮನು ಲಕ್ಷ್ಮಣನೊಡನೆ ಇಂದ್ರಜಿತ್ತನ್ನು ಇದಿರಿಸಲು ಸನ್ನದ್ಧನಾದ.

ರಾಮನು ಲಕ್ಷ್ಮಣನೊಡನೆ ಇಂದ್ರಜಿತ್ತಿನ ಮಾಯೆಯನ್ನು ವಿಫಲಗೊಳಿಸಲು ಸಿದ್ಧನಾಗಿ ನಿಂತಿದ್ದನ್ನು ಮಾಯಾವಿಯಾದ ಇಂದ್ರಜಿತು ನೋಡಿದ. ರಾಮನ ಹೃದ್ಗತವನ್ನು ಅರಿತ ಅವನು ಲಂಕೆಗೆ ಹಿಂದಿರುಗಿದ. ಪಾಪಬುದ್ಧಿಯುಳ್ಳ ಆ ರಾಕ್ಷಸ ಪುನಃ ಮಾಯಾಮಯವಾದ ರಥದಲ್ಲಿ

ವಾನರರನ್ನು ಮೋಹಗೊಳಿಸುವ ಸಲುವಾಗಿ ಮಾಯಾಸೀತೆಯನ್ನಿಟ್ಟುಕೊಂಡು ಪಶ್ಚಿಮದ್ವಾರದಿಂದ ಹೊರಬಂದ.

ಇಂದ್ರಜಿತು ಬರುವುದನ್ನು ಕಂಡ ಸರ್ವ ವಾನರರೂ ಅವನನ್ನು ಕಲ್ಲು ವೃಕ್ಷಗಳಿಂದ ಘಾತಿಸತೊಡಗಿದರು. ಎಲ್ಲ ವಾನರರಿಗೂ ಮುಂದಾಳಾಗಿ ಹನುಮಂತ ಅಗಾಧವಾದ ಶಿಖರವನ್ನು ಹಿಡಿದು ನಿಂತ. ಇಂದ್ರಜಿತ್ತಿನ ರಥವಲ್ಲಿ ಏಕವೇಣಿಯಾಗಿ ಮಲಿನ ವಸ್ತ್ರವನ್ನುಟ್ಟು ಧೂಳಿನಿಂದ ಆವೃತಳಾಗಿ "ರಾಮಾ ! ರಾಮಾ ! " ಎಂದು ಹಲುಬುತ್ತಿರುವ ಸೀತೆಯನ್ನು ನೋಡಿದ.

ಇಂದ್ರಜಿತು ಹನುಮಂತನನ್ನು ನೋಡಿದ ಕೂಡಲೇ "ಎಲವೋ ವಾನರ ನೀನು, ರಾಮ ಲಕ್ಷ್ಮಣ ಯಾರಿಗಾಗಿ ಇಲ್ಲಿಯವರೆಗೆ ಬಂದಿರೋ ಆ ಸೀತೆಯನ್ನು ಇದೋ ! ನೀವೆಲ್ಲ ನೋಡುತ್ತಿರುವಂತೆ ಕತ್ತರಿಸಿ ಹಾಕುತ್ತೇನೆ ನೋಡು ! " ಎಂದು ಸೀತೆಯ ತಲೆಗೆ ಕೈಹಾಕಿ ಕತ್ತಿಯನ್ನು ಮೇಲಕ್ಕೆತ್ತಿದ.

ಇದನ್ನು ಕಂಡ ಹನುಮಂತ ಕೋಪದಿಂದ "ಹೇ ದುರಾತ್ಮ, ನೀನು ಬ್ರಹ್ಮ ಕುಲೋತ್ಪನ್ನನಾಗಿ ರಾಕ್ಷಸ ಕೃತ್ಯವನ್ನು ಮಾಡತೊಡಗಿರುವೆ, ನಿನಗೆ ನಾಚಿಕೆಯಾಗದೆ ? ರಾಮ ವಲ್ಲಭೆಯನ್ನು ನಿಗ್ರಹಿಸಿ ನೀನು ಜೀವಿಸಲಾರೆ. ಇದು ಸತ್ಯ. ಸ್ತ್ರೀ ವಧೆಯು ಅತ್ಯಂತ ನಿಂದನೀಯವಾದುದು. ನಿನ್ನ ಸರ್ವಸಂಪತ್ತು ಇದರಿಂದ ನಾಶವಾಗುತ್ತದೆ. ವ್ಯರ್ಥವಾದ ಈ ಕಾರ್ಯಕ್ಕೆ ಉಜ್ಜುಗಿಸಬೇಡ" ಎಂದು ಕೂಗಿ ಹೇಳಿದ.

ಹನುಮಂತನ ಮಾತನ್ನು ಇಂದ್ರಜಿತು ಲಕ್ಷ್ಯಕ್ಕೆ ತಾರದೆ ತನ್ನ ರಥದಲ್ಲಿದ್ದ ಮಾಯಾಸೀತೆಯನ್ನು ಹಿಡಿದು ಯಜ್ಞೋಪವೀತಧಾರಣೆ ಮಾಡುವ ಕ್ರಮದಲ್ಲಿ ಕತ್ತರಿಸಿಹಾಕಿದ. ರಾಮಾ! ರಾಮಾ ! ಎನ್ನುತ್ತಾ ಸೀತೆ ಕೆಳಗೆ ಬಿದ್ದಳು. ಮಾಯೆಯಿಂದ ಮೋಹಿತರಾದ ವಾನರರು ಸಂಕಟಕ್ಕೊಳಗಾದರು. ಇಂದ್ರಜಿತು ಮಾಯಾಸೀತೆಯನ್ನು ನಿಗ್ರಹಿಸಿ ಅಟ್ಟಹಾಸ ಮಾಡತೊಡಗಿದ. ಸೀತೆಯನ್ನು ಇಂದ್ರಜಿತು ಕೊಂದದ್ದನ್ನು ಹನುಮಂತ ಕಂಡು ಯುದ್ಧವನ್ನು ನಿಲ್ಲಿಸಿ ರಾಮನಿಗೆ ಸಮಾಚಾರವನ್ನು ಹೇಳಲು ಹೊರಟ. ಹನುಮಂತ ಹೊರಟಿದ್ದನ್ನು ನೋಡಿದ ಇಂದ್ರಜಿತು ತಾನೂ ನಿಕುಂಭಿಳೆಯತ್ತ ಆಭಿಚಾರಿಕ ಹೋಮವನ್ನು ಮಾಡಲು ಹೋದ. ನಿಕುಂಭಿಳೆಯಲ್ಲಿ ಅಥರ್ವಣವೇದದಲ್ಲಿ ಪ್ರೋಕ್ತವಾದ ಕ್ರಮದಲ್ಲಿ ಆ ಸರ್ವ ರಾಕ್ಷಸರ ಅಭ್ಯುದಯಕ್ಕಾಗಿ ಅಭಿಚಾರಿಕ ಹೋಮವನ್ನು ಮಾಡತೊಡಗಿದ.

## ಲಕ್ಷ್ಮಣನ ವಾದ

ಹನುಮಂತ ರಾಮನ ಬಳಿಗೆ ಬಂದು "ಪ್ರಭು ! ನಾವು ಯಾವ ಸೀತೆಗಾಗಿ ಇದುವರೆಗೆ ಕಷ್ಟಪಟ್ಟೆವೋ ಅವಳನ್ನು ಪಾಪಿಯಾದ ಇಂದ್ರಜಿತು ಕತ್ತರಿಸಿಹಾಕಿದ. ಈ ದುಃಖವಾರ್ತೆಯನ್ನು ನಿನಗೆ ತಿಳಿಸಲು ಬಂದೆ" ಎಂದ.

ಸೀತೆ ಸತ್ತಳು ಎಂಬ ವಾರ್ತೆಯನ್ನು ಕೇಳಿದ ರಾಮ ಬುಡ ಕಡಿದ ವೃಕ್ಷದಂತೆ ಕೆಳಗುರುಳಿದ. ಮೂರ್ಛಿತನಾದ. ವಾನರರಲ್ಲ ಸುಗಂಧಮಿಶ್ರಿತವಾದ ಜಲವನ್ನು ರಾಮನಮೇಲೆ ಪ್ರೋಕ್ಷಿಸಿದರು.

ಶೋಕದಿಂದ ಕೂಡಿದ ರಾಘವನನ್ನು ಭ್ರಾತೃವತ್ಸಲನಾದ ಲಕ್ಷ್ಮಣ ನೋಡಿದ. ಸೀತೆಗೆ

ಒದಗಿದ ಸ್ಥಿತಿಯನ್ನೂ, ಅಣ್ಣನಿಗೆ ಅದರಿಂದ ಆದ ಶೋಕವನ್ನೂ ಕಂಡು ಸಹಿಸದೆ ಲಕ್ಷ್ಮಣ ಅಣ್ಣನ ಮೇಲಿನ ಪ್ರೇಮದಿಂದ ಧರ್ಮವನ್ನೇ ನಿಂದಿಸತೊಡಗಿದ.

"ಅಣ್ಣಾ! ನೀನು ಮೊದಲಿನಿಂದ ಧರ್ಮ. ಧರ್ಮ ಎಂದೇ ಹೇಳಿಕೊಂಡು ಧರ್ಮಮಾರ್ಗ ವನ್ನೇ ಅನುಸರಿಸಿ ಬಂದೆಯಲ್ಲವೆ ? ನೋಡು! ಆ ಧರ್ಮಕ್ಕೆ ಸಿಕ್ಕಿದ ಫಲವನ್ನು. ನಿಷ್ಪಾಪ ನಾದ ನಿನಗೆ ಒದಗಿರುವ ಸ್ಥಿತಿಯನ್ನು ನೋಡಿದರೆ ನಿಜವಾಗಿ ಧರ್ಮ ಎಂಬುದು ಇಲ್ಲವೇ ಇಲ್ಲ.

"ರಾಮಾ! ಕೇಳು. ಧರ್ಮದ ಫಲ ಸುಖ. ಅಧರ್ಮದ ಫಲ ದುಃಖ ಎಂದು ತಾನೇ ಎಲ್ಲರೂ ಹೇಳುತ್ತಾರೆ. ಹಾಗಿರುವುದಾದರೆ ಸ್ಥಾವರ, ಜಂಗಮಗಳೂ ಸುಖವನ್ನು ಪಡೆಯುತ್ತಿ ವೆಯಲ್ಲ? ಅವೆಲ್ಲ ಧರ್ಮವನ್ನು ರಕ್ಷಿಸುತ್ತ, ಧರ್ಮವನ್ನು ಪಾಲಿಸುತ್ತಾ ಬಂದಿವೆಯೆ ? ಸ್ಥಾವರಗಳಿಗೆ ಅರಿವೇ ಇಲ್ಲ. ಅವು ಧರ್ಮವನ್ನು ಅನುಷ್ಠಿಸುವುದು ಹೇಗೆ ? ಜಂಗಮವಾದ ಪಶುಗಳಿಗೆ ಧರ್ಮಾನುಷ್ಠಾನ ಎಲ್ಲಿ ಬಂತು ? ಆದರೂ ಅವು ಸುಖವನ್ನು ಅನುಭವಿಸುತ್ತಿಲ್ಲವೆ ? ರಾಘವ! ನೀ ಹೇಳುತ್ತ ಬಂದೆ, ಧರ್ಮವೇ ಸುಖವನ್ನು ಕೊಡುತ್ತದೆ ಎಂದು. ಈಗ ನೋಡು ಯಾವ ಧರ್ಮವನ್ನು ರಕ್ಷಿಸಲು ನೀನು ಕಾಡಿಗೆ ಬಂದೆಯೋ ಆ ಧರ್ಮ ನಿನ್ನನ್ನು ರಕ್ಷಿಸಿತೆ ? ನೀನು ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ಬಂದೆ. ತಂದೆ ಸತ್ತರು. ಸೀತೆ ಇಲ್ಲವಾದಳು. ರಾಜ್ಯ ಹೋಯಿತು. ಇಷ್ಟೆಲ್ಲ ದುಃಖ ನೀನು ಧರ್ಮಮಾರ್ಗವನ್ನನುಸರಿಸಿದುದರಿಂದಲೇ ಬಂದಿತಲ್ಲಾ. ಇದಕ್ಕೇನು ಹೇಳುವಿ ?

ತಂದೆಯಾದ ದಶರಥ ಜ್ಯೇಷ್ಠನಾದ ನಿನಗೆ ರಾಜ್ಯವನ್ನು ಕೊಡುವುದಾಗಿ ಮೊದಲು ಮಾತು ಕೊಟ್ಟ. ಆಮೇಲೆ ಕಾಡಿಗೆ ಕಳುಹಿಸಿದ. ಮೊದಲು ಕೊಡುತ್ತೇನೆ ಎಂದ. ವಚನವನ್ನು ಅವನು ಮುರಿದದ್ದರಿಂದಲೇ ಅವನು ಸಾವನ್ನಪ್ಪಬೇಕಾಯಿತಲ್ಲವೆ ?

ಅಣ್ಣಾ! ನೀನು ತಂದೆ ಹೇಳಿದ ಮೊದಲ ಮಾತನ್ನೇ ನಡೆಸಿ ರಾಜ್ಯದಲ್ಲೇ ಇದ್ದಿದ್ದರೆ ತಂದೆಯೂ ಸಾಯುತ್ತಿರಲಿಲ್ಲ. ಕಾಡಿಗೆ ಬರಬೇಕಾಗಿಯೂ ಇರಲಿಲ್ಲ. ಸೀತೆಯೂ ನಷ್ಟವಾಗುತ್ತಿರಲಿಲ್ಲ. ಎಲ್ಲ ಒಳ್ಳೆಯದೇ ಆಗುತ್ತಿತ್ತು. ಈಗ ನೀನು ಪಿತೃವಾಕ್ಯ ಪರಿಪಾಲನೆ ಎಂಬ ಧರ್ಮವನ್ನು ಅನುಷ್ಠಿಸಿದುದರಿಂದ ಯಾವ ಪುರುಷಾರ್ಥವನ್ನು ಸಾಧಿಸಿದ ಹಾಗಾಯಿತು? ಯಾವಾಗಲೂ ಧರ್ಮ ಪುರುಷಾರ್ಥಕ್ಕೆ ಸಾಧಕವಾಗಿರಬೇಕಲ್ಲವೆ ? ಈಗ ನೋಡಿದರೆ ಅದು ಪುರುಷಾರ್ಥಕ್ಕೆ ಬಾಧಕವಾಗಿ ಯೇ ಕಂಡುಬರುತ್ತಿದೆಯಲ್ಲವೆ ? ರಾಮಾ ! ಧರ್ಮಕ್ಕೆ ಫಲ, ಸುಖ. ಅಧರ್ಮಕ್ಕೆ ಫಲ ದುಃಖ ಎಂದಲ್ಲವೆ ಹೇಳುವುದು. ಈಗ ಅದು ವಿರುದ್ಧವಾಗಿದೆಯಲ್ಲ. ಧರ್ಮಾತ್ಮನಾದ ನಿನಗೆ ಮೇಲಿಂದ ಮೇಲೆ ಕಷ್ಟ ದುಃಖ ಪರಂಪರೆಯೇ ಒದಗುತ್ತಿದೆ. ಪಾಪಾತ್ಮನಾದ ರಾವಣ ಸುಖವನ್ನೇ ಅನು ಭವಿಸುತ್ತಿದಾನೆ. ಅವನಿಗೆ ಐಶ್ವರ್ಯ, ಸುಖ ಎಲ್ಲವೂ ವೃದ್ಧಿಯಾಗುತ್ತಲೇ ಇದೆ. ನೀನು ಮಾತ್ರ ಕಷ್ಟವನ್ನೇ ಅನುಭವಿಸುತ್ತಿರಬೇಕಾಗಿದೆ. ಹೀಗೆ ಧರ್ಮ-ಅಧರ್ಮಗಳು ವಿರುದ್ಧವಾದ ಫಲಗಳನ್ನು ಕೊಡುತ್ತಿರುವಾಗ ಧರ್ಮವನ್ನೇಕೆ ಹಿಡಿಯಬೇಕು ?

"ಅಣ್ಣಾ, ಲೋಕದಲ್ಲಿ ಅರ್ಥವೇ ಸರ್ವಕ್ಕೂ ಮೂಲ. ಅರ್ಥವನ್ನು ತ್ಯಜಿಸಿ ಸುಖವನ್ನು ಪಡೆಯುವುದು ಆಗದ ಕೆಲಸ.

**ಯಸ್ಯಾರ್ಥಾಃ ತಸ್ಯ ಮಿತ್ರಾಣಿ ಯಸ್ಯಾರ್ಥಾಃ ತಸ್ಯ ಬಾಂಧವಾಃ ।**
**ಯಸ್ಯಾರ್ಥಾಃ ಸ ಪುಮಾಂಲ್ಲೋಕೇ ಯಸ್ಯಾರ್ಥಾಃ ಸ ಚ ಪಂಡಿತಃ ॥**

ಲೋಕದಲ್ಲಿ ಧನವಿದ್ದವನನ್ನು ಮಿತ್ರರು ಆದರಿಸುತ್ತಾರೆ. ಯಾರಲ್ಲಿ ಧನ ಇರುತ್ತದೆಯೋ ಅವರಿಗೆ ಬಾಂಧವರೂ ಹೆಚ್ಚು. ಯಾರಲ್ಲಿ ಹಣ ಹೆಚ್ಚಿಗೆ ಇದೆಯೋ ಅವನನ್ನೇ ಎಲ್ಲರೂ ಶ್ರೇಷ್ಠ ಎಂದು ಭಾವಿಸುತ್ತಾರ. ಅವನನ್ನೇ ವಿದ್ವಾಂಸ ಎಂದು ಪರಿಗಣಿಸುತ್ತಾರೆ.

ಯಾರಲ್ಲಿ ಅರ್ಥವಿದೆಯೋ ಅವನನ್ನೇ ಬುದ್ಧಿಶಾಲಿ, ಗುಣವಂತ, ಎಂದೆಲ್ಲ ಹೊಗಳುತ್ತಾರೆ. ಅವನನ್ನೇ ಎಲ್ಲರೂ ಭಾಗ್ಯಶಾಲಿ ಎಂದು ಭಾವಿಸುತ್ತಾರೆ.

"ಸರ್ವೇ ಗುಣಾಃ ಕಾಂಚನಮಾಶ್ರಯಂತಿ."

ಹರ್ಷ, ಕಾಮ, ದರ್ಪ, ಧರ್ಮ ಈ ಎಲ್ಲವೂ ಹಣದಿಂದಲೇ ಪ್ರಾಪ್ತವಾಗುತ್ತದೆ. ದುಡ್ಡಿದ್ದವನೇ ದೊಡ್ಡಪ್ಪ ಎನ್ನಿಸುತ್ತಾನೆ. ಅರ್ಥವಿದ್ದವನಿಗೆ ಸಕಲ ಕಾಮಗಳೂ ಕೈಗೂಡುತ್ತವೆ.

ರಾಮ ! "ಧರ್ಮ ಧರ್ಮ'' ಎಂದು ಅರ್ಥವನ್ನು ತ್ಯಜಿಸಿದೆ. ನೀನು ಅಂದು ರಾಜ್ಯವನ್ನು ವಹಿಸಿಕೊಂಡಿದ್ದರೆ ಈ ಅನರ್ಥ ಬರುತ್ತಲೇ ಇರಲಿಲ್ಲ. ನೀನು ಧರ್ಮಕ್ಕಾಗಿ ಅರ್ಥವನ್ನು ಅಂದರೆ ರಾಜ್ಯವನ್ನು ತ್ಯಜಿಸಿ ಬಂದುದರಿಂದಲೇ ಇಂದು ಈ ಕಷ್ಟಕ್ಕೆ ಗುರಿಯಾಗಬೇಕಾಯಿತು.''

ಹೀಗೆ ಲಕ್ಷ್ಮಣ ಧರ್ಮವನ್ನು ತೆಗಳಿ ಪೌರುಷವನ್ನೇ ಎತ್ತಿ ಹಿಡಿದುಮಾತಾಡಿದ. ಅಯೋಧ್ಯೆಯಿಂದ ಇಲ್ಲಿಯವರೆಗೆ ಲಕ್ಷ್ಮಣ ಅನೇಕ ಬಾರಿ ಪೌರುಷವನ್ನೇ ಪ್ರಧಾನವಾಗಿಟ್ಟು ವಾದಿಸಿದ್ದಾನ.

ಹಾಗಾದರೆ ಧರ್ಮ ನಿಷ್ಪ್ರಯೋಜಕವೇ ? ಎಂಬ ಪ್ರಶ್ನೆ ಏಳುತ್ತದೆ.

**ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ**
**ಧಾರಯತೀತಿ ಧರ್ಮಃ**

ಯಾವುದು ಧರಿಸುವುದೋ ಯಾವುದು ರಕ್ಷಿಸಲು ಶಕ್ಯವೋ ಅದೇ ಧರ್ಮ. ಅಂದ ಮೇಲೆ ಧರ್ಮ ಮಾರ್ಗದಲ್ಲಿ ನಡೆಯುವವರಿಗೆ ದುಃಖವೇ ಬರುತ್ತದಲ್ಲ ಎಂದರೆ ಅದು ವ್ರತನಿಷ್ಠರು ಅನುಭವಿಸಬೇಕಾದ ಪರೀಕ್ಷೆಯೇ ಸರಿ. ಭಗವದಂಶನಾದ ಲಕ್ಷ್ಮಣ ಇಲ್ಲಿ ಅಣ್ಣನ ಮೇಲಣ ಮಮತೆಯಿಂದ ತನ್ನ ಪ್ರೀತಿಯ ಅಣ್ಣನಿಗೆ ಇಂಥ ಕಷ್ಟ ಬಂದಿತಲ್ಲಾ ಎಂಬ ವಾತ್ಸಲ್ಯದಿಂದ ಹಾಗೆ ಹೇಳುತ್ತಾನೆ. ಇದನ್ನು ಲಕ್ಷ್ಮಣನೇ ಹೇಳುತ್ತಾನೆ.

**ಅಯಮನಘ ತವೋದಿತಃ ಪ್ರಿಯಾರ್ಥಂ**
**ಜನಕಸುತಾ ನಿಧನಂ ನಿರೀಕ್ಷ್ಯ ರುಷ್ಟಃ ।**

ನಿಷ್ಪಾಪನಾದ ರಘುವೀರ ! ಇದುವರೆಗೆ ನಾ ಹೇಳಿದ್ದು ನಿನ್ನಮೇಲಿನ ಪ್ರೀತಿಯಿಂದ. ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಹೇಳಿದೆ. ನೀನು ಶೋಕವನ್ನು ಬಿಟ್ಟು ಶತ್ರುವನ್ನು ಸಂಹರಿಸಲು ಉದ್ಯುಕ್ತನಾಗಬೇಕು ಎಂದು ಹೇಳಿದೆ" ಎನ್ನುತಾನೆ.

ಒಟ್ಟಿನಲ್ಲಿ ಲಕ್ಷ್ಮಣನ ಪೌರುಷವಾದ ಪ್ರೇಮಜನಿತವಾದ ಕಾತರತೆಯನ್ನು ಅವನ ಮಾತು ಪ್ರಕಟಪಡಿಸುತ್ತದೆ ಎನ್ನಬಹುದು.

## ವಿಭೀಷಣ ರಾಮನನ್ನು ಸಮಾಧಾನಪಡಿಸುವುದು

ವಿಭೀಷಣನು ಸೈನ್ಯವನ್ನೆಲ್ಲ ಯಥಾಸ್ಥಾನದಲ್ಲಿ ನಿಲ್ಲಿಸಿ ರಾಮನ ಬಳಿಗೆ ಹಿಂದಿರುಗಿದ. ಅಲ್ಲಿ

ರಾಮನು ದೈನ್ಯದಿಂದ ಲಕ್ಷ್ಮಣನ ತೊಡೆಯಮೇಲೆ ತಲೆಯಿಟ್ಟು ಮಲಗಿರುವುದನ್ನೂ, ಲಕ್ಷ್ಮಣ ಚಿಂತಾಕ್ರಾಂತನಾಗಿರುವುದನ್ನೂ, ವಾನರ ಪ್ರಮುಖರೆಲ್ಲ ದುಃಖಿಸುತ್ತಿರುವುದನ್ನೂ ಕಂಡ. ಇದೇನು ? ಎಂದು ವಿಚಾರಿಸಿದ.

"ಸೀತೆಯನ್ನು ಇಂದ್ರಜಿತು ಯುದ್ಧರಂಗದಲ್ಲಿ ಕತ್ತರಿಸಿಹಾಕಿದ ವಿಷಯವನ್ನು ಹನುಮಂತ ಹೇಳಿದ. ಆಗಿನಿಂದ ರಾಮ ಹೀಗಿದ್ದಾನೆ" ಎಂದ ಸುಗ್ರೀವ. ವಿಭೀಷಣ ಆಗ ರಾಮನನ್ನು ಕುರಿತು "ರಾಘವ ! ಇಂದ್ರಜಿತು ಸೀತೆಯನ್ನು ಕೊಲ್ಲುವುದು ಅಸಂಭವ. ಸಾಗರದ ಶೋಷಣೆ ಎಷ್ಟು ಅಸಂಭವವೋ ಇಂದ್ರಜಿತು ಸೀತೆಯನ್ನು ಕೊಂದ ಎಂದು ಕೇಳುವುದೂ ಅಷ್ಟೇ ಅಸಂಭವ.

"ನನಗೆ ರಾವಣನ ರೀತಿ ಚೆನ್ನಾಗಿ ಗೊತ್ತು. ಸೀತೆಯನ್ನು ನೋಡುವುದಕ್ಕೇ ಯಾರಿಂದಲೂ ಸಾಧ್ಯವಿಲ್ಲ ಅಂದಮೇಲೆ ಅವಳನ್ನು ಯುದ್ಧರಂಗಕ್ಕೆ ಕರೆತರುವುದು ಹೇಗೆ ಸಾಧ್ಯ ? ಇದೆಲ್ಲ ಆ ಮಾಯಾವಿ ಮೇಘನಾದನ ಮಾಯೆ. ಸೀತೆ ಜೀವಂತವಾಗಿದಾಳೆ. ವಾನರರು ಯುದ್ಧಮಾಡುತ್ತಿದ್ದರೆ ತನಗೆ ಅಭಿಚಾರಕ ಹೋಮವನ್ನು ನಡೆಸಲು ಸಾಧ್ಯವಾಗದು ಎಂದು ಆ ಮಾಯಾವಿಯಾದ ಇಂದ್ರಜಿತು ಮಾಯೆಯಿಂದ ಎಲ್ಲರನ್ನೂ ಮೋಹಗೊಳಿಸಿದಾನೆ.

"ಈಗ ಅವನು ನಿಕುಂಭಿಳೆಯಲ್ಲಿ ಹೋಮ ಮಾಡುತ್ತಿದಾನೆ. ಆ ಹೋಮ ನಿರ್ವಿಘ್ನವಾಗಿ ಪೂರ್ತಿಯಾದರೆ ಅವನಿಗೆ ಮಹಾಸಿದ್ಧಿ ಲಭಿಸುತ್ತದೆ. ಆ ಸಿದ್ಧಿಯಿಂದ ಅವನು ಅಜೇಯನಾಗುತ್ತಾನೆ. ಅದನ್ನು ಪಡೆದು ಅವನು ಯುದ್ಧಕ್ಕೆ ಬಂದನಾದರೆ ಅವನನ್ನು ಜಯಿಸಲು ದೇವತೆಗಳಿಂದ ಕೂಡಿದ ದೇವೇಂದ್ರನಿಂದಲೂ ಸಾಧ್ಯವಿಲ್ಲ. ಆದ್ದರಿಂದ, ಹೋಮವನ್ನು ಮುಗಿಸುವ ಮುನ್ನವೇ ಅವನನ್ನು ನಿಗ್ರಹಿಸಬೇಕು.

"ರಾಘವ ! ನೀನು ಕಪಿಪ್ರಮುಖರಿಂದ ಯುಕ್ತನಾಗಿ ಇಲ್ಲಿಯೇ ಇರು. ಆ ಮಾಯಾವಿಯಾದ ರಾವಣಿಯನ್ನು ಕೊಲ್ಲಲು ಧೀರನಾದ ಲಕ್ಷ್ಮಣನನ್ನು ಕಳುಹಿಸು. ಇಂದ್ರನು ಶತ್ರುವನ್ನು ನಿಗ್ರಹಿಸಲು ವಜ್ರಾಯುಧವನ್ನು ಕಳುಹಿಸುವಂತೆ ನೀನು ಲಕ್ಷ್ಮಣನನ್ನು ಕಳುಹಿಸು. ಧೀರನಾದ ಲಕ್ಷ್ಮಣ ತನ್ನ ಅಮೋಘವಾದ ಬಾಣಗಳಿಂದ ಅವನ ಯಜ್ಞಕರ್ಮವನ್ನು ನಾಶಮಾಡಿ ಅವನನ್ನು ಕೊಲ್ಲುತ್ತಾನೆ. ಈಗಲೇ ಲಕ್ಷ್ಮಣನನ್ನು ಕಳುಹಿಸು ಎಂದ. ವಿಭೀಷಣನ ಮಾತುಗಳನ್ನು ಕೇಳಿದ ರಾಮ ಧೈರ್ಯಹೊಂದಿದ. ಲಕ್ಷ್ಮಣನನ್ನು ಕುರಿತು "ಸೌಮಿತ್ರಿ ! ನೀನು ಮಹಾಮಾಯಾವಿಯಾದ ಆ ರಾಕ್ಷಸ ಇಂದ್ರಜಿತುವನ್ನು ಜಯಿಸು. ಹೋಗು ನಿನ್ನ ಸಹಾಯಕ್ಕೆ ಜಾಂಬವಂತ ಸೈನ್ಯದೊಂದಿಗೆ ಬರುತ್ತಾನೆ. ವೀರನಾದ ಹನುಮಂತನೂ, ಅಜೇಯನಾದ ಅಂಗದನೂ ನಿನ್ನ ಬೆಂಬಲಕ್ಕಿರುತ್ತಾರೆ. ಇಂದ್ರಜಿತ್ತಿನ ಮಾಯೆಯನ್ನು ಚೆನ್ನಾಗಿ ಬಲ್ಲ ವಿಭೀಷಣನೂ ನಿನ್ನನ್ನು ಅನುಸರಿಸುತ್ತಾನೆ. ಸೌಮಿತ್ರಿ, ಹೋಗಿಬಾ ವಿಜಯಿಯಾಗು" ಎಂದ ಅಣ್ಣನ ಆಜ್ಞೆಯನ್ನು ಶಿರಸಾವಹಿಸಿ ಲಕ್ಷ್ಮಣ ಸಂತುಷ್ಟ ಚಿತ್ತನಾಗಿ ಕವಚವನ್ನು ತೊಟ್ಟ. ಖಡ್ಗ, ಬಾಣ ಇವುಗಳನ್ನು ತೆಗೆದುಕೊಂಡು ಶ್ರೀರಾಮನ ಚರಣವನ್ನು ಮುಟ್ಟಿ ನಮಸ್ಕರಿಸಿದ. ರಾಘವನ ಅನುಜ್ಞೆಯನ್ನು ಪಡೆದು ನಿಕುಂಭಿಳೆಯತ್ತ ಹೊರಟ. ಲಕ್ಷ್ಮಣನಿಗೆ ಸಹಾಯಕರಾಗಿ, ಜಾಂಬವಂತ, ಹನುಮಂತ, ಅಂಗದ, ವಿಭೀಷಣ, ಇನ್ನೂ ಅನೇಕ ವಾನರ ಪ್ರಮುಖರು ಹೊರಟರು.

## ಇಂದ್ರಜಿತುವಿನ ವಧೆ

ಲಕ್ಷ್ಮಣ ಸರ್ವವಾನರ ಪ್ರಮುಖರೊಂದಿಗೆ ನಿಕುಂಭಿಳೆಯತ್ತ ನಡೆದ. ಅಲ್ಲಿ ಇಂದ್ರಜಿತು

ಜಯವನ್ನು ಪಡೆಯುವ ಸಲುವಾಗಿ ಅಭಿಚಾರಿಕ ಹೋಮ ನಡೆಸುತ್ತಿದ್ದ. ಸುತ್ತಲೂ ಕೋಟೆಯಂತೆ ಭೀಮಕಾಯರಾದ ರಾಕ್ಷಸರು ಶೂಲ, ಮುದ್ಗರ, ತೋಮರ, ಪ್ರಾಸ, ಶಕ್ತಿ, ಪರಿಘ, ಖಡ್ಗ ಇವುಗಳಿಂದ ಸಜ್ಜಾಗಿ ಕಾವಲಿದ್ದರು.

ದೂರದಿಂದಲೇ ನಿಕುಂಭಿಳೆಯನ್ನು ನೋಡಿದ ವಿಭೀಷಣ "ಲಕ್ಷ್ಮಣಾ! ನೋಡು. ಅಲ್ಲಿ ಸುತ್ತಲೂ ರಾಕ್ಷಸರು ಕೋಟೆಯಂತೆ ಸಿದ್ಧರಾಗಿ ನಿಂತಿದಾರೆ. ಈಗ, ನಮ್ಮ ಸೈನ್ಯ ಆ ರಾಕ್ಷಸರ ಜೊತೆ ಯುದ್ಧ ಆರಂಭಿಸಲಿ. ನೀನು ನಿನ್ನ ಅಮೋಘವಾದ ಬಾಣಗಳಿಂದ ಆ ರಾಕ್ಷಸವ್ಯೂಹ ವನ್ನು ಶೀಘ್ರವಾಗಿ ಭೇದಿಸು. ಒಳಗೆ ಇಂದ್ರಜಿತು ಹೋಮ ಮಾಡುತ್ತಿದಾನೆ. ಅವನ ಹೋಮ ಕರ್ಮ ಮುಗಿಯುವುದರೊಳಗ ನೀನು ಅವನೊಡನೆ ಯುದ್ಧ ಮಾಡಬೇಕು. ಅದಕ್ಕಾಗಿ ಮೊದಲು ಈ ರಾಕ್ಷಸ ವ್ಯೂಹವನ್ನು ಭೇದಿಸು" ಎಂದು ಸಲಹೆಯಿತ್ತ.

ಅದರಂತೆ ಹನುಮಂತನೇ ಮೊದಲಾದ ವಾನರ ಪ್ರಮುಖರು ಕಲ್ಲು, ಬಂಡೆ, ವೃಕ್ಷ ಇವು ಗಳನ್ನು ತೆಗೆದುಕೊಂಡು ರಾಕ್ಷಸರನ್ನು ಪ್ರಹರಿಸತೊಡಗಿದರು. ಹನುಮಂತ ಬಲವಾದ ವೃಕ್ಷವನ್ನು ಕಿತ್ತುಕೊಂಡು ರಾಕ್ಷಸರನ್ನು ಕೊಲ್ಲತೊಡಗಿದ. ಹನುಮಂತನ ಕೈಗೆ ಸಿಕ್ಕಿ ಸಹಸ್ರಾರು ರಾಕ್ಷಸರು ಹತರಾದರು. ಕಾಲರುದ್ರ ಕೈಯಲ್ಲಿ ದಂಡವನ್ನು ಹಿಡಿದು ನುಗ್ಗುವಂತೆ ವೀರಹನುಮಂತ ಬಲವಾದ ವೃಕ್ಷವನ್ನು ಹಿಡಿದು ಸಮಸ್ತ ರಾಕ್ಷಸರನ್ನೂ ನಾಶಮಾಡತೊಡಗಿದ. ರಾಕ್ಷಸರೆಲ್ಲ ಭಯದಿಂದ ಅತ್ತ ಇತ್ತ ಓಡತೊಡಗಿದರು. ರಾಕ್ಷಸರಿಗೆ ಒದಗಿದ ಮಹಾಭಯವನ್ನು ಕಂಡ ಹೋಮ ನಡೆಸು ತ್ತಿದ್ದ ಇಂದ್ರಜಿತು, ಅರ್ಧದಲ್ಲೇ ಹೋಮ ಕಾರ್ಯವನ್ನು ಬಿಟ್ಟು ರಥವನ್ನೇರಿ ಹೊರಟ.

ಕೋಪದಿಂದ ಅವನ ಕಣ್ಣುಗಳು ಕೆಂಪೇರಿದ್ದುವು. ಬಾಣಗಳಿಂದ ಆಯುಧಗಳಿಂದ, ಯುಕ್ತ ನಾಗಿ ಇಂದ್ರಜಿತು ತನ್ನ ರಥವನ್ನು ಹನುಮಂತನ ಮುಂದೆ ನಿಲ್ಲಿಸುವಂತೆ ಆಜ್ಞಾಪಿಸಿದ. ಕಪ್ಪಾದ ಮೇಘದಂತೆ ಆಕಾರವುಳ್ಳ ಆ ಇಂದ್ರಜಿತು ಕೆಂಪಾದ ತನ್ನ ಕಣ್ಣುಗಳಿಂದಲೇ ಹನುಮಂತನನ್ನು ದಹಿಸಿಬಿಡುವಂತೆ ನೋಡುತ್ತಬಂದ. ಆಗ, ವಿಭೀಷಣ ಲಕ್ಷ್ಮಣನಿಗೆ ಇಂದ್ರಜಿತ್ತನ್ನು ಪರಿ ಚಯ ಮಾಡಿಕೊಟ್ಟ. "ಲಕ್ಷ್ಮಣಾ! ಅದೋ ನೋಡು. ಸೂರ್ಯನಂತೆ ಪ್ರಕಾಶಮಾನವಾದ ರಥವನ್ನೇರಿ ಹನುಮಂತನಿಗೆ ಎದುರಾಗಿ ಬರುತ್ತ ಇರುವ ಆ ರಾಕ್ಷಸನೇ ಇಂದ್ರಜಿತು. ಅವನು ಮಹಾ ಮಾಯಾವಿ, ದುಷ್ಟ, ನೀಚ ಬುದ್ಧಿಯುಳ್ಳವ. ಅವನನ್ನು ಶೀಘ್ರವಾಗಿ ಕೊಲ್ಲು" ಎಂದ.

ವಿಭೀಷಣ ಹೇಳಿದ್ದನ್ನು ಕೇಳಿದ ಲಕ್ಷ್ಮಣ ರಥದಲ್ಲಿ ಕುಳಿತು ಬರುತ್ತಿರುವ ಪರ್ವತಾಕಾರ ನಾದ ದುರ್ಜಯನಾದ ಇಂದ್ರಜಿತುವನ್ನು ನೋಡಿದ.

ವಿಭೀಷಣ ಶೀಘ್ರವಾಗಿ ಲಕ್ಷ್ಮಣನನ್ನು ಅಲ್ಲಿಂದ ವಿಶಾಲವಾದ, ಘನವಾದ ವನಪ್ರಾಂತ್ಯಕ್ಕೆ ಕರೆದೊಯ್ದ. ಅಲ್ಲಿ ದೊಡ್ಡದಾದ ಒಂದು ವಟವೃಕ್ಷವಿತ್ತು. ಅದರ ಶಾಖೋಪಶಾಖೆಗಳು ಅನೇಕ ಮೈಲಿಗಳ ದೂರ ಹರಡಿತ್ತು. ಅದನ್ನು ಲಕ್ಷ್ಮಣನಿಗೆ ತೋರಿಸುತ್ತಾ ವಿಭೀಷಣ "ಲಕ್ಷ್ಮಣಾ! ಇದೋ ನೋಡು, ಈ ದೊಡ್ಡ ಆಲದಮರವೇ ಆ ಇಂದ್ರಜಿತ್ತಿನ ಹೋಮಸ್ಥಾನ. ಯುದ್ಧಕ್ಕೆ ಹೊರಡುವ ಮೊದಲು ಅವನು ಇಲ್ಲಿಗೆ ಬಂದು ಭೂತಗಳಿಗೆ ಬಲಿಯನ್ನಿತ್ತು ತೃಪ್ತಿಪಡಿಸುತ್ತಾನೆ. ಅದರ ಫಲವಾಗಿ ಅವನಿಗೆ ಅಜೇಯತ್ವದ ಸಿದ್ಧಿ ಉಂಟಾಗುತ್ತದೆ. ಅದರಿಂದ ಅವನು ಶತ್ರುಗಳಿಗೆ ಕಾಣದೆ ಅವರನ್ನು ಕೊಲ್ಲುತ್ತಾನೆ. ಲಕ್ಷ್ಮಣಾ! ಆ ಇಂದ್ರಜಿತು ಪುನಃ ಇಲ್ಲಿಗೆ ಬರುವ ಮೊದಲೇ ಅವನನ್ನು ಸಂಹರಿಸು" ಎಂದ. "ಹಾಗೆಯೇ ಆಗಲಿ" ಎಂದು ಲಕ್ಷ್ಮಣ ತನ್ನ ಧನುಸ್ಸನ್ನು ಟಂಕಾರ

ಮಾಡುತ್ತಾ ಆ ಆಲದಮರದ ಕೆಳಗೇ ನಿಂತ. ಅಷ್ಟರಲ್ಲಿ ಇಂದ್ರಜಿತ್ತಿನ ರಥ ಕಾಣಿಸಿತು. ಇಂದ್ರಜಿತ್ತನ್ನು ನೋಡಿದೊಡನೆ ಲಕ್ಷ್ಮಣ "ರಾಕ್ಷಸ! ನಿನಗೆ ಪರಾಕ್ರಮ ಇರುವುದಾದರೆ ಈಗ ನನ್ನೊಂದಿಗೆ ಕಾದು" ಎಂದು ಯುದ್ಧಕ್ಕೆ ಆಹ್ವಾನಿಸಿದ.

ಕೋಪದಿಂದ ಇಂದ್ರಜಿತು ಲಕ್ಷ್ಮಣನನ್ನು ನೋಡಿದ. ಪಕ್ಕದಲ್ಲಿ ನಿಂತಿದ್ದ ವಿಭೀಷಣನನ್ನೂ ಕಂಡ. ವಿಭೀಷಣನನ್ನು ನೋಡಿದ ಒಡನೆಯೇ ಅವನಿಗೆ ಮತ್ತೂ ಕೋಪ ಬಂದಿತು. ಕಠೋರವಾದ ವಾಣಿಯಿಂದ "ರಾಕ್ಷಸ! ನೀನು ಇಲ್ಲಿಯೇ ಜನಿಸಿದ, ರಾಕ್ಷಸ ಕುಲದಲ್ಲಿ ಬೆಳೆದೆ. ಈಗ ಶತ್ರುಪಕ್ಷಕ್ಕೆ ಸೇರಿ ನನಗೇ ದ್ರೋಹಮಾಡುತ್ತಿರುವೆಯಾ ? ನನ್ನ ತಂದೆಗೆ ಸೋದರನಾಗಿ, ನನಗೆ ಸ್ವಂತ ಚಿಕ್ಕಪ್ಪನಾಗಿ ಪುತ್ರನಾದ ನನ್ನನ್ನೇ ಸಂಹರಿಸಲು ಲಕ್ಷ್ಮಣನನ್ನು ಕರೆದು ತಂದಿರುವೆಯಲ್ಲ ನಿನ್ನಂಥ ದ್ರೋಹಿ, ಕುಲಘ್ನ, ಪಾತಕಿ, ಸ್ವಜನಘಾತಕಿ ಬೇರೊಬ್ಬರಿಲ್ಲ ನಿನಗೆ ಕುಲಾಭಿಮಾನವಿಲ್ಲ, ಜಾತಿಯ ಅಭಿಮಾನವಿಲ್ಲ, ಭ್ರಾತೃಸ್ನೇಹವಿಲ್ಲ. ನಿನ್ನಂತಹ ಪಾಪಿಯಿಂದ ರಾಕ್ಷಸಕುಲವೇ ಕಲಂಕಿತವಾಯಿತು.

"ಲೋಕದಲ್ಲಿ ಸ್ವಪಕ್ಷವನ್ನು ತ್ಯಜಿಸಿ ಶತ್ರುಪಕ್ಷವನ್ನು ಸೇರುವವನು ಎಂದಿಗೂ ನಲಿಸಲಾರೆ. ಸ್ವಜನರು ಎಷ್ಟೇ ದೋಷಿಗಳಾದರೂ ಅವರೇ ಸೇವನೀಯರು: ಶತ್ರುಗಳು, ಪರರು ಎಷ್ಟೇ ಗುಣವಂತರಾದರೂ ಅವರು ಗ್ರಾಹ್ಯರಲ್ಲ. ಯಾವಾಗಲೂ ಪರರೇ. ಸಜ್ಜನರು ಸಜ್ಜನರೇ. ನೀನು ಇಲ್ಲೇ ಹುಟ್ಟಿಬೆಳೆದೆ. ಇದುವರೆಗೆ ಸೌಖ್ಯವನ್ನು ಅನುಭವಿಸಿದೆ. ಈಗ. ಪಿತೃಸಮಾನಾದ ನಿನ್ನ ಸೋದರನಿಗೇ ಅಹಿತವನ್ನು ಬಯಸುತ್ತಿರುವೆಯಲ್ಲಾ.

"ಪಾತಕಿ! ನೀನು ನಿಜವಾಗಿ ಸುಖವಾಗಿ ಬಾಳುವುದಿಲ್ಲ. ಶತ್ರುಗಳು ಎಲ್ಲರನ್ನೂ ಸಂಹರಿಸಿದ ಮೇಲೆ ನಿನ್ನನ್ನು ನಿಶ್ಚಯವಾಗಿ ನಾಶಪಡಿಯೇ ತೀರುತ್ತಾರೆ. ನೀನು ಖಂಡಿತವಾಗಿ ಸೌಖ್ಯವಾಗಿ ಬಾಳುವುದಿಲ್ಲ. ಸ್ವಜನಘಾತಕಿ, ದ್ರೋಹಿ, ಕುಲನಾಶಕ ನೀನು" ಎಂದೆಲ್ಲ ಜರೆದ.

ಇಂದ್ರಜಿತ್ತಿನ ಕ್ರೂರವಾದ ನಿಂದೆಯನ್ನು ಕೇಳಿದ ವಿಭೀಷಣ, "ಮೂರ್ಖ! ನೀನು ಮೊದಲಿನಿಂದ ಉದ್ಧಟತನಕ್ಕೆ, ಮೋಸಕ್ಕ ಹೆಸರಾದವನು. ನಿನ್ನಂಥ ಕ್ರೂರಿ, ಪಾಪಾತ್ಮ, ಮೂರ್ಖನಿಗೆ ಧರ್ಮಾಧರ್ಮದ ಜಿಜ್ಞಾಸೆ ಏತಕ್ಕೆ ? ನಾನೇನೋ ರಾಕ್ಷಸ ಕುಲದಲ್ಲಿ ಜನಿಸಿದೆ. ನಿಜ. ಆದರೆ ನನ್ನ ಶೀಲ ಸ್ವಭಾವ ರಾಕ್ಷಸರಂತಿಲ್ಲ.

"ನಿನ್ನ ತಂದೆ ನನ್ನ ಹಿರಿಯಣ್ಣನಾಗಬಹುದು. ಆದರೆ ಅವನು ಯಾವಾಗಲೂ ಅಧರ್ಮ ಮಾರ್ಗದಲ್ಲೇ ನಿರತನಾಗಿದಾನೆ. ಪರಸ್ತ್ರೀಯನ್ನು ಹಿಂಸಿಸುವವನನ್ನು, ಪರಧನವನ್ನು ಅಪೇಕ್ಷಿಸುವವನನ್ನು ಪರರಿಗೆ ಅಹಿತವನ್ನೇ ಮಾಡುವವನನ್ನು ತ್ಯಜಿಸುವುದೇ ಧರ್ಮ. ಪಾಪಿಯಾದ ನಿನ್ನ ತಂದೆಯನ್ನು ತ್ಯಜಿಸಿ ನಾನು ಕ್ರೂರವಾದ ಸರ್ಪದಿಂದ ಪಾರಾದಂತೆ ಸುಖವನ್ನು ಪಡೆದಿರುವೆ. ಮೂರ್ಖ! ಕೇಳು. ಪರಧನವನ್ನು ಅಪಹರಿಸುವುದು, ಪರಸ್ತ್ರೀಯನ್ನು ಬಯಸುವುದು, ಹಿತೈಷಿಗಳಾದ ಸ್ವಜನರನ್ನು ಶಂಕಿಸುವುದು-ಈ ಮೂರೂ ಘೋರವಾದ ಪಾಪ ಕರ್ಮಗಳು. ಈ ದೋಷ ಇರುವವನನ್ನು ಅಗ್ನಿಯಿಂದ ಆವೃತವಾದ ಗೃಹವನ್ನು ತ್ಯಜಿಸುವಂತೆ ತ್ಯಜಿಸಬೇಕಾದುದೇ ಧರ್ಮ. ರಾಕ್ಷಸ ಕುಲದಲ್ಲಿ ಜನಿಸಿದರೂ ನಾನು ದೈವಕ್ಕೆ ಪ್ರೀತಿಯಾದ ಸತ್ವಗುಣವನ್ನೇ ಪ್ರಧಾನವಾಗಿ ಹೊಂದಿರುವೆ. ನನ್ನ ಶೀಲ ಸ್ವಭಾವಗಳು ಸತ್ವ ಯುಕ್ತವಾಗಿವೆ.

"ನಿನ್ನ ತಂದೆ ದೇವತೆಗಳನ್ನು, ಮಹರ್ಷಿಗಳನ್ನು ಪೂಜ್ಯರನ್ನು ಸಂಕಟಪಡಿಸಿ ಮಹಾಪಾಪಿ

ಯಾಗಿದ್ದಾನೆ. ಆ ಮಹಾಪಾಪಿಗೆ ತಕ್ಕ ಉದ್ಧಟ, ಮೂರ್ಖ, ಪಾಪಿ ಪುತ್ರ ನೀನಾಗಿರುವೆ. ಕಾಲನ ಪಾಶದಿಂದ ನೀನು ಬಂಧಿತನಾಗಿರುವೆ. ಅದರಿಂದಲೇ ನಿನಗೆ ಈ ವಿಪರೀತ ಬುದ್ಧಿ ಬಂದಿದೆ. ನೀನು ನನ್ನನ್ನು ಏನಾದರೂ ಹೇಳಿಕೋ. ಅದನ್ನು ನಾನು ಲಕ್ಷ್ಯಕ್ಕೆ ತರುವುದಿಲ್ಲ.

"ಈಗಲೂ ಹೇಳುತ್ತೇನೆ ಕೇಳು. ಕಕುಸ್ಥಕುಲ ಶಿರೋಮಣಿಯಾದ ರಾಮಾನುಜನಿಂದ ನಿನಗೆ ಅಂತ್ಯವು ಸನ್ನಿಹಿತವಾಗಿದೆ. ಶೀಘ್ರದಲ್ಲೇ ತನ್ನ ಅಮೋಘವಾದ ಬಾಣಗಳಿಂದ ಲಕ್ಷ್ಮಣ ನಿನ್ನನ್ನು ನಾಶಮಾಡುತ್ತಾನೆ. ಕ್ಷಿಪ್ರದಲ್ಲೇ ನೀನು ಯಮಲೋಕವನ್ನು ಸೇರುವ. ದೇವತೆಗಳನ್ನು ಸಂತೋಷಪಡಿಸುವ. ಈಗ ನೀನು ಲಕ್ಷ್ಮಣನ ಮುಂದೆ ನಿನ್ನ ಸಮಸ್ತ ಬಲವನ್ನೂ ಪ್ರದರ್ಶಿಸು. ಲಕ್ಷ್ಮಣ ನಿಗಿದಿರಾದ ಬಳಿಕ ಪುನಃ ನೀನು ಜೀವದೊಡನೆ ಹಿಂದಿರುಗಲಾರೆ. ನಿನ್ನ ನಾಶ ಸನ್ನಿಹಿತವಾಗಿದೆ. ಅದಕ್ಕೆ ಸಿದ್ಧನಾಗು" ಎಂದ.

ವಿಭೀಷಣನ ಮಾತುಗಳನ್ನು ಕೇಳಿದ ಇಂದ್ರಜಿತು ಕೋಪದಿಂದ ಹುಚ್ಚನಾದ. ಒಡನೆ ತನ್ನ ಧನುರ್ಬಾಣಗಳನ್ನು ಸಿದ್ಧಪಡಿಸಿಕೊಂಡು ಲಕ್ಷ್ಮಣನಿಗಭಿಮುಖನಾದ. ಕಾಲನಂತೆ ಗರ್ಜಿಸುತ್ತಾ "ಶತ್ರುಗಳೇ ! ಇಂದು ನಿಮ್ಮನ್ನು ಯಮಲೋಕಕ್ಕೆ ಕಳುಹಿಸುವ ಹೊಣೆ ನನ್ನದು.ನನ್ನ ಇದುರಿಗೆ ಬಂದ ಒಬ್ಬನೂ ಉಳಿಯುವುದಿಲ್ಲ, ಇದು ಖಂಡಿತ" ಸುಮಿತ್ರಾ ಕುಮಾರ ! ನೀನು ಇಂದು ಯಮ ಲೋಕಕ್ಕೆ ಹೋಗಲು ಸಿದ್ಧನಾಗಿಯೇ ಬಂದಂತಿದೆ. ಹಿಂದೆ ನಾನು ರಾತ್ರಿ ಯುದ್ಧದಲ್ಲಿ ನಿನ್ನನ್ನು ಬಾಣಗಳಿಂದ ಹೊಡೆದು ಕೆಳಗೆ ಕೆಡಹಿದ್ದನ್ನು ಮರೆತು ಪುನಃ ಸಾಯಲು ಬಂದೆಯಾ ?

ಆ ಪಾಪಿಯಾದ ರಾಮ, ಭಕ್ತನಾದ ನಿನ್ನನ್ನು ಬಲಿಗೊಡುವ ಸಲುವಾಗಿ ನನ್ನಲ್ಲಿಗೆ ಕಳುಹಿಸಿದ್ದಾನೆ. ಈಗಲೇ ನಿನ್ನನ್ನು ಕೊಂದು ನಿನ್ನ ಶರೀರವನ್ನು ನಾಯಿ ನರಿಗಳಿಗೆ ಆಹಾರವಾಗಿಸುತ್ತೇನೆ. ನೋಡುತ್ತಿರು ಎಂದ.

ಇಂದ್ರಜಿತ್ತಿನ ಮಾತುಗಳನ್ನು ಖಂಡಿಸುತ್ತಾ ಲಕ್ಷ್ಮಣ ''ರಾಕ್ಷಸ! ಸುಮ್ಮನೆ ಬಾಯ್ಬಡುಕತನದಲ್ಲೇ ಹೊತ್ತನ್ನು ಕಳೆಯುತ್ತಿರುವೆ. ಮಾಡುವುದನ್ನು, ಮಾಡಬೇಕಾದುದನ್ನು ಮಾಡಿ ತೋರಿಸುವುದು ಶೂರನ ಲಕ್ಷಣವಲ್ಲದೆ, ಕೇವಲ ಬಾಯಲ್ಲಿ ಆಡಿ ತೋರಿಸುವುದು ಮಾತ್ರವಲ್ಲ. ನೀನು ಹೆಮ್ಮೆ ಕೊಚ್ಚಿಕೊಳ್ಳುತ್ತಿರುವುದನ್ನು ನೋಡಿದರೆ ಬರೀ ಬಾಯಿಬಡುಕ ಎಂದು ತೋರುತ್ತದೆ. ನಿನ್ನಂತೆ ನಾನು ಆತ ಪ್ರಶಂಸೆ ಮಾಡಿಕೊಳ್ಳುವುದಿಲ್ಲ. ನೀನೂ ವ್ಯರ್ಥವಾದ ಪ್ರಗಲ್ಭವಚನಗಳನ್ನಾಡುವುದನ್ನು ಬಿಟ್ಟು ಕಾರ್ಯೋನ್ಮುಖನಾಗು.

"ಹಿಂದೆ ರಾತ್ರಿ ಕಾಲದಲ್ಲಿ ಚೋರನಂತೆ ಅವಿತುಕೊಂಡು ಯುದ್ಧ ಮಾಡಿದೆ. ನಿನಗೆ ನಿಜವಾಗಿ ಪರಾಕ್ರಮವಿದ್ದರೆ ಧೈರ್ಯದಿಂದ ಇದಿರಿನಲ್ಲಿ ನಿಂತು ಯುದ್ಧ ಮಾಡು. ನಿನ್ನ ಪರಾಕ್ರಮವನ್ನು ತೋರಿಸು" ಎಂದ. ಲಕ್ಷ್ಮಣನ ಭರ್ತ್ಸನೆಯಿಂದ ತಾಡಿತನಾದ ಇಂದ್ರಜಿತು ಕ್ರೋಧದಿಂದ ಲಕ್ಷ್ಮಣನೊಡನೆ ಕಾದಲು ಸಿದ್ಧನಾದ. ಮಹಾರಥವನ್ನೇರಿ ಇಂದ್ರಜಿತು ನಿಂತ. ಹನುಮಂತನ ಹೆಗಲನ್ನೇರಿದ ಲಕ್ಷ್ಮಣ ಉದಯಾಚಲದಲ್ಲಿ ಉದಯಿಸಿದ ಸೂರ್ಯನಂತೆ ಇಂದ್ರಜಿತ್ತನ್ನು ಎದುರಿಸಿ ನಿಂತ. ರಾಕ್ಷಸ ಸಿಂಹನಾದ ಇಂದ್ರಜಿತುವಿಗೂ ಪುರುಷಸಿಂಹನಾದ ಲಕ್ಷ್ಮಣನಿಗೂ ಘೋರವಾದ ಯುದ್ಧ ಜರುಗಿತು ಇಬ್ಬರೂ ಪರಾಕ್ರಮಿಗಳೇ, ಇಬ್ಬರೂ ಬಲಿಷ್ಠರೇ. ಇಬ್ಬರೂ ಪರಸ್ಪರ ಜಯಾಭಿಲಾಷೆಯುಳ್ಳವರೇ. ಘೋರವಾದ ದಾಶರಥಿ–ರಾವಣಿಯರ ಯುದ್ಧವನ್ನು ಕಾಣಲು ಆಕಾಶದಲ್ಲಿ ದೇವತೆಗಳು, ಸಿದ್ಧರು, ಗಂಧರ್ವರು, ದಾನವರು, ಪನ್ನಗರು, ಋಷಿಗಳು. ಯಕ್ಷರು ಕಿಕ್ಕಿರಿದು ಉತ್ಸಾಹದಿಂದ ನಿಂತಿದ್ದರು.

ಇಬ್ಬರು ವೀರರೂ ಎರಡು ಸಿಂಹಗಳಂತೆ, ಮದಿಸಿದ ಎರಡು ಆನೆಗಳಂತೆ ಹೋರಾಡುತ್ತಿದ್ದರು. ಆಕಾಶದಲ್ಲಿ ಎರಡು ಗ್ರಹಗಳನ್ನು ಪ್ರಕಾಶಮಾನವಾಗಿ ಒಂದಕ್ಕೊಂದು ಮುಸೆಯುವಂತೆ ಇಂದ್ರಜಿತು ಲಕ್ಷ್ಮಣರು ಒಬ್ಬರೊಡನೆ ಒಬ್ಬರು ಹೋರಾಡುತ್ತಿದ್ದರು. ವೀರನಾದ ಲಕ್ಷ್ಮಣ ತನ್ನ ಅಮೋಘವಾದ ಬಾಣಗಳನ್ನು ಧನುಸ್ಸಿನಲ್ಲಿ ಹೂಡುತ್ತಿರುವುದನ್ನು ಕಂಡ ಇಂದ್ರಜಿತು ನಿರುತ್ಸಾಹಿಯಾದ.

ಇಂದ್ರಜಿತ್ತಿನ ಕಳಾಹೀನವಾದ ಮುಖವನ್ನು ಕಂಡ ವಿಭೀಷಣ ಲಕ್ಷ್ಮಣನನ್ನು ಮತ್ತಷ್ಟು ಹುರಿದುಂಬಿಸಿದ. "ಲಕ್ಷ್ಮಣಾ ! ಇಂದ್ರಜಿತ್ತಿನ ಉತ್ಸಾಹ ತಣ್ಣಗಾಗಿದೆ. ಇದೇ ತಕ್ಕ ಸಮಯ.; ಅವನನ್ನು ವಧಿಸು" ಎಂದ.

ಲಕ್ಷ್ಮಣ ಬಿಟ್ಟ ಬಾಣಗಳಿಂದ ತಾಡಿತನಾದ ಇಂದ್ರಜಿತು ಮೂರ್ಛಿತನಾದ. ಸ್ವಲ್ಪಹೊತ್ತು ಪ್ರಜ್ಞೆಯನ್ನು ಕಳೆದುಕೊಂಡ. ಪುನಃ ಎಚ್ಚೆತ್ತು ಇದುರಿಗೆ ನಿಂತಿದ್ದ ಲಕ್ಷ್ಮಣನನ್ನು ಕೋಪದಿಂದ ನೋಡಿ "ಅಂದು ನಿನ್ನನ್ನು ಕೆಳಗೆ ಕೆಡುಹಿದ್ದನ್ನು ನೀನು ಮರೆತಂತೆ ಕಾಣುತ್ತದೆ. ನೋಡು ಈಗಲೇ ನಿನ್ನನ್ನು ವಧಿಸುತ್ತೇನೆ" ಎನ್ನುತ್ತಾ ತೀಕ್ಷ್ಣವಾಗಿ ಬಾಣಗಳನ್ನು ಪ್ರಯೋಗಿಸಿದ.

ಲಕ್ಷ್ಮಣ ನಕ್ಕು "ರಾಕ್ಷಸ ನೀನು ಅಲ್ಪ ವೀರ್ಯವುಳ್ಳವನು. ನಿನ್ನಿಂದ ಬಿಡಲ್ಪಟ್ಟ ಬಾಣಗಳು ನನ್ನನ್ನು ನೋಯಿಸಲಾರವು" ಎನ್ನುತ್ತಾ ಇಂದ್ರಜಿತ್ತಿನ ಮೇಲೆ ಬಾಣಗಳನ್ನು ಹೊಡೆದ.

ಇಂದ್ರಜಿತ್ತಿನ ಕವಚ ಲಕ್ಷ್ಮಣನ ಬಾಣಗಳಿಂದ ಹರಿಯಿತು. ಕವಚಹೀನನಾದ ಇಂದ್ರಜಿತು ಇಮ್ಮಡಿ ರೋಷದಿಂದ ಲಕ್ಷ್ಮಣನನ್ನು ಬಾಣಗಳಿಂದ ಮುಚ್ಚಿಬಿಟ್ಟ. ಲಕ್ಷ್ಮಣನ ಕವಚವೂ ಹರಿಯಿತು. ಇಬ್ಬರ ದೇಹದಿಂದ ರಕ್ತದ ಧಾರೆ ಸುರಿಯತೊಡಗಿತು. ಎರಡು ಪರ್ವತಗಳಿಂದ ಹರಿಯುತ್ತಿರುವ ನದೀ ಪ್ರವಾಹದಂತೆ ಅವರಿಬ್ಬರ ಶರೀರದಿಂದ ರಕ್ತ ಹರಿಯುತ್ತಿತ್ತು.

ಇಬ್ಬರೂ ತಮ್ಮ ಧನುಸ್ಸನ್ನು ಎಳೆದು ಟಂಕಾರ ಮಾಡುತ್ತಿದ್ದರು. ಆ ಟಂಕಾರದ ಧ್ವನಿ ಆಕಾಶವನ್ನೇ ವ್ಯಾಪಿಸಿತ್ತು. ಒಬ್ಬರನ್ನೊಬ್ಬರು ಜಯಿಸಲೇ ಬೇಕೆಂಬ ಧೃಡ ನಿಶ್ಚಯದಿಂದ ಹೋರಾಡುತ್ತಿದ್ದರು. ಇಬ್ಬರ ದೇಹಗಳಲ್ಲೂ ಬಾಣಗಳು ನಾಟಿದ್ದವು. ಬಾಣ ನಾಟಿದ ಅವರ ಶರೀರಗಳು ವೃಕ್ಷಗಳಿಂದ ಯುಕ್ತವಾದ ಎರಡು ಪರ್ವತಗಳಂತೆ ಶೋಭಿಸುತ್ತಿದ್ದವು.

ಕೆಂಪಗಿನ ರಕ್ತಧಾರೆ ಶರೀರದಿಂದ ಹರಿಯುತ್ತಿತ್ತು. ಪುಷ್ಪಿಸಿದ ಪಲಾಶವೃಕ್ಷದಂತೆ ಕಂಗೊಳಿಸುತ್ತಿದ್ದ ಇಬ್ಬರೂ ಬಿಡುವಿಲ್ಲದೆ, ಬೇಸರವಿಲ್ಲದೆ, ಆಯಾಸವಿಲ್ಲದೆ ಹೋರಾಡುತ್ತಿದ್ದರು. ಆ ಸಮಯದಲ್ಲಿ ವಿಭೀಷಣ ಧನುರ್ಧಾರಿಯಾಗಿ ಲಕ್ಷ್ಮಣನಿಗೆ ನೇರವಾಗಿ ಯುದ್ಧರಂಗದಲ್ಲಿ ಪ್ರವೇಶಿಸಿದ. ಯುದ್ಧರಂಗವನ್ನು ಪ್ರವೇಶಿಸಿದ ವಿಭೀಷಣ ತನ್ನ ಅನುಚರರಾದ ನಾಲ್ವರು ರಾಕ್ಷಸರೊಡನೆ ಘೋರವಾಗಿ ಯುದ್ಧ ಮಾಡತೊಡಗಿದ. ರಾಕ್ಷಸ ಸೈನ್ಯ ವಿಭೀಷಣನ ಅಸ್ತ್ರಗಳಿಗೆ ಸಿಕ್ಕಿ ಹತವಾಗತೊಡಗಿತು, ವಜ್ರಾಯುಧಕ್ಕೆ ಪರ್ವತಗಳು ಕತ್ತರಿಸಿ ಕೆಳಗೆ ಬೀಳುವಂತೆ ವಿಭೀಷಣನ ಬಾಣಗಳಿಂದ ರಾಕ್ಷಸರು ಹತರಾಗಿ ಬೀಳುತ್ತಿದ್ದರು. ವಾನರರನ್ನು ಸಮಯೋಚಿತವಾಗಿ ವಿಭೀಷಣ ಹುರಿದುಂಬಿಸುತ್ತಿದ್ದ. "ವಾನರ ವೀರರೇ ! ಸುಮ್ಮನೆ ನೋಡುತ್ತ ನಿಂತಿರುವಿರೇಕೆ ? ಈಗಲೇ ಮುನ್ನುಗ್ಗಿ ಈ ರಾಕ್ಷಸ ಸೈನ್ಯವನ್ನು ನಾಶಮಾಡಿ. ರಾವಣನಲ್ಲಿ ಉಳಿದಿರುವ ಸೈನ್ಯ ಇಷ್ಟೇ. ಇಂದ್ರಜಿತು ಸತ್ತ ಎಂದರೆ ರಾವಣ ತೀರಿದಂತೆಯೇ. ಇದುವರೆಗೆ ಅನೇಕ ರಾಕ್ಷಸರು ಹತರಾಗುತ್ತಿದ್ದಾರೆ. ಇನ್ನು

ಉಳಿದವರೆಂದರೆ ಇವರೇ. ಮುನ್ನುಗ್ಗಿ ! ಕಲಿತನದಿಂದ ಈ ಸೈನ್ಯವನ್ನೂ ನಾಶಮಾಡಿಬಿಡಿ. ಆ ಮೇಲೆ ರಾವಣನನ್ನು ಸುಲಭವಾಗಿ ಜಯಿಸಬಹುದು" ಎಂದ. ತಾನೂ ಸ್ವತಃ ತೀಕ್ಷ್ಣವಾದ ಬಾಣಗಳಿಂದ ರಾಕ್ಷಸ ಸೈನ್ಯವನ್ನು ನಾಶ ಮಾಡತೊಡಗಿದ. ವಾನರರೆಲ್ಲ ಉತ್ಸಾಹದಿಂದ ರಾಕ್ಷಸರನ್ನು ಕೊಲ್ಲತೊಡಗಿದರು. ಇತ್ತ ಲಕ್ಷ್ಮಣನಿಗೂ, ಇಂದ್ರಜಿತ್ತಿಗೂ ಘೋರವಾದ ಯುದ್ಧ ಜರುಗಿತು. ಅನೇಕ ತೀಕ್ಷ್ಣವಾದ ಬಾಣಗಳಿಂದ ಇಂದ್ರಜಿತ್ತಿನ ಸಾರಥಿಯನ್ನು ಸಂಹರಿಸಿದ, ಸಾರಥಿಯು ಸಂಹೃತನಾದ ಮೇಲೆ ಇಂದ್ರಜಿತ್ತು ತಾನೇ ಸಾರಥ್ಯವನ್ನು ನಿರ್ವಹಿಸಿಕೊಂಡ.

ಸಾರಥಿಯನ್ನು ಕೊಂದ ಲಕ್ಷ್ಮಣನನ್ನು ವಾನರರೆಲ್ಲ ಪ್ರಶಂಸಿಸಿದರು. ಉತ್ಸಾಹದಿಂದ ಪ್ರಮಾಥಿ, ಶರಭ, ರಭಸ ಮತ್ತು ಗಂಧಮಾದನ ಈ ನಾಲ್ವರು ವಾನರ ಪ್ರಮುಖರೂ ಇಂದ್ರಜಿತ್ತಿನ ನಾಲ್ಕು ಕುದುರೆಗಳ ಮೇಲ ಹಾರಿದರು. ಪರ್ವತಕಾಯರಾದ ಆ ವಾನರರ ಭಾರದಿಂದ ಕುದುರೆಗಳು ಕೆಳಗೆ ಕುಸಿದವು. ಪುನಃ ಏಳಲೇ ಇಲ್ಲ. ಸಾರಥಿ ಸತ್ತ. ರಥ ಒಡೆಯಿತು. ಆಗ ಭೀತನಾದ ಇಂದ್ರಜಿತು ನೆಲದ ಮೇಲೆ ಹಾರಿ ನಿಂತ. ತೀಕ್ಷ್ಣವಾದ ಬಾಣಗಳಿಂದ ಲಕ್ಷ್ಮಣನನ್ನು ಹೊಡಯತೊಡಗಿದ. ರಾಕ್ಷಸರಿಗೂ ವಾನರರಿಗೂ ಯುದ್ಧ ನಡೆಯುತ್ತಿದ್ದಂತೆ ಸೂರ್ಯ ಅಸ್ತಂಗತನಾದ. ಕತ್ತಲೆ ಕವಿಯಿತು. ಆಗ ಇಂದ್ರಜಿತು "ರಾಕ್ಷಸರೇ ನೀವು ಒಟ್ಟಾಗಿ ವಾನರ ಪ್ರಮುಖರೊಂದಿಗ ಯುದ್ಧ ಮಾಡುತ್ತಾ ಈ ವಾನರರನ್ನು ತಡೆದು ನಿಲ್ಲಿಸಿ. ನಾನು ಈಗಲೇ ಲಂಕಗೆ ಹೋಗಿ ರಥವನ್ನೂ ಆಯುಧವನ್ನೂ ತರುತ್ತೇನೆ" ಎಂದು ಲಂಕೆಗೆ ಹೋದ.

ಕ್ಷಣಾರ್ಧದಲ್ಲಿ ಮಹಾ ರಥವನ್ನೇರಿ ಸರ್ವಾಯುಧಗಳಿಂದ ಕೂಡಿದವನಾಗಿ ವಿಭೀಷಣ ಸಹಿತನಾದ ಲಕ್ಷ್ಮಣನ ಮುಂದೆ ಬಂದು ನಿಂತ. ಇಂದ್ರಜಿತ್ತಿನ ಲಾಘವವನ್ನು ಲಕ್ಷ್ಮಣ ಮೆಚ್ಚಿದ. ರಥವನ್ನೇರಿದ ಇಂದ್ರಜಿತು ಲಕ್ಷ್ಮಣನನ್ನು ಬಾಣಗಳಿಂದ ಹೊಡೆದ. ಜೊತೆಯಲ್ಲಿದ್ದ ವಿಭೀಶಣನನ್ನೂ ಬಾಣದಿಂದ ಘಾತಿಸಿದ. ವಿಭೀಷಣನನ್ನು ಕೊಲ್ಲಲು ಇಂದ್ರಜಿತು ಶಕ್ತಿಯನ್ನು ಪ್ರಯೋಗಿಸಿದ. ಆದರೆ, ಲಕ್ಷ್ಮಣ ಆ ಶಕ್ತಿಯನ್ನು ಕತ್ತರಿಸಿದ. ಕುಪಿತನಾದ ಇಂದ್ರಜಿತು ಯಮನಿಂದ ದತ್ತವಾದ ಅಸ್ತ್ರವನ್ನು ವಿಭೀಷಣನ ಮೇಲೆ ಪ್ರಯೋಗಿಸಿದ. ಲಕ್ಷ್ಮಣ ಅದನ್ನೂ ಭಗ್ನಗೊಳಿಸಿದ. ತನ್ನ ಅಸ್ತ್ರ ಭಗ್ನವಾದುದನ್ನು ನೋಡಿ ಇಮ್ಮಡಿ ಕೋಪಗೊಂಡ ಇಂದ್ರಜಿತು ಅನೇಕ ಬಾಣಗಳಿಂದ ಲಕ್ಷ್ಮಣನ ಕವಚವನ್ನು ಭೇಧಿಸಲು ಯತ್ನಿಸಿದ. ಆದರೆ ಅಭೇದ್ಯವಾದ ಲಕ್ಷ್ಮಣನ ಕವಚ ಸುರಕ್ಷಿತವಾಗಿದ್ದುದನ್ನು ಕಂಡು ಮೂರು ಬಾಣಗಳನ್ನು ತೆಗೆದು ಲಕ್ಷ್ಮಣನ ಹಣೆಗೆ ಹೊಡೆದ. ಹಿಮಾಲಯದ ಮೂರು ಶಿಖರಗಳಂತೆ ಆ ಮೂರು ಬಾಣಗಳೂ ಲಕ್ಷ್ಮಣನ ಹಣೆಯಲ್ಲಿ ಶೋಭಿಸುತ್ತಿದ್ದವು.

ಲಕ್ಷ್ಮಣ ತನ್ನ ತೀಕ್ಷಣವಾದ ಬಾಣಗಳಿಂದ ಇಂದ್ರಜಿತ್ತಿನ ಸಾರಥಿಯನ್ನು ಕೊಂದ. ಇಂದ್ರಜಿತ್ತು ಕೋಪದಿಂದ ಲಕ್ಷ್ಮಣನ ಮೇಲೂ, ವಿಭೀಷಣನ ಮೇಲೂ ಬಾಣಗಳ ಮಳೆಗೆರೆದ. ವಿಭೀಷಣ ಹಾರಿಬಂದು ತನ್ನ ಗದೆಯಿಂದ ಇಂದ್ರಜಿತ್ತಿನ ಕುದುರೆಗಳನ್ನು ಪ್ರಹರಿಸಿ ಕೊಂದ.

ಲಕ್ಷ್ಮಣ ಇಂದ್ರಜಿತ್ತಿನ ಕೈಯಲ್ಲಿದ್ದ ಧನುಸ್ಸನ್ನು ಮುರಿದ. ಇನ್ನೊಂದು ಧನುಸ್ಸನ್ನುಹಿಡಿದ ಇಂದ್ರಜಿತು. ಲಕ್ಷ್ಮಣ ಅದನ್ನೂ ತನ್ನ ಬಾಣದಿಂದ ಭಗ್ನಗೊಳಿಸಿದ. ಮೂರನೆಯ ಸಾರಿ ಇಂದ್ರಜಿತು ಮಹಾಧನುಸ್ಸನ್ನು ಹಿಡಿದು ಅನೇಕ ಬಾಣಗಳಿಂದ ಲಕ್ಷ್ಮಣನನ್ನು ಘಾತಿಸಿದ.

ಲಕ್ಷ್ಮಣ ಇಂದ್ರಜಿತ್ತಿನ ಮೇಲೆ ವಾರುಣಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟ. ಅದಕ್ಕೆ ಪ್ರತಿಯಾಗಿ ಇಂದ್ರಜಿತು ರೌದ್ರಾಸ್ತ್ರವನ್ನು ಹೂಡಿದ. ಆವರೆಡು ಅಸ್ತ್ರಗಳು ಆಕಾಶದಲ್ಲಿ ಒಂದಕ್ಕೊಂದು

ಡಿಕ್ಕಿ ಹೊಡೆದು ಭಗ್ನವಾದವು. ಇಂದ್ರಜಿತು ಲಕ್ಷ್ಮಣನನ್ನು ಸಂಹರಿಸಲು ಆಗ್ನೇಯಾಸ್ತ್ರವನ್ನು ಹೂಡಿದ. ಲಕ್ಷ್ಮಣ ಅದನ್ನು ಸೌರಾಸ್ತ್ರದಿಂದ ಭಗ್ನಗೊಳಿಸಿದ. ಆಗ್ನೇಯಾಸ್ತ್ರ ವಿಫಲವಾದದನ್ನು ಕಂಡು ಕೆರಳಿದ ಇಂದ್ರಜಿತು ರೋಷದಿಂದ ಆಸುರಾಸ್ತ್ರವನ್ನು ಪ್ರಯೋಗಿಸಿದ. ಅದರಿಂದ ಶೂಲ, ಮುದ್ಗರ, ಕತ್ತಿ ಪ್ರಾಸ, ತೋಮರ, ಖಡ್ಗ, ಮುಸಲ ಮುಂತಾದ ನಾನಾವಿಧವಾದ ಆಯುಧಗಳು ಉತ್ಪನ್ನವಾಗಿ ಲಕ್ಷ್ಮಣನ ಕಡೆಗೆ ಧಾವಿಸಿದುವು. ಲಕ್ಷ್ಮಣ ಅದಕ್ಕೆ ಪ್ರತಿಯಾಗಿ ಸರ್ವಸಂಜೀವಿನಿಯಾದ ಮಾಹೇಶ್ವರಾಸ್ತ್ರವನ್ನು ಪ್ರಯೋಗಿಸಿದ. ಮಾಹೇಶ್ವರಾಸ್ತ್ರದ ಪ್ರಭಾವದಿಂದ ಆಸುರಾಸ್ತ್ರ ಭಗ್ನವಾಯಿತು.

ಇನ್ನು ತಡಮಾಡುವುದು ಸರಿಯಲ್ಲ ಎಂದು ನಿರ್ಧರಿಸಿದ. ಲಕ್ಷ್ಮಣ ತನ್ನ ಧನುಸ್ಸಿಗೆ ಅಮೋಘವಾದ ಅಸ್ತ್ರವನ್ನು ಹೂಡಿದ. ಅದನ್ನು ಹೂಡುತ್ತಿದ್ದಂತೆಯೇ ಭೂಮಿ ನಡುಗಿತು. ದಿಕ್ಕುಗಳೆಲ್ಲ ಕಂಪಿಸಿದವು. ಹಿಂದೆ, ದೇವಾಸುರ ಯುದ್ಧ ಕಾಲದಲ್ಲಿ ಇಂದ್ರ ಪ್ರಯೋಗಿಸಿದ ಐಂದ್ರಾಸ್ತ್ರವನ್ನು ಲಕ್ಷ್ಮಣ ಅಭಿಮಂತ್ರಿಸಿದ. ಅಸ್ತ್ರವನ್ನು ಧನುಸ್ಸಿನಲ್ಲಿ ಹೂಡಿ ಅಭಿಮಂತ್ರಿಸಿ

**ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ।**
**ಪೌರುಷೇಚ ಅಪ್ರತಿದ್ವಂದ್ವಃ ಶರೈನಂ ಜಹಿ ರಾವಣಿಂ ॥**

ಎಂಬ ಅಮೋಘವಾದ ಮಂತ್ರವನ್ನು ಅನುಸಂಧಾನ ಮಾಡಿದ.

ಈ ಶ್ಲೋಕ ರಾಮಾಯಣದಲ್ಲೇ ಮಂತ್ರಶ್ಲೋಕವೆನಿಸಿದೆ. "ರಾಮನು ಧರ್ಮಾತ್ಮ, ಸತ್ಯಸಂಧ, ಪೌರುಷದಲ್ಲಿ ಅಸಮ ಎಂಬುದು ಸತ್ಯವಾಗುವುದಾದರೆ ಈ ಅಸ್ತ್ರ ರಾವಣನ ಮಗನಾದ ಇಂದ್ರಜಿತ್ತನ್ನು ವಧಿಸಲಿ" ಎಂಬ ಲಕ್ಷ್ಮಣನ ಈ ವಾಕ್ಯಗಳು ರಾಮನ ಇಡೀ ಚಾರಿತ್ರ್ಯವನ್ನೇ ಪ್ರತಿಬಿಂಬಿಸುತ್ತದೆ. ಲಕ್ಷ್ಮಣ ಮೊದಲಿನಿಂದ ಪುರುಷಪ್ರಯತ್ನ, ಪೌರುಷವೇ ಸಾಧಕ ಎನ್ನುತ್ತಿದ್ದವ. ಅನೇಕ ಸಮಯಗಳಲ್ಲಿ ರಾಮನೊಡನೆ ಧರ್ಮದ ಸಾಧ್ಯತೆಯ ಬಗ್ಗೆ ವಾದ ಮಾಡಿದವ.

ಮೊದಲು ರಾಮನ ಹತ್ತಿರ ತಾನು ಪೌರುಷದಿಂದ ಇಂದ್ರಜಿತ್ತನ್ನು ವಧಿಸುವುದಾಗಿ ಹೇಳಿ ಬಂದ. ಮುಂದೆ ಬಹಳ ಕಾಲವಾದರೂ ಇಂದ್ರಜಿತು ಅಳಿಯಲಿಲ್ಲ. ಆಗ ಲಕ್ಷ್ಮಣ ಧರ್ಮಾತ್ಮನಾದ, ಸತ್ಯಸಂಧನಾದ, ಅಪ್ರತಿಮ ಪೌರುಷವುಳ್ಳ ರಾಮನ ಧರ್ಮ, ಸತ್ಯ, ಪೌರುಷ ಇವುಗಳ ಮೇಲೆ ಅವಲಂಬಿಸಿ ಐಂದ್ರಾಸ್ತ್ರವನ್ನು ಪ್ರಯೋಗಿಸಿದ.

ಇಲ್ಲಿ ಅಸ್ತ್ರದ ಮಹಿಮೆಗಿಂತ ರಾಮನ ಧರ್ಮ, ಸತ್ಯ, ಪೌರುಷಗಳ ಪ್ರಭಾವವೇ ಅಧಿಕ ಎಂಬುದು ಕಂಡುಬರುತ್ತದೆ. ಲಕ್ಷ್ಮಣನು ಪ್ರಯೋಗಿಸಿದ್ದು ಐಂದ್ರಾಸ್ತ್ರ, ಇಂದ್ರಜಿತು ಇಂದ್ರನನ್ನೇ ಜಯಿಸಿದವನು. ಯಾರನ್ನು ಇಂದ್ರಜಿತು ಜಯಿಸಿದ್ದನೋ ಆ ಇಂದ್ರನೇ ಐಂದ್ರಾಸ್ತ್ರದ ದೇವತೆ. ಬರೀ ಐಂದ್ರಾಸ್ತ್ರವೇ ಆಗಿದ್ದರೆ ಅದು ಇಂದ್ರಜಿತುವನ್ನು ಸರಿಹರಿಸುತ್ತಿತ್ತೋ ಇಲ್ಲವೋ ಸಂಶಯಾಸ್ಪದ. ಆದರೆ, ಆ ಅಸ್ತ್ರವನ್ನು ರಾಮನ ಧರ್ಮ, ಸತ್ಯ, ಪೌರುಷ ಕಾಯ್ದುವು. ರಾಮರಕ್ಷೆಯಿಂದ ರಕ್ಷಿತವಾದ ಆ ಅಸ್ತ್ರ ಇಂದ್ರಜಿತ್ತಿನ ತಲೆಯನ್ನು ಕತ್ತರಿಸಿತು.

ಲಕ್ಷ್ಮಣ ಧರ್ಮದ ಮಹತ್ವವನ್ನು ಒಪ್ಪಿಕೊಂಡುದು ಈ ಸಂದರ್ಭದಲ್ಲೇ. ಇದುವರೆಗೆ ಲಕ್ಷ್ಮಣ ಧರ್ಮವನ್ನು ಅದರ ಶ್ರೇಷ್ಠತೆಯನ್ನೂ ಧಿಕ್ಕರಿಸಿ ವಾದ ಮಾಡಿದ್ದ. ಈಗ ಧರ್ಮವನ್ನು ಎತ್ತಿ ಹಿಡಿಯುತ್ತಾನೆ.

"ರಾಮೋ ವಿಗ್ರಹವಾನ್ ಧರ್ಮಃ" ಎಂಬುದೂ, ರಾಮನೇ ಸತ್ಯದ ಪ್ರತಿಕೃತಿ ಎಂಬುದೂ ವ್ಯಕ್ತವಾಗುವುದು ಈ ಸಂದರ್ಭದಲ್ಲೇ.

ಅಲ್ಲದೆ, ರಾಮಾಯಣದಲ್ಲಿ ರಾಮನ ಬಗ್ಗೆ ಅನೇಕ ದೂರುಗಳು, ಸಂಶಯಗಳು ಹೇಳಲ್ಪಟ್ಟಿವೆ. ರಾಮ ವಾಲಿಯನ್ನು ಮರೆಯಲ್ಲಿ ಕೊಂದುದು ಧರ್ಮವೇ ? ಖರನನ್ನು ಕೊಲ್ಲುವಾಗ ಒಂದು ಹೆಜ್ಜೆ ಹಿಂದೆ ಸರಿದನಲ್ಲ ? ಆದರಿಂದ ರಾಮ ನಿಜವಾಗಿ ಪೌರುಷವಂತನೇ ? ನಿಜವಾಗಿ ರಾಮ ಸತ್ಯ ಸಂಧನೇ ? ಎಂಬ ಈ ಎಲ್ಲ ಪ್ರಶ್ನೆಗಳಿಗೂ ರಾಮನ ಬಗ್ಗೆ ಉಂಟಾಗಬಹುದಾದ ಎಲ್ಲ ಸಂಶಯ ಗಳಿಗೂ ಉತ್ತರರೂಪವಾಗಿದೆ ಈ ಶ್ಲೋಕ.

ರಾಮ ಧರ್ಮಾತ್ಮ. ಧರ್ಮವೇ ರಾಮ, ರಾಮನೇ ಧರ್ಮ. ಸತ್ಯಸಂಧ. ದೃಢವ್ರತ. ಪೌರುಷದಲ್ಲಿ ಅವನಿಗೆ ಸಮರಾರೂ ಇಲ್ಲ. ಹಾಗಿದ್ದುದರಿಂದಲೇ ಲಕ್ಷ್ಮಣ ಪ್ರಯೋಗಿಸಿದ ಐಂದ್ರಾಸ್ತ್ರ ಇಂದ್ರಜಿತ್ತಿನ ತಲೆಯನ್ನು ಕತ್ತರಿಸಿತು. ಯಾರನ್ನು ಮೊದಲು ಸೋಲಿಸಿದ್ದನೋ ಆ ಇಂದ್ರನೇ ದೇವತೆಯಾಗಿರುವ ಐಂದ್ರಾಸ್ತ್ರದಿಂದಲೇ ಇಂದ್ರಜಿತು ಹತನಾದ.

ಲಕ್ಷ್ಮಣ ಸಂಪೂರ್ಣವಾಗಿ ಧರ್ಮದ ಶ್ರೇಷ್ಠತೆಯನ್ನು ಒಪ್ಪಿಕೊಂಡುದ ಈ ಪ್ರಕರಣದಲ್ಲೇ. ಲಕ್ಷ್ಮಣನಿಂದ ಬಿಡಲ್ಪಟ್ಟ ಐಂದ್ರಾಸ್ತ್ರ ಕುಂಡಲಸಹಿತನಾದ ಇದ್ರಜಿತ್ತಿನ ತಲೆಯನ್ನು ಕತ್ತರಿಸಿತು. ಇಂದ್ರಜಿತ್ತು ಧರೆಗುರುಳಿದ. ಇಂದ್ರಜಿತು ಹತನಾದುದನ್ನು ಕಂಡ ದೇವತೆಗಳು, ಗಂಧರ್ವರು, ಋಷಿಗಳು ಎಲ್ಲರೂ ಸಂತೋಷಪಟ್ಟರು. ದೇವದುಂದುಭಿಗಳು ಮೊಳಗಿದವು, ಅಪ್ಸರೆಯರು ನರ್ತಿಸಿದರು.

ರಾಕ್ಷಸರು ಭಯದಿಂದ ಓಡಿದರು. ಕೆಲವರು ಲಂಕೆಯನ್ನು ಹೊಕ್ಕರು. ಮತ್ತೆ ಕೆಲವರು ಸಮುದ್ರದಲ್ಲಿ ಹಾರಿಕೊಂಡರು. ಇನ್ನೂ ಕೆಲವರು ಪರ್ವತದ ಶಿಖರಗಳಲ್ಲಿ ಅವಿತುಕೊಂಡರು. ಸೂರ್ಯನು ಅಸ್ತಂಗತನಾದ ಮೇಲೆ ಕಿರಣಗಳು ತಮ್ಮಷ್ಟಕ್ಕೆ ತಾವೇ ಮಾಯವಾಗುವಂತೆ ಇಂದ್ರ-ಜಿತ್ತು ಹತನಾದೊಡನೆ ರಾಕ್ಷಸರೆಲ್ಲ ಕಣ್ಣಿಗೆ ಕಾಣದಾದರು.

ವಾನರರ ಸಂತೋಷ ಹೇಳತೀರದು. ಕೆಲವು ವಾನರರು ಕುಣಿಯತೊಡಗಿದರು. ಮತ್ತೆ ಕೆಲವರು ನರ್ತಿಸತೊಡಗಿದರು. ಕೆಲರು "ಕಿಲಕಿಲ" ಎಂದು ಹರ್ಷಧ್ವನಿ ಮಾಡಿದರು. ವಾನರರು ಒಬ್ಬರನ್ನೊಬ್ಬರು ಅಪ್ಪಿಕೊಂಡು ನಲಿದರು. ಎಲ್ಲ ವಾನರರೂ ಹನುಮಂತ, ಜಾಂಬವಂತ, ಅಂಗದ ಮುಂತಾದ ಪ್ರಮುಖರೊಂದಿಗೆ ಲಕ್ಷ್ಮಣನನ್ನು ಸುತ್ತುವರಿದು ಅವನನ್ನು ಅಭಿನಂದಿಸಿದರು. ವಾನರರೆಲ್ಲ ಒಟ್ಟಾಗಿ "ಲಕ್ಷ್ಮಣನಿಗೆ ಜಯವಾಗಲಿ" ಎಂದು ಘೋಷಿಸತೊಡಗಿದರು.

ಇಂದ್ರಜಿತ್ತಿನ ವಧೆಯನಂತರ ಸಮುದ್ರ ಶಾಂತವಾಯಿತು. ಆಕಾಶ ನಿರ್ಮಲವಾಯಿತು. ದಿಕ್ಕುಗಳು ಪ್ರಸನ್ನವಾದವು. ಗಾಳಿ ಮಂದವಾಗಿ ಬೀಸತೊಡಗಿತು. ಸರ್ವರೂ ಸಂತುಷ್ಟ ರಾದರು.

ಇಂದ್ರಜಿತ್ತನ್ನು ಸಂಹರಿಸಿದ ಲಕ್ಷ್ಮಣ ಪ್ರಸನ್ನನಾಗಿ ಹನುಮಂತ ಜಾಂಬವಂತರ ಕಡೆಗೆ ಬಂದ. ಲಕ್ಷ್ಮಣನ ಅಂಗಾಂಗಗಳು ಬಾಣಗಳಿಂದ ಕ್ಷತವಿಕ್ಷತವಾಗಿದ್ದುವು. ರಕ್ತಧಾರೆ ಹರಿಯು ತ್ತಿತ್ತು. ಅಲ್ಲಿಂದ ವಿಭೀಷಣ. ಹನುಮಂತರ ಸಹಾಯದಿಂದ ನಡೆದು ಲಕ್ಷ್ಮಣನು ರಾಮ ಸುಗ್ರೀವರ ಬಳಿಗೆ ಬಂದ. ರಕ್ತದಿಂದ ತೊಯ್ದ ದೇಹದಿಂದ ಲಕ್ಷ್ಮಣ ತನ್ನ ಜ್ಯೇಷ್ಠಭ್ರಾತೃವಾದ

ರಾಮನ ಪಾದಗಳನ್ನು ಸ್ಪರ್ಶಿಸಿ ನಮಸ್ಕರಿಸಿದ. ಆಗ ವಿಭೀಷಣ ಸಂತೋಷದಿಂದ "ರಾಘವ ! ನಾವು ನೆನಸಿಕೊಂಡು ಹೋದ ಕಾರ್ಯ ಯಶಸ್ವಿಯಾಯಿತು. ಲಕ್ಷ್ಮಣ ತಾನೇ ಸ್ವತಃ ಇಂದ್ರಜಿತ್ತಿನ ತಲೆಯನ್ನು ಕತ್ತರಿಸಿ ಅವನನ್ನು ಸಂಹರಿಸಿದ" ಎಂದ.

ವಿಭೀಷಣನು "ಇಂದ್ರಜಿತ್ತನ್ನು ಲಕ್ಷ್ಮಣ ಸಂಹರಿಸಿದ" ಎಂದುದನ್ನು ಕೇಳಿದ ರಾಮ ಪ್ರೀತಿಯಿಂದ ಲಕ್ಷ್ಮಣನನ್ನು ಬಾಚಿ ತಬ್ಬಿಕೊಂಡ.

"ಭಲೇ ಲಕ್ಷ್ಮಣಾ ! ಇಂದ್ರಜಿತ್ತನ್ನು ಕೊಂದು ನಿಜವಾಗಿ ನೀನು ಮಹತ್ಕಾರ್ಯವನ್ನೇ ಸಾಧಿಸಿರುವ. ಇಂದ್ರಜಿತ್ತು ಅಳಿದ ಮೇಲೆ ರಾವಣ ಸತ್ತಂತೆಯೇ. ಸೌಮಿತ್ರಿ, ನಿನ್ನ ಕಾರ್ಯ ನನಗೆ ಬಹಳ ಪ್ರಿಯವನ್ನುಂಟುಮಾಡಿದೆ" ಎಂದು ಲಕ್ಷ್ಮಣನನ್ನು ಪ್ರಶಂಸಿಸಿದ.

ಪ್ರಶಂಸೆಯನ್ನು ಕೇಳಿ ಲಕ್ಷ್ಮಣ ನಾಚಿಕೆಯಿಂದ ತಲೆತಗ್ಗಿಸಿದ. ಲಕ್ಷ್ಮಣನನ್ನು ಬಾಚಿ ತಬ್ಬಿಕೊಂಡು ರಾಮ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡ. ಅವನ ತಲೆಯನ್ನು ಆಘ್ರಾಣಿಸಿದ. ಪ್ರೀತಿಯನ್ನೂ, ಬಹುಮಾನವನ್ನೂ ಸೂಚಿಸುವ ತನ್ನ ದಿವ್ಯನೇತ್ರಗಳಿಂದ ಲಕ್ಷ್ಮಣನನ್ನು ಮತ್ತೆ ಮತ್ತೆ ನೋಡಿದ.

ದೇವೇಂದ್ರನು ಉಪೇಂದ್ರನನ್ನು ಆಲಂಗಿಸುವಂತೆ ರಾಮ ಲಕ್ಷ್ಮಣನನ್ನು ಮತ್ತೆ ಮತ್ತೆ ಅಪ್ಪಿದ. ಲಕ್ಷ್ಮಣನ ದೇಹವೆಲ್ಲ ಬಾಣದಿಂದ ವ್ರಣಿತವಾಗಿತ್ತು. ರಾಮ ಲಕ್ಷ್ಮಣನನ್ನು ಅಪ್ಪಿ ಅವನ ದೇಹವನ್ನು ತನ್ನ ಮೃದುವಾದ ಕರಕಮಲದಿಂದ ತಡವಿದ. ಇದರಿಂದ ಲಕ್ಷ್ಮಣನಿಗೆ ಬಹಳ ಸೌಖ್ಯವೇರ್ಪಟ್ಟಿತು. ಲಕ್ಷ್ಮಣನನ್ನು ಮತ್ತೆ ಮತ್ತೆ ಅಪ್ಪಿದ ರಾಮ ಅವನನ್ನು ತಡವುತ್ತಾ "ಸೌಮಿತ್ರಿ ! ನಿಜವಾಗಿ ನೀನು ಬಹಳ ಕಷ್ಟಕರವಾದ ಕಾರ್ಯವನ್ನು ಸಾಧಿಸಿರುವಿ. ಇಂದ್ರಜಿತು ಸತ್ತಿದ್ದು ರಾವಣನಿಗೆ ಬಲಗೈ ಕಡಿದಂತೆ ಆಗಿದೆ. ಇನ್ನು ಆ ರಾವಣ ತನ್ನ ಸಮಸ್ತ ಸೈನ್ಯದೊಡನೆ ಬರುತ್ತಾನೆ. ನಾನು ಆಗ ಅವನನ್ನು ಕೊಲ್ಲುತ್ತೇನೆ." ಎಂದು ಮತ್ತೆ ಮತ್ತೆ ಲಕ್ಷ್ಮಣನ ಕಾರ್ಯವನ್ನು ಮೆಚ್ಚಿದ. ಹನುಮಂತ ವಿಭೀಷಣರನ್ನೂ ಪ್ರಶಂಸಿಸಿದ.

ಅನಂತರ ರಾಮನು ವೈದ್ಯನಾದ ಸುಷೇಣನನ್ನು ಕುರಿತು ಲಕ್ಷ್ಮಣ, ವಿಭೀಷಣ ಹಾಗೂ ಇತರ ವಾನರ, ಭಲ್ಲೂಕಗಳ ಗಾಯ ಆರುವಂತೆ ಔಷಧಿಯನ್ನು ಲೇಪಿಸಲು ಆಜ್ಞಾಪಿಸಿದ.

ಸುಷೇಣ ಸಂಜೀವಿನಿಯ ಮೂಲಿಕೆಯನ್ನು ತೆಗೆದು ಲಕ್ಷ್ಮಣನ ಮೂಗಿಗೆ ಹಿಡಿದ. ಅದನ್ನು ಆಘ್ರಾಣಿಸುತ್ತಿದ್ದಂತೆ ಲಕ್ಷ್ಮಣನ ಶರೀರದಲ್ಲಾದ ಗಾಯಗಳು ಮಾಗಿದವು. ಪುನಃ ರಾಮ ಲಕ್ಷ್ಮಣನನ್ನು ಆಲಿಂಗಿಸಿದ. ರಾಮನ ಆ ಆಲಿಂಗನ ಅಮೃತಸೇಚನೆಯಂತಾಯಿತು ಲಕ್ಷ್ಮಣನಿಗೆ.

ಇಂದ್ರಜಿತು ಮೃತನಾದ ಸಮಾಚಾರವನ್ನು ಕೇಳಿದ ಸುಗ್ರೀವನೂ ಬಹಳ ಸಂತೋಷಪಟ್ಟ.

### ರಾವಣನ ಶೋಕ

ಲಕ್ಷ್ಮಣನಿಂದ ಇಂದ್ರಜಿತುವಿನ ವಧೆಯಾದುದನ್ನು ಕೇಳಿದ ರಾವಣನ ಮಂತ್ರಿಗಳು ಮೊದಲು ರಾಕ್ಷಸರ ಮಾತನ್ನು ನಂಬಲಿಲ್ಲ. ತಾವೇ ಹೋಗಿ ಯಥಾರ್ಥವಾದ ಸಮಾಚಾರವನ್ನು ತಿಳಿದವರಾಗಿ ರಾವಣನ ಬಳಿ ಹೋದರು.

"ರಾವಣೇಶ್ವರಾ ! ಮಹಾಪರಾಕ್ರಮಿಯಾದ ಇಂದ್ರಜಿತು ವಾನರ ಸೈನ್ಯವನ್ನು ಬಹಳವಾಗಿ

ಘಾಸಿಪಡಿಸಿದ. ನಂತರ ಲಕ್ಷ್ಮಣನ ಬಾಣಗಳಿಗೆ ತುತ್ತಾಗಿ ಮೃತ್ಯುವಶನಾದ" ಎಂದು ವಿಜ್ಞಾಪಿಸಿದರು.

ಪುತ್ರನಾದ ಇಂದ್ರಜಿತು ಲಕ್ಷ್ಮಣನಿಂದ ಹತನಾದ ಎಂದು ಕೇಳಿದೊಡನೆ ರಾವಣನು ಮೂರ್ಛಿತನಾದ. ಅವನ ಇಂದ್ರಿಯಗಳೆಲ್ಲ ಕ್ಷೀಣಿಸಿದವು. ಬಹಳ ಹೊತ್ತಾದಮೇಲೆ ಚೇತರಿಸಿಕೊಂಡು ವಿಲಪಿಸತೊಡಗಿದ.

"ಹಾ ಪುತ್ರ ! ಹಾ ರಾಕ್ಷಸಕುಲದೀಪಕ ! ಇಂದ್ರನನ್ನು ಜಯಿಸಿದ ವೀರ ! ನಮ್ಮನ್ನು ಅಗಲಿದೆಯಾ ? ಮೇಘದಂತೆ ಗರ್ಜಿಸುವ ಮೇಘನಾದ ! ನಿನ್ನ ಆ ಬಲ, ಆ ಶೌರ್ಯ, ಆ ಪರಾಕ್ರಮ, ಆ ವೀರ್ಯ ಎಲ್ಲಡಗಿತು ? ಇಂದ್ರನನ್ನೇ ಜಯಿಸಿದ ನೀನು ಲಕ್ಷ್ಮಣನ ಬಾಣಕ್ಕೆ ಆಹುತಿಯಾದೆ ! ಇದನ್ನು ನಾ ಹೇಗೆ ತಾನೇ ಸಹಿಸಲು ಸಾಧ್ಯ !

"ನೀನು ಯುವರಾಜಪದವಿಯನ್ನೂ, ಲಂಕಾಪುರಿಯನ್ನೂ, ನಿನ್ನ ತಂದೆಯಾದ ನನ್ನನ್ನೂ, ನಿನ್ನ ತಾಯಿಯನ್ನೂ, ನಿನ್ನ ಪ್ರಿಯ ಪತ್ನಿಯರನ್ನೂ, ಬಾಂಧವರನ್ನೂ ಬಿಟ್ಟು ಹೊರಟೆಯಾ ?

ನಿನ್ನ ಪರಾಕ್ರಮಕ್ಕೆ ಎಣೆಯುಂಟೆ ? ನಿನ್ನ ಶೌರ್ಯದಮುಂದೆ ಅದಾರು ತಾನೇ ನಿಲ್ಲಲು ಶಕ್ತರಾದರು ? ಅಯ್ಯೋ ! ನಿನ್ನನ್ನು ಕಳೆದುಕೊಂಡು ನಾನು ಹತಭಾಗ್ಯನಾದೆನಲ್ಲ. ಇಂದ್ರಜಿತು, ನಾನು ಮೊದಲು ಮೃತನಾಗಿ ನೀನು ನನಗೆ ಪ್ರೇತಕಾರ್ಯ ಮಾಡಬೇಕಾಗಿತ್ತು. ಈಗ ಅದು ವಿಪರೀತವಾಗಿ ಪರಿಣಮಿಸಿತಲ್ಲಾ. ನಾನಿದ್ದುಕೊಂಡು ನನ್ನ ಕಣ್ಣೆದುರಿಗೆ ನೀ ಕಾಲವಶನಾಗಿ ನಿನಗೆ ನಾನು ಪ್ರೇತಕಾರ್ಯ ಮಾಡುವ ಸ್ಥಿತಿ ಒದಗಿ ಬಂದಿತೆ ?

"ಹಾ ಪುತ್ರ ! ಇನ್ನೂ ಆ ರಾಮ, ಲಕ್ಷ್ಮಣ, ಸುಗ್ರೀವರು ಬದುಕಿರುವಾಗ ಅವರನ್ನು ಕೊಲ್ಲದೆ ನೀನು ಹೇಗೆ ತಾನೇ ಅಳಿದೆ ?

"ನಿನ್ನ ತಾಯಿಗೆ ನಾನು ಏನು ಉತ್ತರ ಹೇಳಲಿ? ಅಯ್ಯೋ ! ಕಣ್ಮಣಿಯಾದ ನೀನು ಅಳಿದ ಮೇಲೆ ನನಗೆ ರಾಜ್ಯದಿಂದ ಏನು ? ಸೀತೆಯಿಂದ ಏನು ?" ಎಂದು ಪುತ್ರಶೋಕದಿಂದ ಪ್ರಲಾಪಿಸಿದ.

ಪ್ರಲಾಪಿಸುತ್ತಿದ್ದಂತೆ ರಾವಣನ ಕಣ್ಣುಗಳು ಕೋಪದಿಂದ ಮತ್ತಷ್ಟು ಕೆಂಪಾದವು. ಕಿಡಿಗಳನ್ನು ಉದುರಿಸುತ್ತಿರುವ ತನ್ನ ನೋಟವನ್ನು ಸುತ್ತಲೂ ಪಸರಿಸಿದ. ರಾವಣನ ದೃಷ್ಟಿಗೆ ಬಿದ್ದ ರಾಕ್ಷಸರೆಲ್ಲ ಭಯದಿಂದ ಅಲ್ಲಲ್ಲೇ ಕಂಬಗಳ ಮರೆಯಲ್ಲಿ ಅಡಗಿದರು. ಮೊದಲೇ ಚಂಡಕೋಪಿ. ಈಗ ಪುತ್ರಶೋಕದಿಂದ ಮತ್ತಷ್ಟು ಕುಪಿತನಾದ.ಜ್ವಲಿಸುತ್ತಿರುವ ಅಗ್ನಿಯಂತೆ ರಾವಣ ತನ್ನಲ್ಲೇ ಕುದಿಯತೊಡಗಿದ. ಹೆಬ್ಬಾವಿನಂತೆ ನಿಟ್ಟುಸಿರು ಬಿಡುತ್ತಾ ಅತ್ತಿತ್ತ ತನ್ನ ಕೆಂಡದಂಥ ಕಣ್ಣುಗಳನ್ನು ಹೊರಳಿಸಿ ನೋಡಿದ.

ಶೋಕಭಾರದಿಂದ ಸಂಕ್ರುದ್ಧ ರಾವಣ ಯೋಚಿಸಿದ: "ನನ್ನ ಪುತ್ರನಾದ ಇಂದ್ರಜಿತು ವಾನರರನ್ನು ಮೋಸಗೊಳಿಸುವ ಸಲುವಾಗಿ ಮಾಯಾಸೀತೆಯನ್ನು ಕೊಂದ. ಆ ಸೀತೆಯಿಂದ ತಾನೇ ಇಷ್ಟೆಲ್ಲ ನಷ್ಟ ಪರಂಪರೆ ಒದಗಿದ್ದು ? ನನ್ನ ಮಗ ಮಾಯಾಸೀತೆಯನ್ನು ಕೊಂದ. ನಾನು ನಿಜವಾದ ಸೀತೆಯನ್ನೇ ಕೊಂದು ಅವನು ಮಾಡಿದ್ದನ್ನು ಸತ್ಯವಾಗಿಸುತ್ತೇನೆ" ಎಂದು ಹೊಳೆಯುತ್ತಿರುವ ಕತ್ತಿಯನ್ನು ಒರೆಯಿಂದ ಸೆಳೆದು ಅಶೋಕವನದತ್ತ ಧಾವಿಸಿದ.

ಕ್ರೋಧವೇ ಮೂರ್ತೀಭವಿಸಿದಂತೆ ರಾವಣ ಕತ್ತಿಯನ್ನು ಹಿರಿದು ಅಶೋಕವನದ ಕಡೆಗೆ ನುಗ್ಗುತ್ತಿರುವುದನ್ನು ಕಂಡ ರಾವಣನ ಮಂತ್ರಿಗಳು ಅವನನ್ನು ಬಹು ಪ್ರಕಾರದಿಂದ ತಡೆಯಲು ಪ್ರಯತ್ನಿಸಿದರು. ಆದರೆ ರಾವಣ ಅವರನ್ನು ಲಕ್ಷಿಸದೆ ಸೀತೆಯ ಕಡೆಗೇ ನುಗ್ಗಿ ಬರುತ್ತಿದ್ದ. ಕತ್ತಿಯನ್ನು ಹಿರಿದು ಬರುತ್ತಿದ್ದ ರಾವಣನನ್ನು ಕಂಡ ರಾಕ್ಷಸಿಯರ ಮಧ್ಯದಲ್ಲಿದ್ದ ಸೀತೆ ಶೋಕ ಕ್ಕೊಳಗಾದಳು. "ಅಯ್ಯೋ! ರಾಮನನ್ನು ನಾಥನನ್ನಾಗಿ ಪಡೆದೂ ನಾನು ಈಗ ಅನಾಥಳಾದೆ ನಲ್ಲ! ಈಗ, ಈ ಪಾಪಿ ರಾಕ್ಷಸ ನನ್ನನ್ನು ಕೊಲ್ಲಲು ಬರುತ್ತಿದ್ದಾನೆ. ಆಗಲೇ ನಾನು ಹನುಮಂತನ ಮಾತನ್ನು ಕೇಳಿ ಅವನೊಡನೆ ಹೋಗಿದ್ದರೆ ಚೆನ್ನಾಗಿರುತ್ತಿತ್ತು. ಈಗ, ಈ ಕಷ್ಟ ವನ್ನು ಅನುಭವಿಸುವ ಸ್ಥಿತಿ ಬರುತ್ತಿರಲಿಲ್ಲ.

"ಅಥವಾ ಪಾಪಾತ್ಮನಾದ ರಾವಣ ರಾಮ ಲಕ್ಷ್ಮಣರನ್ನು ಸಂಹರಿಸಿಯೇ ಇತ್ತ ಬರುತ್ತಿ ದ್ದಾನೋ ಏನೋ" ಎಂದು ಹಲುಬತೊಡಗಿದಳು.

ಸೀತೆಯ ದೈನ್ಯಾವಸ್ಥೆಯನ್ನು ನೋಡಿದ, ಸುಪಾರ್ಶ್ವನೆಂಬ ರಾವಣನ ಮಂತ್ರಿ. ಅವನು ಮಹಾ ಬುದ್ಧಿವಂತ. ನುಗ್ಗಿ ಬರುತ್ತಿದ್ದ ರಾವಣನನ್ನು ತಡೆದು "ರಾಕ್ಷಸ ರಾಜ! ನೀನು ಕುಬೇರ ನಿಗೆ ತಮ್ಮನಾಗಿ, ಬ್ರಹ್ಮಕುಲೋತ್ಪನ್ನನಾಗಿ ಧರ್ಮವಿರುದ್ಧವಾದ ಸ್ತ್ರೀಹತ್ಯೆ ಮಾಡುವುದೇ? ನೋಡು! ಈ ವಿದೇಹ ಕುಮಾರಿ ಎಂತಹ ಸ್ಥಿತಿಯಲ್ಲಿದ್ದಾಳೆ! ಪುರುಷನಾದವ ಪೌರುಷವನ್ನು ಶತ್ರುವಿನ ಮೇಲೆ ತೋರಿಸಬೇಕೇ ವಿನಾ ಅಬಲೆಯ ಮೇಲಲ್ಲ. ರಾವಣ! ನಿನ್ನ ಬಲವನ್ನು ರಾಮನ ಮೇಲ ತೋರಿಸು. ಇಂದು ಚತುರ್ದಶಿ. ಸಕಲ ಸೈನ್ಯವನ್ನೂ ಸಿದ್ಧಗೊಳಿಸಿಕೊ. ನಾಳೆ ಅಮಾವಾಸ್ಯೆಯಂದು ರಾಮನಮೇಲೆ ಯುದ್ಧಕ್ಕೆ ಹೋಗು. ರಾಮನನ್ನು ಯುದ್ಧದಲ್ಲಿ ಜಯಿಸು. ಆಮೇಲೆ ಸೀತೆ ನಿನ್ನವಳಾಗುತ್ತಾಳೆ" ಎಂದ.

ಸುಪಾರ್ಶ್ವನ ಕಾಲೋಚಿತವಾದ ಮಾತುಗಳನ್ನು ಒಪ್ಪಿ ದುರಾತ್ಮನಾದ ರಾವಣ ತನ್ನ ಅರ ಮನೆಗೆ ಹಿಂದಿರುಗಿದ. ಅಲ್ಲಿಂದ ಪುನಃ ತನ್ನವರೊಡನೆ ರಾಜ ಸಭೆಯನ್ನು ಪ್ರವೇಶಿಸಿದ.

ರಾಜಸಭೆಯನ್ನು ಪ್ರವೇಶಿಸಿ ಸಿಂಹಾಸನದಮೇಲೆ ಕುಳಿತ ರಾವಣ ಕುಪಿತವಾದ ಸಿಂಹದಂತೆ ದೀರ್ಘವಾಗಿ ನಿಟ್ಟುಸಿರುಬಿಡತೊಡಗಿದ.

## ಶ್ರೀ ರಾಮನಿಂದ ರಾವಣ ಸೈನ್ಯ ಸಂಹಾರ

ರಾಕ್ಷಸ ರಾಜನಾದ ರಾವಣ ರಾಕ್ಷಸರನ್ನು ಕುರಿತು "ನೀವೆಲ್ಲ ಒಟ್ಟಾಗಿ ಸಕಲ ವಿಧವಾದ ಆಯುಧಗಳಿಂದ ಸಜ್ಜಾಗಿ ರಾಮನೊಬ್ಬನನ್ನೇ ಮುತ್ತಿ ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿ ಅವನನ್ನು ನಾಶ ಮಾಡಿ. ನಾನೂ ನನ್ನ ದಿವ್ಯವಾದ ಬ್ರಹ್ಮದತ್ತ ರಥವನ್ನೇರಿ ರಾಮನನ್ನು ಇದಿರಿಸುತ್ತೇನೆ" ಎಂದು ಆಜ್ಞಾಪಿಸಿದ. ರಾವಣನ ಆಜ್ಞೆಯಂತೆ ಬೆಳಗಾಗುತ್ತಿದ್ದಂತೆ ರಾಕ್ಷಸರೆಲ್ಲ ನಾನಾ ವಿಧವಾದ ಆಯುಧಗಳಿಂದ ಯುಕ್ತರಾಗಿ ಹೊರಟರು. ಕೆಲವರು ಆನೆಯನ್ನು ಮತ್ತೆ ಕೆಲ ವರು ಕುದುರೆಯನ್ನು, ಇನ್ನೂ ಕೆಲವರು ರಥವನ್ನೇರಿ ಹೊರಟರು. ಮತ್ತೆ ಕೆಲವರು ಕಾಲ್ನಡಿಗೆ ಯಿಂದಲೇ ಹೊರಟರು. ಹೀಗೆ ಸಹಸ್ರಾರು ರಾಕ್ಷಸರು ಏಕ ಕಾಲದಲ್ಲಿ ವಾನರರ ನಡುವೆ ನುಗ್ಗಿದರು.

ಪ್ರಾಸ, ಶೂಲ, ಖಡ್ಗ, ಮುಸಲ ಚಾಪಧಾರಿಗಳಾದ ರಾಕ್ಷಸರಿಗೂ ಕಲ್ಲು, ಬಂಡೆ, ವೃಕ್ಷಧಾ ರಿಗಳಾದ ವಾನರರಿಗೂ ಘೋರವಾದ ಯುದ್ಧ ಕೈಗಟ್ಟಿತು. ಒಬ್ಬೊಬ್ಬ ರಾಕ್ಷಸನ ಮೇಲೆ

ನೂರಾರು ವಾನರರು ಏರಿ ಕುಳಿತು ತಮ್ಮ ಉಗುರುಗಳಿಂದ, ಹಲ್ಲುಗಳಿಂದ ರಾಕ್ಷಸರ ಅಂಗಗಳನ್ನೇ ಕಡಿದು ಹಾಕುತ್ತಿದ್ದರು. ಹಾಗೆಯೇ ಪರ್ವತಾಕಾರರಾದ ರಾಕ್ಷಸರೂ ತಮ್ಮ ವಿಧವಿಧವಾದ ಆಯುಧಗಳಿಂದ ವಾನರರನ್ನು ಸಂಹರಿಸುತ್ತಿದ್ದರು. ಆ ರಣರಂಗದಲ್ಲಿ ರಕ್ತದ ಕಾಲುವೆ ಹರಿಯತೊಡಗಿತು. ಆ ರಕ್ತ ಪ್ರವಾಹದಲ್ಲಿ ರಾಕ್ಷಸರ, ವಾನರರ ಶವಗಳು ತೇಲುತ್ತಿದ್ದವು.

ಬರಬರುತ್ತಾ ರಾಕ್ಷಸರ ಕೈ ಮೇಲಾಗುತ್ತಾ ಬಂದಿತು. ನೂರಾರು ಸಂಖ್ಯೆಯಲ್ಲಿ ವಾನರರು ಹತರಾಗುತ್ತಾ ಬಂದರು. ಆಗ ಭಯ ಭ್ರಾಂತರಾದ ವಾನರರು ಶರಣಾಗತವತ್ಸಲನಾದ ರಾಮನನ್ನು ಆಶ್ರಯಿಸಿದರು.

ರಾಮ ವಾನರರಿಗೆ ಅಭಯವನ್ನಿತ್ತು ತನ್ನ ದಿವ್ಯವಾದ ಧನುಸ್ಸನ್ನು ಟಂಕಾರ ಮಾಡುತ್ತಾ ಒಬ್ಬನೇ ರಾಕ್ಷಸರ ಮಧ್ಯೆ ಬಂದು ನಿಂತು ಬಾಣಗಳ ಮಳೆಗರೆಯತೊಡಗಿದ. ರಾಮನ ಬಾಣಗಳಿಗೆ ಆಹುತಿಯಾಗುತ್ತಾ ಬಂದರು ಅನೇಕ ರಾಕ್ಷಸರು.

ರಾಮ ಎಲ್ಲಿದ್ದಾನೆ, ಯಾವಾಗ ಬಾಣ ತೆಗೆಯುತ್ತಾನೆ, ಯಾವಾಗ ಅದನ್ನು ಧನುಸ್ಸಿನಲ್ಲಿ ಹೂಡುತ್ತಾನೆ. ಯಾವಾಗ ಆಕರ್ಣಾಂತ ಬಾಣವನ್ನು ಸೆಳೆಯುತ್ತಾನೆ. ಯಾವಾಗ ಬಿಡುತ್ತಾನೆ. ಇದೊಂದೂ ರಾಕ್ಷಸರಿಗೆ ಗೊತ್ತಾಗುತ್ತಿರಲಿಲ್ಲ. ರಾಕ್ಷಸರಿಗೆ ಗೊತ್ತಾಗುತ್ತಿದ್ದುದು ರಾಮನ ಸೂರ್ಯ ಸಂಕಾಶವಾದ ಬಾಣಗಳು ತಗಲುತ್ತಿದ್ದುದು, ಆದರಿಂದ ರಾಕ್ಷಸರು ಹತರಾಗುತ್ತಿದ್ದುದು ಅಷ್ಟೇ. "ರಾಮ ಎಲ್ಲಿದ್ದಾನೆ" ಎಂದೇ ತಿಳಿಯುತ್ತಿರಲಿಲ್ಲ ರಾಕ್ಷಸರಿಗೆ. ಚಕ್ರದಂತೆ ರಾಮ ಸುತ್ತತೊಡಗಿದ. ಪ್ರಳಯ ಕಾಲದಲ್ಲಿ ಕಾಲಚಕ್ರ ಎಲ್ಲವನ್ನೂ ಸುಡುವಂತೆ ತನ್ನ ಅಮೋಘವಾದ ಬಾಣಗಳಿಂದ ರಾಕ್ಷಸರನ್ನು ದಗ್ಧಗೊಳಿಸತೊಡಗಿದ.

**ತೇತು ರಾಮ ಸಹಸ್ರಾಣಿ ರಣೇ ಪಶ್ಯಂತಿ ರಾಕ್ಷಸಾಃ ।**
**ಪುನಃ ಪಶ್ಯಂತಿ ಕಾಕುತ್ಸ್ಥಂ ಏಕಮೇವ ಮಹಾಹವೇ ॥**

ಒಮ್ಮೆಲೇ ರಾವಣನ ಅನುಚರರಾದ ರಾಕ್ಷಸರಿಗೆ ಸಹಸ್ರ ರಾಮರು ಕಾಣಿಸುತ್ತಿದ್ದರು. ಎಲ್ಲೆಲ್ಲೂ ರಾಮನೇ ಕಾಣುತ್ತಿದ್ದ. ಅವನಿಗೆ ಇವನು ರಾಮನಂತೆ ಕಾಣಿಸುತ್ತಿದ್ದ. ಇವನಿಗೆ ಅವನು ರಾಮನಂತೆ ಕಾಣುತ್ತಿದ್ದ ! ಪರಸ್ಪರ ತಮ್ಮ ತಮ್ಮೊಳಗೆ ರಾಮನನ್ನು ಕಂಡ ರಾಕ್ಷಸರು ತಮ್ಮ ತಮ್ಮನ್ನೇ ಘಾತಿಸಿಕೊಳ್ಳತೊಡಗಿದರು !

ಪರಮಾಸ್ತ್ರವೆನಿಸಿದ ಗಾಂಧರ್ವಾಸ್ತ್ರದಿಂದ ಮೋಹಿತರಾದ ರಾಕ್ಷಸರು ತಮ್ಮನ್ನು ತಾವೇ ಕೊಂದುಕೊಳ್ಳುತ್ತಿದ್ದರು. ಈ ಪ್ರಕರಣದಲ್ಲಿ ರಾಮನ ಅದ್ಭುತವಾದ ಪರಾಕ್ರಮವನ್ನು ವಾಲ್ಮೀಕಿ ವಿವರಿಸುತ್ತಾರೆ !

ರಾಮನು ಸರ್ವಥಾ ಧರ್ಮ ಯುದ್ಧವನ್ನೇ ಮಾಡಿದ. ರಾಮನು ವೇಗದಿಂದ ಓಡಾಡುವ ರೀತಿ ಕಾಲಚಕ್ರದ ಗತಿಯಂತೆ ಇತ್ತು. ನಿಮಿಷಾರ್ಧದಲ್ಲಿ ಸಾವಿರಾರು ರಾಕ್ಷಸರನ್ನು ನಿಗ್ರಹಿಸುತ್ತಿದ್ದ ರಣರಂಗದಲ್ಲಿ ಎಲ್ಲೆಲ್ಲೂ ರಾಮ ಬಾಣವೇ ಕಂಡು ಬರುತ್ತಿತ್ತು.

ರಾಮನ ಅಪ್ರತಿಮ ವೀರ್ಯದಿಂದ ಬೆದರಿದ ರಾಕ್ಷಸರಿಗೆ ಎಲ್ಲೆಲ್ಲೂ ರಾಮನೇ ಕಾಣತೊಡಗಿದ. ಮಾರೀಚನಿಗೆ ವೃಕ್ಷ ವೃಕ್ಷದಲ್ಲೂ ರಾಮ ದರ್ಶನವಾದಂತೆ ರಾಕ್ಷಸರಿಗೆ ರಾಕ್ಷಸರೆಲ್ಲ ರಾಮನಂತೆಯೇ ಕಂಡರು.

ಅಗೋ ಅಲ್ಲಿ ರಾಮ ! ಆನೆಗಳನ್ನು ಕೊಲ್ಲುತ್ತಿದ್ದಾನೆ ಹೊಡೆಯಿರಿ ! ಇಲ್ಲಿ–ಇಲ್ಲಿ ರಾಮ ಕುದುರೆಗಳನ್ನು ಕೊಲ್ಲುತ್ತಿದ್ದಾನೆ–ಇಲ್ಲಿ ಹೊಡೆಯಿರಿ–ಅಲ್ಲಿ ! ಅಲ್ಲಿ ! ರಾಮನನ್ನು ನೋಡಿ ! ಧನುಸ್ಸನ್ನು ಹಿಡಿದು ಕಾಲಾಳುಗಳನ್ನು ನಾಶ ಮಾಡುತ್ತಿದ್ದಾನೆ–ಕೊಲ್ಲಿ ರಾಮನನ್ನು–ಅಲ್ಲಿ ರಾಮ ! ಎಂದು ಗರ್ಜಿಸುತ್ತಾ ರಾಕ್ಷಸರು ರಾಕ್ಷಸರನ್ನೇ ಕೊಲ್ಲತೊಡಗಿದರು. ರಣರಂಗವೆಲ್ಲ "ಅಲ್ಲಿ ರಾಮ ಇಲ್ಲಿ ರಾಮ" ಎಂಬ ಧ್ವನಿಯಿಂದ ರಾಮಮಯವಾಯಿತು.

ರಾಮ ಏಕಾಕಿಯಾಗಿ ರಾವಣನ ಮೂಲಬಲವನ್ನು ನಿಗ್ರಹಿಸುವ ಪ್ರಕರಣವನ್ನು ಅನುಭವಿಸದ ರಾಮಭಕ್ತರಿಲ್ಲ. ಅಲ್ಲಿ ರಾಮ ! ಇಲ್ಲಿ ರಾಮ ! ಎಲ್ಲೆಲ್ಲೂ ರಾಮ ಎಂಬ ಈ ಸೊಲ್ಲೇ ವೇದಾಂತದ ಗಹನ ತತ್ವವನ್ನು ಹೊರಗೆಡಹುತ್ತಿದೆ. **"ಸರ್ವಂ ಬ್ರಹ್ಮಮಯಂ ಜಗತ್"** ಎಂಬ ಶ್ರುತಿ ವಾಕ್ಯವನ್ನು ರಾಮನು ಪ್ರಮಾಣೀಕರಿಸಿದ. ಆ ರಾಕ್ಷಸನಿಗೆ ಈ ರಾಕ್ಷಸ ರಾಮನಾಗಿ ಕಂಡ. ಈ ರಾಕ್ಷಸನಿಗೆ ಆ ರಾಕ್ಷಸ ರಾಮನಾಗಿ ತೋರಿದ. ಇಬ್ಬರೂ ಅವನು ರಾಮ ! ಇವನು ರಾಮ! ಎಂದು ಒಬ್ಬರನ್ನೊಬ್ಬರು ಹೊಡೆದು ಒಬ್ಬರ ಪಾಲಿಗೆ ಮತ್ತೊಬ್ಬರು ಯಮನಂತೆ ಆದರು.

ಇದನ್ನು ವಿವರಿಸುವಾಗ, ಇದರ ಅಂತರಾರ್ಥವನ್ನು ತಿಳಿಯಬೇಕು. **"ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ"** ಎಂಬ ಗೀತಾ ವಾಕ್ಯದಂತೆ ಎಲ್ಲರ ಹೃದಯದಲ್ಲೂ ನಿವಾಸವಾಗಿರುವ ಬ್ರಹ್ಮ ಒಬ್ಬನೇ ಎಂಬ ತತ್ವವನ್ನು ಹೊರಗೆಡಹಿದ.

ಹೀಗೆ ರಾಮನು ಅದ್ಭುತವಾದ ಪರಾಕ್ರಮವನ್ನು ತೋರಿ ಒಂದೂವರೆ ಗಂಟೆಯ ಕಾಲದಲ್ಲಿ ಬೆಂಕಿಯನ್ನು ಕಕ್ಕುವ ತನ್ನ ಅಮೋಘವಾದ ಬಾಣಗಳಿಂದ ರಾಕ್ಷಸ ಸೈನ್ಯವನ್ನು ಸಂಹರಿಸಿದ. ಶ್ರೀ ರಾಮಚಂದ್ರನಿಂದ ಹತರಾದ ಸೈನಿಕರ, ಸೈನಿಕ ಪಡೆಯ ಲೆಕ್ಕಾಚಾರ ಮಾಡಿ ಮಹರ್ಷಿಗಳು ಹೇಳುತ್ತಾರೆ.

**ಅನೀಕಂ ದಶಸಾಹಸ್ರಂ ರಥಾನಾಂವಾತರಂಹಸಾಂ ।**
**ಅಷ್ಟಾದಶ ಸಹಸ್ರಾಣಿ ಕುಂಜರಾಣಾಂ ತರಸ್ವಿನಾಂ ॥**
**ಚತುರ್ದಶ ಸಹಸ್ರಾಣಿ ಸಾರೋಹಾಣಾಂಚ ವಾಜಿನಾಂ ।**
**ಪೂರ್ಣೇ ಶತಸಹಸ್ರೇ ದ್ವೇ ರಾಕ್ಷಸಾನಾಂ ಪದಾತಿನಾಂ ॥**
**ದಿವಸಸ್ಯಾಷ್ಟಮೇ ಭಾಗೇ ಶರೈರಗ್ನಿ ಶಿಖೋ ಪಮೈಃ ।**
**ಹತಾನ್ಯೇಕೇನ ರಾಮೇಣ ರಕ್ಷಸಾಂ ಕಾಮರೂಪಿಣಾಂ ॥**

ಹತ್ತು ಸಾವಿರ ಅನೀಕಗಳಷ್ಟು ವಾಯುವೇಗವುಳ್ಳ ರಥಗಳು, ಹದಿನೆಂಟು ಸಾವಿರ ಅನೀಕಗಳಷ್ಟು ಮಹಾಬಲಾಢ್ಯವಾದ ಆನೆಗಳು, ಹದಿನಾಲ್ಕು ಸಾವಿರ ಅನೀಕಗಳಷ್ಟು ಸವಾರರೊಡಗೂಡಿದ ಕುದುರೆಗಳು, ಎರಡು ಲಕ್ಷ ಅನೀಕದಷ್ಟು ಪದಾತಿದಳ–ಹೀಗೆ ಒಟ್ಟು 176 ಕೋಟಿ 41 ಲಕ್ಷ 80 ಸಾವಿರ ಸೇನೆಯನ್ನು ದಿವಸಾಷ್ಟಮೀ ಭಾಗೇ ಅಂದರೆ ಕೇವಲ 90 ನಿಮಿಷಗಳಲ್ಲಿ ಶ್ರೀರಾಮಚಂದ್ರ ನಾಶಮಾಡಿದ.

ಈ ಅನೀಕ ಎಂಬ ಪದಕ್ಕೆ ಸ್ವಲ್ಪ ವಿವರಣೆ ಅಗತ್ಯ. 7290 ದಳದ ಒಂದು ತುಕಡಿಗೆ ಅನೀಕ ಎಂದು ಹೆಸರು. ಈ ಒಂದು ದಳದ ವಿವರ ಹೀಗಿದೆ. ಒಂದಾನೆ, ಒಂದು ರಥ, ಮೂರು ಕು ಐದು ಕಾಲಾಳು ಸೇರಿದರೆ ಒಂದು ಪತ್ತಿ, ಮೂರು ಪತ್ತಿ ಒಂದು ಸೇನಾ ಮುಖ

ಮುಖ ಒಂದು ಗುಲ್ಮ, ಮೂರು ಗುಲ್ಮ ಒಂದು ಗಣ, ಮೂರು ಗುಣ ಒಂದು ವಾಹಿನೀ ಮೂರು ವಾಹಿನೀ ಒಂದು ಪೃತನಾ, ಮೂರು ಪೃತನಾ ಒಂದು ಚಮೂ ಇಂಥ ಮೂರು ಚಮೂಗಳಾದರೆ ಒಂದು ಅನೀಕ.

ರಥ, ಆನೆ, ಕುದುರೆ, ಅಸ್ತ್ರಶಸ್ತ್ರಗಳು ನಾಶವಾದ ನಂತರ ಆಳಿದುಳಿದ ರಾಕ್ಷಸರು ಓಡಿ ಹೋದರು.

ಆಗ ಮುರಿದ ರಥಗಳಿಂದ, ಸತ್ತು ಬಿದ್ದ ಆನೆ, ಕುದುರೆ, ರಾಕ್ಷಸರಿಂದ ತುಂಬಿದ ಆ ರಣ ಭೂಮಿ ಕುಪಿತನಾದ ಕಾಲರುದ್ರನ ಕ್ರೀಡಾ ಭೂಮಿಯಂತಿತ್ತು.

ರಾಮನು ರಾವಣನ ರಾಕ್ಷಸ ಸೈನ್ಯವನ್ನು ಸಂಹರಿಸಿದುದನ್ನು ಕಂಡ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ವೀರ ರಾಘವನನ್ನು ಮನಸಾರೆ ಕೊಂಡಾಡಿದರು. ಸರ್ವ ಸೈನ್ಯವನ್ನು ನಾಶಮಾಡಿದ ರಾಮ, ಸುಗ್ರೀವ, ಹನುಮಂತ, ಮೈಂದ, ದ್ವಿವಿಧ, ಜಾಂಬವಂತರಿದ್ದ ಸ್ಥಳಕ್ಕೆ ಬಂದ. ಅವರೆಲ್ಲ ರಾಮನನ್ನು ಸ್ತುತಿಸಿದರು. ಆಗ, ರಾಮ ವಾನರ ಪ್ರಮುಖರೊಡನೆ "ಈಗ ನಾನು ಪ್ರಯೋಗಿಸಿದ ದಿವ್ಯವಾದ ಅಸ್ತ್ರಬಲ ನನಗೆ ಮತ್ತು ಶಂಕರನಿಗೆ ಮಾತ್ರವೇ ಮೀಸಲು''

**ಏತದಸ್ತ್ರ ಬಲಂ ದಿವ್ಯಂ ಮಮವಾ ತ್ರ್ಯಂಬಕಸ್ಯವಾ**

ಎನ್ನುತ್ತಾನೆ, ಈ ಮಾತು ಗಮನಾರ್ಹ.

## ರಾಕ್ಷಸಿಯರ ವಿಲಾಪ

ರಾಮನಿಂದ ಸಮಸ್ತ ರಾಕ್ಷಸಸೈನ್ಯವೂ ಸಂಹರಿಸಲ್ಪಟ್ಟ ವಾರ್ತೆಯನ್ನು ಕೇಳಿದ ರಾಕ್ಷಸಿಯರು ಬಹಳವಾಗಿ ಶೋಕಿಸತೊಡಗಿದರು. ಕೆಲವರು ಪುತ್ರರನ್ನು, ಹಲವರು ಪತಿಯನ್ನು, ಮತ್ತೆ ಕೆಲವರು ಸಹೋದರರನ್ನು, ಇನ್ನೂ ಕೆಲವರು ಬಂಧುಗಳನ್ನು ಕಳೆದುಕೊಂಡು ರೋದಿಸತೊಡಗಿದರು. ಹಲವರು ಹಲವು ವಿಧದಲ್ಲಿ !

"ಅಯ್ಯೋ ! ಪಾಪಿನಿಯಾದ ಆ ಹಾಳು ಮುದುಕಿ ಶೂರ್ಪಣಖಿಯಿಂದ ನಮಗೆಲ್ಲ ಈ ಸ್ಥಿತಿ ಒದಗಿಬಂದಿತು. ಆ ಕ್ರೂರಳಾದ, ದುರ್ಮುಖಿಯಾದ ರಾಕ್ಷಸಿ ಯಾವಾಗ ರಾಮಲಕ್ಷ್ಮಣರಿದ್ದ ಕಾಡಿಗೆ ಹೋಗಿ ರಾಮನನ್ನು ಕಾಮಿಸಿದಳೋ ! ಅದು ಯಾವ ಕೆಟ್ಟಗಳಿಗೆಯೋ ! ಆಗಿನಿಂದ ರಾಕ್ಷಸರಿಗೆ ಭಯ ಪ್ರಾಪ್ತವಾಯಿತು.''

ಮುದುಕಿಯೂ ದುರ್ಮುಖಿಯೂ ಆದ ಆ ಕುರೂಪಿ ಶೂರ್ಪಣಖಿ ಎಲ್ಲಿ ? ಮನ್ಮಥಾಕಾರನಾದ, ಮಹಾಬಲಿಯಾದ, ಸರ್ವಭೂತಗಳಿಗೂ ಹಿತವನ್ನು ಬಯಸುವ ಆ ರಾಮನೆಲ್ಲಿ ! ಎಲ್ಲಿಂದ ಎಲ್ಲಿಗೆ ?

"ಆ ಮೂಢಳ ಮಾತನ್ನು ಕೇಳಿ ಮೂಢನಾದ ಈ ರಾಕ್ಷಸರಾಜ ವಿದೇಹಕುವರಿಯನ್ನು ಕರೆದು ತಂದನಲ್ಲಾ ! ಇವನ ಮೌಢ್ಯಕ್ಕೆ ಏನು ಹೇಳಿದರೂ ಸಾಲದು !

"ರಾಮ ಸಾಮಾನ್ಯನೆ ? ಹಿಂದೆ ವಿರಾಧನು ಸೀತೆಯನ್ನು ಬಯಸಿದಾಗ ಒಂದೇ ಬಾಣದಿಂದ ಸಂಹರಿಸಿದವನಲ್ಲವೆ ? ಇದೊಂದೇ ಉದಾಹರಣೆ ಸಾಲದೆ ? ರಾಮ ಪರಾಕ್ರಮಿ !

“ಜನಸ್ಥಾನದಲ್ಲಿ ಮಹಾಪರಾಕ್ರಮಿಗಳೆನಿಸಿದ ಖರ, ದೂಷಣ ತ್ರಿಶಿರರನ್ನೂ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಏಕಾಕಿಯಾಗಿ ಕೊಂದ ಆ ರಾಮನ ವೀರ್ಯವನ್ನು ಅರಿಯದೆ ಹೋದನಲ್ಲ ಈ ರಾವಣ ! ''

“ಯೋಜನದೂರ ಹರಡಿದ್ದ ಬಾಹುಗಳನ್ನು ಒಂದೇ ಏಟಿಗೆ ಕತ್ತರಿಸಿ ಆ ಕಬಂಧನನ್ನು ಸಂಹರಿಸಿದ. ಅದೊಂದೇ ಉದಾಹರಣೆ ಸಾಕು “ರಾಮ ಅತ್ಯಂತ ಪರಾಕ್ರಮಿ ಎಂಬುದಕ್ಕೆ. ಇದನ್ನೂ ರಾವಣ ತಿಳಿಯದೆ ಹೋದನಲ್ಲಾ”.

“ರಾಜ್ಯರಹಿತನಾದ ಸುಗ್ರೀವನಿಗೆ ಮಹಾಬಲಿಷ್ಠನಾದ ವಾಲಿಯನ್ನು ಒಂದೇ ಬಾಣದಿಂದ ಕೊಂದು ರಾಜ್ಯವನ್ನು ಕೊಡಿಸಿದ. ಇದನ್ನಾದರೂ ರಾವಣ ತಿಳಿಯಬಾರದಿತ್ತೆ ?''

“ಅಯ್ಯೋ ! ಮಹಾಬಲರಾದ, ಅಜೇಯರೆನಿಸಿದ, ಅತಿಕಾಯ, ಕುಂಭಕರ್ಣ, ಇಂದ್ರಜಿತು ಮುಂತಾದ ವೀರರು ಹತರಾದರು. ಅದರಿಂದಲೂ ರಾಮನ ಹಿರಿಮೆಯನ್ನು ಅರಿಯದಾದನಲ್ಲ.”

“ಇದು ನಿಜವಾಗಿ ಬ್ರಹ್ಮನ ಶಾಪವೇ ಸರಿ. ರಾವಣ ಬ್ರಹ್ಮನಿಂದ ದೇವ, ದಾನವ, ಯಕ್ಷ ರಾಕ್ಷಸ, ಸಿದ್ಧ, ಪನ್ನಗ, ಋಷಿ, ಮುನಿಗಳಿಂದ ಅಜೇಯತ್ವವನ್ನು ಅಮರತ್ವವನ್ನು ಪಡೆದಿದ್ದ. ಆದರೆ, ಮನುಷ್ಯರನ್ನು ಅಲಕ್ಷಿಸಿದ. ಈಗ, ಸಾಕ್ಷಾತ್ ಮಹಾವಿಷ್ಣುವೇ ರಾಮರೂಪದಲ್ಲಿ ಬಂದು ಹೀಗೆ ರಾಕ್ಷಸರನ್ನೆಲ್ಲ ಸಂಹರಿಸಿದನೋ ಏನೋ”

“ಅಯ್ಯೋ ! ಈ ರಾವಣನಿಗಾಗಿ ನಮ್ಮ ಬಂಧುಗಳು ಜೀವ ಬಿಡುವಂತಾಯಿತಲ್ಲಾ. ಎಂಥ ದುರವಸ್ಥೆ ನಮಗೊದಗಿತು.”

“ರಾಕ್ಷಸರ ಕುಲವನ್ನು ನಾಶಮಾಡುವುದಕ್ಕಾಗಿಯೇ ವಿದೇಹನಂದಿನಿ ಬಂದಳು. ರಾಮನನ್ನು ಜಯಿಸುವ ಒಬ್ಬ ವೀರನು ಈ ಹದಿನಾಲ್ಕು ಲೋಕಗಳಲ್ಲಿ ಹುಡುಕಿದರೂ, ಕಾಣಸಿಗರು. ರಾವಣ ಸ್ವಯಂಕೃತಾಪರಾಧದಿಂದ ತನ್ನನ್ನು ಮಾತ್ರವಲ್ಲದೆ ಇಡೀ ರಾಕ್ಷಸ ಕುಲವನ್ನೇ ಬಲಿಗೊಟ್ಟನಲ್ಲಾ” ಎಂದು ನಾನಾ ವಿಧವಾಗಿ ಹಲುಬತೊಡಗಿದರು.

ಪತಿವ್ರತೆಯ ಕಣ್ಣೀರು ವ್ಯರ್ಥವಾಗದು. ಸುಂದರಕಾಂಡದಲ್ಲಿ ರಾಕ್ಷಸಿಯರಿಂದ ಪೀಡಿತಳಾದ ಸೀತೆ ದುಃಖದಿಂದ ''ನಾನು ಹೇಗೆ ಈಗ ದುಃಖದಿಂದ ಕಣ್ಣೀರನ್ನು ಸುರಿಸುತ್ತಿದೇನೆಯೋ ಹಾಗೇ ರಾಮಬಾಣದಿಂದ ದಗ್ಧರಾದ ರಾಕ್ಷಸರ ಗೃಹದಲ್ಲಿ ಅವರವರ ಬಂಧುಗಳು ಕಣ್ಣೀರನ್ನು ಸುರಿಸುತ್ತಾರೆ. ಲಂಕೆ ಸ್ಮಶಾನವಾಗುತ್ತದೆ” ಎಂದಿದ್ದಳು. ಅದು ಈಗ ನಿಜವಾಯಿತು. ಮನೆ ಮನೆಗಳಲ್ಲೂ ರಾಕ್ಷಸಿಯರು ರೋದಿಸತೊಡಗಿದರು.

ರಾಕ್ಷಸಿಯರ ರೋದನದಲ್ಲಿಯೂ ವಾಲ್ಮೀಕಿ ಒಂದು ವೈಶಿಷ್ಟ್ಯವನ್ನಿಟ್ಟಿದಾರೆ. ತಂದೆ, ಅಣ್ಣ, ತಮ್ಮ, ಪತಿ, ಬಂಧು ಬಾಂಧವರನ್ನು ಕಳೆದುಕೊಂಡ, ರಾಕ್ಷಸಿಯರು ರಾವಣನನ್ನು ನಿಂದಿಸುತ್ತಾ ರಾಮನನ್ನು ಪ್ರಶಂಸಿಸುತ್ತಿದ್ದರು. ರಾಘವ ಸರ್ವಭೂತಹಿತವನ್ನೇ ಬಯಸತಕ್ಕವನು, ಧರ್ಮಾತ್ಮ ಎಂದು ತಮ್ಮ ಬಂಧುಗಳನ್ನು ಕೊಂದ ರಾಮನನ್ನು ಹೊಗಳುತ್ತಿದ್ದರು. ಇದರಿಂದಲೇ “ರಿಪೂಣಾಮಪಿವತ್ಸಲಃ” ಎಂಬುದಾಗಿ ವಾಲ್ಮೀಕಿ ಹೇಳಿದಾರೆ. ಶತ್ರುಗಳೂ ಮೆಚ್ಚಿ ಹೊಗಳುವಂಥ ಗುಣ ರಾಮನದು. ಮಾತ್ರವಲ್ಲ. ಆಗಿನ ಕಾಲದಲ್ಲಿ ಸ್ತ್ರೀಯರು, ಲಂಕೆಯಲ್ಲಿರುವ ಸ್ತ್ರೀಯರು ಎಷ್ಟು ಬುದ್ಧಿವಂತರು ಎಂಬುದು ಇಲ್ಲಿ ವೇದ್ಯವಾಗುತ್ತದೆ. ರಾವಣನ ಗುಣ, ಶೌರ್ಯ, ಸಾಹಸ-ಎಲ್ಲವನ್ನೂ ತಿಳಿದುಕೊಂಡಿದಾರೆ !

## ರಾವಣ ಯುದ್ಧಕ್ಕೆ ಹೊರಡುವುದು

ಮನೆಮನೆಗಳಲ್ಲೂ ವಿಲಪಿಸುತ್ತಿದ್ದ ರಾಕ್ಷಸಿಯರ ಅಳುವನ್ನು ರಾವಣ ಕೇಳಿದ. ದುಃಖದಿಂದ ಎರಡು ಘಂಟೆಗಳ ಕಾಲ ಯೋಚಿಸಿದ. ತರುವಾಯ ಕೋಪಗೊಂಡ ರಾವಣ ಭಯಂಕರವಾಗಿ ಕಾಣತೊಡಗಿದ. ಭಯಂಕರವಾದ ಅಗ್ನಿ ಜ್ವಾಲೆಗಳನ್ನು ಕಕ್ಕುವ ತನ್ನ ಕಣ್ಣುಗಳನ್ನು ಅತ್ತಿತ್ತ ಹೊರಳಿಸಿದ. ಅದರಿಂದ ರಾಕ್ಷಸರು ತಲ್ಲಣಿಸಿದರು.

ಅಳಿದುಳಿದ ತನ್ನ ಸರ್ವ ಸೈನ್ಯವನ್ನೂ ಸಿದ್ಧಗೊಳಿಸುವಂತೆ ಆಜ್ಞಾಪಿಸಿದ. ಅದರಂತೆ ಸೇನಾಧ್ಯಕ್ಷ ಸರ್ವ ಸೇನೆಯನ್ನೂ ಸಿದ್ಧಗೊಳಿಸಿದ. ರಾವಣನ ಆಜ್ಞೆಯಂತೆ ನಾಲ್ಕು ಸೇನಾಪತಿಗಳು ಸೈನ್ಯವನ್ನು ಸಿದ್ಧಗೊಳಿಸಿದರು. ಒಂದು ಲಕ್ಷಕ್ಕಿಂತ ಅಧಿಕವಾದ ರಥಗಳು, ಮೂರು ಲಕ್ಷ ಆನೆಯ ದಳ, ಅರವತ್ತು ಕೋಟಿ ಕುದುರೆಯ ಸೈನ್ಯ, ಅಷ್ಟೇ ಒಂಟೆಯ ಸೈನ್ಯ ಮತ್ತು ಅಸಂಖ್ಯಾತರಾದ ಕಾಲಾಳುಗಳು ಇಷ್ಟು ರಾವಣನ ಆಜ್ಞೆಯಂತೆ ಸನ್ನದ್ಧವಾದಂವು.

ಇದರ ಮಧ್ಯೆ ಸಾರಥಿ ಮಹಾರಥವನ್ನು ತಂದು ನಿಲ್ಲಿಸಿದ. ಅದರಲ್ಲಿ ಅನೇಕ ದಿವ್ಯಾಸ್ತ್ರಗಳನ್ನು ಇಟ್ಟಿದ್ದರು. ತೆರತೆರನಾದ ಆಯುಧಗಳು ಇದ್ದವು, ರತ್ನ ಖಚಿತವಾಗಿದ್ದಿತು ಆ ರಥ. ನಾನಾ ರೀತಿಯ ಭೂಷಣಗಳಿಂದ ಅಲಂಕರಿಸಲ್ಪಟ್ಟಿತ್ತು. ರತ್ನಮಯವಾದ ಕಂಬಗಳಿಂದಲೂ ಅನೇಕ ಚಿನ್ನದ ಕಲಶಗಳಿಂದಲೂ ಅಲಂಕೃತವಾಗಿತ್ತು.

ಆ ರಥ ಅತೀವ ಸುಂದರವಾಗಿತ್ತು. ಅದನ್ನು ನೋಡಿ ರಾಕ್ಷಸರೆಲ್ಲ ವಿಸ್ಮಿತರಾದರು. ಎಂಟು ಕುದುರೆಗಳಿಂದ ಕಟ್ಟಲ್ಪಟ್ಟಿತ್ತು. ರಾಕ್ಷಸ ರಾಜನಾದ ರಾವಣ ಅದನ್ನು ಹತ್ತಿದ. ಅಗ್ನಿಯಂತೆ ಜ್ವಲಿಸುತ್ತಿದ್ದ ಆ ರಥದಲ್ಲಿ ರಾವಣ ಕುಳಿತು ತನ್ನ ಅಪಾರ ಸೈನ್ಯದೊಡನೆ ಯುದ್ಧಕ್ಕೆ ಹೊರಟ.

ರಾವಣನ ಆಜ್ಞೆಯಂತೆ ಅವನ ಮಂತ್ರಿಗಳೂ ರಥವನ್ನು ಹತ್ತಿದರು. ಅವರೆಲ್ಲ ವಿಜಯಕಾಂಕ್ಷಿಗಳಾಗಿ ಸಿಂಹನಾದ ಮಾಡುತ್ತಾ ಹೊರಟರು.

ರಾವಣ ಯುದ್ಧಕ್ಕೆ ಹೊರಡುತ್ತಿದ್ದಂತೆ ಅನೇಕ ಅಪಶಕುನಗಳಾದವು. ಸೂರ್ಯ ಇದ್ದಕ್ಕಿದ್ದಂತೆ ಕಾಂತಿ ಹೀನನಾದ. ಆಕಾಶದಿಂದ ರಕ್ತದ ಮಳೆ ಸುರಿಯತೊಡಗಿತು. ರಾವಣನ ರಥದ ಮೇಲೆ ಹದ್ದುಗಳು ಬಂದು ಕುಳಿತವು. ಎಂಟು ಕುದುರೆಗಳೂ ಮುಗ್ಗರಿಸಿದವು. ರಾವಣನ ಎಡ ಕಣ್ಣು ಎಡಭುಜ ಅದುರತೊಡಗಿತು. ಇಷ್ಟೆಲ್ಲ ಅಪಶಕುನಗಳು ಆಗುತ್ತಿದ್ದರೂ ರಾವಣ ಲೆಕ್ಕಿಸದೆ ಮೋಹವಶದಿಂದ ಕಾಲಪಾಶಕ್ಕೆ ಸಿಕ್ಕಿದ. ಅವನು ರಥವನ್ನೇರಿ ಹೊರಟ.

**ಎತಾನಚಿಂತಯನ್ ಘೋರಾನುತ್ಪಾತಾನ್ ಸಮುಪಸ್ಥಿತಾನ್**

**ನಿರ್ಯಯೌ ರಾವಣೋ ಮೋಹಾದ್ವಧಾರ್ಥೀ ಕಾಲಚೋದಿತಃ ||**

ಈ ಕಾಲಚೋದಿತ ಎಂಬ ಪದವನ್ನು ವಾಲ್ಮೀಕಿ ಆಗಾಗ್ಗೆ ಪ್ರಯೋಗಿಸುವುದು ಔಚಿತ್ಯಪೂರ್ಣವಾಗಿದೆ.

ರಾಕ್ಷಸರ ರಥ ಘೋಷವನ್ನು ಕೇಳಿದೊಡನೆ ರಣಾಂಗಣದಲ್ಲಿ ಕೋಲಾಹಲ ಎದ್ದಿತು. ವಾನರರಿಗೂ, ರಾಕ್ಷಸರಿಗೂ ತುಮುಲಯುದ್ಧ ಪ್ರಾರಂಭವಾಯಿತು. ರಾವಣ ರಥವನ್ನೇರಿ ನುಗ್ಗುತ್ತಾ, ಇದಿರಾದ ವಾನರರನ್ನೆಲ್ಲಾ ಹಾಗೆ ಹಾಗೆಯೇ ಕೊಲ್ಲುತ್ತಿದ್ದ. ವಾನರ ಪ್ರಮುಖರು ರಾವಣನ ಬಲವನ್ನು ಸಹಿಸದಾದರು.

ರಾಕ್ಷಸರಾಜನ ಹಾವಳಿಯನ್ನು ತಡೆಯುವ ಉದ್ದೇಶದಿಂದ ವಾನರ ರಾಜನಾದ ಸುಗ್ರೀವ ಸೈನ್ಯದ ರಕ್ಷಣೆಯನ್ನು ಸುಷೇಣನಿಗೆ ಒಪ್ಪಿಸಿ ತಾನೇ ನುಗ್ಗಿ ಬಂದು ರಾಕ್ಷಸ ಸೈನ್ಯವನ್ನು ಕಲಕ ತೊಡಗಿದ. ದೊಡ್ಡದೊಡ್ಡ ವೃಕ್ಷಗಳನ್ನು ಕಿತ್ತುಕೊಂಡು ರಾಕ್ಷಸರನ್ನು ಕೊಲ್ಲುತ್ತಿದ್ದ ಸುಗ್ರೀವನ ಮುಂದೆ ರಾವಣನ ಮಂತ್ರಿಯಾದ ವಿರೂಪಾಕ್ಷ ಬಂದು ನಿಂತ. ಸುಗ್ರೀವನಿಗೂ, ವಿರೂಪಾಕ್ಷನಿಗೂ ಘೋರವಾದ ಯುದ್ಧ ಜರುಗಿತು. ವಿರೂಪಾಕ್ಷ ಮದಿಸಿದ ಆನೆಯನ್ನೇರಿ ಬಂದ. ಸುಗ್ರೀವ ಮಹಾವೃಕ್ಷವೊಂದನ್ನು ಕಿತ್ತು ಅದರಿಂದ ಆನೆಯನ್ನು ಅಪ್ಪಳಿಸಿದ. ಅದರಿಂದ ವಿರೂಪಾಕ್ಷನ ಆನೆ ತತ್ತರಿಸಿತು. ಆಗವಿರೂಪಾಕ್ಷ ಆನೆಯಿಂದ ಕೆಳಗಿಳಿದು ಕೈಯಲ್ಲಿ ಕತ್ತಿಯನ್ನು ತಿರುಗಿಸುತ್ತಾ ಸುಗ್ರೀವ ನನ್ನು ತಾಡಿಸಿದ. ಸುಗ್ರೀವ ಸ್ವಲ್ಪ ಹೊತ್ತು ವಿಚಲಿತನಾದ. ತಕ್ಷಣ ವಿರೂಪಾಕ್ಷನ ಹಣೆಯನ್ನು ಘಾತಿಸಿದ. ಅದರಿಂದ ಸಾವರಿಸಿಕೊಂಡು ಮುಷ್ಟಿಯಿಂದ ವಿರೂಪಾಕ್ಷನನ್ನು ಗುದ್ದಿದ. ಅದರಿಂದ ವಿರೂಪಾಕ್ಷ ತಲ್ಲಣಿಸಿಮೂರ್ಛಿತನಾದ. ಸುಗ್ರೀವನಿಗೂ, ವಿರೂಪಾಕ್ಷನಿಗೂ ಸ್ವಲ್ಪ ಕಾಲ ಮುಷ್ಟಿ ಯುದ್ಧ ಜರುಗಿತು. ಕೊನೆಗೆ ಸುಗ್ರೀವ ಬಲವಾದ ತನ್ನ ಮುಷ್ಟಿಯಿಂದ ವಿರೂಪಾಕ್ಷನ ಹಣೆಯನ್ನು ಬಲವಾಗಿ ಘಾತಿಸಿದ. ತಲ್ಲಣಿಸಿದ ವಿರೂಪಾಕ್ಷ ತನ್ನ ಕಣ್ಣನ್ನು ಕಳೆದುಕೊಂಡು **ವಿರೂಪಾಕ್ಷನೇ** ಆದ. ಸುಗ್ರೀವನ ಮುಷ್ಟಿ ಪ್ರಹಾರಕ್ಕೆ ಸಿಕ್ಕಿದ ಆ ರಾಕ್ಷಸ ಕೆಳಗೆ ಬಿದ್ದು ಗತಪ್ರಾಣನಾದ. ಸುಗ್ರೀವ ನಿಂದ ವಿರೂಪಾಕ್ಷ ಹತ ನಾದುದನ್ನು ಕಂಡ ರಾಕ್ಷಸರು ಕಣ್ಣೀರ್ಗರೆದರು. ಅವರ ಧೈರ್ಯ ಉಡುಗಿತು. ವಾನರರು ಸಂತೋಷದಿಂದ ಕೋಲಾಹಲಮಾಡಿದರು.

## ರಾಮ ರಾವಣರ ಯುದ್ಧ

ಯುದ್ಧದಲ್ಲಿ ವಿರೂಪಾಕ್ಷನೇ ಮೊದಲಾದ ರಾವಣನ ಮಂತ್ರಿಗಳು ಹತರಾದುದರಿಂದ ಕ್ರುದ್ಧನಾದ ರಾವಣ ತಾನೇ ರಾಮನಿಗಿದಿರಾಗಿ ನುಗ್ಗಿದ. ತನ್ನ ದಿವ್ಯವಾದ ಧನುಸ್ಸನ್ನು ಹಿಡಿದು. "ಇಂದು ರಣರಂಗದಲ್ಲಿ ರಾಮರೂಪಿ ವೃಕ್ಷವನ್ನು ನಾಶಮಾಡುತ್ತೇನೆ" ಎನ್ನುತ್ತಾನೆ. ಹೇಳುತ್ತಾನೆ:

**ರಾಮವೃಕ್ಷಂ ರಣೇಹನ್ಮಿ ಸೀತಾಪುಷ್ಪ ಫಲಪ್ರದಂ**
**ಪ್ರಶಾಖಾ ಯಸ್ಯ ಸುಗ್ರೀವೋ ಜಾಂಬವಾನ್ ಕುಮುದೋನಳಃ ।**

ರಾಮವೃಕ್ಷಕ್ಕೆ ಸೀತೆಯೇ ಪುಷ್ಪ. ಹನುಮಂತ, ಜಾಂಬವಂತ, ಅಂಗದ. ಸುಗ್ರೀವ, ನಳ, ನೀಲ ಮುಂತಾದ ವಾನರಪ್ರಮುಖರೇ ಶಾಖೋಪಶಾಖೆಗಳು. ಈ ವೃಕ್ಷವನ್ನು ಬುಡಸಹಿತವಾಗಿ ಕತ್ತ ರಿಸಿ ಹಾಕುತ್ತೇನೆ" ಎಂದು ಹೇಳಿ, ಕೋಪದಿಂದ ರಾವಣ ಮುನ್ನುಗ್ಗಿದ.

ರಾಕ್ಷಸ ರಾಜನಾದ ರಾವಣ ವಾನರರನ್ನು ತನ್ನ ಬಾಣಗಳಿಂದ ದಿಕ್ಕು ದಿಕ್ಕುಗಳಿಗೆ ಚದುರಿ ಸುತ್ತಾ ಬಂದ. ಬ್ರಹ್ಮದತ್ತವಾದ "ತಾಮಸ" ಎಂಬ ಅಸ್ತ್ರವನ್ನು ಪ್ರಯೋಗಿಸಿ ವಾನರರನ್ನೆಲ್ಲ ವಿಚಲಿತರನ್ನಾಗಿ ಮಾಡಿದ ವಾನರರ ನಡುವೆ ನುಗ್ಗಿ ರಾಮನತ್ತ ಬರಲು ಪ್ರಯೋಗಿಸಿದ.

ರಾಮ ಧನುರ್ಧಾರಿಯಾಗಿ ಲಕ್ಷ್ಮಣನೊಡನೆ ಯುದ್ಧಕ್ಕೆ ಸಿದ್ಧನಾಗಿಯೇ ನಿಂತಿದ್ದ. ಸ್ವಲ್ಪವೂ ವಿಚಲಿತನಾಗದೆ ಇದ್ದ. ಮಹಾವಿಷ್ಣುವಿನೊಂದಿಗೆ ದೇವೇಂದ್ರ ನಿಂತಂತೆ ಲಕ್ಷ್ಮಣ ರಾಮನೊಂದಿಗೆ ನಿಂತಿದ್ದ. ರಾಮಲಕ್ಷ್ಮಣರಿಗೆ ಅಭಿಮುಖನಾಗಿ ರಾವಣ ಬಂದಕೂಡಲೇ, ಲಕ್ಷ್ಮಣ ರಾವಣನ ಮೇಲೆ ಬಾಣದ ವೃಷ್ಟಿಯನ್ನು ಸುರಿಸತೊಡಗಿದ. ಆದರೆ. ಪ್ರತಾಪಿಯಾದ ರಾವಣ ಲಕ್ಷ್ಮಣನ

ಬಾಣಗಳನ್ನು ತನ್ನ ಬಾಣಗಳಿಂದ ನಿವಾರಿಸಿಕೊಂಡು ರಾಮನ ಕಡೆಗೇ ಧಾವಿಸಿದ.

ಪರ್ವತದಂತೆ ದೃಢವಾಗಿ ಬೆಳಗುತ್ತಿದ್ದ ರಾಮನನ್ನು ಸಮೀಪಿಸಿ ರಾಕ್ಷಸ ರಾಜನಾದ ರಾವಣ ಅವನನ್ನು ಕೆಂಪಾದ ತನ್ನ ಕಣ್ಣುಗಳಿಂದ ನೋಡತೊಡಗಿದ. ಭಯಂಕರನಾದ ರಾವಣ ತನ್ನ ಧನುಸ್ಸಿಗೆ ನೂರಾರು ಬಾಣಗಳನ್ನು ಹೂಡಿ ರಾಮನಮೇಲೆ ಪ್ರಯೋಗಿಸಿದ. ರಾವಣನಿಂದ ಬಿಡಲ್ಪಟ್ಟ ಬಾಣಗಳನ್ನು ರಾಮ ಕತ್ತರಿಸಿದ. ರಾಮ-ರಾವಣ-ಇವರಿಬ್ಬರಿಗೂ ಘೋರವಾದ ಯುದ್ಧ ಕೈಗಟ್ಟಿತು. ಇಬ್ಬರೂ ಮಹಾ-ಪರಾಕ್ರಮಿಗಳು. ಇಬ್ಬರೂ ಮಹಾ ತೇಜಸ್ವಿಗಳು, ಇಬ್ಬರೂ ಅಸ್ತ್ರಕೋವಿದರು. ಒಬ್ಬರನ್ನೊಬ್ಬರು ಬಾಣಗಳಿಂದ ಘಾತಿಸುತ್ತಿದ್ದರು. ರಾಮನ ಹಣೆಗೆ ಗುರಿಯಿಟ್ಟು ರಾವಣ ಅನೇಕ ಬಾಣಗಳನ್ನು ಹೊಡೆದ. ರಾಘವ ಅದನ್ನೆಲ್ಲ ನಿವಾರಿಸಿಕೊಂಡು ರಾವಣನ ಕವಚವನ್ನು ಭೇದಿಸುವ ಸಲುವಾಗಿ ಅನೇಕ ಬಾಣಗಳನ್ನು ಬಿಟ್ಟ. ಆದರೆ ಅಭೇದ್ಯವಾದ ರಾವಣನ ಕವಚ ಅದರಿಂದ ಭೇದಿಸಲಿಲ್ಲ.

ರಾಮನ ಬಾಣಗಳಿಂದ ತಾಡಿತನಾದ ರಾವಣ ಕೋಪದಿಂದ ರಾಮನ ಮೇಲೆ ಅಸುರಾಸ್ತ್ರವನ್ನು ಪ್ರಯೋಗಿಸಿದ. ಅದರಿಂದ ಸಿಂಹ, ಹುಲಿ, ಹದ್ದು, ಗಿಡಗ, ನರಿ, ತೋಳ. ಕತ್ತೆ, ಹಂದಿ, ನಾಯಿ, ವಿಷಯುಕ್ತವಾದ ಸರ್ಪಗಳು ಬಾಣರೂಪದಿಂದ ರಣರಂಗವನ್ನು ವ್ಯಾಪಿಸಿದವು.

ರಾವಣ ಅಸುರಾಸ್ತ್ರವನ್ನು ಪ್ರಯೋಗಿಸಿದ್ದನ್ನು ನೋಡಿದ ರಾಮ. ಅದನ್ನು ನಿವಾರಿಸಲು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ. ರಾಮ ಆಗ್ನೇಯಾಸ್ತ್ರದಿಂದ ಅಗ್ನಿ, ಸೂರ್ಯ, ಚಂದ್ರ, ಧೂಮಕೇತು, ನಕ್ಷತ್ರ, ಮಿಂಚು-ಇವುಗಳಂತೆ ಜ್ವಲಿಸುವ ನಾನಾ ಬಾಣಗಳು ಹೊರಬಂದವು. ಆಗ್ನೇಯಾಸ್ತ್ರವು ಅಸುರಾಸ್ತ್ರವನ್ನು ಆಕಾಶದಲ್ಲೇ ನಾಶಗೊಳಿಸಿತು. ಭಗ್ನವಾದರೂ ಆ ಅಸ್ತ್ರದಿಂದ ಸಹಸ್ರಾರು ವಾನರರು ಮೃತಿಹೊಂದಿದರು. ರಾಮ ಅಸುರಾಸ್ತ್ರವನ್ನು ವಿಫಲಗೊಳಿಸಿದ್ದನ್ನು ಕಂಡ ಸುಗ್ರೀವ, ಹನುಮಂತ ಮುಂತಾದ ವಾನರ ಪ್ರಮುಖರು ರಾಮನನ್ನು ಸುತ್ತುವರಿದು ಅಭಿನಂದಿಸಿದರು. ವಾನರ ಪ್ರಮುಖರೆಲ್ಲ ಆನಂದದಿಂದ ಸಿಂಹನಾದ ಮಾಡಿದರು.

## ಲಕ್ಷ್ಮಣ ಶಕ್ತಿ

ತಾನು ಪ್ರಯೋಗಿಸಿದ ಅಸುರಾಸ್ತ್ರ ವಿಫಲವಾದುದು ರಾವಣನಿಗೆ ನುಂಗಲಾರದ ತುತ್ತಾಯಿತು. ಅತ್ಯಂತ ಕ್ರುದ್ಧನಾದ ಅವನು ರಾಮನನ್ನು ನಾಶ ಮಾಡುವ ಉದ್ದೇಶದಿಂದ ಮಯನಿಂದ ದತ್ತವಾದ ರೌದ್ರಾಸ್ತ್ರವನ್ನು ಪ್ರಯೋಗಿಸಿದ. ಅದರಿಂದ ಏಕಕಾಲದಲ್ಲಿ ನಾನಾ ವಿಧವಾದ ಆಯುಧಗಳು. ಶಕ್ತಿ, ಮುಸಲ, ಪ್ರಾಸ, ಖಡ್ಗ, ಮುಂತಾದವು ರಾಮನ ಸಮೀಪಕ್ಕೆ ಬರತೊಡಗಿದವು ಮಯನ ಮಾಯಾ ಅಸ್ತ್ರವನ್ನು ವೀರರಾಘವ ಅಮೋಘವಾದ ಗಾಂಧರ್ವಾಸ್ತ್ರದಿಂದ ವಿಫಲಗೊಳಿಸಿದ. ಇದರಿಂದ ಮತ್ತಷ್ಟು ಕ್ರುದ್ಧನಾದ ರಾವಣ ಸೌರಾಸ್ತ್ರ ಮುಂತಾದ ಅಸ್ತ್ರಗಳನ್ನು ಪ್ರಯೋಗಿಸಿದ.

ಮಹಾ ಕ್ರೂರನಾದ ರಾವಣ ತನ್ನ ಕ್ರೂರವಾದ, ಭಯಂಕರವಾದ ರಕ್ತರಂಜಿತವಾದ ನೇತ್ರಗಳಿಂದ ಎಲ್ಲವನ್ನೂ ದಹಿಸಿಬಿಡುವಂತೆ ನೋಡುತ್ತಾ ರಾಮಲಕ್ಷ್ಮಣರ ಕಡೆಗೇ ನುಗ್ಗುತ್ತಿದ್ದ. ಚಂದ್ರ ಸೂರ್ಯರನ್ನು ಕಂಡ ರಾಹು ನುಗ್ಗುವಂತೆ ನುಗ್ಗುತ್ತಿದ್ದ. ರಾಮರಾವಣರು ಪ್ರಯೋಗಿಸುತ್ತಿದ್ದ ಅಸ್ತ್ರಗಳು ಆಕಾಶದಲ್ಲಿ ಮೋಡಗಳಂತೆ ಮುಚ್ಚಿದ್ದವು. ಅದರಿಂದ ಆಕಾಶದಲ್ಲಿ ಪ್ರಭೆ

ಎದ್ದು ಕಾಣುತ್ತಿತ್ತು, ರಾವಣ ರಾಮನ ಮರ್ಮಸ್ಥಾನಕ್ಕೆ ಗುರಿಯಿಟ್ಟು ಹತ್ತಾರು ಬಾಣಗಳನ್ನು ಹೊಡೆದ. ರಾಮ ಅದನ್ನೆಲ್ಲ ತನ್ನ ದೇದೀಪ್ಯಮಾನವಾದ ಬಾಣಗಳಿಂದ ಕತ್ತರಿಸಿದ. ಸಮರ್ಥನಾದ ರಘುವೀರನೋ ರಾವಣನ ಅಂಗಾಂಗಳನ್ನು ತನ್ನ ಬಾಣಗಳಿಂದ ನೋಯಿಸಿದ. ಈ ಮಧ್ಯೆ ಕುಪಿತನಾದ ಲಕ್ಷ್ಮಣ ರಾವಣನ ಧ್ವಜವನ್ನು ಏಳು ತೀಕ್ಷ್ಣವಾದ ಬಾಣಗಳಿಂದ ಹೊಡೆದು ಕತ್ತರಿಸಿ ಹಾಕಿದ. ಮೇಲೆ ಮತ್ತೊಂದು ಬಾಣದಿಂದ ರಾವಣನ ಸಾರಥಿಯನ್ನೂ ಕೊಂದ. ಇಷ್ಟು ಮಾತ್ರವಲ್ಲದೆ ಮಹಾಪರಾಕ್ರಮಿಯಾದ ಲಕ್ಷ್ಮಣ ತನ್ನ ತೀಕ್ಷ್ಣವಾದ ಐದು ಬಾಣಗಳಿಂದ ರಾವಣನ ಆನೆಯ ಸೊಂಡಿಲಿನಂಥ ಧನುಸ್ಸನ್ನು ಕತ್ತರಿಸಿದ. ಆ ನಂತರ ವಿಭೀಷಣ ಹಾರಿಬಂದು ರಾವಣನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ತನ್ನ ಗದೆಯಿಂದ ಹೊಡೆದು ಕಾಲವಶವಾಗಿಸಿದ. ಕುದುರೆಯನ್ನು ಕೊಂದ ಸೋದರ ವಿಭೀಷಣನನ್ನು ಕಂಡ ರಾವಣ ಬಹಳ ಕ್ರುದ್ಧನಾದ. ಮೂರ್ಛಿತನಾದ. ಎಚ್ಚೆತ್ತು ವಿಭೀಷಣನನ್ನು ಕೊಲ್ಲುವ ಉದ್ದೇಶದಿಂದ ವಜ್ರಾಯುಧಕ್ಕೆ ಸಮಾನವಾದ ಶಕ್ತಿಯನ್ನು ತೆಗೆದು ತಿರುಗಿಸಿ ಪ್ರಹರಿಸಿದ ಮೇಲೆ ಆ ಶಕ್ತಿ ಅಗ್ನಿಯನ್ನೇ ಕಕ್ಕುತ್ತಾ ಬಂದಿತು. ಅದು ಬರುತ್ತಿರುವಾಗ ಮಾರ್ಗದಲ್ಲೇ ಅದನ್ನು ಲಕ್ಷ್ಮಣ ತನ್ನ ಮೂರು ಬಾಣಗಳಿಂದ ಕತ್ತರಿಸಿದ. ಶಕ್ತ್ಯಾಯುಧ ಭಗ್ನವಾದುದನ್ನು ಕಂಡು ವಾನರರೆಲ್ಲ ಉಚ್ಚಕಂಠದಿಂದ ಸಂತೋಷದಿಂದ ಸಿಂಹನಾದ ಮಾಡಿದರು. ತಾನು ಪ್ರಯೋಗಿಸಿದ ಶಕ್ತಿ ವ್ಯರ್ಥವಾದದ್ದು ರಾವಣನಿಗೆ ಸಹಿಸಲಿಲ್ಲ. ಕುಪಿತನಾಗಿ, ವಿಭೀಷಣನನ್ನು ತೀರಿಸುವವನಲುವಾಗಿ ಅದ್ಭುತವಾದ ಮತ್ತೊಂದು ಶಕ್ತಿಯನ್ನು ತೆಗೆದ. ಅದು ಅಷ್ಟಘಂಟಾ ಶಕ್ತಿ. ಎಂಟು ದಿವ್ಯವಾದ ಘಂಟೆಗಳಿಂದ ಅಗ್ನಿಜ್ವಾಲೆಯನ್ನು ಕಕ್ಕುವಂತಿತ್ತು. ಅದನ್ನು ರಾವಣ ಎತ್ತಿದ್ದನ್ನು ನೋಡಿದ ವಿಭೀಷಣನೂ "ತನ್ನ ಆಯಸ್ಸು ಮುಗಿಯಿತು" ಎಂಬಂತೆ ಸ್ವಲ್ಪ ವಿಚಲಿತನಾದ. ವಿಭೀಷಣನನ್ನು ರಕ್ಷಿಸುವ ಉದ್ದೇಶದಿಂದ ಮಹಾತ್ಮನಾದ ಲಕ್ಷ್ಮಣ ತಾನಿದ್ದಲ್ಲಿಂದ ವಿಭೀಷಣನ ಮುಂದೆ ಬಂದು ನಿಂತ. ವಿಭೀಷಣನನ್ನು ಹಿಂದಕ್ಕೆ ಸರಿಸಿ ತಾನು ರಾವಣನಿಗಭಿಮುಖವಾಗಿ ನಿಂತು ಬಾಣದ ಮಳೆಯನ್ನು ರಾವಣನ ಮೇಲೆ ಸುರಿಸಲು ಪ್ರಾರಂಭಿಸಿದ. ಸೌಮಿತ್ರಿ ತನ್ನ ಸೋದರನನ್ನು ಉಳಿಸಿದ್ದನ್ನು ಕಂಡ ರಾವಣ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ! ನೀನು ನಿನ್ನ ವೀರ್ಯದಿಂದ ಗರ್ವಿತನಾಗಿರುವಿ. ಆದರಿಂದಲೇ ನನ್ನ ಮುಂದೆ ನಿಂತಿರುವಿ. ನಿನ್ನನ್ನು ಇದೀಗಲೇ ನಾನು ಯಮಸದನಕ್ಕಟ್ಟುತ್ತೇನೆ ನೋಡು" ಎಂದು ಅಷ್ಟಘಂಟಾ ಶಕ್ತಿಯನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದ. ಅದು ಅಗ್ನಿಯ ಜ್ವಾಲೆಯನ್ನು ಕಕ್ಕುತ್ತಾ ಬಂದಿತು. ಆಗ ರಾಮ

**ಸ್ವಸ್ತ್ಯಸ್ತು ಲಕ್ಷ್ಮಣಾಯೇತಿ ಮೋಘಾಭವಹತೋದ್ಯಮಾ ।**

"ಈ ಶಕ್ತಿ ವ್ಯರ್ಥವಾಗಲಿ, ಲಕ್ಷ್ಮಣನಿಗೆ ಮಂಗಳವಾಗಲಿ" ಎಂದ.

ಆ ಶಕ್ತಿ ತೀಕ್ಷ್ಣವಾದ ಅಲಗಿನಿಂದ ಯುಕ್ತವಾಗಿ ವೇಗವಾಗಿ ಬಂದು ಲಕ್ಷ್ಮನ ಎದೆಯನ್ನು ಹೊಕ್ಕಿತು. ಅದರಿಂದ ಘಾತಿಸಲ್ಪಟ್ಟ ಲಕ್ಷ್ಮಣ ನೆಲೆದ ಮೇಲೆ ಒರಗಿದ. ರಾಮ ಭ್ರಾತೃಸ್ನೇಹದಿಂದ ವಿಷಣ್ಣವದನನಾದ. ಲಕ್ಷ್ಮಣನ ದೇಹದಲ್ಲಿ ಹೊಕ್ಕಿದ್ದ ಆ ಶಕ್ತ್ಯಾಯುಧ ವಕ್ಷಸ್ಥಳವನ್ನು ಭೇದಿಸಿ ಹೊರಬಂದಿತು. ರಾಘವ ಅದನ್ನು ತೆಗೆದು ಮುರಿದುಹಾಕಿದ. "ಇದು ದುಃಖಿಸುವ ಸಮಯವಲ್ಲ" ಎಂಬುದನ್ನರಿತ ರಾಮ. ಹನುಮಂತನೇ ಮುಂತಾದ ವಾನರಪ್ರಮುಖರನ್ನು ಕುರಿತು "ಲಕ್ಷ್ಮಣನನ್ನು ಸುತ್ತ ಆವರಿಸಿ ನಿಂತು ರಕ್ಷಿಸುತ್ತಿರಿ. ನಾನು ನನ್ನ ನಿಜವಾದ ಪರಾಕ್ರಮವನ್ನು ತೋರಿಸುವ ವೇಳೆ ಬರುತ್ತದೆ. ವಾನರರೇ! ನೀವೆಲ್ಲ ನನ್ನ ಪೌರುಷವನ್ನು ನೋಡಿರಿ.

ಪಾಪಾತ್ಮನಾದ ಈ ರಾವಣನನ್ನು ನಿಗ್ರಹಿಸುತ್ತೇನೆ. ಈ ಲೋಕವನ್ನು "ಅರಾವಣ" ವಾಗಿಸುತ್ತೇನೆ. ದೇವತೆಗಳೆಲ್ಲ ನನ್ನ ರಾಮತ್ವವನ್ನು ಕಾಣಲಿ. ರಾವಣ ಹೋಗಬೇಕು ಅಥವಾ ರಾಮ ಹೋಗಬೇಕು-ಎರಡರಲ್ಲಿ ಒಂದಾಗುತ್ತದೆ! ರಾಮನ ರಾಮತ್ವ ಹೇಗೆ ಎಂಬುದು ಎಲ್ಲರಿಗೂ ಅರಿವಾಗಲಿ" ಎಂದು ಹೇಳಿದ. ರಾಮಚಂದ್ರನ ಮಾತಿನಲ್ಲೇ ಕೇಳಬೇಕು ರಾಮನ ಶೌರ್ಯ ಎಂಥದು ಎಂಬುದನ್ನು. ತಾನೇ ಹೇಳಿಕೊಳ್ಳುವುದನ್ನು ಕಾಣುವುದು ವಿರಳ. ತಮ್ಮನಾದ ಲಕ್ಷ್ಮಣನ ಮೇಲೆ ರಾಮನಿಗೆ ಇದ್ದ ಪ್ರೀತಿ ಇಲ್ಲಿ ಹೊರಹೊಮ್ಮಿದೆ. ಲಕ್ಷ್ಮಣಸ್ವಾಮಿ ಮೂರ್ಛಿತನಾದುದನ್ನು ಕಂಡು ಶೋಕ, ರಾವಣನಮೇಲೆ ರೋಷ ಎರಡೂ ಒಮ್ಮೆಲೆ ಉಕ್ಕಿಬಂದಾಗ ಹೊರಟ ಮಾತುಗಳು ಇವು.

**ಅಸ್ಮಿನ್ ಮುಹೂರ್ತೇ ನಚಿರಾತ್ಸತ್ಯಂ ಪ್ರತಿಶೃಣೋಮಿವಃ ।**
**ಅರಾವಣಮರಾಮಂ ವಾ ಜಗದ್ದ್ರಕ್ಷ್ಯಥವಾನರಾ॥**

ತಾನು ಇದುವರೆಗೆ ಪಟ್ಟ ಕಷ್ಟವನ್ನು ರಾಮ ಹೇಳಿಕೊಳ್ಳುತ್ತಾ

**ರಾಜ್ಯನಾಶಂ ನೇ ವಾಸಂ ದಂಡಕೇ ಪರಿಧಾವನಂ ।**
**ವೈದೇಹ್ಯಾಶ್ಚ ಪರಾಮರ್ಶಂ ರಕ್ಷೋಭಿಶ್ಚ ಸಮಾಗಮಂ ।**
**ಪ್ರಾಪ್ತಂ ದುಃಖಂ ಮಹದ್ಘೋರಂ ಕ್ಲೇಶಂಚ ನಿರಯೋಪಮಂ ।**
**ಅದ್ಯಸರ್ವ ಮಹಂ ತ್ಯಕ್ಷ್ಯೇ ನಿಹತ್ವಾರಾವಣಂ ರಣೇ॥**

"ಈವರೆಗೆ ನಾನು ರಾಜ್ಯನಾಶ, ವನವಾಸ, ದಂಡಕಾರಣ್ಯ ಸಂಚಾರ, ಸೀತಾಪಹರಣ, ರಾಕ್ಷಸರೊಂದಿಗೆ ಯುದ್ಧ ... ಇತ್ಯಾದಿ ದುಃಖಪರಂಪರೆಯನ್ನು ಅನುಭವಿಸಿದೆ. ಈ ಎಲ್ಲ ದುಃಖವನ್ನೂ ಈಗ ಈ ಯುದ್ಧದಲ್ಲಿ ರಾವಣನನ್ನು ಕೊಲ್ಲುವುದರ ಮೂಲಕ ಹೋಗಲಾಡಿಸಿಕೊಳ್ಳುತ್ತೇನೆ.. ." ಎಂದು ಹೇಳುತ್ತಾನೆ. ಹೀಗೆ ಹೇಳಿದವನೇ ತನ್ನ ಧನುಸ್ಸಿನಲ್ಲಿ ಅನೇಕ ಬಾಣಗಳನ್ನು ಹೂಡಿ ರಾವಣನ ಮೇಲೆ ಪ್ರಯೋಗಿಸಿದ.

ರಾಮ ರಾವಣರು ಬಿಡುತ್ತಿದ್ದ ಬಾಣಗಳ ಪ್ರಭೆ ದಶದಿಕ್ಕುಗಳನ್ನೂ ವ್ಯಾಪಿಸಿತು. ಅವರಿಬ್ಬರ ಧನುಸ್ಸಿನ ಟಂಕಾರದ ಧ್ವನಿ ಭೂತಲದ ಸಮಸ್ತ ಪ್ರಾಣಿಗಳ ಹೃದಯವನ್ನೂ ಕಂಪನಗೊಳಿಸುತ್ತಿತ್ತು. ರಾಮ ತನ್ನ ಅಪ್ರತಿಮವಾದ ವೀರ್ಯದಿಂದ ರಾವಣನನ್ನು ನೋಯಿಸಿದ. ರಾಮನ ಬಾಣವೇಗದಮುಂದೆ ರಾವಣ ನಿಲ್ಲಲಾರದೆ ಹೋದ. ಶರೀರವೆಲ್ಲ ರಾಮಬಾಣದಿಂದ ಕ್ಷತ-ವಿಕ್ಷತವಾಗಿತ್ತು. "ನಿಂತರೆ ಇನ್ನು ಅಪಾಯ" ಎಂದರಿತ ರಾವಣ ಯುದ್ಧ ರಂಗದಿಂದ ಕಾಲ್ತೆಗೆದ. "ವಾಯು ವೇಗವನ್ನು ತಾಳಲಾರದೆ ಮೋಡಗಳು ಓಡಿಹೋಗುವಂತೆ ರಾಮಬಾಣವನ್ನು ತಾಳಲಾರದೆ ಲಂಕೆಯತ್ತ ಓಡಿದ" ಎಂದಿದ್ದಾರೆ ಕವಿ.

ರಾವಣ ಓಡಿಹೋದ ಮೇಲೆ ಮೂರ್ಛಿತನಾಗಿ ಬಿದ್ದಿದ್ದ ತಮ್ಮ ಸೌಮಿತ್ರಿಯತ್ತ . ರಾಮ ಬಂದ. ಅಲ್ಲೇ ಇದ್ದ ಸುಷೇಣನನ್ನು ಕುರಿತು "ಪ್ರಾಣದಂತಿರುವ ಲಕ್ಷ್ಮಣ ಸರ್ಪದಂತೆ ಹೇಗೆ ಕೆಳಗೆ ಬಿದ್ದಿದ್ದಾನೆ ನೋಡು. ಗಾಯಗೊಂಡ ಸರ್ಪ ಚಟಪಟಿಸುವಂತೆ ವಿಚಲಿತನಾಗಿದ್ದಾನೆ. ನನ್ನ ಪ್ರಿಯ ಸೋದರ ನನ್ನ ಪ್ರಾಣ ಪದಕದಂತಿರುವ ಲಕ್ಷ್ಮಣ ಒಂದು ವೇಳೆ ಅಳಿದರೆ ನಾನು ಜೀವಿಸಿರಲು ಸಾಧ್ಯವೆ? ಲಕ್ಷ್ಮಣನಿಲ್ಲದ ಮೇಲೆ ನನಗೆ ರಾಜ್ಯಭೋಗವೇಕೆ? ಸೀತೆಯೇಕೆ? ಸುಖ ಸಂತೋಷಗಳೇತಕ್ಕೆ" ಎಂದು ದುಃಖಿಸಿದ.

**ಅಯಂ ಸ ಸಮರ ಶ್ಲಾಘೀ ಭ್ರಾತಾಮೇ ಶುಭ ಲಕ್ಷ್ಮಣಃ**
**ಯದಿ ಪಂಚತ್ವ ಮಾಪನ್ನಃ ಪ್ರಾಣೈರ್ಮೇ ಕಿಂ ಸುಖೇ ನಚ ||**

ಆಹಾ, ಭ್ರಾತೃ ವಾತ್ಸಲ್ಯವೆಂದರೆ ಇದಲ್ಲವೇ !

ಕೆಳಗೆ ದೂಳಿನಲ್ಲಿ ಗಾಯಗೊಂಡು ಬಿದ್ದಿರುವ ಲಕ್ಷ್ಮಣನನ್ನು ಅವನ ವ್ಯಾಕುಲ ಸ್ಥಿತಿಯನ್ನು ನೋಡಿ ವಿಲಪಿಸಿ ತೊಡಗಿದ ರಾಮ ``ಲಕ್ಷ್ಮಣಾ ! ನನ್ನ ಕಣ್ಮಣಿ ! ನೀನು ಇಲ್ಲವಾದ ಮೇಲೆ ನನಗೆ ಜಯವುದೊರಕಿ ತಾನೇ ಏನು ಪ್ರಯೋಜನ ? ಕುರುಡನ ಮುಂದೆ ಪೂರ್ಣಚಂದ್ರ ತನ್ನ ಅಮೃತ ಮಯವಾದ ಕಿರಣಗಳಿಂದ ಯುಕ್ತನಾಗಿ ರಾರಾಜಿಸಿದರೆ ಅದರಿಂದ ಕುರುಡನಿಗಾಗುವ ಲಾಭವೇನು? ಸೌಮಿತ್ರಿ ! ನೀನು ನನ್ನ ಕಣ್ಣು. ನೀನೇ ಇಲ್ಲವಾದ ಮೇಲೆ ನನಗೆ ಈ ಯುದ್ಧದಲ್ಲಿ ಜಯ ಆಗುವುದಾದರೂ ಅದು ಪ್ರಯೋಜನಕಾರಿಯಾಗದು'' ಎಂದು ಹೇಳಿದ್ದನ್ನೇ ಮತ್ತೆ ಮತ್ತೆ ಹಲವು ವಿಧದಲ್ಲಿ ಹೇಳುತ್ತ ಕಂಬನಿಗರೆಯುತ್ತಾನೆ.

``ಲಕ್ಷ್ಮಣಾ ! ವನಕ್ಕೆ ಹೊರಡುವಾಗ ನೀನು ನನ್ನ ಹಿಂದೆ ಬಂದೆ. ಈಗ ನಿನ್ನನ್ನು ಅನುಸರಿಸಿ ನಾನೂ ಯಮಲೋಕಕ್ಕೆ ಬರುತ್ತೇನೆ'' ಎನ್ನುತ್ತಾನೆ. ಮಾತ್ರವಲ್ಲ. ಪ್ರಾಣ ಪ್ರಿಯೆ ಯಾದ ಸೀತೆಗಿಂತ ಒಡಹುಟ್ಟಿದ ಲಕ್ಷ್ಮಣನ ಮೇಲೆ ಮಮತೆ ಹೆಚ್ಚು ಎಂಬುದನ್ನು ಹೇಳುತ್ತ

**ದೇಶೇ ದೇಶೇ ಕಳತ್ರಾಣಿ ದೇಶೇ ದೇಶೇ ಚ ಬಾಂಧವಾಃ |**
**ತಂತು ದೇಶಂ ನಪಶ್ಯಾಮಿ ಯತ್ರ ಭ್ರಾತಾ ಸಹೋದರಃ ||**

ಪ್ರತಿಯೊಂದು ದೇಶದಲ್ಲೂ ಪತ್ನಿ ಲಭಿಸುತ್ತಾಳೆ. ಹಾಗೆಯೇ ಬಾಂಧವರನ್ನೂ ಎಲ್ಲ ಸ್ಥಳಗಳಲ್ಲೂ ಕಾಣಬಹುದು. ಆದರೆ, ಯಾವ ದೇಶದಲ್ಲೂ ಲಕ್ಷ್ಮಣಾ ! ನಿನ್ನಂಥ ತಮ್ಮ ಸಿಗುವುದಿಲ್ಲ. ವನದಲ್ಲಿ ಹದಿನಾಲ್ಕು ವರ್ಷಗಳು ಎಡಬಿಡದೆ ನನ್ನನ್ನು ಸೇವಿಸಿದೆ. ಒಂದು ದಿನ ನನ್ನ ಮನಸ್ಸಿಗೆ ಅಪ್ರಿಯವಾಗಿ ನಡೆದುಕೊಳ್ಳಲಿಲ್ಲವಲ್ಲೋ. ಲಕ್ಷ್ಮಣಾ, ನಿನ್ನಂಥ ತಮ್ಮನನ್ನು ಬಿಟ್ಟು ಅಯೋಧ್ಯೆಗೆ ಹೇಗೋ ಹಿಂದಿರುಗಲಿ ? ಚಿಕ್ಕಮ್ಮ ಸುಮಿತ್ರೆ ``ಲಕ್ಷ್ಮಣನೆಲ್ಲಿ ? '' ಎಂದು ಕೇಳಿ ದರೆ ಏನೋ ಹೇಳಲಿ ? ಕೌಸಲ್ಯೆ ಕೈಕೇಯಿ, ಭರತ, ಶತ್ರುಘ್ನರು ``ಅಣ್ಣಾ ! ಹೋಗುವಾಗ ಲಕ್ಷ್ಮಣನೊಡನೆ ಹೋದೆ. ಬರುವಾಗ ಏಕೆ ಅವನೊಡನೆ ಬರಲಿಲ್ಲ ? ಕಂದಾ, ಲಕ್ಷ್ಮಣಾ ಮಾತನಾಡೋ. ನನ್ನನ್ನು ಬಿಟ್ಟು ನೀನು ಪರಲೋಕಕ್ಕೆ ಹೋಗಿಬಿಟ್ಟೆಯೇನಪ್ಪಾ. ನೆರಳಿನಂತೆ ನನ್ನನ್ನು ಹಿಂಬಾಲಿಸುವ ನಿನಗೆ ನನ್ನನ್ನು ಬಿಡಲು ಮನಸ್ಸಾದರೂ ಹೇಗೆ ಬಂದಿತೋ . . . ಹೇಳೋ . . . ಹೇಳೋ . . . **ಅಹಂ ಸರ್ವಂ ಕರಿಷ್ಯಾಮಿ** ``ಅಣ್ಣಾ ! ನಾನೇ ಎಲ್ಲವನ್ನೂ ಮಾಡುತ್ತೇನೆ. ನಿನ್ನೊಡನೆಯೇ ಇರುತ್ತೇನೆ'' ಎಂದೆಯಲ್ಲ. ಮರೆತುಬಿಟ್ಟೆತೇನಪ್ಪ ? ಈಗ ಮಾತ್ರ ನನ್ನನು ಏಕಾಕಿಯಾಗಿ ತೊರೆದು ನೀ ಒಬ್ಬನೇ ಪರಲೋಕಕ್ಕೆ ಹೋಗುವುದು ಸರಿಯೆ ? ಲಕ್ಷ್ಮಣಾ ! ನಾನು ಇಷ್ಟೊಂದು ದುಃಖಿಸುತ್ತಿದ್ದರೂ ಒಂದು ಮಾತನ್ನೂ ಆಡದೆ ಮಲಗಿರುವೆ ಯಲ್ಲ. ಇದು ಸರಿಯೆ ? ಹಿಂದೆಲ್ಲ ನಾನು ವನದಲ್ಲಿ ಶೋಕಕ್ಕೆ ಒಳಗಾದಾಗ ನೀನು ನನ್ನನ್ನು ನಾನಾವಿಧವಾಗಿ ಸಂತೈಸುತ್ತಿದ್ದೆಯಲ್ಲ. ಈಗ ನಾನು ಶೋಕಪೀಡಿತನಾಗಿರುವಾಗ ಒಂದು ಮಾತನ್ನೂ ಆಡದೆ ಇರುವುದು ನ್ಯಾಯವೆ ? ಲಕ್ಷ್ಮಣಾ ! ಶುಭಲಕ್ಷಣಗಳಿಂದ ಕೂಡಿದವನೇ ! ಏಕೆ ಹೀಗೆ ಮೌನವಾಗಿರುವೆ ? ``ಅಣ್ಣಾ !'' ಎಂದು ಒಮ್ಮೆ ಕರೆಯಬಾರದೆ ? ನನ್ನ ಕಣ್ಮಣಿ ! ಮುದ್ದು ಲಕ್ಷ್ಮಣ ! ಒಂದೇ ಸಲ ಬಾಯನ್ನು ತೆರೆ. ಬಾಯ್ತೆರೆದು ಒಂದು ಮಾತಾಡು. ನನ್ನ ದುಃಖ

ವನ್ನು ನೀಗಿಸು. ನನ್ನನ್ನು ನೋಡು ಲಕ್ಷ್ಮಣಾ ! ಕಣ್ಣುಗಳನ್ನು ಮುಚ್ಚಬೇಡ. ನಿನ್ನ ಆ ಕಣ್ಣುಗಳು ಕಮಲದಂತೆ ವಿಶಾಲವಾಗಿವೆ. ಆ ಶುಭ ನೇತ್ರಗಳನ್ನು ತೆರೆದು ಒಮ್ಮೆ ನನ್ನನ್ನು ನೋಡು. ``ಅಣ್ಣಾ ! ಎಂದು ಒಮ್ಮೆ ಹೇಳು'' ಎಂದು ರಾಮ ಪರಿಪರಿಯಾಗಿ ಹಲುಬ ತೊಡಗಿದ.

ದುಃಖಿತನಾಗಿ ಪರಿಪರಿಯಾಗಿ ಶೋಕಿಸಿದ ರಾಮನನ್ನು ಸಮಾಧಾನ ಪಡಿಸುತ್ತಾ ಸುಷೇಣ, ``ರಾಘವ ! ನೀನು ಶೋಕಿಸಬೇಡ. ಲಕ್ಷ್ಮಣನು ಮೃತನಾಗಿಲ್ಲ'' ಎನ್ನುತ್ತಾನೆ. ಮೂರ್ಛಿತನಾಗಿದ್ದಾನೆ ಅಷ್ಟೆ ನೋಡು ! ಇವನ ಮುಖ ಕಳೆಯಿಂದ ಕೂಡಿದೆ. ಕೈಗಳು ಕಮಲದಂತೆ ಕಾಂತಿಯುಕ್ತವಾಗಿವೆ. ಮೃತರ ಮುಖದಂತೆ ಲಕ್ಷ್ಮಣನ ಮುಖ ಕಳಾಹೀನವಾಗಿಲ್ಲ. ಲಕ್ಮಣನ ಶುಭಲಕ್ಷಣಗಳನ್ನು ನೋಡಿದರೆ ಇವನು ದೀರ್ಘಾಯುಷ್ಮಂತ ಎನಿಸುತ್ತದೆ. ನೋಡು ! ಲಕ್ಷ್ಮಣನ ಹೃದಯ ಉಸಿರಾಡುವಿಕೆಯಿಂದ ಕ್ರಮವಾಗಿ ಏರಿತಗ್ಗುತ್ತಿದೆ. ಹೃದಯದ ಬಡಿತ ಮಂದವಾಗಿಲ್ಲ. ಈ ಎಲ್ಲ ಕಾರಣಗಳಿಂದ ಲಕ್ಷ್ಮಣ ಜೀವಿಸಿದ್ದಾನೆ ಎಂದು ತೀರ್ಮಾನಿಸಬಹುದು ಎಂದ. ರಾಮನ ಪಕ್ಕದಲ್ಲಿ ನಿಂತಿದ್ದ ವೀರ ಹನುಮಂತನನ್ನು ಕುರಿತು ``ಹನುಮಂತ. ಈಗಲೇ ನೀನು ಓಷಧಿ ಪರ್ವತಕ್ಕೆ ಹೋಗು. ಅಲ್ಲಿರುವ ಮೂಲಿಕೆಗಳನ್ನು ತಾ. ವೈಶಲ್ಯಕರಣಿ, ಸಾವರ್ಣ್ಯಕರಣಿ ಸಂಧಾನಕರಣಿ ಮೃತಸಂಜೀವಿನಿ ಎಂಬ ಈ ನಾಲ್ಕು ಓಷಧಿ ಮೂಲಿಕೆಗಳನ್ನು ಶೀಘ್ರವಾಗಿ ತೆಗೆದು. ಕೊಂಡು ಬಾ.'' ಎಂದ.

ಅದರಂತೆ ಧೀರನಾದ ಹನುಮಂತ ಹಿಂದೆ ಜಾಂಬವಂತ ಹೇಳಿದ ಮಾರ್ಗವನ್ನೇ ಅನುಸರಿಸಿ ಓಷಧಿಪರ್ವತವನ್ನು ಸೇರಿದ. ಮೊದಲಿನಂತೆ ಓಷಧಿಗಳು ತಮ್ಮನ್ನು ಮರೆಸಿಕೊಂಡವು. ಆಗ ಹನುಮಂತ ಯೋಚಿಸಿದ. ಈ ಮೂಲಿಕೆಗಳನ್ನು ಹುಡುಕುತ್ತ ನಿಂತರೆ ಕಾಲಾತೀತವಾಗುತ್ತದೆ. ಓಷಧಿ ಪರ್ವತವನ್ನೇ ಒಯ್ಯುತ್ತೇನೆ ಎಂದು ನಿರ್ಧರಿಸಿದ. ಮಹಾಬಲಿಯಾದ ಹನುಮಂತ ಓಷಧಿಗಳಿದ್ದ ಆ ಪರ್ವತ ಶಿಖರವನ್ನು ಅಲುಗಾಡಿಸಿ ಅದನ್ನು ತನ್ನ ಕೈಗಳಲ್ಲಿ ಧರಿಸಿದ, ಕಪ್ಪಾದ ಮೇಘವನ್ನು ಧರಿಸಿದ ಪರ್ವತದಂತೆ ಹನುಮಂತ ವೇಗವಾಗಿ ಆ ಓಷಧಿ ಪರ್ವತವನ್ನೇ ತಂದು ಸುಷೇಣನ ಮುಂದಿಟ್ಟ. ಆ ಸರ್ವವಾನರರೂ ಹನುಮಂತನ ಮಹತ್ಕಾರ್ಯವನ್ನು ಶ್ಲಾಘಿಸಿದರು.

ಸುಷೇಣ ಆ ಪರ್ವತದಿಂದ ನಾಲ್ಕು ಮೂಲಿಕೆಗಳನ್ನು ತೆಗೆದ. ಸಂಧಾನಕರಣಿ, ಎಂಬ ಮೂಲಿಕೆಯ ಪ್ರಭಾವದಿಂದ ಕತ್ತರಿಸಲ್ಪಟ್ಟ ಅಂಗಗಳು ಪುನಃ ಸಂಯೋಜಿತವಾಗುವುವು.

ವಿಶಲ್ಯಕರಣಿ ಮೂಲಿಕೆ ಶರೀರದಲ್ಲಿ ಹೊಕ್ಕಿರುವ ಬಾಣಗಳನ್ನು ಹೊರತೆಗೆದು ಗಾಯಗಳನ್ನು ಮಾಗಿಸುವಂಥ ಪ್ರಭಾವವುಳ್ಳುದು.

ಸಾವರ್ಣ್ಯಕರಣಿ ಮೊದಲಿನಂತೆ ಕಾಂತಿಯುಕ್ತವಾದ ವರ್ಣವನ್ನು ಉಂಟುಮಾಡುವುದು.

ಸಂಜೀವಕರಣಿ ಮೂಲಿಕೆ ಮೂರ್ಛೆಯನ್ನು ನೀಗಿಸಿ ಪುನಃ ಚೇತನವನ್ನು ಕೊಡುವುದು. ಹೀಗೆ ಪ್ರಭಾವಶಾಲಿಗಳಾದ ಮೂಲಿಕೆಗಳನ್ನು ಚೆನ್ನಾಗಿ ಅರೆದು ಸುಷೇಣ ಲಕ್ಷ್ಮಣನ ಮೂಗಿಗೆ ಲೇಪಿಸಿದ. ಮೂಲಿಕೆಗಳ ಗಾಳಿಯನ್ನು ಆಘ್ರಾಣಿಸಿದ ಮಾತ್ರದಿಂದ ಲಕ್ಷ್ಮಣ ನಿರೋಗಿಯಾದ. ದೇಹದಲ್ಲಿ ಹೊಕ್ಕಿದ್ದ ಬಾಣಗಳು ಕಳಚಿಬಿದ್ದವು. ಮೂಲಿಕೆಗಳ ಲೇಪನದಿಂದ ಗಾಯ ವಾಸಿಯಾಯಿತು. ನವಚೇತನ ಬಂದಿತು. ಹುರುಪಿನಿಂದ, ನಿದ್ದೆಯಿಂದ ಎದ್ದವನಂತೆ ಸೌಖ್ಯವಾಗಿ ಲಕ್ಷ್ಮಣ ಎದ್ದ. ಲಕ್ಷ್ಮಣನಿಗೆ ಚೇತನ ಬಂದದ್ದನ್ನು ಕಂಡ ವಾನರರೆಲ್ಲ ಹರ್ಷ ಧ್ವನಿ ಮಾಡಿದರು.

ಪುನರ್ಜೀವಿತನಾದವನಂತೆ–ಮರಣಾತ್ ಪುನರಾಗತಂ_ಎದ್ದ ಲಕ್ಷ್ಮಣನನ್ನು ರಾಮಬರಸೆಳೆದು

ಗಾಢವಾಗಿ ಅಪ್ಪಿಕೊಂಡ. ಲಕ್ಷ್ಮಣನ ತಲೆಯನ್ನು ತಡವುತ್ತಾ "ಲಕ್ಷ್ಮಣಾ! ನೀನಿಲ್ಲದೆ ನನಗೆ ಜಗತ್ತೇ ಶೂನ್ಯವಾಗಿತ್ತು. ನೀನು ನನಗೆ ಪ್ರಾಣ. ನಿನ್ನನ್ನಗಲಿದ ಮೇಲೆ ನನಗೆ ರಾಜ್ಯದಿಂದೇನು? ಸೀತೆಯಿಂದೇನು? ವಿಜಯದಿಂದಲಾದರೂ ಏನು? ಅಬ್ಬ! ಬದುಕಿದೆಯಲ್ಲ. ನನಗೆ ಹೋದ ಪ್ರಾಣವೇ ಮರಳಿ ಬಂದಂತಾಯಿತು" ಎಂದು ಕಣ್ಣೀರು ಸುರಿಸಿದ.

ಆಗ ಲಕ್ಷ್ಮಣ ಸ್ವಲ್ಪ ಲಜ್ಜೆಯಿಂದ "ರಾಘವ! ನೀನು ನನಗಾಗಿ ಇಷ್ಟೊಂದು ಶೋಕಿಸುವುದು ಸರಿಯಿಲ್ಲ. ನೀನು ಸತ್ಯ ಪರಾಕ್ರಮಿ. ಮಾಡಿದ ಪ್ರತಿಜ್ಞೆಯನ್ನು ನೆರವೇರಿಸತಕ್ಕವನು. ನೀನು ಶೀಘ್ರವಾಗಿ ಪಾಪಿಯಾದ ರಾವಣನನ್ನು ಕೊಂದು ವಿಭೀಷಣನಿಗೆ ಲಂಕಾ ರಾಜ್ಯವನ್ನು ಕೊಡಿಸಬೇಕು. ಎಷ್ಟು ಬೇಗ ಆ ದುರಾತ್ಮನಾದ ರಾವಣ ಸತ್ತರ ಅಷ್ಟು ಒಳ್ಳೆಯದು. ಅವನನ್ನು ಬೇಗ ಕೊಂದು ಜನಕನಂದಿನಿಯನ್ನೂ, ರಾಜ್ಯವನ್ನೂ ಪಡೆಯುವವನಾಗು" ಎಂದು ಹೇಳಿದ.

ಲಕ್ಷ್ಮಣನ ಮಾತುಗಳನ್ನು ಕೇಳಿದ ರಾಮು "ಸೌಮಿತ್ರಿ! ಸರಿ. ನೀನೆಂದಂತೆಯೇ ಮಾಡುತ್ತೇನೆ" ಎಂದು ತನ್ನ ಧನುಸ್ಸನ್ನು ಹಿಡಿದು ರಾವಣನ ಕಡೆಗೆ ಯುದ್ಧಕ್ಕಾಗಿ ಧಾವಿಸಿದ. ಅತ್ತ ಓಡಿಹೋಗಿದ್ದ ರಾವಣನೂ ಬೇರೊಂದು ಹೊಸ ರಥವನ್ನು ಹತ್ತಿ ಯುದ್ಧಕ್ಕೆ ಸಿದ್ಧನಾಗಿ ಬಂದ.

ರಾಮ ರಾವಣರು ಅಭಿಮುಖರಾಗುತ್ತಿದ್ದಂತೆ ಬಾಣಗಳ ಮಳೆಯನ್ನೇ ಸುರಿಸತೊಡಗಿದರು. ಮೇಘವು ಜಲವನ್ನು ವರ್ಷಿಸುವಂತೆ ರಾವಣ ರಾಮನ ಮೇಲೆ ಬಾಣಗಳ ಮಳೆಯನ್ನು ಸುರಿಸಿದ. ರಾಮನೂ ತನ್ನ ಅಮೋಘವಾದ ದಿವ್ಯ ಬಾಣಗಳಿಂದ ರಾವಣನ ಬಾಣಗಳನ್ನು ಕತ್ತರಿಸುತ್ತಿದ್ದ. ರಾಮರಾವಣರ ಯುದ್ಧ ಅತ್ಯಂತ ಘೋರವಾಗಿತ್ತು. ರಾವಣ ಮಹಾರಥದ ಮೇಲೆ ಕುಳಿತು ಯುದ್ಧಮಾಡುತ್ತಿದ್ದ. ರಾಮ ನೆಲದ ಮೇಲೆಯೇ ನಿಂತು ಯುದ್ಧಮಾಡುತ್ತಿದ್ದ. ಇದನ್ನು ಕಂಡ ದೇವತೆಗಳು, ಗಂಧರ್ವರು, ಸಿದ್ಧರು, ಋಷಿಗಳು

**ನ ಸಮಂ ಯುದ್ಧಮಿತ್ಯಾಹುರ್ದೇವ ಗಂಧರ್ವ ದಾನವಾಃ।**

"ಇದು ಅನ್ಯಾಯ. ರಾವಣ ರಥದಲ್ಲಿ ಕುಳಿತು ಯುದ್ಧಮಾಡುವುದು, ರಾಮ ಬರಿ ನೆಲದಮೇಲೆ ನಿಂತು ಯುದ್ಧ ಮಾಡುವುದು ಸರಿಯಲ್ಲ" ಎಂದು ತಮ್ಮೊಳಗೇ ಮಾತಾಡಿಕೊಳ್ಳುತ್ತಿದ್ದರು. ಇದನ್ನು ದೇವರಾಜನಾದ ಇಂದ್ರ ಕೇಳಿದ. ತನ್ನ ಸಾರಥಿಯಾದ ಮಾತಲಿಯನ್ನು ಕರೆದು ತನ್ನ ರಥವನ್ನು ರಾಮನ ಸೇವೆಗಾಗಿ ಅರ್ಪಿಸುವಂತೆ ಹೇಳಿದ. ಆಗ ಮಾತಲಿ "ಮಹಾಪ್ರಭು! ಹಾಗೆಯೇ ಆಗಲಿ! ನಿಮ್ಮ ಸೂರ್ಯ ಸಂಕಾಶವಾದ ರಥವನ್ನೂ, ಧನುಸ್ಸನ್ನೂ, ಅಮೋಘವಾದ ಬಾಣಗಳನ್ನೂ, ದಿವ್ಯಶಕ್ತಿಯನ್ನೂ ನಾನೇ ರಾಮನಿಗೆ ಒಪ್ಪಿಸುತ್ತೇನೆ. ಜೊತೆಗೆ ನಾನು ರಾಮನಿಗೆ ಸಾರಥ್ಯವನ್ನೂ ಮಾಡುತ್ತೇನೆ" ಎಂದ.

ಇಂದ್ರನ ದಿವ್ಯರಥವನ್ನೇರಿದ ಮಾತಲಿ ರಾಮನ ಸಮೀಪಕ್ಕೆ ಬಂದು ಮೃದುವಾಗಿ "ಶತ್ರುಸೂದನ! ರಘುವೀರ! ದೇವರಾಜ ಇಂದ್ರನು ನಿಮ್ಮ ಸೇವೆಗಾಗಿ ಈ ರಥವನ್ನು ಸಮರ್ಪಿಸಿದ್ದಾನೆ.

**ಸಹಸ್ರಾಕ್ಷೇಣ ಕಾಕುಸ್ಥ! ರಥೋಽಯಂ ವಿಜಯಾಯತೇ।**
**ದತ್ತಸ್ತವ ಮಹಾಸತ್ವ! ಶ್ರೀಮನ್! ಶತ್ರುನಿಬರ್ಹಣ!"**

ಎಂದ. ವಾಲ್ಮೀಕಿಯು ಪದಪ್ರಯೋಗದ ವೈಶಿಷ್ಟ್ಯ, ಔಚಿತ್ಯವನ್ನು ನಾವು ಗಮನಿಸಬೇಕು. ಮಹಾಸತ್ವ, ಶ್ರೀಮನ್! ಎಂದೆಲ್ಲ ಮಾತಲಿ ರಾಮಭದ್ರನನ್ನು ಸಂಬೋಧಿಸುತ್ತಾನೆ. "ನಿನ್ನ ವಿಜಯಕ್ಕಾಗಿಯೇ ಈ ರಥ'' ಎನ್ನುತ್ತಾನೆ. ಮಾತಲಿ ತಂದ ರಥ ಅತ್ಯದ್ಭುತವಾಗಿತ್ತು. ಅದು ಮೂವತ್ತು ಮೂರುಕೋಟಿ ದೇವತೆಗಳ ಒಡೆಯ ದೇವರಾಜನ ದಿವ್ಯ ರಥವಾಗಿತ್ತು. ಆ ಮಹಾರಥ ಸುವರ್ಣದಿಂದ ಮಾಡಲ್ಪಟ್ಟಿತ್ತು. ಪ್ರಾತಃಕಾಲದ ಸೂರ್ಯನಂತೆ ಹೊಳೆಯುತ್ತಿತ್ತು. ಅರುಣ ವರ್ಣವುಳ್ಳ ಆ ರಥಕ್ಕೆ ಚಿನ್ನದ ಕುಂಜಗಳು ಇದ್ದವು. ಚಿನ್ನದ ಪ್ರಭೆಯುಳ್ಳ, ಸುವರ್ಣದ ಆಭರಣಗಳಿಂದ ಅಲಂಕೃತವಾದ, ಮನೋವೇಗವನ್ನೂ ಮೀರಿಸುವ ದಿವ್ಯಾಶ್ವಗಳು ಕಟ್ಟಲ್ಪಟ್ಟಿದ್ದವು. ಅಂಥ ದಿವ್ಯರಥವನ್ನು ಶ್ರೀರಾಮ ಪ್ರದಕ್ಷಿಣೆ ಮಾಡಿ ಹತ್ತಿಕುಳಿತ. ಸೂರ್ಯನಂತೆ ಪ್ರಕಾಶಿಸಿದ.

ಇಂದ್ರನ ರಥದಲ್ಲಿ ಕುಳಿತ ರಾಮನಿಗೂ ಬ್ರಹ್ಮದತ್ತವಾದ ರಥದಲ್ಲಿ ಕುಳಿತ ರಾವಣನಿಗೂ ಘೋರ ಕಾಳಗ ನಡೆಯಿತು. ಅತ್ಯದ್ಭುತವಾಗಿ, [ರೋಮಹರ್ಷಕವಾದ ಆ ತುಮುಲ ಯುದ್ಧ ನಭೂತೋ ನಭವಿಷ್ಯತಿ **"ಹಿಂದೆ ನಡೆದಿಲ್ಲ–ಮುಂದೆ ನಡೆಯುವುದಿಲ್ಲ''** ಎಂಬಂತಿತ್ತು. ರಾವಣ ರಾಮನಮೇಲೆ ನಾನಾವಿಧವಾದ ಬಾಣಗಳನ್ನು ಪ್ರಯೋಗಿಸಿದ. ಅಸ್ತ್ರಕೋವಿದನಾದ ರಾಮ ಆ ಎಲ್ಲ ಬಾಣಗಳನ್ನೂ ತನ್ನ ದಿವ್ಯವಾದ ಅಸ್ತ್ರಬಲದಿಂದ ನಾಶಮಾಡಿದ. ರಾವಣ ಪ್ರಯೋಗಿಸಿದ ಗಾಂಧರ್ವಾಸ್ತ್ರವನ್ನು ಗಾಂಧರ್ವಾಸ್ತ್ರದಿಂದಲೂ, ದೈವಾಸ್ತ್ರವನ್ನು ದೈವಾಸ್ತ್ರದಿಂದಲೂ ವಿಫಲಗೊಳಿಸಿದ.

ಕ್ರುದ್ಧನಾದ ರಾವಣ ಅಮೋಘವೆನಿಸಿದ ಸರ್ಪಾಸ್ತ್ರವನ್ನು ಪ್ರಯೋಗಿಸಿದ. ಮಹಾ ಮಹಾ ಸರ್ಪಗಳು ರಾಮನ ಸುತ್ತಲೂ ಆವರಿಸತೊಡಗಿದವು. ತೀಕ್ಷ್ಣವಾದ ವಿಷಜ್ವಾಲೆಯನ್ನು ಕಕ್ಕುತ್ತಾ ಆ ಸರ್ಪಾಸ್ತ್ರ ಸರ್ವತ್ರ ವ್ಯಾಪಿಸತೊಡಗಿತು.

ರಾಮ ಗಾರುಡಾಸ್ತ್ರವನ್ನು ಪ್ರಯೋಗಿಸಿದ. ಅದರಿಂದ ಚಿನ್ನದಂತೆ ರೆಕ್ಕೆಗಳುಳ್ಳ ಗರುಡ ಪಕ್ಷಿಗಳು ಹೊರಬಂದು ಸರ್ಪಗಳನ್ನು ಹಿಡಿದು ನಾಶಮಾಡಿದವು.

ಸರ್ಪಾಸ್ತ್ರವು ವಿಫಲವಾಯಿತು. ಇದನ್ನು ಸಹಿಸದ ರಾವಣ ಅತ್ಯಂತ ಕುಪಿತನಾಗಿ ಅನೇಕ ಬಾಣಗಳಿಂದ ರಾಮನನ್ನೂ ಅವನ ಸಾರಥಿಯಾದ ಮಾತಲಿಯನ್ನೂ ನೋಯಿಸಿದ. ರಾಮನ ರಥದ ಧ್ವಜವನ್ನು ಮುರಿದುಹಾಕಿದ. ಇದನ್ನು ಕಂಡ ವಾನರರೆಲ್ಲ ನಿರುತ್ಸಾಹಿಗಳಾದರು. ಸಮುದ್ರ ಮೇಲಕ್ಕೆ ಉಕ್ಕೇರತೊಡಗಿತು. ಎತ್ತರವಾಗಿ ಸಮುದ್ರದಲ್ಲಿ ಏಳುವ ಅಲೆಗಳು ಸೂರ್ಯನನ್ನು ಮುಟ್ಟುವಂತೆ ಇದ್ದವು. ಆಕಾಶದಲ್ಲಿ ಧೂಮಕೇತು ಕಾಣಿಸಿಕೊಂಡಿತು. ಗ್ರಹಗಳೆಲ್ಲ ಮಂಕಾದವು. ಸ್ವಲ್ಪಕಾಲ ರಾಮನಿಗೆ ಬಾಣಗಳನ್ನು ತೆಗೆಯಲು ಆಸ್ಪದ ಕೊಡದಂತೆ ರಾವಣ ತನ್ನ ಅದ್ಭುತ ಪರಾಕ್ರಮವನ್ನು ಪ್ರದರ್ಶಿಸಿದ. ಇಪ್ಪತ್ತು ತೋಳುಗಳಿಂದ ಕೂಡಿದ ಆ ಭಯಂಕರನಾದ ರಾವಣ ಮೈನಾಕಪರ್ವತದಂತೆ ಇದ್ದ. ಅವನನ್ನು ನೋಡಿದ ರಾಮ ಕ್ರೋಧವನ್ನು ತಂದುಕೊಂಡ.

**ಸಕೃತ್ವಾ ಭ್ರುಕುಟಿಂ ಕ್ರುದ್ಧಃ ಕಿಂಚಿತ್ ಸಂರಕ್ತಲೋಚನಃ ।**
**ಜಗಾಮ ಸುಮಹಾಕ್ರೋಧಂ ನಿರ್ದಹನ್ನಿವಚಕ್ಷುಷಾ ॥**

ಎಂದಿದಾರೆ ವಾಲ್ಮೀಕಿ.

ರಾವಣನ ಉಪಟಳ ಅಧಿಕವಾಗಲು ಆಗ ಸಮಯಕ್ಕೆ ಬೇಕಾಗುವಷ್ಟು ಕೋಪವನ್ನು ರಾಮ

ಬರಿಸಿಕೊಂಡ ಎಂದಿದಾರೆ ಕವಿ. ಅಂದರೆ ಕೋಪವನ್ನು ತನ್ನ ವಶದಲ್ಲಿಟ್ಟುಕೊಂಡಿದಾನೆ ರಾಮ: ಕೋಪಕ್ಕೆ ವಶನಾಗಿದಾನೆ ರಾವಣ. ಇದೇ ರಾಮನಿಗೂ, ರಾವಣನಿಗೂ ಇರುವ ಅಂತರ. ಅದರಿಂದಲೇ ವಾಲ್ಮೀಕಿ ಮಹರ್ಷಿ, ರಾಮಾಯಣದ ಪ್ರಾರಂಭದಲ್ಲೇ ರಾಮನನ್ನು **ಜಿತಕ್ರೋಧಃ** ಎಂದಿದಾರೆ.

ಕೋಪವನ್ನು ಜಯಿಸಿದವನು ಕೋಪಕ್ಕೆ ವಶವಾಗದೆ. ಕೋಪವನ್ನು ಬೇಕಾದ ಸಮಯದಲ್ಲಿ ಮಾತ್ರ ಉಪಯೋಗಿಸಿಕೊಳ್ಳುವಂಥವ. ಕ್ರೋಧವನ್ನು ಜಯಿಸಿದ ರಾಮ ರಾವಣನನ್ನು ಸಂಹರಿಸುವ ಕಾಲದಲ್ಲಿ ಮಾತ್ರ ಕ್ರೋಧವನ್ನು ಆಹ್ವಾನಿಸಿದ. ರಾಮ ಕೋಪಗೊಂಡ ಒಡನೆ ಆವನ ಹುಬ್ಬುಗಳು ಗಂಟಿಕ್ಕಿದವು. ಕಣ್ಣುಗಳು ಕೆಂಪಾದವು. ರಾಮನ ಅಮರ್ಷಭಾವವನ್ನು ನೋಡಿದಾಗ ರಾಮ ಅದರಿಂದ ಸರ್ವ ರಾಕ್ಷಸರನ್ನೂ ಭಸ್ಮೀಭೂತರನ್ನಾಗಿ ಮಾಡಿಬಿಡುತ್ತಾನೋ ಎನಿಸುತ್ತಿತ್ತು. ರಾಮನ ಕೋಪವನ್ನು ಅರಿತು ಸಮಸ್ತ ಪ್ರಾಣಿಗಳೂ ಭಯದಿಂದ ನಡುಗಿದವು. **ರಾವಣಸ್ಯಾಭವಚ್ಚ ಭಯಂ** ರಾವಣನ ಮನದಲ್ಲೂ ಭಯ ಆವರಿಸಿತು. ಆದರೂ ಅದನ್ನು ತೋರಗೊಡದೆ ಬಾಣಗಳಿಂದ ರಾಮನನ್ನು ನೋಯಿಸತೊಡಗಿದ. ರಾಮ ರಾವಣನಿಂದ ಬಿಡಲ್ಪಟ್ಟ ಬಾಣಗಳನ್ನೆಲ್ಲ ನಾಶ ಮಾಡಿದ. ಕ್ರುದ್ಧನಾದ ರಾವಣ ಒಂದು ಮಹಾಶೂಲವನ್ನು ತೆಗೆದು ತಿರುಗಿಸುತ್ತಾ "ರಘುಕುಲ ಪುತ್ರ ! ರಾಮ ! ನೀನು ಇದುವರೆಗೆ ಅನೇಕ ರಾಕ್ಷಸರನ್ನು ಕೊಂದೆ. ಈಗ ಅದಕ್ಕೆ ಫಲವಾಗಿ ಈ ಶೂಲದಿಂದ ನೀನೂ ನಿನ್ನ ಪ್ರಾಣವನ್ನು ನೀಗುವೆ. ನಿನ್ನ ಸೋದರನೊಡನೆ ನೀನೂ ಸಹ ಯಮಲೋಕವನ್ನು ಶೀಘ್ರದಲ್ಲೇ ಸೇರುವೆ. ಈ ಶೂಲ ಮಹಾ ಶಕ್ತಿಯುತವಾದುದು. ಇದನ್ನು ಭಗ್ನಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ" ಎಂದು ಗರ್ಜಿಸಿ ಆ ಮಹಾಶೂಲವನ್ನು ರಾಮನತ್ತ ಬೀಸಿದ.

ಎಂಟು ಗಂಟೆಗಳಿಂದ ಅಲಂಕೃತವಾದ ಆ ದಿವ್ಯವಾದ ಶೂಲಾಯುಧ ಆಕಾಶದಲ್ಲಿ ಬರುತ್ತಿರುವುದನ್ನು ಕಂಡ ರಾಮ ಬಾಣಗಳ ಮಳೆಯನ್ನು ಸುರಿಸಿದ. ಆದರೆ ಆ ಶೂಲ ಬಾಣಗಳನ್ನೆಲ್ಲ ನುಂಗುತ್ತಿತ್ತು. ಮುಂದೆ ಮುಂದೆ ಬರುತ್ತಲೇ ಇತ್ತು.

**ರಾವಣಸ್ಯಮಹಾಶೂಲಃ ಪತಂಗಾನಿವ ಪಾವಕಃ ।**

ಅಗ್ನಿಯು ಪತಂಗಗಳನ್ನು ಉರಿಸುವಂತೆ ತನ್ನ ಬಾಣಗಳನ್ನೆಲ್ಲ ಆ ಶೂಲ ಭಸ್ಮವಾಗಿಸಿದ್ದನ್ನು ಕಂಡು ರಾಮ ಆ ಶೂಲಕ್ಕೆ ಪ್ರತಿಯಾಗಿ ಮಾತಲಿ ತಂದಿದ್ದ ಶಕ್ತ್ಯಾಯುಧವನ್ನು ಪ್ರಯೋಗಿಸಿದ. ಇಂದ್ರದತ್ತವಾದ ಆ ಶಕ್ತಿ ಶೂಲಕ್ಕೆ ತಾಗಿ ಆ ಶೂಲ ಭಗ್ನವಾಯಿತು. ಶೂಲವನ್ನು ಮುರಿದು ರಾಮ ತೀಕ್ಷ್ಣವಾದ ಬಾಣಗಳಿಂದ ರಾವಣನನ್ನು ನೋಯಿಸಿದ. ರಾವಣನ ಎದೆಗೆ, ಹಣೆಗೆ ಮೂರು ಬಾಣಗಳನ್ನು ಹೊಡೆದು ಅವನನ್ನು ಗಾಯಗೊಳಿಸಿದ.

ಗಾಯಗೊಂಡ ರಾವಣನಿಗೆ ಮಿತಿಮೀರಿದ ಕೋಪ ಬಂದಿತು. ಪ್ರಳಯ ಕಾಲದ ಮೇಘಗಳು ಮಳೆಯನ್ನು ಸುರಿಸುವಂತೆ ರಾವಣ ರಾಮನನ್ನು ಬಾಣಗಳಿಂದ ಮುಚ್ಚಿದ. ರಾಮನೂ ರಾವಣನನ್ನು ಬಾಣಗಳಿಂದ ಮುಚ್ಚಿದ. ಬಾಣಗಳಿಂದ ಮುಚ್ಚಲ್ಪಟ್ಟ ಆಕಾಶದಲ್ಲಿ ಕತ್ತಲೆ ಆವರಿಸಿತು. ಆ ಕತ್ತಲೆಯಲ್ಲಿ ರಾಮ ರಾವಣರು ಒಬ್ಬರನ್ನೊಬ್ಬರು ನೋಡದಾದರು.

**ತತೋನ್ಯೋನ್ಯಂ ಸುಸಂರಬ್ಧಾವುಭೌತೌ ರಾಮ ರಾವಣೌ ।**

ಆಗ ರಾಮನು ಕೋಪಗೊಂಡವನಾಗಿ "ಪಾಪಿಯಾದ ರಾವಣ ! ನೀನು ನಿನ್ನನ್ನು ಶೂರ

ಎಂದು ತಿಳಿದಿರುವುದಾದರೆ ಅದು ವ್ಯರ್ಥವೇ ಸರಿ ! ನಿರ್ಜನವಾದ ಜನಸ್ಥಾನದಲ್ಲಿ ನಾನಿಲ್ಲದ ವೇಳೆ ಅಬಲೆಯಾದ ಹೆಣ್ಣನ್ನು ಅಪಹರಿಸಿ ಕುತ್ಸಿತ ಕರ್ಮವನ್ನು ಮಾಡಿರುವೆ. ಪುನಃ "ಶೂರ" ಎಂದು ಹೇಳಿಕೊಳ್ಳಲು ನಿನಗೆ ನಾಚಿಕೆಯಾಗುವುದಿಲ್ಲವ ?

**ಮಮ ಭಾರ್ಯಾ ಜನಸ್ಥಾನದಜ್ಞಾನಾದ್ರಾಕ್ಷಸಾಧಮ ।**
**ಹೃತಾತೇ ವಿವಶಾಯ ಸ್ಮಾತ್ತ್ವಸ್ಮಾತ್ತ್ವಂ ನಾಸಿವೀರ್ಯವಾನ್ ॥**

''ನಿರ್ಲಜ್ಜ, ಅನಾರ್ಯ, ದ್ರೋಹಿ, ಪಾತಕಿ ! ನೀನು ಅಂದು ನನ್ನ ಇದಿರಿನಲ್ಲೇ ಸೀತೆಯನ್ನು ಅಪಹರಿಸುವಸಾಹಸವನ್ನು ಮಾಡಿದ್ದರೆ ಇಂದಿನವರಗೆ ನೀ ಜೀವಿಸುತ್ತಲೇ ಇರಲಿಲ್ಲ. ಅಂದು ಖರನಿಗಾದ ಗತಿಯೇ ನಿನಗೂ ಆಗುತ್ತಿತ್ತು. ಇದುವರೆಗೆ ನೀನು ನನ್ನ ಕಣ್ಣಿಗೆ ಬೀಳಲಿಲ್ಲವಾದ್ದರಿಂದ ಬದುಕಿದೆ. ಇನ್ನು ನೀನು ಬದುಕಲಾರೆ. ಗರುಡನ ದೃಷ್ಟಿಗೆ ಬಿದ್ದ ಸರ್ಪ ಹೇಗೆ ಜೀವಿಸಲು ಶಕ್ಯವಿಲ್ಲವೋ, ಮೃಗರಾಜನಾದ ಸಿಂಹದ ನೋಟಕ್ಕೆ ಸಿಕ್ಕಿದ ಆನೆ ಹೇಗೆ ಬದುಕಲು ಸಾಧ್ಯವಿಲ್ಲವೋ ಹಾಗೆಯೇ ನನ್ನ ದೃಷ್ಟಿಗೆ ಬಿದ್ದ ಮೇಲೆ ನೀನು ಬದುಕಲಾರೆ ! ನಿನ್ನನ್ನು ಕೊಂದು ಪಕ್ಷಿಗಳಿಗೆ ಮೃಗಗಳಿಗೆ ಸಂತರ್ಪಣೆ ಮಾಡುತ್ತೇನೆ, ಶಿರಸ್ಸಿನಿಂದ ಬೇರ್ಪಟ್ಟ ನಿನ್ನ ಎದೆಯ ಮೇಲೆ ಹದ್ದುಗಳು ಕುಳಿತು ನಿನ್ನ ಮಾಂಸವನ್ನು ಕುಕ್ಕಿ ತಿನ್ನುತ್ತವೆ. ಇದು ಶೀಘ್ರದಲ್ಲೇ ನಡೆಯುತ್ತದೆ.

"ರಾವಣ ! ಅಂದು ನೀ ಮಾಡಿದ ಹೇಯ ಕರ್ಮಕ್ಕೆ ಇಂದು ಫಲ ಒದಗಿಬಂದಿದೆ."ಎಂದು ಹೇಳಿ ವಿನಾಶಕನಾದ ರಾಮ ರಾವಣನ ಮೇಲೆ ಬಾಣಗಳ ಮಳೆಯನ್ನು ಸುರಿಸತೊಡಗಿದ. ರಾವಣನೊಡನೆ ಯುದ್ಧ ಮಾಡುತ್ತಿದ್ದ ರಾಮನ ಬಲ, ಶಕ್ತಿ ಪರಾಕ್ರಮಗಳು ವೃದ್ಧಿಯಾದವು. ಅಸ್ತ್ರದೇವತೆಗಳು ರಾಮನನ್ನು "ತಾ ಮುಂದು-ನಾ ಮುಂದು" ಎಂದು ಆಶ್ರಯಿಸಿದವು. ಉತ್ಸಾಹ ಹೆಚ್ಚಿತು, ತನ್ನಲ್ಲಿ ಉಂಟಾದ ಶುಭಲಕ್ಷಣಗಳಿಂದ ಮತ್ತಷ್ಟು ಉತ್ಸಾಹಿತನಾದ ರಾಮ ರಾವಣನನ್ನು ನಾನಾ ಪ್ರಕಾರವಾದ ಬಾಣಗಳಿಂದ ನೋಯಿಸಿದ.

ರಾಮನ ಅತ್ಯದ್ಭುತವಾದ ಪರಾಕ್ರಮದಿಂದ ರಾವಣನ ಮನ ವ್ಯಾಕುಲಗೊಂಡಿತು. ಹೃದಯವೇ ಸ್ತಂಭಿಸಿದಂತಾಯಿತು. ಬಲ ಕ್ಷೀಣವಾಯಿತು. ಹಾಗೇ ರಥದಲ್ಲಿ ಉರುಳಿದ. ರಾವಣ ಅಚೇತನನಾಗಿ, ಶಕ್ತಿ ಹೀನನಾಗಿ ರಥದಲ್ಲಿ ಬಿದ್ದುದನ್ನು ಕಂಡ ಅವನ ಸಾರಥಿ ರಥವನ್ನು ರಣರಂಗದಿಂದ ಹಿಂದಿರುಗಿಸಿದ.

ಪುನಃ ಚೇತನವನ್ನು ಪೊಂದಿದ ರಾವಣ ಸಾರಥಿಯು ರಣದಿಂದ ರಥವನ್ನು ಹಿಂದಿರುಗಿಸಿದ್ದನ್ನು ಕಂಡು ಕುಪಿತನಾದ. ಕೋಪದಿಂದ ಕೆಂಪಗೆ ಕಣ್ಣುಗಳನ್ನು ಮಾಡಿಕೊಂಡು ಸಾರಥಿಯನ್ನು ಕುರಿತು "ದುರ್ಬುದ್ಧಿಯುಳ್ಳವನೇ ? ಎಷ್ಟು ದಿನಗಳಿಂದ ಹೀಗೆ ಅಪಮಾನ ಮಾಡಬೇಕೆಂದು ಕಾದಿದ್ದೆ. ಶತ್ರುವಿನ ಇದಿರಿನಲ್ಲಿ ರಥವನ್ನು ಹಿಂದಿರುಗಿಸಿ ನನಗೆ ಘೋರವಾದ ಅಪಮಾನವನ್ನು ಮಾಡಿರುವಿ. ಇಷ್ಟು ದಿನಗಳವರೆಗೆ ನಾನು ಸಂಪಾದಿಸಿದ ಯಶಸ್ಸು ಕೀರ್ತಿ ಎಲ್ಲವನ್ನೂ ನೀನು ಹಾಳು ಮಾಡಿದೆ, ನನ್ನ ಅಭಿಪ್ರಾಯವನ್ನು ಕೇಳದೆ ರಥವನ್ನೇಕೆ ಹಿಂದಿರುಗಿಸಿದೆ ?" ಎಂದು ನಿಂದಿಸಿದ. ಇಲ್ಲಿ ರಾವಣ ರಾಮನ ಪರಾಕ್ರಮವನ್ನು ಪ್ರಶಂಸಿಸುತ್ತಾನೆ. "ರಾಮ ಎಂಬ ಹೆಸರು ಅನ್ವರ್ಥವಾಗಿ ಉಳಿಯುವಂತೆ ರಾವಣ ರಾಮನನ್ನು ಮೆಚ್ಚುತ್ತಾನೆ.

"ರಮಯತೀತಿ ರಾಮಃ" ರಂಜಿಸತಕ್ಕವನು ರಾಮ ಎಂಬ ಅರ್ಥವನ್ನು ಸಾರ್ಥಕಗೊಳಿಸಿದ.

ರಾವಣ ರಾಮನ ಶೌರ್ಯವನ್ನು ಕಣ್ಣಾರೆ ಕಂಡು ಆ ರಾಮನಿಂದ ಸಾಯಲು ಇಚ್ಛಿಸಿದ. "ಪರಾಕ್ರಮಿ ಎಂದರೆ ರಾಮ. ಅಬ್ಬ ! ಅದೆಂಥ ವೀರ್ಯ ! ? ಮನಸ್ಸನ್ನು ರಂಜಿಸತಕ್ಕಂಥ ವಿಕ್ರಮವದು ! ಪ್ರಖ್ಯಾತ ವೀರ ಎಂದರೆ ರಾಮ. ವೀರ ಎಂದರೆ ರಾಮನೇ ಸರಿ. ! " ಎಂದು ಮನಸಾರೆ ರಾವಣ ರಾಮನ ವಿಕ್ರಮವನ್ನು ಮೆಚ್ಚಿಕೊಳ್ಳುತ್ತಾನೆ. ಇದನ್ನೇ ವಾಲ್ಮೀಕಿ

**ಶತ್ರೋಃ ಪ್ರಖ್ಯಾತ ವೀರ್ಯಸ್ಯ ರಂಜನೀಯಸ್ಯ ವಿಕ್ರಮೈಃ ।**
**ಪಶ್ಯತೋ ಯುದ್ಧ ಲುಬ್ಧೋಽಹಂ ಕೃತಃ ಕಾಪುರುಷ ಸ್ತ್ವಯಂ ॥**

"ಮನಸ್ಸಿಗೆ ಸಂತೋಷವನ್ನುಂಟು ಮಾಡುವಂಥ ವೀರ್ಯ ರಾಮನದು. ಧನುರ್ಧಾರಿಯಾಗಿ ರಾಮನ ಮುಂದ ನಿಂತು ಯುದ್ಧ ಮಾಡುವುದೇ ಒಂದು ಸೊಗಸು. ಪ್ರಖ್ಯಾತ ವೀರ್ಯನಾದ ರಾಮನೊಂದಿಗೆ ಅಂಥ ಸಿಂಹವಿಕ್ರಮನ ಇದಿರಿನಲ್ಲಿ ನಿಂತು ಯುದ್ಧ ಮಾಡಲು ನಾನು ಇಚ್ಛಿಸುತ್ತೇನೆ. ಯುದ್ಧಾಭಿಲಾಷಿಯಾಗಿದ್ದೇನೆ. ''ನಾನು ನನ್ನ ಪ್ರಾಣವನ್ನು ಪಣವಿಟ್ಟು ರಾಘವನೊಡನೆ ಕಾದುತ್ತಿದ್ದಾಗ ಸಾರಥಿ ನೀನು ಅನ್ಯಾಯವಾಗಿ ನನ್ನನ್ನು ಅಪಮಾನಗೊಳಿಸಿದೆಯಲ್ಲ" ಎನ್ನುತ್ತಾನೆ ರಾವಣ.

ರಾಮ ಸರ್ವವನ್ನೂ ರಂಜಿಸತಕ್ಕವನು. ಒಬ್ಬೊಬ್ಬರು ಒಂದೊಂದು ವಿಧದಲ್ಲಿ ರಾಮನನ್ನು ಅನುಭವಿಸಿದಾರೆ. ತಂದೆ ದಶರಥ ಪಿತೃತ್ವವನ್ನು ಅನುಭವಿಸಿದ. ಕೌಸಲ್ಯೆ, ಸುಮಿತ್ರೆ ಮುಂತಾದ ದಶರಥನ ಸ್ತ್ರೀಯರು ಮಾತೃತ್ವದ ನೆಲೆಯಲ್ಲಿ ನಿಂತು ''ಪುತ್ರ" ಎಂದು ರಾಮನನ್ನು ಅನುಭವಿಸಿದರು.

"ಭರತ. ಲಕ್ಷ್ಮಣ, ಶತ್ರುಘ್ನರು ಭ್ರಾತೃತ್ವ, ಸ್ವಾಮಿತ್ವದ ನೆಲೆಯಲ್ಲಿ ರಾಮನನ್ನು ಅನುಭವಿಸಿದರು. ಸೀತೆ ಪತ್ನಿಯಾಗಿದ್ದುಕೊಂಡು ರಾಮನನ್ನು ಇಚ್ಛಿಸಿದಳು, ಅನುವರ್ತಿಸಿದಳು.

ಅಯೋಧ್ಯೆಯ ಪ್ರಜೆಗಳಿಗೆ ರಾಮ ರಾಜ ಅಂದರೆ ರಂಜಕನಾದ. "ಇಚ್ಛಾಮೋಹಿಮಹಾಬಾಹುಂ ರಘುವೀರಂ ಮಹಾಬಲಂ" ಎಂದು ವಾಲ್ಮೀಕಿ ಹೇಳಿದಂತೆ ರಾಮ ಯಾವಾಗ ತಮಗೆಲ್ಲ ರಾಜನಾಗುವನೋ ಎಂದು ಕಾತರಿಸಿದರು.

ಬೇಡರ ಒಡೆಯ ಗುಹನಿಗೆ ರಾಮ ಒಡೆಯನಾದ. ಭರದ್ವಾಜ, ವಿಶ್ವಾಮಿತ್ರ, ವಸಿಷ್ಠರೇ ಮುಂತಾದ ಬ್ರಹ್ಮರ್ಷಿಗಳಿಗೆ ಪರತ್ವವನ್ನು ಪ್ರತಿಪಾದಿಸತಕ್ಕ ಪರಬ್ರಹ್ಮನಾಗಿ ರಂಜಿಸಿದ. ರಾಕ್ಷಸಿಯಾದ ಶೂರ್ಪನಖಿಗೆ ದಿವ್ಯ ಮಂಗಳ ವಿಗ್ರಹಿಯಾಗಿ ಕಾಣಿಸಿದ. ಭಕ್ತೆಯಾದ ಶಬರಿಗೆ ರಾಮನ ಸೌಶೀಲ್ಯದ ಅರಿವಾಯಿತು. ಹನುಮಂತ ರಾಮನ ದಿವ್ಯತ್ವಕ್ಕೆ ದಾಸನಾದ. ವಿಭೀಷಣ ರಾಮನ ಸೌಲಭ್ಯ ಗುಣಗಳಿಗೆ ಶರಣಾದ. ಸುಗ್ರೀವ ರಾಮನ ವೀರ್ಯಕ್ಕೆ ಮಾರುಹೋದ. ವಾಲಿ ರಾಮನ ಧಾರ್ಮಿಕತೆ ಹಾಗೂ ಪೌರುಷಕ್ಕೆ ತಲೆದೂಗಿದ. ಶತ್ರುಗಳಾದ ರಾಕ್ಷಸರು ರಾಮನ ಬಲವನ್ನು ಕೊಂಡಾಡಿದರು.

ಈಗ ರಾವಣ ರಾಮನ ಪತ್ನಿಯನ್ನು ಅಪಹರಿಸಿದ ಶತ್ರು, ದೇವಕಂಟಕ. ಋಷಿಗಳಿಗೆ ತೊಂದರೆ ಕೊಟ್ಟವ. ಮೂರು ಲೋಕವನ್ನೂ ಆಳಿಸುವವ. ''ರಿಪು ಭಯಂಕರ" ಎನಿಸಿದ ಇಂಥ ದಶಗ್ರೀವ ರಾಮನ ವಿಕ್ರಮಕ್ಕೆ ಮಾರುಹೋದ.

**ರಂಜನೀಯಶ್ಚ ವಿಕ್ರಮ್ಯೈಃ** ಎಂದ,

"ಶತ್ರು ಎಂದರೆ ಹಾಗಿರಬೇಕು. ಶತ್ರುವಿನ ವೀರ್ಯ, ವಿಕ್ರಮ ಅರ್ಥಾತ್ ರಾಮನ ವೀರ್ಯ ವಿಕ್ರಮವೇ ಸರಿಯಾದುದು. ಹೊಡೆದರೆ ಆ ವೀರ ರಾಘವ ಹೊಡೆಯಬೇಕು. ಸತ್ತರೆ ಆ ಸಿಂಹ ವಿಕ್ರಮನಿಂದ ಸಾಯಬೇಕು" ಎಂದು ರಾಮನ ವಿಕ್ರಮಕ್ಕೆ ಮನಸೋತ ರಾವಣ. ಶತ್ರುವನ್ನೂ ರಂಜಿಸತಕ್ಕಂಥ ವೀರ್ಯ ರಾಮನದು. ಇಂಥ ವೀರನೊಡನೆ ಕಾದುತ್ತಿರುವಾಗ ತನ್ನ ರಥವನ್ನು ಸಾರಥಿ ಹಿಂದಿರುಗಿಸಿದುದು ರಾವಣನಿಗೆ ಅಸಹನೀಯವೆನಿಸಿತು. ರಾಮನ ವೀರ್ಯ ಹೆಚ್ಚುತ್ತಿದ್ದಂತೆ ರಾವಣನ ಯುದ್ಧಲುಬ್ಧತೆಯೂ ಹೆಚ್ಚುತ್ತಿತ್ತು.

ಸಾರಥಿಯನ್ನು ಬಹುಪ್ರಕಾರವಾಗಿ ನಿಂದಿಸಿದ. "ದುರ್ಮತಿ ! ನೀನು ಮೋಹವಶದಿಂದ ರಥವನ್ನು ಹಿಂದಿರುಗಿಸಿ ನನಗೆ ಘೋರವಾದ ಅವಮಾನವನ್ನು ಮಾಡಿರುವೆ. ಹೀಗೆ ನನಗೆ ಅವ ಮಾನವೆಸಗಿರುವುದರಿಂದ ನೀನು ಮಿತ್ರನಲ್ಲ ನನಗೆ; ಶತ್ರುವೇ ಸರಿ. ನೀನು ಶತ್ರುಗಳಿಂದ ಪ್ರೇರಿತ ನಾಗಿ ನನ್ನನ್ನು ಹೀನೈಸುವ ಸಲುವಾಗಿಯೇ ಈ ಅಕಾರ್ಯವನ್ನು ಮಾಡಿರುವೆ. ಹೋಗು ! ಬೇಗ ರಥವನ್ನು ಯುದ್ಧರಂಗಕ್ಕೆ ತೆಗೆದುಕೊಂಡು ನಡೆ" ಎಂದ.

ರಾವಣನ ಹಿತೈಷಿಯಾದ ಸಾರಥಿ ರಾವಣನ ಮೂರ್ಖ ವಚನಗಳನ್ನು ಕೇಳಿ ವಿನಯದಿಂದ "ಮಹಾರಾಜ ! ನಾನು ಭಯಪಟ್ಟಿಲ್ಲ. ನಾನು ಅವಿವೇಕಿಯೂ ಅಲ್ಲ. ಶತ್ರುಗಳ ಒಳಸಂಚಿನಲ್ಲಿ ಸೇರಿಕೊಂಡವನೂ ಅಲ್ಲ. ನಾನು ಶತ್ರುವೂ ಅಲ್ಲ. ನಿಮ್ಮ ಮೇಲಿನ ಪ್ರೀತಿ ನನಗೆ ಕಡಿಮೆಯಾ ಗಿಯೂ ಇಲ್ಲ. ಅಲ್ಲದೆ ನೀವು ನನ್ನನ್ನು ಬಹು ವಿಧದಲ್ಲಿ ಸತ್ಕಾರ ಮಾಡಿ ಪುರಸ್ಕರಿಸಿದುದನ್ನು ನಾನು ಮರೆತೂ ಇಲ್ಲ. ಮಹಾರಾಜ ! ನಾನು ಮಾಡಿದ ಕೆಲಸ ಸಮಯೋಚಿತವಾಗಿದೆ. ಏಕೆ ನಾನು ಹಾಗೆ ರಥವನ್ನು ಹಿಂದಿರುಗಿಸಿದೆ ? ಎಂಬುದನ್ನು ಹೇಳುತ್ತೇನೆ ಕೇಳಿ;

"ಸಾರಥಿಯಾದವನು ದೇಶಕಾಲಗಳ, ಸಮಯಾಸಮಯಗಳ ಪರಿಜ್ಞಾನವನ್ನು ಚೆನ್ನಾಗಿ ಪಡೆದಿರಬೇಕು. ನೀವು ಶತ್ರುವಿನಿಂದ ಬಹಳ ಶ್ರಾಂತರಾಗಿದ್ದಿರಿ. ನಿಮ್ಮಲ್ಲಿ ಶತ್ರುವನ್ನು ಇದಿರಿ ಸಲು ಸಾಕಷ್ಟು ಪರಾಕ್ರಮವಿರಲಿಲ್ಲ. ಜೊತೆಗೆ ಕುದುರೆಗಳೂ ಬಹಳ ದಣಿದಿದ್ದವು. ಅತ್ತ ಶತ್ರು ವಿನ ಪರಾಕ್ರಮ ವೃದ್ಧಿಯಾಗುತ್ತಿತ್ತು. ಇದನ್ನೆಲ್ಲ ಕಂಡು ನಾನು ನಿಮ್ಮ ಹಿತವನ್ನು ಅನುಲಕ್ಷಿಸಿ ನಿಮಗೆ ಹಾಗೂ ಕುದುರೆಗಳಿಗೆ ಸ್ವಲ್ಪ ವಿಶ್ರಾಂತಿಯನ್ನು ಕೊಡುವ ಸಲುವಾಗಿ ರಥವನ್ನು ಹಿಂದಿರುಗಿಸಿದೆನೇ ಪರಂತು ಅನ್ಯಥಾ ಅಲ್ಲ. ಸಾರಥಿಯಾದವನು ರಥಿಕನ ಮನೋ ಧರ್ಮವನ್ನು ಅರಿತವನಾಗಿರಬೇಕು, ಶತ್ರುವಿನ ಬಲಾಬಲಾವನ್ನು ತಿಳಿದವನಾಗಿರಬೇಕು ಯಾವಾಗ ರಥವನ್ನು ಹತ್ತಿರ ತರಬೇಕು ? ಯಾವಾಗ ಎಷ್ಟು ವೇಗವಾಗಿ ಓಡಿಸಬೇಕು ? ಮತ್ತೆ ಯಾವಾಗ ಮಂದವಾಗಿ ನಡೆಸಬೇಕು? ಎಂಬುದನ್ನೆಲ್ಲ ಸೂಕ್ಷ್ಮವಾಗಿ ತಿಳಿದಿರಬೇಕು. ರಥಿಕನ ಪ್ರಾಣವನ್ನು ರಕ್ಷಿಸಲು ಸಮ ಯೋಚಿತವಾಗಿ ರಥವನ್ನು ನಡೆಸಬೇಕು. ಅದರಂತೆ ಸಾರಥಿಯ ಧರ್ಮವನ್ನನುಸರಿಸಿ, ಸ್ವಾಮಿ ಯಾದ ನಿಮ್ಮ ಹಿತವನ್ನು ಬಯಸಿ ನಾನು ಬಹಳ ಆಯಾಸಗೊಂಡಿದ್ದ ನಿಮಗೆ ಸ್ವಲ್ಪವಿಶ್ರಾಂತಿ ಯನ್ನುಂಟು ಮಾಡುವ ಸಲುವಾಗಿ ರಥವನ್ನು ಹಿಂದಿರುಗಿಸಿದೆ.

"ವೀರಶ್ರೇಷ್ಠ ! ಈಗ, ನೀವು ರಥವನ್ನು ಹೇಗೆ ಎಲ್ಲಿಗೆ ಹೊಡೆ ಎಂದರೆ ಹಾಗೆ ನಡೆಸಲು ಸಿದ್ಧನಾಗಿದೇನೆ. ನಿಮಗೆ ಅಹಿತವನ್ನು ಮಾಡಲು ನಾ ಯೋಚಿಸಿಲ್ಲ. ಇದು ನಿಶ್ಚಯ. ಈಗ ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ" ಎಂದ. ಸಾರಥಿಯ ಅನುನಯದ ಮಾತುಗಳಿಂದ

ರಾವಣ ಪ್ರಸನ್ನನಾದ. ಸಾರಥಿಯನ್ನು ಪ್ರಶಂಸಿಸಿದ. ಅವನು ಮಾಡಿದ ಹಿತಕ್ಕಾಗಿ ಅವನಿಗೆ ತನ್ನ ಹಸ್ತಾಭರಣವನ್ನಿತ್ತು ಸನ್ಮಾನಿಸಿದ.

## ಆದಿತ್ಯ ಹೃದಯದ ಶ್ರೇಷ್ಠತೆ

ರಾವಣನ ಸಾರಥಿ ರಥವನ್ನು ಹಿಂದಿರುಗಿಸಿದಾಗ ರಾಮನು ರಥದಲ್ಲಿ ಕುಳಿತ ರಾವಣನನ್ನು ಕಂಡ. ದೂರದಲ್ಲಿ ರಾವಣ ಬರುತ್ತಿದ್ದುದನ್ನು ನೋಡಿ, ಇವನನ್ನು ಕೊಲ್ಲುವುದು ಹೇಗೇ ? ಎಂದು ಯೋಚಿಸಿದ. ಆ ಸಮಯಕ್ಕೆ ಸರಿಯಾಗಿ ರಾಮ–ರಾವಣರ ಯುದ್ಧವನ್ನು ಆಕಾಶದಲ್ಲಿ ದೇವತೆಗಳೊಂದಿಗೆ ನಿಂತು ನೋಡುತ್ತಿದ್ದ ಅಗಸ್ತ್ಯಮಹರ್ಷಿಗಳು ರಾಮನ ಸಮೀಪಕ್ಕೆ ಬಂದರು.

ರಾಮ ರಾಮ ಮಹಾಬಾಹೋ ! ಶೃಣು ಗುಹ್ಯಂ ಸನಾತನಂ

ಎಂದು ಹಿಡುತ್ತ ಬಂದು ರಾಮನಿಗೆ ಆದಿತ್ಯ ಹೃದಯವನ್ನು ಉಪದೇಶಿಸಿದರು.

ಆದಿತ್ಯ ಹೃದಯ ಅತ್ಯಂತ ಶ್ರೇಷ್ಠವಾದುದು. ಮಂಗಳಕರವಾದುದು. ಸರ್ವ ವಿಧ ಶತ್ರುಗಳನ್ನೂ ನಿಗ್ರಹಿಸತಕ್ಕುದು. ಸರ್ವಪಾಪವನ್ನೂ ನಾಶಮಾಡುವಂಥದು. ಚಿಂತೆ, ಶೋಕ, ಇವುಗಳನ್ನು ದೂರಮಾಡುವಂಥದು.

ಆದಿತ್ಯ ಹೃದಯದ ಅಧಿದೇವತೆ ಸಾಕ್ಷಾತ್ ಸೂರ್ಯ ಮಂಡಲ ಮಧ್ಯವರ್ತಿಯಾದ ನಾರಾಯಣ. ಗೀತೆಯಲ್ಲಿ ಶ್ರೀಕೃಷ್ಣ ''ಸೂರ್ಯನ ಪ್ರಭೆ, ತೇಜಸ್ಸು ನಾನು'' ಎಂದಿದಾನೆ.

ರಾಮನು ನಾರಾಯಣನ ಅವತಾರ ಎನ್ನುವಾಗ ಆದಿತ್ಯ ಹೃದಯದ ಆವಶ್ಯಕತೆ ಏತಕ್ಕೆ ? ಎಂಬ ಪ್ರಶ್ನೆ ಏಳುತ್ತದೆ. ರಾವಣನ ಸಂಹಾರವಾಗುವ ತನಕ ರಾಮ

**ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ**

ಎಂಬುದಾಗಿ ತಾನು ದಶರಥನ ಮಗ, ಮನುಷ್ಯ ಎಂಬುದಾಗಿ ಭಾವಿಸಿಕೊಂಡಿರುವ ಕಾರಣದಿಂದ ಅಗಸ್ತ್ಯರು ರಾಮನಿಗೆ ಆದಿತ್ಯ ಹೃದಯವನ್ನು ಉಪದೇಶಿಸಿದರು ಎಂದು ತಿಳಿಯಬೇಕು. ಆದಿತ್ಯನ ವಿವಿಧ ನಾಮಗಳನ್ನು ಉಪದೇಶಿಸುತ್ತಾರೆ.

"ಮಹಾಬಾಹುವಾದ ರಾಮ ! ಆದಿತ್ಯನಿಗೆ ಹಲವಾರು ಹೆಸರುಗಳು. ರಶ್ಮಿಮಂತ, ಸಮುದ್ಯಂತ, ದೇವಾಸುರರಿಂದ ನಮಸ್ಕಾರ ಮಾಡಿಸಿಕೊಳ್ಳುವವ, ವಿವಸ್ವಂತ, ಎಂಬುದಾಗಿ ಅನೇಕ ನಾಮಗಳು. ಸರ್ವದೇವಾತ್ಮಕನೂ ಇವನೇ. ಈ ಆದಿತ್ಯನೇ ಬಹ್ಮ, ಸೃಷ್ಟಿಕರ್ತ. ವೇದದಲ್ಲಿ

**ಆದಿತ್ಯಾದ್ ಜಾಯತೇ ವೃಷ್ಟಿ ವೃಷ್ಟೇರನ್ನಂ ತತಃ ಪ್ರಜಾಃ**

ಎಂದಿದೆ.

ಆದಿತ್ಯನೇ ಮಳೆಯನ್ನು ಸುರಿಸುವವ. ತನ್ನ ತೀಕ್ಷ್ಣವಾದ ಕಿರಣಗಳಿಂದ ಸಮುದ್ರಜಲ ವನ್ನು ಆಕರ್ಷಿಸಿ ಅದನ್ನು ಶುದ್ಧವಾಗಿಸಿ ಮಳೆಯ ರೂಪದಲ್ಲಿ ಸುರಿಸುತ್ತಾನೆ. ಮಳೆಯಿಂದ ಬೆಳೆ, ಬೆಳೆಯಿಂದ ಪ್ರಜೋತ್ಪತ್ತಿ. ಹೀಗೆ ಸೃಷ್ಟಿಕ್ರಮ ಅವ್ಯಾಹತವಾಗಿ ಸಾಗುವಂತೆ ಮಾಡು ವವನೇ ಸೂರ್ಯ. ಆದರಿಂದಲೇ ಅವನನ್ನು "ಬ್ರಹ್ಮ" ಎಂದಿರುವುದು.

ಆದಿತ್ಯನೇ ವಿಷ್ಣು. ಸರ್ವಲೋಕವನ್ನೂ ಪಾಲಿಸುವವ ವಿಷ್ಣು. ಸೂರ್ಯನಿಂದ ಲೋಕ ಉಳಿದಿದೆ. ಆದ್ದರಿಂದ ಅವನೇ ವಿಷ್ಣು.

ಕಾಲ, ರುದ್ರ, ಶಿವ, ಎಲ್ಲ ಆದಿತ್ಯನೇ. ಪ್ರಳಯಕಾಲದಲ್ಲ ವೃಷ್ಟಿಯೇ ಇಲ್ಲದಂತೆ ಮಾಡುವುದೂ–ಅತಿಯಾದ ವೃಷ್ಟಿಯನ್ನುಂಟುಮಾಡಿ ನಾಶಮಾಡುವುದೂ ಆದಿತ್ಯನ ಕೆಲಸವೇ. ಆದ್ದರಿಂದ ಆದಿತ್ಯನೇ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು.

ಸರ್ವದೇವಾತ್ಮಕ ಆದಿತ್ಯ.

**ಏಷ ಬ್ರಹ್ಮಾಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ ।**
**ಮಹೇಂದ್ರೋ ಧನದಃ ಕಾಲಃ ಯಮಃ ಸೋಮಃ ಅಪಾಂಪತಿಃ ॥**

ಆದಿತ್ಯನೇ ಬ್ರಹ್ಮ, ವಿಷ್ಣು, ಶಿವ, ಸ್ಕಂದ, ಮಹೇಂದ್ರ, ಕುಬೇರ, ಕಾಲ. ಯಮ, ಚಂದ್ರ. ವರುಣ–ಎಲ್ಲವೂ ಆದಿತ್ಯನಿಗ ಅನೇಕ ನಾಮಗಳುಂಟು.

**ಆದಿತ್ಯಃ ಸವಿತಾ ಸೂರ್ಯಃ ಖಗ ಪೂಷಾ ಗಭಸ್ತಿಮಾನ್ ।**
**ಸುವರ್ಣಸದೃಶೋ ಭಾನುಃ ಸ್ವರ್ಣರೇತಾಃ ದಿವಾಕರಃ**

ಅದಿತಿಯ ಪುತ್ರನಾದ್ದರಿಂದ "ಆದಿತ್ಯ'' ಎಂದೂ ಜಗತ್ತನ್ನು ಸೃಷ್ಟಿಸುವವನಾದ ಕಾರಣ "ಸವಿತಾ'' ಎಂದೂ, ಸರ್ವವ್ಯಾಪಕನಾದ್ದರಿಂದ "ಸೂರ್ಯನೆಂದೂ" ಆಕಾಶದಲ್ಲಿರುವುದರಿಂದ "ಖಗ" ನೆಂದೂ, ಪೋಷಣೆ ಮಾಡುವವನಾದ್ದರಿಂದ "ಪೂಷಾ" ಎಂದೂ, ಪ್ರಕಾಶಮಾನವಾಗಿರುವುದರಿಂದ "ಗಭಸ್ತಿಮಾನ್" ಎಂದೂ ಬ್ರಹ್ಮಾಂಡದ ಉತ್ಪತ್ತಿಗ ಬೀಜರೂಪನಾದ್ದರಿಂದ "ಹಿರಣ್ಯರೇತಾಃ'' ಎಂದೂ, ಅಂಧಕಾರವನ್ನು ದೂರ ಮಾಡಿ ಪ್ರಕಾಶವನ್ನು ಉಂಟುಮಾಡುವವನಾದ್ದರಿಂದ "ದಿವಾಕರ" ನೆಂದೂ, ಸಾವಿರಾರು ಕಿರಣಗಳಿಂದ ಕೂಡಿದವನಾದ್ದರಿಂದ "ಸಹಸ್ರಾರ್ಚಿ" ಎಂದೂ, ಕಲ್ಯಾಣಕರನಾದ್ದರಿಂದ "ಶಂಭು" ಎಂದೂ. ಇಡೀ ಬ್ರಹ್ಮಾಂಡವನ್ನೇ ಜೀವಿಸುವಂತೆ ಮಾಡುವವನಾದ್ದರಿಂದ "ಮಾರ್ತಾಂಡ" ಎಂದೂ, ಉಷ್ಣವನ್ನುಂಟು ಮಾಡುವವನಾದ್ದರಿಂದ "ತಪನ" ಎಂದೂ, ಎಲ್ಲರಿಂದಲೂ ಸ್ತೋತ್ರ ಮಾಡಿಸಿಕೊಳ್ಳುವವನಾದ್ದರಿಂದ "ರವಿ" ಎಂದೂ, ಶೀತವನ್ನು ನಾಶ ಮಾಡುವವನಾದ್ದರಿಂದ "ಶಿಶಿರನಾಶನ"ನೆಂದೂ, ಆಕಾಶದ ಸ್ವಾಮಿಯಾದ್ದರಿಂದ "ವ್ಯೋಮನಾಥ" ನೆಂದೂ, ನಾಶಿಗೆ ಕಾರಣನಾದ್ದರಿಂದ "ಮೃತ್ಯು" ಎಂದೂ, ತ್ರಿಕಾಲದರ್ಶಿಯಾದ್ದರಿಂದ "ಕವಿ" ಎಂದೂ, ಜಗತ್ತನ್ನು ರಕ್ಷಿಸುವವನಾದ್ದರಿಂದ "ವಿಶ್ವಭಾವನ" ನೆಂದೂ, ಹನ್ನೆರಡು ಸ್ವರೂಪಗಳನ್ನು ಹೊಂದಿದವನಾದ್ದರಿಂದ "ದ್ವಾದಶಾತ್ಮ" ನೆಂದೂ ಸೂರ್ಯನಿಗೆ ಹಲವು ಹೆಸರುಗಳು. ಅನಂತ ನಾಮಗಳುಳ್ಳ ಆದಿತ್ಯ ದುಃಖವನ್ನೂ, ಕ್ಲೇಶವನ್ನೂ ನಾಶಮಾಡತಕ್ಕವ, ಆನಂದದಾಯಕ. ಸರ್ವಭೂತಗಳ ಅಂತರಾತ್ಮ, ದೇವತೆಗಳ ದೇವ, ಸರ್ವ ಯಜ್ಞಗಳ ಫಲ. "ಇಂಥ ಸೃಷ್ಟಿ, ಸ್ಥಿತಿ, ಲಯ ಕಾರಣನಾದ, ಸರ್ವಶಕ್ತಿವಂತನಾದ ಆದಿತ್ಯನನ್ನು ನೀನು ಸೇವಿಸು. ಆದಿತ್ಯಹೃದಯ ಸರ್ವಕ್ಲೇಶವನ್ನೂ ನಾಶ ಮಾಡುವಂಥದು ಇದನ್ನು ಜಪಿಸಿ ಆದಿತ ನ ಸರ್ವಶಕ್ತಿಯನ್ನು ನಿನ್ನ ಹೃದಯದಲ್ಲಿ ಸ್ಥಾಪಿಸಿಕೊ. ಆ ನಂತರ ರಾವಣನನ್ನು ನೀನು ಕೊಲ್ಲಲು ಸುಲಭವಾಗುವುದು" ಎಂದು ಅಗಸ್ತ್ಯರು ರಾಮನಿಗೆ ಆದಿತ್ಯ ಹೃದಯದ ಮಹತ್ವವನ್ನು ವಿವರಿಸಿದರು.

ಅಗಸ್ತ್ಯರು ಮರಳಿದನಂತರ ರಾಮ ಸಂತುಷ್ಟಚಿತ್ತನಾಗಿ ಮೂರು ಬಾರಿ ಆಚಮನ ಮಾಡಿ ಆದಿತ್ಯ ಹೃದಯವನ್ನು ಮೂರುಸಲ ಜಪಿಸಿದ. ಅತ್ಯಂತ ಪ್ರಸನ್ನ ಚಿತ್ತನಾಗಿ ರಾಮ ರಾವಣನನ್ನು

ಇದಿರಿನಲು ಸಿದ್ಧನಾದ. ರಾಮ ರಾವಣನೊಡನೆ ಯುದ್ಧ ಮಾಡಲು ಸನ್ನದ್ಧನಾಗುತ್ತಿರುವಂತೆ ದೇವತೆಗಳ ಮಧ್ಯದಲ್ಲಿದ್ದ ಆದಿತ್ಯ, "ರಾಮ, ನಿನಗೆ ಮಂಗಳವಾಗಲಿ, ತ್ವರೆಮಾಡು" ಎಂದ.

ರಾಮಾಯಣದಲ್ಲಿ ಆದಿತ್ಯಹೃದಯದ ಮಹತ್ವವನ್ನು ವರ್ಣಿಸಲಾಗಿದೆ. ರಾಮಾಯಣ ವೇದ. ರಾಮಾಯಣದ ಇಪ್ಪತ್ತನಾಲ್ಕುಸಾವಿರ ಶ್ಲೋಕಗಳು ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಗಾಯತ್ರೀಮಂತ್ರವನ್ನು ಪ್ರತಿಪಾದಿಸುತ್ತಿವೆ. ಗಾಯತ್ರೀಮಂತ್ರದ ಅಧಿದೈವವಾದ, ಸೂರ್ಯ ದೇವತಾತ್ಮಕವಾದ ಮಂತ್ರ ಆದಿತ್ಯಹೃದಯ.

"ಸೂರ್ಯ" ಎನ್ನುವಾಗ ಕಣ್ಣಿಗೆ ಕಾಣುವ "ಸೂರ್ಯ" ಮಾತ್ರ ಎಂದು ತಿಳಿಯಬಾರದು.

ವಿಭೂತಿಯೋಗದಲ್ಲಿ ಶ್ರೀಕೃಷ್ಣ "ಯದ್ಯದ್ ವಿಭೂತಿ ಮತ್ಸರ್ವಂ ಶ್ರೀಮದೂರ್ಜಿತ ಮೇವವಾ। ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಂಭವಂ" ಎಂದಿದ್ದಾನೆ.

ಎಲ್ಲೆಲ್ಲಿ ಶ್ರೇಷ್ಠತೆ, ಹಿರಿಮೆ, ಗುಣ ಕಂಡುಬರುತ್ತದೋ ಅಲ್ಲೆಲ್ಲ ಪರಮಾತ್ಮನ ಅಂಶವುಂಟು ಎಂದು ಅರಿಯಬೇಕು. ಅದೇಕ್ರಮದಲ್ಲಿ ಶ್ರೀಕೃಷ್ಣ "ಆದಿತ್ಯನಲ್ಲಿರುವ ತೇಜಸ್ಸು, ಚಂದ್ರನಲ್ಲಿರುವ ಕಾಂತಿ, ಅಗ್ನಿಯಲ್ಲಿರುವ ಪ್ರಭೆ, ಜಲದಲ್ಲಿರುವ ರಸ, ನಾನು! ಎಂದಿದ್ದಾನೆ.

ಆದ್ದರಿಂದ ಆದಿತ್ಯಹೃದಯದ ಮೂಲಕ ಸೂರ್ಯಮಂಡಲ ಮಧ್ಯವರ್ತಿಯಾದ ನಾರಾಯಣನನ್ನೇ ಉಪಾಸಿಸುವಂತೆ ಅಗಸ್ತ್ಯರು ಹೇಳಿದರು ಎಂದೇ ತಿಳಿಯಬೇಕು.

ಆದಿತ್ಯಹೃದಯದ ಕೊನೆಯಲ್ಲಿ ಮಹರ್ಷಿ ವಾಲ್ಮೀಕಿ ಫಲಶ್ರುತಿಯನ್ನು ಹೇಳಿದ್ದಾರೆ. ಆಪತ್ತು ಕಷ್ಟಗಳಿಗೆ ಸಿಕ್ಕಿಕೊಂಡಾಗ, ಭಯನಿಮಿತ್ತ ಸಮಯಗಳಲ್ಲಿ ಈ ಸ್ತೋತ್ರವನ್ನು ಹೇಳಿದರೆ ಬಂದ ದುಃಖ, ವಿಪತ್ತು ದೂರವಾಗುತ್ತದೆ. ಪ್ರತಿಯೊಬ್ಬರೂ ಕಂಠಪಾಠಮಾಡಿ ಪಾರಾಯಣ ಮಾಡಬೇಕು. ಕಷ್ಟಗಳಿಂದ ಮುಕ್ತರಾಗಿ ಪರಮಸೌಖ್ಯ ಪಡೆಯಬೇಕು.

**ಜಯಾವಹಂ ಜಪೇನ್ನಿತ್ಯಮಕ್ಷಯ್ಯಂ ಪರಮಂಶಿವಂ**

ಎನ್ನುತ್ತಾರೆ ಅಗಸ್ತ್ಯರು. ಜಯಪ್ರದವೂ, ಶಾಶ್ವತಪದವಿಪ್ರದವೂ, ಪರಮಪವಿತ್ರವೂ ಆದದ್ದು ಈ ಮಂತ್ರ.

**ಸರ್ವಮಂಗಲ ಮಾಂಗಲ್ಯಂ ಸರ್ವಪಾಪ ಪ್ರಣಾಶನಂ**

ಎಲ್ಲ ಮಂಗಳಗಳಿಗೂ ಮಂಗಳಕರವಾದದ್ದು. ಎಲ್ಲ ಪಾಪಗಳನ್ನೂ ನಾಶಗೊಳಿಸು ವಂಥದ್ದು ಎಂದಿದ್ದಾರೆ, ಎಲ್ಲರೂ ದಿನವೂ ತಪ್ಪದೆ ಪಾರಾಯಣಮಾಡಬೇಕು. ಹೆಚ್ಚು ಹೊತ್ತು ಸಹಬೇಡ ಇದಕ್ಕೆ.

**ರಶ್ಮಿಮಂತಂ ಸಮುದ್ಯಂತಂ ದೇವಾಸುರ ನಮಸ್ಕೃತಂ।**
**ಪೂಜಯಸ್ವ ವಿವಸ್ವಂತಂ ಭಾಸ್ಕರಂ ಭುವನೇಶ್ವರಂ ॥**

"ದೇವದಾನವರಿಂದಲೂ ನಮಸ್ಕೃತನಾದವನೂ, ಆತ್ಮತೇಜಸ್ಸಿನಿಂದಲೇ ಇತರ ಎಲ್ಲ ತೇಜಸ್ಸುಗಳನ್ನೂ ಭೋಗಿಸುವವನೂ ಆದ ಭಾಸ್ಕರನನ್ನು, ತ್ರಿಲೋಕಾಧಿಪತಿಯಾದ ಸೂರ್ಯ ದೇವನನ್ನು ಈ ಸ್ತೋತ್ರದಿಂದ ಸಂತೋಷಪಡಿಸು" ಎಂದು ಅಗಸ್ತ್ಯರು ಶ್ರೀರಾಮಚಂದ್ರನಿಗೆ ಹೇಳುತ್ತಾರೆ. ತನ್ಮೂಲಕ ಮಾನವಕೋಟಿಗೇ ಹೇಳಿದ್ದಾರೆ ಆ ಮಹಾನುಭಾವ. "ರಹಸ್ಯಾತಿ ರಹಸ್ಯವಾದ ಈ ಸ್ತೋತ್ರವನ್ನು ಹೇಳುತ್ತೇನೆ" ಎನ್ನುತ್ತಾರೆ.

ಸರ್ವ ದೇವಾತ್ಮಕೋಹ್ಯೇಷ ತೇಜಸ್ವೀ ರಶ್ಮಿಭಾವನಃ ।
ಏಷದೇವಾಸುರ ಗಣಾನ್ ಲೋಕಾನ್ ಪಾತಿ ಗಭಿಸ್ತಿಭಿಃ ॥

ಏಷ ಬ್ರಹ್ಮಾಚ ವಿಷ್ಣುಶ್ಚ ಶಿವಸ್ಸ್ಕಂದಃ ಪ್ರಜಾಪತಿಃ ।
ಮಹೇಂದ್ರೋಧನದಃ ಕಾಲೋ ಯಮಸ್ಸೋಮೋ ಹ್ಯಪಾಂಪತಿಃ ।
ಪಿತರೋ ವಸವಸ್ಸಾಧ್ಯಾಹ್ಯಶ್ವಿನೌ ಮರುತೋಮನು ಃ
ವಾಯುರ್ವಹ್ನಿಃ ಪ್ರಜಾಪ್ರಾಣ ಋತುಕರ್ತಾ ಪ್ರಭಾಕರಃ ॥
ಆದಿತ್ಯ ಸ್ಸವಿತಾ ಸೂರ್ಯಃ ಖಗಃಪೂಷಾ ಗಭಸ್ತಿಮಾನ್ ।
ಸುವರ್ಣಸಧೃಶೋ ಭಾನುಸ್ಸ್ವರ್ಣರೇತಾ ದಿವಾಕರಃ ॥
ಹರಿದಶ್ವಸ್ಸಹಸ್ರಾರ್ಚಿಸಪ್ತ ಸಪ್ತಿರ್ಮರೀಚಿಮಾನ್ ॥
ತಿಮಿರೋನ್ಮಥನಶ್ಶಂಭು ಸ್ತ್ವಷ್ಟಾ ಮಾರ್ತಾಂಡ ಅಂಶುಮಾನ್ ॥
ಹಿರಣ್ಯಗರ್ಭಶ್ಶಿಶಿರಸ್ತಪನೋ ಭಾಸ್ಕರೋರವಿಃ ।
ಅಗ್ನಿಗರ್ಭೋದಿತೇಃಪುತ್ರಶ್ಶಂಖಃ ಶಿಶಿರನಾಶನಃ ॥
ವ್ಯೋಮನಾಥಸ್ತಮೋಭೇದಿ ಋಗ್ಯಜುಸ್ಸಾಮ ಪಾರಗಃ ।
ಘನವೃಷ್ಟಿರಪಾಂ ಮಿತ್ರೋ ವಿಂಧ್ಯವೀಥೀ ಪ್ಲವಂಗಮಃ ॥
ಆತಪೀ ಮಂಡಲೀ ಮೃತ್ಯುಃ ಪಿಂಗಲಃ ಸರ್ವತಾಪನಃ ।
ಕವಿರ್ವಿಶ್ವೋ ಮಹಾತೇಜಾ ರಕ್ತಃ ಸರ್ವಭವೋದ್ಭವಃ ॥
ನಕ್ಷತ್ರಗ್ರಹತಾರಾಣಾಮಧಿಪೊ ವಿಶ್ವಭಾವನಃ ।
ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನಮೋಸ್ತುತೇ ॥
ನಮಃ ಪೂರ್ವಾಯ ಗಿರಯೇ ಪಶ್ಚಿಮೇ ಗಿರಯೇ ನಮಃ ।
ಜ್ಯೋತಿರ್ಗಣಾನಾಂ ಪತಯೇ ದಿನಾಧಿಪತಯೇ ನಮಃ ॥
ಜಯಾಯ ಜಯಭದ್ರಾಯ ಹರ್ಯಶ್ವಾಯ ನಮೋನಮಃ ।
ನಮೋನಮಸ್ಸಹಸ್ರಾಂಶೋ ಆದಿತ್ಯಾಯ ನಮೋನಮಃ ॥
ನಮ ಉಗ್ರಾಯ ವೀರಾಯ ಸಾರಾಂಗಾಯ ನಮೋನಮಃ ।
ನಮಃ ಪದ್ಮಪ್ರಬೋಧಾಯ ಮಾರ್ತಾಂಡಾಯ ನಮೋನಮಃ ॥
ಬ್ರಹ್ಮೇಶಾನಾಚ್ಯುತೇಶಾಯ ಸೂರ್ಯಾಯಾದಿತ್ಯವರ್ಚಸೇ ।
ಭಾಸ್ವತೇ ಸರ್ವಭಕ್ಷಾಯ ರೌದ್ರಾಯ ವಪುಷೇನಮಃ ॥
ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾ ಮಿತಾತ್ಮನೇ ।
ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂಪತಯೇ ನಮಃ ॥
ತಪ್ತಚಾಮೀಕರಾಭಾಯ ವಹ್ನಯೇ ವಿಶ್ವಕರ್ಮಣೇ ।
ನಮಸ್ತಮೋಭಿನಿಘ್ನಾಯ ರುಚಯೇ ಲೋಕಸಾಕ್ಷಿಣೇ ॥
ನಾಶಯತ್ಯೇಷ ವೈಭೂತಂ ತದೇವ ಸೃಜತಿಪ್ರಭುಃ ।
ಪಾಯತ್ಯೇಷ ತಪತ್ಯೇಷ ವರ್ಷತ್ಯೇಷ ಗಭಿಸ್ತಿಭಿಃ ॥

ಏಷಸುಪ್ತೇಷು ಜಾಗರ್ತಿ ಭೂತೇಷು ಪರಿನಿಷ್ಠಿತಃ ।
ಏಷಚೈವಾಗ್ನಿಹೋತ್ರಂಚ ಫಲಂ ಚೈವಾಗ್ನಿಹೋತ್ರಿಣಾಂ ॥
ವೇದಾಶ್ಚ ಕ್ರತವಶ್ಚೈವ ಕ್ರತೂನಾಂ ಫಲಮೇವಚ ।
ಯಾನಿಕೃತ್ಯಾನಿ ಲೋಕೇಷು ಸರ್ವ ಏಷ ರವಿಃ ಪ್ರಭು ॥

ಈ ಹತ್ತೊಂಭತ್ತು ಶ್ಲೋಕಗಳಲ್ಲಿ ಅಡಕವಾಗಿರುವ ದಿವ್ಯವಾದ ಆದಿತ್ಯ ಹೃದಯವನ್ನು ಶ್ರೀರಾಮನಿಗೆ ಹೇಳಿ ಇದನ್ನು ಹೇಳಿದರೆ ಬರುವ ಫಲವನ್ನೂ ತಿಳಿಸುತ್ತಾರೆ.

ಏನಮಾಪತ್ಸು ಕೃಚ್ಛ್ರೇಷು ಕಾಂತಾರೇಷು ಭಯೇಷುಚ ।
ಕೀರ್ತಿಯರ್ನ ಪುರುಷಃ ಕಶ್ಚಿನ್ನಾವಸೀದತಿ ರಾಘವ ! ॥
ಪೂಜಯಸ್ವೈನಮೇಕಾಗ್ರೋ ದೇವದೇವಂ ಜಗತ್ಪತಿಂ ।
ಏತತ್ತ್ರಿಗುಣಿತಂ ಜಪ್ತ್ವಾ ಯುದ್ಧೇಷ್ಯು ವಿಜಯಿಷ್ಯಸಿ ॥
ಅಸ್ಮಿನ್ ಕ್ಷಣೇ ಮಹಾಬಾಹೋ ! ರಾವಣಂ ತ್ವಂ ಜಯಿಷ್ಯಸಿ ।

"ಮಹಾಬಾಹುವಾದ ರಾಮಚಂದ್ರ ! (ನಾ ನಿರೂಪಿಸಿದಂತೆ ಈ ಸ್ತೋತ್ರವನ್ನು ಜಪ ಮಾಡಿ ಸೂರ್ಯದೇವನನ್ನು ಪೂಜಿಸಿದೆಯಾದರೆ) ಈ ಕ್ಷಣದಲ್ಲಿಯೇ ನೀನು ರಾವಣನನ್ನು ಜಯಿಸುತ್ತೀಯಾ" ಎಂದು ಹೇಳುತ್ತಾರೆ.

ಹೀಗೆ ಹೇಳಿ ಅಗಸ್ತ್ಯಮಹರ್ಷಿಗಳು **ಜಗಾಮ ಸ ಯಥಾಗತಂ**--ತಾವು ಬಂದ ಮಾರ್ಗದಲ್ಲಿ ಹಿಂತಿರುಗಿದರು.

ಆದಿತ್ಯಹೃದಯವನ್ನು ಕೇಳಿದಕೂಡಲೇ ರಾಮನ ಮನಸ್ಸಿನಲ್ಲಿದ್ದ ಚಿಂತೆ–ಶಂಕೆ ನೀಗಿತು. ಮನಸ್ಸು ಹರ್ಷಗೊಂಡಿತು. ಸ್ಥಿರಮನಸ್ಸಿನಿಂದ ಮೂರಾವರ್ತಿ ಆಚಮನವಮಾಡಿ, ಶುಚಿರ್ಭೂತನಾಗಿ ಮೂರಾವರ್ತಿ ಆದಿತ್ಯಹೃದಯ ಸ್ತೋತ್ರವನ್ನು ಜಪಿಸಿದ.

**ತ್ರಿರಾಚಮ್ಯ ಶುಚಿರ್ಭೂತ್ವಾ ಧನುರಾದಾಯವೀರ್ಯವಾನ್**

ಜಪಿಸಿದನಂತರ ಮಹಾಪರಾಕ್ರಮವನ್ನು ತಂದುಕೊಂಡು ಸಂತೋಷದಿಂದ ಕೋದಂಡವನ್ನು ಕೈಗೆ ತೆಗೆದುಕೊಂಡ.

**ರಾವಣಂ ಪ್ರೇಕ್ಷ್ಯ ಹೃಷ್ಟಾತ್ಮಾ ಯುದ್ಧಾಯ ಸಮುಪಾಗತಂ।**
**ಸರ್ವಯತ್ನೇನ ಮಹತಾ ವಧೇ ತಸ್ಯ ಧೃತೋ – ಭವತ್ ॥**

ಯುದ್ಧ ಸನ್ನದ್ಧನಾಗಿ ಬರುತ್ತಿರುವ ರಾವಣನನ್ನು ಕಂಡು ಶ್ರೀರಾಮಚಂದ್ರನು ಯಾವ ಪ್ರಕಾರದಿಂದಾದರೂ, ಸರ್ವಪ್ರಯತ್ನದಿಂದ-ಆತನನ್ನು ಸಂಹರಿಸಲು ನಿಶ್ಚಯಿಸಿ, ಯುದ್ಧಮಾಡಲು ಪರಮೋತ್ಸಾಹದಿಂದ ಬಳಿ ಸಾರಿದ !

ತನ್ನನ್ನು ಸ್ತೋತ್ರಮಾಡಿದ ಇನಕುಲೋದ್ಭವನಾದ ರಾಘವನನ್ನು ಕಂಡ ಜಗಚ್ಚಕ್ಷುವಾದ ದಿವಾಕರ ಪರಮ ಸುಪ್ರೀತನಾಗಿ

**ನಿಶಿಚರಪತಿ ಸಂಕ್ಷಯಂ ವಿದಿತ್ವಾ ।**
**ಸುರಗಣಮಧ್ಯಗತೋ ವಚಸ್ತ್ವರೇತಿ ॥**

"ರಾಮ ! ರಾಕ್ಷಸರಾಜನಾದ ರಾವಣನ ನಾಶಕಾಲ ಸಮೀಪಿಸಿದೆ. ತ್ವರೆಮಾಡು" ಎನ್ನುತ್ತಾನೆ.

## ರಾಮ ರಾವಣರ ಯುದ್ಧ

ರಾವಣನಿಂದ ಆಜ್ಞಪ್ತನಾದ ಸಾರಥಿ ಪಿಶಾಚದಂತೆ ಪ್ರಕಾಶಿಸುತ್ತಿದ್ದ ರಾವಣನ ರಥವನ್ನು ರಣರಂಗದಲ್ಲಿ ರಾಮನಿಗಭಿಮುಖವಾಗಿ ಓಡಿಸಿದ. ಕಪ್ಪಗಿನ ಕುದುರೆಗಳನ್ನು ಕಟ್ಟಿದ್ದ ಆ ದಿವ್ಯ ರಥದಲ್ಲಿ ಕುಳಿತು ಮೇಘದಂತೆ ಘರ್ಜಿಸುತ್ತಾ ರಾವಣ ಬರುತ್ತಿದ್ದುದನ್ನು ರಾಮ ನೋಡಿದ. ಮಾತಲಿಯನ್ನು ಕುರಿತು "ಮಾತಲಿ ನೋಡು ! ಕಾಲಮೇಘದಂತೆ ರಾವಣ ಬರುತ್ತಿದ್ದಾನೆ. ಅವನು ಬರುತ್ತಿರುವ ವಿಧಾನವನ್ನು ನೋಡಿದರೆ ಇನ್ನು ಅವನು ಹಿಂದಿರುಗಲಾರ ಎನಿಸುತ್ತದೆ. ಮಾತಲಿ ! ನೀನು ರಥವನ್ನು ನಾವಧಾನವಾಗಿ ನಡೆಸು. ನೀನು ಇಂದ್ರನಿಗೆ ಸಾರಥ್ಯವನ್ನು ಮಾಡಿದೀಯಾ, ನಿನಗೆ ಎಲ್ಲ ತಿಳಿದಿದೆ. ಆದರೆ, ಈಗ ನಾನು ಏಕಾಗ್ರತೆಯಿಂದ ಹೋರಾಡಲು ನಿಶ್ಚಯಿಸಿರುವುದ ರಿಂದ ನಿನ್ನನ್ನು ಎಚ್ಚರಿಸಿದೆ" ಎಂದ.

ರಾಮನ ಮಧುರ ವಚನಗಳಿಂದ ಪ್ರೀತನಾದ ಮಾತಲಿ ರಥವನ್ನು ರಾವಣನ ರಥಕ್ಕೆ ಪ್ರದ ಕ್ಷಿಣಾಕಾರವಾಗಿ ಓಡಿಸಿದ. ರಥವನ್ನು ಓಡಿಸಿದಾಗ ಧೂಳು ಕವಿಯಿತು. ಇದನ್ನು ಕಂಡು ರಾವ ಣನೂ ಭ್ರಾಂತನಾದ. ಸಮೀಪದಲ್ಲಿ ನಿಂತ ರಾಮನ ಮೇಲೆ ಬಾಣಗಳ ಮಳೆಯನ್ನು ಸುರಿಸತೊಡ ಗಿದ. ರಾಮ ರಾವಣರು ಇಬ್ಬರೂ ಎರಡು ಮದಿಸಿದ ಗಜಗಳಂತೆ ಹೋರಾಡತೊಡಗಿದರು. ಇವ ರಿಬ್ಬರ ಯುದ್ಧವನ್ನು ನೋಡಲು ಆಕಾಶದಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು ನೆರೆದರು. ಆ ಸಮಯದಲ್ಲಿ ರಾವಣನ ಅಂತ್ಯವನ್ನು ಸೂಚಿಸುವ ಅಪಶಕುನಗಳೂ, ರಾಮನ ವಿಜ ಯವನ್ನು ಸೂಚಿಸುವ ಶುಭಶಕುನಗಳೂ ತೋರಿದವು. ರಾವಣನ ರಥದ ಮೇಲೆ ಮೇಘಗಳು ರಕ್ತ ವನ್ನು ವರ್ಷಿಸತೊಡಗಿದವು. ಹೋದ ಕಡೆಯಲ್ಲೆಲ್ಲಾ ಭೂಮಿ ಕುಸಿಯುತ್ತಿತ್ತು. ಹದ್ದುಗಳು ಅವನ ರಥವನ್ನು ಸುತ್ತಿ ಭಯಂಕರವಾದ ಶಬ್ದವನ್ನು ಮಾಡುತ್ತಿದ್ದವು. ದಿಕ್ಕುಗಳೆಲ್ಲ ಅಂಧಕಾರ ಮಯವಾದವು. ವಾಯು ಆ ರಾಕ್ಷಸ ರಾಜನಿಗೆ ಪ್ರತಿಕೂಲವಾಗಿ ಬೀಸಿ ಧೂಳನ್ನೆರಚುತ್ತಿತ್ತು. ರಥಕ್ಕೆ ಕಟ್ಟಿದ್ದ ಕುದುರೆಗಳು ಕಣ್ಣೀರು ಸುರಿಸುತ್ತಿದ್ದವು. ಒಂದೇ ಕಾಲದಲ್ಲಿ ಪ್ರಕಟವಾದ ಈ ಭಯಂಕರ ಉತ್ಪಾತಗಳು ರಾವಣನ ವಿನಾಶವನ್ನು ಸೂಚಿಸುತ್ತಿದ್ದವು.

ಇತ್ತ ರಾಮನಿಗೋ, ಶುಭವಾದ, ಮಂಗಳಕರವಾದ ಶಕುನಗಳಾದವು. ಶಕುನ ಶಾಸ್ತ್ರವನ್ನ ರಿತ ಶ್ರೀ ರಾಮ ತನಗಾಗುತ್ತಿದ್ದ ಶುಭಶಕುನಗಳನ್ನು ಕಂಡು ಪ್ರಸನ್ನನಾಗಿ ಯುದ್ಧರಂಗದಲ್ಲಿ ಅಮಿ ತವಾದ ಪರಾಕ್ರಮವನ್ನು ಪ್ರದರ್ಶಿಸತೊಡಗಿದ. ರಾಮ ರಾವಣರ ಯುದ್ಧವು ಅತ್ಯದ್ಭುತವಾ ಗಿತ್ತು. ಅದನ್ನು ನೋಡುತ್ತಾ ಎಲ್ಲ ವಾನರರೂ ರಾಕ್ಷಸರೂ ಸ್ತಬ್ಧರಾಗಿ ನಿಂತರು. ಪರಸ್ಪರ ಯುದ್ಧ ಮಾಡುವುದಕ್ಕಾಗಿ ಆಯುಧಗಳನ್ನೂ, ಅಸ್ತ್ರ, ಶಸ್ತ್ರಗಳನ್ನೂ ಹಿಡಿದ ರಾಕ್ಷಸರೂ, ಬಂಡೆ ವೃಕ್ಷಗಳನ್ನು ಹಿಡಿದ ವಾನರರೂ ಹಾಗೆ ಹಾಗೆಯೇ ಹಿಡಿದಂತೆಯೇ ನಿಂತರು. ವಿಸ್ಮಿತರಾಗಿ ಯುದ್ಧ ವನ್ನು ನೋಡುತ್ತ ಚಿತ್ರದಲ್ಲಿ ಬರೆದ ಪ್ರತಿಮೆಗಳಂತೆ ಅಲುಗದೆ ನಿಂತಿದ್ದರು.

ರಾಕ್ಷಸರೆಲ್ಲ ರಾವಣನನ್ನು ನೋಡುತ್ತಿದ್ದರು. ವಾನರರೆಲ್ಲ ರಘುಕುಲ ವೀರನಾದ ರಾಮ ನನ್ನು ನೋಡುತ್ತಿದ್ದರು. ರಾಮ ರಾವಣರ ಯುದ್ಧದಂಥ ಯುದ್ಧ ಹಿಂದೆ ನಡೆದಿರಲಿಲ್ಲ ಮುಂದೆ ನಡೆಯುವುದಿಲ್ಲ ಎಂಬಂತಿತ್ತು.

ಎಲ್ಲ ರೀತಿಯ ಯುದ್ಧಗಳಂತೆ ಇರಲಿಲ್ಲ ಆ ಯುದ್ಧ. ಯುದ್ಧಗಳಲ್ಲಿ ಸಾಮಾನ್ಯವಾಗಿ ಎರಡು ಪಕ್ಷದವರೂ ಪರಸ್ಪರ ಜಯಾಭಿಲಾಷಿಗಳಾಗಿ ಹೋರಾಡುತ್ತಿದ್ದರೆ ರಾಮ, ರಾವಣರ ಯುದ್ಧದ ಪರಿಯೇ ವಿಚಿತ್ರವಾಗಿತ್ತು.

**ಜೇತವ್ಯಮಿತಿ ಕಾಕುತ್ಸ್ಥಃ ಮರ್ತವ್ಯಮಿತಿ ರಾವಣಃ ।**

ಎಂದಿದಾರೆ ವಾಲ್ಮೀಕಿ.

ರಾಮ ''ಜಯಿಸಬೇಕು'' ಎಂದು ಹೋರಾಡಿದ.

ರಾವಣ ''ಸಾಯಬೇಕು'' ಎಂದು ಹೋರಾಡಿದ. ಹೀಗೆ ಎಲ್ಲೂ ಎಂದಿಗೂ ನಡೆದಿರಲಿಲ್ಲ.

''ಜೇತವ್ಯಮಿತಿ ಕಾಕುತ್ಸ್ಥಃ'' ಎಂಬುದಕ್ಕೆ ವ್ಯಾಖ್ಯಾನ ಮಾಡುವಾಗ ರಾಮನು ರಾವಣನನ್ನು "ಜಯಿಸಬೇಕು" ಎಂದು ಕಾದಿದ, "ಕೊಲ್ಲಬೇಕು" ಎಂದಲ್ಲ ಎನ್ನುತ್ತಾರೆ ಜ್ಞಾನಿಗಳು. "ರಿಪೂಣಾಮಪಿವತ್ಸಲಃ" ಎನಿಸಿದ ರಾಮ ರಾವಣನನ್ನು ಜಯಿಸಿದ ಬಳಿಕವಾದರೂ ಅವನನ್ನು ತನಗೆ ಶರಣಾಗುವಂತೆ ಮಾಡಿಕೊಳ್ಳಬೇಕು ಎಂದಿದ್ದನಂತೆ. ಭಾರ್ಯಾಪಹಾರಿಯಾದ ಶತ್ರುವನ್ನೂ ಮಿತ್ರನನ್ನಾಗಿ ಮಾಡಿಕೊಳ್ಳಬೇಕು ಎಂದು ರಾಮ ಅಭಿಪ್ರಾಯಪಟ್ಟನಂತೆ. ಆದರೆ ರಾವಣನೋ ! ಏನಾದರೂ ಸರಿ ! ಸಾಯಲೇಬೇಕು ! ! ರಾಮನ ಕೈಯಲ್ಲಿ ಮರಣವನ್ನಪ್ಪಲೇ ಬೇಕು ! ಎಂದು ನಿಶ್ಚಯಿಸಿದನಂತೆ.

ರಾವಣನೇ ಒಪ್ಪಿಕೊಳ್ಳುವಂತೆ ರಾಮನು ಮಹಾ ವಿಕ್ರಮ ಸಂಪನ್ನ. ರಾವಣನನ್ನು ಕೊಲ್ಲಲು ಅವನು ಅಷ್ಟೊಂದು ಕಾಲವನ್ನು ತೆಗೆದುಕೊಳ್ಳಬೇಕಾಗಿರಲಿಲ್ಲ. ಮಹಾ ಬಲಿಷ್ಠ ಎಂದು ಮೆರೆದ ರಾವಣನನ್ನೇ ಕಟ್ಟಿಹಾಕಿದ ವಾಲಿಯನ್ನೇ ರಾಮ ಒಂದೇ ಒಂದು ಬಾಣದಿಂದ ನಿಗ್ರಹಿಸಿದ. ಅಂದ ಮೇಲೆ ರಾವಣನನ್ನು ಕೊಲ್ಲುವುದು ಅಷ್ಟೊಂದು ಕಷ್ಟವಿರಲಿಲ್ಲ. ಆದರ ಅಷ್ಟು ತಡಮಾಡಿದ ಏಕೆ? ಏಕೆಂದರೆ, ವಿಭೀಷಣ ಶರಣು ಬಂದಂತೆ ರಾವಣನೂ ತನ್ನನ್ನು ಶರಣು ಹೋಗಲಿ, ಅಭಯ ನೀಡೋಣ, ಆಶ್ರಯ ಕೊಡೋಣ ಎಂದು ಕ್ರಮ ಕ್ರಮವಾಗಿ ಪರಾಕ್ರಮವನ್ನು ತೋರಿಸಿದ. "ಇನ್ನು ಸಾಧ್ಯವಿಲ್ಲ; ರಾವಣ ಸಾಯಲು ನಿಶ್ಚಯಿಸಿದ್ದಾನೆ" ಎಂದು ತೀರ್ಮಾನವಾದ ಮೇಲೆಯೇ ಅವನನ್ನು ಸಂಹರಿಸಿದ.

ರಾಮ ರಾವಣರ ಯುದ್ಧ ಭಯಂಕರವಾಗಿ ನಡೆಯಿತು. ಇಬ್ಬರೂ ಬಾಣ, ಅಸ್ತ್ರ, ಮುಸಲ ಖಡ್ಗ ಮುಂತಾದುವುಗಳಿಂದ ಪರಸ್ಪರ ಘಾತಿಸುತ್ತಿದ್ದರು. ರಾವಣ ಹತ್ತು ಬಾಣಗಳನ್ನು ರಾಮನ ಧ್ವಜಕ್ಕೆ ಲಕ್ಷ್ಯವಿಟ್ಟು ಹೊಡೆದ. ಆದರೆ, ಧ್ವಜದ ಸಮೀಪಕ್ಕೆ ಬರುವ ಮೊದಲೇ ರಾಮ ಅದನ್ನು ಕತ್ತರಿಸಿದ. ತಾನೂ ರಾವಣನ ಧ್ವಜಕ್ಕೆ ಗುರಿಯಿಟ್ಟು ಬಾಣಗಳನ್ನು ಹೊಡೆದ. ರಾವಣನ ಧ್ವಜ ಮುರಿದು ಬಿತ್ತು. ಧ್ವಜ ಮುರಿದಿದ್ದರಿಂದ ಕುಪಿತನಾದ ರಾವಣ ರಾಮನ ರಥಕ್ಕೆ ಕಟ್ಟಿದ್ದ ಕುದುರೆಗಳಿಗೆ ಪ್ರಹರಿಸಿದ. ಆದರೆ ಆ ದಿವ್ಯಾಶ್ವಗಳಿಗೆ ರಾವಣನ ಬಾಣಗಳಿಂದ ಲೇಶವೂ ತೊಂದರೆಯಾಗಲಿಲ್ಲ.

ಮಾತಲಿಯ ಮೇಲೆಯೂ ರಾವಣ ಬಾಣಗಳನ್ನು ಹೊಡೆದ. ಚತುರತೆಯಿಂದ ಮಾತಲಿ ರಥವನ್ನು ವೇಗವಾಗಿ ತಿರುಗಿಸಿ ಆ ಹೊಡೆತವನ್ನು ತಪ್ಪಿಸಿಕೊಂಡ.

ಇಬ್ಬರ ರಥಗಳೂ ವಿವಿಧ ಗತಿಗಳಲ್ಲಿ ಸಂಚರಿಸುತ್ತಿದ್ದವು. ಕೆಲವು ವೇಳೆ ದ್ರುತಗತಿ, ಮತ್ತೆ ಕೆಲವು ವೇಳೆ ಮಂದಗತಿ. ಇನ್ನು ಕೆಲವು ಸಮಯದಲ್ಲಿ ಸರ್ಪಗತಿ-ಹೀಗೆ ವಿವಿಧ ಗತಿಗಳಲ್ಲಿ ರಥವು ಚಲಿಸುತ್ತಿತ್ತು. ರಾವಣನ ರಥ ರಾಮನ ರಥವನ್ನು ತಾಗುವಂತೆ ಬಂದಿತು. ಅದನ್ನು ನೋಡಿದ ರಾಮ ನಾಲ್ಕು ಬಾಣಗಳಿಂದ ರಾವಣನ ಕುದುರೆಗಳನ್ನು ಘಾತಿಸಿ ರಥವನ್ನು ಹಿಂದೆ ಸರಿಯುವಂತೆ ಮಾಡಿದ. ರಥ ಹಿಂದೆ ಸರಿದದ್ದರಿಂದ ಕುಪಿತನಾದ ರಾವಣ ರಾಮನ ರಥ, ಕುದುರೆ, ಸಾರಥಿ ಎಲ್ಲಕ್ಕೂ ಗುರಿಯಿಟ್ಟು ಬಾಣಗಳ ಮಳೆಯನ್ನೇ ಸುರಿಸಿದ ಮಾತಲಿಗೆ ಪೆಟ್ಟಾದುದನ್ನು ಕಂಡ ರಾಮ ಕುಪಿತನಾದ. ಒಂದು ತೀಕ್ಷ್ಣವಾದ ಬಾಣವನ್ನು ಹೂಡಿ ರಾವಣನ ಶಿರಕ್ಕೆ ಗುರಿಯಿಟ್ಟು ಹೊಡೆದ, ರಾವಣನ ತಲೆಗೆ ಪೆಟ್ಟಾಗಿ ರಕ್ತ ಹರಿಯ ತೊಡಗಿತು. ಪ್ರವಾಹದಂತೆ ಪ್ರವಹಿಸಿತು. ಆಗ ರಾವಣ ರಾಮ ಇಬ್ಬರೂ ಪುಷ್ಪಿಸಿದ ಅಶೋಕ ವೃಕ್ಷಗಳಂತೆ ಶೋಭಿಸುತ್ತಿದ್ದರು.

ಆಕಾಶದಲ್ಲಿ ನೆರೆದಿದ್ದ ದೇವತೆಗಳೆಲ್ಲ "ರಾಮನಿಗೆ ಜಯವಾಗಲಿ ! ಮಂಗಳವಾಗಲಿ" ಎಂದು ಘೋಷಿಸುತ್ತಿದ್ದರು. ರೋಮಾಂಚಕಾರಿಯಾಗಿ ನಡೆಯುತ್ತಿತ್ತು ಯುದ್ಧ, ಆಕಾಶದಲ್ಲಿ ನೆರೆದಿದ್ದ ಅನಿಮಿಷರು, ಗಂಧರ್ವರು, ಸಿದ್ಧರು, ಚಾರಣರು ಕಾತರರಾಗಿ ನೋಡುತ್ತಿದ್ದರು. ಯುದ್ಧವು ಹೇಗಿದ್ದಿತು ?

**ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ**
**ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥**

ಎಂಬುದಾಗಿ ಅಪ್ಸರೆಯರು. ಗಂಧರ್ವರ ಮಾತಾಡಿಕೊಳ್ಳತೊಡಗಿದರು. ರಾಮರಾವಣ ಯುದ್ಧಕ್ಕೆ ಹೋಲಿಕೆಯೇ ಸಾಧ್ಯವಿಲ್ಲ. ಆಕಾಶಕ್ಕೆ ಆಕಾಶವೇ ಉಪಮಾನ. ಸಮುದ್ರಕ್ಕೆ ಸಮುದ್ರವೇ ಉಪಮಾನ. ಹಾಗೆಯೇ ರಾಮ ರಾವಣ ಯುದ್ಧಕ್ಕೆ ರಾಮರಾವಣರ ಯುದ್ಧವೇ ಸಾಟಿಯಾಗಿತ್ತು. ಅದಕ್ಕೆ ಸರಿದೂಗುವಂಥ ಹೋಲಿಕೆ ಕೊಡಲು ಸಾಧ್ಯವೇ ಇಲ್ಲದಂತೆ ಇತ್ತು ಆ ಯುದ್ಧ.

ಅದ್ಭುತವಾದ ಆ ಸಮರದಲ್ಲಿ ರಾಮ ವಿಷಯುಕ್ತವಾದ ಒಂದು ತೀಕ್ಷ್ಣವಾದ ಬಾಣದಿಂದ ರಾವಣನ ಒಂದು ಮಸ್ತಕವನ್ನು ಕತ್ತರಿಸಿದ. ಕತ್ತರಿಸಿದ ಮಸ್ತಕ ಕೆಳಗೆ ಬೀಳುವಷ್ಟರಲ್ಲಿ ಅದೇ ಸ್ಥಳದಲ್ಲಿ ಹೊಸತಲೆ ಕಾಣಿಸಿಕೊಂಡಿತು. ಕಾಣಿಸಿಕೊಂಡ ಶಿರವೂ ತದ್ವತ್ತಾಗಿ ಮೊದಲಿನ ಶಿರದಂತೆಯೇ ಇತ್ತು. ಮೊಳೆತ ಆ ಹೊಸತಲೆಯನ್ನೂ ರಾಮ ತನ್ನ ಅಮೋಘವಾದ ಬಾಣಗಳಿಂದ ಪುನಃ ಕತ್ತರಿಸಿದ, ಪುನಃ ಬೇರೊಂದು ತಲೆ ಮೊಳೆಯಿತು. ಹೀಗೆ ನೂರು ಬಾರಿ ರಾಮನು ರಾವಣನ ತಲೆಯನ್ನು ಕತ್ತರಿಸಿದ. ಅಷ್ಟು ಸಲವೂ ಅಂಥದೇ ಹೊಸತಲೆ ಮತ್ತೆ ಮೊಳೆಯುತ್ತಿತ್ತು.

ಆಗ ಶ್ರೀ ರಾಮ ತನ್ನಲ್ಲೇ ಯೋಚಿಸಿದ. "ಇದೇನು ! ನನ್ನ ಬಾಣಗಳು ಅಮೋಘವಾದವು ಅಂದಮೇಲೆ ಪ್ರತಿ ಸಲವೂ ರಾವಣನ ತಲೆ ಹೊಸದಾಗಿ ಮೊಳೆಯಲು ಕಾರಣವೇನು ? ಇದೇ ಬಾಣದಿಂದ ಮಾರೀಚನನ್ನು, ಸುಬಾಹುವನ್ನು, ಖರನನ್ನು, ದೂಷಣನನ್ನು, ವಿರಾಧನನ್ನು ಕೊಂದೆ. ಹಾಗೆಯೇ ನನ್ನ ಒಂದು ಬಾಣಕ್ಕೆ ವಾಲಿ ತೀರಿದ. ಹಾಗಿದ್ದರೂ ರಾವಣ ಇನ್ನೂ ಸಾಯಲಿಲ್ಲವಲ್ಲ. ಇದಕ್ಕೇನು ಕಾರಣವಿರಬಹುದು."

ರಾವಣ ಮೊದಲಿನಂತೆಯೇ ರಾಮನೊಡನೆ ಯುದ್ಧಮಾಡತೊಡಗಿದ. ಪುನಃ ಯುದ್ಧ ಭಯಂಕರವಾಗಿ ನಡೆಯತೊಡಗಿತು. ಒಂದು ಕ್ಷಣವೂ ನಿಲ್ಲಿಸದೆ ರಾತ್ರಿ ಹಗಲೆನ್ನದೆ ಒಂದೇ ಸಮನೆ ಭರದಿಂದ ಸಾಗುತ್ತಿತ್ತು.

ರಾಮನು ರಾವಣನ ತಲೆಗಳನ್ನು ಕತ್ತರಿಸಿ ಅದು ಪುನಃ ಮೊಳೆತಾಗ ಚಿಂತಿಸಿದುದು ತನ್ನ ಮಾನುಷ್ಯತ್ವದ ನೆಲೆಯನ್ನು ಪ್ರಕಾಶಪಡಿಸುವುದಕ್ಕಾಗಿ ಎಂದು ತಿಳಿಯಬೇಕು.

**ಅಜಾನನ್ನಿವ ಕಿಂ ವೀರ ತ್ವಮೇನ ಮನುವರ್ತಸೇ**

ಎಂದು ಮಾತಲಿ ರಾಮನಿಗೆ ಹೇಳುತ್ತಾನೆ.

"ರಾಮ, ನೀನು ತಿಳಿದವನಾಗಿದ್ದರೂ ತಿಳಿಯದವನಂತೆ ಏಕೆ ತೋರಿಸಿಕೊಳ್ಳುವೆ. ? ಹೀಗೆ ಏಕೆ ವರ್ತಿಸುವೆ ?

**ವಿಸೃಜಾಸ್ಮೈ ವಧಾಯತ್ವಮಸ್ತ್ರಂ ಪೈತಾಮಹಂ ಪ್ರಭೋ ।**
**ವಿನಾಶಕಾಲ ಕಥಿತೋ ಯಸ್ಸುರೈಸ್ಸೋಽದ್ಯವರ್ತತೇ ॥**

ರಾವಣನು ನಾಮಾನ್ಯ ಅಸ್ತ್ರಗಳಿಂದ ನಾಶವಾಗುವವನಲ್ಲ. ಬ್ರಹ್ಮಾಸ್ತ್ರವನ್ನು ಪ್ರಯೋಗಿಸು. ಅದರಿಂದಲೇ ಅವನಿಗೆ ಮರಣ" ಎಂದು ಜ್ಞಾಪಿಸಿದ. ಮಾತಲಿಯ ಮಾತಿನಂತೆ ಮಹಾ ಪ್ರಭಾವವುಳ್ಳ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿದ ರಾಮ. ಆ ದಿವ್ಯವಾದ ಬ್ರಹ್ಮಾಸ್ತ್ರ ವೇಗದಲ್ಲಿ ವಾಯುವನ್ನೂ ಅಲಗಿನ ಪ್ರದೇಶದಲ್ಲಿ ಅಗ್ನಿ ಮತ್ತು ಸೂರ್ಯರನ್ನೂ, ಕಾಂಡದಲ್ಲಿ ಆಕಾಶವನ್ನೂ, ಭಾರದಲ್ಲಿ, ಘನತ್ವದಲ್ಲಿ ಮೇರು ಪರ್ವತ ಹಾಗೂ ಮಂದರಾಚಲವನ್ನೂ ಹೋಲುತ್ತಿತ್ತು. ದಿವ್ಯ ತೇಜಸ್ಸನ್ನು ಕಕ್ಕುತ್ತಿತ್ತು. ಅದರಿಂದ ಜ್ಯೋತಿಯು ಸೂರ್ಯನಂತೆ ದೇದೀಪ್ಯಮಾನವಾಗಿ ಹೊರಬರುತ್ತಿತ್ತು. ಪ್ರಳಯಕಾಲದ ಜಾಜ್ವಲ್ಯಮಾನವಾದ ಅಗ್ನಿಯಂತೆ ಮಹಾ ಪ್ರಕಾಶದಿಂದ ಬೆಳಗುತ್ತಿದ್ದ ಆ ಬ್ರಹ್ಮಾಸ್ತ್ರ, ವಿಷಯುಕ್ತವಾದ ಸರ್ಪವು ಕಾರ್ಕೋಟಕ ವಿಷವನ್ನು ಕಕ್ಕುವಂತೆ ಜ್ವಾಲೆಯನ್ನು ಕಕ್ಕುತ್ತಾ ಹೊರಟಿತು.

ಸರ್ವಭೂತಗಳನ್ನು ನಾಶಮಾಡುವಷ್ಟು ಶಕ್ತಿಯುತವಾಗಿತ್ತು ಆ ದಿವ್ಯಾಸ್ತ್ರ. ಆ ಬ್ರಹ್ಮಾಸ್ತ್ರ ದೇವತೆಗಳಿಗೆ ಆನಂದಾಯಕವಾಗಿಯೂ. ಅಸುರರಿಗೆ ಸಂತಾಪದಾಯಕವಾಗಿಯೂ ಇತ್ತು. ಇಕ್ಷ್ವಾಕುವಂಶದ ಕೀರ್ತಿಯನ್ನು ವೃದ್ಧಿಪಡಿಸುವ ಅದು ಶೋಭಾಯಮಾನವಾಗಿತ್ತು. ಶತ್ರುಗಳ ಕೀರ್ತಿಯನ್ನು ಅಪಹರಿಸುವಂಥ ಆ ಮಹಾ ಅಸ್ತ್ರವನ್ನು ಶ್ರೀ ರಾಮ ವೇದೋಕ್ತವಿಧಿಯಿಂದ ಅಭಿಮಂತ್ರಿಸಿ ತನ್ನ ದಿವ್ಯವಾದ ಧನುಸ್ಸಿನಲ್ಲಿ ಅನುಸಂಧಾನ ಮಾಡಿದ.

ಅನುಸಂಧಾನ ಮಾಡುತ್ತಿರುವಂತೆ ಸರ್ವಭೂತಗಳೂ ಭಯದಿಂದ ನಡುಗಿದವು. ಭೂಮಿ ಕಂಪಿಸತೊಡಗಿತು. ಧನುಸ್ಸಿನಲ್ಲಿ ಹೂಡಿ ಆಕರ್ಣಾಂತವಾಗಿ ಸೆಳೆದು ಮರ್ಮಭೇದಿಯಾದ ಆ ಅಸ್ತ್ರವನ್ನು ರಾವಣನಿಗೆ ಗುರಿಯಿಟ್ಟು ಹೊಡೆದ. ವಜ್ರಾಯುಧದಂತೆ, ಕಾಲಪಾಶದಂತೆ ಅತಿವೇಗವಾಗಿ ಬಂದು ಆ ಅಸ್ತ್ರ ರಾವಣನ ಎದೆಯನ್ನು ಹೊಕ್ಕಿತು. ಎದೆಯನ್ನು ಸೀಳಿ ಅವನನ್ನು ಕೆಳಕ್ಕೆ ಕೆಡವಿತು. ಬ್ರಹ್ಮಾಸ್ತ್ರಕ್ಕೆ ಸಿಕ್ಕು ರಾವಣ ಹತನಾದ. ಅನಂತರ ಆ ದಿವ್ಯಾಸ್ತ್ರವು ವಿನೀತನಾದ ಸೇವಕನಂತೆ ಪುನಃ ರಾಮನ ಬತ್ತಳಿಕೆಯಲ್ಲಿ ಹೋಗಿ ಸೇರಿತು. ರಾವಣನ ಸಂಹಾರವಾದೊಡನೆಯೇ ದಿಕ್ಕುಗಳೆಲ್ಲ ಪ್ರಶಾಂತವಾದುವು. ವಾಯು ಮಂದವಾಗಿ ಬೀಸತೊಡಗಿತು. ನಕ್ಷತ್ರಗಳು, ಗ್ರಹಗಳು ಪ್ರಕಾಶಿಸತೊಡಗಿದವು. ರಾವಣ ಹತ್ತು ತಲೆಯುಳ್ಳವ. ಮೊದಲೇ ಹೇಳಿದ್ದಂತೆ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯಗಳಿಂಧ ಕೂಡಿದ ಅಹಂಕಾರ ತತ್ತ್ವವೇ ರಾವಣ. ರಾಮನು ಹೂಡಿದ "ಬ್ರಹ್ಮಾಸ್ತ್ರ"ವೇ ವಿವೇಕಾಸ್ತ್ರ ವಿವೇಕಾಸ್ತ್ರಕ್ಕೆ ಸಿಕ್ಕು ಅಹಂಕಾರ ಅಳಿದ ಮೇಲೆ ಮನಸ್ಸು ಪ್ರಶಾಂತವಾಗು

ತ್ತದೆ. ಹೃದಯ ಪ್ರಸನ್ನವಾಗುತ್ತದೆ. ರಾಕ್ಷಸತ್ವ ಹೋಗಿ ಶುದ್ಧ ಸತ್ವಮಯವಾದ ದೇವತ್ವ ನೆಲೆಗೊಳ್ಳುತ್ತದೆ. ರಾವಣ ನೆಲಕ್ಕೆ ಬಿದ್ದುದನ್ನು ಕಂಡ ರಾಕ್ಷಸರೆಲ್ಲ ಭಯದಿಂದ ತತ್ತರಿಸಿದರು. ರಾವಣ ಸಂಹೃತನಾದುದನ್ನು ನೋಡಿದ ವಾನರರು ಅತ್ಯಂತ ಆನಂದದಿಂದ ಹಾರಿ ರಾಕ್ಷಸರನ್ನು ಹಿಡಿದು ಕೊಲ್ಲತೊಡಗಿದರು. ನಾಯಕ ಅಳಿದದ್ದನ್ನು ನೋಡಿದ ಅಳಿದುಳಿದ ರಾಕ್ಷಸರು ಬೆದರಿ ಲಂಕೆಯತ್ತ ಓಡಿಹೋದರು. ವಾನರರು ಗಟ್ಟಿಯಾಗಿ ಸಂತೋಷದಿಂದ ಗರ್ಜಿಸತೊಡಗಿದರು. ದೇವತೆಗಳು, ಋಷಿಗಳು, ಗಂಧರ್ವರು ಅಪ್ಸರೆಯರು ಸಂತೋಷದಿಂದ ಕುಣಿದಾಡಿದರು. ದೇವ ದುಂದುಭಿಗಳು ಮಧುರವಾಗಿ ಮೊಳಗಿದವು. ಋಷಿಗಳು, ಸಾಧುಗಳು, ಮುನಿಗಳು ರಾಮನಿಗೆ ಮಂಗಳಾಶೀರ್ವಾದ ಮಾಡಿದರು. ಗಂಧರ್ವರು ಸುಸ್ವರದಲ್ಲಿ ಗಾಯನ ಮಾಡಿದರು. ಅಪ್ಸರೆಯರು ಸಂತೋಷದಿಂದ ನರ್ತಿಸಿದರು. ರಾಮನ ಮೇಲೆ ಸುಗಂಧಯುಕ್ತವಾದ ಹೂಮಳೆಗರೆದರು. ರಾಮನು ರಾವಣನನ್ನು ನಿಗ್ರಹಿಸಿ ವಿಭೀಷಣ, ಸುಗ್ರೀವರನ್ನು ಕೃತಕೃತ್ಯರನ್ನಾಗಿ ಮಾಡಿದ.

ವಾನರ ಪ್ರಮುಖರೆಲ್ಲ ರಾಮನನ್ನು ಸುತ್ತುವರಿದು ಅವನನ್ನು ಅಭಿನಂದಿಸಿ ಪೂಜಿಸಿದರು,

ಸೀತೆಯನ್ನು ಪಡೆಯುತ್ತೇನೆ ಎಂಬ ಸಂತೋಷಕ್ಕಿಂತ ವಿಭೀಷಣನಿಗೆ ತಾನು ಕೊಟ್ಟ ಮಾತನ್ನು ಹುಸಿ ಮಾಡಲಿಲ್ಲವಲ್ಲಾ ಎಂಬ ಸಮಾಧಾನ ರಾಮನಿಗೆ ಉಂಟಾಯಿತು. ಸ್ವಜನರಾದ ವಾನರರೆಲ್ಲ ರಾಮನನ್ನು ಸುತ್ತುವರಿದಿರಲು ರಾಮ ದೇವತೆಗಳ ನಡುವೆ ಪ್ರಕಾಶಿಸುವ ದೇವೇಂದ್ರನಂತೆ ಕಂಗೊಳಿಸುತ್ತಿದ್ದ.

## ವಿಭೀಷಣನ ಸಂತಾಪ

ಹಿರಿಯ ಸೋದರನಾದ ರಾವಣ ನೆಲದ ಮೇಲೆ ಅಂಗತ್ತನಾಗಿ ಬಿದ್ದಿದ್ದ. ಸಾಯುವಾಗ ನೆಲದ ಮೇಲೆ ಬಿದ್ದಾಗಲೂ ರಾವಣ ತನ್ನ ತಲೆಯನ್ನು ತಗ್ಗಿಸಲಿಲ್ಲ. ಬಾಗಿಸಲಿಲ್ಲ. ಧೂಳಿನಿಂದ ಆವೃತವಾದ ರಣಭೂಮಿಯಲ್ಲಿ ಹಾಗೇ ಅಂಗತ್ತನಾಗಿ ಬಿದ್ದ. ಅವನ ತಲೆ ಕತ್ತರಿಸಲ್ಪಟ್ಟಿತ್ತು. ಕಿರೀಟ ಚೂರು ಚೂರಾಗಿ ಒಡೆದು ಚೆದುರಿ ಬಿದ್ದಿತ್ತು. ರಾವಣ ಕೆಳಗೆ ಬೀಳುತ್ತಿದ್ದಂತೆ ಅವನು ಕೈಯಲ್ಲಿ ಹಿಡಿದ ಧನುಸ್ಸೂ ಜಾರಿ ದೂರ ಹೋಗಿ ಬಿದ್ದಿತು. ಕೈಗಳನ್ನು ಚಾಚಿ ಅಂಗತ್ತನಾಗಿ ಅನಾಥನಂತೆ ಬಿದ್ದಿದ್ದ ರಾವಣನನ್ನು ನೋಡಿದ, ವಿಭೀಷಣ. ಎಷ್ಟಾದರೂ ಹಿರಿಯಣ್ಣನಲ್ಲವೇ !

"ಅಯ್ಯೋ ! ಅಣ್ಣಾ ! ನೀನು ಯಾವಾಗಲೂ ಸುಪ್ಪತ್ತಿಗೆಯ ಮೇಲೆ ಮಲಗುತ್ತಿದ್ದೆಯಲ್ಲವೇ ? ಈಗ ಧೂಳಿನಿಂದ, ಶವಗಳಿಂದ ತುಂಬಿರುವ ಈ ರಣಭೂಮಿಯ ಮೇಲೆ ಒರಗಿರುವೆಯಲ್ಲ. ನಿನ್ನ ಕೈಗಳು ಯಾವಾಗಲೂ ಯುದ್ಧ ಮಾಡಲು ಹಾತೊರೆಯುತ್ತ ಇರುತ್ತಿದ್ದವು. ಈಗ ನಿಷ್ಪಂದವಾಗಿ ಬಿದ್ದಿವೆಯಲ್ಲ ಏಕೆ ? ಅಣ್ಣಾ ! ಮೊದಲೇ ನಾ ಹೇಳಿದೆ. ಈ ಸ್ಥಿತಿ ಬರುತ್ತದೆ ಎಂದೆ. ಅಹಂಕಾರದಿಂದ ನೀನು ನನ್ನ ಮಾತನ್ನು ಲಕ್ಷಿಸಲಿಲ್ಲ. ಈಗ ರಾಮನೆಂಬ ಮೇಘದಿಂದ ರಾವಣನೆಂಬ ಅಗ್ನಿ ಆರಿತು. ಈ ಶೋಚನೀಯ ಸ್ಥಿತಿ ಬರುತ್ತದೆ ಎಂದು ಸಾರಿ ಹೇಳಿದೆ. ಯಾರೂ ಕೇಳಲಿಲ್ಲ. ಕೊನೆಗೆ ನೀನು ಇಂಥ ದುಸ್ಥಿತಿಯನ್ನು ಪಡೆಯುವಂತಾಯಿತಲ್ಲಾ" ಎಂದು ಹಲುಬಿದ.

ಆಗ ರಾಮ ವಿಭೀಷಣನನ್ನು ಸಂತೈಸುತ್ತಾ "ವಿಭೀಷಣ, ರಾವಣನಿಗಾಗಿ ದುಃಖಿಸುವುದು ಸರಿಯಲ್ಲ. ರಾವಣ ವೀರ, ವೀರೋಚಿತವಾದ ಮರಣವನ್ನೇ ಪಡೆದಿದ್ದಾನೆ. ಕ್ಷಾತ್ರಧರ್ಮವನ್ನು ಅನುಸರಿಸುವವರು ಬಯಸುವ, ಹೊಂದಬಹುದಾದ ಸ್ಥಿತಿಯನ್ನೇ ಅವನೂ ಹೊಂದಿದ್ದಾನೆ. ಇದ

ಕ್ಕಾಗಿ ಶೋಕಿಸುವುದು ಸರಿಯಲ್ಲ. ಮುಂದೆ ನಡೆಯಬೇಕಾದ ಕಾರ್ಯಗಳನ್ನು ನಡೆಸು ಎಂದ.

**ಮಂಡೋದರಿಯ ಪ್ರಲಾಪ**

ರಾಮಾಯಣದ ಒಂದೊಂದು ಘಟ್ಟವೂ ರಸಘಟ್ಟ. ಗಹನವಾದ ತತ್ತ್ವಗಳನ್ನು ಸುಲಭವಾಗಿ ಹೇಳಿಬಿಟ್ಟಿದಾರೆ ವಾಲ್ಮೀಕಿ. ರಾಮಾಯಣದಲ್ಲಿ ವರ್ಣಿಸಿರುವ ಪಾತ್ರಗಳ ವೈಶಿಷ್ಟ್ಯ ಅಮೋಘ ವಾಗಿದೆ.

ಮೂರು ಸ್ತ್ರೀ ವ್ಯಕ್ತಿಗಳ ಮೂಲಕ ಇಡೀ ರಾಮಾಯಣದ ಸಾರವನ್ನೇ ಹೊರಗೆಡಹಿದ್ದಾರೆ ವಾಲ್ಮೀಕಿ. ಒಬ್ಬಳು ವಾನರ ಸ್ತ್ರೀ. ಇನ್ನೊಬ್ಬಳು ಶಬರ ಜಾತಿಯವಳು. ಮತ್ತೊಬ್ಬಳು ರಾಕ್ಷಸಿ. ತಾರೆ ವಾನರ ಸ್ತ್ರೀ, ಶಬರಿ ಶಬರಜಾತಿಯವಳು. ಮಂಡೋದರಿ ರಾಕ್ಷಸಿ. ಈ ಮೂವರು ಬಾಯಿಂದ ಇಡೀ ರಾಮಾಯಣದ ತತ್ತ್ವವೇ ಹೊರ ಹೊಮ್ಮಿದೆ. ರಾಮ ಈ ಮೂವರಿಗೂ ದರ್ಶನ ಕೊಟ್ಟ ರೀತಿಯೇ ಒಂದು ಸೊಗಸು.

ತಾರೆಗೆ ಗಂಭೀರ ದರ್ಶನ, ಶಬರಿಗೆ ಸೌಮ್ಯದರ್ಶನ, ಮಂಡೋದರಿಗೆ ಪರತತ್ತ್ವದ ದರ್ಶನ. ರಾವಣನ ಸಂಹಾರವಾದನಂತರ ಕೋದಂಡವನ್ನೂರಿ ನಿಂತ ರಾಮನ ಭಂಗಿಯನ್ನು ಅನುಭವಿಸಿ ದವಳು ರಾಕ್ಷಸಿ ಮಂಡೋದರಿ. ಈ ಮೂವರೂ ರಾಮನನ್ನು ವರ್ಣಿಸಿರುವುದನ್ನು ನೋಡಿದಾಗ ಇವರಿಗಾಗಿಯೇ ರಾಮಾವತಾರವೋ ಎಂಬಂತಿದೆ. ರಾಕ್ಷಸಿಯಾದ ಮಂಡೋದರಿಯ ಬಾಯಿಯಿಂದ ರಾಮಾವತಾರದ ರಹಸ್ಯವನ್ನೇ ಬಹಿರಂಗಪಡಿಸಿದಾರೆ ಆದಿ ಕವಿ. ವಾಲ್ಮೀಕಿಯ ಪಾತ್ರಪೋಷಣೆಯ ವೈಶಿಷ್ಟ್ಯತೆ ಎದ್ದು ಕಾಣುವುದು ಇಲ್ಲೇ.

ರಾವಣ ಮೃತನಾದ ಸುದ್ದಿ ಕೇಳುತ್ತಲೇ ರಾವಣನ ಅಂತಃಪುರದ ಸ್ತ್ರೀಯರು ದುಃಖಿತ ರಾಗಿ ಮಂಡೋದರಿಯನ್ನು ಮುಂದಿಟ್ಟುಕೊಂಡು ರಣರಂಗಕ್ಕೆ ಬಂದರು. ಮಂಡೋದರಿ ರಾವ ಣನ ಪಟ್ಟದರಸಿ. ಯಾವಾಗಲೂ ಶ್ವೇತಚ್ಛತ್ರದ ನೆರಳಿನಲ್ಲೇ ಇದ್ದಳು. ಅಂಥ ಮಂಡೋದರಿ ಅಂತಪುರದಿಂದ ಬರಿಗಾಲಿನಲ್ಲಿ ಬರಿತಲೆಯಲ್ಲಿ ರಾಜಮಾರ್ಗದಲ್ಲಿ ಎಲ್ಲರೂ ನೋಡುತ್ತಿರುವಂತೆ ಅನಾಥಳಾಗಿ ಒಡಿ ಬಂದಳು. ರಾವಣ ಬಿದ್ದಿದ್ದ ಸ್ಥಳಕ್ಕೆ ಬಂದಳು. ದಶಕಂಠನ ದೇಹದ ಮೇಲೆ ಬಿದ್ದು ರೋದಿಸಲಾರಂಭಿಸಿದಳು.

ಮೃತಶರೀರವನ್ನು ಸುತ್ತುತ್ತಿದ್ದ ಹದ್ದುಗಳ ನೆರಳಿನಲ್ಲಿ ಕುಳಿತು ಅತ್ತಳು. ರಾವಣನ ಕೈ ಗಳನ್ನು ತನ್ನ ಕೈಯಲ್ಲಿ ಹಿಡಿದು ಅವನ ತಲೆಯನ್ನು ತೊಡೆಯ ಮೇಲೆ ಇರಿಸಿಕೊಂಡು ಪ್ರಲಾಪಿಸಿ ದಳು.

"ಹಾ, ನಾಥ! ಇಗೋ ನಿಮ್ಮ ಪ್ರೀತಿಯ ಪತ್ನಿಯಾದ ಮಂಡೋದರಿ ಬಂದಿದೇನೆ. ನನ್ನನ್ನು ಕಂಡ ಒಡನೆ ನೀವು ಎಷ್ಟು ಸಂತೋಷಪಡುತ್ತಿದ್ದಿರಿ! ಈಗ ಶವವನ್ನು ಕಿತ್ತುತಿನ್ನುವ ಹದ್ದುಗಳ ರೆಕ್ಕೆಗಳ ನೆರಳಿನಲ್ಲಿ ಬಿದ್ದಿದೆಯಲ್ಲ! ಅಯ್ಯೋ ಸುಪ್ಪತ್ತಿಗೆಯ ಮೇಲೆ ವಿರಾಜಿಸುತ್ತಿದ್ದ ಕೈಗಳು ಧೂಳಿನಲ್ಲಿ ಬಿದ್ದಿವೆಯಲ್ಲ!

"ನೀವು ಸಾಮಾನ್ಯರೆ! ದೇವತೆಗಳನ್ನೂ ಯಕ್ಷರನ್ನೂ, ಪನ್ನಗರನ್ನೂ ನಡುಗಿಸಿದ ನೀವು ಒಬ್ಬ ಸಾಮಾನ್ಯ ಮನುಷ್ಯನಿಂದ ಮರಣವನ್ನಪ್ಪುವುದೇ? ಎಲ್ಲರನ್ನೂ ಜಯಿಸಿದ ನೀವು ರಾಮ

ನಿಂದ ಪರಾಜಿತರಾದಿರಿ ಎಂದರೆ ಆತ ಸಾಮಾನ್ಯನಲ್ಲ. ಸಾಕ್ಷಾತ್ ಕಾಲನೇ ರಾಮರೂಪದಲ್ಲಿ ಬಂದಿರಬೇಕು ಅಥವಾ ಇಂದ್ರನೇ ರಾಮರೂಪದಲ್ಲಿ ಬಂದಿರಬಹುದೇ? ಇಲ್ಲ, ಇಲ್ಲ. ಆ ಇಂದ್ರನಿಗೆ ನಿಮ್ಮನ್ನು ಜಯಿಸುವುದು ಹೇಗೆ ಸಾಧ್ಯ? ಇಂದ್ರನನ್ನೇ ನೀವು ಜಯಿಸಿದವರಲ್ಲವೆ? ಹಾಂ! ಈಗ ತಿಳಿಯಿತು. ರಾಮ ಯಾರು ಎಂಬುದು!...ತಿಳಿಯಿತು!

ವ್ಯಕ್ತಮೇಷ ಮಹಾಯೋಗೀ ಪರಮಾತ್ಮಾ ಸನಾತನಃ ।
  ಅನಾದಿಮಧ್ಯನಿಧನೋ ಮಹತಃ ಪರಮೋ ಮಹಾನ್ ॥
ತಮಸಃ ಪರಮೋ ಧಾತಾ ಶಂಖಚಕ್ರಗದಾಧರಃ ।
  ಶ್ರೀವತ್ಸವಕ್ಷಾ ನಿತ್ಯಶ್ರೀರಜಯ್ಯಃ ಶಾಶ್ವತೋ ಧ್ರುವಃ ॥
ಮಾನುಷಂ ರೂಪಮಾಸ್ಥಾಯ ವಿಷ್ಣುಃ ಸತ್ಯಪರಾಕ್ರಮಃ ।
  ಸರ್ವೈಃ ಪರಿವೃತೋ ದೇವೈರ್ವಾನರತ್ವಮುಪಾಗತೈಃ ॥
ಸರ್ವಲೋಕೇಶ್ವರಃ ಶ್ರೀಮಾನ್ ಲೋಕಾನಾಂ ಹಿತಕಾಮ್ಯಯಾ ।
  ಸರಾಕ್ಷಸಪರೀವಾರಂ ದೇವಶತ್ರುಂ ಭಯಾವಹಂ ॥

ಎನ್ನುತ್ತಾಳೆ ಮಂಡೋದರಿ.

ಈ ನಾಲ್ಕು ಶ್ಲೋಕಗಳಲ್ಲಿ ಮಂಡೋದರಿಯ ಮೂಲಕ ವಾಲ್ಮೀಕಿ ಮಹರ್ಷಿ ರಾಮಾವತಾರದ ರಹಸ್ಯವನ್ನು ಹೊರಗೆಡಹಿದ್ದಾರೆ. ರಾವಣನನ್ನು ಕೊಂದಿರುವ ಈ ರಾಮ ಸಾಮಾನ್ಯನಲ್ಲ ಪರಮಾತ್ಮನಾದ ಸನಾತನನೆನಿಸಿದ ಆದಿ ಮಧ್ಯ ಅಂತ್ಯರಹಿತನಾದ ಆ ಮಹಾತ್ಮನೇ ರಾಮರೂಪದಲ್ಲಿ ವ್ಯಕ್ತನಾಗಿದಾನೆ.

**ಅಣೋರಣೀಯಾನ್ ಮಹತೋಮಹೀಯಾನ್**

ಎಂಬ ಶೃತಿವಾಕ್ಯದ ಪ್ರತಿಪಾದಕನೇ ಆ ರಾಮ. ಅಣುವಿನಲ್ಲಿ ಅಣುವಾಗಿ ಮಹತ್ತಿನಲ್ಲಿ ಮಹತ್ತಾಗಿ, ಸರ್ವವ್ಯಾಪಿಯಾಗಿ ಇರುವ ಆ ಸತ್‌ಚಿತ್ ವಸ್ತುವೇ ರಾಮನಾಗಿ ವ್ಯಕ್ತನಾಗಿದಾನೆ. ಶಂಖಚಕ್ರಗಧಾರಿಯಾಗಿ ಶ್ರೀ ವತ್ಸವಕ್ಷನಾದ ಸಾಕ್ಷಾತ್ ಶ್ರೀಮನ್ನಾರಾಯಣನೇ ಆ ರಾಮ'' ಎನ್ನುತ್ತಾಳೆ ಮಂಡೋದರಿ.

**ತಮಸಃ ಪರಮೋ ಧಾತಾ ಶಂಖ ಚಕ್ರಗದಾಧರಃ**

ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡುತ್ತಾ ಜ್ಞಾನಿಗಳು ಹೇಳುತ್ತಾರೆ. ರಾಮಾಯಣದಲ್ಲಿ ಸಾಕ್ಷಾತ್ತಾಗಿ ಶ್ರೀರಾಮನ ಪರತ್ವವನ್ನು ತೋರ್ಪಡಿಸಿಕೊಳ್ಳದೆ ಇದ್ದ. ಆದರೂ ಅವನು ಕಬಂಧನಿಗೆ, ಜಟಾಯುವಿಗೆ ಮೋಕ್ಷವನ್ನು ಕೊಟ್ಟಿದ್ದರಿಂದ ಅದು ಪ್ರಕಟವಾಯಿತು. ಆದರೆ, ರೂಪದಲ್ಲಿ ಮಾತ್ರ ತಾನು ಮನುಷ್ಯನಂತೆಯೇ ಕಾಣಿಸಿಕೊಂಡ. ರಾವಣನ ಸಂಹಾರವಾದ ಮೇಲೆ, ತನ್ನ ಅವತಾರದ ಉದ್ದಿಶ್ಯ ಸಾರ್ಥಕವಾದ ಮೇಲೆ ರಾಮ ತನ್ನ ಪರತ್ವದ ರೂಪವನ್ನೇ ತೋರಿಸಿದ. ಅದನ್ನು ನೋಡಿಯೇ ಮಂಡೋದರಿ ''ಶಂಖ ಚಕ್ರಗದಾರನಾದ, ಶ್ರೀವತ್ಸಲಾಂಛನದಿಂದ ಒಪ್ಪುವ ನಾರಾಯಣನೇ ರಾಮ'' ಎಂದಳು. ಆ ನಾರಾಯಣನ ಗುಣವನ್ನೂ ವರ್ಣಿಸುತ್ತ ನಾರಾಯಣ ಶಾಶ್ವತ, ಸ್ಥಿರ, ಸಂಪೂರ್ಣಲೋಕಕ್ಕೆ ಆಶ್ರಯಭೂತ ಎಂದಿದ್ದಾಳೆ.

ರಾಮಾವತಾರದ ರಹಸ್ಯವನ್ನೂ ಮಂಡೋದರಿಯೇ ಹೇಳುತ್ತಾಳೆ, ``ಸತ್ಯ ಪರಾಕ್ರಮ ನಾದ ಆ ವಿಷ್ಣುವೇ ರಾಮನ ರೂಪದಲ್ಲಿ ಪ್ರೈದೋರಿದ. ವಾನರರೇ ದೇವತೆಗಳು, ಸಕಲದೇವ ರಿಂದ ಕೂಡಿದ ಆ ದೇವ ದೇವನಾದ ವಿಷ್ಣುವೇ ರಾಮನಾಗಿ ಅವತರಿಸಿದ್ದಾನೆ" ಎಂದು.

"ಆ ಸರ್ವಲೋಕೇಶ್ವರನು ಸರ್ವರ ಹಿತವನ್ನೂ ಅನುಲಕ್ಷಿಸಿ ಮಹಾಭಯಂಕರನಾದ, ದೇವ ಶತ್ರುವಾದ ನಿನ್ನನ್ನು ಕೊಲ್ಲುವ ಸಲುವಾಗಿಯೇ ಬಂದ" ಎಂದು ಮಂಡೋದರಿ ಪ್ರಲಾಪಿಸುತ್ತಾ ಹೇಳುತ್ತಾಳೆ.

ಮಂಡೋದರಿಯ ಪ್ರಲಾಪದಲ್ಲಿ ಒಂದು ವೈಶಿಷ್ಟ್ಯವುಂಟು. ಪತಿಯಾದ, ಪ್ರಿಯನಾದ ರಾವಣ ಸತ್ತು ಬಿದ್ದಿದ್ದಾನೆ. ಪತಿವ್ರತೆ ಮಂಡೋದರಿ ಪತಿಯ ಮರಣದಿಂದ ಎದೆಯೊಡೆದು ವಿಲಪಿ ಸುತ್ತಿದ್ದಾಳೆ. ಆಗ, ಪತಿಯನ್ನು ಕೊಂದ ರಾಮ ಕೋದಂಡವನ್ನೂರಿ ನಿಂತಿದ್ದಾನೆ. ಅಂಥ ಸಂದರ್ಭದಲ್ಲೂ ರಾಮನನ್ನು ನಿಂದಿಸದೆ ರಾವಣನ ದುರ್ಗುಣಗಳಿಂದಲೇ ಅವನು ಸತ್ತ ಎನ್ನುತ್ತಾಳೆ.

"ಪ್ರಾಣನಾಥ ! ನೀನು ಪತಿವ್ರತೆಯಾದ ಸೀತೆಯನ್ನು ಜನಸ್ಥಾನದಿಂದ ಅಪಹರಿಸಿ ತಂದೆ. ಕೆಟ್ಟ ಬುದ್ಧಿಯಿಂದ ದುಷ್ಕರ್ಮವನ್ನು ಮಾಡಿದೆ. ಪತಿವ್ರತೆಯ ತಪಸ್ಸಿನ ಅಗ್ನಿ ನಿನ್ನನ್ನು ಸುಟ್ಟಿತು. ರಾಮ ಬಾಣದಿಂದ ನೀನು ಸಾಯುವುದಿರಲಿ. ಯಾವಾಗ ಸತೀಮಣಿಯಾದ ಸೀತೆಯನ್ನು ಅಪ ಹರಿಸಿ ತಂದೆಯೋ ಆವಾಗಲೇ ನಿನ್ನ ಯಶಸ್ಸು, ಕೀರ್ತಿ, ಶ್ರೇಯಸ್ಸು ಎಲ್ಲವೂ ಭಸ್ಮೀಭೂತ ವಾಯಿತು. ನೀನು ಐಶ್ವರ್ಯವನ್ನು, ಶರೀರವನ್ನು, ಸ್ವಜನರನ್ನು ಕಳೆದುಕೊಳ್ಳುವ ಸಲುವಾಗಿಯೇ ಸೀತೆಯನ್ನಪೇಕ್ಷಿಸಿದೆ.

**ಅವಶ್ಯ ಮೇವ ಲಭತೇ ಫಲಂ ಪಾಪಸ್ಯ ಕರ್ಮಣಃ ।**
**ಭರ್ತಃ ಪರ್ಯಾಗತೇ ಕಾಲೇ ಕರ್ತಾ ನಾಸ್ತ್ಯತ್ರ ಸಂಶಯಃ ॥**
**ಶುಭಕೃತ್ ಶುಭಮಾಪ್ನೋತಿ ಪಾಪಕೃತ್ ಪಾಪ ಮಶ್ನುತೆ ।**
**ವಿಭೀಷಣಃ ಸುಖಂ ಪ್ರಾಪ್ತಸ್ತ್ವಂ ಪ್ರಾಪ್ತಃ ಪಾಪಮೀದೃಶಮ್ ॥**

ಅವಶ್ಯವಾಗಿ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸಲೇಬೇಕು. ಇದರಲ್ಲಿ ಸಂದೇಹವೇ ಇಲ್ಲ. ಪಾಪಕ್ಕೆ ತಕ್ಕ ದುಃಖವನ್ನು ಪಡೆಯಲೇ ಬೇಕು.

**ಶುಭಕೃತ್ ಶುಭಮಾಪ್ನೋತಿ**–ಪುಣ್ಯಕ್ಕೆ ತಕ್ಕ ಫಲ ``ಸುಖ'' **ಪಾಪ ಕೃತ್ ಪಾಪ ಮಶ್ನುತೇ**-ಪಾಪಕ್ಕೆ ತಕ್ಕ ಫಲ "ದುಃಖ'' ಇದಕ್ಕೆ ನೀವು ಹಾಗೂ ವಿಭೀಷಣನೇ ಸಾಕ್ಷಿ. ನಿದರ್ಶನ. ವಿಭೀಷಣ ಧರ್ಮಮಾರ್ಗವನ್ನು ಹಿಡಿದ ಶಾಶ್ವತವಾದ ಸುಖವನ್ನು ಪಡೆದ. ನೀವು ಕುತ್ಸಿತ ವಾದ ಪಾಪಕರ್ಮವನ್ನು ಆಚರಿಸಿದಿರಿ. "ಪರಭಾರ್ಯಾಪಹರಣ" ಎಂಬ ಪಾಪ ಮಹಾಘೋರ ವಾದುದು. ಆ ಪಾಪಕ್ಕೆ ತಕ್ಕ ಫಲ "ಮರಣದಂಡನೆ" ಯಾರೇ ಆಗಲಿ ಸತಿಯಾದ ಪರಸ್ತ್ರೀಯನ್ನು ಬಯಸುತ್ತಾನೋ ಅವನಿಗೆ ``ಶಿಕ್ಷೆ'' ಮರಣದಂಡನೆಯೇ. ಅದನ್ನು ಪ್ರತ್ಯಕ್ಷವಾಗಿ ನೀವು ಪಡೆದಿರಿ.

ಪ್ರಪಂಚದಲ್ಲಿ ಯಾವಾಗಲೂ ಯಾರಿಗೂ ಅಕಾರಣವಾಗಿ ಮೃತ್ಯು ಬರುವುದಿಲ್ಲ. ಯಾವು ದಾದರೂ ಒಂದು ಕಾರಣವಿದ್ದೇ ಇರುತ್ತದೆ. ನಿಮ್ಮ ಮೃತ್ಯುವಿಗೆ ಮೈಥಿಲಿಯೇ ಕಾರಣಳಾದಳು.

ಪತಿವ್ರತೆಯಾದ ಸೀತೆಯನ್ನು ಬಯಸಿದಿರಿ. ಅದರ ಮೂಲಕವಾಗಿ ಮೃತ್ಯುವಿಗೆ ಸ್ವಾಗತ ಕೋರಿದಿರಿ. ನನ್ನ ಪುಣ್ಯ ಹೀನಪುಣ್ಯ. ಅದರಿಂದಲೇ ನಾನು ವಿಧವೆಯಾಗಬೇಕಾಯಿತು.

"ಅಯ್ಯೋ ! ಇದುವರೆಗೆ ನಾನು ಎಷ್ಟು ಸಂತೋಷವಾಗಿದ್ದೆ. ಎಷ್ಟು ಭೋಗಭಾಗ್ಯಗಳನ್ನು ಅನುಭವಿಸಿದೆ ! ಉತ್ತಮವಾದ ವಿಮಾನದಲ್ಲಿ ಕುಳಿತು ಅಲಂಕರಿಸಿಕೊಂಡು ದಿವ್ಯವಾದ ಉಡುಪನ್ನೂ. ಆಭರಣಗಳನ್ನೂ ಧರಿಸಿ ನಿಮ್ಮೊಡನೆ ಮೇರು, ಮಂದರ ಮುಂತಾದ ಪರ್ವತ ಪ್ರದೇಶಗಳಲ್ಲೂ, ನಂದನವನ, ಚೈತ್ರ ರಥವೇ ಮುಂತಾದ ಉದ್ಯಾನವನಗಳಲ್ಲೂ ಮತ್ತಳಾಗಿ ವಿಹರಿಸಿದೆ.

ದಾನವರಾಜನಾದ "ಮಯ" ನನ್ನ ತಂದೆ. ರಾಕ್ಷಸರಾಜನಾದ ರಾವಣ ನನ್ನ "ಪತಿ." ಇಂದ್ರನನ್ನೇ ಜಯಿಸಿದ "ಇಂದ್ರಜಿತು" ನನ್ನ ಮಗ ಎಂದು ಹೆಮ್ಮೆಯಿಂದ ಮೆರೆಯುತ್ತಿದ್ದೆ. "ಇಂದ್ರನೀಲಮಣಿಯಂತೆ" ಶ್ಯಾಮಲವಾದ ದೇಹ ಕಾಂತಿ, ಉನ್ನತವಾದ ಪರ್ವತಶಿಖರಕ್ಕೆ ಸಮಾನವಾದ ಕೇಯೂರ, ರತ್ನಹಾರ ಮುಂತಾದ ಅನರ್ಘ್ಯವಾದ ಆಭರಣಗಳಿಂದ ಭೂಷಿತವಾಗಿದ್ದ ನಿಮ್ಮ ದೇಹ ಮಿಂಚಿನಿಂದ ಆವೃತವಾದ ಮೇಘದಂತೆ ಹೊಳೆಯುತ್ತಿತ್ತು. ಅದೇ ದೇಹ ಇಂದು ಧೂಳಿನಿಂದ ಕಲುಷಿತವಾಗಿ ಬಾಣಗಳಿಂದ ಚುಚ್ಚಲ್ಪಟ್ಟು ನಾಯಿ, ನರಿ, ಹದ್ದು. ಕಾಗೆ ಕುಕ್ಕುವ ಹಾಗೆ ನೆರಳಿಲ್ಲದ ಬರಿ ನೆಲದಮೇಲೆ ಬೀಳುವಂತಾಯಿತು.

ನೀವು ವೀರರು. ಪರಾಕ್ರಮಿಗಳು. ವೀರೋಚಿತವಾದ ಮರಣವನ್ನೇ ಹೊಂದಿರುವಿರಿ. ನಿಮಗಾಗಿ ದುಃಖಿಸುವುದು ವೀರಪತ್ನಿಯಾದ ನನಗೆ ಉಚಿತವಲ್ಲ. ಆದರೂ, ಸ್ತ್ರೀ ಸಹಜವಾದ ದೈನ್ಯತೆ ಹೃದಯದಲ್ಲಿ ತುಂಬಿದೆ. ನಾಥ ! ನೀವು ರಾಮಬಾಣಕ್ಕೆ ಆಹುತಿಯಾಗಿ ಅಚೇತನರಾಗಿ ನೆಲದಮೇಲೆ ಬಿದ್ದಿರುವುದನ್ನು ಕಂಡೂ ಸಹ ನನ್ನ ಪ್ರಾಣ ಇನ್ನೂ ಸ್ಥಿರವಾಗಿ ಉಳಿದಿದೆಯಲ್ಲ. ನಿಜವಾಗಿ ನನ್ನ ಎದೆ ವಜ್ರಕ್ಕಿಂತಲೂ ಕಠಿಣವಾದುದೇ ಸರಿ. ಪ್ರಾಣನಾಥ ! ಅನ್ಯಾಯವಾಗಿ ವಿಭೀಷಣನ ಮಾತನ್ನು ಕೇಳದೆ ಹೋದಿರಲ್ಲ ! ವಿಭೀಷಣ ಎಷ್ಟು ಸತ್ಯವಾಗಿ ಹಿತವನ್ನು ಹೇಳಿದರೂ ನೀವು ಮೋಹದಿಂದ ಆವೃತರಾಗಿ ಕೇಳದೆ ನನ್ನನ್ನು ಹೀಗೆ ದುಃಖಪಡುವಂತೆ ಮಾಡಿದಿರಲ್ಲ. ನೀವು ಹೋದ ಮೇಲೆ ನಾ ಹೇಗೆ ಜೀವಿಸಿರಲಿ ! . . . ಇಲ್ಲ ! ನೀವು ಹೋಗಿಲ್ಲ ! ನಿಮ್ಮ ಪ್ರಿಯೆಯಾದ ನನ್ನನ್ನು ಬಿಟ್ಟು ಹೇಗೆ ತಾನೆ ಹೋಗುವಿರಿ. ಇಲ್ಲ. ನನಗಿಂತ ಪ್ರಿಯಳಾದವಳು ನಿಮಗೆ ದೊರೆತಿದ್ದಾಳೆ. ಅವಳೇ ಈ ರಣಭೂಮಿ. ಈ ರಣಭೂಮಿಯನ್ನು ಬಿಡುವುದಿಲ್ಲ ಎಂಬಂತೆ ಬಿದ್ದಿರುವಿರಲ್ಲ ನನ್ನನ್ನು ಒಮ್ಮೆ ನೋಡಬಾರದೆ ! ಒಂದು ಮಾತನ್ನಾಡಬಾರದೆ ! ಅಯ್ಯೋ ! ನಿಮ್ಮನ್ನು ಈ ಸ್ಥಿತಿಯಲ್ಲಿ ನೋಡುತ್ತಿದ್ದರೂ ನನ್ನ ಹೃದಯ ಒಡೆದು ಚೂರಾಗಲಿಲ್ಲವಲ್ಲ. ನನ್ನಂಥ ಕಠಿಣ ಹೃದಯಿಗೆ ಧಿಕ್ಕಾರ, ಧಿಕ್ಕಾರ" ಎಂದು ಬಗೆಬಗೆಯಾಗಿ ವಿಲಪಿಸಿದಳು.

## ವಿಭೀಷಣನ ಪಟ್ಟಾಭಿಷೇಕ

ಮಂಡೋದರಿ ಪ್ರಲಾಪಿಸುತ್ತಾ ಮೂರ್ಛಿತಳಾಗಿ ರಾವಣನ ಎದೆಯಮೇಲೆ ಒರಗಿದಳು. ಸಂಧ್ಯಾಕಾಲದ ಅರುಣವರ್ಣದಿಂದ ಆವರಿಸಲ್ಪಟ್ಟ ಮೇಘದ ಮಧ್ಯೆ ಮಿಂಚು ತೋರಿದಂತೆ ರಾವಣನ ಎದೆಯಮೇಲೆ ವಿಚೇಷ್ಟಳಾಗಿ ಬಿದ್ದಳು ಎನ್ನುತ್ತಾರೆ ಕವಿ.

ಶ್ರೀರಾಮ ವಿಭೀಷಣನನ್ನು ಕುರಿತು ಈ ಸ್ತ್ರೀಯರನ್ನು ಸಮಾಧಾನಗೊಳಿಸಿ ರಾವಣನಿಗೆ ಮಾಡಬೇಕಾದ ಪ್ರೇತಕಾರ್ಯಗಳನ್ನು ಮಾಡು ಎಂದು ಹೇಳಿದ.

ಬುದ್ಧಿವಂತನಾದ ವಿಭೀಷಣ ರಾಮನ ಅಭಿಪ್ರಾಯವನ್ನು ತಿಳಿಯುವ ಸಲುವಾಗಿ "ರಾಮ, ರಾವಣ ನನ್ನ ಅಣ್ಣ. ನಾನು ಅವನಿಗೆ ಕರ್ಮ ಮಾಡಬೇಕಾದುದೇನೋ ಸರಿಯೇ! ಆದರೆ, ಅವನು ಅಧರ್ಮಿ, ಪಾಪಿ, ದುರಾಚಾರಿ, ಪರಸ್ತ್ರೀಯನ್ನು ಬಯಸುವಂಥ ಕೆಟ್ಟತನವುಳ್ಳವ. ಅವನಿಗೆ ನಾನು ಸಂಸ್ಕಾರಕರ್ಮ ನಡೆಸುವುದು ಉಚಿತವಲ್ಲ ಎಂದು ನನಗೆ ಕಾಣುತ್ತದೆ. ನಾನು ಮಾಡಲಾರೆ" ಎಂದ.

ವಾಕ್ಯ ವಿಶಾರದನಾದ ರಾಮ ವಿಭೀಷಣನ ಅಂತರ್ಯವನ್ನು ಅರಿತ. "ವಿಭೀಷಣ! ನೀನೆಂದಂತೆ ರಾವಣ ಪಾಪಿಯೇನೋ ನಿಜ. ಆದರೆ, ಅವನು ತೇಜಸ್ವಿ, ತಪಸ್ವಿ. ಅಲ್ಲದೆ ಯುದ್ಧ ವಿದ್ಯೆಯಲ್ಲಿ ನಿಷ್ಣಾತ. ರಣದಲ್ಲಿ ದೇವರುಗಳನ್ನೇ ಜಯಿಸಿದ ಶೂರ. ಅಂಥವನಿಗೆ ವೀರೋಚಿತವಾದ ಸಂಸ್ಕಾರ ಅವಶ್ಯವಾಗಿ ನಡೆಯಲೇಬೇಕು. ಅಲ್ಲದೆ, ವಿಭೀಷಣ! ರಾವಣ ನನ್ನನ್ನು ದ್ವೇಷಿಸುತ್ತಿದ್ದ ಎನ್ನುವಿ. ಆದರೆ, ಸಾವಿನೊಡನೆ ಆ ವೈರ ಕೊನೆಗೊಂಡಿತು

**ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ।**
**ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ॥**

ವಿಭೀಷಣ, ಮರಣದೊಂದಿಗೇ ದ್ವೇಷದ ಅಂತ್ಯವಾಗುತ್ತದೆ. ರಾವಣನು ಇದುವರೆಗೆ ದ್ವೇಷಿಸಿದ. ಈಗ ಸತ್ತಮೇಲೆ ದ್ವೇಷಿಸುತ್ತಿದಾನೆಯೇ ? ನಮ್ಮ ಕಾರ್ಯ ಸಾಧಿಸಿತು. ಇನ್ನು ಅವನು ಸತ್ತಿರುವಾಗ ಅವನ ಮೇಲೆ ಹಗೆ ಸಾಧಿಸಬಾರದು. ವೈಯಕ್ತಿಕವಾಗಿ ನನಗೆ ರಾವಣನ ಮೇಲೆ ಹಗೆ ತನವಿಲ್ಲ. ಅವನು ಮಾಡಿದ ಅಪರಾಧಕ್ಕೆ ತಕ್ಕ ದಂಡನೆ ಕೊಟ್ಟದ್ದಾಯಿತು. ಈಗ ನಿನಗೆ ಹೇಗೆ ಅವನು ಸೋದರನೋ ನನಗೂ ಹಾಗೆಯೇ ಸೋದರನಾಗಿದ್ದಾನೆ. ನೀನು "ಮಾಡುವುದಿಲ್ಲ" ಎಂದರೆ . . , ನಾನು ರಾವಣನಿಗೆ ಸಂಸ್ಕಾರ ಮಾಡುತ್ತೇನೆ ಎಂದ.

ರಾಮನ ಔದಾರ್ಯವನ್ನು ಗಮನಿಸಬೇಕು.

ರಾಮ ವನವಾಸ ಪ್ರಾರಂಭಿಸಿದ ಮೊದಲುಗೊಂಡು ಉತ್ತರ ಕ್ರಿಯೆಗಳ ಪರಂಪರೆಯೇ ನಡೆದು ಬಂದಿತು. ದಶರಥನಿಗೆ ಪಿಂಡಪ್ರದಾನ ಮಾಡುವುದರಿಂದ ಪ್ರಾರಂಭವಾಗಿ, ವಿರಾಧ, ಕಬಂಧ, ಜಟಾಯು ಇವರೆಲ್ಲರಿಗೂ ಉತ್ತರ ಕ್ರಿಯೆ ಮಾಡಿದ ರಾಮ. ಈಗ ರಾವಣನಿಗೂ ಮಾಡಲು ಸಿದ್ಧನಾಗಿ ನಿಂತ.

ರಾಮನ ಮಾತನ್ನು ಕೇಳಿದ ವಿಭೀಷಣ ನಾಚಿ ತಲೆತಗ್ಗಿಸಿದ. ಸಂಸ್ಕಾರಕ್ಕೆ ತಕ್ಕ ಸಿದ್ಧತೆಯನ್ನು ಮಾಡಿದ. ರಾಜೋಚಿತವಾದ, ವೀರೋಚಿತವಾದ ದೇಹ ಕ್ರಿಯೆಯನ್ನು ನಡೆಸಿದ. ದೇಹಕ್ರಿಯೆಯಾದ ನಂತರ ಸ್ನಾನಮಾಡಿ ತರ್ಪಣ ಕೊಟ್ಟ. ವೇದೋಕ್ತವಾದ ವಿಧಿಗನುಸಾರವಾಗಿ ಸರ್ವ ಕರ್ಮಗಳನ್ನೂ ಮಾಡಿ ಮುಗಿಸಿದ. ರಾವಣನ ಸ್ತ್ರೀಯರನ್ನು ಸಮಾಧಾನಪಡಿಸಿ ಅಂತಃಪುರಕ್ಕೆ ಕಳುಹಿಸಿ ತಾನು ರಾಮನ ಸಮೀಪಕ್ಕೆ ಬಂದು ವಿನಯದಿಂದ ತಲೆಬಾಗಿ ನಿಂತ.

ಯುದ್ಧ ಮುಗಿಯಿತು. ರಾವಣ ತೀರಿದ ಬಳಿಕ ಮಾತಲಿ ರಾಮನ ಅನುಜ್ಞೆಯನ್ನು ಪಡೆದು ರಥದೊಂದಿಗೆ ದೇವಲೋಕಕ್ಕೆ ಹಿಂದಿರುಗಿದ. ದೇವತೆಗಳು, ಗಂಧರ್ವರು ರಾವಣನ ವಧೆಯ ದೃಶ್ಯವನ್ನು ಕಂಡು ತಮ್ಮ ತಮ್ಮೊಳಗೇ ಮಾತಾಡಿಕೊಂಡರು. ರಾವಣನ ಭಯಂಕರವಾದ ಮರಣ, ರಾಘವನ ಅದ್ಭುತವಾದ ಪರಾಕ್ರಮ, ವಾನರರ ಉತ್ತಮ ಸಾಹಸ, ಸುಗ್ರೀವನ

ಬುದ್ಧಿ ಚತುರತೆ, ಲಕ್ಷ್ಮಣ–ಹನುಮರ ಭಕ್ತಿಭಾವ, ಅವರಿಬ್ಬರ ಪರಾಕ್ರಮ, ಸೀತೆಯ ಪಾತಿವ್ರತ್ಯ ಇವುಗಳನ್ನೆಲ್ಲ ಕೊಂಡಾಡುತ್ತಾ ದೇವತೆಗಳು, ಋಷಿಗಳು ಎಲ್ಲರೂ ಸ್ವಸ್ಥಾನಕ್ಕೆ ಹಿಂತಿರುಗಿದರು.

ಮಾತಲಿ ಹೊರಟುಹೋದ ಮೇಲೆ ರಾಮ ಪಕ್ಕದಲ್ಲಿದ್ದ ಸುಗ್ರೀವನನ್ನು ಅಪ್ಪಿಕೊಂಡು "ಮಿತ್ರಾ! ನಿನ್ನ ಉಪಕಾರ ಮಹತ್ತಾದುದು. ನೀನು ಕೃತಕೃತ್ಯನಾದೆ" ಎಂದ. ನಂತರ ಲಕ್ಷ್ಮಣನ ಕಡೆಗೆ ತಿರುಗಿದಾಗ ಲಕ್ಷ್ಮಣ ರಾಮನಿಗೆ ನಮಸ್ಕರಿಸಿದ.

ವಿಭೀಷಣನನ್ನು ನೋಡಿದ ರಾಮ ಲಕ್ಷ್ಮಣನನ್ನು ಕುರಿತು, "ಲಕ್ಷ್ಮಣಾ! ಈಗಲೇ ನೀನು ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಸಿಂಹಾಸನದ ಮೇಲೆ ಕುಳ್ಳಿರಿಸಿ ಅಭಿಷೇಕ ಮಾಡಿ ಬಿಡು ಈ ವಿಭೀಷಣ ನಮ್ಮ ಭಕ್ತ, ಪ್ರಿಯನಾದವನು; ಅಲ್ಲದೆ ನಮಗೆ ಬಹಳ ಉಪಕಾರ ಮಾಡಿದಾನೆ. ಇವನು ಶೀಘ್ರವಾಗಿ ಲಂಕಾಧಿಪತಿಯಾಗುವುದನ್ನು ನಾ ಕಣ್ಣಾರೆ ನೋಡಬೇಕು. ಬೇಗ ಅಭಿಷೇಕ ಮಾಡು" ಎಂದ.

ರಾಮನ ಅಪ್ಪಣೆಯಂತೆ ಲಕ್ಷ್ಮಣ ವೇಗವಾಗಿ ಹೋಗುವ ವಾನರರ, ರಾಕ್ಷಸರ ಕೈಲಿ ಸಹಸ್ರಾರು ಸುವರ್ಣ ಘಟಗಳನ್ನು ಕೊಟ್ಟು ಕಳುಹಿಸಿದ. ಅವರು ಉತ್ತಮವಾದ ಸಮುದ್ರ ಹಾಗೂ ನದೀ ಜಲವನ್ನು ತುಂಬಿ ತಂದರು.

ಲಕ್ಷ್ಮೀ ಸಂಪನ್ನನಾದ ಲಕ್ಷ್ಮಣ ವಿಭೀಷಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನೇ ತನ್ನ ಅಮೃತ ಹಸ್ತದಿಂದ ಒಂದು ಸುವರ್ಣ ಘಟವನ್ನು ತೆಗೆದುಕೊಂಡು ರಾಜ್ಯಾಭೀಷೇಕವನ್ನು ಮಾಡಿದ. ಲಕ್ಷ್ಮಣ ಅಭೀಷೇಕ ಮಾಡಿದ ನಂತರ ವಾನರ ಹಾಗೂ ರಾಕ್ಷಸ ಪ್ರಮುಖರೂ ಅಭಿಷೇಕ ಮಾಡಿದರು.

ವೇದೋಕ್ತವಾದ ಕ್ರಮದಲ್ಲಿ ವಿಭೀಷಣ ಲಂಕೆಯ ರಾಜನಾದ. ಅರಸನಾದ ವಿಭೀಷಣನಿಗೆ ಲಂಕೆಯ ರಾಕ್ಷಸರು ನಾನಾ ವಿಧವಾದ ತಿನಿಸುಗಳನ್ನೂ, ಹೂವುಗಳನ್ನೂ; ಹಣ್ಣುಗಳನ್ನೂ ಅರ್ಪಿಸಿದರು. ವಿಭೀಷಣ ಅದನ್ನೆಲ್ಲ ರಾಮನಿಗೆ ಅರ್ಪಿಸಿದ, ಲಕ್ಷ್ಮಣನಿಗೂ ಆ ಮಂಗಳ ಕರವಾದ ವಸ್ತುಗಳನ್ನು ನೀವೆದಿಸಿದರು. ಪಟ್ಟಾಭೀಷೇಕ ಮಾಡಿಕೊಂಡ ನಂತರ ವಿಭೀಷಣ ಕಿರೀಟದಿಂದ ಮಂಡಿತವಾದ ತನ್ನ ಶಿರವನ್ನು ರಾಘವನ ಅಡಿಗಳಲ್ಲಿಟ್ಟು ಪ್ರಣಾಮ ಮಾಡಿದ. ರಾಮ ವಿಭೀಷಣನನ್ನು ಎತ್ತಿ ಆಲಿಂಗಿಸಿದ.

ವಿಭೀಷಣಗೆ ಪಟ್ಟಾಭಿಷೇಕ ಮಾಡಿಸಿದ ನಂತರ "ರಾಮ ಕೃತಕೃತ್ಯನಾದ" ಎಂದಿದಾರೆ ವಾಲ್ಮೀಕಿ. ರಾಮನಿಗೆ ತನ್ನನ್ನು ಶರಣುಬಂದವರನ್ನು ಕಾಪಾಡುವುದರಲ್ಲಿ ಅಷ್ಟು ಆಸಕ್ತಿ. ಮೊದಲು ಲಕ್ಷ್ಮಣನಿಂದ ಸಮುದ್ರ ಜಲವನ್ನು ತರಿಸಿ ಲಕ್ಷ್ಮಣನ ಕೈಯಿಂದಲೇ ಅಭಿಷೇಕ ಮಾಡಿಸಿದ. ಆಮೇಲೆ, ರಾವಣನು ಮೃತನಾದ ನಂತರವೂ ಲಕ್ಷ್ಮಣನನ್ನೇ ಪಟ್ಟಾಭಿಷೇಕ ಮಾಡುವಂತೆ ಹೇಳಿದ. ಇದಕ್ಕೆ ಮಹತ್ತಾದ ಕಾರಣವುಂಟು.

ವಿಭೀಷಣ ಲಕ್ಷ್ಮಣನಿಂದ ಕೂಡಿದ ರಾಮನಲ್ಲಿ ಶರಣಾಗತಿ ಮಾಡಿದ. ಲಕ್ಷ್ಮಣ ಆಚಾರ್ಯ. ಆಚಾರ್ಯನ ಅನುಗ್ರಹ ಲಭಿಸಿತು ವಿಭೀಷಣನಿಗೆ. ಲಕ್ಷ್ಮಣ ಲಕ್ಷ್ಮೀಸಂಪನ್ನ ಎಂದು ವಾಲ್ಮೀಕಿ ಬಹಳಸಲ ಹೇಳಿದಾರೆ. ಲಂಕೆಯನ್ನು ಮೊದಲು ಹನುಮಂತ ಸುಟ್ಟ. ಆ ಮೇಲೆ ವಾನರರೆಲ್ಲ ಸೇರಿ ಸುಟ್ಟುಹಾಕಿದರು. ವಿಭೀಷಣನಿಗೆ ಸರ್ವೈಶ್ವರ್ಯಯುಕ್ತವಾದ ಲಂಕೆಯನ್ನು ಕೊಡಬೇಕು

ಎಂಬ ಉದ್ದೇಶದಿಂದಲೇ ರಾಮ ಲಕ್ಷ್ಮಣನ ಕೈಯಿಂದ ವಿಭೀಷಣನಿಗೆ ಅಭಿಷೇಕ ಮಾಡಿಸಿದ.

ಆ ನಂತರ ಶ್ರೀರಾಮ ಸಮೀಪದಲ್ಲಿ ಕೈಮುಗಿದು ವಿನೀತಭಾವದಿಂದ ನಿಂತಿರುವ ಹನುಮಂತನನ್ನು ನೋಡಿ "ಹನುಮ್ಮ! ನೀನು ಲಂಕಾಧಿಪತಿಯಾದ ವಿಭೀಷಣನ ಆಜ್ಞೆಯನ್ನು ಪಡೆದು ಅಶೋಕವನಕ್ಕೆ ಹೋಗಿ ಅಲ್ಲಿರುವ ಸೀತೆಗೆ ನನ್ನ ಕುಶಲವನ್ನು ತಿಳಿಸು. ರಾವಣನನ್ನು ನಾನು ಸಂಹರಿಸಿದೆನೆಂದು ತಿಳಿಸು. ಸೀತೆಯ ಸಂದೇಶವನ್ನು ತೆಗೆದುಕೊಂಡು ಬಾ'' ಎಂದ.

ರಾಮನ ಮಾತಿನಂತೆ ಹನುಮಂತ ವಿಭೀಷಣನ ಅಪ್ಪಣೆಯನ್ನು ಪಡೆದು ಲಂಕೆಯನ್ನು ಹೊಕ್ಕ. ವಿಭೀಷಣನ ರಾಜ್ಯವಾಗಿದ್ದ ಲಂಕೆಯಲ್ಲಿ ಹನುಮಂತನನ್ನು ಎಲ್ಲ ನಿಶಾಚರರೂ ಪೂಜಿಸಿದರು. ಹನುಮಂತ ಅಶೋಕವನಕ್ಕೆ ಹೋಗಿ ಅಲ್ಲಿ ರಾಕ್ಷಸಿಯರ ಮಧ್ಯದಲ್ಲಿ ಕುಳಿತಿದ್ದ ಸೀತೆಯನ್ನು ಕಂಡ. ಶಾಂತವಾಗಿ ವಿನೀತ ಬಾವದಿಂದ ಪ್ರಣಾಮಮಾಡಿ ``ತಾಯೇ! ಶ್ರೀರಾಮನು ಲಕ್ಷ್ಮಣ, ಸುಗ್ರೀವ ಸಹಿತನಾಗಿ ಕುಶಲನಾಗಿದಾನೆ. ರಾವಣನನ್ನು ರಣದಲ್ಲಿ ಕೊಂದು ಸಫಲ ಮನೋರಥನಾಗಿದ್ದಾನೆ, ನಿಮ್ಮ ಕುಶಲವನ್ನು ಕೇಳಿಬರುವಂತೆ ಆಜ್ಞಾಪಿಸಿದಾನೆ ದೇವಿ! ರಾಮಚಂದ್ರನು ಶತ್ರುವನ್ನು ನಿಗ್ರಹಿಸಿದ್ದಾನೆ. ಇನ್ನು ಶೋಕವನ್ನು ಬಿಟ್ಟು ಧೈರ್ಯವನ್ನು ಪಡೆಯಿರಿ. ಈಗ, ಲಂಕಾರಾಜ್ಯ ರಾಮನ ಆಧೀನವಾಗಿದ್ದು ರಾವಣನ ತಮ್ಮನಾದ ವಿಭೀಷಣ ಅರಸನಾಗಿದ್ದಾನೆ. ನೀವು ವಿಭೀಷಣನಿಂದ ಪಾಲಿತವಾದ ಲಂಕಾರಾಜ್ಯದಲ್ಲಿ ಯಾವ ಭೀತಿಯೂ ಇಲ್ಲದೆ ಸ್ವಗೃಹದಲ್ಲಿರುವಂತೆ ಧೈರ್ಯವಾಗಿರಿ. ಭಕ್ತನಾದ ವಿಭೀಷಣನೂ ನಿಮ್ಮ ದರ್ಶನಾಕಾಂಕ್ಷಿಯಾಗಿ ಬರುತ್ತಿದಾನೆ" ಎಂದ.

ಸೀತೆಗೆ ಅಮಿತಾನಂದವಾಯಿತು ಮಾತೇ ಹೊರಡಲಿಲ್ಲ. ಸುಮ್ಮನಿದ್ದಳು. ವೈದೇಹಿ ಉತ್ತರ ಹೇಳದೆ ಇರುವುದನ್ನು ಕಂಡ ಹನುಮಂತ, "ದೇವಿ! ನಾನು ಇಷ್ಟು ಹೊತ್ತು ಮಾತಾಡಿದರೂ. ರಾಮನ ಕುಶಲವನ್ನು ಹೇಳಿದರೂ ನೀವು ಸುಮ್ಮನೆ ಇರಲು ಕಾರಣವೇನು? ಏಕೆ ಮಾತಾಡಲೊಲ್ಲಿರಿ?" ಎಂದ. ಆ ಸೀತೆ ``ಹನುಮ್ಮ ನೀನು ಹೇಳಿದ ಮಾತು ಕಿವಿಯಲ್ಲಿ ಅಮೃತವನ್ನು ಸಿಂಪಡಿಸಿದಂತೆ ಆಗಿದೆ. ಆ ಆನಂದಾತಿರೇಕದಿಂದ ಮಾತು ಹೊರಡಲಿಲ್ಲ ಅಷ್ಟೆ. ಆಂಜನೇಯ! ನೀನು ಎಂಥ ಮಹತ್ಕಾರ್ಯ ಮಾಡಿರುವಿ? ಇದಕ್ಕೆ ಪ್ರತಿಯಾಗಿ ನಾನು ಏನು ತಾನೇ ಮಾಡಲಿ? ಹಿರಣ್ಯವನ್ನೋ, ರತ್ನವನ್ನೋ, ಭೂಮಿಯನ್ನೋ ಬಹುಮಾನವಾಗಿ ಕೊಡಲೇ? ಊಹೂಂ! ನೀನು ಹೇಳಿದ ಈ ಮಾತಿಗೆ ತಕ್ಕ ಬಹುಮಾನ ಇಲ್ಲವೇ ಇಲ್ಲ. ಮೂರೂ ಲೋಕದ ಆಧಿಪತ್ಯವನ್ನೇ ಕೊಟ್ಟರೂ ಸಹ ನಿನ್ನ ಮಾತಿಗೆ ಅದು ಸರಿಯಾಗದು. ಅಂಜನಾ ಕುಮಾರ! ನನಗೆ ಎಂಥ ಒಳ್ಳೆಯದನ್ನು ಮಾಡಿರುವಿ. ಜೀವದಾನವನ್ನು ಮಾಡಿದ ಮಹಾನುಭಾವ ನೀನು ಹನುಮ್ಮ! ನೀನು ಚಿರಾಯುವಾಗು. ನಿನಗೆ ಸನ್ಮಂಗಳವುಂಟಾಗಲಿ'' ಎಂದು ಮನತುಂಬಿ ಹರಸಿದಳು. ಹನುಮಂತ ವಿನಯವಾಗಿ ದೇವಿಗೆ ವಂದಿಸಿ "ಅಮ್ಮಾ! ನೀನು ನನಗೆ ವರ ಕೊಡಬೇಕು.'' ಎಂದ.

"ವರವೆ ಹನುಮ! ಏನು ಬೇಕು? ಯಾವ ವರ ಬೇಕು?" ಎಂದ.

"ಅಮ್ಮಾ! ಈ ಪಾಪಿನಿಯಾದ ರಾಕ್ಷಸಿಯರು ನಿಮಗೆ ಇಷ್ಟು ಕಾಲದವರೆಗೆ ಅದೆಷ್ಟು ಕಷ್ಟ ಕೊಟ್ಟಿದ್ದಾರೆ. ನಿಮ್ಮನ್ನು ಎಷ್ಟೊಂದು ಹಿಂಸಿಸಿದ್ದಾರೆ. ಈಗ ಅದನ್ನೆಲ್ಲ ನಾನು ಮರೆಯಲಾರೆ. ಈ ಕ್ರೂರರಾದ ರಾಕ್ಷಸಿಯರನ್ನು ಈಗಲೇ ಕೊಂದುಹಾಕುತ್ತೇನೆ. ನಿಮ್ಮನ್ನು ತಿವಿಯುವಂತೆ

ತಿನ್ನುವಂತ, ಕಚ್ಚುವಂತೆ ಬರುತ್ತಿದ್ದರಲ್ಲವೆ ? ಅವರನ್ನೂ ನಾನು ಹಾಗೆಯೇ ಕಚ್ಚಿ, ತಿವಿದು ಕೊಂದು ಹಾಕುತ್ತೇನೆ. ಈ ರಕ್ಕಸಿಯರನ್ನು ಕೊಲ್ಲುವುದಕ್ಕೆ ಅನುಮತಿ ಕೊಡಿ ಇದೇ ನನಗೆ ಬಹಳ ಇಷ್ಟವಾದ ವರ" ಎಂದ ಹನುಮಂತ,

ಆಗ, ಸೀತೆ "ಹನುಮನ್ ! ಪಾಪ ! ಈ ರಾಕ್ಷಸಿಯರು ಏನು ಮಾಡಿಯಾರು ! ಅವರು ತಮ್ಮ ಸ್ವಾಮಿಯ ಆಜ್ಞೆಯನ್ನು ಪರಿಪಾಲಿಸಿದರು ಅಷ್ಟೆ. ರಾವಣನ ಅನುಯಾಯಿಗಳಾದ ಇವರು ಕಾರಣರಲ್ಲ. ನನ್ನ ಪೂರ್ವಜನ್ಮದ ಪಾಪಫಲವೇ ಕಾರಣ. ಇವರನ್ನು ನಿಂದಿಸಿ ಪ್ರಯೋಜನ ಏನು ? ಈಗ ನನ್ನನ್ನು ಅವರೇನೂ ಮಾಡುತ್ತಿಲ್ಲ ನೋಡು. ಅವರಾಗಿ ನನ್ನನ್ನು ಹಿಂಸಿಸಲಿಲ್ಲ. ಆದ್ದರಿಂದ ಅವರನ್ನು ಕೊಲ್ಲುವುದು ಧರ್ಮವಲ್ಲ.

"ಹನುಮನ್, ಸಾಧುಗಳಾದವರು ತಮ್ಮ ಸದಾಚಾರವನ್ನೇ ಅನವರತ ಕಾಯ್ದುಕೊಳ್ಳುತ್ತಾರೆಯೇ ವಿನಾ ಪಾಪಿಗಳ ಪಾಪ ಕರ್ಮಕ್ಕಾಗಿ ಅವರಂತೆಯೇ ಪ್ರತೀಕಾರ ಮಾಡುವ ಬುದ್ಧಿಯನ್ನು ಹೊಂದುವುದಿಲ್ಲ.

ಸಾಧುಗಳಾದವರಿಗೆ ಉತ್ತಮ ಚಾರಿತ್ರ್ಯವೇ ಭೂಷಣ.

**ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ ।**

**ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ ॥**

"ಅಂಜನಾಸುತ. ಇವರು ಪಾಪಿಗಳಾಗಿರಲಿ. ಒಳ್ಳೆಯವರಾಗಿರಲಿ ವಧೆಗೆ ಅರ್ಹರೇ ಆಗಿರಲಿ, ಉತ್ತಮ ಸ್ವಭಾವವುಳ್ಳ ಸತ್ಪುರುಷರು ಅವರೆಲ್ಲರನ್ನೂ ಕರುಣೆಯಿಂದಲೇ ಕಾಣುತ್ತಾರೆ. ಸಾಧುಗಳಿಗೆ ಪಾಪಿಗಳು, ಪುಣ್ಯವಂತರು ಎಂಬ ಭೇಧ ಇರುವುದಿಲ್ಲ. ಏಕೆ ಗೊತ್ತೆ ? ಹನುಮನ್ ! ಪ್ರಪಂಚದಲ್ಲಿ ಪಾಪಮಾಡದೆ ಇರುವವರೇ ಇಲ್ಲ. ಎಲ್ಲರೂ ಒಂದಲ್ಲ ಒಂದು ತಪ್ಪನ್ನು ಮಾಡಿಯೇ ಇದ್ದಾರೆ. ನನನ್ನೇ ನೋಡು. ಲಕ್ಷ್ಮಣನು "ಬೇಡ" ಎಂದರೂ ಕೇಳದೆ ಮಾಯಾ ಜಿಂಕೆಯನ್ನು ಬಯಸಿದೆ. ಆ ತಪ್ಪಿಗೆ ಎಷ್ಟೊಂದು ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಆದ್ದರಿಂದ ತಪ್ಪು ಮಾಡದವರೇ ಇಲ್ಲ. ಅಲ್ಲದೆ ಹಿಂಸೆಯನ್ನೇ ಮಾಡುವವರನ್ನೂ. ಸದಾ ಪಾಪವನ್ನೇ ಮಾಡುತ್ತಿರುವವರನ್ನೂ ಸಹ ಕ್ಷಮಿಸಬೇಕು. ಅವರಿಗೂ ಅಮಂಗಳವನ್ನು ಕೋರಬಾರದು. ಪಾಪ ! ಈ ರಾಕ್ಷಸಿಯರು ರಾವಣನ ಅಪ್ಪಣೆಯಂತೆ ನಡೆದುಕೊಂಡರು. ರಾವಣ ತೀರಿದ. ಈಗ ನೋಡು, ಅವರು ನನ್ನನ್ನು ಏನೂ ಮಾಡುತ್ತಿಲ್ಲ. ಆದ್ದರಿಂದ, ಇವರನ್ನು ಕೊಲ್ಲುವುದು ಬೇಡ. ಅದು ಧರ್ಮವಲ್ಲ" ಎಂದಳು.

ಈ ಪ್ರಕರಣವನ್ನು ಶ್ರೀಪರಾಶರಭಟ್ಟರಂಥ ಮಹಾಜ್ಞಾನಿಗಳು ಆಳವಾಗಿ ಅನುಭವಿಸಿದ್ದಾರೆ.

ಕರುಣೆಯೇ ಮೂರ್ತಿವತ್ತಂತೆ ದೇವಿ ಇದಾಳೆ. ಅಬ್ಬ ! ತನಗೆ ಅಪಕಾರ ಮಾಡಿದವರಿಗೂ ತಾವಾಗಿ "ರಕ್ಷಿಸಿರಿ" ಎಂದು ಕೇಳದೆ ಇರುವಾಗಲೂ ಸಹ ಅವರನ್ನು ಕಾಪಾಡಿದ ಸೀತೆಯ ಹೃದಯ ವೈಶಾಲ್ಯ, ದಯೆ, ಅಸದೃಶವಾದುದು. ಎಷ್ಟೆಂದರೂ ಸೀತೆ ಜಗನ್ಮಾತೆ. ತಾಯಿಗೆ ಮಕ್ಕಳಲ್ಲಿ ಕರುಣೆ ಹೆಚ್ಚು. ದುಷ್ಟರಾಗಲಿ, ಪಾಪಿಗಳಾಗಲಿ. ಮಕ್ಕಳಿಗೆ ಅಮಂಗಳವಾಗಬಾರದು'' ಎಂದೇ ಬಯಸುತ್ತಾಳೆ ತಾಯಿ. ಅದರಂತೆಯೇ ಸೀತೆ ರಾಕ್ಷಸಿಯರನ್ನು ರಕ್ಷಿಸಿದಳು. ಜನಕ ಮಹಾರಾಜ ಸೀತಾ ಕಲ್ಯಾಣದ ಸಮಯದಲ್ಲಿ

ಇಯಂ ಸೀತಾ ಮಮಸುತಾ ಸಹಧರ್ಮಚರೀ ತವ

ಎಂದು ಸೀತೆಯ ಕೈಯನ್ನು ರಾಮನ ಕೈಯಲ್ಲಿಟ್ಟು ಹೇಳಿದರು. ರಾಮನ ಧರ್ಮ ಶರಣಾಗತರನ್ನು ರಕ್ಷಿಸುವುದು ಎಂದರೆ ರಾಮನ ಧರ್ಮ ಪತ್ನಿಯಾದ ಸೀತೆ ಶರಣಾಗತರಾಗದೆ ಇರುವವರನ್ನೂ ಅವರು "ರಕ್ಷಿಸು" ಎಂದು ಕೇಳದೆ ಇರುವಾಗಲೂ ರಕ್ಷಿಸಿದಳು.

ವಿಭೀಷಣ ಶರಣಾಗತನಾದ ಮೇಲೆ ರಾಮನು ಎಲ್ಲ ವಾನರರೊಂದಿಗೆ ಚರ್ಚೆ ಮಾಡಿ ಅಭಯವನ್ನು ಕೊಟ್ಟ. ಆದರೆ ದೇವಿಯಾದ ಸೀತೆಯಾದರೋ ರಾಕ್ಷಸಿಯರು ತನಗೆ ಸಹಿಸಲಶಕ್ಯವಾದ ತೊಂದರೆ ಕೊಟ್ಟಿರುವಾಗಲೂ ಅವರು ಸೀತೆಯನ್ನು "ಕಾಪಾಡಿ" ಎಂದು ಪ್ರಾರ್ಥಿಸದೇ ಇದ್ದಾ ರಕ್ಷಿಸಿದಳು. ಇದರಿಂದ ರಾಮನ ಗೋಷ್ಠಿಯ ಪ್ರಭಾವಕ್ಕಿಂತ ದೇವಿಯ ಗೋಷ್ಠಿಯ ಪ್ರಭಾವವೇ ಒಂದು ಕೈ ಮಿಗಿಲು ಎಂದು ಆಚಾರ್ಯರು ಅನುಭವಿಸುತ್ತಾರೆ.

ಸೀತ ಹೇಳಿದ ಮಾತಿನಿಂದ ಹನುಮಂತ ಪ್ರಸನ್ನನಾದ. "ದೇವಿ ನಿಮ್ಮ ಅಂತಸ್ತಿಗೆ ತಕ್ಕ ಮಾತನ್ನೇ ಆಡಿದಿರಿ" ಎಂದು ನಮಸ್ಕರಿಸಿದ.

"ಅಮ್ಮಾ! ರಾಘವನಿಗೆ ನಿಮ್ಮ ಸಂದೇಶ ಕೊಡಿ'' ಎಂದ. ಸೀತೆ "ಹನುಮಂತ ! ಭಕ್ತವತ್ಸಲನಾದ ನನ್ನ ಸ್ವಾಮಿಯನ್ನು ನೋಡ ಬಯಸುತ್ತೇನೆ" ಎಂದಳು. "ಹಾಗೆಯೇ ಆಗಲಿ ತಾಯೇ ! ನೀವು ಪೂರ್ಣ ಚಂದ್ರನಂತೆ ಇರುವ ಲಕ್ಷ್ಮಣ ಸಹಿತನಾದ ರಾಮನನ್ನು ಶೀಘ್ರದಲ್ಲೇ ಕಾಣುವಿರಿ ಎಂದು ಹೇಳಿ ಹನುಮಂತ ಸೀತೆಗೆ ನಮಸ್ಕರಿಸಿ ರಾಮನ ಬಳಿಗೆ ಬಂದು ಸೀತೆಯ ಸಂದೇಶವನ್ನು ತಿಳಿಸಿದ.

"ಶೋಕಿಸುತ್ತಿದ್ದ ಸೀತೆ ನಿನ್ನನ್ನು ನೋಡಬಯಸುತ್ತಾಳೆ" ಎಂಬ ಹನುಮಂತನ ಮಾತನ್ನು ಕೇಳಿದ ರಾಮ ಇದ್ದಕ್ಕಿದ್ದಂತೆ ಧ್ಯಾನಸ್ಥನಾದ. ಅನಂತರ ದೀರ್ಘವಾದ ನಿಟ್ಟುಸಿರನ್ನು ಬಿಟ್ಟು "ವಿಭೀಷಣ ! ಸೀತೆಯನ್ನು ಮಂಗಳಸ್ನಾನ ಮಾಡಿ ಸರ್ವಾಲಂಕಾರ ಭೂಷಿತಳಾಗಿ ಬರುವಂತೆ ಹೇಳು. ಅದಕ್ಕೆ ತಕ್ಕ ಏರ್ಪಾಡು ಮಾಡು" ಎಂದ.

ವಿಭೀಷಣ ಸೀತೆಯ ಸಮೀಪಕ್ಕೆ ಹೋಗಿ ತಲೆಯ ಮೇಲೆ ಎರಡು ಕೈಗಳನ್ನೂ ಜೋಡಿಸಿ "ದೇವಿ ! ನೀವು ಮಂಗಳ ಸ್ನಾನ ಮಾಡಿ ಸರ್ವಾಲಂಕಾರಗಳಿಂದ ಶೋಭಿತರಾಗಿ ಬರುವಂತೆ ನಿಮ್ಮ ಪತಿ ಆಜ್ಞಾಪಿಸಿದ್ದಾರೆ'' ಎಂದ. ಆಗ ''ಸೀತೆ ರಾಕ್ಷಸಾಧಿಪ ! ನಾನು ಹೀಗೆಯೇ ಅಲಂಕಾರ ವಿಲ್ಲದೆಯೇ ಮೊದಲು ರಾಮನನ್ನು ಅಗಲಿದಾಗ ಹೇಗೆ ಇದ್ದೆನೋ ಹಾಗೆಯೇ ನೋಡಬಯಸುತ್ತೇನೆ" ಎಂದಳು.

ಸೀತೆ ಹೀಗೆನ್ನಲು ಬಲವಾದ ಕಾರಣವಿದೆ. "ಪತಿವ್ರತೆಯಾದ ಜಾನಕಿಗೆ ನಾನು ಈ ಒಂದು ವರ್ಷ ಕಾಲದಲ್ಲಿ ನನ್ನ ಪಾತಿವ್ರತ್ಯವನ್ನು ಹೇಗೆ ಕಾಪಾಡಿಕೊಂಡಿದ್ದೇನೆ ! ಅಲ್ಲದೆ ಈವರೆಗೆ ಯಾವ ಸ್ಥಿತಿಯಲ್ಲಿದ್ದೆ ? ಎಂಬುದನ್ನು ಪತಿ ಕಾಣಲಿ ಎಂಬ ಆಸೆ. ಬುದ್ಧಿಮತಿಯಾದ ಸೀತೆ ಊಹಿಸಿದಳು. ಚೆನ್ನಾಗಿ ಅಲಂಕರಿಸಿಕೊಂಡು ಹೋದರೆ ರಾಮನಿಗೆ ಎಲ್ಲಿ ತನ್ನ ಮೇಲೆ ಸಂಶಯ ಬರುತ್ತದೋ" ಎಂದು ಅಂಜಿ "ಅಸ್ನಾತಾ ದ್ರಷ್ಟು ಮಿಚ್ಛಾಮಿ'' "ಸ್ನಾನ ಮಾಡದೆ ಹೀಗೇ ನಾನು ರಾಮನನ್ನು ನೋಡ ಬಯಸುತ್ತೇನೆ" ಎಂದಳು,

ವಿಭೀಷಣನಿಗೋ ಸೀತೆ ಅಲಂಕೃತಳಾಗಬೇಕು ಎಂಬ ಅಭಿಪ್ರಾಯ. ಆತುರ, ರಾವಣನಿಗೆ

ಹೇಳುವಾಗೆಲ್ಲ "ಸರ್ವಾಭರಣಗಳು, ಗಂಧಮಾಲ್ಯಗಳು, ವಸ್ತ್ರಗಳು ಇವೆಲ್ಲವನ್ನೂ ತೆಗೆದುಕೊಂಡು ಸೀತೆಯನ್ನು ಅದರ ಜೊತೆಯಲ್ಲಿ ರಾಮನಿಗೆ ಒಪ್ಪಿಸು" ಎಂದು ಹೇಳುತ್ತಿದ್ದ. ಆದರೂ ರಾವಣ ಹಾಗೆ ಮಾಡಲಿಲ್ಲ. ವಿಭೀಷಣನ ಇಂಗಿತವನ್ನು ಅರಿತ ರಾಮ "ಸೀತೆಯನ್ನು ಅಲಂಕರಿಸಿ ಕರೆದುಕೊಂಡು ಬಾ" ಎಂದನೋ ಎಂಬಂತೆ ಇತ್ತು. ವಿಭೀಷಣ ಮತ್ತೆ ಕೈಮುಗಿದು "ದೇವಿ ! ನಿಮ್ಮ ಸ್ವಾಮಿ ಹಾಗೂ ಪತಿಯ ಆಜ್ಞೆಯಾಗಿದೆ. ಅದರಂತೆ ತಾವು ಸ್ನಾನ ಮಾಡಿ ಅಲಂಕರಿಸಿಕೊಂಡೇ ಬರಬೇಕು" ಎಂದ. ಪತಿಭಕ್ತೆ ಸೀತೆ ಅಂತೆಯೆ ಪತಿಗೆ ಸಂತೋಷವನ್ನುಂಟು ಮಾಡುವ ಸಲುವಾಗಿ, ಸ್ವಾಮಿಯ ಅಪ್ಪಣೆಯನ್ನು ಮೀರಲಾರದೆ ಸ್ನಾನ ಮಾಡಿ ಅಲಂಕೃತಳಾಗಿ ದಿವ್ಯವಾದ ಮೇನೆಯಲ್ಲಿ ಕುಳಿತು ರಾಮನನ್ನು ಕಾಣಲು ಬಂದಳು. "ಸೀತೆ ಬರುತ್ತಿದ್ದಾಳೆ ! ಎಂಬ ಸಮಾಚಾರ ಹಬ್ಬಿತು. ವಾನರರೆಲ್ಲ ಅದುವರೆಗೆ ತಾವು ಯಾರಿಗಾಗಿ ಕಾದಿದ್ದರೋ ಆ ಸೀತೆಯನ್ನು ಕಾಣಲು ನುಗ್ಗಿದರು. ಆಗ ವಿಭೀಷಣ ಮೇಲೆ ನುಗ್ಗುತ್ತಿದ್ದ ವಾನರರನ್ನು ತಡೆಯುವಂತೆ ಆಜ್ಞಾಪಿಸಿದ. ವಿಭೀಷಣನ ಅನುಚರರಾದ ರಾಕ್ಷಸರು ವಾನರರನ್ನು ದಂಡದಿಂದ ಘಾತಿಸಿದರು. ಇದನ್ನು ನೋಡುತ್ತಿದ್ದ ರಾಮ ಕೆಂಪೇರಿದ ಕಣ್ಣುಗಳಿಂದ ಕೂಡಿದವನಾಗಿ ಕಠೋರವಾದ ವಾಣಿಯಿಂದ "ವಿಭೀಷಣಾ ! ನನ್ನ ಸ್ವಜನರನ್ನು ಹೀಗೇಕೆ ಹೊಡೆಯಬೇಕು ! ಇದು ಸರಿಯಲ್ಲ. ಸೀತೆಗೇಕೆ ಇಷ್ಟೊಂದು ವೈಭವ ! ಸ್ತ್ರೀಯಾದವಳು ದುಃಖ ಕಾಲದಲ್ಲಿ, ವಿವಾಹ ಕಾಲದಲ್ಲಿ ಪತಿ ಸಮೀಪದಲ್ಲಿರುವಾಗ ಕಾಣಿಸಿಕೊಳ್ಳಬಹುದು. ನನ್ನ ಸಾನ್ನಿಧ್ಯದಲ್ಲಿ ಇವಳಿಗೇಕೆ ಅವಗುಂಠನ ? ಎಲ್ಲರೂ ಕಾಣುವಂತೆ ನಡೆದು ಬರಲಿ" ಎಂದ.

ರಾಮನ ಕೆಂಪೇರಿದ ಕಣ್ಣುಗಳು, ಕಠೋರವಾದ ವಾಣಿ ಇವುಗಳನ್ನು ನೋಡಿ ಲಕ್ಷ್ಮಣ, ಆಂಜನೇಯ, ಸುಗ್ರೀವ, ವಿಭೀಷಣ ಎಲ್ಲರೂ ನಡುಗಿದರು. ಮುಂದೆ ಒದಗಲಿರುವ ವಿಪತ್ತಿಗೆ ಇದು ನಾಂದಿ ಎಂದು ಊಹಿಸಿದರು.

ಸೀತೆ ಮೇನೆಯಿಂದ ಕೆಳಗಿಳಿದು ರಾಮನ ಸಮೀಪಕ್ಕೆ ನಡೆದು ಬಂದಳು. ಎಲ್ಲರೂ ನೆರೆದಿದ್ದ ಆ ಗುಂಪಿನಲ್ಲಿ ತಲೆಯೆತ್ತಿ ನೋಡಲು ನಾಚಿ ಓರೆಗಣ್ಣಿನಿಂದ ಒಮ್ಮೆ ರಾಮನ ಮುಖವನ್ನು ನೋಡಿ ಗದ್ಗದ ಕಂಠದಿಂದ ಮೆಲ್ಲಗೆ "ಆರ್ಯಪುತ್ರ" ಎಂದು ಮಾತ್ರ ಹೇಳಿ ತಲೆ ತಗ್ಗಿಸಿ ನಿಂತಳು. ಸೀತೆಯನ್ನು ನೋಡಿದ ರಾಮನಿಗೆ ಕೋಪ ಉಕ್ಕೇರುತ್ತಿತ್ತು. "ಸೀತೆ ! ಶತ್ರುವನ್ನು ಜಯಿಸಿ ಕೃತಕೃತ್ಯನಾದೆ. ನಿನಗಾಗಿ ನಾನು ಯುದ್ಧ ಮಾಡಲಿಲ್ಲ. ಇಕ್ಷ್ವಾಕು ವಂಶದವರು ಬಲಹೀನರು, ಸತ್ವರಹಿತರು ಎಂಬ ಅಪಖ್ಯಾತಿಯು ಬಂದೀತು ಎಂದು ಯುದ್ಧ ಮಾಡಿದೆ. ರಾವಣನನ್ನು ಕೊಂದದ್ದಾಯಿತು. ನನ್ನ ಪ್ರತಿಜ್ಞೆ ಪೂರ್ಣವಾಯಿತು. ಇನ್ನು ನೀನು ನಿನ್ನ ಇಷ್ಟಬಂದ ಕಡೆ ಹೋಗಬಹುದು. ಲಕ್ಷ್ಮಣ, ಭರತ, ಸುಗ್ರೀವ, ವಿಭೀಷಣರಿದ್ದಾರೆ. ಯಾರ ಬಳಿಯಲ್ಲಾದರೂ ನೀನಿರಬಹುದು. ಪರಪುರುಷನಿಂದ ಸ್ಪರ್ಶಿಸಲ್ಪಟ್ಟಿರುವೆ. ಪರಪುರುಷ ನಿನ್ನನ್ನು ನೋಡಿದ್ದಾನೆ. ಪರಪುರುಷನ ಗೃಹದಲ್ಲಿ ಒಂದು ವರ್ಷ ವಾಸಿಸಿರುವೆ.

**ಪ್ರಾಪ್ತ ಚಾರಿತ್ರ್ಯ ಸಂದೇಹ ಮಮ ಪ್ರತಿಮುಖೇ ಸ್ಥಿತಾ ।**
**ದೀಪೋ ನೇತ್ರಾತುರಸ್ಯೇವ ಪ್ರತಿಕೂಲಾಸಿ ಮೇ ದೃಢಾ॥**

ನಿನ್ನ ಚಾರಿತ್ರ್ಯದ ಬಗ್ಗೆ ನನಗೆ ಸಂದೇಹವುಂಟಾಗಿದೆ. ಕಣ್ಣು ಬೇನೆಯುಳ್ಳವನಿಗೆ ಇದಿರಿಗಿರುವ ದೀಪ ಹೇಗೆ ಸಹಿಸುವುದಿಲ್ಲವೋ ಹಾಗೆ ನನಗೆ ನನ್ನ ಇದುರಿನಲ್ಲಿ ನಿಂತಿರುವ ನೀನು ರುಚಿಸು

ತ್ತಿಲ್ಲ. ನಿನ್ನ ಇಷ್ಟ ಬಂದ ಕಡೆಗೆ ಹೋಗು" ಎಂದ.

ಹಿಂದೆ ಸೀತೆ ಭಕ್ತನಾದ ಲಕ್ಷ್ಮಣನನ್ನು ಕ್ರೂರ ವಚನಗಳಿಂದ ನೋಯಿಸಿದ್ದಳು. ಈಗ ಅಂಥದೇ ವಚನಗಳಿಂದ ಸಂಕಟಪಡುವ ಸ್ಥಿತಿಯನ್ನು ಪಡೆದಳು. ಭಾಗವತಾಪಚಾರ ತಕ್ಕ ಫಲ ಕೊಟ್ಟೇ ತೀರುತ್ತದೆ. ಕಾದ ಸೀಸವನ್ನು ಕಿವಿಯಲ್ಲಿ ಸುರಿದಂತೆ ರಾಮನ ಕಟು ವಚನಗಳು ಸೀತೆಯ ಕಿವಿಯನ್ನು ಹೊಕ್ಕು ಹೃದಯವನ್ನು ಇರಿದವು. ಸದಾ ಪ್ರಿಯಕರನಾದ ಪತಿಯ ಹಿತವಚನಗಳನ್ನೇ ಕೇಳುತ್ತಿದ್ದ ಸೀತೆ ಈಗ ಅಪ್ರಿಯ ವಚನಗಳನ್ನು ಪ್ರಿಯನ ಬಾಯಿಂದ ಕೇಳಿ ಧಾರಾಕಾರವಾಗಿ ಕಣ್ಣೀರನ್ನು ಸುರಿಸುತ್ತಾ ಅಳತೊಡಗಿದಳು. ರಾಮನ ಮಾತುಗಳನ್ನು ಕೇಳಿದ ಸೀತೆ ವ್ಯಥೆಯಿಂದ 'ವೀರಶ್ರೇಷ್ಠ ! ನಿಮ್ಮ ಬಾಯಿಂದ ಇಂಥ ಕಠೋರವಾದ ಅನುಚಿತವಾದ ಮಾತುಗಳು ಬರಬಾರದು. ಸಾಮಾನ್ಯನಾದ ಪ್ರಾಕೃತ ಮನುಷ್ಯ ಪ್ರಾಕೃತ ಸ್ತ್ರೀಯನ್ನು ಕುರಿತು ಹೇಳುವಂತೆ ನೀವು ನನ್ನನ್ನು ಕಟುವಚನಗಳಿಂದ ನೋಯಿಸುತ್ತಿದ್ದೀರಿ, ಮಹಾ ಬಾಹು ! ನೀವು ತಿಳಿದಿರುವಂತೆ ನಾನಿಲ್ಲ. ನಾನು ಶುದ್ಧಳು. ಪವಿತ್ರಳು. ಇದನ್ನು ಸ್ಥಾಪಿಸಲುಯಾವ ಶಪಥವನ್ನಾದರೂ ಮಾಡಲು ಸಿದ್ಧಳಾಗಿದ್ದೇನೆ. ರಾವಣನಿಂದ ಸ್ಪರ್ಶಿಸಲ್ಪಟ್ಟಿದ್ದೇನೆ ಎಂದಿರಿ. ರಾವಣ ನನ್ನನ್ನು ಮುಟ್ಟಿದ ನಿಜ ಆದರೆ ಅಬಲೆಯಾದ ನಾನು ನನ್ನನ್ನು ರಕ್ಷಿಸಿಕೊಳ್ಳಲಾರದ ಸ್ಥಿತಿಯಲ್ಲಿದ್ದೆ. ಮನಸ್ಸು ನನ್ನ ವಶದಲ್ಲಿದೆ. ಈ ಹೃದಯ, ಮನಸ್ಸು ನಿನಗೆ ಸಮರ್ಪಿತ. ನನ್ನ ಹೃದಯ ಸಿಂಹಾಸನದಲ್ಲಿ ನೀವು ವಿರಾಜಮಾನವಾಗಿದ್ದೀರಿ. ಅದು ಪರಿಶುದ್ಧವಾಗಿದೆ ! ಎಷ್ಟೋ ವರ್ಷಗಳು ನಾವಿಬ್ಬರೂ ಒಟ್ಟಿಗೆ ಓಡಾಡಿದ್ದೇವೆ. ಇಷ್ಟು ವರ್ಷಗಳು ಜೊತೆಯಲ್ಲಿದ್ದೂ ನೀವು ನನ್ನ ಶೀಲ ಸ್ವಭಾವವನ್ನು ಅರ್ಥ ಮಾಡಿಕೊಳ್ಳದೆ ಸಾಮಾನ್ಯ ಸ್ತ್ರೀಯನ್ನು ಕಾಣುವಂತೆ ನನ್ನನ್ನು ನೋಡುತ್ತಿರುವಿರಲ್ಲ ಸರಿ ! ಇಷ್ಟು ದೂರ ಬಂದು ಇಷ್ಟೊಂದು ಕಷ್ಟವೇಕೆ ಪಡಬೇಕಾಗಿತ್ತು. ಹನುಮಂತನ ಮೂಲಕವಾಗಿಯೇ ಆಗಲೇ ಈ ಮಾತನ್ನು ಹೇಳಿ ಕಳುಹಿಸಿದ್ದಿದ್ದರೆ ಆಗಲೇ ನಾನು ಪ್ರಾಣ ಕಳೆದುಕೊಳ್ಳುತ್ತಿದ್ದೆ. ಇಷ್ಟು ದೂರ ಬಂದು ಯುದ್ಧ ಮಾಡುವ ಕಷ್ಟವೇ ಇರುತ್ತಿರಲಿಲ್ಲ. ಕೀಳುಮಟ್ಟದ ಹೆಂಗಸರ ಶೀಲವನ್ನು ಶಂಕಿಸುವಂತೆ ನೀವು ನನ್ನ ಶೀಲವನ್ನು ಶಂಕಿಸುತ್ತಿದ್ದೀರಿ. ನಾನು ಸಾಮಾನ್ಯ ಸ್ತ್ರೀಯಲ್ಲ. ಜನಕಮಹಾರಾಜನು ಯಜ್ಞಾರ್ಥವಾಗಿ ಭೂಮಿಯನ್ನು ಶೋಧಿಸುತ್ತಿರುವಾಗ ದೊರಕಿದವಳು. ಆದ್ದರಿಂದಲೇ ನನ್ನನ್ನು "ಸೀತೆ" ಎನ್ನುತ್ತಾರೆ. ಪ್ರಾಕೃತರಂತೆ ಗರ್ಭದಿಂದ ಜನಿಸಿದವಳಲ್ಲ "ಅಯೋನಿಜೆ" ಎನಿಸಿದವಳು. ನನ್ನ ಶೀಲವನ್ನು ನೀವು ಸಂದೇಹಿಸುವುದು ಸರ್ವಥಾ ಯುಕ್ತವಲ್ಲ.

ನನ್ನನ್ನು ಹೊಸದಾಗಿ ಕಂಡಿಲ್ಲ ನೀವು. ಬಾಲ್ಯದಲ್ಲೇ ನನ್ನ ಕೈ ಹಿಡಿದಿರಿ. ಅಯೋಧ್ಯೆಯಲ್ಲಿ ಹನ್ನರಡು ವರ್ಷ, ಕಾಡಿನಲ್ಲಿ ಹದಿಮೂರು ವರ್ಷ ನನ್ನೊಡನೆ ಇದ್ದೀರಿ. ಅಷ್ಟು ದೀರ್ಘಕಾಲದಲ್ಲಿ ನನ್ನ ಶೀಲ, ನಿಮ್ಮಲ್ಲಿ ನನಗಿರುವ ಪ್ರೇಮ, ಭಕ್ತಿ ಇದನ್ನು ತಿಳಿದೂ, ತಿಳಿದೂ ನನ್ನನ್ನು ಶಂಕಿಸುತ್ತಿರುವಿರಿ. . . ." ಎಂದು ಹೇಳುತ್ತಿದ್ದಂತೆ ಸೀತೆಯ ಗಂಟಲು ತುಂಬಿ ಬಂದಿತು. ಮುಂದೆ ಮಾತಾಡಲು ಸಾಧ್ಯವಾಗಲಿಲ್ಲ. ಕಣ್ಣೀರಿನ ಕಟ್ಟೆ ಒಡೆಯಿತು. ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು.

ಕಣ್ಣೀರನ್ನು ಸುರಿಸುತ್ತಾ ಸೀತೆ ಲಕ್ಷ್ಮಣನ ಕಡೆ ತಿರುಗಿ "ಸೌಮಿತ್ರಿ ! ನನಗಾಗಿ ಚಿತೆಯನ್ನು ಸಿದ್ಧಪಡಿಸು. ನನ್ನ ಸ್ವಾಮಿಗೆ ನನ್ನ ಶೀಲ, ಗುಣ ಒಪ್ಪಿಗೆಯಾಗದೆ ಹೋದ ಮೇಲೆ ನಾನು ಜೀವಿಸಿರುವುದು ಯುಕ್ತವಲ್ಲ. ತುಂಬಿದ ಸಭೆಯಲ್ಲಿ ನನ್ನನ್ನು ಪರಿತ್ಯಾಗ ಮಾಡಿದ ಮೇಲೆ ನಾನೂ ಈ ದೇಹವನ್ನು ತ್ಯಾಗ ಮಾಡುತ್ತೇನೆ. ಶೀಘ್ರವಾಗಿ ಜ್ವಲಿಸುವ ಅಗ್ನಿಯನ್ನು ಪ್ರತಿಷ್ಠಾಪಿಸು"ಎಂದಳು. ಲಕ್ಷ್ಮಣನಿಗೋ ಹೇಳಲಾಗದ ಸಂಕಟ. ಒಂದು ಕಡೆ ರಾಮನ ರೌದ್ರಮೂರ್ತಿ. ಅವನ ಇದುರಿನಲ್ಲಿ

ನಿಂತು ಒಂದು ಮಾತಾಡಲೂ ಆಗಲಿಲ್ಲ. ಅತ್ತಿಗೆಯ ಸ್ಥಿತಿಯನ್ನು ಕಂಡು ಅಪಾರವಾದ ಪರಿತಾಪ ಒಂದು ಕಡೆ. ಕಿಂಕರ್ತವ್ಯಮೂಢನಾಗಿ ಲಕ್ಷ್ಮಣ ರಾಮನ ಕಡೆ ನೋಡಿದ. ಇಂಗಿತದಿಂದ ಲಕ್ಷ್ಮಣನಿಗೆ ಸೀತೆ ಹೇಳಿದಂತೆಯೇ ನಡೆಸಲು ರಾಮ ಸೂಚಿಸಿದ. ಆಗ ಲಕ್ಷ್ಮಣ ಚಿತೆಯನ್ನು ಸಿದ್ಧಪಡಿಸಿದ. ಜಾಜ್ವಲ್ಯಮಾನವಾಗಿ ಆ ಚಿತೆ ಉರಿಯತೊಡಗಿತು. ರಾಮ ಅವನತವದನನಾಗಿ ನಿಂತಿದ್ದ. ಸೀತೆ ಹಾಗೆಯೇ ರಾಮನಿಗೆ ಪ್ರದಕ್ಷಿಣೆ ಮಾಡಿದಳು. ಅನಂತರ ಜ್ವಲಿಸುತ್ತಿದ್ದ ಅಗ್ನಿಗೆ ಪ್ರದಕ್ಷಿಣೆ ಬಂದು ಕೈ ಮುಗಿದು ನಿಂತು "ನನ್ನ ಹೃದಯ ಸ್ವಲ್ಪವೂ ಕಲುಷಿತವಾಗದೆ ಶುದ್ಧವಾಗಿರುವುದು ಸತ್ಯವಾದರೆ, ಈ ಅಗ್ನಿದೇವ ಸರ್ವ ವಿಧದಲ್ಲೂ ನನ್ನನ್ನು ರಕ್ಷಿಸಲಿ"

"ನಾನು ಸತ್ಯವಾಗಿಯೂ ಪರಿಶುದ್ಧಳಾದರೆ ನಿಷ್ಕಳಂಕಳಾದರೆ ಅಗ್ನಿದೇವ ನನ್ನನ್ನು ರಕ್ಷಿಸಲಿ"

"ನಾನು ಮನಸಾ ವಾಚಾ ಕಾಯ ರಾಮನನ್ನು ಹೊರತು ಅನ್ಯರನ್ನು ಚಿಂತಿಸದೆ ಇರುವುದು ಸತ್ಯವಾದರೆ, ತ್ರಿಕರಣಪೂರ್ವಕವಾಗಿ ನಾನು ಶುದ್ಧಳಾಗಿದ್ದರೆ ನನ್ನನ್ನು ಸರ್ವ ವಿಧದಲ್ಲೂ ಅಗ್ನಿದೇವ ರಕ್ಷಿಸಲಿ"

"ಸರ್ವ ಸಾಕ್ಷಿಗಳೆನಿಸಿದ ಸೂರ್ಯ, ವಾಯು, ದಿಗ್ದೇವತೆಗಳು, ಚಂದ್ರ, ದಿನ, ರಾತ್ರಿ ಉಭಯ ಸಂಧ್ಯೆಗಳು. ಭೂಮಿದೇವಿ, ಹಾಗೂ ಇತರ ದೇವತೆಗಳು ನಾನು ಶುದ್ಧ ಚಾರಿತ್ರ್ಯಳು ಎಂಬುದಕ್ಕೆ ಸಾಕ್ಷಿ. ಈ ಮಾತು ನಿಜವಾಗಿದ್ದರೆ ಅಗ್ನಿದೇವ ಸರ್ವವಿಧದಲ್ಲೂ ನನ್ನನ್ನು ರಕ್ಷಿಸಲಿ." ಹೀಗೆ ಹೇಳಿದ ಸೀತೆ ಅಗ್ನಿಯನ್ನು ಪ್ರದಕ್ಷಿಣೆ ಮಾಡಿ ಜ್ವಲಿಸುತ್ತಿರುವ ಆ ಬೆಂಕಿಯಲ್ಲಿ ಹಾರಿದಳು. ಯಜ್ಞದಲ್ಲಿ ಪೂರ್ಣಾಹುತಿ ಮಾಡಿದಂತೆ ಹಾರಿದಳು. ಇದನ್ನು ಕಂಡು ದೇವತೆಗಳು, ವಾನರರು. ರಾಕ್ಷಸರು ಎಲ್ಲರೂ ಹಾಹಾಕಾರ ಮಾಡಿದರು. ರಾಮ ಭೂಮಿಯನ್ನೇ ನೋಡುತ್ತಾ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಧ್ಯಾನಮಗ್ನನಾಗಿ ನಿಂತಿದ್ದ. ಆಗ ವೈಶ್ರವಣನೆನಿಸಿದ ಕುಬೇರ, ಯಮ, ದೇವರಾಜನಾದ ಇಂದ್ರ, ಲೋಕ ಪಾಲಕರು, ತ್ರಿನೇತ್ರನಾದ ರುದ್ರ, ಸೃಷ್ಟಿಕರ್ತನಾದ ಬ್ರಹ್ಮ ಸಮಸ್ತ ದೇವತೆಗಳೊಡನೆ ಶ್ರೀ ರಾಮನ ಸಮೀಪಕ್ಕೆ ಬಂದರು.

ದೇವತೆಗಳನ್ನೆಲ್ಲ ನೋಡಿದ ರಾಮ ಅವರಿಗೆ ಕೈಮುಗಿದು ನಿಂತ. ದೇವತೆಗಳೆಲ್ಲ, "ರಾಮ ! ನೀನು ಆದಿಮಧ್ಯಾಂತರಹಿತನಾದ ಸಾಕ್ಷಾತ್ ಪರಮಪುರುಷನಾಗಿಯೂ ಪ್ರಾಕೃತನಂತೆ ಸೀತೆಯನ್ನು ಉಪೇಕ್ಷಿಸುವುದು ಸರಿಯಲ್ಲ, ನೀನು ಯಾರು ಎಂಬುದು ನಿನಗೆ ತಿಳಿದಿದೆಯೆ ? ಎಂದರು. ಆಗ ರಾಮ **"ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ"** ಎಂದು ಹೇಳುತ್ತಾನೆ. ನಾನು ಮನುಷ್ಯನಾದ ದಶರಥನ ಮಗ ಎಂದೇ ತಿಳಿದಿದ್ದೇನೆ. ನಾನು ಯಾರು ? ಎಲ್ಲಿಂದ ಬಂದೆ ? ಏಕೆ ಬಂದೆ ? ಎಲ್ಲವನ್ನೂ ನೀವೇ ತಿಳಿಸಿ ಎಂದ. ಆಗ, ಸೃಷ್ಟಿಕರ್ತನಾದ ಬ್ರಹ್ಮದೇವನೇ ಹೇಳತೊಡಗಿದ: ರಾಘವ, ಶಂಖ ಚಕ್ರಗದಾಧಾರಿಯಾದ ಸಾಕ್ಷಾತ್ ಶ್ರೀಮನ್ನಾರಾಯಣನೇ ನೀನು. ಆದಿ–ಮಧ್ಯ –ಅಂತ್ಯ ಇಲ್ಲದವನು. ಸರ್ವವ್ಯಾಪಿ. **ಅಂತರ್‌ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ** ಎಂಬ ವೇದಮಂತ್ರದಿಂದ ಪ್ರತಿಪಾದಿಸಲ್ಪಡತಕ್ಕವನೇ ನೀನು. ನೀನೇ ಜಗತ್ತನ್ನು ಸೃಷ್ಟಿಸುವವನು, ಪಾಲಿಸುವವನು, ಅಳಿಸುವವನು.

ದೇವರಾಜನಾದ ಇಂದ್ರನನ್ನೂ ಸೃಷ್ಟಿಕರ್ತನಾದ, ಬ್ರಹ್ಮನಾದ ನನ್ನನ್ನೂ ಸೃಷ್ಟಿಸಿದವ ನೀನೇ. ನೀನೇ ಈ ಸರ್ವ ಜಗತ್ತಿನ ಆಧಾರ. ಶೇಷರೂಪಿಯಾಗಿ ಜಗತ್ತನ್ನು ಧರಿಸತಕ್ಕವನು ನೀನೇ. ನೀನು ಅನಾದಿ, ಅನಂತ. ಎಲ್ಲೆಲ್ಲೂ ವ್ಯಾಪಿಸಿದ್ದೀಯೆ. ಸೂರ್ಯನ ಪ್ರಭೆ ನೀನು. ಜಲದ ರಸ ನೀನು, ಬ್ರಹ್ಮನಾದ ನಾನೇ ನಿನ್ನ ಹೃದಯ. ವಾಗ್ದೇವಿಯೇ ನಿನ್ನ ನಾಲಗೆ ದಿವಾರಾತ್ರಿಗಳೇ ನಿನ್ನ ಕಣ್ಣುಗಳು. ಅಗ್ನಿಯೇ ನಿನ್ನ ತೇಜಸ್ಸು, ಇಡೀ ಪ್ರಪಂಚವೇ ನಿನ್ನ ಶರೀರ. ವೇದ, ಓಂಕಾರ, ವಷಟ್ಕಾರ ಎಲ್ಲ ನೀನೆ. ನಿನ್ನಿಂದಲೇ ಈ ಜಗತ್ತು ಅಸ್ತಿತ

ಪಡೆದಿದೆ. ನೀನೇ ಹಿಂದೆ ವಾಮನ ರೂಪದಲ್ಲಿ ಬಲಿಯಿಂದ ಇಂದ್ರನಿಗೆ ರಾಜ್ಯವನ್ನು ಕೊಡಿಸಿದೆ.

ನೀನೇ ಸಾಕ್ಷಾತ್ ವಿಷ್ಣು, ಲಕ್ಷ್ಮಿಯೇ ಸೀತೆ. ಸಚ್ಚಿದಾನಂದ ಸ್ವರೂಪನಾದ ನೀನು ಲೋಕ ಕಂಟಕನಾದ ರಾವಣನನ್ನು ವಧಿಸುವ ಸಲುವಾಗಿ ಮನುಷ್ಯ ರೂಪದಿಂದ ಪ್ರಕಾಶಿಸಿದೆ. ದೇವತೆಗಳೆಲ್ಲರ ಪ್ರಾರ್ಥನೆಯಂತೆ ರಾವಣನನ್ನು ವಧಿಸಿದೆ. ಇನ್ನು ನಿನ್ನ ಧಾಮಕ್ಕೆ ಬರುವವನಾಗು. ಸೀತೆ ಪರಿಶುದ್ಧಳು. ಶ್ರೀದೇವಿಯೇ ಸೀತೆ ಎಂದ ಮೇಲೆ ಅವಳು ಪವಿತ್ರಳೇ ಸರಿ. ನೀನು ಪುರಾಣ ಪುರುಷೋತ್ತಮ. ದಿವ್ಯ ರೂಪಧಾರಿಯಾದ ಪರಮಾತ್ಮ ಎಂದು ನೆನಪು ಮಾಡಿ ಕೊಡುತ್ತಾನೆ.

ಬ್ರಹ್ಮ ರಾಮನನ್ನು ಸ್ತುತಿಸಿದ ಈ ಸ್ತೋತ್ರ ಸರ್ವಮಂಗಳಕರವಾದುದು. ಶ್ರೀರಾಮನ ದಿವ್ಯತ್ವವನ್ನು ಪ್ರಕಾಶಪಡಿಸುವ ಸ್ತೋತ್ರವಾದುದರಿಂದಲೇ ಬ್ರಹ್ಮಸ್ತುತಿಗೆ ವಾಲ್ಮೀಕಿ ಫಲಶ್ರುತಿಯನ್ನೂ ಬರೆದಿದ್ದಾರೆ. ಆ ಸಮಯಕ್ಕೆ ಸರಿಯಾಗಿ ಅಗ್ನಿಕುಂಡದಿಂದ ಅಗ್ನಿದೇವ ಸೀತೆಯನ್ನು ಎತ್ತಿಕೊಂಡು ರಾಮನ ಸಮೀಪಕ್ಕೆ ಬಂದು ಅವಳನ್ನು ರಾಮನಿಗೆ ಒಪ್ಪಿಸುತ್ತಾ ಹೇಳಿದ "ರಾಮ ! ಸೀತೆ ಪರಿಶುದ್ಧಳು, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ, ಕಣ್ಣಿನ ನೋಟದಿಂದಾಗಲೀ ಅನ್ಯರನ್ನು ಬಯಸಿದವಳಲ್ಲ. ಸೀತೆಯನ್ನು ರಾವಣ ಸೆರೆಯಲ್ಲಿಟ್ಟ, ನಾನಾ ಪ್ರಲೋಭಗಳನ್ನೊಡ್ಡಿದ, ಅನೇಕರೀತಿಯ ಕಷ್ಟಗಳನ್ನು ಕೊಟ್ಟ. ಇಷ್ಟಾದರೂ ಸೀತೆ ಮಾತ್ರ ಮನಸ್ಸಿನಲ್ಲೂ ಸಹ ಅನ್ಯರನ್ನು ಚಿಂತಿಸಿಲ್ಲ. ರಾಘವ, ನಿನ್ನನ್ನೇ ನಂಬಿದ್ದಾಳೆ. ನಿನ್ನಲ್ಲೇ ಮನಸ್ಸು, ಪ್ರಾಣವನ್ನಿಟ್ಟಿದ್ದಾಳೆ. ಇಂಥ ಸತಿಯನ್ನು ಸಾಧ್ವಿಯನ್ನು ಅಲಕ್ಷಿಸಬೇಡ ರಾಮ, ನಾನು ಆಜ್ಞೆಮಾಡುತ್ತಿದ್ದೇನೆ. ಸೀತೆಯನ್ನು ಒಂದು ಮಾತಿನಿಂದಲೂ ಇನ್ನುಮುಂದೆ ನೀನು ನಿಂದಿಸಕೂಡದು. ಮಹಾ ಪತಿವ್ರತೆ ಇವಳು. ಇವಳನ್ನು ಸ್ವೀಕರಿಸು" ಎಂದು ಹೇಳಿದ.

ಅಗ್ನಿಯಲ್ಲಿ ಹಾರುವಾಗ ಸೀತೆ ಹೇಗಿದ್ದಳೋ ಹಾಗೆಯೇ ಅಗ್ನಿಯಿಂದ ಹೊರ ಬಂದ ಮೇಲೂ ವಿರಾಜಿಸುತ್ತಿದ್ದಳು. ಕಪ್ಪಾದ ಆ ಕೇಶರಾಶಿ, ಆ ಮುಂಗುರುಳು, ಮುಡಿದಿದ್ದ ಹೂ, ಧರಿಸಿದ್ದ ಆಭರಣಗಳು, ಉಟ್ಟಿದ್ದ ಕೆಂಪುಬಣ್ಣದ ಪಟ್ಟೆ ಮಡಿ ಎಲ್ಲ ಹಾಗೆಯೇ ಸ್ವಲ್ಪವೂ ವ್ಯತ್ಯಾಸವಾಗದೆ ಇದ್ದವು. ಸೀತೆಯ ದಿವ್ಯ ವದನ ಪ್ರಾತಃಕಾಲದ ಅರುಣ ಕಾಂತಿಯಿಂದ ಕೂಡಿದ ಸೂರ್ಯನಂತೆ ಕಂಗೊಳಿಸುತ್ತಿತ್ತು. ಯಾವ ಅಗ್ನಿದೇವನ ಸಾಕ್ಷಿಯಾಗಿ ರಾಮ ಸೀತೆಯ ಕೈ ಹಿಡಿದಿದ್ದನೋ ಅವನೇ ಮೂರ್ತಿಮತ್ತಾಗಿ ಸೀತೆಯನ್ನು ರಾಮನಿಗೆ ಒಪ್ಪಿಸಿದ.

ದೇವತೆಗಳೆಲ್ಲ ಸೀತೆಯ ಪರಿಶುದ್ಧತೆಯನ್ನು ಸ್ಥಾಪಿಸಿದರು. ಅದನ್ನು ಕಂಡು ರಾಮ ಪ್ರಸನ್ನನಾದ. ಅಗ್ನಿಯನ್ನು ಕುರಿತು "ಭಗವನ್! ಸೀತೆಯನ್ನು ನಾ ಚೆನ್ನಾಗಿ ತಿಳಿದಿದ್ದೇನೆ. ಅವಳು ಪರಿಶುದ್ಧಳು ಎಂಬುದು ನನಗೆ ಗೊತ್ತಿದೆ. ಆದರೆ, ಲೋಕಮರ್ಯಾದೆಯನ್ನನುಸರಿಸಿ ನಾನು ಹಾಗೆ ಕಠೋರವಾಗಿ ವರ್ತಿಸಬೇಕಾಯಿತು. ಪರಗೃಹದಲ್ಲಿ ವಾಸಿಸಿದ ಸೀತೆಯನ್ನು ನಾನು ಹಾಗೆಯೇ ಪರಿಗ್ರಹಿಸಿದ್ದರೆ ಲೋಕ "ದಶರಥಕುಮಾರ ಮೂರ್ಖ, ಕಾಮಿ" ಎಂದು ಜರೆಯುತ್ತಿತ್ತು. ಆದ್ದರಿಂದ ಲೋಕಹಿತವನ್ನು ಅನುಲಕ್ಷಿಸಿ ನಾನು ಸೀತೆಯನ್ನು ಅಗ್ನಿ ಪ್ರವೇಶದಿಂದ ತಡೆಯಲಿಲ್ಲ. ಸೀತೆ ಪವಿತ್ರಳು. ನನ್ನಲ್ಲೇ ನೆಟ್ಟಮನಸ್ಸುಳ್ಳವಳು ಭಕ್ತಳು. ಅವಳು ತನ್ನ ತೇಜಸ್ಸಿನಿಂದಲೇ ರಕ್ಷಿತಳಾಗಿದ್ದಾಳೆ. ಮನಸ್ಸಿನಿಂದಲೂ ಸಹ ರಾವಣ ಅವಳನ್ನು ಮುಟ್ಟಲಾರ. ಅವಳ ಪಾತಿವ್ರತ್ಯವೇ ಅವಳಿಗೆ ರಕ್ಷೆಯಾಗಿದೆ.

**ನೇಯಮರ್ಹತಿ ವೈಕ್ಲಬ್ಯಂ ರಾವಣಾಂತಃ ಪುರೇಸತೀ ।**
**ಅನನ್ಯಾ ಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ ॥**

ರಾವಣನ ಅಂತಃಪುರದಲ್ಲಿ ವಾಸಿಸಿದ್ದರೂ ಸೀತೆ ಯಾವ ವಿಧದಿಂದಲೂ ಭೀತಳಲ್ಲ ದೂಷಿತಳಾಗಿಲ್ಲ. ಯಾವಾಗಲೂ ಸೀತೆ ನನ್ನೊಂದಿಗೇ ಇದ್ದಾಳೆ. ಸೂರ್ಯನನ್ನು ಪ್ರಭೆಯು ಹೇಗೆ ಯಾವಾಗಲೂ ಅನುಸರಿಸಿ ಇದೆಯೋ ಹಾಗೆಯೇ ಸೀತೆ ನನ್ನನ್ನು ಅನುಸರಿಸಿ ಇದ್ದಾಳೆ. ಮೈಥಿಲಿಯು ಮೂರು ಲೋಕಗಳಲ್ಲೂ ಪರಮಪವಿತ್ರಳಾದವಳು. ಉತ್ತಮವಾದ ಪುರುಷನು ಕೀರ್ತಿಯನ್ನು ಹೇಗೆ ಬಿಟ್ಟಿರುವುದಿಲ್ಲವೋ ಹಾಗೆ ಸೀತೆಯನ್ನು ನಾನು ಬಿಟ್ಟಿರಲಾರೆ. "ಲೋಕಪಾಲರಾದ ನೀವೆಲ್ಲ ನನ್ನ ಹಿತವನ್ನು ಬಯಸಿ ಮಂಗಳಕರವಾದ ಮಾತುಗಳನ್ನಾಡಿರುವಿರಿ. ನಿಮ್ಮ ಮಾತನ್ನು ಶಿರಸಾ ವಹಿಸಿ ನಡೆಸುತ್ತೇನೆ" ಎಂದು ಹೇಳಿ ಶ್ರೀರಾಮ ಸೀತೆಯನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸಿದ.

ಮಹಾಬಲಿಯೂ ಯಶಸ್ವಿಯೂ ವಿಜಯಿಯೂ ಆದ ರಘುವೀರ ಏಕಕಾಲದಲ್ಲಿ ವಿಜಯ ವಧು, ನವವಧುವಿನಂತೆ ವಿರಾಜಿಸುತ್ತಿದ್ದ ಸೀತೆಯೊಂದಿಗೆ ಎರಡು ವಿಶಾಖಾ ನಕ್ಷತ್ರಗಳ ನಡುವೆ ಶೋಭಿಸುವ ಚಂದ್ರನಂತೆ ರಾರಾಜಿಸಿದ.

ನೆರೆದಿದ್ದ ದೇವತೆಗಳೆಲ್ಲ ರಾಮನಿಗೆ ಶುಭ ಕೋರಿದರು. ಮಹಾದೇವನೆನಿಸಿದ ಈಶ್ವರ ರಾಮನನ್ನು ಕುರಿತು "ರಾಘವ ನೀನು ಸೀತಾ ಲಕ್ಷ್ಮಣ ಸಮೇತನಾಗಿ ಅಯೋಧ್ಯೆಯನ್ನು ಸೇರಿ ಅಲ್ಲಿ ನಿನಗಾಗಿ ಪರಿತಪಿಸುತ್ತಿರುವ ಭರತ ಶತ್ರುಘ್ನರನ್ನೂ ಮಾತೆಯರನ್ನೂ ಸಂತೈಸು. ಪೌರರಿಗೆ ಆನಂದವನ್ನುಂಟು ಮಾಡು. ಪಟ್ಟಾಭಿಷೇಕವನ್ನು ಮಾಡಿಕೊಂಡು ಪೌರರನ್ನೆಲ್ಲ ಸಂತೋಷಪಡಿಸು. ಅನಂತರ ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿಶಾಲಿಯಾಗು. "ರಾಮ ! ನೀನು ಇಷ್ಟು ಯಶಸ್ವಿಯಾಗಲು ದೃಢವ್ರತದಿಂದ ಪಿತನ ಆಜ್ಞೆಯನ್ನು ಪರಿಪಾಲಿಸುದುದೇ ಆಗಿದೆ. ನೋಡು! ವಿಮಾನದಲ್ಲಿ ನಿನ್ನ ಗುರುವೂ ತಂದೆಯೂ ಆದ ದಶರಥ ಬಂದಿದಾನೆ. ಅವನಿಗೆ ಸೀತಾ ಲಕ್ಷ್ಮಣ ಸಮೇತನಾಗಿ ನಮಸ್ಕರಿಸು" ಎಂದ.

ದಶರಥ ದಿವ್ಯ ಮಾಲ್ಯಾಂಬರಧರನಾಗಿ ದೇವ ವಿಮಾನದಲ್ಲಿ ಆಸೀನನಾಗಿದ್ದ. ರಾಮನು ಮಹಾದೇವನ ಮಾತಿನಂತೆಯೇ ಸೀತಾ ಲಕ್ಷ್ಮಣ ಸಮೇತನಾಗಿ ದಶರಥನಿಗೆ ನಮಸ್ಕರಿಸಿದ. ದಶರಥ ಗಾಢವಾಗಿ ರಾಮನನ್ನು ಆಲಂಗಿಸಿ ತನ್ನ ತೊಡೆಯ ಮೇಲೆ ಕುಳ್ಳರಿಸಿಕೊಂಡು ತಲೆಯನ್ನು ತಡುವುತ್ತಾ "ರಾಮ ! ನೀನು ನನಗೆ ಅತ್ಯಂತ ಪ್ರಿಯವನ್ನು ಮಾಡಿರುವಿ. ನಿನ್ನ ದೃಢವ್ರತದಿಂದ ನನ್ನನ್ನು ಉದ್ಧರಿಸಿರುವೆ. ನೀನಿಲ್ಲದೆ ಸ್ವರ್ಗ ಸುಖವೂ ರುಚಿಸುತ್ತಿಲ್ಲ. ರಾಮ ! ಇದು ಸತ್ಯ. ಅಷ್ಟಾವಕ್ರ ತನ್ನ ತಂದೆಯಾದ ಕಹೋಳನನ್ನು ಉದ್ಧರಿಸಿದಂತೆ ರಾಮ ನೀನು ನನ್ನನ್ನು ಉದ್ಧರಿಸಿದೆ. "ವತ್ಸ ಈಗ ನನಗೆ ಗೊತ್ತಾಯಿತು. ರಾವಣನನ್ನು ವಧಿಸುವ ಸಲುವಾಗಿ ಸಾಕ್ಷಾತ್ ಪರಮ ಪುರುಷನೇ ನಿನ್ನ ರೂಪದಲ್ಲಿ ಅವತರಿಸಿದ್ದಾನೆ" ಎಂದು. ನಿನ್ನನ್ನು ನೋಡುವವರೇ ಧನ್ಯರು. ಹದಿನಾಲ್ಕು ವರ್ಷಗಳು ಕಳೆದವು. ಈಗ ನೀನು ಅಯೋಧ್ಯೆಗೆ ಮರಳುತ್ತಿರುವೆ. ನಿನ್ನನ್ನು ನೋಡುವ ಆ ಕೌಸಲ್ಯೆ ನಿಜವಾಗಿ ಭಾಗ್ಯಶಾಲಿ.

"ರಾಘವ ! ಅಯೋಧ್ಯೆಯ ಪ್ರಜೆಗಳು ನಿಜವಾಗಿ ಪುಣ್ಯವಂತರು. ನಿನ್ನನ್ನು ರಾಜನನ್ನಾಗಿ ಪಡೆಯುತ್ತಾರೆ. ಭರತ ಧರ್ಮಾತ್ಮ ಸತ್ಯಸಂಧ. ನಿನ್ನನ್ನೇ ಅನುವರ್ತಿಸಿದವ. ಬೇಗ ನೀನು ಸೀತಾ ಲಕ್ಷ್ಮಣರೊಡನೆ ಅಯೋಧ್ಯೆಗೆ ಹಿಂದಿರುಗಿ ಭರತನನ್ನು ಸಂಧಿಸು. ಪಟ್ಟಾಭಿಷಕ್ತನಾಗಿ ದೀರ್ಘಾಯುಷ್ಮಂತನಾಗಿ ಬಾಳು" ಎಂದು ಹರಸಿದ.

ದಶರಥ ಹೀಗೆ ಹೇಳಿದ ನಂತರ ರಾಮ ಕೈ ಮುಗಿದು "ಧರ್ಮಜ್ಞ ! ತಾವು ಕೈಕೇಯಿ ಹಾಗೂ ಭರತನನ್ನು ಪ್ರಸಾದಿಸಬೇಕು. ಅವರ ಮೇಲೆ ಕೃಪೆ ತೋರಬೇಕು. ತಾವು ಕೈಕೇಯಿಯನ್ನು ಪುತ್ರಸಹಿತಳಾಗಿ ತ್ಯಜಿಸಿದ್ದೇನೆ" ಎಂದಿದ್ದೀರಿ. ಆ ಶಾಪವನ್ನು ಹಿಂದಕ್ಕೆ ತೆಗೆದುಕೊಂಡು ಅನುಗ್ರಹಿಸಬೇಕು ಎಂದ. ದಶರಥ ಹಾಗೇ ಆಗಲಿ ಎಂದ.

ಕೈಮುಗಿದು ನಿಂತಿದ್ದ ಲಕ್ಷ್ಮಣನನ್ನು ನೋಡಿಹತ್ತಿರಕ್ಕೆ ಬರಸೆಳೆದು ಅಪ್ಪಿಕೊಂಡು "ಲಕ್ಷ್ಮಣಾ ನಿಜವಾಗಿ ನೀನು ಮಹಾ ಭಾಗ್ಯಶಾಲಿ. ಇದುವರೆಗೆ ನೋಡಿದೆಯಲ್ಲವೆ ? "ಸಾಕ್ಷಾತ್ ಲಕ್ಷ್ಮೀ ನಾರಾಯಣರೇ ಸೀತೆ ರಾಮರಾಗಿ ಅವತರಿಸಿದಾರೆ" ಎಂದು ದೇವತೆಗಳು ಹೇಳಿದ್ದನ್ನು ಕೇಳಿದೆಯಲ್ಲವೆ ? ಆ ದಿವ್ಯ ದಂಪತಿಗಳಿಗೆ ಸೇವೆ ಮಾಡಿ ಅನಂತ ಫಲಕ್ಕೆ ಭಾಜನನಾದೆ ಕಂದಾ! ನೀನು ಮಹಾ ಪುಣ್ಯಶಾಲಿ" ಎಂದ. ಸೀತೆಯನ್ನು ನೋಡಿ "ಮಗಳೇ ! ನೀನು ಮಹಾ ಪತಿವ್ರತೆ. ರಾಮ ನಿನ್ನನ್ನು ಪರೀಕ್ಷಿಸಿದ ಎಂದು ಕೋಪಿಸಬೇಡ ತಾಯಿ. ನಿನ್ನ ಪವಿತ್ರತೆಯನ್ನು ಪ್ರಕಟಪಡಿಸುವುದಕ್ಕಾಗಿಯೇ ರಾಮ ಹಾಗೆ ಮಾಡಿದನಲ್ಲದೆ ಬೇರೆಯಲ್ಲ. ಪಾತಿವ್ರತ್ಯದ ಬಗ್ಗೆ ನಿನಗೆ ನಾ ಹೇಳಬೇಕಾಗಿಲ್ಲ. ಆದರೂ ಒಂದು ಮಾತು ಹೇಳುತ್ತೇನೆ. ರಾಮನೇ ನಿನ್ನ ದೈವ. ಅವನೇ ನಿನಗೆ ದೇವರು. ತಾಯಿ! ನಿನಗೆ ಮಂಗಳವಾಗಲಿ" ಎಂದು ಹರಿಸಿ ಸೀತಾ ರಾಮ ಲಕ್ಷ್ಮಣರೊಡನೆ ಬೀಳ್ಕೊಂಡು ದಶರಥ ದೇವಲೋಕಕ್ಕೆ ಹಿಂದಿರುಗಿದ.

ದಶರಥ ಹಿಂದಿರುಗಿದನಂತರ ದೇವರಾಜನಾದ ಇಂದ್ರ ಕೈ ಮುಗಿದು ನಿಂತಿದ್ದ ರಾಮನನ್ನು ಕುರಿತು "ರಾಮ ! ನಮ್ಮ ದರ್ಶನ ವ್ಯರ್ಥವಾಗಬಾರದು. ನಿನಗೆ ಯಾವ ಅಭಿಲಾಷೆಯಿದೆಯೋ ತಿಳಿಸು. ಅದನ್ನು ನಡೆಸುತ್ತೇನೆ" ಎಂದ.

ರಾಮನು ದೇವರಾಜ ! ನನಗಾಗಿ ವಾನರರು ಪ್ರಾಣ ಬಿಟ್ಟಿದ್ದಾರೆ. ಗಾಯಗೊಂಡಿದಾರೆ. ನನ್ನ ಕಾರಣದಿಂದ ಸತ್ತಿರುವ ವಾನರರೆಲ್ಲ ಜೀವಂತರಾಗಿ ಏಳಬೇಕು. ಅವರು ನಿರೋಗಿಗಳಾಗಿಯೂ ವ್ರಣ ಹೀನರಾಗಿಯೂ ಬಲ ಪೌರುಷದಿಂದ ಕೂಡಿದವರಾಗಿಯೂ ಆಗಬೇಕು. ಅಲ್ಲದೆ ಈ ವಾನರರು ವಾಸಿಸುವ ಸ್ಥಳಗಳಲ್ಲೆಲ್ಲಾ ಯಥೇಚ್ಛವಾಗಿ ಫಲಗಳಿಂದ ತುಂಬಿದ ವೃಕ್ಷಗಳಿರಬೇಕು. ನಿರ್ಮಲವಾದ ಜಲವುಳ್ಳ ನದಿ ಹರಿಯುತ್ತಿರಬೇಕು. ಹಾಗೆ ಅನುಗ್ರಹಿಸು" ಎಂದ.

ಇಂದ್ರ ಸಂತುಷ್ಟನಾಗಿ "ತಥಾಸ್ತು" ಎಂದ. ಇಂದ್ರನ ವರದಿಂದ ಮೃತರಾದ ವಾನರರೆಲ್ಲ ನಿದ್ದೆಯಿಂದ ಎದ್ದವರಂತೆ ಎದ್ದರು. ಎಲ್ಲರೂ ಬಾಧಾರಹಿತರೂ, ವ್ರಣಹೀನರೂ ಆಗಿ ತೇಜಸ್ಸು, ಬಲ, ಪೌರುಷಗಳಿಂದ ಕೂಡಿ ವಿಜೃಂಭಿಸಿದದರು.

ಇಂದ್ರ ರಾಮನನ್ನು ಕುರಿತು "ರಾಮ ! ಇನ್ನು ನೀನು ಸೀತಾಲಕ್ಷ್ಮಣರೊಡದೆ ಅಯೋಧ್ಯೆಗೆ ತೆರಳಿ, ಭರತನನ್ನು ತುಷ್ಟಿಪಡಿಸಿ ಪಟ್ಟಾಭಿಷಿಕ್ತನಾಗು. ನಿನಗೆ ಮಂಗಳವಾಗಲಿ. ಎಂದು ಎಲ್ಲ ದೇವತೆಗಳೊಂದಿಗೆ ದೇವಲೋಕವನ್ನು ಸೇರಿದ. ರಾಮನ ಆಜ್ಞೆಯಂತೆ ವಾನರರೆಲ್ಲ ವಿಶ್ರಮಿಸಿದರು.

ಸುಪ್ರಭಾತವಾದ ಮೇಲೆ ವಿಭೀಷಣ ಶ್ರೀರಾಮನ ಮುಂದೆ ಕೈಜೋಡಿಸಿ ನಿಂತು, "ಪ್ರಭು ! ತಮ್ಮ ಸ್ನಾನಕ್ಕಾಗಿ ದಿವ್ಯವಾದ ಅಂಗರಾಗ, ವಿವಿಧ ಸುಗಂಧ ಲೇಪನಗಳು, ದಿವ್ಯವಾದ ಭೂಷಣಗಳು ಎಲ್ಲ ಸಿದ್ಧವಾಗಿವೆ. ಮಂಗಳಸ್ನಾನಮಾಡಿ ಕಣ್ತಣಿಯುವಂತೆ ಅಲಂಕರಿಸಿಕೊಂಡು ಕೃಪೆಮಾಡಿ ಆತಿಥ್ಯವನ್ನು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಿದ. ಆಗ ರಾಮ "ವಿಭೀಷಣ ನನಗಾಗಿ ಪರಿತಪಿ

ನುತ್ತಿರುವ ಭರತನನ್ನು ನೋಡದೆ ನಾ ಸ್ನಾನಮಾಡುವುದೆ ? ಅಂದೆಂದಿಗೂ ಆಗದು. ನೀನು ನನಗೆ ಈ ವರೆಗೆ ಬಹಳವಾಗಿ ಉಪಕಾರ ಮಾಡಿದ್ದೀಯೆ. ನನ್ನ ಹಿತೈಷಿಯಾಗಿ, ನನ್ನ ಸಚಿವನಾಗಿ ಸೇವ ನಲ್ಲಿಸಿದ್ದೀಯೆ. ಆದರಿಂದ ನಾನು ಸಂಪ್ರೀತನಾಗಿದ್ದೇನೆ. ಈಗ ಇಲ್ಲಿ ತಂಗುವುದು ಸಾಧ್ಯವಿಲ್ಲ. ಆ ನನ್ನ ಭರತ ನನಗಾಗಿ ಕೊರಗುತ್ತಿದಾನೆ. ಅವನನ್ನು ಬೇಗ ಕಾಣಬೇಕು. ಶೀಘ್ರವಾಗಿ ಅಯೋಧ್ಯೆಗೆ ಹೋಗಲು ಏರ್ಪಾಡು ಮಾಡು" ಎಂದ.

"ರಾಮ ! ನೀವು ಅಯೋಧ್ಯೆಗೆ ಹೋಗುವಬಗೆಗೆ ಚಿಂತಿಸಬೇಕಿಲ್ಲ. ನನ್ನ ಸೋದರ ಕುಬೇರನ ಪುಷ್ಪಕವಿಮಾನವನ್ನು ರಾವಣ ಅಪಹರಿಸಿದ್ದಾನೆ. ಅದು ಇಲ್ಲಿದೆ. ನಿಮ್ಮ ಸೇವೆಗೆ ಅದನ್ನು ಮೀಸಲಾಗಿಟ್ಟಿದೇನೆ" ಎಂದ. ರಾಮ ಪುಷ್ಪಕವಿಮಾನವನ್ನು ತ್ವರೆಯಾಗಿ ತರಿಸುವಂತೆ ಹೇಳಿದ. ಪುಷ್ಪಕವಿಮಾನ ಬಂದಿತು. ಚಿನ್ನದ ಕಂಭಗಳಿಂದ ವೈಢೂರ್ಯದ ನೆಲಗಟ್ಟುಗಳಿಂದ, ಸ್ಫಟಿಕ ಮಣಿಯ ನೆಲದಿಂದ, ಮುತ್ತು, ರತ್ನ, ವಜ್ರ ಇವುಗಳಿಂದ ನಿರ್ಮಿತವಾದ ಕೊಠಡಿಗಳಿಂದ ಧವಳ ಕಾಂತಿಯನ್ನು ಎಲ್ಲೆಡೆಯಲ್ಲೂ ಪ್ರಸರಿಸುತ್ತಾ ವೈಶ್ರವಣನ ಆ ವಿಮಾನ ಶೋಭಿಸುತ್ತಿತ್ತು. ರಾಮನು ಸೀತಾಲಕ್ಷ್ಮಣ ಸಮೇತನಾಗಿ ಆ ದಿವ್ಯ ವಿಮಾನದಲ್ಲಿ ಹತ್ತಿ ಕುಳಿತ. ರಾಮನ ಸಮೀಪದಲ್ಲಿ ಬಂದು ಕೈಮುಗಿದು ನಿಂತು ವಿಭೀಷಣ ಏನು ಸೇವೆ ಮಾಡಲಿ ಎಂದು ವಿನಯದಿಂದ ಕೇಳಿದ.

ಸರ್ವವಾನರರನ್ನೂ ಧನ, ರತ್ನ, ಆಭರಣಗಳಿಂದ ಸನ್ಮಾನಿಸುವಂತೆ ರಾಮ ಹೇಳಿದ. ಅದರಂತೆ ವಿಭೀಷಣ ವಾನರರನ್ನೆಲ್ಲ ಯಥೋಚಿತವಾಗಿ ರತ್ನ, ಧನ, ಕನಕಾದಿಗಳಿಂದ ಸತ್ಕರಿಸಿದ.

ತನ್ನನ್ನು ಸೇವಿಸುವುದಕ್ಕಿಂತ ತನ್ನ ಭಕ್ತರನ್ನು ಸೇವಿಸಿದರೇ ಪರಮಾತ್ಮನಿಗೆ ತೃಪ್ತಿ. ದುರ್ಯೋಧನ ಕೃಷ್ಣನನ್ನು ನೇರವಾಗಿ ದ್ವೇಷಿಸಲಿಲ್ಲ. ಕೃಷ್ಣಭಕ್ತರಾದ ಪಾಂಡವರನ್ನು ದ್ವೇಷಿಸಿದ. ಸಂಧಿಗಾಗಿ ಶ್ರೀಕೃಷ್ಣ ಬಂದಾಗ ದುರ್ಯೋಧನ ಶ್ರೀಕೃಷ್ಣನನ್ನು ತನ್ನ ಅರಮನೆಗೆ ಭೋಜನಕ್ಕೆ ಆಮಂತ್ರಿಸಿದ. ಆದರೆ ಕೃಷ್ಣ ದುರ್ಯೋಧನನ ಆಮಂತ್ರಣವನ್ನು ತಿರಸ್ಕರಿಸಿದ. ಆಗ, ದುರ್ಯೋಧನ, ಕೃಷ್ಣಾ ! ನಿನಗೆ ನಾ ಏನೂ ಅಪರಾಧ ಮಾಡದೆ ಇರುವಾಗ ನನ್ನ ಮನೆಯಲ್ಲೇಕೆ ನೀನು ಭೋಜನ ಮಾಡಕೂಡದು ? ಎಂದ. ಆದಕ್ಕೆ ಶ್ರೀಕೃಷ್ಣ ಹೇಳುತ್ತಾನೆ.

**ದ್ವಿಷದನ್ನಂ ನಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ ।**
**ಪಾಂಡವಾರ್ನ್ದ್ವಿಷತೇ ರಾಜನ್ ಮಮ ಪ್ರಾಣಾಹಿ ಪಾಂಡವಾಃ ॥**

ರಾಜಾ ! ದ್ವೇಷಿಸುವವರ ಮನೆಯಲ್ಲಿ ಭುಜಿಸಬಾರದು. ಹಾಗೇ ದ್ವೇಷಿಸುವವರಿಗೆ ಭೋಜನವನ್ನೂ ಮಾಡಿಸಬಾರದು. ನಾನೇನೂ ನಿನ್ನನ್ನು ದ್ವೇಷಿಸಲಿಲ್ಲವಲ್ಲ ಎಂದೆ ಅಲ್ಲವೆ? ನೀನು ನನ್ನನ್ನು ದ್ವೇಷಿಸದೆ ಇರಬಹುದು. ಆದರೆ ನನ್ನ ಪಂಚಪ್ರಾಣಗಳಾದ ಪಂಚಪಾಂಡವರನ್ನು ನೀ ದ್ವೇಷಿಸುತ್ತಿರುವಿ. ನನ್ನ ಪ್ರಾಣಗಳನ್ನು ದ್ವೇಷಿಸಿದ ಮೇಲೆ ನನ್ನನ್ನು ದ್ವೇಷಿಸಿದಂತೆಯೇ ಅಲ್ಲವೆ ? ಆದ್ದರಿಂದಲೇ ನಿನ್ನ ಮನೆಗೆ ಭೋಜನಕ್ಕೆ ಬರಲಿಲ್ಲ ಎಂದ ಕೃಷ್ಣ

"ಭಕ್ತರು" ಪರಮಾತ್ಮನ ಪ್ರಾಣ. ಶ್ರೀರಾಮನೂ ತನ್ನ ಭಕ್ತರನ್ನು ಹಾಗೆಯೇ ಭಾವಿಸುವವ. ಆದರಿಂದಲೇ ತನೆಗೆ ಆತಿಥ್ಯ ನೀಡುವುದಕ್ಕಿಂತ ತನ್ನ ಸ್ವಜನರಿಗೆ ಸತ್ಕಾರ ಮಾಡಿದರೇ ಹೆಚ್ಚು ಪ್ರೀತಿ ಎಂದ. ಅಂತೆಯೇ ವಿಭೀಷಣ ಭಾಗವತ ಕೈಂಕರ್ಯವನ್ನು ಮಾಡಿದ. ಭಗವತ್ ಕೈಂಕರ್ಯದಿಂದ ಭಗವಂತನಿಗೆ ತೃಪ್ತಿಯಾದರೆ, ಭಗವತ್ ಕೈಂಕರ್ಯದಿಂದ ಭಗವಂತ, ಭಾಗವತರು ಇಬ್ಬರಿಗೂ ತೃಪ್ತಿ !

ವಾನರರನ್ನೆಲ್ಲ ವಿಭೀಷಣ ಸಂತುಷ್ಟಿಪಡಿಸಿದ ನಂತರ ರಾಮ ಎಲ್ಲರಿಗೂ ಅವರವರ ಸ್ಥಾನಕ್ಕೆ ಹೋಗುವಂತೆ ಹೇಳಿದ. "ಮಿತ್ರಾ ಸುಗ್ರೀವ ! ಸನ್ಮಿತ್ರನ ಲಕ್ಷಣವುಳ್ಳ ನಿನ್ನಿಂದ ಬಹಳ ಉಪಕಾರ ವಾಯಿತು. ನೀನು ಸರ್ವ ವಾನರರೊಂದಿಗೆ ಕಿಷ್ಕಿಂಧೆಗೆ ಹೋಗಿ ಸೇರಿ ಸುಖವಾಗಿ ರಾಜ್ಯವಾಳು" ಎಂದ.

"ವಿಭೀಷಣ ! ನಿನ್ನಿಂದ ಆದ ಸಹಾಯ ಅಷ್ಟಿಷ್ಟಲ್ಲ. ನೀನು ನಿಜವಾದ ಹಿತೈಷಿ. ಲಂಕೆಗೆ ಹಿಂದಿರುಗಿ ಸೌಖ್ಯವಾಗಿ ರಾಜ್ಯಭಾರ ಮಾಡು. ಎಲ್ಲರೂ ನಿಮ್ಮ ನಿಮ್ಮ ಸ್ಥಾನಕ್ಕೆ ತೆರಳಿರಿ. ನಾನು ರಾಜಧಾನಿಯಾದ ಅಯೋಧ್ಯೆಗೆ ಹೋಗುತ್ತೇನೆ" ಎಂದು ಕೃತಜ್ಞತೆ ಸಲ್ಲಿಸಿದ. ಆಗ ವಿಭೀಷಣ ಮತ್ತು ವಾನರ ಸೇನಾಪತಿಗಳು "ರಾಘವ ! ನಾವೂ ನಿನ್ನೊಡನೆ ಅಯೋಧ್ಯೆಗೆ ಬರುತ್ತೇವೆ. ಆ ಮಂಗಳಕರವಾದ ಪುರಿಯನ್ನು ಕಾಣುತ್ತೇವೆ. ನೀನು ಸಿಂಹಾಸನದಲ್ಲಿ ಕುಳಿತು ಅಭಿಷೇಕ ಮಾಡಿ ಕೊಳ್ಳುವುದನ್ನು ಕಣ್ಣಾರೆ ನೋಡಿ ಆನಂದಿಸುತ್ತೇವೆ. ಎಲ್ಲಕ್ಕಿಂದ ಹೆಚ್ಚಾಗಿ ನಿನ್ನಂತಹ ಸುಪುತ್ರ ರನ್ನು ಪಡೆದ ಆ ಮಹಾತಾಯಿ ಕೌಸಲ್ಯೆಯನ್ನು ದರ್ಶಿಸುತ್ತೇವೆ ರಾಮ ! ನಮ್ಮನ್ನೂ ನಿನ್ನೊಡನೆ ಕರೆದುಕೊಂಡು ಹೋಗು" ಎಂದು ಪ್ರಾರ್ಥಿಸಿದರು.

"ಬಂಧುಗಳೇ ! ನನಗೆ ಇದಕ್ಕಿಂತ ಪ್ರಿಯವಾದ ವಿಷಯ ಬೇರೊಂದಿಲ್ಲ. ನನ್ನೊಂದಿಗೆ ನನ್ನ ಮಿತ್ರರನ್ನು ಕರೆದೊಯ್ಯುವ ಭಾಗ್ಯವೇ ಭಾಗ್ಯ. ಹಾಗೆಯೇ ಆಗಲಿ. ಶೀಘ್ರವಾಗಿ ಎಲ್ಲರೂ ವಿಮಾ ನವನ್ನು ಹತ್ತಿರಿ" ಎಂದ ರಾಮ.

ರಾಮ ಹಾಗೆ ಹೇಳಿದ್ದೇ ತಡ. ಎಲ್ಲ ವಾನರರೂ ನಿಮಿಷಾರ್ಧದಲ್ಲಿ ವಿಮಾನದೊಳಗೆ ನುಗ್ಗಿ ಬಿಟ್ಟರು.

ಆ ಪುಷ್ಪಕ ವಿಮಾನ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟದು. ಸ್ಥಳ ಸಂಕೋಚ ಇಲ್ಲದುದು. ತಾನೇತಾನಾಗಿ ದೊಡ್ಡದಾಗುವಂಥ ವಿಮಾನ. ಎಲ್ಲ ವಾನರರೂ ರಾಕ್ಷಸರೂ ವಿಮಾನವನ್ನು ಏರಿ ಕುಳಿತರು. ವಿಮಾನ ಹೊರಟಿತು. "ಹಂಸದಂತೆ ಆಕಾಶದಲ್ಲಿ ಹಾರತೊಡಗಿತು" ಎನ್ನುತ್ತಾರೆ ಕವಿ. ವಿಮಾನ ಹೋಗುತ್ತಿದ್ದಂತೆ ರಾಮ ಸೀತೆಗೆ ಎಲ್ಲವನ್ನೂ ತೋರಿಸುತ್ತಾ ಬಂದ,

ಸೀತೆ ! ಇಗೋ ನೋಡು! ತ್ರಿಕೂಟ ಶಿಖರದ ಮೇಲೆ ಭವ್ಯವಾಗಿ ವಿಶ್ವಕರ್ಮನಿಂದ ನಿರ್ಮಿ ಸಲ್ಪಟ್ಟಿರುವ ಲಂಕಾಪುರಿಯನ್ನು ನೋಡು.

**ಅಬ್ರವೀನ್ಮೈಥಿಲೀಂ ಸೀತಾಂ ರಾಮಃ ಶಶಿನಿಭಾನನಾಂ।**
**ಕೈಲಾಸಶಿಖರಾಕಾರೇ ತ್ರಿಕೂಟಶಿಖರೇಸ್ಥಿತಾಂ ॥**

ಎನ್ನುತ್ತಾನೆ.

ಮೊದಮೊದಲು ರಾಮ ಸೀತೆಗೆ ಲಂಕಾಪುರಿಯನ್ನು ನೋಡುವಂತೆ ಹೇಳಿದ. ಇದಕ್ಕೆ ಪ್ರಮುಖ ಕಾರಣ ಇದೆ. ರಾವಣ ಸೀತೆಯನ್ನು ಅಪಹರಿಸಿ ತಂದಾಗ ಸೀತೆಗೆ ಲಂಕೆಯನ್ನು ತೋರಿ ಸಿದ. ಆಗ ಸೀತೆ ನೋಡಲಿಲ್ಲ. ಸೀತೆಯ ದುಃಖದ ನಿಟ್ಟುಸಿರಿನಿಂದ, ಕಣ್ಣೀರಿನಿಂದ ಲಂಕಾಪುರಿ ಸುಟ್ಟು ಭಸ್ಮವಾಯಿತು. ದುಷ್ಟನಾದ ರಾವಣ ಅಳಿದ. ಭಕ್ತನಾದ ವಿಭೀಷಣ ಅರಸನಾದ. ಸಾಧು ವಾದ ವಿಭೀಷಣನ ಲಂಕೆಯನ್ನು "ದೇವಿ ! ನೋಡಿ ಕಟಾಕ್ಷಿಸು" ಎಂದು ರಾಮ ಸೀತೆಗೆ ಹೇಳಿದ.

ಲಕ್ಷ್ಮೀ ಕಟಾಕ್ಷ ತನ್ನ ಭಕ್ತರಿಗೆ ಚಿರವಾಗಿರಲಿ, ವಿಭೀಷಣ ಶಾಶ್ವತವಾಗಿ ಸರ್ವಭೋಗವನ್ನೂ

ಅನುಭವಿಸಲಿ ಎಂದು ರಾಮ, ಸೀತೆಯನ್ನು ಕುರಿತು "ಸೀತೆ ಲಂಕೆಯನ್ನು ನೋಡು" ಎಂದ. ಮುಂದೆ ಮುಂದೆ ವಿಮಾನ ಹೋಗುತ್ತಿತ್ತು. ರಾಮ ಎಲ್ಲಾ ಸ್ಥಳವನ್ನು ಸೀತೆಗೆ ತೋರಿಸುತ್ತ ಹೊರಟ. "ಸೀತೆ ಇಗೋ ನೋಡು ಇಲ್ಲೇ ದುಷ್ಟನಾದ ರಾವಣನನ್ನು ನಿನಗಾಗಿ ಕೊಂದೆ. ರಾವಣ ಇಲ್ಲಿಯೇ ಸುಟ್ಟು ಭಸ್ಮವಾದ. ನೋಡು ಇಲ್ಲೇ ಮಂಡೋದರಿ ಅತ್ತದ್ದು. ಇಲ್ಲೇ ಇಂದ್ರ ಜಿತ್ತನ್ನು ಲಕ್ಷ್ಮಣ ಸಂಹರಿಸಿದ್ದು" ಎಂದು ರಾಮ ಸೀತೆಗೆ ಒಬ್ಬೊಬ್ಬ ರಾಕ್ಷಸರನ್ನೂ ಯಾರು ಯಾರು ನಿಗ್ರಹಿಸಿದರು ಎಂದು ಹೇಳುತ್ತಾ ಬಂದ. ವಿಮಾನ ಲಂಕೆಯನ್ನು ಬಿಟ್ಟಿತು. ಆಗ ರಾಮ "ವೈದೇಹಿ ! ನೋಡು; ಸಮುದ್ರ ಎಷ್ಟು ಗಂಭೀರವಾಗಿ ಭೋರ್ಗರೆಯುತ್ತಿದೆ. ಸಮುದ್ರಕ್ಕೆ ನಿರ್ಮಿಸಿರುವ ಈ ಸೇತುವೆಯನ್ನು ನೋಡು. ಜಾನಕಿ ! ನಿನಗಾಗಿ ನಳ, ವಾನರ ಪ್ರಮುಖರೊಡನೆ ಸೇರಿ ಶತ ಯೋಜನ ವಿಸ್ತೀರ್ಣವಾದ ಈ ಸಾಗರಕ್ಕೆ ಸೇತುವೆಯನ್ನು ಕಟ್ಟಿದ. ಆಗೋ ! ಅಲ್ಲಿ ಹಿರಣ್ಯನಾಭಪರ್ವತ. ಹನುಮಂತ ನಿನ್ನನ್ನು ಅರಸಲು ಹಾರಿದಾಗ ಇದೇ ಪರ್ವತವೇ ಮೇಲೆದ್ದು ಹನುಮಂತನಿಗೆ ಆತಿಥ್ಯ ನೀಡಿದ್ದು. ನೋಡು ಸೀತೆ ! ಇಲ್ಲೇ ವಿಭೀಷಣ ಶರಣಾಗತನಾಗಿದ್ದು. ಆಗೋ ಅಲ್ಲಿ ಕಿಷ್ಕಿಂಧೆ. ಇದೇ ಸುಗ್ರೀವನ ರಾಜಧಾನಿ" ಹೀಗೆ ಹೇಳುತ್ತ ಇದ್ದ ರಾಮ.

ಕಿಷ್ಕಿಂಧೆಯನ್ನು ವಿಮಾನ ತಲುಪಿದಾಗ ಸೀತೆ "ಮಹಾಪ್ರಭು ! ವಿಮಾನ ಇಲ್ಲಿ ನಿಲ್ಲಲಿ. ಸುಗ್ರೀವನ ಪ್ರಿಯ ಪತ್ನಿಯರು, ಹಾಗೂ ವಾನರರ ಪತ್ನಿಯರು ಅಯೋಧ್ಯೆಗೆ ಬರಲಿ" ಎಂದಳು. ಸೀತೆಯ ಪ್ರೀತ್ಯರ್ಥವಾಗಿ ರಾಮ ಸುಗ್ರೀವನನ್ನು ಕುರಿತು "ಸುಗ್ರೀವ ಶೀಘ್ರವಾಗಿ ಕಿಷ್ಕಿಂಧೆಗೆ ಹೋಗಿ ಎಲ್ಲ ವಾನರ ಸ್ತ್ರೀಯರನ್ನೂ ಕರೆದುಕೊಂಡು ಬಾ" ಎಂದ. ಅದರಂತೆ ಸುಗ್ರೀವ ಮತ್ತು ಇತರ ವಾನರ ಪ್ರಮುಖರೆಲ್ಲ ಹೋಗಿ ವಾನರ ಸ್ತ್ರೀಯರನ್ನು ಕರೆದು ತಂದರು. ಎಲ್ಲ ವಾನರ ಸ್ತ್ರೀಯರಿಗೂ ಸೀತೆಯನ್ನು ಕಾಣುವ ಹಂಬಲ. ಎಲ್ಲರೂ ಸುತ್ತುವರಿದು ಮಿಕಮಿಕ ನೋಡತೊಡಗಿದಾಗ ಸೀತೆ ಲಜ್ಜೆಯಿಂದ ತಲೆಬಾಗಿಸಿದಳು. ನೋಡಿ ವಾನರಿಯರು ಜಾನಕಿಯನ್ನು ಮನದಣಿಯ ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳತೊಡಗಿದರು.

"ಅಲ್ಲ ! ಈ ಸೀತೆಗಾಗಿ ರಾಮ ಇಷ್ಟು ಒದ್ದಾಡಿದನೇ ?" ಎಂದಿತು. ಒಂದು ವಾನರಿ.

ನೋಡು ಆ ಸೀತೆಯ ಮೈ ಎಷ್ಟು ಬೆಳ್ಳಗಿದೆ. ! ಇಷ್ಟು ಬಿಳುಪಾಗಿ ಇರುವುದೇ " ಎಂದು ಇನ್ನೊಂದು ವಾನರಿ ಗೇಲಿ ಮಾಡಿತು.

"ಬಿಳಿಯ ಬಣ್ಣ ಇರಲಿ, ನೋಡು ! ಆ ಸೀತೆಯ ಮೈಯಲ್ಲಿ ರೋಮವೇ ಇಲ್ಲ. ನಮಗೆಲ್ಲ ಮೈ ಹೇಗಿದೆ. ಆದರೆ ಅವಳ ಮೈಮೇಲೆ ಒಂದಾದರೂ ಕೂದಲು ಬೇಡವೇ ? " ಇನ್ನೊಂದು ವಾನರಿಯ ಉದ್ಗಾರ ಇದು.

"ಆದಿರಲಿ ! ಅವಳ ಕಣ್ಣು ನೋಡು. ಕಿವಿಯವರೆಗೆ ಚಾಚಿವೆ. ಎಷ್ಟು ವಿಶಾಲವಾಗಿದೆ ಆದರೆ ನಮಗೆ ನೋಡು. ಎಷ್ಟು ಚಿಕ್ಕದಾಗಿ ಚೆನ್ನಾಗಿ ಇದೆ, ಅವಳಿಗೋ ಅಗಲವಾಗಿದೆ ಎಂದಿತು ಇನ್ನೊಂದು ಕಪಿ.

"ಅದಿರಲಿ ಅಲ್ಲಿ ನೋಡು ಆ ಸೀತೆಗೆ ಸೊಂಟವೇ ಇಲ್ಲವಲ್ಲೆ" ಎಂದಿತು ಮತ್ತೊಂದು ಹೆಣ್ಣು ಕೋತಿ.

"ಎಲ್ಲಕ್ಕಿಂತ ಮುಖ್ಯವಾದುದನ್ನೇ ಮರೆತಿರಿ" ಎಂದಿತು ಒಂದು ಮುದಿ ವಾನರಿ

"ಏನು ಏನು ? ಎಂದು ಎಲ್ಲ ವಾನರಿಯರೂ ಉತ್ಸಾಹದಿಂದ ಕೇಳಿದವು.

''ಏನೇ ? ಮುಖ್ಯವಾದ ಅಂಗವೇ ಸೀತೆಗಿಲ್ಲವಲ್ಲಾ ಬಾಲ ! ಎಲ್ಲಕ್ಕಿಂತ ಉತ್ತಮವಾದ, ಪ್ರಧಾನವಾದ ಅಂಗ ಅಲ್ಲವೇ ಅದು ? ಸೀತೆಗೆ ಇಲ್ಲವೇ ಇಲ್ಲ." ಎಂದಿತು !

ಕಿಷ್ಕಿಂಧೆಯಿಂದ ವಿಮಾನ ಮುಂದೆ ಹೊರಟಿತು. ರಾಮ "ಸೀತೆ, ನೋಡು ! ಇಲ್ಲೇ ನಾನು ವಾಲಿಯನ್ನು ಕೊಂದದ್ದು. ಅದೋ ನೋಡು ಅದೇ, ಋಷ್ಯಮೂಕ ಪರ್ವತ, ಸೀತೆ, ಇಲ್ಲಿ ನೋಡು ಪಂಪಾಸರಸ್ಸು. ಇಲ್ಲಿ ನಿನಗಾಗಿ ಎಷ್ಟು ಪರಿತಪಿಸಿದೆ ಬಲ್ಲೆಯಾ ? ಜಾನಕಿ ! ಮಹಾತ್ಮಳಾದ ಶಬರಿಯ ಆಶ್ರಮ ಇದು. ಇಲ್ಲೇ ನಾನು ಕಬಂಧನನ್ನು ಕೊಂದದ್ದು.

"ವೈದೇಹಿ ! ನೋಡು ! ಇಲ್ಲೆ ಜಟಾಯು ನಿನಗಾಗಿ ರಾವಣನೊಡನೆ ಹೋರಾಡಿ ಪ್ರಾಣ ಬಿಟ್ಟಿದ್ದು. ಅದೋನೋಡು! ಅಗಸ್ತ್ಯಾಶ್ರಮ ! ಜಾನಕಿ ! ನೋಡು, ನಾವಿದ್ದ ಆಶ್ರಮ, ಇಲ್ಲೆ ನಿನ್ನನ್ನು ದುಷ್ಟನಾದ ರಾವಣ ಅಪಹರಿಸಿದ. ಖರ, ದೂಷಣ, ತ್ರಿಶಿರಸ್ಸನ್ನು ಸಂಹರಿಸಿದ್ದು ಇಲ್ಲೇ. ನೆನಪಿದೆ ಅಲ್ಲವೆ ? ಸೀತೆ ! ಇದೋ ನೋಡು ! ಪವಿತ್ರವಾದ ಗೋದಾವರಿ ನದಿ. ಇದೇ ಶರಭಂಗರ ಆಶ್ರಮ. ಇದೇ ಸುತೀಕ್ಷ್ಣಾಶ್ರಮ. ಇದು ಅತ್ರಿಮಹರ್ಷಿಗಳ ಆಶ್ರಮ. ವೈದೇಹಿ ಇಲ್ಲಿ ನಿನಗೆ ಮಹಾಸತಿ ಅನಸೂಯೆ ಆಭರಣಗಳನ್ನು ಕೊಟ್ಟಿದ್ದು.

"ಜಾನಕಿ ! ನೋಡು ! ಇದೇ ಚಿತ್ರಕೂಟ. ಇಲ್ಲೇ ಮಹಾತ್ಮನಾದ ನನ್ನ ತಮ್ಮ ಭರತನನ್ನು ಸಂಧಿಸಿದ್ದು. ಮೈಥಿಲಿ ! ಅದೋ ನೋಡು, ಅದೇ ಶೃಂಗಿಬೇರಪುರ. ಯಮುನಾನದಿ ಹೇಗೆ ಹರಿಯುತ್ತಿದೆ ನೋಡಿದೆಯಾ ! ಜನಕನಂದಿನಿ ! ಅಲ್ಲಿ ನೋಡು ರಮ್ಯವಾದ ಅಯೋಧ್ಯೆ ಕಂಗೊಳಿಸುತ್ತಿದೆ. ಹದಿನಾಲ್ಕು ವರ್ಷ ವನವಾಸ ಮಾಡಿ ಬರುತ್ತಿದೇವೆ. ಅಯೋಧ್ಯೆಗೆ ವಂದಿಸು ವೈದೇಹಿ" ಎಂದ ರಾಮ. ಅಯೋಧ್ಯೆ ಬಂದಿತು ! ಎಂದೊಡನೆ ವಾನರರು, ರಾಕ್ಷಸರು ಎಲ್ಲರೂ ವಿಮಾನದಲ್ಲಿ ನೆಗೆದು, ಕುಣಿದು ನೋಡತೊಡಗಿದರು. ರಾಮನು ಸೀತಾಲಕ್ಷ್ಮಣ ಸಮೇತನಾಗಿ ಅಮರಾವತಿಯಂತೆ ಶೋಭಿಸುತ್ತಿರುವ ಅಯೋಧ್ಯೆಗೆ ಕೈಮುಗಿದ.

ವಿಮಾನದಿಂದ ಇಳಿದು ಭರದ್ವಾಜಾಶ್ರಮಕ್ಕೆ ಬಂದ. ಭರದ್ವಾಜ ಮುನಿಗಳಿಗೆ ನಮಸ್ಕರಿಸಿದ. ಹದಿನಾಲ್ಕುವರ್ಷಗಳು ಪೂರ್ಣವಾಗಿ ಚೈತ್ರಶುದ್ಧ ಪಂಚಮಿಯಂದು ಬಂದ ರಾಮನು ಭರದ್ವಾಜಾಶ್ರಮವನ್ನು ಸೇರಿದ.

ಮುನಿಯ ಚರಣಗಳಿಗೆ ವಂದಿಸಿ, ''ಮುನಿಪುಂಗವ, ಅಯೋಧ್ಯೆಯಲ್ಲಿ ಎಲ್ಲರೂ ಕುಶಲವಷ್ಟೆ ? ಭರತ ಶತ್ರುಘ್ನರು ಕುಶಲವಾಗಿದ್ದಾರೆಯೇ ? ನನ್ನ ತಾಯಿಯರು ಜೀವಿತರಾಗಿದಾರೆಯೇ ?" ಎಂದು ಕೈಮುಗಿದು ಕೇಳಿದ.

ಭರದ್ವಾಜರು "ರಾಘವ ! ಅಯೋಧ್ಯೆಯಲ್ಲಿ ಎಲ್ಲರೂ ಚೆನ್ನಾಗಿದಾರೆ. ನೀನು ವನವಾಸವನ್ನು ಮುಗಿಸಿ ಶತ್ರುಗಳನ್ನು ಜಯಿಸಿ ಸಫಲಮನೋರಥನಾಗಿ ಬಂದುದು ನನಗೆ ಅತ್ಯಾನಂದವನ್ನುಂಟುಮಾಡಿದೆ, ನೀನು ಕಾಡಿನಲ್ಲಿ ಶರಣಾಗತರನ್ನು ರಕ್ಷಿಸಿದ್ದು, ರಾವಣನನ್ನು ಸಂಹರಿಸಿದ್ದು, ಸೀತೆಯನ್ನು ಪುನಃ ಪಡೆದದ್ದು ಎಲ್ಲ ನನಗೆ ಗೊತ್ತಾಗಿದೆ. ರಾಘವ ! ನೀನು ಈದಿನ ಇಲ್ಲಿಯೇ ತಂಗಿದ್ದು ನಾಳೆ ಅಯೋಧ್ಯೆಗೆ ಹಿಂದಿರುಗು. ರಾಮ ! ನಿನಗೆ ನಾನು ಏನಾದರೂ ಹಿತ ಮಾಡಬೇಕು ಎನಿಸಿದೆ. ಏನುಮಾಡಲಿ ಹೇಳು" ಎಂದರು.

ರಾಮನು ವಿನಯದಿಂದ ಭಗವನ್ ! ಇಲ್ಲಿಂದ ನಾನು ಅಯೋಧ್ಯೆಗೆ ಹೋಗುವಾಗ ಎಲ್ಲ

ವೃಕ್ಷಗಳೂ ಫಲಪುಷ್ಪ ಭರಿತವಾಗುವಂತೆ ಅನುಗ್ರಹಿಸಿ ಎಂದ. ಆದರಂತೆಯೇ ಭರದ್ವಾಜರು ಅನುಗ್ರಹಿಸಿದರು. ದಾರಿಯುದ್ದಕ್ಕೂ ಫಲಪುಷ್ಪಗಳಿಂದ ವೃಕ್ಷಗಳು, ಲತೆಗಳು ಕಂಗೊಳಿಸತೊಡಗಿದವು. ಭರದ್ವಾಜರನ್ನು ತೃಪ್ತಿಪಡಿಸಲು ರಾಮ ತನ್ನ ಪರಿವಾರದೊಂದಿಗೆ ಆ ರಾತ್ರಿ ಅಲ್ಲೇ ವಿಶ್ರಮಿಸಿದ.

ಶ್ರೀರಾಮ ಹನುಮಂತನನ್ನು ಕರೆದು, ಹನುಮನ್! ನೀನು ಈಗಲೇ ಶೀಘ್ರವಾಗಿ ಹೋಗಿ ಶೃಂಗಿಬೇರಪುರದಲ್ಲಿರುವ ನನ್ನ ಪ್ರಾಣಸಖನಾದ ಗುಹನಿಗೆ ನಾನು ಕುಶಲನಾಗಿ ಹಿಂದಿರುಗಿರುವ ಸಮಾಚಾರವನ್ನು ತಿಳಿಸು. ಅಲ್ಲಿಂದ ನೇರವಾಗಿ ಅಯೋಧ್ಯೆಗೆ ಹೋಗಿ ಭರತನಿಗೆ ಎಲ್ಲಾ ವಿಷಯವನ್ನು ತಿಳಿಸು. ಭರತನ ಮುಖ ಭಾವವನ್ನೂ, ಅವನ ಕಣ್ಣಿನ ನೋಟವನ್ನೂ, ಅವನ ಮಾತಿನ ಧಾಟಿಯನ್ನೂ ಗಮನಿಸು. ಒಂದುವೇಳೆ ಭರತ ತಾನೇ ರಾಜ್ಯವನ್ನು ಆಳುವಅಭಿಪ್ರಾಯದಿಂದಿದ್ದರೆ ತಿಳಿಸು. ನಾವು ಹೀಗೆಯೇ ಹಿಂದಿರುಗಿ ತಪಸ್ವೀ ಜೀವನವನ್ನು ನಡೆಸಲು ಹೋಗುತ್ತೇವೆ. ಭರತನೇ ರಾಜ್ಯವಾಳಲಿ. ಹನುಮನ್! ಎಲ್ಲವನ್ನೂ ಸರಿಯಾಗಿ ಗಮನಿಸಿ ಬೇಗ ಹಿಂದಿರುಗು ಎಂದು ಕಳುಹಿಸಿದ. ಎಂಥ ರಾಜಕಾರಣಿ ರಾಘವ ಎಂಬುದು ಇಲ್ಲಿ ವ್ಯಕ್ತವಾಗುತ್ತದೆ. ಅಧಿಕಾರದ ಮೋಹ ಎಂಥವರನ್ನೂ ಮರುಳುಮಾಡೀತು ಎಂಬುದನ್ನು ರಾಮ ಬಲ್ಲ.

ತಕ್ಷಣ ಹನುಮಂತ ಮಾನವರೂಪ ಧರಿಸಿ ವಾಯುವೇಗದಲ್ಲಿ ಅಲ್ಲಿಂದ ಹೊರಟ. ಗುಹನಿಗೆ ರಾಮನ ಕುಶಲವನ್ನು ತಿಳಿಸಿ ಅಯೋಧ್ಯೆಗೆ ಹೊರಟ. ಅಲ್ಲಿ ಜಟಿಲನಾಗಿಯೂ, ಕೃಶನಾಗಿಯೂ, ತೇಜಸ್ವಿಯಾಗಿಯೂ ಇರುವ ಭರತನನ್ನು ಕಂಡ. ರಾಮ ಇನ್ನೂ ಬರಲಿಲ್ಲ ಎಂದು ಅಗ್ನಿಪ್ರವೇಶದ ಸಿದ್ಧತೆಯಲ್ಲಿ ಇದ್ದ ಭರತ. ಅಣ್ಣನಲ್ಲೇ ಅನುರಕ್ತನಾಗಿದ್ದು, ಅವನಿಗಾಗಿ ಹದಿನಾಲ್ಕು ವರ್ಷಗಳು ಕಾದಿದ್ದ ಮಹಾನುಭಾವ ಭರತನನ್ನು ಹನುಮಂತ ನೋಡಿದ. ನೋಡಿದವನೇ ಆನಂದ ಭಾಷ್ಪ ಸುರಿಸಿದ.

ರಾಮನಂತೆಯೇ ಜಟೆಯನ್ನು ಕಟ್ಟಿ ನಾರುಮಡಿಯನ್ನು ಧರಿಸಿದ್ದ. ತಾಪಸ ಜೀವನವನ್ನು ನಡಸುತ್ತಿದ್ದ ಭರತ. "ಅಣ್ಣ ಕಾಡಿಗೆ ಹೋಗಲು ಕಾರಣನಾದೆನಲ್ಲ" ಎಂಬ ದುಃಖದಿಂದ ಕೊರಗಿ ಬಹಳ ಕೃಶವಾಗಿದ್ದ ಭರತ. ಇಂಥ ಭಕ್ತಾಗ್ರಣಿಯನ್ನು ಕಂಡು ದಾಸಶ್ರೇಷ್ಠನಾದ ಹನುಮಂತ "ರಘುಕುಲೋತ್ತಮ! ಯಾವ ರಾಮನಿಗಾಗಿ ನೀನು ಇಷ್ಟು ವರ್ಷಗಳಕಾಲ ಪರಿತಪಿಸುತ್ತಿದೆಯೋ ಆ ರಾಮ ಸೀತಾ ಲಕ್ಷ್ಮಣ ಸಮೇತನಾಗಿ ಭರದ್ವಾಜಾಶ್ರಮಕ್ಕೆ ಬಂದಿದ್ದಾನೆ. ಈಗಲೇ ರಾಮನೊಡನೆ ನೇರುವೆ.

**ಅಸ್ಮಿನ್ ಮುಹೂರ್ತೇ ಭ್ರಾತ್ರಾತ್ವಂ ರಾಮೇಣ ಸಹಸಂಗತಃ ।**

ಎಂದು ಅಂತರಿಕ್ಷದಿಂದಲೇ ಕೂಗಿ ಹೇಳಿ ಕೆಳಗಿಳಿದ. ಅತ್ಯಾನಂದಕರವಾದ ಈ ಮಾತುಗಳು ಭರತನ ಕಿವಿಗೆ ಸುಧಾಸಿಂಚನದಂತಿತ್ತು. ಹನುಮಂತನನ್ನು ಅಪ್ಪಿಕೊಂಡು ಹರ್ಷಾತಿರೇಕದಿಂದ "ಮಹಾನುಭಾವ! ನೀ ಹೇಳಿದ ಈ ಮಾತಿಗೆ ನಿನಗೆ ಏನು ಕೊಡಲಿ ? ನೂರಾರು ಗೋವುಗಳನ್ನು ಕೊಡಲೇ? ಇಲ್ಲ; ನೀನು ಬ್ರಹ್ಮಚಾರಿಯಂತೆ ಕಾಣುತ್ತಿ, ಆದ್ದರಿಂದ ಸಾಲಂಕೃತರಾದ ಉತ್ತಮ ಗುಣವುಳ್ಳ ಹದಿನಾರು ಕನ್ಯಾಮಣಿಗಳನ್ನು ಕೊಡಲೇ ? ಊಹೂಂ ಏನು ಕೊಟ್ಟರೂ ಸಾಲದು. ನೀ ಹೇಳಿದ ಮಾತಿಗೆ ಮೂರು ಲೋಕವನ್ನೇ ಕೊಟ್ಟರೂ ಸಾಲದು.

**ಕಲ್ಯಾಣೀಬತ ಗಾಥೇಯಂ ಲೌಕಿಕೀ ಪ್ರತಿಭಾತಿಮಾಂ ।**

**ಏತಿ ಜೀವಂತಮಾನಂದೋ ನರಂ ವರ್ಷ ಶತಾದಪಿ ॥**

ಲೋಕದಲ್ಲಿ ಪ್ರಚಲಿತದಲ್ಲಿರುವ ಮಾತು ಸತ್ಯವಾದುದು. ಮನುಷ್ಯ ಜೀವಿತನಾಗಿದ್ದರೆ ಎಂದಾದರೂ ಒಂದು ದಿನ ಸೌಖ್ಯವನ್ನು ಕಾಣುತ್ತಾನೆ. ಇಷ್ಟು ವರ್ಷಗಳಾದ ಮೇಲೆ ಇಂದು ನನಗೆ ಈ ಮಾತು ಸಿದ್ಧಿಸಿತು. ಮಹಾನುಭಾವ! ನೀ ಹೇಳಿದೆಯಲ್ಲ 'ವಾನರ ರಾಜನಾದ ಸುಗ್ರೀವ ಸಹಿತನಾಗಿ ರಾಮ ಬಂದಿದಾನೆ" ಎಂದು, ವಾನರರಿಗೂ ನರರಿಗೂ ಹೇಗೆ ಸಖ್ಯವೇರ್ಪಟ್ಟಿತು ? ರಾಮ ಕಾಡಿಗೆ ಹೋದ ಮೇಲೆ ಏನೆಲ್ಲ ಆಯಿತು. ಎಲ್ಲವನ್ನೂ ವಿವರವಾಗಿ ಹೇಳು ? ಕೇಳಲು ಉತ್ಸುಕನಾಗಿದ್ದೇನೆ" ಎಂದ.

ಆಗ ಹನುಮಂತ ತನ್ನ ಬಾಯಿಂದ ರಾಮಾಯಣವನ್ನೇ ಹೇಳುತ್ತಾನೆ. ಎಷ್ಟು ಸಂಕ್ಷೇಪವಾಗಿ, ಎಷ್ಟು ರಸವತ್ತಾಗಿ ಹೇಳುತ್ತಾನೆ ಎಂಬುದನ್ನು ನೋಡಬಹುದು. "ಭರತ ನೀನು ಚಿತ್ರಕೂಟದಿಂದ ಪಾದುಕೆಗಳನ್ನು ಪಡೆದು ಹಿಂದಿರುಗಿದೆಯಷ್ಟೆ. ಆ ಮೇಲೆ ರಾಮನು ಸೀತಾ ಲಕ್ಷ್ಮಣ ಸಮೇತನಾಗಿ ದಂಡಕಾರಣ್ಯವನ್ನು ಪ್ರವೇಶಿಸಿದ. ಮಾರ್ಗದಲ್ಲಿ "ವಿರಾಧ ಎಂಬ ರಾಕ್ಷಸನನ್ನು ಕೊಂದ. ಅರಣ್ಯದಲ್ಲಿ ಋಷಿಗಳಿಗೆಲ್ಲ ಅಭಯ ಪ್ರದಾನ ಮಾಡಿದ. ಶರಭಂಗಾಶ್ರಮಕ್ಕೆ ಹೋಗಿ ಅಲ್ಲಿಂದ ಸುತೀಕ್ಷ್ಣಾಶ್ರಮದಲ್ಲಿ ಸ್ವಲ್ಪಕಾಲ ತಂಗಿದ್ದು ಅಗಸ್ತ್ಯರ ಆದೇಶದಂತೆ ಪಂಚವಟಿಯಲ್ಲಿ ವಾಸಮಾಡತೊಡಗಿದ.

ಅಲ್ಲಿ ರಾವಣನ ತಂಗಿಯಾದ ಶೂರ್ಪಣಖಿ ರಾಮನನ್ನು ಕಾಮಿಸಿ ಸೀತೆಯನ್ನು ತಿನ್ನಲು ಬಂದಳು. ರಾಮನ ಇಚ್ಛೆಯಂತೆ ಲಕ್ಷ್ಮಣ ಅವಳ ಕಿವಿ ಮೂಗುಗಳನ್ನು ಕತ್ತರಿಸಿದ. ಅವಳಿಂದ ಪ್ರೇರಿತರಾಗಿ, ಖರ ದೂಷಣ, ತ್ರಿಶಿರಸ್ಸು ಎಂಬ ರಾಕ್ಷಸ ಪ್ರಮುಖರು ಹದಿನಾಲ್ಕು ಸಾವಿರ ರಾಕ್ಷಸರೊಂದಿಗೆ ಯುದ್ಧಕ್ಕೆ ಬಂದರು. ಅವರೆಲ್ಲರನ್ನೂ ರಾಮ ಏಕಾಕಿಯಾಗಿ ಮುಹೂರ್ತ ಕಾಲದೊಳಗಾಗಿ ಸಂಹರಿಸಿದ ಎಂದು ಹೇಳಿ ಅಲ್ಲಿಂದ ಮುಂದೆ ಮಾಯಾ ಮೃಗದಿಂದ ನಡೆದ ಸೀತಾಪಹರಣ, ಜಟಾಯು ಮೋಕ್ಷ. ಕಬಂಧ ಮೋಕ್ಷ, ಸುಗ್ರೀವ ಸಖ್ಯ, ವಾಲಿ ವಧೆ. ಸೀತಾನ್ವೇಷಣೆ, ಸೇತು ಬಂಧನ, ರಾಮ ರಾವಣ ಯುದ್ಧ, ರಾವಣನ ವಧೆ ಎಲ್ಲವನ್ನೂ ವಿವರಿಸಿದ.

ರಾಮ ಹೇಳಿದ್ದಂತೆ ಇಂದ್ರನೇ ಮುಂತಾದ ದೇವತೆಗಳು ರಾಮನಿಗೆ ವರ ಕೊಟ್ಟಿದ್ದನ್ನೂ, ರಾಮ ದಶರಥರ ಸಮಾಗಮವನ್ನೂ ಹೇಳಿದ. ಮುಂದೆ ಎಲ್ಲ ವಾನರ ರಾಕ್ಷಸರೊಂದಿಗೆ ಪುಷ್ಪಕವನ್ನೇರಿ ರಾಮ ಹೊರಟಿದ್ದು. ಕಿಷ್ಕಿಂಧೆಯಲ್ಲಿ ವಾನರ ಸ್ತ್ರೀಯರನ್ನೂ ವಿಮಾನದಲ್ಲಿ ಏರಿಸಿಕೊಂಡಿದ್ದನ್ನೂ ತಿಳಿಸಿದ. "ಭರತ ! ಈಗ ರಾಮಎಲ್ಲರೊಡನೆ ಭರದ್ವಾಜಾಶ್ರಮದಲ್ಲಿ ಇದ್ದಾನೆ. ನಾಳೆ ಪುಷ್ಯಯೋಗದಿಂದ ಕೂಡಿದ ಶುಭ ಮುಹೂರ್ತದಲ್ಲಿ ನೀನು ರಾಮನನ್ನು ನೋಡುವಿ" ಎಂದ.

ಎಲ್ಲವನ್ನೂ ಕೇಳಿದ ಭರತನಿಗೆ ಆನಂದ, ಹಿಗ್ಗು ಹಿಡಿಸಲಾರದಷ್ಟಾಯಿತು. ಕೈ ಮುಗಿದು ಅತ್ಯಂತ ಪ್ರಸನ್ನನಾಗಿ "ಅಬ್ಬ ಇಷ್ಟು ಕಾಲದ ಮೇಲೆ ಈಗ ನನ್ನ ಮನೋರಥ ಪೂರ್ಣವಾಯಿತು

**ಚಿರಸ್ಯ ಪೂರ್ಣಃ ಖಲುಮೇ ಮನೋರಥಃ** ಎಂದು ಹೇಳಿದ.

## ಶ್ರೀರಾಮನ ಆಗಮನ

ಭರತನು ಶತ್ರುಘ್ನನನ್ನು ಕುರಿತು ಅಣ್ಣ ರಾಮನ ಸ್ವಾಗತಕ್ಕಾಗಿ ಅಯೋಧ್ಯೆಯನ್ನು ಅಲಂಕರಿಸುವಂತೆ ಹೇಳಿದ. ಶತ್ರುಘ್ನನ ಆಜ್ಞೆಯಂತೆ ನಂದಿ ಗ್ರಾಮದಿಂದ ಅಯೋಧ್ಯೆಯವರೆಗೆ ರಾಜಮಾರ್ಗವನ್ನು ರಚಿಸಲಾಯಿತು. ಕೌಸಲ್ಯೆ, ಸುಮಿತ್ರೆ, ಕೈಕೇಯಿ ಎಲ್ಲರೂ ರಥದಲ್ಲಿ ಕುಳಿತು ನಂದಿ

ಗ್ರಾಮಕ್ಕೆ ಬಂದು ಸೇರಿದರು. ಎಂಟು ಜನ ಮಂತ್ರಿಗಳು ಮದಿಸಿದ ಆನೆಯನ್ನೇರಿ ಬಂದರು.

ಭರತನ ಆಜ್ಞೆಯಂತೆ ಇಡೀ ಅಯೋಧ್ಯೆ ಸರ್ವಾಲಂಕಾರದಿಂದ ಶೋಭಿಸತೊಡಗಿತು. ಮಾರ್ಗದಲ್ಲೆಲ್ಲಾ ಹಿಮದಂತೆ ಶೀತಲವಾದ ಸುಗಂಧ ಜಲವನ್ನು ಸಿಂಪಡಿಸಲಾಗಿತ್ತು. ತಳಿರುತೋರಣಗಳಿಂದಲೂ, ಧ್ವಜ ಪತಾಕೆಗಳಿಂದಲೂ ಅಯೋಧ್ಯಾನಗರಿ ಸರ್ವಾಲಂಕಾರದಿಂದ ವಿರಾಜಿಸುವ ಸುಂದರ ರಮಣಿಯಂತೆ ಕಂಗೊಳಿಸುತ್ತಿತ್ತು. ಮನೆಮನೆಗಳಲ್ಲಿ ಎಲ್ಲರೂ ರಾಮನಿಗೆ ಭವ್ಯ ಸ್ವಾಗತ, ನೀಡಲು ಸಿದ್ಧರಾಗಿ ನಿಂತಿದ್ದರು ಎಲ್ಲರ ಮುಖದಲ್ಲೂ ಉತ್ಸಾಹ ತುಂಬಿ ತುಳುಕುತ್ತಿತ್ತು. ಇಷ್ಟೆಲ್ಲ ಆದ ಮೇಲೂ ರಾಮ ಇನ್ನೂ ಬಾರದ್ದನ್ನು ಕಂಡು ಭರತ ''ಹನುಮಂತ ಇದೇನು ಇನ್ನೂ ರಾಮ ಬರಲೇ ಇಲ್ಲ. ಅಲ್ಲದೆ ಕಾಮರೂಪಿಗಳಾದ ವಾನರರ ಸುಳಿವೂ ಇಲ್ಲ. ಸಾಮಾನ್ಯವಾಗಿ ವಾನರರು ಚಂಚಲ ಚಿತ್ತರು. ಚಪಲರು ಆದರಂತೆಯೇ ನೀನೂ ಆದಯೋ ಹೇಗೆ ? ರಾಮನ ಸುಳಿವೇ ಕಾಣುತ್ತಿಲ್ಲವಲ್ಲ" ಎಂದ. ಆಗ ಹನುಮಂತ "ಭರತ ! ಹಾಗೇನಿಲ್ಲ, ರಾಮ ಬಂದೇ ಬರುತ್ತಾನೆ. ದಾರಿಯುದ್ದಕ್ಕೂ ಭರದ್ವಾಜ ಹಾಗೂ ಇಂದ್ರನ ಅನುಗ್ರಹದಿಂದ ಮಧುತುಂಬಿದ ಫಲಗಳು ಇವೆ, ಉತ್ಸಾಹಿಗಳಾದ ವಾನರರೆಲ್ಲ ಆ ಫಲಗಳನ್ನು ಭುಂಜಿಸುವ ಆತುರದಲ್ಲಿ ಇದಾರೆ . . . ಅಗೋ ! ವಾನರರ "ಕಿಲಕಿಲ" ಶಬ್ದ ಕೇಳಿ ಬರುತ್ತಿದೆ. ನೋಡು ಅಲ್ಲಿ ಅರುಣ ಕಾಂತಿಯಿಂದ ಕಂಗೊಳಿಸುತ್ತಿರುವ ವಿಮಾನ ಕಾಣುತ್ತಿದೆ. ಅದರಲ್ಲೇ ಶ್ರೀ ರಾಮಚಂದ್ರನು ಸೀತಾ ಲಕ್ಷ್ಮಣ ಸಮೇತನಾಗಿ ಕುಳಿತಿದ್ದಾನೆ. ಅವನೊಂದಿಗೆ ವಿಮಾನದಲ್ಲಿ ಸುಗ್ರೀವ, ವಿಭೀಷಣರೂ ಬಂದಿದ್ದಾರೆ" ಎಂದು ಹನುಮಂತ ಹೇಳುತ್ತಿರುವಂತೆ ಸೂರ್ಯನಂತೆ ಪ್ರಕಾಶಮಾನವಾದ ವಿಮಾನ ಕಾಣಿಸಿತು.

ರಾಮನ ಎರಡು ಪಾದುಕೆಗಳನ್ನೂ ತನ್ನ ತಲೆಯ ಮೇಲೆ ಇಟ್ಟುಕೊಂಡು ಭರತ ರಾಮನನ್ನೇ ನಿರೀಕ್ಷಿಸುತ್ತಿದ್ದ. ಮೇರು ಪರ್ವತದಂಥ ಆ ಪುಷ್ಪಕ ವಿಮಾನದಲ್ಲಿ ಸೂರ್ಯನಂತೆ ಕಂಗೊಳಿಸುತ್ತಿರುವ ರಾಮನನ್ನು ಅಯೋಧ್ಯೆಯ ಪ್ರಜೆಗಳೆಲ್ಲ ನೋಡಿದರು ಭರತನು ದೂರದಿಂದಲೇ ರಾಮನಿಗೆ ನಮಸ್ಕರಿಸಿ ಪೂಜಿಸಿದ. ವಿಮಾನ ನಿಂತಿತು. ನಂದಿ ಗ್ರಾಮದಲ್ಲಿ ಎಲ್ಲರೂ "ಶ್ರೀ ರಾಮಚಂದ್ರ ! ನಿನಗೆ ಸ್ವಾಗತ ! ಸ್ವಾಗತ" ಎಂದು ಅಂತಃಕರಣ ಪೂರ್ವಕವಾಗಿ ಘೋಷಿಸುತ್ತಿದ್ದರು.

ವಿಮಾನವು ನಿಂತಕೂಡಲೇ ರಾಮನು ಭರತನನ್ನು ವಿಮಾನದಲ್ಲಿ ಹತ್ತಿಸಿಕೊಂಡ. ತನ್ನ ತಲೆಯ ಮೇಲಿದ್ದ ರಾಮನ ಪಾದುಕೆಗಳನ್ನು ಭರತ ಶ್ರೀ ರಾಮನ ದಿವ್ಯ ಪಾದಗಳಿಗೆ ತೊಡಿಸಿ ಅವನ ಎರಡು ಪಾದಗಳನ್ನೂ ಬಿಗಿಯಾಗಿ ಹಿಡಿದು ಕೊಂಡು ಆನಂದದಿಂದ ಕಣ್ಣೀರು ಸುರಿಸತೊಡಗಿದ. ದೀರ್ಘ ಕಾಲದ ಅಗಲಿಕೆಯಿಂದ ಭರತ ದೀನನಾಗಿ ಕೃಶನಾಗಿದ್ದ. ನಮಸ್ಕಾರ ಮಾಡಿದ ಭರತನನ್ನು ರಾಮ ತನ್ನ ಎರಡೂ ಕೈಗಳಿಂದ ಎತ್ತಿ ಅಪ್ಪಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ತಲೆಯನ್ನು ತಡವಿದ. ರಾಮನ ಕಣ್ಣುಗಳಿಂದ ಧಾರೆಯಾಗಿ ಬಿದ್ದ ನೀರು ಭರತನ ತಲೆಗೆ ಅಭಿಷೇಕ ಮಾಡಿದಂತೆ ಇತ್ತು. ಭರತನ ಕಣ್ಣುಗಳಿಂದ ಧಾರೆಧಾರೆಯಾಗಿ ಹರಿಯುತ್ತಿದ್ದ ನೀರು ರಾಮನ ದಿವ್ಯ ಚರಣಗಳನ್ನು ತೊಳೆಯುವಂತಿತ್ತು. ಹೃದಯ ಸ್ಪರ್ಶಿಯಾದ ಆ ನೋಟ ಅಲ್ಲಿ ನೆರೆದಿದ್ದ ಎಲ್ಲರ ಮನಸ್ಸನ್ನೂ ಸೂರೆಗೊಂಡಿತು.

ಇದಾದ ನಂತರ ಭರತನು ಸುಗ್ರೀವ, ಮೈಂದ, ದ್ವಿವಿಧ, ನಳ, ಸುಷೇಷಣ, ಅಂಗದ ಮುಂತಾದ ವಾನರ ಪ್ರಮುಖರನ್ನೆಲ್ಲ ಒಬ್ಬೊಬ್ಬರನ್ನಾಗಿ ಅಪ್ಪಿಕೊಂಡ. ಮತ್ತೆ ಮತ್ತೆ ಸುಗ್ರೀವನನ್ನು ಅಪ್ಪಿಕೊಂಡು ಭರತ "ಸುಗ್ರೀವ ! ನೀನು ನಮಗೆ ಐದನೆಯ ಸೋದರ ನಿನ್ನ ಮಿತ್ರತ್ವ

ದಿಂದ ಬಹಳ ಸಹಾಯವಾಯಿತು. ನಿಜವಾದ ಸ್ನೇಹಿತ ಎಂದರೆ ನೀನೇ" ಎಂದ.

ರಾಕ್ಷಸರಾಜನಾದ ವಿಭೀಷಣನನ್ನು ಆಲಿಂಗಿಸಿ "ವಿಭೀಷಣ ನಿನ್ನಿಂದ ಬಹಳ ಸಹಾಯ ವಾಯಿತು" ಎಂದು ಅವನನ್ನು ಅಭಿನಂದಿಸಿದ.

ಶತ್ರುಘ್ನನೂ ಸೀತಾ ರಾಮ ಲಕ್ಷ್ಮಣರಿಗೆ ಪ್ರಣಾಮ ಮಾಡಿದ. ಅಲ್ಲಿಂದ ವಿಮಾನವು ಭರ-ತನ ನಂದಿ ಗ್ರಾಮದ ಆಶ್ರಮಕ್ಕೆ ಬಂದಿತು. ನಂದಿ ಗ್ರಾಮದಲ್ಲಿ ರಾಮ ವಿಮಾನದಿಂದ ಇಳಿದ. ವಿಮಾನವನ್ನು ಪುನಃ ಕುಬೇರನ ಬಳಿಗೇ ಹೋಗುವಂತೆ ಆಜ್ಞಾಪಿಸಿದ.

ರಾಮನ ದಿವ್ಯ ಪಾದಗಳಿಗೆ ಪಾದುಕೆಗಳನ್ನು ಸಮರ್ಪಿಸಿದ ಭರತ "ಅಣ್ಣಾ ! ಇಂದು ನಾನು ಕೃತಕೃತ್ಯನಾದೆ. ನನ್ನ ಮನೋರಥ ಪೂರ್ಣವಾಯಿತು. ರಾಘವ ! ನನ್ನಲ್ಲಿ ನ್ಯಾಸವಾಗಿಟ್ಟಿದ್ದ ಈ ಸಮಸ್ತ ರಾಜ್ಯವನ್ನೂ ಒಪ್ಪಿಸಿಕೋ. ಈ ಹದಿನಾಲ್ಕು ವರ್ಷಗಳಲ್ಲಿ ನಿನ್ನ ಅನುಗ್ರಹದಿಂದ ಈ ರಾಜ್ಯದ ಸಂಪತ್ತು ಹತ್ತು ಪಟ್ಟು ಅಭಿವೃದ್ಧಿ ಹೊಂದಿದೆ. ನೀನು ರಾಜ್ಯದ ಕೋಶ, ಸೈನ್ಯ ಎಲ್ಲ ವನ್ನೂ ನೋಡಿಕೋ. ನಿನಗೆ ಸಮಸ್ತವನ್ನೂ ಒಪ್ಪಿಸಿಬಿಟ್ಟಿದ್ದೇನೆ" ಎಂದ.

ಭ್ರಾತೃವತ್ಸಲನಾದ ಭರತನ ಮಾತುಗಳನ್ನು ಕೇಳಿದ ಸುಗ್ರೀವ-ವಿಭೀಷಣರ ಕಣ್ಣುಗಳಲ್ಲಿ ನೀರು ಬಂದಿತು. ಅಣ್ಣನನ್ನು ಕೊಲ್ಲಿಸಿ ರಾಜ್ಯವನ್ನು ಪಡೆದ ತಮ್ಮನ್ನೂ ಅಣ್ಣನಿಗಾಗಿ ತನಗೆ ಸುಲಭ ವಾಗಿ ಕರಗತವಾಗಿದ್ದ ರಾಜ್ಯವನ್ನು ತ್ಯಾಗಮಾಡಿದ ಭರತನಂಥ ತಮ್ಮನಿಗೆ ಹೋಲಿಸಿಕೊಂಡರು. ನಾಚಿಕೆಯಿಂದ ತಲೆತಗ್ಗಿಸಿಕೊಂಡರು. ಭರತನ ಭ್ರಾತೃಪ್ರೇಮ, ಸೋದರ ವಾತ್ಸಲ್ಯ ಅವರ ಕಣ್ಣು ಗಳಲ್ಲಿ ನೀರು ತರಿಸಿತು.

ಶ್ರೀ ರಾಮ ತಾಯಿಯಾದ ಕೌಸಲ್ಯೆಗೆ ನಮಸ್ಕರಿಸಿದ. ಪುತ್ರನ ಅಗಲಿಕೆಯಿಂದ ದುರ್ಬಲ ಳಾಗಿ ಕೃಶಳಾಗಿದ್ದ ಕೌಸಲ್ಯೆ ಆನಂದದಿಂದ ಕಣ್ಣೀರು ಸುರಿಸಿದಳು. ಸುಮಿತ್ರೆಗೆ ಕೈಕೇಯಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಆಕೆ ಲಜ್ಜೆಯಿಂದ ತಲೆ ತಗ್ಗಿಸಿದಳು. ಆಗ, ರಾಮ "ಅಮ್ಮಾ ! ನೀನು ದುಃಖಿಸಬೇಡ. ನಿನ್ನಿಂದ ಎಷ್ಟು ಉಪಕಾರವಾಯಿತು. ಬಲ್ಲೆಯಾ ! ನೀನು ನನ್ನನ್ನು ಕಾಡಿಗೆ ಕಳುಹಿಸಿದ್ದರಿಂದ ಭರತನ ಶಕ್ತಿ, ತಂದೆ ದಶರಥನ ಪ್ರೀತಿ, ಸೌಮಿತ್ರಿಯ ಸೇವಾ ಭಾವ, ಸೀತೆಯ ಪಾತಿವ್ರತ್ಯ, ನನ್ನ ಭುಜಬಲ, ವೈರಿಗಳ ವೈರಭಾವ, ಮಿತ್ರರ ಮಿತ್ರಭಾವ ಎಲ್ಲವೂ ಬೆಳಕಿಗೆ ಬಂದವು. ನೀನು ಹಾಗೆ ವರ ಕೇಳದಿದ್ದರೆ ಇವೆಲ್ಲಾ ಹೇಗೆ ನಡೆಯುತ್ತಿದ್ದವು ? ಮುಖ್ಯವಾಗಿ ನನಗೆ ಇಷ್ಟೊಂದು ಕೀರ್ತಿ ಎಲ್ಲಿ ಬರುತ್ತಿತ್ತು ! ಇದಕ್ಕೆಲ್ಲಾ ನೀನೇ ಕಾರಣ ತಾಯಿ" ಎಂದು ಸಮಾಧಾನ ಮಾಡಿದ. ತಾಯಂದಿರಿಗೆ ನಮಸ್ಕರಿಸಿದ ಬಳಿಕ ಕುಲಗುರುವಾದ ವಸಿಷ್ಠರಿಗೆ ಪ್ರಣಾಮ ಮಾಡಿ ಪೂಜಿಸಿದ.

**ಭರತ ರಾಮನಿಗೆ ರಾಜ್ಯವನ್ನೊಪ್ಪಿಸುವುದು**

ನಂದಿಗ್ರಾಮದಲ್ಲಿ ಭರತನ ಆಶ್ರಮದಲ್ಲಿ ಬಂದಿಳಿದ ರಾಮನ ಮುಂದೆ ತನ್ನ ಎರಡು ಕೈಗಳ ನ್ನೂ ಮೇಲಕ್ಕೆತ್ತಿ ಜೋಡಿಸಿ ಕೈಕೇಯಿ ಕುಮಾರ ಭರತನು ರಾಮನಿಗೆ ರಾಜ್ಯವನ್ನು ಒಪ್ಪಿಸಿದ.

**ಪೂಜಿತಾ ಮಾಮಿಕಾ ಮಾತಾ ದತ್ತಂ ರಾಜ್ಯಮಿದಂ ಮಮ**
**ತದ್ದದಾಮಿ ಪುನಸ್ತುಭ್ಯಂ ಯಥಾ ತ್ವಮದದಾ ಮಮ ॥**

ರಾಮಾ! ನೀ ಹೇಳಿದಂತೆ ನಾನು ತಾಯಿಯನ್ನು ಇದುವರೆಗೆ ಪೂಜಿಸಿದ್ದೇನೆ. ನಿನ್ನ ರಾಜ್ಯವನ್ನೂ ನಿನ್ನ ಆಜ್ಞೆಯಂತೆ ನೋಡಿಕೊಂಡೆ. ಇನ್ನು ನಿನ್ನ ರಾಜ್ಯವನ್ನು ನೀನು ಸ್ವೀಕರಿಸು. ಅಣ್ಣಾ! ಪುಷ್ಟವಾದ ಎತ್ತು ಹೊರುವ ಭಾರವನ್ನು ಕರುಹೊರಲು ಹೇಗೆ ಸಾಧ್ಯವಿಲ್ಲವೋ ಹಾಗೇ ಈ ರಾಜ್ಯ ಭಾರವನ್ನು ನಾನು ಧರಿಸಲು ಸರ್ವಥಾ ಶಕ್ತನಲ್ಲ. ನೀನೇ ಈ ರಾಜ್ಯವನ್ನಾಳಲು ಸಮರ್ಥ. ಆದ್ದರಿಂದ ಇದನ್ನು ನೀನೇ ವಹಿಸಿಕೋ.

"ಕತ್ತೆ ಕುದುರೆಯ ಗತಿಯನ್ನು, ಕಾಗೆ ಹಂಸದ ಗತಿಯನ್ನು ಅನುಸರಿಸಲು ಹೇಗೆ ಅಶಕ್ಯವೋ ಹಾಗೆ ನೀನು ಆಳಬೇಕಾದ ರಾಜ್ಯವನ್ನು ನಾನು ಆಳುವುದು ಸಾಧ್ಯವಿಲ್ಲ. ನಿನ್ನ ರಕ್ಷಣೆ ನೀತಿ, ನಿಗ್ರಹಾನುಗ್ರಹ ಸಾಮರ್ಥ್ಯ, ಆಡಳಿತ ನೀತಿ ಇವುಗಳನ್ನು ನಾನು ಅನುಸರಿಸಲು ಶಕ್ತನಲ್ಲ.

"ರಘುವೀರ! ಎಲ್ಲರೂ ನಿನ್ನ ಅಭಿಷೇಕವನ್ನು ನೋಡಲು ಉತ್ಸುಕರಾಗಿದ್ದಾರೆ. ಪ್ರಾತಃ ಸೂರ್ಯನಂತ ನಿನ್ನ ತೇಜಸ್ಸು ಸದಾ ಅಭಿವೃದ್ಧಿ ಹೊಂದುತ್ತಿರಲಿ. ಎಲ್ಲಿಯವರೆಗೆ ನಕ್ಷತ್ರಮಂಡಲವಿರುತ್ತದೆಯೋ, ಎಲ್ಲಿಯವರೆಗೆ ಈ ಭೂಮಿ ಸ್ಥಿರವಾಗಿರುತ್ತದೆಯೋ ಅಲ್ಲಿಯವರೆಗೆ ನೀನು ಸ್ವಾಮಿಯಾಗಿರು. ಪ್ರಭು! ಈ ರಾಜ್ಯದ ಭಾರವನ್ನು ವಹಿಸಿಕೊಂಡು ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಿದ.

ಭರತನ ಪ್ರಾರ್ಥನೆಯನ್ನು ಅಂಗೀಕರಿಸಿ ಶ್ರೀರಾಮ "ಹಾಗೆಯೇ ಆಗಲಿ" ಎಂದು ಹೇಳಿ ಅಲ್ಲಿದ್ದ ದಿವ್ಯವಾದ ಆಸನದ ಮೇಲೆ ಕುಳಿತ.

## ಅಯೋಧ್ಯಾಗಮನ, ಪಟ್ಟಾಭಿಷೇಕ

ಭರತ, ಲಕ್ಷ್ಮಣ, ಶತ್ರುಘ್ನರು ಜಟೆಯನ್ನು ವಿಸರ್ಜಿಸಿ ಮಂಗಳಸ್ನಾನವಮಾಡಿದರು. ವಿಭೀಷಣ ಸುಗ್ರೀವರೂ ಸ್ನಾನವಮಾಡಿ ದಿವ್ಯವಾದ ವಸ್ತ್ರಗಳನುಟ್ಟು ಆಭರಣಗಳನ್ನು ಧರಿಸಿ ಅಲಂಕರಿಸಿಕೊಂಡರು.

ರಾಮನೂ ಜಟೆಯನ್ನು ವಿಸರ್ಜಿಸಿ ಮಂಗಳ ಸ್ನಾನ ಮಾಡಿ ದಿವ್ಯವಾದ ಪೀತಾಂಬರವನ್ನುಟ್ಟು ಅಲಂಕಾರವಮಾಡಿಕೊಂಡ. ಶತ್ರುಘ್ನ ಸ್ವತಃ ರಾಮನನ್ನು ಅಲಂಕರಿಸಿದ. ದಶರಥನ ರಾಣಿಯರೆಲ್ಲ ಸೀತೆಗೆ ಮಂಗಳ ಸ್ನಾನ ಮಾಡಿಸಿ ಅಲಂಕರಿಸಿದರು.

ರಾಮಮಾತೆ ಕೌಸಲ್ಯೆ ವಾನರ ಸ್ತ್ರೀಯರನ್ನೆಲ್ಲ ಪುತ್ರ ವಾತ್ಸಲ್ಯದಿಂದ ಅಲಂಕರಿಸಿದಳು. ರಾಮನಿಗೆ ಸಹಾಯ ಮಾಡಿದ ವಾನರರ ಪತ್ನಿಯರಿಗೆ ಕೌಸಲ್ಯೆ ತಾನೇ ಕೈಯಾರೆ ಜಡೆ ಹೆಣೆದು. ಹೂಮುಡಿಸಿ ಅಲಂಕರಿಸಿದಳು. ವಾನರರೆಲ್ಲ ಕಾಮರೂಪಿಗಳಾದ್ದರಿಂದ ಮನುಷ್ಯರಂತೆಯೇ ರೂಪ ಧರಿಸಿದ್ದರು.

ಸೂರ್ಯ, ಅಗ್ನಿಯಂತೆ ಪ್ರಕಾಶಮಾನವಾಗಿರುವ ರಥ ಸಿದ್ಧವಾಯಿತು. ಅದರಲ್ಲಿ ಏರುವಂತೆ ಭರತ ರಾಮನನ್ನು ಪ್ರಾರ್ಥಿಸಿದ. ರಾಮ ರಥದಲ್ಲಿ ಹತ್ತಿಕುಳಿತ. ಭರತ ತಾನೇ ವಾಘೆಯನ್ನು ಹಿಡಿದು ರಥವನ್ನು ನಡೆಸಿದ. ಲಕ್ಷ್ಮಣ ವಿಭೀಷಣರು ರಾಮನ ಇಕ್ಕೆಲದಲ್ಲೂ ನಿಂತು ಬಿಳಿಯ ಚಾಮರವನ್ನು ಬೀಸುತ್ತಿದ್ದರು. ಶತ್ರುಘ್ನ ದಿವ್ಯವಾದ ಶ್ವೇತಚ್ಛತ್ರವನ್ನು ಹಿಡಿದ. ರಾಮನ ದಿವ್ಯರಥ ಅಯೋಧ್ಯೆಯತ್ತ ಹೊರಟಿತು. ಎಲ್ಲರಿಗಿಂತ ಮುಂದೆ ಭೇರಿ, ಶಂಖ ಮುಂತಾದ ಮಂಗಳ

ವಾದ್ಯಗಳನ್ನು ಬಾಜಿಸುತ್ತಾ ವಾದ್ಯಗಾರರು ಹೊರಟರು. ಕನ್ಯಾಮಣಿಗಳು ಮಂಗಳದ್ರವ್ಯಗಳನ್ನು ತೆಗೆದುಕೊಂಡು ರಾಮನ ಮುಂದೆ ಸಾಗಿದರು. ವಿಪ್ರರ ವೇದ ಘೋಷ, ಸ್ತುತಿಪಾಠಕರ ಸ್ತುತಿಗಳು, ವಂಧಿಮಾಧ ಪರಾಕು, ಆನೆಗಳ ಸೈನ್ಯ, ಕುದುರೆಗಳ ದಂಡು, ಪದಾತಿವ್ರಾತ ಇವೆಲ್ಲದರಿಂದ ಯುಕ್ತವಾಗಿದ್ದ ಆ ಮೆರವಣಿಗೆ ಅತ್ಯಂತ ಶೋಭಾಯಮಾನವಾಗಿತ್ತು.

ಸುಗ್ರೀವನು ದಿವ್ಯವಾದ ವಸ್ತ್ರವನ್ನುಟ್ಟು. ಆಭರಣಗಳಿಂದ ಅಲಂಕರಿಸಿಕೊಂಡು "ಶತ್ರುಂಜಯ" ಎಂಬ ಮದಗಜವನ್ನೇರಿ ಹೊರಟ. ವಾನರ ಪ್ರಮುಖರೆಲ್ಲ ಹಸನಾಗಿ ಅಲಂಕರಿಸಿಕೊಂಡು ಹತ್ತು ಸಾವಿರ ಆನೆಗಳ ಮೇಲೇರಿ ಮುಂದೆ ಹೊರಟರು. ದೇವತೆಗಳ ಸಮೂಹದ ದೇವೇಂದ್ರ ವಿರಾಜಿಸುವಂತೆ ರಾಮ ಎಲ್ಲರ ನಡುವೆ ಶೋಭಿಸುತ್ತಿದ್ದ. ಅಯೋಧ್ಯೆಯಲ್ಲಿ ಅಶೋಕ, ವಿಜಯ, ಸಿದ್ಧಾರ್ಥಾದಿ ಸಚಿವ ಪ್ರಮುಖರು ರಾಮನ ರಾಜ್ಯಾಭಿಷೇಕಕ್ಕೆ ಬೇಕಾದ ಸಕಲ ಸಿದ್ಧತೆಯನ್ನೂ ಮಾಡುತ್ತಿದ್ದರು. ಅಯೋಧ್ಯೆಯ ಪ್ರಜೆಗಳೆಲ್ಲ ತಮ್ಮ ಗೃಹಗಳನ್ನು ಸಿಂಗರಿಸಿದ್ದರು. ರಾಮ ಬರುತ್ತಿದ್ದಂತೆ ತಮ್ಮ ಮನೆಗಳಮೇಲೆ ಏರಿಸಿದ್ದ ಪತಾಕೆಗಳನ್ನೂ, ಧ್ವಜಗಳನ್ನೂ ಮೇಲೆತ್ತಿ ಆಡಿಸುತ್ತಾ ರಾಮನಿಗೆ ಸ್ವಾಗತ ಕೋರಿದರು. ಅತ್ಯಂತ ಆನಂದದಿಂದ ರಾಘವನನ್ನು ಬರಮಾಡಿ ಕೊಂಡು ಜಯಘೋಷ ಮಾಡಿದರು. ಕೈಮುಗಿದು ನಮಸ್ಕರಿಸಿದರು. ಪೂರ್ಣಚಂದ್ರನಂತೆ ಬೆಳಗುತ್ತಿದ್ದ ರಾಮ ಅವರೆಲ್ಲರ ಅಭಿನಂದನೆಗಳನ್ನೂ ಪಸನ್ನವದನನಾಗಿ ಸ್ವೀಕರಿಸಿದ. ಪ್ರತಿಯಾಗಿ ಮುಗುಳುನಗೆಯೊಂದಿಗೆ ಎಲ್ಲರನ್ನೂ ಅಭಿನಂದಿಸಿದ. ನಕ್ಷತ್ರಗಳಿಂದ ಕೂಡಿದ ಚಂದ್ರಮನಂತೆ ಅಮಾತ್ಯರು, ಮಂತ್ರಿಗಳು, ಪುರೋಹಿತರು, ಪ್ರಜೆಗಳಿಂದ ಕೂಡಿದ ಶ್ರೀರಾಮ ರಾರಾಜಿಸುತ್ತಿದ್ದ. ಎಲ್ಲರಿಂದ ಅಭಿನಂದನೆಗಳನ್ನು ಸ್ವೀಕರಿಸಿ ಅಯೋಧ್ಯೆಯಲ್ಲಿ ತನ್ನ ತಂದೆಯ ಅರಮನೆಯನ್ನು ರಾಮ ಪ್ರವೇಶಿಸಿದ. ತಾಯಂದಿರಿಗೆ ಮತ್ತೆ ನಮಸ್ಕರಿಸಿದ. ಭರತನನ್ನು ಕರೆದು ಸುಗ್ರೀವನಿಗೆ ತನ್ನ ಅರಮನೆಯನ್ನು ತೆರವುಮಾಡುವಂತೆ ಹೇಳಿದ. ಶತ್ರುಘ್ನ ಸುಗ್ರೀವನಿಗೆ ಬೇಕಾದ ಅನುಕೂಲ ಗಳನ್ನೆಲ್ಲ ಒಡನೆಯೇ ಮಾಡಿಕೊಟ್ಟ. ಸುಗ್ರೀವನನ್ನು ರಾಮನ ಅರಮನೆಯಲ್ಲಿರಿಸಿ ಭರತ ಅವನ ಕೈಹಿಡಿದುಕೊಂಡು "ಮಹಾರಾಜ, ರಾಮನ ಅಭಿಷೇಕಕ್ಕಾಗಿ ಶುದ್ಧಜಲವನ್ನು ತರುವಂತೆ ನಿನ್ನವ ರಿಗೆ ಆಜ್ಞಾಪಿಸು" ಎಂದ,

ಸುಗ್ರೀವ ನಾಲ್ವರು ವಾನರ ಪ್ರಮುಖರನ್ನು ಕರೆದು ಅವರ ಕೈಯಲ್ಲಿ ರತ್ನ ಖಚಿತವಾದ ಸುವರ್ಣ ಘಟಗಳನ್ನು ಕೊಟ್ಟು. ಪ್ರಾತಃಕಾಲದ ಸಮಯಕ್ಕೆ ಸರಿಯಾಗಿ ನಾಲ್ಕು ಸಮುದ್ರಗಳಿಂದ ಶುದ್ಧ ಜಲವನ್ನು ತರುವಂತೆ ಆಜ್ಞಾಪಿಸಿದ.

ಮಹಾ ಪ್ರತಾಪಿಯಾದ, ಕರಡಿಗಳ ರಾಜನಾದ ಜಾಂಬವಂತ ಪೂರ್ವ ಸಮುದ್ರದಿಂದ ನೀರನ್ನು ತಂದ. ವೇಗವಾಗಿ ಹೋಗುವ ಸಾಮರ್ಥ್ಯವುಳ್ಳ ವೇಗದರ್ಶಿ ಪಶ್ಚಿಮ ಸಮುದ್ರದಿಂದ ಸುವರ್ಣಘಟದಲ್ಲಿ ಜಲವನ್ನು ತಂದ. ಋಷಭನೆಂಬ ಮಹಾ ವಾನರ ದಕ್ಷಿಣ ಸಮುದ್ರದ ನೀರನ್ನು ತಂದ. ವಾಯುವಿನಂತೆ ಬಲವುಳ್ಳ, ಗರುಡನಂತೆ ವೇಗವುಳ್ಳ, ಸರ್ವ ಗುಣಗಳ ಗಣಿಯಾದ ಹನು ಮಂತ ಉತ್ತರ ಸಮುದ್ರದಿಂದ ಉದಕವನ್ನು ತಂದ. ಐನೂರು ಪುಣ್ಯ ನದಿಗಳಿಂದಲೂ ವಾನರರು ಚಿನ್ನದ ಕೊಡಗಳಲ್ಲಿ ಪವಿತ್ರವಾದ ನೀರನ್ನು ತಂದು ಕುಲ ಪುರೋಹಿತರಾದ ವಸಿಷ್ಠರಿಗೆ ಸಮರ್ಪಿ ಸಿದರು, ಪಟ್ಟಾಭಿಷೇಕಕ್ಕೆ ಎಲ್ಲ ಸಿದ್ಧತೆಯೂ ಆಯಿತು. ಆ ನಂತರ ಶುಭ ಮುಹೂರ್ತದಲ್ಲಿ ಸೀತಾ ಸಹಿತನಾದ ಶ್ರೀ ರಾಮನನ್ನು ಪುರೋಹಿತರಾದ ವಸಿಷ್ಠರು ಮಹಾರ್ಹವಾದ, ರತ್ನಮಯವಾದ ಸಿಂಹಾಸನದಲ್ಲಿ ಕುಳ್ಳಿರಿಸಿದರು.

**ತತಃ ಸ ಪ್ರಯತೋ ವೃದ್ಧೋ ವಸಿಷ್ಠೋ ಬ್ರಾಹ್ಮಣೈಸ್ಸಹ ।**
**ರಾಮಂ ರತ್ನಮಯೇ ಪೀಠೇ ಸಹಸೀತಂ ನ್ಯವೇಶಯತ್ ॥**
**ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ**
**ಕಾತ್ಯಾಯನಃ ಸುಯಜ್ಞಶ್ಚ ಗೌತಮೋ ವಿಜಯ ಸ್ತಥಾ ॥**
**ಅಭ್ಯಷಿಂಚನ್ ನರವ್ಯಾಘ್ರಂ ಪ್ರಸನ್ನೇನ ಸುಗಂಧಿನಾ ।**
**ಸಲಿಲೇನ ಸಹಸ್ರಾಕ್ಷಂ ವಸವೋ ವಾಸವಂ ಯಥಾ ॥**

ವಸಿಷ್ಠರು, ವಾಮದೇವ, ಜಾಬಾಲಿ, ಕಾಶ್ಯಪ, ಕಾತ್ಯಾಯನ ಸುಯಜ್ಞ, ಗೌತಮ, ವಿಜಯ ಈ ಅಷ್ಟ ಮಹರ್ಷಿಗಳು ವಿಧಿ ಪೂರ್ವಕವಾಗಿ ಶ್ರೀ ರಾಮನ ದಿವ್ಯ ಶಿರಸ್ಸಿನಲ್ಲಿ ಉತ್ತಮವಾದ ಸುಗಂಧ ಮಿಶ್ರಿತವಾದ ವಿಮಲೋದಕದಿಂದ ಅಭಿಷೇಕ ಮಾಡಿದರು.

ಅಷ್ಟ ವಸ್ತುಗಳು ದೇವರಾಜನಾದ ಇಂದ್ರನಿಗೆ ಅಭಿಷೇಕ ಮಾಡಿದಂತೆ ಈ ಅಷ್ಟ ಮಹರ್ಷಿಗಳು ಶ್ರೀ ರಾಮನಿಗೆ ಅಭಿಷೇಕ ಮಾಡಿದರು ಎನ್ನುತ್ತಾರೆ ವಾಲ್ಮೀಕಿ.

ಮೊದಲು ಎಲ್ಲ ಔಷಧಿಗಳ ರಸದಿಂದ ಅಭಿಷೇಕವಾಯಿತು. ಆ ಮೇಲೆ ವಿಧಿವತ್ತಾಗಿ ಬ್ರಾಹ್ಮಣರು ಪರಿಶುದ್ಧವಾದ ಸುಗಂಧ ಯುಕ್ತವಾದ ತೀರ್ಥದಿಂದ ಅಭಿಷೇಕ ಮಾಡಿದರು. ಅದಾದನಂತರ ಹದಿನಾರು ದಿವ್ಯ ಕನ್ಯಾಮಣಿಗಳು ರಾಮನ ಶಿರಸ್ಸಿನ ಮೇಲೆ ಅಭಿಷೇಕ ಮಾಡಿದರು. ಆ ಬಳಿಕ ಮಂತ್ರಿಗಳು, ಸೇನಾಪತಿಗಳು. ಪುರ ಪ್ರಮುಖರು ಕ್ರಮವಾಗಿ ಅಭಿಷೇಕ ಮಾಡಿದರು. ಆಕಾಶದಲ್ಲಿ ನೆರೆದಿದ್ದ ಲೋಕಪಾಲಕರು, ದೇವತೆಗಳೂ ರಾಮನಿಗೆ ಅಭಿಷೇಕ ಮಾಡಿದರು.

ಅಭಿಷೇಕವಾದ ಮೇಲೆ ಕುಲ ಪುರೋಹಿತರಾದ ವಸಿಷ್ಠರು ಬ್ರಹ್ಮನಿಂದ ಪರಂಪರಾನುಗತವಾಗಿ ದೊರೆತ ದಿವ್ಯ ಕಿರೀಟವನ್ನು ಕೈಯಲ್ಲಿ ತೆಗೆದುಕೊಂಡರು. ಆ ಕಿರೀಟ ಚಿನ್ನದಿಂದ ಮಾಡಲ್ಪಟ್ಟು ವಿವಿಧ ರತ್ನಗಳಿಂದ ಕೆತ್ತಲ್ಪಟ್ಟು ಜ್ವಲಿಸುತ್ತಿತ್ತು. ಬ್ರಹ್ಮ ಮನುವಿಗೆ ಕೊಟ್ಟ ಆ ಕಿರೀಟ ಇಕ್ಷ್ವಾಕುವಿನಿಂದ ಪ್ರಾರಂಭವಾಗಿ ದಶರಥನವರೆಗೆ ಅನೇಕ ರಾಜಾಧಿರಾಜರು ಧರಿಸಿದ್ದ ಕಿರೀಟ. ಅಂಥ ಆ ಮಹಾ ಕಿರೀಟವನ್ನು ವಸಿಷ್ಠರು ರಾಮನ ತಲೆಯ ಮೇಲೆ ಇಟ್ಟರು. ರಾಮನನ್ನು ವಿಧ ವಿಧವಾದ ಭೂಷಣಗಳಿಂದ ಅಲಂಕರಿಸಿದರು. ದಿವ್ಯ ಮಕುಟಸಹಿತವಾದ ರಾಘವನ ಶಿರಸ್ಸಿನ ಮೇಲೆ ಶತ್ರುಘ್ನ ಶ್ವೇತಚ್ಛತ್ರವನ್ನು ಹಿಡಿದ. ಸುಗ್ರೀವ ವಿಭೀಷಣರು ರಾಮನ ಇಕ್ಕೆಲದಲ್ಲೂ ಚಂದ್ರಸದೃಶವಾದ ಚಾಮರವನ್ನು ಬೀಸುತ್ತಿದ್ದರು.

ಆ ಸಮಯದಲ್ಲಿ ಇಂದ್ರನಿಂದ ಪ್ರೇರಿತನಾದ ವಾಯುದೇವ ನೂರು ಚಿನ್ನದ ಕಮಲ ಪುಷ್ಪಗಳಿಂದ ಯುಕ್ತವಾದ ರತ್ನ ಹಾರವನ್ನೂ, ರತ್ನ ಖಚಿತವಾದ ಮುಕ್ತಾಹಾರವನ್ನೂ ಶ್ರೀ ರಾಮನಿಗೆ ಸಮರ್ಪಿಸಿದ.

ಶ್ರೀ ರಾಮಾಭಿಷೇಕವಾದ ಸಮಯದಲ್ಲಿ ಮಂದ ಮಾರುತ ತಂಪಾಗಿ ಬೀಸಿತು ಮರಗಳಲ್ಲೆಲ್ಲ ಫಲಗಳು ತುಂಬಿದವು. ಲತೆಗಳೆಲ್ಲ ಪುಷ್ಪಿಸಿದವು. ದೇವತೆಗಳು ಸಂತೋಷಪಟ್ಟರು. ಅಯೋಧ್ಯೆಯ ಜನರ ಆನಂದವಂತೂ ಹೇಳತೀರದು. ಚಿರಕಾಲದಿಂದ ಬಯಸಿದ ಅವರ ಇಷ್ಟಾರ್ಥ ಪೂರ್ಣವಾಯಿತು. ಗಂಧರ್ವರು ಗಾಯನ ಮಾಡಿದರು. ಅಪ್ಸರೆಯರು ನರ್ತಿಸಿದರು. ಎಲ್ಲೆಲ್ಲೂ

ಆನಂದದ ಹೊಳೆ ಹರಿಯಿತು. ಆಗ ರಾಮ ಒಂದು ಲಕ್ಷ ಗೋವುಗಳನ್ನೂ ಮೂವತ್ತು ಕೋಟಿ ಸುವರ್ಣ ನಾಣ್ಯಗಳನ್ನೂ ಸತ್ಪಾತ್ರರಾದ ಬ್ರಾಹ್ಮಣರಿಗೆ ದಾನ ಮಾಡಿದ.

ರಾಮನು ಲಕ್ಷ್ಮಣನನ್ನು ಯುವರಾಜನಾಗುವಂತೆ ಹೇಳಿದ. ಆದರೆ ಲಕ್ಷ್ಮಣ ಕೈಂಕರ್ಯವೇ ಮಹಾ ಫಲವನ್ನಾಗಿ ಕೈಗೊಂಡವನಾದ್ದರಿಂದ ಯುವರಾಜನಾಗಲು ಒಪ್ಪಲಿಲ್ಲ. ಆ ಕಾರಣ ಭರತ ರಾಮನ ಆಜ್ಞೆಯಂತೆ ಯುವರಾಜನಾದ. ಭರತ, ಲಕ್ಷ್ಮಣ ಇಬ್ಬರೂ ರಾಮನಲ್ಲಿ ಭಕ್ತಿಯುಳ್ಳವರೇ. ಲಕ್ಷ್ಮಣ ಕೈಂಕರ್ಯವನ್ನು ಮುಖ್ಯವೆಂದು ಭಾವಿಸಿದ. ಭರತ ಪಾರತಂತ್ರ್ಯವೇ ಮೂರ್ತಿವೆತ್ತಂತಿದ್ದ. ರಾಮನ ಆಜ್ಞೆಗೆ ತಲಬಾಗುವುದೇ ಕರ್ತವ್ಯ ಎಂದು ಅವನು ಭಾವಿಸಿದ. ಅಂತೂ ಕೈಕೇಯಿ ಕೇಳಿದ ವರ ಸಿದ್ಧಿಸಿತು. "ಭರತ ಯುವರಾಜನಾಗಬೇಕು" ಎಂದಳು. ಅದರಂತೆಯೇ ರಾಮ ಭರತನಿಗ ಯೌವರಾಜ್ಯಾಭಿಷೇಕ ಮಾಡಿದ.

ರಾಜ್ಯಾಭಿಷೇಕವಾದ ನಂತರ ರಾಮ ಎಲ್ಲರನ್ನೂ ಸನ್ಮಾನಿಸಿದ ಸುಗ್ರೀವನಿಗೆ ತನ್ನ ಕಂಠದಲ್ಲಿದ್ದ ದಿವ್ಯವಾದ ಸುವರ್ಣಮಾಲೆಯನ್ನು ಕೊಟ್ಟ. ಅಂಗದನಿಗೆ ದಿವ್ಯವಾದ ವೈಢೂರ್ಯದಿಂದ ಕೆತ್ತಲ್ಪಟ್ಟಿದ್ದ ಎರಡು ಚಿನ್ನದ ಕಂಕಣಗಳನ್ನು ಕೊಟ್ಟ. ಅದರಂತೆ ಎಲ್ಲ ವಾನರ ಪ್ರಮುಖರನ್ನೂ ವಸ್ತ್ರ, ಆಭರಣಗಳಿಂದ ಸನ್ಮಾನಿಸಿದ. ತನ್ನ ಕಂಠದಲ್ಲಿ ಧರಿಸಿದ್ದ ದಿವ್ಯವಾದ ಮುಕ್ತಾಹಾರವನ್ನೂ, ದಿವ್ಯವಾದ, ಯಾವಾಗಲೂ ಮಲಿನವಾಗದ ಎರಡು ವಸ್ತ್ರಗಳನ್ನೂ ಅನರ್ಘ್ಯವಾದ ಭೂಷಣಗಳನ್ನೂ ಸೀತೆಗೆ ಕೊಟ್ಟ. ಸೀತೆ ರಾಮ ತನಗೆ ಕೊಟ್ಟಿದ್ದ ಮುಕ್ತಾಹಾರವನ್ನು ತೆಗೆದುಕೊಂಡು ರಾಮನ ಮುಖವನ್ನು ನೋಡಿದಳು. ಅವಳ ಇಂಗಿತವನ್ನರಿತ ರಾಮ "ಸೀತೆ ! ನೀನು ಯಾರ ಮೇಲೆ ಬಹಳವಾಗಿ ಸಂತುಷ್ಟಳಾಗಿರುವೆಯೋ ಯಾರು ನಿನಗೆ ಅತ್ಯಂತ ಪ್ರಿಯವನ್ನು ಮಾಡಿದರೋ ಅವರಿಗೆ ಆ ಹಾರವನ್ನು ಕೊಡು" ಎಂದ.

ಆಗ ಸೀತೆ ಆ ಹಾರವನ್ನು ಯಾರಲ್ಲಿ ತೇಜಸ್ಸು, ಧೈರ್ಯ, ಯಶಸ್ಸು ಚತುರತೆ, ಶಕ್ತಿ, ವಿನಯ, ನೀತಿ, ಪರಾಕ್ರಮ ಮತ್ತು ಉತ್ತಮ ಬುದ್ಧಿ ನೆಲೆಗೊಂಡಿದ್ದಿತೋ ಅಂತಹ ವಾಯುಪುತ್ರನಾದ ಹನುಮಂತನಿಗೆ ಕೊಟ್ಟಳು. ಆ ಹಾರವನ್ನು ಹನುಮ ಭಕ್ತಿಯಿಂದ ಧರಿಸಿದ, ಚಂದ್ರನ ಅಮೃತ ಕಿರಣಗಳಿಂದ ಕೂಡಿದ ಬಿಳಿಯ ಮೋಡಗಳ ಮಾಲೆಯಿಂದ ಅಲಂಕೃತವಾದ ಪರ್ವತ ಶೋಭಿಸುವಂತೆ ಆ ಹಾರವನ್ನು ಹಾಕಿಕೊಂಡ ಹನುಮಂತ ಕಂಗೊಳಿಸಿದ. ಎಲ್ಲರನ್ನೂ ಯಥೋಚಿತವಾಗಿ ಗೌರವಿಸಿದ್ದಾಯಿತು. ರಾಮನ ಅಭಿಷೇಕವನ್ನು ನೋಡಿ ಸನ್ಮಾನಿತರಾದ ವಾನರರೆಲ್ಲ ಕಿಷ್ಕಿಂಧೆಗೆ ಸುಗ್ರೀವನೊಡನೆ ತೆರಳಿದರು. ವಿಭೀಷಣನೂ ರಾಮನಿಂದ ಪುರಸ್ಕೃತನಾಗಿ ಲಂಕೆಯನ್ನು ಸೇರಿದ. ಭಕ್ತನಾದ ವಿಭೀಷಣನಿಗೆ ಶ್ರೀ ರಾಮ ತನ್ನ ವಂಶದ ಕುಲಧನವಾದ ಶ್ರೀ ರಂಗನಾಥನನ್ನು ಕೊಟ್ಟು ಅನುಗ್ರಹಿಸಿದ.

**ಲಬ್ಧ್ವಾ ಕುಲಧನಂ ರಾಜಾ ಲಂಕಾಂ ಪ್ರಾಯಾತ್ ವಿಭೀಷಣಃ ।**

## ರಾಮರಾಜ್ಯದ ವೈಭವ

ಸೀತಾ ಲಕ್ಷ್ಮಣ ಭರತ ಶತ್ರುಘ್ನ ಸಮೇತನಾಗಿ ಶ್ರೀ ರಾಮ ಹನ್ನೊಂದು ಸಾವಿರ ವರ್ಷಗಳವರೆಗೆ ರಾಜ್ಯವನ್ನಾಳಿದ. ಈ ದೀರ್ಘಕಾಲದಲ್ಲಿ ರಾಮ ಅಶ್ವಮೇಧ, ವಾಜಪೇಯ ಮುಂತಾದ

ಮಹಾ ಯಾಗಗಳನ್ನು ಮಾಡಿದ. ಅಜಾನುಬಾಹುವಾದ ಶ್ರೀ ರಾಮನ ಆಳ್ವಿಕೆಯಲ್ಲಿ ಅಯೋಧ್ಯೆ ಸಕಲ ವೈಭವಗಳಿಂದ ಕೂಡಿತ್ತು. ರಾಮರಾಜ್ಯದಲ್ಲಿ ವಿಧವೆಯರ ವಿಲಾಪವಿಲ್ಲ, ರೋಗಿಗಳ ಆಕ್ರಂದನವಿಲ್ಲ, ದುಷ್ಟರ ಕಾಟವಿಲ್ಲ, ಅಕಾಲ ಮರಣವಿಲ್ಲ. ರಾಮನ ರಾಜ್ಯದಲ್ಲಿ ಎಲ್ಲರೂ ಸರ್ವದಾ ಪ್ರಸನ್ನಚಿತ್ತರಾಗಿದ್ದರು. ದೀರ್ಘ ಜೀವಿಗಳಾಗಿದ್ದರು, ಎಲ್ಲರೂ ಧರ್ಮಪರಾಯಣರಾಗಿದ್ದರು.

**ರಾಮೋ ರಾಮೋ ರಾಮ ಇತಿ ಪ್ರಜಾನಾಮಭ್ವರ್ನ ಕಥಾಃ ।**
**ರಾಮಭೂತಂ ಜಗದಭೂತ್ ರಾಮೋ ರಾಜ್ಯಂ ಪ್ರಶಾಸತಿ ॥**

ಎಲ್ಲ ಪ್ರಜೆಗಳ ಬಾಯಲ್ಲೂ ರಾಮ ನಾಮ. ರಾಮ–ರಾಮ ಎಂದು ಎಲ್ಲರೂ ರಾಮನಲ್ಲೇ ಅನುರಕ್ತರಾಗಿದ್ದರು. ನಡೆ ನುಡಿಯಲ್ಲಿ ಆಚಾರ ವಿಚಾರಗಳಲ್ಲಿ ಎಲ್ಲರೂ ಸತ್ಯ ಪರಾಕ್ರಮಿಯಾದ, ಧರ್ಮಿಷ್ಠನಾದ ರಾಮನನ್ನೇ ಅನುಸರಿಸುತ್ತಿದ್ದರು.

ರಾಮ ರಾಜ್ಯದಲ್ಲಿ ಸಕಾಲದಲ್ಲಿ ಮಳೆಯಾಗುತ್ತಿತ್ತು. ಬೆಳೆ ಬೆಳೆಯುತ್ತಿತ್ತು. ವಾಯು ತಂಪಾಗಿ ಮಂದವಾಗಿ ಬೀಸುತ್ತಿತ್ತು! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು, ತಮ್ಮ ವರ್ಣಕ್ಕನುಸಾರವಾದ ಕರ್ಮಗಳಲ್ಲಿ ನಿರತರಾಗಿದ್ದರು. ಎಲ್ಲರೂ ಲೋಭರಹಿತರಾಗಿದ್ದರು. ಯಾರೂ ಸುಳ್ಳಾಡುತ್ತಿರಲಿಲ್ಲ. ಹೀಗೆ ಸರ್ವ ಸುಖದಿಂದ, ಶಾಂತಿಯಿಂದ ರಾಮರಾಜ್ಯ ಅಭಿವೃದ್ಧಿ ಹೊಂದುತ್ತಿತ್ತು, ದೀರ್ಘಕಾಲ ಪ್ರಜಾರಂಜಕನಾಗಿ ಸರ್ವಲಕ್ಷಣಗಳಿಂದ ಕೂಡಿದ ಶ್ರೀ ರಾಮ ರಾಜ್ಯವನ್ನಾಳುತ್ತಿದ್ದ. ಇಂಥ ಶ್ರೇಷ್ಠವಾದ ಆದರ್ಶವನ್ನು ವಾಲ್ಮೀಕಿ ಇತಿಹಾಸವಾದ ರಾಮಾಯಣದಲ್ಲಿ ವಿವರಿಸಿದ್ದಾರೆ. ರಾಮಾಯಣ ಅನಾದಿಕಾಲದಿಂದ ಇದೆ. ಇದು ಎಂದೆಂದಿಗೂ ನಿತ್ಯ ನೂತನವಾಗಿದೆ. ಕಾರಣ, ರಾಮಾಯಣ ಎಲ್ಲ ಕಾಲಕ್ಕೂ ಎಲ್ಲ ರೀತಿಯ ಜನಕ್ಕೂ ಆದರ್ಶವಾಗಿರುವಂಥ ಕಾವ್ಯವೆನಿಸಿದೆ.

ರಾಮರಾಜ್ಯ ಸುಖದಿಂದ ಕೂಡಿತ್ತು ಎನ್ನುವಾಗ ಪ್ರಜಾಪ್ರತಿನಿಧಿಯಾದ ರಾಜ ಹೇಗೆ ರಾಜ್ಯವನ್ನಾಳುತ್ತಿದ್ದ ? ಅವನ ಪ್ರಜೆಗಳು ಹೇಗೆ ಶುದ್ಧ ಜೀವನ ನಡೆಸುತ್ತಿದ್ದರು ? ಎಂಬ ಚಿತ್ರವನ್ನು ವಾಲ್ಮೀಕಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ತ್ರೇತಾಯುಗದಲ್ಲಿ ಅಸ್ತಿತ್ವದಲ್ಲಿದ್ದ ರಾಮ ರಾಜ್ಯ ಕಲಿಯುಗದಲ್ಲೂ ನೆಲೆಗೊಳ್ಳಬೇಕಾದರೆ ಆಡಳಿತಗಾರರು ರಾಮನಂತ ನಿಸ್ಪೃಹರಾಗಿ, ಧರ್ಮಪರಾಯಣರಾಗಿ. ಶಕ್ತಿವಂತರಾಗಿ, ಬುದ್ಧಿವಂತರಾಗಿ, ಪ್ರಜಾರಂಜಕರಾಗಿ ಇರಬೇಕು. ಹಾಗೆಯೇ ಪ್ರಜೆಗಳೂ ತಮತಮಗೆ ನಿಯತವಾದ ಕರ್ಮವನ್ನು ಆಲಸ್ಯವಿಲ್ಲದೆ ಧರ್ಮ ಮಾರ್ಗದಲ್ಲಿ ನಡೆಸಬೇಕು, ಎಷ್ಟೇ ಯೋಜನೆಗಳನ್ನು ಮಾಡಿದರೂ, ಮಹತ್ಪ್ರಮಾಣದಲ್ಲಿ ಹಣವನ್ನು ಖರ್ಚು ಮಾಡಿದರೂ ಅದರಿಂದ ಕಲ್ಯಾಣ ರಾಜ್ಯದ ಸ್ಥಾಪನೆ ಆಗಲಾರದು.

ಸತ್ಯ. ಧರ್ಮ, ನಿಸ್ಪೃಹತೆ, ಕಾರ್ಯಪಟುತ್ವ ಲೋಭ, ಆಲಸ್ಯ ಇಲ್ಲದಿರುವಿಕೆ, ಕಾರುಣ್ಯ. ಈ ಉತ್ತಮವಾದ ಗುಣಗಳನ್ನು ಅನುಷ್ಠಿಸಿ ಮಾನವ ತನ್ನ ಮಾನವತ್ವದ ನೆಲೆಯಿಂದ ದೈವತ್ವಕ್ಕೇರುವ ಸಿದ್ಧತೆ ಮಾಡಿಕೊಳ್ಳಬೇಕು. ಆಗ ಮಾತ್ರ ಕಲ್ಯಾಣ ರಾಜ್ಯದ ಸ್ಥಾಪನೆಯ ಕನಸು ನನಸಾದೀತು.

**ರಾಮಾಯಣದ ಫಲಶ್ರುತಿ**

ಶ್ರೀಮದ್ರಾಮಾಯಣವು ಮಹಾ ಕಾವ್ಯ. ಮೊದಲೇ ಹೇಳಿದಂತೆ ಹೊತ್ತು ಹೋಗಲು ಓದಿ

ಬಿಸುಡುವ ಸಾಹಿತ್ಯವಲ್ಲ. ಇಹಪರದಲ್ಲಿ ಮಂಗಳವನ್ನುಂಟುಮಾಡುವ ಶಕ್ತಿ ಅದಕ್ಕುಂಟು ಇದಕ್ಕೆ ಕಾರಣ ರಾಮಾಯಣವನ್ನು ರಚಿಸಿದ ಮಹಾನುಭಾವ ಮಹಾತಪಸ್ವಿಯಾದ ವಾಲ್ಮೀಕಿ. ಆ ವಾಲ್ಮೀಕಿಗೆ ರಾಮಾಯಣವನ್ನು ಉಪದೇಶ ಮಾಡಿದ ಮಹಾತ್ಮ ನಾರದ. ನಾರದ ಶಬ್ದದ ಉತ್ಪತ್ತಿಯನ್ನೂ ಅರ್ಥವನ್ನೂ ವಿವರಿಸುತ್ತಾ

**ನಾರಂ ಜ್ಞಾನಂ ರಾತಿ ದದಾತೀತಿ ನಾರದಃ**

ಎಂದೂ ನರಾಣಾಂ ಇದಂ ನಾರಂ ಅಜ್ಞಾನಂ ತದ್ಯತಿ ಖಂಡಯತಿ ಜ್ಞಾನೋಪದೇಶೇನ ಇತಿ ನಾರದಃ ಎಂದೂ ವ್ಯಾಖ್ಯಾನ ಮಾಡುತ್ತಾರೆ.

ಜ್ಞಾನೋಪದೇಶಕ ನಾರದ. ನರರಲ್ಲಿರುವ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ಉಂಟುಮಾಡಿ ಮೋಕ್ಷಕ್ಕೆ ಸಾಧಕವಾಗುವಂತೆ ಮಾಡುವವರು ನಾರದರು. ವಾಲ್ಮೀಕಿಗೆ ಉಪದೇಶಿಸಿದರು. ತಪಸ್ಸೇ ಧನವಾಗಿ ಉಳ್ಳ ವಾಲ್ಮೀಕಿ ರಾಮಯಣವನ್ನು ರಚಿಸಿದರು. (ರಾಮಾಯಣ ಅಯನ ಎಂದರೆ ಮಾರ್ಗ, ಮೋಕ್ಷಮಾರ್ಗವನ್ನು ತೋರಿಸುವುದೇ ರಾಮಾಯಣ.

ವಾಲ್ಮೀಕಿ ರಚಿಸಿದ ರಾಮಾಯಣ ಇಹಪರಕ್ಕೆ ಸಾಧಕ. ವಾಲ್ಮೀಕಿ ಚಿತ್ರಿಸಿರುವ ಆದರ್ಶ ಸಮಾಜ ಎಲ್ಲ ಕಾಲಗಳಲ್ಲೂ, ಎಲ್ಲರಿಂದಲೂ ಅನುಕರಣೀಯ. ದಶರಥನಂಥ ತಂದೆ, ತಂದೆಯ ಆಜ್ಞೆಯನ್ನು ತಲೆಯಲ್ಲಿ ಧರಿಸಿ ನಡೆಸುವ ರಾಮನಂಥ ಮಗ, ಭ್ರಾತೃನಿಷ್ಠ ಸೋದರರು, ಹಿತವನ್ನು ಮಾಡುವ ಸುಗ್ರೀವನಂಥ ಮಿತ್ರ, ಯಾವುದೇ ಕಾರ್ಯವನ್ನೂ ಸಾಧಿಸುವಂಥ ಹನುಮಂತನಂಥ ದೂತ, ವಿಭೀಷಣನಂಥ ಭಕ್ತ, ಸೀತೆಯಂತಹ ಪತಿವ್ರತೆ, ವಸಿಷ್ಠರಂಥ ಪುರೋಹಿತರು, ಸುಮಂತ್ರನಂಥ ಉತ್ತಮನಾದ ಮಂತ್ರಿ ಈ ಎಲ್ಲ ಆದರ್ಶ ಪಾತ್ರಗಳಿಂದ ಕೂಡಿದ ಆದರ್ಶ ಚಿತ್ರ. ಆದರ್ಶ ಜೀವನದ, ಆದರ್ಶ ಜೀವನ ನಡಸಿ ಸರ್ವಸೌಖ್ಯವನ್ನೂ ಪಡೆದು ಪರದಲ್ಲೂ ಮೋಕ್ಷ ಲಭಿಸುವಂತೆ ಮಾಡುವ ಶಕ್ತಿಯುಳ್ಳದ್ದು ಶ್ರೀಮದ್ರಾಮಾಯಣ. ಕುಶಲವರು ಶ್ರೀರಾಮನ ಅಶ್ವಮೇಧ ಮಂಟಪದಲ್ಲಿ ಗಾನ ಮಾಡುತ್ತಾರೆ ಈ ರಾಮಕಥೆಯನ್ನು.

ಶ್ರೀಮದ್ರಾಮಾಯಣ ಕಾವ್ಯವನ್ನು ನಿಯಮದಿಂದ ಪಠಿಸುವವರು, ಕೇಳುವವರು ಸಕಲ ಮಂಗಳಗನ್ನೂ ಪಡೆಯುತ್ತಾರೆ. ಆಯುಸ್ಸು, ಆರೋಗ್ಯ, ಯಶಸ್ಸು, ವೀರ್ಯ, ಧನ ಧಾನ್ಯ, ಕುಟುಂಬಸೌಖ್ಯ ಎಲ್ಲ ಶ್ರೀಮದ್ರಾಮಾಯಣದಿಂದ ಲಭಿಸುತ್ತದೆ. ಶ್ರದ್ಧೆಯಿಂದ ನಿತ್ಯವೂ ಶ್ರೀಮದ್ರಾಮಾಯಣವನ್ನು ಪಾರಾಯಣ ಮಾಡುವವರ ಮೇಲೆ ವಿಷ್ಣು ರೂಪಿಯಾದ ರಾಮ ಸದಾ ಪ್ರಸನ್ನನಾಗಿರುತ್ತಾನೆ. ಶ್ರೀಮದ್ವಾಲ್ಮೀಕಿ ರಾಮಾಯಣವನ್ನು ಭಕ್ತಿಯಿಂದ ಬರೆಯುವವರು ಸ್ವರ್ಗಸೌಖ್ಯವನ್ನು ಅನುಭವಿಸುತ್ತಾರೆ.

ಈ ಫಲಗಳೆಲ್ಲ ಲಭಿಸುವುದು ಸಾಧ್ಯವೆ ? ಎಂಬ ಪ್ರಶ್ನೆಗೆ ವಾಲ್ಮೀಕಿಯೇ ಸಮಾಧಾನ ಹೇಳಿದ್ದಾರೆ. ರಾಮ ಸಾಮಾನ್ಯ ಮನುಷ್ಯನಲ್ಲ ಎಂದು ತಿಳಿಸಿ ಯುದ್ಧಕಾಂಡದ ಕೊನೆಯ ಸರ್ಗದಲ್ಲಿ ಬ್ರಹ್ಮಜ್ಞಾನಿಗಳಾದ ವಾಲ್ಮೀಕಿ ಮಹರ್ಷಿ ರಾಮಾವತಾರದ ರಹಸ್ಯವನ್ನು ಹೊರಗೆಡಹಿದ್ದಾರೆ.

**ಆದಿದೇವೋ ಮಹಾಬಾಹುಃ ಹರಿರ್ನಾರಾಯಣ ಪ್ರಭುಃ ।**

**ಸಾಕ್ಷಾದ್ರಾಮೋ ರಘುಶ್ರೇಷ್ಠಃ ಶೇಷೋ ಲಕ್ಷ್ಮಣ ಉಚ್ಯತೇ ॥**

ಆದಿದೇವನೆನಿಸಿದ ಸಾಕ್ಷಾತ್ ಹರಿಯೇ, ಆ ನಾರಾಯಣನೇ ರಾಮರೂಪದಲ್ಲಿ ಅವತರಿಸಿದ್ದಾನೆ. ಸಾಕ್ಷಾತ್ ಆದಿಶೇಷನೇ ಲಕ್ಷ್ಮಣನೆನಿಸಿಕೊಂಡಿದಾನೆ. ಅಂದಮೇಲೆ ವಿಷ್ಣುವಿನ ಅವತಾರವೇ ರಾಮ ಎಂಬುದು ಸಿದ್ಧವಾದಂತಾಯಿತು.

**ಏನಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ ।**

**ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ ॥**

ರಾಮಾಯಣ ಕೇಳಿದವರನ್ನು ಲವಕುಶರು ಅಭಿನಂದಿಸಿ ಮಂಗಳಾಶಾಸನ ಮಾಡುತ್ತಾರೆ.

ಪುಣ್ಯಕರವಾದ ರಾಮಾಯಣವನ್ನು ಕೇಳುವವರು, ಪಠಿಸುವವರಿಗೆಲ್ಲ ಸರ್ವಮಂಗಳ ಏರ್ಪಡುತ್ತದೆ. ಇದನ್ನು ಪಠಿಸುವುದರಿಂದ ವೈಷ್ಣವ ಬಲವು ಅಭಿವೃದ್ಧಿಯಾಗುತ್ತದೆ. ರಾಮಾಯಣದ ಶ್ರವಣದಿಂದ ಪಿತೃಗಳು, ದೇವತೆಗಳು ಎಲ್ಲರೂ ತುಷ್ಟರಾಗುತ್ತಾರೆ. ರಾಮಾಯಣದ ಪಠನ, ಶ್ರವಣಗಳಿಂದ ಕುಟುಂಬ ವೃದ್ಧಿ, ಧನಧಾನ್ಯ ವೃದ್ಧಿ, ಆಯುಸ್ಸು, ಆರೋಗ್ಯ, ಯಶಸ್ಸು ಎಲ್ಲ ಲಭಿಸುತ್ತದೆ. ಪರದಲ್ಲಿ ವಿಷ್ಣುಸ್ಥಾನ ಲಭಿಸುತ್ತದೆ.

**ವೇದವೇದ್ಯೇ ಪರೇ ಪುಂಸೀ ಜಾತೇದಶರಥಾತ್ಮಜೇ।**

**ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ ॥**

ವೇದವೇದ್ಯನಾದ ವಿಷ್ಣು ಸಾಕ್ಷಾತ್ ರಾಮನಾಗಿ ಅವತರಿಸಿದ, ಆಗ, ವೇದವೇ ವಾಲ್ಮೀಕಿಯ ಬಾಯಿಂದ ರಾಮಾಯಣ ರೂಪದಲ್ಲಿ ಹೊರಬಂದಿತು.

**ಕುಟುಂಬವೃದ್ಧಿಂ ಧನಧಾನ್ಯವೃದ್ಧಿಂ**
**ಸ್ತ್ರಿಯಶ್ಚ ಮುಖ್ಯಾಃ ಸುಖಮುತ್ತಮಂ ಚ ।**
**ಶ್ರುತ್ವಾ ಶುಭಂ ಕಾವ್ಯಮಿದಂ ಮಹಾರ್ಥಂ**
**ಪ್ರಾಪ್ನೋತಿಸರ್ವಾಂ ಭುವಿ ಚಾರ್ಥಸಿದ್ಧಿಮ್ ॥**
**ಆಯುಷ್ಯಮಾರೋಗ್ಯಕರಂ ಯಶಸ್ಯಂ**
**ಸೌಭ್ರಾತೃಕಂ ಬುದ್ಧಿಕರಂ ಶುಭಂಚ ।**
**ಶ್ರೋತವ್ಯಮೇತನ್ನಿಯಮೇನ ಸದ್ಭಿಃ**
**ಅಖ್ಯಾನಮೋಜಸ್ಕರವೃದ್ಧಿಕಾಮಃ ॥**

# ಫಲಶ್ರುತಿ

ಪೂಜ್ಯ ವಾಲ್ಮೀಕಿ ಮಹರ್ಷಿ ರಚಿಸಿದ ಈ ಮಹಾಕಾವ್ಯ ಆದಿಕಾವ್ಯವೂ ಹೌದು. ಪುಣ್ಯ ಕಾವ್ಯವೂ ಹೌದು. ಇದನ್ನು ಕೇಳಿದರೆ ಓದಿದರೆ ಎಲ್ಲ ಪಾಪಗಳೂ ನಾಶವಾಗುತ್ತವೆ. ಆಯು ರಾರೋಗ್ಯಭಾಗ್ಯ ಲಭಿಸುತ್ತದೆ. ಇಷ್ಟ ಕಾಮ್ಯಾರ್ಥಗಳು ಸಿದ್ಧಿಸುತ್ತವೆ. ಮಕ್ಕಳನ್ನು ಬಯಸು-ವವರಿಗೆ ಮಕ್ಕಳಾಗುತ್ತವೆ. ಸಿರಿಯನ್ನು ಅಪೇಕ್ಷಿಸುವವರಿಗೆ ದಾರಿದ್ರ್ಯ ತೊಲಗುತ್ತದೆ.

ಶ್ರೀರಾಮಕಥೆಯನ್ನು ಓದುವ ಪುರುಷರು ಕಾಮಕ್ರೋಧಾದಿಗಳನ್ನು ಜಯಿಸಿ ಕೀರ್ತಿಶಾಲಿ ಗಳಾಗುತ್ತಾರೆ. ಸ್ತ್ರೀಯರು ಕೌಸಲ್ಯೆ ಹೆತ್ತಂಥ ಮಕ್ಕಳನ್ನು ಹೆತ್ತು ಪುಣ್ಯಮಾತೆಯರು ಎನಿಸಿಕೊ ಳ್ಳುತ್ತಾರೆ.

ಶ್ರೀರಾಮಚಂದ್ರ ಸನಾತನ, ಆದಿದೇವ, ಸರ್ವೇಶ್ವರ, ಶ್ರೀಮನ್ನಾರಾಯಣ. ರಾಮನ ಆಳ್ವಿಕೆಯಲ್ಲಿ ಕಳ್ಳಕಾಕರರ ಅಂಜಿಕೆ ಇರಲಿಲ್ಲ. ಯಾರೂ ಪರರ ಸ್ವತ್ತಿಗೆ ಆಸೆಪಡುತ್ತಿರಲಿಲ್ಲ. ಎಲ್ಲರೂ ನಿಸ್ವಾರ್ಥರಾಗಿ ಪರೋಪಕಾರಿಗಳಾಗಿದ್ದರು. ಎಲ್ಲರೂ ಧರ್ಮನಿರತರಾಗಿದ್ದರು. ಯಾರು ಯಾರನ್ನೂ ಹಿಂಸಿಸುತ್ತಿರಲಿಲ್ಲ. ರೋಗರುಜಿನವಾಗಲೀ ಅಕಾಲ ಮರಣವಾಗಲೀ ಇರಲಿಲ್ಲ, ಶ್ರೀ ರಾಮಚಂದ್ರ ಎಲ್ಲರಿಗೂ ಆದರ್ಶ ಪುರುಷನಾಗಿದ್ದ.

ಶ್ರೀ ರಾಮ ಕಥೆಯನ್ನು ಓದುವವರೆಲ್ಲ ಆ ದಿವ್ಯ ಮಂಗಳ ಮೂರ್ತಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗುತ್ತಾರೆ ಎಂಬುದರಲ್ಲಿ ಸಂದೇಹವೇ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ

ಭಕ್ತ್ಯಾ ರಾಮಸ್ಯ ಯೇಚೇಮಾಂ ಸಂಹಿತಾ ಮೃಷಿಣಾಕೃತಾಂ ।
ಲೇಖಯಂತೀಹ ಚ ನರಾಸ್ತೇಷಾಂ ವಾಸಸ್ತ್ರಿವಿಷ್ಟಪೇ ॥

ಈ ರಾಮಾಯಣ ಸಂಹಿತೆಯನ್ನು ಭಕ್ತಿಯಿಂದ ಬರೆಯಿಸುವ ನರರು ಸ್ವರ್ಗಲೋಕದಲ್ಲಿ ಚಿರಕಾಲ ಸುಖವಾಗಿ ವಾಸಮಾಡುತ್ತಾರೆ. ಕೇಳುವವರಿಗಂತೂ

ಕುಟುಂಬವೃದ್ಧಿಂ ಧನಧಾನ್ಯವೃದ್ಧಿಂ ।
ಸ್ತ್ರಿಯಶ್ಚ ಮುಖ್ಯಾಸ್ಸುಖಮುತ್ತಮಂಚ ॥
ಶೃತ್ವಾ ಶುಭಂ ಕಾವ್ಯಮಿದಂ ಮಹಾರ್ಥಂ ।
ಪ್ರಾಪ್ನೋತಿ ಸರ್ವಾನ್ಭುವಿಚಾರ್ಥಸಿದ್ಧಿಂ ॥
ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಂ ॥
ವೇದವೇದಾಂತವೇದ್ಯಾಯ ಮೇಘಶ್ಯಾಮಲ ಮೂರ್ತಯೇ ।
ಪುಂಸಾಂ ಮೋಹನರೂಪಾಯ ಪುಣ್ಯಶ್ಲೋಕಾಯಮಂಗಳಂ
ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇಃ ।
ಭಾಗ್ಯಾನಾಂ ಪರಿಪಾಕಾಯ ಸತತಂ ಭ್ರಾತೃಭಿಃ ಸಹಸೀತಯಾ ।
ನಂದಿತಾಖಿಲ ಲೋಕಾಯ ರಾಮಭದ್ರಾಯ ಮಂಗಳಂ ॥

ತ್ಯಕ್ತಸಾಕೇತವಾಸಾಯ ಚಿತ್ರಕೂಟವಿಹಾರಿಣೇ ।
ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ ಮಂಗಳಂ ॥
ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ ।
ಸಂಸೇವ್ಯಾಯ ಸದಾಭಕ್ತ್ಯಾ ಸ್ವಾಮಿನೇ ಮಮ ಮಂಗಳಂ ॥
ದಂಡಕಾರಣ್ಯವಾಸಾಯ ಖಂಡಿತಾಮರಶತ್ರವೇ ।
ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು ಮಂಗಳಂ ।
ಸಾದರಂ ಶಬರೀದತ್ತಫಲಮೂಲಾಭಿಲಾಷಿಣೇ ।
ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ ।
ವಾಲೀ ಪ್ರಮಥನಾಯಾಸ್ತು ಮಹಾಧೀರಾಯ ಮಂಗಳಂ ॥
ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ ।
ಜಿತರಾಕ್ಷಸರಾಜಾಯ ರಣಧೀರಾಯ ಮಂಗಳಂ ॥
ಆಸಾದ್ಯ ನಗರೀಂ ದಿವ್ಯಾಂ ಅಭಿಷಿಕ್ತಾಯ ಸೀತಯಾ ।
ರಾಜಾಧಿರಾಜರಾಜಾಯ ರಾಮಭದ್ರಾಯ ಮಂಗಳಂ ॥

॥ ರಘುವರ ಮಂಗಳಂ ॥

॥ ಅಘಹರ ಮಂಗಳಂ ॥

॥ ಅಗಣಿತ ಗುಣವರ ಜಗವೀರ ಮಂಗಳಂ ॥

॥ ಮುನಿನುತ ಮಂಗಳಂ ಧನುಧಾರಿ ಮಂಗಳಂ ॥

॥ ಅವನಿಜಾನಾಯಕ ಜಯ ಮಂಗಳಂ ॥

॥ ದೀನದಯಾಕರ ಮಾನ್ಯ ಸುಮಂಗಳಂ ॥

॥ ಶ್ರೀ ಸೀತಾರಾಮಾಯ ಮಂಗಳಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

